ಅತಿಬಲ ಗ್ರಂಥಮಾಲೆಯ ೪೫ನೆಯ ಪುಷ್ಪ

ಮಹಾಕವಿ ಪಾಯಣವರ್ಣಿ ವಿರಚಿತ

# ಜ್ಞಾನಚಂದ್ರಚರಿತೆ

ಸಂಪಾದಕರು:
ಶ್ರೀ| ಟಿ. ರಘುಚಂದ್ರ ಶೆಟ್ಟಿ,
ಮೂಡುಬಿದ್ರಿ.







1958

ಪ್ರಕಾಶಕರು:
ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು.

ಪ್ರತಿಗಳು ೫೦೦

# JNANACHANDRACHARITE

(KANNADA)

BY

**PAYANAVARNI.**

महाकवि पायणवर्णि विरचित

# ज्ञानचंद्रचरिते

ಅತಿಬಲ ಗ್ರಂಥಮಾಲೆಯ ೪೫ನೆಯ ಪುಷ್ಪ.

---

ಮಹಾಕವಿ ಪಾಯಣವರ್ಣಿ ವಿರಚಿತ

# ಜ್ಞಾನಚಂದ್ರಚರಿತೆ.



ಸಂಪಾದಕರು:

**ಶ್ರೀ। ಟಿ. ರಘುಚಂದ್ರ ಶೆಟ್ಟಿ,**

**ಮೂಡುಬಿದ್ರಿ.**

**1958.**

ಪ್ರಕಾಶಕರು:

ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು.




ಸ್ವಸ್ತಿ ಶ್ರೀ ೧೦೫ ಅತಿಬಲ ಮಹಾರಾಜರು.

# ಆಶೀರ್ವಾದ.

ಜೈನಧರ್ಮದ ಪ್ರಚಾರಕಾರ್ಯವನ್ನು ಧ್ಯೇಯವಾಗಿಟ್ಟುಕೊಂಡು ಜ್ಞಾನಿಗಳಾದ ಪ್ರಾಚೀನ ವಿದ್ವಾಂಸರು ಶ್ರುತಭಾಂಡಾಗಾರವನ್ನು ಅಪೂರ್ವ ಗ್ರಂಥರತ್ನಗಳಿಂದ ತುಂಬಿದ್ದಾರೆ. ಆಧುನಿಕ ಅಚ್ಚುಕೂಟಗಳ ಸೌಕರ್ಯವಿಲ್ಲದಿದ್ದ ಆ ಹಿಂದಿನಕಾಲದಲ್ಲೂ ಧರ್ಮಾಭಿಮಾನಿಗಳು ವಿಶೇಷವಾದ ಪ್ರಯತ್ನದಿಂದ ಅವುಗಳನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಆದರೆ ಇಂದು ನಮ್ಮ ದುರ್ದೈವದಿಂದ ನಾವು ಅವುಗಳ ಮಹತ್ವವನ್ನರಿಯದೆ ವೃಥಾ ಕಳೆದುಕೊಳ್ಳಬೇಕಾದ ಪರಿಸ್ಥಿತಿ ಬಂದಿದೆ. ಈಗಾಗಲೇ ಎಷ್ಟೋ ಅಮೂಲ್ಯಗ್ರಂಥಗಳು ಕಳೆದುಹೋಗಿವೆ. ಉಳಿದವುಗಳನ್ನಾದರೂ ರಕ್ಷಿಸಿಕೊಳ್ಳಬೇಕು, ಜನತೆಯಲ್ಲಿ ಧರ್ಮಜಾಗೃತಿಯುಂಟಾಗಬೇಕು ಎಂಬ ದೃಷ್ಟಿಯಿಂದ ನಾವು ಅತಿಬಲಿ ಗ್ರಂಥಮಾಲೆಯನ್ನು ತೆರೆದು ಹಳೆಯ ಗ್ರಂಥಗಳನ್ನು ಸಂಪಾದಿಸಿಯೂ, ಹೊಸ ಗ್ರಂಥಗಳನ್ನು ಬರೆಯಿಸಿಯೂ ಪ್ರಕಾಶಿಸುತ್ತಿದ್ದೇವೆ.

ಜ್ಞಾನಚಂದ್ರಚರಿತೆ ನಮ್ಮ ಗ್ರಂಥಮಾಲೆಯಲ್ಲಿ ಪ್ರಕಾಶನಗೊಂಡ ೬೫ನೇ ಪುಷ್ಪ. ಇದರ ಪ್ರಕಾಶನ ಕಾರ್ಯದಲ್ಲಿ ಮೊದಲಹಜ್ಜೆ ಮೈಸೂರಿನ ಸಾಹುಕಾರ್ ವರ್ಧಮಾನಯ್ಯನವರ ಸುಪುತ್ರಿ ಸೌಭಾಗ್ಯವತಿ ನಿರ್ಮಲಮ್ಮನವರದು. ಈ ತನಕ ಅಚ್ಚಾಗದಿರುವ ಜ್ಞಾನಚಂದ್ರಚರಿತೆಯನ್ನು ನಮ್ಮ ಗ್ರಂಥಮಾಲೆಯಲ್ಲಿ ಪ್ರಕಾಶಿಸಬೇಕೆಂದೂ, ಅದಕ್ಕೆ ತಾನು ಸಾಕಷ್ಟು ಧನ ಸಹಾಯ ಮಾಡುವುದಲ್ಲದೆ ತನ್ನ ಗೆಳತಿಯರಿಂದಲೂ ಹಣ ಕೂಡಿಸಿ ಕೊಡುವ ಭಾರವನ್ನು ವಹಿಸುವುದಾಗಿಯೂ ಭರವಸೆಯಿತ್ತುದಲ್ಲದೆ ಅಂತೆ ವರ್ತಿಸಿರುತ್ತಾರೆ. ಶ್ರೀಮತಿಯವರ ಈ ಆದರ್ಶವು ಅಭಿನಂದನೀಯ. ಶ್ರೀ ಭಗವಂತನು ಇವರಿಗೆ ಶ್ರೇಯಸ್ಸನ್ನು ನೀಡಿ ಇನ್ನೂ ಹೆಚ್ಚಿನ ಕಾರ್ಯವನ್ನು ಇವರಿಂದ ಮಾಡಿಸಲೆಂದು ಹಾರೈಸುತ್ತೇವೆ. ಜ್ಞಾನಚಂದ್ರಚರಿತೆ ಅಚ್ಚಾಗಲಿರುವ ಸುದ್ದಿಯನ್ನು ಕೇಳಿದೊಡನೆ ಇದಕ್ಕೆ ಧನ ಸಹಾಯವನ್ನೊದಗಿಸಲು ನೆರವಾದ ಸ್ವಸ್ತಿಶ್ರೀ ೧೦೫ ಅರ್ಕಕೀರ್ತಿ ಮಹಾರಾಜರಿಗೂ ನಾವು ಚಿರಋಣಿಗಳು. ಧರ್ಮಾಭಿಮಾನಿಗಳನೇಕರು ಉದಾರಬುದ್ಧಿಯಿಂದ ಆರ್ಥಿಕ ಬೆಂಬಲವನ್ನು ನೀಡಿ ಪ್ರೋತ್ಸಾಹಿಸಿದ್ದಾರೆ. ಅವರ ಉದಾರತೆಯು ಪ್ರಶಂಸನೀಯ. ಜ್ಞಾನಚಂದ್ರಚರಿತೆಯ ಹಸ್ತಲಿಖಿತ ಪ್ರತಿಯನ್ನು ನಮ್ಮ ಮೇಲಿನ ವಿಶ್ವಾಸದಿಂದ ನೀಡಿದ ಪುರೋಹಿತ ಶ್ರೀಮತಿ ಪದ್ಮಾವತಮ್ಮ ಮತ್ತು ಮೈಸೂರು ಲೈಬ್ರರಿಯ ಅಧಿಕಾರಿ ಇವರ ಉಪಕಾರ ಸ್ಮರಣೀಯ.

ಮೂಡುಬಿದ್ರಿಯ ಜೈನ್ ಹೈಸ್ಕೂಲಿನ ಕನ್ನಡ ಪಂಡಿತರಾದ ಶ್ರೀಮಾನ್ ಟಿ. ರಘುಚಂದ್ರ ಶೆಟ್ಟಿ, ಸಾಹಿತ್ಯ ಶಿರೋಮಣಿ ಮತ್ತು ವಿದ್ವಾನ್, ಅವರು ನಾವು ವಹಿಸಿಕೊಟ್ಟ ಜ್ಞಾನಚಂದ್ರಚರಿತೆಯ ಸಂಪಾದನಾಕಾರ್ಯವನ್ನು ನಮ್ಮ ಮೇಲಿನ ಅಭಿಮಾನದಿಂದ ಸ್ವೀಕರಿಸಿ, ಉತ್ತಮವಾದ ರೀತಿಯಲ್ಲಿ ಗ್ರಂಥಸಂಪಾದನೆಯನ್ನೆಸಗಿರುತ್ತಾರೆ. ಇವರ

ನಿಸ್ವಾರ್ಥ ಬುದ್ಧಿಯು ಇತೋಪ್ಯಧಿಕವಾಗಿ ವೃದ್ಧಿ ಹೊಂದಿ ಪ್ರತಿಭಾವಂತರಾಗಿ ಇನ್ನೂ ಹೆಚ್ಚಿನ ಸಾಹಿತ್ಯಸೇವೆಯನ್ನು ಸಲ್ಲಿಸಲೆಂದು ಶ್ರೀ ಶ್ರುತದೇವಿಯನ್ನು ಪ್ರಾರ್ಥಿಸುತ್ತೇವೆ. ಅದೇ ಹೈಸ್ಕೂಲಿನ ಹಿಂದಿ ಪಂಡಿತರಾದ ಶ್ರೀಮಾನ್ ಬಿ. ದೇವಕುಮಾರ ಜೈನಿ, ರಾಷ್ಟ್ರ ಭಾಷಾ ವಿಶಾರದ, ಹಿಂದೀ ಪ್ರಚಾರಕ, ಅವರು ವಿಶೇಷ ಪರಿಶ್ರಮವನ್ನು ವಹಿಸಿ, ಪ್ರೆಸ್ ಪ್ರತಿ ತಯಾರಿಯಲ್ಲೂ ಪ್ರೂಫ್ ತಿದ್ದುವುದರಲ್ಲೂ ಸಹಕರಿಸಿರುತ್ತಾರೆ. ಅವರ ಪರಿಶ್ರಮವೂ ಶ್ಲಾಘನೀಯ. ಮೂಡುಬಿದ್ರಿಯ ಜಯ ಮುದ್ರಣ ಪ್ರಕಟಣ, ಇದರ ಮ್ಹಾಲಕರಾದ ಶ್ರೀ। ಯನ್. ಪದ್ಮರಾಜ ಮುರಾಯರರವರೂ ಕೆಲಸಗಾರರೂ ಹೆಚ್ಚಿನ ಆಸಕ್ತಿ ವಹಿಸಿ ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿರುತ್ತಾರೆ. ಇವರಿಗೆ ನಮ್ಮ ಕೃತಜ್ಞತೆಗಳು.

ಅಂತು ಜ್ಞಾನಚಂದ್ರಚರಿತೆಯ ಪ್ರಕಾಶನಕಾರ್ಯದಲ್ಲಿ ನೆರವಾದ ಮಹನೀಯರೆಲ್ಲರಿಗೂ ದೀರ್ಘಾಯುರಾರೋಗ್ಯೈಶ್ವರ್ಯಾಭಿವೃದ್ಧಿಯಾಗಿ ಧರ್ಮಬುದ್ಧಿಯು ಬಳೆಯಲೆಂದು ನಮ್ಮ ಶುಭಾಶೀರ್ವಾದಗಳು.

**ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು.**
ಪ್ರಕಾಶಕರು.



# ಪ್ರಸ್ತಾವನೆ.

ಕನ್ನಡದಲ್ಲಿ ಜೈನಸಾಹಿತ್ಯವು ಚಂಪೂಶೈಲಿಯಲ್ಲಿ ಪ್ರಾದುರ್ಭವಿಸಿ ಮಾರ್ಗಬದ್ಧ ಪ್ರೌಢಕಾವ್ಯಗಳು ಯಥೇಷ್ಟವಾಗಿ ಬಳೆದು ಪಂಡಿತವರ್ಗವನ್ನು ತಲೆದೂಗಿಸಿದುವು. ಆ ಕಾಲಕ್ಕೆ ಜನಸಾಮಾನ್ಯರ ಸಾಹಿತ್ಯಪಿಪಾಸೆಯು ಎಚ್ಚತ್ತು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಕ್ರಾಂತಿಯೆದ್ದು ದೇಸೀಯ ಪದ್ಧತಿಯು ಪ್ರಚಾರಗೊಂಡ ಸಂದರ್ಭದಲ್ಲಿ 15ನೇ ಶತಮಾನದ ಸುಮಾರಿಗೆ ಜೈನಸಾಹಿತ್ಯಪ್ರಣಾಲಿಯಲ್ಲೂ ಬದಲಾವಣೆಯಾದುದನ್ನು ಕಾಣಬಹುದು. ಈ ಯುಗದಲ್ಲಿ ಜೈನಕವಿಗಳೂ ಪಲ್ಲಟವಾದ ಪರಿಸ್ಥಿತಿಗೆ ಅನುಗುಣವಾಗಿ ಹೊಸ ವಿಷಯಗಳನ್ನು ಆರಿಸಿಕೊಂಡು ಅಚ್ಚಗನ್ನಡ ಛಂದೋರೂಪದಲ್ಲಿ ಕವಿತೆಗಳನ್ನು ರಚಿಸತೊಡಗಿದರು. ತೀರ್ಥಂಕರರ ಅಲೌಕಿಕಜೀವನವನ್ನು ಬಣ್ಣಿಸುವ ಪುರಾಣಗಳ ಸ್ಥಾನದಲ್ಲಿ ಸಾಮಾನ್ಯ ಕೇವಲಿಗಳ ಚರಿತಾರ್ಥ ಚರಿತ್ರೆಗಳನ್ನು ನಿರೂಪಿಸುವ ಷಟ್ಪದಿಗಳು, ಸಾಂಗತ್ಯಗಳು ಬಳಕೆಗೆ ಬಂದುವು. ಭವಾಂತರ ಪ್ರತಿಪಾದನೆಯಿಂದ ಸಂಸಾರದ ಕೋಟಲೆಯನ್ನು ವಿವರಿಸಿ ಪಂಚಕಲ್ಯಾಣವೈಭವದಲ್ಲಿ ಏಕರೂಪತೆಯಿಂದ ಅಂತ್ಯವಾಗುವ ಮಹಾಕಾವ್ಯಗಳ ಬದಲಿಗೆ ಷಟ್ಕರ್ಮನಿರತ ಶ್ರಾವಕಜೀವನದ ಮೇಲ್ಮೆಯನ್ನು ಸಾರಿ ಜನಹಿತಕ್ಕಾಗಿ ದುಡಿದು ನೈತಿಕ ಜೀವನವನ್ನು ನಡೆಸಿ ಕೃತಾರ್ಥರಾದ ಪುಣ್ಯಚರಿತರ ವೈವಿಧ್ಯಪೂರ್ಣ ಜೀವನಗಳು ಕಾವ್ಯವಸ್ತುಗಳಾದ ಸಂಗತಿಗಳು, ಚರಿತೆಗಳು ಉದಿಸಿದುವು. "ಈಸಬೇಕು; ಇದ್ದು ಜೈಸಬೇಕು." "ಇಲ್ಲಿ ಸಲುವವರು, ಅಲ್ಲಿಯೂ ಸಲುವರಯ್ಯಾ" ಎಂಬ ದಾಸವಾಙ್ಮಯ, ಶರಣಸಾಹಿತ್ಯದ ಪ್ರಭಾವಕ್ಕೊಳಗಾಗಿ ಜೈನಕಾವ್ಯಗಳೂ ಯೋಗಭೋಗಸಮನ್ವಯಮಾರ್ಗದತ್ತ ಅಡಿಯಿಟ್ಟಂತೆ ಗ್ರಂಥ ಪರಾಮರ್ಶೆಯಿಂದ ತಿಳಿದು ಬರುತ್ತದೆ. ಪುರಾಣಕಾವ್ಯಗಳಲ್ಲಿ ಲೌಕಿಕ ರಸಕ್ಕೆ ಸ್ಥಾನ ದೊರಕದೆ, ಲಕ್ಷಣಗಳ ನಿರ್ಬಂಧವನ್ನು ಮೀರಲಾರದೆ ಪ್ರಾಕ್ತನಕವಿಗಳು ತಮ್ಮ ಸ್ವಾತಂತ್ರ್ಯವನ್ನು ಪ್ರತ್ಯೇಕವಾಗಿ ಬರೆದ ಲೌಕಿಕಗ್ರಂಥಗಳಲ್ಲಿ ತೋರಿಸಿದರೆ, ರತ್ನಾಕರವರ್ಣಿ ಹಾಗೂ ಅವನ ಸಮನಂತರದವರು 'ವರ್ಣಕ'ಗಳಲ್ಲಿ ಅವೆರಡೂ ರಸಗಳ ಸಮನ್ವಯವನ್ನೂ, ಲಕ್ಷಣಗಳ ಹಿತಮಿತಿಗಳನ್ನೂ ಸಾಧಿಸಿರುತ್ತಾರೆ.

ಜ್ಞಾನಚಂದ್ರಚರಿತೆಯೂ ಈ ಮಾದರಿಯ ಒಂದು ವರ್ಣಕ-ಹಾಡುಗಬ್ಬ. ತನ್ನ ಗ್ರಂಥದ ಪೀಠಿಕೆಯಲ್ಲಿ ಕವಿ ಪಾಯಣವರ್ಣಿ 'ರತ್ನಾಕರನ ಜಾಣ್ನುಡಿ ಎನ್ನ ಪ್ರಾರ್ಥಿಸಲಿ' ಎಂದಿದ್ದಾನೆ. ಭರತೇಶವೈಭವದ ಮುಂದೆ ಜ್ಞಾನಚಂದ್ರಚರಿತೆ ಸಾಮಾನ್ಯ. ಆದರೂ ಕವಿ ಆ ಹಾದಿಯನ್ನು ತುಳಿದು ಆದರ್ಶವನ್ನು ಉಳಿಸಿಕೊಂಡಿದ್ದಾನೆ ಎನ್ನುವುದರಲ್ಲಿ ಆಕ್ಷೇಪವಿಲ್ಲ. 'ವಿಷಯದಲ್ಲಿ ದೇಶೀಯ ದೃಷ್ಟಿಯನ್ನೂ, ವರ್ಣನೆಯಲ್ಲಿ ಮಾರ್ಗದೃಷ್ಟಿಯನ್ನೂ' ಜ್ಞಾನಚಂದ್ರಚರಿತೆಯಲ್ಲೂ ಕಾಣಬಹುದು. ಶ್ರೀ ಶಾಂತಿಜಿನರ ವಂಶದಲ್ಲಿ ಏಳನೆಯವನಾದ ಸೋಮಕುಲೋತ್ತಂಸ ಜ್ಞಾನಚಂದ್ರನ ದೇವಪೂಜಾಗುರೂಪಾಸ್ತಿಸ್ವಾಧ್ಯಾಯಸಂಯಮತಪೋ-

ದಾನನಿರತವಾದ ಉದಾತ್ತಶ್ರಾವಕಜೀವನದ ಭವ್ಯಚಿತ್ರಣವೇ ಇಲ್ಲಿ ಕಥಾವಸ್ತು. ಆದರ್ಶ ಸಂಸಾರದ ಸವಿಯನ್ನುಂಡು ಕುಂದಿಲ್ಲದ ಸಹಜಾನಂದವನ್ನು ಅನುಭವಿಸಿದ ಬಹುಭಾಗ್ಯ ಸಂಪನ್ನನ ದಿವ್ಯಜೀವನವನ್ನು ಬಣ್ಣಿಸಲಾಗಿದೆ ಇದರಲ್ಲಿ. ಜ್ಞಾನಚಂದ್ರಚರಿತೆಯಲ್ಲಿ ಮೂರು ತಲೆಮಾರಿನ ಬೃಹತ್ಕಥೆಯನ್ನು ಕಾಣುತ್ತೇವೆ. ಅವು ಒಂದು ಇನ್ನೊಂದಕ್ಕೆ ಪೋಷಕವಾಗಿ ಜೀವನ್ಮುಕ್ತ ಜ್ಞಾನಚಂದ್ರನ ಅಭ್ಯುದಯವನ್ನು ಸಾಧಿಸಿವೆ. ಆನುಷಂಗಿಕವಾಗಿ ಭವಾಂತರ ಕತೆಗಳು ಬಂದಿರುವುವಾದರೂ ಅವುಗಳು ಕರ್ಮವೈಚಿತ್ರ್ಯವನ್ನು ಪ್ರದರ್ಶಿಸುವ ಐಂದ್ರ ಜಾಲಗಳಾಗಿ ಮಾತ್ರ ಉಳಿಯದೆ, ನೀತಿಬೋಧಕ ಸರಸ ಕತೆಗಳಂತಿವೆ. ಭವಾವಳಿಯಲ್ಲಿ ಬರುವ ಶಂಕರಿ–ವಿಂಧ್ಯದಗಿಳಿ–ರೂಪಿಣಿ–ಹಳದು ಕರಿಣಿ–ಶೂರದತ್ತ–ರೋಹಟಕಪುರದ ಬ್ರಾಹ್ಮಣರು–ಶಿವಶರ್ಮ ಮೊದಲಾದ ಕಥಾನಕಗಳು ನೀತಿ ರಮಣೀಯಗಳಾಗಿವೆ. ಅಷ್ಟಾ ದಶ ವರ್ಣನೆಗಳಿಗೆ ಲೋಪ ಬಾರದಂತೆ ಬಣ್ಣನೆಯಲ್ಲಿ ತೊಡಗಿದ ಕವಿಯ ಸಾಮರ್ಥ್ಯಕ್ಕೆ ತಲೆ ದೂಗಬೇಕಾಗುತ್ತದೆ. ಕೆಲವೆಡೆಗಳಲ್ಲಿ ಶ್ಲೇಷಾದ್ಯಲಂಕಾರಗಳಿಂದ ಪಾಂಡಿತ್ಯ ಪ್ರದರ್ಶನಕ್ಕೂ ಕವಿ ಮಾರುಹೋಗಿದ್ದಾನೆ. ಸಂಪ್ರದಾಯ ಶರಣನಾಗಿಯೆಂಬಂತೆ ಸಾಮಾನ್ಯ ಕೇವಲಿ ಗೊಪ್ಪುವ ತ್ರಿವಿಧ ಕಲ್ಯಾಣಗಳ ವೈಭವಾತಿಶಯವನ್ನೂ ಧರ್ಮಬೋಧೆಯನ್ನೂ ಮನ ದಣಿಯೆ ಬಣ್ಣಿಸಿದ್ದಾನೆ. ಆದರೂ ಹೆಚ್ಚಿನ ಕಡೆ ಸ್ವಾಭಾವಿಕವಾದ ಹಾಸ್ಯ-ವಿನೋದಗಳಿಂದ ಒಪ್ಪುವ ಬಣ್ಣನೆಗಳು ಬಣ್ಣನೆಗಾಗಿ ಮಾತ್ರ ಉಳಿಯದೆ ರಸಪೋಷಕಗಳಾಗಿವೆ. ಅಂತೂ ಗ್ರಂಥವಿದು ಚರಿತೆ-ಸಾಂಗತ್ಯ-ಗಳಲ್ಲಿ ಭರತೇಶವೈಭವದಿಂದ ಎರಡನೆಯದಾಗಿ ಕೆಲವೊಂದು ವೈಶಿಷ್ಟ್ಯಗಳಿಂದ ಜನಾದರಣೀಯವಾಗಿದೆ ಎಂಬುದರಲ್ಲಿ ಸಂಶಯವಿಲ್ಲ.

ಜ್ಞಾನಚಂದ್ರಚರಿತೆಯನ್ನು ರಚಿಸಿದ ಕವಿ ಪಾಯಣವರ್ಣಿ ಶ್ರವಣಬೆಳುಗೊಳದವನು. ಈತನ ತಂದೆ ನಾಗಪ್ಪಯ್ಯ. ತಂದೆಯ ಕುರಿತು 'ಬೆಳುಗುಳಾದ್ರಿಯ ಗೊಮ್ಮಟ ಸ್ವಾಮಿಯ ಸೇವಕ'ನೆಂದಿರುವುದರಿಂದ ಇವರು ಬೆಟ್ಟದ ಗೋಮಟೇಶ್ವರ ಸ್ವಾಮಿಯ ಅರ್ಚಕರಾಗಿದ್ದಿರ ಬೇಕು. ಶ್ರವಣಬೆಳುಗೊಳದ ಶ್ರೀಮತ್ಪಂಡಿತಾಚಾರ್ಯರ ಶಿಷ್ಯ ತಾನೆಂದಿರುವುದರಿಂದ ಅವರ ಬಳಿಯಲ್ಲೆ ವಿದ್ಯಾಭ್ಯಾಸವನ್ನು ಮಾಡಿ ಮುಂದೆ ವಿರಕ್ತನಾಗಿ ದೀಕ್ಷೆಯನ್ನಾಂತು ವರ್ಣಿಯಾದನು. ತಾನು ಜ್ಞಾನಚಂದ್ರಚರಿತೆಯನ್ನು ಬರೆದ ಕಾಲವನ್ನು ಗ್ರಂಥದ ಕೊನೆ ಗಿರುವ ಕವಿಪ್ರಶಸ್ತಿಯಲ್ಲಿ ಈ ಪದ್ಯಗಳಿಂದ ತಿಳಿಸಿರುತ್ತಾನೆ—

ಶಕಕಾಲ ಸಾಸಿರದ್ವೈನೂರೆಂಭತ್ತೊಂದು । ಪ್ರಕಟ ವಿಕಾರಿ ವತ್ಸರದ ॥
ಥಕಥಕಿಸುವ ಶ್ರಾವಣ ಶುದ್ಧ ಪಂಚಮಿ- । ಯಕಲಂಕ ಗುರುವಾರದೊಳು ॥
ಶಿವಯೋಗ ಸಿಂಹಲಗ್ನದೊಳು ಶ್ರೀ ಜ್ಞಾನೇಂದು । ಭುವನಾಧಿಪತಿಚರಿತವನು ॥
ಕವಿಗಳು ಮೆಚ್ಚುವಂದದಿ ಪಾಯಣವರ್ಣಿ । ಸವಿನಯದಿಂದ ಪೂರ್ಣಿಸಿದ ॥

ಆದ್ದರಿಂದ ಈತನ ಕಾಲ ಕ್ರಿ.ಶ. 1659ನೇ ವಿಕಾರಿ ಸಂವತ್ಸರ ಅಂದರೆ ರತ್ನಾಕರವರ್ಣಿ (ಕ್ರಿ.ಶ. 1557)ಯ ಕಾಲಕ್ಕೆ ಒಂದು ಶತಕ ಈಚೆ ಎಂಬುದು ಸ್ಪಷ್ಟ

ವಾಸವಚಂದ್ರಮುನಿ (ಕ್ರಿ.ಶ. 1010?) ಪ್ರಾಕೃತದಲ್ಲಿ ರಚಿಸಿದ ಜ್ಞಾನಚಂದ್ರಚರಿತೆಯನ್ನು ಪೂಜ್ಯಪಾದಮುನಿ ಕನ್ನಡ ಷಟ್ಪದಿಯಲ್ಲಿ ಅನುವಾದಿಸಿದನೆಂದೂ, ಅದನ್ನು ತಾನು ಸಾಂಗತ್ಯದಲ್ಲಿ ಬರೆದಿರುವೆನೆಂದೂ ಪಾಯಣವರ್ಣಿ ಹೇಳುತ್ತಾನೆ. ಈ ಪೂಜ್ಯಪಾದಮುನಿ ಯಾರು? ಕನ್ನಡಕವಿ ಚರಿತ್ರೆಕಾರರು ಇವನ ಗ್ರಂಥ ದೊರೆತಿಲ್ಲವೆಂದೂ, ಈ ಹೆಸರಿನ ಕವಿಯೊಬ್ಬನಿರಬೇಕೆಂದೂ, ಅತಏವ ಪಾಯಣವರ್ಣಿಯ ಹಿಂದೆ ಅಂದರೆ ಕ್ರಿ.ಶ. 1600ಕ್ಕೆ ಇವನ ಕಾಲನಿರ್ಣಯವನ್ನು ಮಾಡಿ, ಈ ಕವಿಯೊಬ್ಬನಿದ್ದುದು ನಿಜವೆಂದು ತಿಳಿಸಿದ್ದಾರೆ. ಕಲ್ಯಾಣಕೀರ್ತಿಯೆಂಬ ಇನ್ನೊಬ್ಬ ಕವಿ (ಕ್ರಿ.ಶ. 1439) ಅದೇ ವಾಸವಚಂದ್ರಮುನಿ ಪ್ರಾಕೃತದಲ್ಲಿ ರಚಿಸಿದ ಜ್ಞಾನಚಂದ್ರಚರಿತೆಯನ್ನು ಷಟ್ಪದಿಯಲ್ಲಿ ಅನುವಾದಿಸಿ 'ಜ್ಞಾನಚಂದ್ರಾಭ್ಯುದಯ'ವೆಂಬ ಹೆಸರಿನಿಂದ ಕರೆದಿರುತ್ತಾನೆ. ಪಾಯಣವರ್ಣಿಯ ಜ್ಞಾನಚಂದ್ರಚರಿತೆಗೆ ಈ ಕಲ್ಯಾಣಕೀರ್ತಿಯ ಗ್ರಂಥವೇ ಆಧಾರವೆಂಬುದು ಈ ಎರಡೂ ಗ್ರಂಥಗಳನ್ನು ಮುಂದಿಟ್ಟುಕೊಂಡು ಪರಿಶೀಲಿಸಿದಲ್ಲಿ ಆದ್ಯಂತ ಕಾಣುವ ಏಕರೂಪತೆಯಿಂದ ಸಾಮಾನ್ಯರಿಗೂ ತಿಳಿಯದಿರದು. ತುಲನೆಗಾಗಿ ಕೆಲವು ಪದ್ಯಗಳನ್ನು ಉಭಯಗ್ರಂಥಗಳಿಂದ ಉದ್ಧರಿಸುತ್ತೇವೆ.

**ಜ್ಞಾನಚಂದ್ರೋದಯ**

| **ಜ್ಞಾನಚಂದ್ರಾಭ್ಯುದಯ** | **ಜ್ಞಾನಚಂದ್ರಚರಿತೆ** |
|---|---|
| ನೀರಜಂ ಧರತಿಯಾಯಿತು ನಿರ್ಮೇಘ ಮಂಬರಂ। | ಆದರ್ಶೋಪಮವಾದುದು ಭೂಮಿ ಮ-। ತ್ತಾದುದಂಬರ ನಿರ್ಮೇಘ ॥ |
| ನೀರಜಾರಕಮುಚ್ಛ ಸಲಿಲಪರಿಪೂರಿತಂ। | ಪೂದುಂಬಿ ಕೊಳ ಸ್ವಚ್ಛೋದಕವಾಯ್ತು ವಿ-। |
| ಸೂರಸಮ ಪಿಂಗಾಂಗ ಭಾಸುರಂ ಪಾವಕಂ ದಕ್ಷಿಣಾವರ್ತನಾದಂ ॥ | ನೋದದರ್ಭಕ ಪುಟ್ಟಲೊಡನೆ ॥ ರವಿಸಮ ಪಿಂಗಾಂಗ ಭಾಸುರವಹ್ನಿಯು ತವೆ ದಕ್ಷಿಣಾವರ್ತವಾಯ್ತು ॥ |
| ಮಾರುತಂ ಸುರಭಿ ಶಿಶಿರಾದಿಗುಣರಾಜಿತಂ। | ನವಪರಿಮಳ ಶೈತ್ಯ ಮಂದಗುಣಾನ್ವಿತ। ಪವನ ಭೂಮಿಯೊಳು ತೀಡಿದುದು ॥ |
| ಚಾರುಸುರಪಥದಲ್ಲಿ ಸುಳಿದು ಪೊರ ಪೊಣ್ಮಿದಂ, | ಸುರರಾಕಾಶದೊಳಗೆ ನಿಂದು ಬಗೆ ಬಗೆ। ಪರಿಮಳದರಳು ಮಂದಾರ ॥ |
| ಪಾರಿಜಾತದ ಕುಸುಮವೃಷ್ಟಿಯಂ ಮಾಡಿ ದರಮರರು ಕುಮಾರನುದಯ ಸಮಯ ದಲ್ಲಿ ॥ | ಕರಿಯಮಲ್ಲಿಗೆಯಾದಿ ಪುಷ್ಪವೃಷ್ಟಿಗಳನು ಕರೆದರು ಪುತ್ರಸಂಜನಿಸೆ ॥ |

**ಕನಕಲತೆಯ ವಿದ್ಯಾಸಾಧನೆ**

| | |
|---|---|
| ಈಕೆ ಫಣಿಪನ ರಾಣಿಯೋ, ಮೇ- | ಆರೀಕುವರಿ ಫಣಿಪನ ಸತಿಯೋ ಮೇಣು। |
| ಣೀಕೆ ಕಾವನಕಾಂತೆಯೋ, ಮೇ- | ಮಾರನ ರಾಣಿಯೋ ಹರಿಯ ॥ |

ಣೀಕೆ ಚಂದ್ರನ ಸತಿಯೋ, ಬ್ರಹ್ಮನ
ಭಾರತಿಯೊ ಮೇಣು ॥

ಈಕೆ ಮೇಣೀ ವನದ ದೇವಿಯೋ,
ನಾಕಲೋಕದ ಸುರಸತಿಯೋ, ಮೇ-
ಣೀಕೆ ಯಾರೆಂದಿಂತು ಚಿಂತಿಸಿ ಗಿರಿಗಿಳಿದು
ಬಂದಂ

ತರಣಿ ಸನ್ನಿಭ ದೀಪ್ತಿ ಭಾಸುರ
ಪರಮ ವಿದ್ಯಾದೇವಿಯರ್ಕಳು
ಕರವ ಜೋಡಿಸಿ ನಮಿಸಿ ನುಡಿದರು
ಮೂಮೆ ಬಲವಂದು ॥

ಸರಸಿಜಾನನೆ ! ನೀನು ನಮ್ಮನು
ಪರಮ ತಪದಿಂ ಮಾರುಗೊಂಡೌ
ಪಿರಿದು ಸೇವೆಯ ಮಾಳ್ಪ ದಾಸಿಯರಿಂದು
ಮೊದಲಾಗಿ ॥

ನಾರಿಯೊ, ಬಿದಿಯ ಸತಿಯೋ,
ಶಶಿಯರಸಿಯೋ ।
ವಾರಿಜಾಕ್ಷನ ಪ್ರಿಯತಮೆಯೋ ॥
ಹರನರ್ಧಾಂಗಿಯೋ, ಕಿನ್ನರಸತಿಯೋ, ತಾ।
ತರಣಿಯ ಪಟ್ಟದ ವಧುವೋ ॥
ಸುರಸತಿಯರೊಳೋರ್ವಳೋ, ಯಕ್ಷ
ಕುಲಜೆಯೋ
ವರ ವನದೇವಿಯೋ ತಾನು ॥

ಗಿರಿಶನ ಮಸ್ತಕವೇರಿದ ಕನ್ನೆಯೋ ।
ಗರುವೆಯಾರಿವಳು ಭಾವಿಸಲು ॥
ಪರಿಕಿಪೆ ತಾನೆಂದು ಜ್ಞಾನೇಂದುಕುವರನು।
ತುರಿಹದಿಂದಲ್ಲಿಗೆ ಬರಲು ॥

ಹರಿವಿಷ್ಟರ ಗಡಗಡನೆ ಕಂಪಿಸೆ ನೋಡಿ ।
ವರ ಬೋಧದಿಂ ತಾವು ತಿಳಿದು ॥
ಭರದಿಂದಲ್ಲೈತಂದು ಕೋಮಲೆಯನು
ಕಂಡು ।
ಕರಗಳ ಮುಗಿದು ಭಕ್ತಿಯೊಳು ॥

ಹರುಷದಿಂದಲಿ ಮೂಮೆ ಬಲವಂದು ಜಯ
ವೆಂದು
ತರುಣಿಯ ಎದುರಲಿ ನಿಂದು ॥
ವರ ವಿದ್ಯಾಧರ ದೇವತೆಗಳಿಂತೆಂದಾ- ।
ಗೊರೆದರು ತರುಣಿಯ ಕೂಡೆ ॥
ಅರವಿಂದಾನನೆ! ನಮ್ಮ ನಿನ್ನಯದೊಂದು ।
ಪರಮ ತಪದ ಬಲ್ಮೆಯಿಂದ
ನೆರೆ ಮಾರುಗೊಂಡ ನಿನ್ನಯ ಸಾಮರ್ಥ್ಯಕೆ।
ಸರಿಯಾರೀ ಧರೆಯಲ್ಲಿ
ನಿನ್ನ ಮನೆಯ ದಾಸಿಯರಾದೆವು ನಾವು ।
ಚೆನ್ನೆ ನಮ್ಮಯ ಕೈಯಿಂದ
ಚೆನ್ನಾಗಿ ಸೇವೆಯ ಮಾಡಿಸಿಕೊಂಬುದು
ನಿನ್ನ ಪಾದವೆ ಗತಿ ಎಮಗೆ.

ಎಂದು ಸುತ್ತಲು ಬಂದು ಮುತ್ತಿದ
ಸೌಂದರ ಸ್ತ್ರೀ ಪರಮ ವಿದ್ಯಾ- ।
ವೃಂದಮಂ ಕಣ್ದೆರೆದು ಕಂಡಳು
ಮುಂದೆ ನೃಪತಿಯನು
ಎಂದಳಿಂತು "ಸ್ಮರಿಸಿದಾಕ್ಷಣ ।
ವಿಂದುಮುಖಿಯರು ನೀವು ನಮ್ಮಯ
ಮುಂದೆ ಬಂದಿಹುದೆ"ಂದು ನುಡಿದಳು
ವಿನಯಪರೆಯಾಗಿ ॥

ಎಂದು ಬಿನ್ನವಿಸಿ ಸುತ್ತಲು ನಿಂದು
ಕೊಂಡಿರ್ದ
ವೃಂದಾರಕಿಯರ ನುಡಿಯನ್ನು ॥
ಅಂದು ತಾ ಕೇಳಿ ಕಣ್ದೆರೆದು ನೋಡಲು
ಮುಂದೆ
ನಿಂದಿರ್ದ ದೇವಿಯರ್ಕಳನು ॥
ನರನಾಥಚಂದ್ರಮನನು ಕಂಡು ವಿದ್ಯಾ- ।
ತರುಣಿಯರ್ಗಿಂತು ನುಡಿದಳು ॥
ಕರೆದಾಗ ಬಂದು ನಮ್ಮಯ ಸೇವೆಯ
ನೀವು ।
ಮರೆಯದೆ ಮಾಡಿ ತಾಯೆಂದು ॥

ಈ ರೀತಿ ಚರಿತೆಯುದ್ದಕ್ಕೂ ಜ್ಞಾನಚಂದ್ರಾಭ್ಯುದಯದ ಪ್ರತಿಬಿಂಬವನ್ನು ಕಾಣಬಹುದು. ಆದರೆ ಪಾಯಣವರ್ಣಿ ಇದನ್ನು ಭೂತಗನ್ನಡಿಯಲ್ಲಿ ತೋರಿಸಿದ್ದಾನೆ. ಕಲ್ಯಾಣಕೀರ್ತಿ ಬಳ್ಳದಲ್ಲಿ ಅಳೆದುದನ್ನು ಪಾಯಣವರ್ಣಿ ಕಂಡುಗದಲ್ಲಿ ಅಳೆದಿದ್ದಾನೆ. ಪಂಪನ ಆದಿಪುರಾಣದ ಭರತೇಶನ ಕಥಾಭಾಗದ ಅಸ್ಥಿಪಂಜರಕ್ಕೆ ರತ್ನಾಕರನು ರಕ್ತಮಾಂಸಗಳನ್ನು ತುಂಬಿ ಚೈತನ್ಯವಿತ್ತು ಸ್ವತಂತ್ರತೆಯ ಅಚ್ಚೊತ್ತಿದಂತೆ ಪಾಯಣನೂ ಮೂಲದ ಕಲ್ಯಾಣಕೀರ್ತಿಯ ಜ್ಞಾನಚಂದ್ರಾಭ್ಯುದಯದ ರೇಖಾಚಿತ್ರಕ್ಕೆ ಛಾಯಾನಿರೂಪಣೆ (Shading) ಯೊಡನೆ ವರ್ಣರಂಜನೆಯನ್ನೆಸಗಿ ಜೀವಕಳೆ ನೀಡಿ ತನ್ನ ಕೈವಾಡವನ್ನು ತೋರಿಸಿದ್ದಾನೆ. ಅಂತು ಪಾಯಣನು ಹೇಳಿದ ಪೂಜ್ಯಪಾದಮುನಿ ಜ್ಞಾನಚಂದ್ರಾಭ್ಯುದಯವನ್ನು ಬರೆದ ಮುನಿಕಲ್ಯಾಣಕೀರ್ತಿಯೇ ಇರಬಹುದೆ? ಇದಕ್ಕೆ ಬೇರೆ ಪುರಾವೆಗಳು ದೊರೆತಿಲ್ಲ.

ಜ್ಞಾನಚಂದ್ರಚರಿತೆಯ ಶೈಲಿ ಸರಳವಾದುದು. ಇದು ಸಾಂಗತ್ಯಕ್ಕೆ ಸ್ವಾಭಾವಿಕ. ದ್ರಾಕ್ಷಾಪಾಕವಾಗಿದ್ದು ಲಲಿತವೂ, ಮಧುರವೂ, ಹಿತವೂ ಆಗಿದೆ. ಕವಿ ಸಾಮಾನ್ಯಜನತೆಯನ್ನು ಮುಂದಿಟ್ಟು 'ರಸ, ರೀತಿ, ಭಾವ, ಶೃಂಗಾರ, ಕುಶಲದ ನುಡಿಗಳನ್ನು' ಬಳಸಿ ಕೋಮಲ ಕವಿತೆಯನ್ನು ಸ್ವಾರಸ್ಯವಾಗಿ ಬರೆಯಲು ಹೊರಟಿದ್ದಾನೆ. ಈ ಸಂದರ್ಭದಲ್ಲಿ ತನ್ನ ನಿರರ್ಗಳ ವಾಕ್ಪ್ರವಾಹಕ್ಕೆ ಭಾಷಾನಿಯಮವನ್ನು ತಡೆಯಾಗಿ ಭಾವಿಸಿಕೊಂಡಂತೆ ತಿಳಿಯುವುದಿಲ್ಲ. ಸಮಸ್ತ ಶಬ್ದಗಳನ್ನು ಉಪಯೋಗಿಸುವಲ್ಲಿ-ಕರ್ಪೂರವಾಳೆ, ಸಜ್ಜಾಗೃಹ, ರನ್ನಗುಂಡಲ, ಶಶಿಗಲ್ಲು, ಅರಸಂಚೆತೂಲತಲ್ಪ, ನದಿವೆಣ್ಣು ಮೊದಲಾದೆಡೆ-ಅರಿಸಮಾಸಗಳನ್ನು ದೋಷಗಳೆಂದು ಪರಿಗಣಿಸಲಿಲ್ಲ. ಅಂತೆಯೇ ರೂವಡೆದ (ರೂಪವಡೆದ) ಬಾಲ್ದೊಡವು (ಬಾಲದೊಡವು) ಈಶುಮೆಯೋ (ಈಶೋಮೆಯೋ) ತಳ್ಳೋದರಿ (ತಳೋದರಿ) ಭೂಜಾಯೆವಲ್ಲಭ (ಭೂಜಾಯಾವಲ್ಲಭ) ತಕ್ಕೆಂಪು (ಆಕೆಂಪು) ವೇಶೀರು (ವೇಶ್ಯೆಯರು) ಮೊದಲಾದ ಹಲವಾರು ಪ್ರಯೋಗಗಳು ವಿಚಾರಾರ್ಹವಾಗಿವೆ. ಆದರೂ ಇಂಥಾ ರೂಪ

ಗಳು ಕೆಲವೆಡೆ ಪ್ರಾಸವನ್ನು ಕಾಯ್ದುಕೊಳ್ಳಲು ಉಪಯೋಗಿಸಿದವುಗಳೂ, ಕೆಲವು ಛಂದೋಭಂಗವನ್ನು ರಕ್ಷಿಸಲು ಪ್ರಯೋಗಿಸಿದವುಗಳೂ, ಹಲಕೆಲವು ನಡುಗನ್ನಡ ಭಾಷಾ ಪ್ರಚಾರಕ್ಕೊಳಪಟ್ಟವುಗಳೂ, ಇನ್ನೂ ಕೆಲವು ದೇಸಿಗೆ ಹೊಂದಿದವುಗಳೂ ಆಗಿವೆ. ಬುಧ ಜನರಿಗೆ ತಿದ್ದುವ ಅವಕಾಶವನ್ನು ಕವಿ ಕೊಟ್ಟಿದ್ದಾನೆ. ಹಾಗೇನೇ 'ಮದಮುಖರಾಗದಿರಿ' ಎಂದು ಎಚ್ಚರಿಸಿದ್ದಾನೆ. ಮುಖ್ಯವಾಗಿ ಕವಿಯ ಪಾಂಡಿತ್ಯದಲ್ಲಿ ಕೊರತೆಯನ್ನು ಭಾವಿಸದೆ ಔಚಿತ್ಯವನ್ನು ಅರಿತುಕೊಳ್ಳಬೇಕಾದುದು ಸಹೃದಯರ ಧರ್ಮ. ಕಿತ್ತಳೆಯ ಸೋಳೆಗಳನ್ನು ಮೆಲ್ಲಮೆಲ್ಲನಾಗ ರಸವನ್ನು ಹೀರಿ ಬೀಜಗಳನ್ನು ಜಗಿಯುವ ಹವ್ಯಾಸಕ್ಕೆ ಹೋಗದೆ ಜಾಣ್ಮೆಯಿಂದ ಕಳೆದುಗುಳುವಂತೆ ಸಾರಗ್ರಹಣವನ್ನು ಮಾಡಿದಲ್ಲಿ ರಸಾಸ್ವಾದನೆಗೆ ತೊಡಕಿಲ್ಲದೆ ಗ್ರಂಥದ ಪ್ರಯೋಜನವನ್ನು ಪಡೆಯಬಹುದು.

* * * * *

ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು ನಮಗೆ ಒದಗಿಸಿ ಕೊಟ್ಟ ಮೈಸೂರಿನ ಕಾಗದದ ಹಸ್ತಲಿಖಿತ ಪ್ರತಿಯನ್ನೂ, ಮೂಡುಬಿದ್ರಿಯ ಶ್ರೀ ವಾಣೀ ವಿಲಾಸ ಜೈನ ಸಿದ್ಧಾಂತ ಭವನದ ತಾಡಪತ್ರ ಪ್ರತಿಯನ್ನೂ ಮುಂದಿಟ್ಟುಕೊಂಡು ಈ ಗ್ರಂಥವನ್ನು ಸಂಪಾದಿಸಿರುತ್ತೇವೆ. ಪ್ರಾಚೀನ ತಾಡಪತ್ರಗಳ ಲಿಪಿಸಂಶೋಧನೆಯಲ್ಲಿ ನುರಿತ ಶ್ರೀಮಾನ್ ಬಿ. ದೇವಕುಮಾರ ಜೈನಿ, ರಾಷ್ಟ್ರಭಾಷಾ ವಿಶಾರದ, ಹಿಂದೀ ಪ್ರಚಾರಕ, ಇವರು ಪರಿಷ್ಕೃತ ಪ್ರೆಸ್ ಪ್ರತಿಯನ್ನು ತಯಾರಿಸಿ ಕೊಟ್ಟುದಲ್ಲದೆ, ಪ್ರೂಫ್ ತಿದ್ದುವುದರಲ್ಲೂ ನೆರವಾಗಿ ಸಹಕರಿಸಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ಈ ಜ್ಞಾನಚಂದ್ರಚರಿತೆಯ ಪ್ರಕಾಶಕರಾದ ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರು ಆಶೀರ್ವಾದಪೂರ್ವಕ ಗ್ರಂಥ ಸಂಪಾದನೆಯನ್ನು ವಹಿಸಿ ಕೊಟ್ಟು ಸಾಹಿತ್ಯ ಸೇವೆಯನ್ನು ಮಾಡುವ ಅವಕಾಶವನ್ನು ಕಲ್ಪಿಸಿಕೊಟ್ಟುದಕ್ಕಾಗಿ ನಮ್ಮ ಸವಿನಯ ನಮೋಸ್ತು.

ಮೂಡುಬಿದ್ರಿ,
ತಾ. 1-5-1958.

ಸಂಪಾದಕ
**ಟಿ. ರಘುಚಂದ್ರ ಶೆಟ್ಟಿ,** ವಿದ್ವಾನ್,
ಸೀನಿಯರ್ ಕನ್ನಡ ಪಂಡಿತ,
ಜೈನ ಹೈಸ್ಕೂಲು, ಮೂಡುಬಿದ್ರಿ.

# ಜ್ಞಾನಚಂದ್ರಚರಿತೆ

## ಕಥಾಸಾರ.

### 1. ಪೀಠಿಕಾವ್ಯಾವರ್ಣನಂ.

ಆಕಾಶಮಧ್ಯ ಪ್ರದೇಶದಲ್ಲಿ ಘನೋದಧಿ, ಘನವಾತ, ತನುವಾತಗಳೆಂಬ ಮೂರುತೆರನಾದ ಗಾಳಿಗಳಿಂದ ಬಳಸಿದ್ದಾಗಿ ಅರಿಮುದ್ದಳೆಯ ಮೇಲೊಂದು ನೆರೆಮುದ್ದಳೆ ಇಟ್ಟಂತೆ ಶೋಭಿಸುವ ಈ ಲೋಕ ಮಧ್ಯದಲ್ಲಿ ತ್ರಸನಾಳವಿರುವುದು. ಈ ಜಂತುನಾಳದ ನಡುವೆ ಅಸಂಖ್ಯಾತ ದ್ವೀಪ ಸಮುದ್ರಗಳಿವೆ. ಇವುಗಳಿಂದ ಸುತ್ತುವರಿದು ಜಂಬೂವೃಕ್ಷೋಪಲಕ್ಷಿತ ಜಂಬೂದ್ವೀಪವು ಇಂಬಿನಿಂದ ಅರಳಿಕಂಗೊಳಿಪ ಅಂಬುಜದಂತೆ ಮೆರೆಯುತ್ತಿರುವುದು. ಇದನ್ನು ಬಳಸಿ ಲವಣ ಸಮುದ್ರವು ದಡಕ್ಕೆ ತೆರೆಗಳನ್ನಪ್ಪಳಿಸುತ್ತಾ ಮೊರೆಯುತ್ತಿರುವುದು. ಜಂಜೂದ್ವೀಪದ ನಟ್ಟನಡುವೆ ಆಕಾಶಕ್ಕೆ ನೀಳ್ದು ನಿಂತಿರುವ ಮಂದರಪರ್ವತದ ತೆಂಕಲ್ಗೆ ನಾಗಲೋಕವನ್ನೂ ಜರೆವ ಆರ್ಯಾವರ್ತವು ಸಂಪದ್ಭರಿತವಾಗಿ ರಾಜಿಸುತ್ತಿರುವುದು. ಈ ಖಂಡಾಂತರ್ಗತ ಛಪ್ಪನ್ನ (ಐವತ್ತಾರು) ದೇಶಗಳೆಂಬ ರಮಣಿಯ ನಗೆಯಿಂದೊಡಗೂಡಿದ ಮುಖಮಂಡಲದಂತೆ ಕಾಶ್ಮೀರದೇಶವು ಶೋಭಿಸುತ್ತಿದೆ. ಸಂಪತ್ತನ್ನು ಸೂರೆಗೊಂಡ ಕೆರೆ-ಕೊಳಗಳಿಂದಲೂ, ಸದಾಕಾಲ ಹರಿಯುತ್ತಿರುವ ನದಿ ಮತ್ತು ಕಾಲುವೆಗಳಿಂದಲೂ, ನೇರಿಲು, ಪೇರಳೆ, ಕೇದಗೆ, ಪುನ್ನಾಗ ಮೊದಲಾದ ಫಲಪುಷ್ಪಗಳಿಂದಲೂ, ಪಚ್ಚನೆ ಹಬ್ಬಿದ ಹೊಲಬನಗಳಿಂದಲೂ ಕೂಡಿದ್ದಾಗಿ ಕಾಶ್ಮೀರವು ರಮಣೀಯ ಪ್ರದೇಶವಾಗಿರುವುದು. ಕುಟಿಲ, ಶಠೆ, ಕಠಿಣ ಮೊದಲಾದ ಶಬ್ದಗಳು ಕಾಮಿನಿಯರ ಅಂಗಗಳಲ್ಲೂ, ಜಡ ವಸ್ತುಗಳಲ್ಲೂ ಉಪಯೋಗಿಸಲಾಗುತ್ತದಲ್ಲದೆ ಈದೇಶದ ಜನತೆಯಲ್ಲಿ ಅವು ಕಂಡುಬಾರವು. ದೇಶದೆಲ್ಲೆಡೆಗಳಲ್ಲೂ ಕಾಶ್ಮೀರ ರಮಣಿಯರು ತಮ್ಮದೇ ಆದ ಸೊಬಗಿಂದ ಬೆಡಗು ಬಿನ್ನಾಣಗಳಿಂದ ಮೆರೆಯುತ್ತಿರುವರು.

ಕನಕಪುರವೆಂಬೊಂದು ಪಟ್ಟಣ ಬಹು ಭಾಗ್ಯಸಂಪನ್ನವಾಗಿ ಈ ಕಾಶ್ಮೀರ ದೇಶಕ್ಕೆ ತಿಲಕಪ್ರಾಯವಾಗಿ ಕಂಗೊಳಿಸುತ್ತಿತ್ತು. ಪುರದ ಹೊನ್ನಕೋಂಟೆಯ ಹೊರಗೆ ಸಮುದ್ರದಂತೆ ಅಗಾಧವಾದ ಕಂದಕ. ಮುಗಿಲನ್ನು ಮುಟ್ಟುವ ಹುಲಿಮುಖ, ಬುರುಜು, ಕೊತ್ತಳ, ಮಣಿನಿರ್ಮಿತ ಹೊಬ್ಬಾಗಿಲಿಂದ ಕೂಡಿ ಸುವರ್ಣ ಪ್ರಾಕಾರವು ಜಗತ್ತಿಗೆ ಕೌತುಕವನ್ನು ಬೀರುತ್ತಿತ್ತು. ಪುರದೊಳಗಣ ಚೌವೀಥಿಗಳು ಮಾಂಡಲಿಕ, ಸಾಮಂತ, ದಂಡನಾಯಕ, ಮಂತ್ರಿ, ವಿದ್ವಾಂಸ ಮೊದಲಾದ ನಾನಾ ವರ್ಗದ ಮಹಾಜನರ ಧ್ವಜ ಚಿಹ್ನಿತವಾದ ಸೌಧಗಳಿಂದೊಪ್ಪುವ ಕೇರಿ ಕೇರಿಗಳನ್ನು ಸಂಬಂಧಿಸುತ್ತಿದ್ದುವು. ಪುರದ ಮಧ್ಯದಲ್ಲಿ ನವರತ್ನಖಚಿತ ಅರುಹನಾಲಯ ಧಾರ್ಮಿಕ ವಾತಾವರಣ ಉಳ್ಳುದಾಗಿತ್ತು. ಈ ಜಿನಮಂದಿರದ ವಕ್ಷಿಣಕ್ಕೆ ಸಿರಿದೇವಿಯ ನೆಲೆವನೆಯಂತೆ ಅರಮನೆ ಬಸದಿಗಿದಿರಾಗಿ ಒಪ್ಪುತ್ತಿತ್ತು. ಮಣಿನಿರ್ಮಿತ ರಾಜ

ಸಭೆ ಸೌಧರ್ಮ ಸಭೆಯನ್ನು ಜರೆಯುವುದಾದರೆ ರಾಣೀವಾಸಗಳು ಸೂರ್ಯ ತೇಜಸ್ಸನ್ನು ನಿಂದಿಸುತ್ತಿದ್ದುವು. ಈ ಅರಮನೆಯಲ್ಲಿ ಕನಕಪುರದರಸು ಜಿನಚಂದ್ರ ಮಹಾರಾಜನು 'ನೀತಿ ಶಾಸ್ತ್ರವೆ ಮೂರ್ತಿಗೊಂಡಿದೆಯೊ, ಕ್ಷಾತ್ರಲಕ್ಷಣವೆ ದೊರೆಯಾಯ್ತೊ, ಪುಣ್ಯವೆ ಪುರುಷ ರೂಪಾಯ್ತೊ' ಎಂಬಂತೆ ರಾರಾಜಿಸುತ್ತಿದ್ದನು. ಇವನ ಪಟ್ಟದರಸಿ 'ಅಸುವೊಂದೆ ಗಾತ್ರವೆರಡೆಂ'ಬಂತೆ ವಸುಧೇಶ್ವರನ ಮನಸ್ಸನ್ನು ಸೂರೆಗೊಂಡ ಶ್ರೀಕಾಂತಾದೇವಿ. ರಾಜನು ಪತ್ನಿಯೊಡಗೂಡಿ ಧರ್ಮಪರಾಯಣನಾಗಿ ರಾಜ್ಯಭಾರ ಮಾಡುತ್ತಿದ್ದನು.



## 2. ಶ್ರೀಕಾಂತಾದೇವಿಯ ಲಾವಣ್ಯ.

ಪಟ್ಟಮಹಿಷಿಯಾದ ಶ್ರೀಕಾಂತಾದೇವಿ ಸರ್ವಾಂಗಸುಂದರಿಯಾಗಿದ್ದು ಜಿನಭಕ್ತಳೂ, ಸುಶೀಲೆಯೂ, ಜಾಣೆಯೂ ಆಗಿದ್ದಳು. ಇಂಥಾ ಶ್ರೀಕಾಂತಾದೇವಿಯನ್ನು ಕೂಡಿ ಜಿನಚಂದ್ರ ಭೂಪಾಲನು ನಿಶ್ಚಿಂತೆಯಿಂದ ಸುಖದಲ್ಲಿರುವಾಗ ಒಂದಾನೊಂದು ಹಗಲು ಶ್ರೀಕಾಂತಾದೇವಿಯು ತನ್ನ ಸಖಿಯರೊಡಗೂಡಿ ಉಪ್ಪರಿಗೆಯನ್ನೇರಿ ಕ್ರೀಡಾವಿನೋದಗಳಲ್ಲಿ ಮಗ್ನಳಾಗಿದ್ದಳು. ಆ ಸಮಯದಲ್ಲಿ ಅಲ್ಲಿ ಹಾರಿಬಂದು ತನ್ನ ಮರಿಯ ಬಳಿ ಕುಳಿತು ಗುಟುಕನ್ನು ಪಿಳ್ಳೆಯ ಬಾಯೊಳಗಿಕ್ಕುವ ಪಾರಾವತವೊಂದು ಅವಳ ಲಕ್ಷ್ಯವನ್ನು ಸೆಳೆಯಿತು. 'ತಿರಿಯಂಚಗಳೂ ಮಕ್ಕಳನ್ನು ಪಡೆದು ಸಂತೋಷದಿಂದ ಮುದ್ದಿಸುತ್ತಿರುವಲ್ಲಿ, ನರಜನ್ಮತಾಳಿಯೂ ತಾನು ಮಕ್ಕಳನ್ನು ಪಡೆಯಲಾರದ ನಿರ್ಭಾಗ್ಯೆಯಾದೆನೇ?' ಎಂದು ಪುತ್ರದೋಹಳ ಅವಳನ್ನು ಚಿಂತೆಗೆ ಗುರಿಪಡಿಸಿತು. 'ಪುತ್ರನಾದದ ಮನೆ ಪಾಳ್ಮನೆ; ಪುತ್ರಸಿಲ್ಲದಿರಲು ಸಕಲ ಭೋಗಭಾಗ್ಯಗಳಿಂದೇನು ? ಮಕ್ಕಳನ್ನು ಪಡೆಯದ ಸ್ತ್ರೀ ಜನ್ಮ ಕತ್ತೆಯ ಜನ್ಮವೇ ಸರಿ. ಆದ್ದರಿಂದ ಗರ್ಭವನ್ನು ತಾಳಿ, ರಕ್ಷಾಬಂಧನನ್ನಾಂತು, ಚೆಲುವಿನ ಕುಮಾರನನ್ನು ಪಡೆದು, ತೊಟ್ಟಿಲೊಳಿಟ್ಟು ತೂಗುವ ಭಾಗ್ಯವೆನಗೆಂದಿಗೆ ದೊರೆಯುವುದೋ ! ಗೆಜ್ಜೆಯ ಕಾಲಿಂದ ತೊಟ್ಟಿಲನ್ನೊದೆದು ಹೋ ಎಂದು ನಗುತ್ತಾ ಲಲ್ಲೆಗರೆವ ಕಂದನನ್ನೆತ್ತಿ ಜೋಗುಳಿಸಿ ಮುದ್ದಿಸುವ ಪುಣ್ಯ ನನಗೆಂದು ಫಲಿಸುವುದೋ ! ತೊಡೆಯ ಮೇಲಿಟ್ಟು ಮೊಲೆಹಾಲನ್ನುಣ್ಣಿಸುವ ಸುಯೋಗ ಅದೆಂದಿಗೆ ಪ್ರಾಪ್ತವಾಗಬಲ್ಲದೋ ! ಮರಿಯಾನೆಯಂತೆ ಓಡಿ ಬಂದು ನಿರಿಯನ್ನೆಳೆದು ಕಾಡುವ ಕಂದನ ಬಾಲಲೀಲೆಯನ್ನೆಂದು ಕಾಣುವೆನೋ !' ಎಂಬ ಚಿಂತೆ ಅವಳನ್ನು ಬಾಧಿಸತೊಡಗಿತು. ಶ್ರೀಕಾಂತಾದೇವಿ ನೆಟ್ಟನೆ ಉಪ್ಪರಿಗೆಯಿಂದಿಳಿದು ಸೆಜ್ಜೆವನೆಯನ್ನು ಸೇರಿದಳು. ಒಡತಿಯ ದುಗುಡ ಪರಿಚಾರಿಕೆಯರನ್ನು ದಿಗ್ಭ್ರಮೆಗೊಳಿಸಿತು. ಅರಸಿಯ ನೆಚ್ಚಿನ ಕೆಳದಿಯೋರ್ವಳು ಕೂಡಲೆ ಅರಸನಿದ್ದಲ್ಲಿಗೈತಂದು ದೇವಿಯು ವ್ಯಥೆಯಿಂದ ಮಂಚದಲ್ಲಿ ಒರಗಿದ ಸುದ್ದಿಯನ್ನರುಹಿದಳು. ಇದನ್ನು ಕೇಳಿದ ಜಿನಚಂದ್ರ ಮಹಾರಾಜನು ಬೆದರಿದವನಾಗಿ ದಿಗಿಲನೆದ್ದು ಬಂದು ದೇವಿಯ ಬಳಿಯಲ್ಲಿ ಕುಳಿತು ಸಾನುನಯಪೂರ್ವಕ ಶೋಕ ಕಾರಣವನ್ನು ಕೇಳಿದನು. ಹೃದಯದ ಬಯಕೆಯನ್ನು ಬಾಯಿಂದ ನುಡಿಯಲು ನಾಚಿದ ಶ್ರೀಕಾಂತಾದೇವಿ ಮೌನವಾಗಿರಲು ಅವಳ ಗೆಳತಿ ಕೈಮುಗಿದು ನಡೆದ ಸಂಗತಿಯನ್ನು ನಿವೇ

ದಿಸಿದಳು. ಅರಸನು ಯುಕ್ತಿಯುಕ್ತನಾಗಿ ಮಡದಿಯನ್ನು ಸಮಾಧಾನ ಪಡಿಸಿ ಅಲ್ಲಿಂದ ಮರಳಿ ಓಲಗಸಾಲೆಗೆ ಬಂದನು.

ಪುರದ ಬೀದಿಯಲ್ಲಿ ಆಗತಾನೆ ಗುಪ್ತಿತ್ರಯಧಾರಿಗಳಾದ ವರದತ್ತ ಮುನಿ ರಾಜರು ಭ್ರಾಮರೀ ವೃತ್ತಿಯಲ್ಲಿ ಬರುತ್ತಿರುವುದನ್ನು ಕಂಡು ಇದಿರ್ಗೊಂಡು ಮೂವಂದು ಕರೆತಂದು ಸಿದ್ಧಭಕ್ತಿಪೂರ್ವಕ ಆಹಾರದಾನವನ್ನೆಸಗಲು ಪಂಚಾಶ್ಚರ್ಯವಾಯಿತು. ಮುನಿಯ ಮಹಾತ್ಮೆಗೆ ಅರಸನು ಅಚ್ಚರಿವಟ್ಟು ಅವರ ಪಾದಗಳಿಗೆರಗಿ 'ಬೋಧನಿಧಿಯೇ! ಕುರುವಂಶವನ್ನು ಬೆಳಗುವ ಪುತ್ರ ಸಂತಾನವೆನಗೆ ದೊರಕುವುದೋ' ? ಎಂದು ಬಿನ್ನವಿಸಿಕೊಂಡನು. ವರದತ್ತ ಮುನಿಗಳು ಮೃದುಮಧುರ ವಚನದಿಂದ 'ಜಿನಚಂದ್ರ ನೃಪತಿ ! ಇನ್ನಾರು ತಿಂಗಳಿಗೆ ಸರ್ವ ಗುಣಸಂಪನ್ನ, ಸಕಲ ಲಕ್ಷಣಯುಕ್ತನಾದ ಕುವರನು ಜನಿಸಲಿರುವನು. ಇದಕ್ಕೆ ಪೂರ್ವ ಸೂಚನೆಯಾಗಿ ಇಂದಿನಿಂದ ಹದಿನೈದು ದಿನಕ್ಕೆ ದೇವನೋರ್ವನು ಬಂದು ಜಿನಭವನವನ್ನು ಹೊಕ್ಕು ಅಷ್ಟವಿಧಾರ್ಚನೆಯನ್ನೆಸಗಿ ಹೊರಡಬೇಕೆಂದಿರುವಾಗ ನಿನ್ನಲ್ಲಿಗೆ ಬಂದು ಕೈಮುಗಿದು ನಿನ್ನುದರದಲ್ಲಿ ಜನಿಸುವ ಅಪೇಕ್ಷೆಯನ್ನು ವ್ಯಕ್ತಪಡಿಸಿ ಮರಳುವನು. ನೀನಾದರೂ ಇಲ್ಲಿಂದ ಮೂರನೆ ಭವದಲ್ಲಿ ಮುಕ್ತನಾಗುವೆ' ಎಂದು ನಿರೂಪಿಸಿದರು. ಮಹಾರಾಜನು ಮುನಿಗಳನ್ನು ಬೀಳ್ಕೊಂಡು ಹರುಷಚಿತ್ತನಾಗಿ 'ಮುನಿಯುಂಡ ಶೇಷಾನ್ನ ಪುತ್ರ ಸಂತಾನಕೆ ಘನಪಿಂಡ ಬೀಜವೆ'ಂದು ಸಂಕಲ್ಪಿಸಿ ವನಿತೆಯೊಡಗೂಡಿ ಆರೋಗಣೆಗೈದನು.



## 3. ಜ್ಞಾನಚಂದ್ರೋದಯ.

ಭೋಜನಾನಂತರ ನಿಮಿಷಮಾತ್ರ ವಿಶ್ರಮಿಸಿದ ಜಿನಚಂದ್ರ ಮಹಾರಾಜನು ನಿದ್ದೆ ತಿಳಿದೆದ್ದು ಅಲಂಕೃತನಾಗಿ ಆಸ್ಥಾನಕ್ಕೈಯ್ದಿ ಸಿಂಹಾಸನವೇರಿದ್ದನು. ಮಂತ್ರಿ ಮಾಂಡಲಿಕರು ಓಲಗದಲ್ಲಿ ನೆರೆದಿದ್ದರು. ಶ್ರೀಕಾಂತಾದೇವಿಯು ಬೆಂಗಡೆಯಲ್ಲಿ ಸುಪ್ಪತ್ತಿಗೆಯನ್ನೇರಿ ಕುಳಿತಿದ್ದಳು. ಇಂತು ಸೌಧರ್ಮ ಸಭೆಯಲ್ಲಿ ದೇವೇಂದ್ರನಂತೆ ಜಿನಚಂದ್ರನು ಮೆರೆಯುತ್ತಿದ್ದನು. ವರದತ್ತ ಮುನಿಗಳ ಅತಿಶಯದಿಂದ ಸುರಿದ ರತ್ನರಾಶಿಯನ್ನು ಪ್ರಜೆಗಳು ಕೊಂಡೊಯ್ಯಲೆಂದು ಡಂಗುರ ಸಾರಲಾಗಿತ್ತು. ಪುರಜನರು ನೆರೆದು ಬಂದು ಅಭಿಲಾಷೆಯಿಂದ ದ್ರವ್ಯ ರಾಶಿಯನ್ನು ಒಯ್ಯುವ ಸಡಗರವನ್ನು ಕಂಡು ರಾಜನು ವಿನೋದಪಡುತ್ತಿದ್ದನು. ಆಗತಾನೆ ಎರಡೂವರೆ ದ್ವೀಪಗಳಲ್ಲುಳ್ಳ ಜಿನೇಶ್ವರರನ್ನು ಪೂಜಿಸಿ ಸುರಗಿರಿಗೆ ತೆರಳಿ ಹದಿನಾರು ಜಿನ ಗೃಹಗಳಲ್ಲಿ ಅಷ್ಟವಿಧಾರ್ಚನೆಯನ್ನೆಸಗಿ ಮರಳುತ್ತಿರುವ ದೇವನೋರ್ವನು ಸ್ವರ್ಣಪುರದಲ್ಲಿ ಗಗನ ಮಾರ್ಗದಿಂದಿಳಿದು ಸಭೆಯನ್ನು ಹೊಕ್ಕು ನೆಟ್ಟನೆ ಬಂದು ಸಿಂಹಾಸನದಲ್ಲಿ ಕುಳಿತುಕೊಂಡನು. ಈ ಸುಂದರಾಂಗನನ್ನು ಜಿನಚಂದ್ರನು ಎವೆಯಿಕ್ಕದೆ ನೋಡುತ್ತಿರಲು 'ಈ ತೆರನಾದ ಸ್ನೇಹಕ್ಕೆ ಕಾರಣವೇನೆ'ಂದು ದೇವನು ರಾಜನನ್ನು ಕೇಳಿದನು. ಜಿನಚಂದ್ರನು ಈ ಮೊದಲು ವರದತ್ತ ಮುನಿಗಳು ನುಡಿದ ಭವಿಷ್ಯದ್ವಾಣಿಯನ್ನು ವಿವರಿಸಿದನು. ಇದನ್ನು ಕೇಳಿದ ಆ ದೇವನು 'ರಾಜನೇ ನೀನು ಅಜಿತಂಜಯನಾಗಿದ್ದ ಕಾಲದಲ್ಲಿ ನಾನು ನಿನಗೆ ಜಿತ

ಶತ್ರುವೆಂಬ ಮಗನಾಗಿ ಜನಿಸಿದ್ದೆ. ಅಲ್ಲಿಂದ ಏಳು ಜನ್ಮಗಳಲ್ಲಿ ತಂದೆ-ಮಕ್ಕಳಾಗಿ ಜನಿಸಿ ಬಂದ ಸ್ನೇಹಾತಿಶಯದಿಂದ ನಿನಗೂ ಶ್ರೀಕಾಂತಾದೇವಿಗೂ ಇನ್ನಾರು ತಿಂಗಳಲ್ಲಿ ಮಗನಾಗಿ ಜನಿಸುವೆನೆಂದು ತನ್ನ ಜನ್ಮ ವೃತ್ತಾಂತ (22, 23ನೇ ಸಂಧಿಯಲ್ಲಿ ಜಿನಚಂದ್ರನು ಜಯ-ವಿಜಯರೆಂಬ ಅನುಪಮ ಕೇವಲಿಗಳಿಂದ ಕೇಳಿ ತಿಳಿದ ಭವಾವಳಿ)ವನ್ನು ತಿಳಿಯ ಹೇಳಿ ಉಚಿತ ಉಡುಗೊರೆಗಳಿಂದ ಭಾವೀ ಮಾತಾ-ಪಿತರನ್ನು ಸತ್ಕರಿಸಿ ದೇವಲೋಕಕ್ಕೆ ತೆರಳಿದನು.

ದಂಪತಿಗಳು ಧರ್ಮಪರಾಯಣರಾಗಿರುತ್ತಿರಲೊಂದು ದಿನ ಋತುಸ್ನಾತೆಯಾದ ಶ್ರೀಕಾಂತಾದೇವಿ ಜಿನಾಲಯಕ್ಕೆ ತೆರಳಿ ಪುಂಜವಿಕ್ಕಿ ಜಪಸ್ತೋತ್ರಾದಿಗಳನ್ನು ಮುಗಿಸಿ ಪರಿಶುದ್ಧಾಂತಃಕರಣಳಾಗಿ ಅಂದಿನಿರುಳು ಪತಿಸಮಾಗಮದಲ್ಲಿದ್ದು ಬೆಳಗಿನ ಜಾವದಲ್ಲಿ ಹರಿ, ರವಿ, ವಿಧು, ಕರಿಗಳನ್ನು ಕನಸ್ಸಿನಲ್ಲಿ ಕಂಡು ಮಂಗಳವಾದ್ಯಗಳು ಮೊಳಗಲು ಎಚ್ಚತ್ತಳು. ಮರುದಿನ ತನ್ನ ಪತಿಯೊಡನೆ ಸ್ವಪ್ನ ಸಮಾಚಾರವನ್ನು ತಿಳಿಸಲು ಅರಸನು ಸ್ವಪ್ನ ಫಲವನ್ನು ಇಂತೆಂದು ವಿವರಿಸಿದನು:- 'ಪ್ರಿಯತಮೆ ! ನಿನ್ನಭೀಷ್ಟವು ಕೈಗೂಡಿದುದು. ಸಿಂಹವನ್ನು ಕಂಡುದರಿಂದ ಪರಾಕ್ರಮಿಯೂ, ಸೂರ್ಯನನ್ನು ಕಂಡ ಕಾರಣ ಥಳಥಳಿಸುವ ದಿವ್ಯ ಕಾಯನೂ, ಚಂದ್ರನನ್ನು ನೋಡಿದ ಕಾರಣ ಕಂದರ್ಪ ಸಮಶೂರನೂ, ಆನೆಯನ್ನು ನೋಡಿದುದರಿಂದ ಮಹಾದಾನಿಯೂ ಆದ ಪುತ್ರನು ಜನಿಸುವನು.' ಇದು ಸೂಚನೆಯಾದರೆ ಅತ್ತ ದಿಟವಾಗಿ ಸ್ವರ್ಗಲೋಕದ ದೇವನಿಗೆ ಆಯುರವಸಾನದ ಪೂರ್ವಚಿಹ್ನೆಗಳು ತಲೆದೋರಿದುವು. ತಕ್ಷಣ ಆತನು ಸನ್ಯಾಸವನ್ನು ಸ್ವೀಕರಿಸಿ ಸ್ವರ್ಗದಿಂದ ಚ್ಯುತನಾಗಿ ಬಂದು ಶ್ರೀಕಾಂತಾದೇವಿಯುದರದಲ್ಲಿ ಜನ್ಮ ತಾಳಿದನು. ಜನಿಸಲಿರುವ ಪುತ್ರನ ಮಹಾನುಭಾವತೆಯನ್ನು ವ್ಯಕ್ತಪಡಿಸುವಂತೆ ಅವಳ ದೇಹದಲ್ಲಿ ಗರ್ಭಚಿಹ್ನೆಗಳು ಕಾಣಿಸಿಕೊಂಡವು. ಮಹಾಮಹಪೂಜೆ, ದಾನ-ಧರ್ಮಗಳ ಮೂಲಕ ತನ್ನ ಮಡದಿಯ ಧಾರ್ಮಿಕದೋಹದಗಳನ್ನು ಪೂರೈಸಿದನು. ನವಮಾಸ ಪೂರ್ಣವಾಗಲು ಚೈತ್ರ ಶುದ್ಧ ಪಂಚಮಿ ಗುರುವಾರ ಬೆಳಗಿನ ಜಾವದಲ್ಲಿ ಅರಸಿ ಗಂಡು ಮಗುವನ್ನು ಹೆತ್ತಳು. ಅರಸನು ಈ ವಾರ್ತೆಯನ್ನು ತಂದ ದೂತಿಗೆ ಪೂರ್ಣೋಪಹಾರವನ್ನಿತ್ತು, ಪುತ್ರ ಮುಖದರ್ಶನದಿಂದ ಪರಮಾನಂದಭರಿತನಾಗಿ ಪಟ್ಟಣದಲ್ಲೆಲ್ಲಾ ವೈಭವದಿಂದ ಪುತ್ರೋತ್ಸವವನ್ನು ನಡೆಸಿದನು. ಹತ್ತನೆಯ ದಿನದಲ್ಲಿ ಶಿಶುವಿನ ಹೆಸರಲ್ಲಿ ಅಭಿಷೇಕ ಪೂಜೋತ್ಸವವನ್ನು ಮಾಡಿಸಿ ಮಂತ್ರಿ ಮಾಂಡಲಿಕರ ಸಮ್ಮುಖದಲ್ಲಿ 'ಮುಂದಕ್ಕೆ ಈ ಕುಮಾರನು ಕೇವಲಜ್ಞಾನಿಯಾಗುವನೆ'ಂದು **'ಜ್ಞಾನಚಂದ್ರನು'** ನೆಂಬ ಅನ್ವರ್ಥನಾಮವನ್ನಿಟ್ಟನು. ನೆರೆದ ಮುತ್ತೈದೆಯರು ಕುವರನ ಗುಣಗಾನವನ್ನು ಮಾಡುತ್ತ ತೊಟ್ಟಿಲು ತೂಗಿದರು. ಅವರನ್ನೆಲ್ಲಾ ಮುತ್ತಿನಕ್ಷತೆಯಿಂದ ಉಡಿ ತುಂಬಿ ಬಾಗಿನ ವೀಳಯಗಳನ್ನಿತ್ತು ಶ್ರೀಕಾಂತೆ ಬೀಳ್ಕೊಟ್ಟಳು. ಬೆಳೆಯುತ್ತಿರುವ ಬಾಲಕನ ಬಾಲಲೀಲೆಗಳು ತಾಯ್ತಂದೆಗಳ ಆನಂದವನ್ನುಕ್ಕಿಸಿತು. ವರುಷವೈದು ತುಂಬುತ್ತಲೇ ವಿದ್ಯಾಭ್ಯಾಸಕ್ಕೆ ತೊಡಗಿಸಿದ ಕುಮಾರನು ಮರೆತುದನ್ನು ಜ್ಞಾಪಿಸಿಕೊಳ್ಳುವಂತೆ ಚೌಷಷ್ಠಿ ಕಲೆಗಳನ್ನು ಅರಿತುಕೊಂಡನು. ಅರಗಿಳಿಯಂತೆ ಮುದ್ದು ಮಾತಾಡುವ ಬಾಲಕನು ಶೈಶವವನ್ನು ಕಳೆದು ಷೋಡಶ ವರ್ಷೀಯನಾಗಲು ಸಕಲ ಲಕ್ಷಣ ಸಮಾಯುಕ್ತನಾಗಿ ದಿವಿಜರನ್ನು ಜರೆವ ಚೆನ್ನಿಗನಾದನು.

# 4. ಜ್ಞಾನಚಂದ್ರಕುಮಾರನ ಪರದೇಶಗಮನ.

ಜ್ಞಾನಚಂದ್ರನು ನಂದನವನ ವಿಹಾರಕ್ಕೆಳಸಿ ವೇಷಭೂಷಣಗಳಿಂದ ಅಲಂಕೃತನಾಗಿ ಶಸ್ತ್ರಸಜ್ಜಿತನಾಗಿ ನಿಂತನು. ತನ್ನೋರಗೆಯ ಐನೂರು ರಾಜಕುಮಾರರನ್ನೂ, ಮಂತ್ರಿ, ಪುರೋಹಿತ, ತಳವಾರ, ಪರದರ ಮಕ್ಕಳಾದ ನರಸಿಂಹ, ಜಯ, ಕಪಿಲ, ಧನದತ್ತರನ್ನೂ ಕರೆಸಿಕೊಂಡನು. ಪವನಂಜಯವೆಂಬ ಹೆಸರಿನ ಶುಭ ಲಕ್ಷಣಗಳಿಂದ ಒಪ್ಪುವ ಬ್ರಾಹ್ಮಣ ಜಾತಿಯ ಅಶ್ವರತ್ನವು ಹಲ್ಲಣ ಬಿಗಿದು ಗೆಜ್ಜೆ, ಕುಚ್ಚು, ಝಲ್ಲಿಗಳಿಂದ ಶೃಂಗಾರವನ್ನಾಂತು ಸಿದ್ಧವಾಯಿತು. ಅದನ್ನೇರಿ ತನ್ನ ಪರಿವಾರ ವರ್ಗಕ್ಕೆ ಹಿಂಬಾಲಿಸಲು ಆಜ್ಞೆಯಿತ್ತು ಪುರದ ನಾರಿಯರ ಮನಸ್ಸನ್ನು ಸೂರೆಗೊಂಡು ಬೀದಿ ಬೀದಿಗಳನ್ನು ದಾಟುತ್ತಾ ಊರ ಹೊರಗಿನ ಉದ್ಯಾನವನಕ್ಕೈತಂದು ಕುದುರೆಯ ಮೇಲೆ ನಾನಾ ಚಮತ್ಕಾರಿಕ ಸಾಧನೆಗಳನ್ನು ಮಾಡಿ ತೋರಿಸಿದವನಾಗಿ ವನವನ್ನು ಹೊಕ್ಕನು. ಅಲ್ಲಿನ ಫಲಭರಿತ ವೃಕ್ಷರಾಜಿಗಳನ್ನು ನೋಡುತ್ತ ಬರುತ್ತಿರುವಲ್ಲಿ ಎದುರಾದ ಮತ್ತಮದಗಜವನ್ನು ಮದವಿಳಿಸಿ ಚಾಕಚಕ್ಯತೆಯಿಂದ ಮಸ್ತಕವನ್ನೇರಿ ಕುಳಿತನು.

ಅಷ್ಟರಲ್ಲಿ ಖೇಚರನೋರ್ವನು ಆಕಾಶದಿಂದ ಇಳಿತಂದು ಕರಿಶಿರದಿಂದ ಜ್ಞಾನಚಂದ್ರನನ್ನೆತ್ತಿಕೊಂಡು ಗಗನಕ್ಕೆ ನೆಗೆಯಲು, ಸಖರು ಗಾಬರಿಗೊಂಡು ನಗರಿಗೆಯ್ದಿ ಈ ಸುದ್ದಿಯನ್ನು ಅರಸನಿಗೆ ತಿಳಿಸಿದರು. ಜಿನಚಂದ್ರನು ಮಗನಿಗೊದಗಿದ ವಿಪತ್ತನ್ನು ಕೇಳಿ ಮೂರ್ಛೆಗೆ ಸಂದನು. ಶಿಶಿರೋಪಚಾರದಿಂದ ಎಚ್ಚತ್ತು ಪುತ್ರನಿಗಾಗಿ ಹಲವು ಹಂಬಲಿಸಿ ಭ್ರಮೆಗೊಳಲು 'ಜಿನಚಂದ್ರನೇ ! ಶೋಕವನ್ನು ಬಿಡು. ಖೇಚರನು ಕೊಂಡೊಯ್ದ ನಿನ್ನ ಕುವರನು ಶತ್ರುರಾಜರ ಸೊಕ್ಕನ್ನು ಮುರಿದು ಖೇಚರದೇಶವನ್ನು ಸಾಧಿಸಿ ಕೀರ್ತಿಯನ್ನು ದಶದಿಕ್ಕುಗಳಲ್ಲೂ ಪಸರಿಸಿ ಜಗದೇಕವೀರನಾಗಿ ನಿನ್ನ ಬಳಿಗೆ ಮರಳಲಿರುವನು' ಎಂದು ಆಕಾಶವಾಣಿಯಾದುದನ್ನು ಕೇಳಿ ಸಮಾಧಾನ ತಾಳಿ ಶ್ರೀಕಾಂತಾದೇವಿಯನ್ನೂ ಸಂತಯಿಸಿ ಗೆಲವಿನಿಂದಿದ್ದನು.

ಜ್ಞಾನಚಂದ್ರನನ್ನೊಯ್ದು ಖೇಚರನು ಆತನನ್ನು ರತ್ನಪುರದ ಬಹಿರ್ವನದ ಜಿನಾಲಯದಲ್ಲಿ ಇಳುಹಲು ಅವನು ಜಿನಗೃಹವನ್ನು ಬಲವಂದು ಒಳಹೊಕ್ಕು ಸಾಷ್ಟಾಂಗವೆರಗಿ ಸ್ತೋತ್ರಗೈದ ನಂತರ ಜಿನಾಲಯದ ರನ್ನಮಂಟಪದಲ್ಲಿ ಕುಳಿತಿದ್ದು ತನ್ನನ್ನು ಅಲ್ಲಿಗೆ ಕರೆತಂದ ಕಾರಣವನ್ನು ಖೇಚರನೊಡನೆ ಕೇಳಿದನು. ಅದಕ್ಕಾ ಖೇಚರನು "ಅನಿಲವೇಗನೆಂಬುದು ನನ್ನ ಹೆಸರು. ನನ್ನ ದೊರೆ ರತ್ನಪುರವನ್ನಾಳುವ ಸಿಂಹಬಲ. ಆತನಿಗೆ ತುಂಬು ಜವ್ವನೆಯರೂ, ಸುರೂಪವತಿಯರೂ ಆದ ಎಂಟು ಮಂದಿ ಪುತ್ರಿಯರು. ಒಂದು ದಿನ ತನ್ನೂರ ನಂದನವನಕ್ಕೆ ಬಂದ ಮುನಿಗಳೊಡನೆ ತನ್ನ ಪುತ್ರಿಯರಿಗೆ ವರನಾಗುವನಾರೆಂದು ಪ್ರಾರ್ಥಿಸಲು 'ಕನಕಪುರದ ಬಹಿರುದ್ಯಾನದಲ್ಲಿ ಮದಿಸಿದ ಆನೆಯನ್ನು ಮರ್ದಿಸಿ ಶಿರವನ್ನಡರಬಲ್ಲ ಪರಾಕ್ರಮಿಯೇ ನಿನ್ನ ಪುತ್ರಿಯರಿಗೆ ಪತಿಯಾಗುವನೆ'ಂದು ಮುನಿಗಳು ನುಡಿದರು. ಅಂಥಾ ಪರಾಕ್ರಮಿಯನ್ನು ಗೊತ್ತುಹಚ್ಚಲು ನನ್ನ ದೊರೆ ನನಗಾಣತಿಯಿತ್ತಂತೆ ಆ ಉದ್ಯಾನದ ಬಳಿ

ಕಾಳ್ಮೃಗವಾಗಿ ಚರಿಸುತ್ತಿದ್ದ ನಾನು ನಿನ್ನ ವಿಕ್ರಮಾತಿಶಯವನ್ನು ಕಂಡು ಇಲ್ಲಿಗೆ ಕರೆತಂದೆನೆ"ಂದು ತನ್ನ ಕಾರ್ಯದೊಳವನ್ನರುಹಿದನು. ತಕ್ಷಣ ಅನಿಲವೇಗನು ಒಡೆಯನಲ್ಲಿಗೆ ತೆರಳಿ ನಡೆದ ಸಂಗತಿಯನ್ನರುಹಲು ಸಿಂಹಬಲನು ಆನಂದಭರಿತನಾಗಿ ಹೊರಟು ಬಂದು ಜ್ಞಾನಚಂದ್ರನನ್ನು ಕಂಡು ಅವನ ರೂಪಾತಿಶಯಕ್ಕೆ ಮಾರುವೋಗಿ ವಿನಯ ವಚನಗಳನ್ನು ನುಡಿದು ಬಿಗಿಯಪ್ಪಿ ತನ್ನ ಹೆಮ್ಮಕ್ಕಳ ಕೈವಿಡಿದು ಪಾದಸೇವೆಯನ್ನು ಮಾಡಿಸಿಕೊಳ್ಳ ಬೇಕೆಂದು ಪ್ರಾರ್ಥಿಸಿಕೊಂಡನು. 'ವಿದ್ಯೆಯನ್ನು ಸಾಧಿಸಿದಲ್ಲದೆ ವಿವಾಹವಾಗೆನೆ'ಂಬ ಸಂಕಲ್ಪವನ್ನು ವ್ಯಕ್ತಪಡಿಸಿದ ಭಾವೀಜಾಮಾತನನ್ನು ಒಡಗೊಂಡು ಸಿಂಹಬಲನು ಪಟ್ಟಣಕ್ಕೆ ಬರಲು ನೀರಾಜನಪೂರ್ವಕ ಸರಸಿಜಾಕ್ಷಿಯರು ಸ್ವಾಗತಿಸಿದರು.

## 5. ವಜ್ರಕಂಠನ ಗೆಲಿದುದು.

**ಜ್ಞಾ**ನಚಂದ್ರನು ಸಿಂಹಬಲನ ಅರಮನೆಯ ಲಕ್ಷ್ಮೀಮಂಟಪದಲ್ಲಿದ್ದು ಪುರದಂದವನ್ನು ನೋಡುತ್ತಿದ್ದನು. ಆ ಕಡೆ ಕರುಮಾಡವೇರಿದ ಅನುಮತಿ ಮೊದಲಾದ ಎಂಟು ಮಂದಿ ಅರಸುಗುವರಿಯರ ದೃಷ್ಟಿ ಆತನಲ್ಲಿ ನಟ್ಟುದು. ಇಷ್ಟ ದೃಷ್ಟಿಯನ್ನು ತೆಗೆಯದೆ ನೋಡುತ್ತಿದ್ದ ಅವರು ಮದನಬಾಧೆಗೆ ಗುರಿಯಾಗಿ ಮೂರ್ಛೆಗೆ ಸಂದರು. ಇದನ್ನು ತಿಳಿದ ಸಿಂಹಬಲನು ಅಲ್ಲಿಗೆ ಬಂದು ಕನ್ನಿಕೆಯರಿಗೆ ಶೈತ್ಯೋಪಚಾರವನ್ನೆಸಗಿ ಸಂತಯಿಸಿದನು. ಮಂತ್ರೋಪದೇಶವನ್ನು ಪಡೆದ ಕುಮಾರನು ಉದ್ಯಾನವನವನ್ನು ಹೊಕ್ಕು ಜಿನೇಶ್ವರ ಪೂಜೆಯನ್ನು ಮಾಡಿ ವೃಕ್ಷದ ಬುಡವನ್ನು ಸೇರಿ ಪಲ್ಯಂಕಾಸನವನ್ನು ಬಲಿದು ಪಂಚಪದವನ್ನು ಸ್ಮರಿಸಿ ಷೋಡಶ ಮಂತ್ರಸಾಧನೆಗೆ ತೊಡಗಿದನು. ಖೇಚರ ಕುವರಿಯರೂ ತಂದೆಯ ಅಪ್ಪಣೆ ಪಡೆದು ಜ್ಞಾನಚಂದ್ರನ ವಿದ್ಯಾಸಾಧನೆಗೆ ಪರರಿಂದ ವಿಘ್ನ ಒದಗದಂತೆ ಅಷ್ಟದಿಕ್ಕುಗಳಲ್ಲಿ ಕಾವಲಿದ್ದು ಪರಿಚಾರಿಕೆಯರಾಗಿ ಸೇವಿಸುತ್ತಿದ್ದರು. ಸಿಂಹಬಲನ ದುರುಳ ಜಾಮಾತ ಕುಲಿಶಗಲನು ಇದನ್ನು ತಿಳಿದು ಮಾವನು ತನ್ನನ್ನು ವಂಚಿಸಿದನೆಂದು ಕ್ರೋಧೋದ್ರಿಕ್ತನಾಗಿ ಆಕಾಶದಲ್ಲಿ ನಿಂತು ಕಲ್ಗುಂಡುಗಳ ಮಳೆಯನ್ನೂ ಕೆಂಡದ ಮಳೆಯನ್ನೂ ಕರೆದು ಮಾಯದ ಹುಲಿ ಸಿಂಹಗಳಿಂದ ಬೆದರಿಸುತ್ತಾ ಪರಿಪರಿಯ ಮಹೋಪಸರ್ಗವನ್ನೆಸಗಲು ತೊಡಗಿದನು. ಕಾವಲಿದ್ದ ತರುಣಿಯರು ವಿದ್ಯಾಬಲದಿಂದ ವಜ್ರಮಯ ಭಿತ್ತಿಯನ್ನು ರಚಿಸಿ, ಮೇಲಕ್ಕೂ ಮುಚ್ಚಿ ವಿದ್ಯೆಗಳ ಕಾಪನ್ನಿರಿಸಿದರು. ತಾವು ವೀರಗಾಸೆಯನ್ನು ಬಿಗಿದು ಧನುಸ್ಸನ್ನೆತ್ತಿ ಬಿಟ್ಟ ಬಾಣಗಳಿಗೆ ಕುಲಿಶಗಲನ ಬಲವೆಲ್ಲ ಆಹುತಿಯಾಯಿತು. ಎದುರಾದ ಕುಲಿಶಗಲನನ್ನು ಮುಟ್ಟಿ ಮೂದಲಿಸಿ, ಬಿಟ್ಟ ಬಾಣಗಳಿಗೆ ಆತನ ರಥ ಪುಡಿಯಾಗಲು ಅವನು ಅಚ್ಚರಿವಟ್ಟು ತಲೆದೂಗಿ ಪ್ರತ್ಯಸ್ತ್ರಗಳನ್ನು ಎಸೆದನು. ತರುಣಿಯರು ಅವುಗಳನ್ನು ಖಂಡಿಸಿ ಬಹುರೂಪಿಣೀ ವಿದ್ಯೆಯಿಂದ ಎಲ್ಲೆಡೆ ಕಾಣಿಸಿಕೊಂಡು ಹಮ್ಮುಗಾರಿಕೆಯಿಂದ ಅವನ ಗರ್ವವನ್ನು ಮುರಿದು ಬೆಂಬತ್ತಿದರು. ಉಪಸರ್ಗವನ್ನು ಲೆಕ್ಕಿಸದೆ ಶಾಂತಚಿತ್ತನಾಗಿ ಮುನಿಗಳಂದದಿ ಕುಳಿತು ಷೋಡಶಾಕ್ಷರ ಮಂತ್ರಧ್ಯಾನದಲ್ಲಿ ನಿರತನಾದ ಜ್ಞಾನೇಂದುವಿಗೆ ಏಳ್ನೂರು ಮಂದಿ ವಿದ್ಯಾ

ದೇವತೆಯರು ಒಲಿದು ಬಂದು ಎರಗಿದರು. ಫಲಪ್ರಾಪ್ತಿಯಾಗಲು ಧ್ಯಾನವನ್ನುಳಿದ ಜ್ಞಾನಚಂದ್ರನು ಕುಲಿಶಗಲನ ಸಮಾಚಾರವನ್ನು ತಿಳಿದು ಆತನನ್ನು ಬೆಂಬತ್ತಿ ತರುಣಿಯ ರನ್ನು ಹಿಂತಿಕ್ಕಿ ಖೇಚರನಿಗೆ ಎದುರಾದನು. ಪರಸ್ಪರ ಮೂದಲಿಕೆಯಿಂದ ಬಲಿತ ಕಾಳಗದಲ್ಲಿ ಜ್ಞಾನೇಂದು ಬಿಟ್ಟ ಬಾಣವು ಕುಲಿಶಗಲನ ರುಂಡವನ್ನು ಆಕಾಶಕ್ಕೆ ಕೊಂಡೊಯ್ದು ನೆಲ ಕ್ಕುರುಳಿಸಿತು. ದೇವತೆಗಳು ಹೂಮಳೆ ಕರೆದರು ! ದೇವದುಂದುಭಿಗಳು ಮೊಳಗಿದುವು !



## 6. ಜ್ಞಾನಚಂದ್ರನು ವಿಜಯಾರ್ಧದಲ್ಲಿ ಅಭಿಷೇಕ ಮಾಡಿದುದು.

ಸಾಹಸಕಾರ್ಯವನ್ನೆಸಗಿ ಅರಮನೆಗೆಯ್ದಿರ್ದ ಜ್ಞಾನಚಂದ್ರನನ್ನು ಸಂಭಾವಿಸಲು ವಿಶೇಷ ಸಭೆ ಕರೆಯಲಾಗಿತ್ತು. ಕುಲಿಶಗಲನ ಪೀಡೆಯನ್ನು ಪರಿಹರಿಸಿದ ಹಾಗೂ ಅಪೂರ್ವ ವಿದ್ಯೆಗಳನ್ನು ಸಾಧಿಸಿದ ಕುಮಾರನನ್ನು ದೊರೆಗಳು ಶ್ಲಾಘಿಸಿದರು. ಇಂತು ದೊರೆಗಳಿಂದ ಓಲೈಸಲ್ಪಟ್ಟು ಹರುಷದಿಂನಿರುವ ಸಂದರ್ಭ ಜ್ಞಾನೇಂದು ಮಾವನೊಡನೆ ವಿಜಯಾರ್ಧ ಗಿರಿಯ ಚೈತ್ಯಾಲಯದೊಳಗೆ ಜಿನರಾಜನಿಗೆ ಅಭಿಷೇಕ ಮಾಡಬೇಕೆನ್ನುವ ಬಯಕೆಯನ್ನು ವ್ಯಕ್ತಪಡಿಸಲು ಹರಿಬಲನು ಸಕಲ ಖೇಚರರನ್ನು ಕೂಡಿಕೊಂಡು ಜಾಮಾತನೊಡನೆ ಹೊರ ಟನು. ವಿಜಯಾರ್ಧಗಿರಿಯನ್ನೇರಿ ಜಿನವಸತಿಯ ಪ್ರಾಕಾರವನ್ನು ಮೂಡಣ ನವರತ್ನ ದ್ವಾರದಿಂದೊಳ ಹೊಕ್ಕು ಬಲವಂದು ಕರಚರಣಗಳನ್ನು ತೊಳೆದು ಜಿನಾಲಯವನ್ನು ಪ್ರವೇ ಶಿಸಿದ ನಂತರ ಸರ್ವರು ಉಚಿತ ಸ್ಥಾನದಲ್ಲಿ ಕುಳಿತುಕೊಂಡರು. ಅಭಿಷೇಕದ ಸಕಲ ಸಮಾರಂಭಗಳು ಅಣಿಗೊಂಡಿದ್ದುವು. ಜ್ಞಾನಚಂದ್ರನು ಮಡಿಯುಟ್ಟು ಈರಿಯಾಪಥಶುದ್ಧಿ ಸಂಧ್ಯಾವಂದನೆಗಳನ್ನು ಮುಗಿಸಿ ಯಜ್ಞದೀಕ್ಷೆಯನ್ನು ಕೈಗೊಂಡು ಗಂಧಲೇಪನವನ್ನೆಸಗಿ ಮುನಿ ಮುಖ್ಯರ ಪಾದಗಳಿಗೆರಗಿ ವ್ರತಗಳನ್ನು ಸ್ವೀಕರಿಸಿ ಸಾಸಿರದೆಂಟು ಕಲಶಗಳಿಂದ ಜಿನಾಭಿಷೇಕವನ್ನು ವಿಧಿವತ್ತಾಗಿ ನೆರವೇರಿಸಿದನು. ಅಷ್ಟವಿಧಾರ್ಚನಾಪೂರ್ವಕ ದೀಪಾರಾ ಧನೆಯನ್ನೆಸಗಿ ಕುಸುಮಾಂಜಲಿಗೈದು ಪ್ರಸನ್ನ ಮನಸ್ಕನಾಗಿ ಜಯ ಮಂತ್ರದಿಂದ ಜಿನೇಂದ್ರ ನನ್ನು ನುತಿಸಿದನು. ಸಕಲರಿಗು ಜಿನಗಂಧೋದಕವನ್ನಿತ್ತು ರತ್ನನಿರ್ಮಿತ ಚಿತ್ರಮಂಟಪದಲ್ಲಿ ಉನ್ನತಾಸನವನ್ನೇರಿ ಸಂಭ್ರಮದಿಂದ ಮೆರೆಯುತ್ತಿದ್ದನು.



## 7. ಅರಗಿಳಿಯ ನುಡಿ.

ವಿಜಯಾರ್ಧಗಿರಿಯ ಜಿನವಸತಿಯ ಚಿತ್ರಮಂಟಪದಲ್ಲಿ ಸಂಗೀತ ವಿನೋದಗಳಲ್ಲಿ ಮಗ್ನನಾಗಿ ಗಾಡಿವೆತ್ತು ಜ್ಞಾನಚಂದ್ರನಿರಲು ಪಂಚವರ್ಣದ ಗಿಳಿಯೊಂದು ಹಾರಿ ಬಂದು ಆತನ ಮುಂಗೈ ಮೇಲೆ ಕುಳಿತುಕೊಂಡಿತು. ಕೊಕ್ಕನ್ನೊರಸಿ ಗರಿಯನ್ನು ಕೆದರಿ ದರ್ಪದಿಂದ ಕುಳಿತಿದ್ದ ರಾಜಕೀರವನ್ನು ಕಂಡು ಮನದಕ್ಕರಿಂದ ತಡವಿ “ಎಲೆ ಮುದ್ದು ನುಡಿಯುಳ್ಳ

ಅಮೃತವಾಚಾಂಕನೆ ! ಎತ್ತಣಿಂದ ಬರೋಣಾಯಿತು ? ಇನ್ನಾವ ದೇಶಕ್ಕೆ ಹೋಗಲಿರುವೆ ? ನೀ ಕಂಡ ಕೌತುಕಗಳೇನು ? ಹೇಳು" ಎನಲು ರಾಜಕೀರವು 'ಎಲೆ ಬಾವಾಜೀ'ಯೆಂದು ಸಲುಗೆಯಿಂದ ಮಾತೆತ್ತಿ ಇಂತೆಂದಿತು–

"ವಿಜಯಾರ್ಧಗಿರಿಯ ಎರಡನೆ ತಟದಲ್ಲಿ ಮೇಘಪುರವೆಂಬ ಪಟ್ಟಣವಿದೆ. ವಿದ್ಯಾಧರ ರಾಜ ಶಕ್ರಧನು ಎಂಬವನು ಅದನ್ನು ಆಳುತ್ತಿರುವನು. ಅವನ ಪಟ್ಟದರಸಿ ನಾಗಲತೆ. ಅವರಿಗೆ ನಂದಸುಮತಿ, ಹೇಮಸುಮತಿ, ಚಿತ್ರಲತೆ, ಪದ್ಮಲತೆ, ಚಂದ್ರಸುಮತಿ, ಶ್ರೀಚಂದ್ರೆ, ಕನಕಲತೆ, ಮದನಮಂಜೂಷೆಯರೆಂಬ ಎಣ್ಬರು ಕನ್ನಿಕೆಯರಿರುವರು. ನಂದೀಶ್ವರದ ಅಷ್ಟಮಿಯಲ್ಲೊಂದು ದಿನ ಈ ಕನ್ನಿಕೆಯರು ಉಪವಾಸ ಮಾಡಿ ಪಾರಣೆಯಂದಿನ ದಿನ ಜಿನಾಲಯಕ್ಕೆ ತೆರಳಿ ಪೂಜೆಯನ್ನು ಮುಗಿಸಿ ಮರಳಿ ಬಂದು ತಂದೆಯ ಬಳಿಗೆಯ್ದಿ ಗಂಧೋದಕವನ್ನಿತ್ತು ತೆರಳಲು ಪ್ರಾಯಭರಿತೆಯರಾದ ಕನ್ನಿಕೆಯರಿಗೆ ರೂಪಗುಣಗಳಿಂದೊಪ್ಪುವ ಕುವರನು ಎಲ್ಲಿ ಸಿಗುವನೆಂದು ಚಿಂತಿಸುತ್ತಾ ಅರಸನು ಶತಮನ್ಯುವೆಂಬ ಶಕುನಿಗನನ್ನು ಕರೆಸಿ ಬೆಸಗೊಂಡನು. ಗುರುಪರಂಪರೆವಿಡಿದು ದಮವರ ಮುನಿಗಳಿಂದ ಅಷ್ಟಾಂಗನಿಮಿತ್ತವನ್ನು ಬಲ್ಲವನಾದ ಆತನು 'ಎಲೆ ರಾಜನೇ ! ಸಂಗೀತಪುರದ ಸುಪವಿದಂತನ ಮಗ ವಜ್ರಕಂಠನನ್ನು ರಣರಂಗದಲ್ಲಿ ಗೆಲ್ಲತಕ್ಕವನೆ ನಿನ್ನ ಪುತ್ರಿಯರಿಗೆ ವರನಾಗುವನೆ'ನಲು ಅರಸನು ಸಂತೋಷ ಭರಿತನಾಗಿ ತನ್ನ ಪುತ್ರಿಯರಿಗೆ ಇದನ್ನು ತಿಳಿಸಿದನು. ಅತಿ ಮುದಿತೆಯರಾದ ಅರಗುವರಿಯರು ನನ್ನನ್ನು ಅಂಗೈಯಲೆತ್ತಿಕೊಂಡು ಬೆನ್ನನ್ನು ತಡವಿ ಮುತ್ತಿಕ್ಕಿ ವಜ್ರಕಂಠನನ್ನು ಕೊಂದಿಕ್ಕುವ ಮಹಾತೇಜಸ್ವಿಯನ್ನು ಗೊತ್ತುಹಚ್ಚಿ ಕರೆತರುವ ಕಾರ್ಯವನ್ನೆನಗೆ ಒಪ್ಪಿಸಿದರು. ನಾನು ಇಲ್ಲಿ ನೆಲೆಸಿದ್ದು ನೀನು ವಜ್ರಕಂಠನನ್ನು ಕೊಂದಿಕ್ಕಿದುದನ್ನೂ ಜಿನಪೂಜೆಯೆಸಗಿದುದನ್ನೂ ಕಂಡು ಪಾವನನಾದೆನು. ನಿನ್ನ ಕೃತ್ಯವು ನಮ್ಮಕ್ಕಾಜಿಯರನ್ನೂ ಭ್ರಾಂತಿಗೊಳಿಸುವುದಾಗಿದೆ. ನಿನ್ನ ಪುಣ್ಯದ ಒದವನ್ನೇನೆನ್ನಲಿ ! ಬೆಡಗು ಬಿನ್ನಾಣಗಳಿಂದೊಪ್ಪುವ ಆ ಯುವತೀರತ್ನಗಳಿಗೆ ಭುವನದಲ್ಲಿ ಪಾಸಾಟಿಯಿಲ್ಲ. ಅಂಥಾ ಚೆನ್ನೆಯರನ್ನೊಲಿಸಿದ ನಿಮ್ಮಿಬ್ಬರ ಕೂಟ ಚಿನ್ನದಿ ರನ್ನವಿಟ್ಟಂತಾಯಿತು."

ಕೀರರಾಜನ ನುಡಿಗೆ ಜ್ಞಾನಚಂದ್ರನು ತಲೆದೂಗಿದನು. 'ನೀನು ಕಡು ಜಾಣನಹುದಯ್ಯಾ' ಎಂದು ಅದರ ಮುಂಡೆಯನ್ನು ತಡವಿ ಮುತ್ತನ್ನಿಟ್ಟು ಹೊನ್ನಗೆಜ್ಜೆಯಿಂದಲಂಕರಿಸಿ 'ಮುತ್ತಿನ ಕಂಠಮಾಲೆಯನೆಂಟ ನಿನ್ನಕ್ಕಂದಿರಿಗೆ ಕೊಟ್ಟು, ಇಲ್ಲಿ ಕುಳಿತಿರ್ದಪನೆಂದು ಹೇಳೆ'ಂದು ಕಳುಹಿಕೊಟ್ಟನು.

ರಾಜಕೀರವು ಕಾಲಗೆಜ್ಜೆಯ ಸವಿದನಿಯೊಡನೆ ಮೇಘಪುರಕ್ಕೆ ಹಾರಿ ಬಂದು ತರುಣಿಯರ ಕಾಲ್ಗೆರಗಿ ಜ್ಞಾನಚಂದ್ರನಿತ್ತ ಹಾರವನ್ನೆತ್ತಿ 'ಬಾವಾಜಿ ಕಾರುಣ್ಯದಿಂದಿತ್ತ ಮುತ್ತಿನ ಹಾರವಿದು. ಇದಕೆ ಹತ್ತುಮಡಿಯ ಮುತ್ತುಗಳನ್ನು ಬಾವನ ಮುಖಕ್ಕೂ ನುಣ್ಗೊರಲಿಗೂ ಕೊಡಬಹುದೆ'ಂದು ಸರಸವಾಡಿ ಏಕಕಾಲದಲ್ಲಿ ಅವರ ಕೊರಳಿಗಿಕ್ಕಿತು. ಕನ್ನಿಕೆಯರು ಕುತೂಹಲ ಕೆದರಿ ಭಾವೀಪತಿಯ ರೂಪ-ಗುಣ-ಶೀಲಗಳ ಕುರಿತು ಪ್ರಶ್ನಿಸಲು ಅಮೃತವಾಚಾಂಕನು ರಸಮಧುರ ಮಾತುಗಳಲ್ಲಿ ಜಾನಚಂದ್ರನ ಬಣ್ಣನೆಗೆ ತೊಡಗಿತು. 'ಅಂಥಾ

ಚೆಲುವರ ದೇವನನ್ನು ಪಡೆಯಲು ಎಂತಪ್ಪ ದಿವ್ಯ ನೋಂಪಿಗಳನ್ನು ನೋಂತಿರೋ!' ಎಂದು ಅವರ ಧನ್ಯತೆಯನ್ನು ಸಾರಿತು. ಅರಗಿಳಿಯ ಮಾತುಗಳನ್ನು ಕೇಳಿ ರಮಣಿಯರು ಸೋಜಿಗ ವಟ್ಟರು. ಅದಕ್ಕೆ ಎಲ್ಲಿಲ್ಲದ ಸಂಭಾವನೆ ದೊರಕಿತು. ಕುವರಿಯರು ಜ್ಞಾನಚಂದ್ರನಲ್ಲಿ ಭಾವಾನುಬಂಧವನ್ನು ತಳೆದು ಬೆದೆಬೆದೆ ಬೇವುತ್ತಿದ್ದರು. ಅವರ ಪ್ರಾರ್ಥನೆಯಂತೆ ರಾಜ ಶುಕವು ಹರಿಧನು (ಶಕ್ರಧನು)ವಿನೆಡೆಗೆ ಹೋಗಿ ವಿಜಯಾರ್ಧಗಿರಿಯಲ್ಲಿ ನಡೆದ ಸುದ್ದಿಯ ನ್ನರುಹಲು ವಿದ್ಯಾಧರನು ಸ್ವಪುತ್ರಿಯರನ್ನು ಕೂಡಿಕೊಂಡು ಹರಿಧನುವಿನೊಡನೆ ಪುಷ್ಪಕ ವನ್ನೇರಿ ಜ್ಞಾನೇಂದುವಿದ್ದೆಡೆಗೆ ಬಂದು ಪರಸ್ಪರ ಆಲಿಂಗನಗೈದು ಲೀಲೆಯೊಳೆಸೆದರು.

## 8. ಜ್ಞಾನಚಂದ್ರನ ಪ್ರಥಮವಿವಾಹ.

ಖೇಚರರೊಡಗೊಂಡು ಸುಖಸಂಕಥಾಗೋಷ್ಠಿಯಲ್ಲಿದ್ದ ಜ್ಞಾನಚಂದ್ರನನ್ನು ಶಕ್ರ ಧನು 'ತನ್ನ ಪುತ್ರಿಯರನ್ನು ವಿವಾಹ ಮಾಡಿಕೊಳ್ಳಬೇಕೆ'ಂದು ಪ್ರಾರ್ಥಿಸಲು ಜ್ಞಾನಚಂದ್ರನು ತನ್ನ ಮೊದಲ ಮಾವನಾದ ಸಿಂಹಬಲನ ಮುಖವನ್ನು ನೋಡಲಾಗಿ ಆತನು ಕುವರನ ಇಂಗಿತವನ್ನರಿತು ಸಂತುಷ್ಟನಾಗಿ ತನ್ನೂರಿಗೆ ಸಕಲರನ್ನೊಡಗೂಡಿ ತೆರಳಿ ಕುಶಲಶಿಲ್ಪಿಗಳಿಂದ ನವರತ್ನಮಯಮಂಟಪವನ್ನು ನಿರ್ಮಾಪಿಸಿ ಜೋಯಿಸರನ್ನು ಕರೆಯಿಸಿ, ಶುಭ ಮುಹೂರ್ತವನ್ನು ನಿಶ್ಚಯಿಸಿದನು. ಸುಮಂಗಲೆಯರು ನೆರೆದು ಹದಿನಾರುಮಂದಿ ಖೇಚರ ವಿದ್ಯಾಧರ ಕುವರಿಯರಿಗೂ, ಜ್ಞಾನಚಂದ್ರನಿಗೂ ಮಂಗಲಸ್ನಾನವನ್ನು ಮಾಡಿಸಿ, ವಸ್ತ್ರ ಭೂಷಣಗಳಿಂದ ಸಿಂಗರಿಸಿದರು. ಮುತ್ತಿನ ಪಲ್ಲಕ್ಕಿಯನ್ನೇರಿ ಹದಿನಾರುಮಂದಿ ಕುವರಿ ಯರೂ ಧಾರಾಗೃಹಕೆ ಬಂದರು. ಅವರು ಮುತ್ತಿನ ಮೆಟ್ಟಕ್ಕಿಯನ್ನೇರಿ ನಿಂತಿರಲು ಜವನಿ ಕೆಯು ಇಳಿಯಬಿಟ್ಟುದು. ಅತ್ತ ಜ್ಞಾನಚಂದ್ರನು ತ್ರಿಜಗದ್ಭೂಷಣವೆಂಬ ಪಟ್ಟದಾನೆಯನ್ನೇರಿ ಬಿರುದು ಬಾಣಗಳ ವೈಭವಯುಕ್ತ ಮೆರವಣಿಗೆಯಿಂದ ಬರಲು ಹೆಣ್ಣಕಡೆಯವರು ಐರಣೆ ಗಳನ್ನು ಕೊಂಡು ದಿಬ್ಬಣಿಗರನ್ನು ಸ್ವಾಗತಿಸಿ, ಸುಮ್ಮಾನದಿಂದ ಗಜದಿಂದಿಳಿದು ಬಂದ ಕುಮಾರನನ್ನು ಕರತಂದು ತೆರೆಯ ಮರೆಯಲ್ಲಿದ್ದ ವಧುಗಳ ಮುಂದೆ ನಿಲ್ಲಿಸಲಾಗಿ ಲಗ್ನವು ಸನ್ನಿಹಿತವಾಯಿತು, ತೆರೆ ಸರಿಯಿತು. ಒಡನೆ ಸುಂದರಿಯರು ವರನ ಕೊರಳಿಗೆ ಮಾಲೆ ಯನ್ನು ಹಾಕಿದರು. ಹರಿಬಲ ಹರಿಧನುಗಳೀರ್ವರೂ ತಮ್ಮ ಪುತ್ರಿಯರ ಹಸ್ತಗಳನ್ನು ಜ್ಞಾನಚಂದ್ರನ ಪಾಣಿಪದ್ಮದ ಮೇಲಿಟ್ಟು ಧಾರೆಯೆರೆದರು. ಹವನಕುಂಡವನ್ನು ಬಲಗೊಂಡ ನಂತರ ಆರತಿ ಅಕ್ಷತೆಯ ಕ್ರಮವು ಯಥಾವತ್ತಾಗಿ ನಡೆಯಿತು. ನಾಲ್ಕನೆ ದಿನ ನಾಗವಲ್ಲಿ ಯಲ್ಲಿ ವಿವಾಹ ಮಹೋತ್ಸವವು ಕೊನೆಗೊಂಡು ಷೋಡಶ ನಾರೀರತ್ನಗಳೊಡನೆ ಜ್ಞಾನ ಚಂದ್ರನು ಸುಖಾರ್ಣವದಲ್ಲಿ ಓಲಾಡುತ್ತಿದ್ದನು.

## 9. ವಿದ್ಯಾಧರರನ್ನು ಗೆಲಿದುದು.

ವಜ್ರಕಂಠ (ಕುಲಿಶಗಲ)ನ ಮರಣಾನಂತರ ಅವನ ರಾಜ್ಯವು ಅನಾಯಕವಾದುದು. ಸಿಂಹಬಲನು ಅಳಿಯನಿದ್ದೆಡೆಗೆ ಬಂದು 'ವಜ್ರಕಂಠನಿಗೆ ಮಕ್ಕಳಿಲ್ಲದ ಕಾರಣ ಉತ್ತರಾಧಿಕಾರಿಗಳಾರೂ ಇಲ್ಲದೆ ದೇಶದ ಪರಿಸ್ಥಿತಿ ಕೆಟ್ಟಿದೆ. ನೀನೇ ಒಡೆಯನಾಗಿ ರಕ್ಷಿಸಬೇಕೆ'ನಲು ಜ್ಞಾನೇಂದು ವಜ್ರಕಂಠನ ದಾಯವಾದಿಗಳಲ್ಲೂ ಯಾರೂ ಉಳಿದಿಲ್ಲವೆಂದು ಖಚಿತ ಮಾಡಿಕೊಂಡು ಸಂಗೀತಪುರಾಭಿಮುಖವಾಗಿ ಹೊರಟು ಆ ರಾಜ್ಯದ ಸಂಪತ್ತನ್ನು ಪರಿಶೀಲಿಸುತ್ತಾ ಬರುತ್ತಿದ್ದನು. ವಜ್ರಕಂಠನ ಮಂತ್ರಿ ಮೇಘರಥನು 'ತನ್ನ ಒಡೆಯನಿಗೆಂದಿದ್ದ ಕುವರಿಯರನ್ನು ಈತನು ವರಿಸಿದನೆ'ಂದು ಅಸಹನೆಯಿಂದ ಜ್ಞಾನಚಂದ್ರನನ್ನಿದಿರಿಸಲು ಬಲಿತ ಕಾಳಗದಲ್ಲಿ ಸೋಲಿನ ಮುಖವನ್ನು ಕಂಡು 'ಕಾರಣಪುರುಷನಿವನೊಡನೆ ಯುದ್ಧವು ಸಲ್ಲದೆ'ಂದು ಸಂಧಾನಕ್ಕೆಳಸಿದನು. ಸಂಧಾನವಾಹಕನು ಬಂದು ಜ್ಞಾನಚಂದ್ರನ ವೃತ್ತಾಂತವನ್ನು ಕೇಳಿ ತಿಳಿದು 'ನಮ್ಮಾ ಘನಶೈಲವನ್ನೇರಿದ ಈತನು ಅಸಾಮಾನ್ಯನೇ ಸರಿಯೆ'ಂದು ಮನಗಂಡು 'ಚೆಲುವ! ನಿನ್ನಸೇವೆ ಮಾಡುವ ಬಲುಭಾಗ್ಯ ನಮಗೆ ದೊರಕಲಿ'ಯೆಂದು ಪ್ರಾರ್ಥಿಸಿ ತಮ್ಮ ಪಟ್ಟಣಕ್ಕೆ ಕರೆದೊಯ್ದನು. ಕುಲಿಶಗಲನ ಅರಮನೆಯನ್ನು ಹೊಕ್ಕು ಚಿತ್ರದ ಚಾವಡಿಯಲ್ಲಿ ಸಿಂಹಾಸನವೇರಿ ಕುಳಿತ ಜ್ಞಾನಚಂದ್ರನಿಗೆ ಖೇಚರರಾಜರೆಲ್ಲ ನೆರೆದು ತೀರ್ಥಜಲಗಳಿಂದ ಪಟ್ಟಾಭಿಷೇಕಕ್ರಿಯೆಯನ್ನೆಸಗಿದರು. ಕಪ್ಪಕಾಣಿಕೆಗಳನ್ನಿತ್ತು ಒಡೆತನವನ್ನೊಪ್ಪಿಕೊಂಡರು. ಪ್ರೇಮದ ಪುತ್ರಿಯರನ್ನಿತ್ತು ಬಾಂಧವ್ಯವನ್ನು ಬಳೆಸಿಕೊಂಡರು. 'ಸನ್ನಿಧಿಯಿಂದ ಪತ್ರ ಬಂದರೆ ನಿಮ್ಮಡಿಯ ಸೇವೆಗೆ ಸಿದ್ಧರಾಗಿದ್ದೇವೆ'ಂದು ಕೈಂಕರ್ಯವನ್ನೊಪ್ಪಿ ನುಡಿದರು. ಈ ವಿದ್ಯಾಧರರನ್ನು ದಾನಸನ್ಮಾನಗಳಿಂದ ಸತ್ಕರಿಸಿ ಪ್ರಿಯವಚನವನ್ನು ನುಡಿದು ಬೀಳ್ಕೊಟ್ಟನು.

ಹರಿಬಲ ಹರಿಧನು (ಸಿಂಹಬಲ ಶಕ್ರಧನು) ನಿಜಪುರಿಗೆ ಹೊರಡಲು ಸಿದ್ಧರಾಗಿ ತಮ್ಮ ಪುತ್ರಿಯರ ಮೈದಡವಿ ಗರತಿಯರ ಸಾರಧರ್ಮವನ್ನೊರೆದು, 'ಅರಿವಿಲ್ಲದ ಬಾಲಕಿಯರನ್ನು ಚದುರಿಂದ ನಡೆಸಿಕೊಂಡು ನಿನ್ನ ಉತ್ತಮಗುಣವನ್ನು ಮೆರೆವುದೆ'ಂದು ಸೆರಗೊಡ್ಡಿ ಬೇಡಲು ಜ್ಞಾನಚಂದ್ರನು ಸಿಂಹಾಸನದಿಂದಿಳಿದು ಮಾವಾಜಿಯರ ಕರಗಳನ್ನು ಹಿಡಿದೆತ್ತಿ ತುಂಬಿದ ಪ್ರೀತಿಭಾವದಿಂದ ಹೆಮ್ಮಕ್ಕಳ ಅದೊಂದು ಘನಸ್ಥಿಕೆಯನ್ನೊರೆದು ನಿಮ್ಮ ಮನಸ್ಸಿಗೆ ಸಂತಸವಾಗುವಂತೆ ಮಡದಿಯರನ್ನು ನಡೆಸಿಕೊಳ್ಳುವೆನೆಂದು ಆಶ್ವಾಸನೆಯಿತ್ತು ಅವರನ್ನು ಬೀಳ್ಕೊಟ್ಟನು. ನಂತರ ಅರಮನೆಯನ್ನು ಒಳಹೊಕ್ಕು ಬಂಧುವಿಯೋಗದಿಂದ ಪರಿತಪಿಸುತ್ತಿರುವ ತರುಣಿಯರನ್ನು ಸಂತವಿಸಿ ಅನುದಿನ ಜಿನಕಥಾಗೋಷ್ಠಿಯಲ್ಲಿ ಸುಖದಿಂದಿದ್ದನು.

## 10. ವನವರ್ಣನೆ.

ಮೇಲಿಂದ ಮೇಲೆ ಭೋಗಭಾಗ್ಯಗಳು ಒದಗಿಬರುತ್ತಿದ್ದರೂ ಜ್ಞಾನಚಂದ್ರನು ಅವುಗಳಿಗೆ ಮರುಳಾಗುತ್ತಿರಲಿಲ್ಲ. ಧರ್ಮದ ಕಡೆ ಎಚ್ಚರ ತಾಳಿದವನಾಗಿದ್ದನು. ಅಂತೆಯೇ

ಈ ಸುಖಸಾಮ್ರಾಜ್ಯದಲ್ಲಿ ಓಲಾಡುತ್ತಿದ್ದರೂ ಮುಂದರಗಿರಿಗೆ ಆಕಾಶಮಾರ್ಗದಲ್ಲಿ ಹೋಗುತ್ತಿರುವ ದೇವಸಮೂಹವನ್ನು ಕಂಡು ಸುರಶೈಲದ ಮೇಲಿರುವ ಹದಿನಾರು ಜಿನಚೈತ್ಯಾಲಯಗಳನ್ನು ದರ್ಶನಮಾಡಬೇಕೆನ್ನುವ ಬಯಕೆ ತಲೆದೋರಿದುದು. ತಡೆಯಲುಂಟೇ ? ಪುಷ್ಪಕ ವಿಮಾನವೇರಿ ಹೊರಟನು. ಬರುತ್ತಿರುವ ದಾರಿಯಲ್ಲಿ ಭೀಕರಾರಣ್ಯವೊಂದು ಗೋಚರಿಸಿತು. ಒಡನೆ ಕೌತುಕದಿಂದ ಪುಷ್ಪಕವನ್ನಿಳಿದು ಅಡವಿಯೊಳಹೊಕ್ಕನು. ವಿವಿಧತರುಲತೆಗುಲ್ಮಗಳಿಂದ ನಿಬಿಡವಾದ ಕತ್ತಲು ಕವಿದಿರುವ ಗೊಂಡಾರಣ್ಯದಲ್ಲಿ ಮಿಗಗಳ ಗೊರಸಿನ ಘಟ್ಟನೆಗೆ ಬಂಡೆಗಳಿಂದೆದ್ದ ಕಿಡಿಗಳ ಬೆಳಕಿನಲ್ಲಿ ಮುಂದುವರಿದನು. 'ಪಲವು ಹಿಂಸ್ರ ಜಂತುಗಳ ಅತಿಭೀಕರದೃಶ್ಯವನ್ನು ಕಂಡನು. ಇನ್ನೂ ಮುಂದುವರಿಯಲು ಒಂದೆಡೆ ಕಪಿಗಳ ಚೇಷ್ಟೆ ಅರಸನನ್ನು ನಗಿಸಿದುದು. ಬೇರೊಂದೆಡೆ ರಾಜಕೀರನ ಜಾಣ್ನುಡಿ ಕುಮಾರನನ್ನು ತಲೆದೂಗಿಸಿದುದು. ಮುಂದಿರ್ದ ಬೇಡರ ಪಕ್ಕಣವನ್ನು ಅರಸನು ಪ್ರವೇಶಿಸಲು ಮಾಟದ ಬೇಡತಿಯರ ಗುಂಪೊಂದು ತನ್ನನ್ನು ಬಣ್ಣಿಸುವುದನ್ನು ಕಂಡನು. ಮಗದೊಂದೆಡೆ ಬಿದಿರಕ್ಕಿ ಕುಟ್ಟುತ್ತಿರುವ ಬೇಡತಿಯರ ಬೆಡಗು ಮನಸ್ಸನ್ನು ಸೂರೆಗೊಂಡಿತು. ಆ ಕಡೆ ಮುಂದಡಿಯಿಡುತ್ತಿರಲು ಶೂಕರಶೈಲವು ಕಾಂತಿಮಯವಾಗಿ ಗೋಚರಿಸಿತು. ಅರಸನು ಅದನ್ನೇರಿ ಅಲ್ಲಿನ ವೈಶಿಷ್ಟ್ಯಗಳನ್ನು ಪರಿಶೀಲಿಸುತ್ತಾ ಬರಲು ಮುಂದೆ 'ಪೊಡವಿಯೆಲ್ಲವ ನುಂಗಲೆಂದು ಭೂಧರವೆಂಬ ರಕ್ಕಸಿ ಬಾಯತೆರೆದಳೆಂಬಂತೆ' ಭೀಕರಗುಹೆಯೊಂದು ಕಾಣಿಸಿತು. ಅದರ ಭಯಾನಕತೆಗೆ ದಿಗಿಲೆದ್ದು ಸುತ್ತಲೂ ನೋಡುವಲ್ಲಿ ಅದೇನಚ್ಚರಿ ! ಒಂದೆಡೆ ಸುರಸುಂದರಿಯೋರ್ವಳು ಪಲ್ಯಂಕಾಸನ ಬಲಿದು, ಕೈಲಿ ಜಪಸರವನ್ನಾಂತು, ಮುಗಿದಕ್ಷಿಯಿಂದ ಜಪದಲ್ಲಿ ತೊಡಗಿದ್ದಳು. ಅವಳ ಕೆದರಿದ ತಲೆಗೂದಲು ಗಾಳಿಗೆ ತೊನೆದಾಡಿ ಸನಿಯದ ಬಿದಿರ ಕೊನೆಮುಳ್ಳುಗಳಿಗೆ ಸುತ್ತಿಕೊಳ್ಳಲಾಗಿ ಬಾಧೆಗೊಳಗಾದುದನ್ನು ಕಂಡು ಆಕೆಯಲ್ಲಿ ಮರುಕಗೊಂಡು ಕುಮಾರನು ಅತ್ಯಂತ ಬಿನ್ನಾಣದಿಂದ ನೋಯದಂತೆ ಸಿಕ್ಕನ್ನು ಬಿಡಿಸಿ ಕಳೆದನು. ತಕ್ಷಣ ಆಕೆಯ ತಪಸ್ಸೂ ಫಲಿಸಿದುದು. ಆಸನಕಂಪಗೊಂಡ ವಿದ್ಯಾದೇವತೆಗಳು ಪ್ರತ್ಯಕ್ಷರಾಗಿ ಆಕೆಯ ದಾಸ್ಯವನ್ನು ಕೈಗೊಂಡರು. ಕುವರನ ಕಡೆಗಣ್ಣನೋಟದಲ್ಲಿ ತನ್ನ ದೃಷ್ಟಿ ಬೆರೆಯಲು ಸಾತ್ವಿಕಭಾವವು ಮೊಳೆತ ತರುಣಿ ಲಜ್ಜೆಯಿಂದ ತಲೆವಾಗಿದಳು.

ದೇವದರ್ಶನಾಪೇಕ್ಷಿಯಾದ ಜ್ಞಾನಚಂದ್ರನು ತನ್ನ ಉದ್ದೇಶವನ್ನು ಮರೆಯದೆ ಅಲ್ಲಿಂದ ಹೊರಟು ಸ್ವರ್ಣಕಲಶಧ್ವಜಗಳಿಂದೊಪ್ಪುವ ಜಿನಗೃಹವನ್ನು ಕಂಡು ಸನಿಯದ ಕೊಳದಲ್ಲಿ ಮಿಂದು, ಸಹಸ್ರದಲಕಮಲವನ್ನು ಕೊಯ್ದೆತ್ತಿಕೊಂಡು ಮಂದಿರವನ್ನು ಪ್ರವೇಶಿಸಿ ಜಿನರಾಜನ ಪಾದಕೆರಗಿ ಅರ್ಚನೆಗೆಯ್ದು ದರ್ಶನಸ್ತುತಿಗೆಯ್ದನು. ಮಂಟಪದ ಮುಂದಣ ಚಂದ್ರಶಾಲೆಯ ಗೋಡೆಯಲ್ಲಿ 'ತರುಣಿಯ ಕುರುಳನ್ನು ವೇಣಿಂದ ಬಿಡಿಸಿ ಜಿನಚರಣವ ಕಂಡ ಜ್ಞಾನೇಂದು'ವೆಂದು ಅಂಕಮಾಲೆಯನ್ನು ಕೆತ್ತಿ ಬರೆದನು.



## 11. ಕನಕಲತೆಯು ವಿವಾಹ.

ಜ್ಞಾನಚಂದ್ರನಿಂದ ಉಪಕೃತಳಾದ ತರುಣಿಯಾದರೊ ಪ್ರತ್ಯಕ್ಷರಾದ ವಿದ್ಯಾದೇವತೆಗಳನ್ನು ಬೀಳ್ಕೊಟ್ಟು ಕುಮಾರನನ್ನು ಹಿಂಬಾಲಿಸಿ ಬಂದು ಮಂದಿರವನ್ನು ಒಳಹೊಕ್ಕು ದರ್ಶನಸ್ತುತಿಗೆಯ್ದು ಚಂದ್ರಶಾಲೆಯಲ್ಲಿ ಕುಳಿತಿದ್ದ ಜ್ಞಾನೇಂದುವಿನ ಬಳಿಗೆಯ್ದಿ ವಿನಯವಚನಗಳನ್ನಾಡಿ ತಲೆಬಾಗಿ ನಿಂತಳು. ಜ್ಞಾನಚಂದ್ರನು ಅವಳ ಪೂರ್ವೋತ್ತರವನ್ನು ವಿಚಾರಿಸಲಾಗಿ ಆಕೆ ಇಂತೆಂದಳು:—

'ವಿಜಯಾರ್ಧಗಿರಿಯಲ್ಲಿ ರಥನೂಪುರವೆಂಬುದೊಂದು ಪಟ್ಟಣ. ಅದನ್ನಾಳುವ ದೊರೆ ಕುಸುಮಚೂಲ. ಅವನ ಮಡದಿ ನಂದವತಿ. ಆ ಖೇಚರ ದಂಪತಿಗಳಿಗೆ ಗರುಡವೇಗನೆಂಬ ಕುವರನೂ, ಕನಕಲತೆಯಾದ ನಾನೂ ಮಕ್ಕಳಾಗಿ ಜನಿಸಿದೆವು. ಒಂದು ದಿನ ಮಂದರಗಿರಿಗೈದಿದ ಅಣ್ಣ ಗರುಡವೇಗನು ಚಾರಣಯುಗಲವನ್ನು ಕಂಡು ಅವರಿಗೆ ನಮಿಸಿ ಧರ್ಮಾದರವನ್ನು ಕೇಳಿ ಶ್ರಾವಕವ್ರತವನ್ನು ಕೈಗೊಂಡು, ಅವರೊಡನೆ ತಂಗಿಯಾದ ನನಗೆ ವರನಾವನಾಗುವನೆಂದು ಬೆಸಗೊಳಲು ಅವರು 'ಶೂಕರಾದ್ರಿಯ ಗವಿಯ ಬಾಗಿಲಲ್ಲಿ ಕುಳಿತು ಜಪಿಸುತ್ತಿರುವ ನಿನ್ನ ತಂಗಿಯು ತಲೆಗೂದಲು ಅಲ್ಲಿರುವ ಬಿದಿರ ಮೆಳೆಗೆ ಸಿಕ್ಕಿಬಿದ್ದು ಬಂಗಬಡುತ್ತಿರಲು, ಯಾವಾತನು ಬಂದು ಜಾಣ್ಮೆಯಿಂದ ಬಿಡಿಸಿ ಕಳೆವನೋ ಅವನೇ ಪತಿಯಾಗುವನೆ'ನಲು ಈ ವಾರ್ತೆಯನ್ನು ನನಗರುಹಿ ಮಂತ್ರೋಪದೇಶವನ್ನು ಮಾಡಿ ಈ ಎಡೆಗೆ ನನ್ನನ್ನು ಕಳುಹಿಸಿಕೊಟ್ಟನು. ಅಂದಿನಿಂದ ಈ ವರೆಗೆ ಆರುನೂರ ಏಳು ದಿನ ತಪೋನಿರತಳಾಗಿ ಇಲ್ಲಿದ್ದರೂ ದೇವತೆಗಳು ಒಲಿದುದಿಲ್ಲ. ಪುಣ್ಯವಂತ ! ನೀನು ಬರಲು ಸಾವಿರ ದೇವತೆಗಳೂ ಕೈಸಾರಿದರು.'

ಕನಕಲತೆ ಈ ವೃತ್ತಾಂತವನ್ನು ಹೇಳಿ ಮುಗಿಸುತ್ತಿರುವಲ್ಲಿ ಅಲ್ಲಿಗೈದಿದ ಗರುಡವೇಗನು ಅವರನ್ನು ಕಂಡು ಚಾರಣರು ನುಡಿದ ನುಡಿ ದಿಟವಾಯಿತೆಂದು ಅರಿತು ಜ್ಞಾನಚಂದ್ರನನ್ನಾಲಿಂಗಿಸಿ ಅಭಿನಂದಿಸಿ ತಂದೆ ಕುಸುಮಚೂಲನಲ್ಲಿಗೆ ದೂತರನ್ನಟ್ಟಿದನು. ಪಟ್ಟಣದಲ್ಲಿ ಜ್ಞಾನಚಂದ್ರನ ಸ್ವಾಗತಕ್ಕೆಂದು ಸಕಲ ಸಿದ್ಧತೆಗಳೂ ನಡೆದುವು. ಗರುಡವೇಗನು ಜ್ಞಾನಚಂದ್ರ ಕನಕಲತೆಯರನ್ನೊಡಗೊಂಡು ವಿಮಾನವೇರಿ ಪುರಪ್ರವೇಶ ಮಾಡಲಾಗಿ ಕುಸುಮಚೂಲನು ಪುರಜನರೊಡನೆ ಇವರನ್ನು ಇದಿರ್ಗೊಂಡು ಅರಮನೆಗೆ ಕರೆದೊಯ್ದು ಉಪಚರಿಸಿದನು. ನಂತರ ಜೋಯಿಸರನ್ನು ಬರಮಾಡಿಸಿ ವಿವಾಹಮುಹೂರ್ತವನ್ನು ನಿಶ್ಚಯಿಸಿ ಮಂಟಪವನ್ನು ಶೃಂಗರಿಸಿ ನಿಶ್ಚಿತ ಶುಭದಿನದಲ್ಲಿವಿವಾಹಕಾರ್ಯವನ್ನೆಸಗಿದನು.

## 12. ಹರಿಪುರದ ಮುತ್ತಿಗೆ.

ಜ್ಞಾನಚಂದ್ರನಿಗೆ ಬಹುಕಾಲದಿಂದ ಅಗಲಿದ್ದ ತಂದೆ-ತಾಯ್ಗಳನ್ನು ಕಾಣಬೇಕೆಂಬ ಅಪೇಕ್ಷೆಯುಂಟಾಯಿತು. ಕನಕಪುರಕ್ಕೆ ತೆರಳುವ ಮುನ್ನ ಗರುಡವೇಗನನ್ನು ಕಂಡು ಬಿಗಿದಮರ್ದಪ್ಪಿ ತನ್ನ ಪಯಣದ ವಾರ್ತೆಯನ್ನು ತಿಳಿಸಿದನು. ತಾನು ಕರೆಕಳುಹಿದೊಡನೆ ಭಗಿನಿ ಕನಕಲತೆಯೊಡಗೂಡಿ ಬರಬೇಕೆಂದು ಹೇಳಿ, ಕನಕಲತೆಯನ್ನು ಸಂತಯಿಸಿ, ಮಾವ-ಮಾವಿಯರ ಅನುಜ್ಞೆಪಡೆದು ವಿಮಾನವೇರಿ ಸಂಗೀತಪುರಕ್ಕೈದಿ, ಅನುಮತ್ಯಾದಿ ಮಡದಿಯರಿಗೂ ತನ್ನ ಗಮನವಾರ್ತೆಯನ್ನರುಹಿ ದಕ್ಷಿಣಾಭಿಮುಖನಾಗಿ ನಡೆದನು. ದಶಕೂಟಜಿನಾಲಯದ ಮೇಲಕ್ಕಾಗಿ ಬರುತ್ತಿರಲು ವಿಮಾನವು ಕೀಲಿಸಿ ನಿಂತುದನ್ನು ಕಂಡು ಏನೋ ಅತಿಶಯವಿರಬೇಕೆಂದು ಯೋಚಿಸಿ ಕೆಳಗಿಳಿದು ಕಾಣಲು, ಥಳಥಳಿಸುವ ರತ್ನಮಯಜಿನಾಲಯವಿತ್ತು. ಅದರತಿಶಯದಿಂದ ಇಂತಾಯಿತೆಂದು ಅಪೂರ್ವಜಿನ ಮಂದಿರದರ್ಶನಭಾಗ್ಯವು ದೊರೆತುದಕ್ಕಾಗಿ ಮುದಿತಮಾನಸನಾಗಿ ಬಳಿಯ ಕೊಳದಲ್ಲಿ ಮಿಂದು ಪುಷ್ಪವನ್ನು ಕೊಯ್ದೊಯ್ದು, ಭಕ್ತಿಭಾರದಿಂದ ಜಿನಾಲಯಕ್ಕೆ ಬಂದು ಇಕ್ಕಿದ್ದ ಕದವನ್ನು ಮುಟ್ಟಲಾಗಿ ವಜ್ರದ ಪಡಿಗಳು ಕೀಲಕವು ಮುರಿದು ಕಿರ್‍ರೆಂದು ತೆರೆದುವು. ಜ್ಞಾನಚಂದ್ರನು ಕೋಟಿಸೂರ್ಯಚಂದ್ರಪ್ರಕಾಶದಿಂದೊಪ್ಪುವ ನೂರೆಂಟು ಜಿನಬಿಂಬ ಗಳನ್ನು ಕಂಡು ದರ್ಶನಸ್ತುತಿಗೆಯ್ದು ವಂದಿಸಿ ಹೊರಬಂದು 'ಸುರನರೋರಗರಿಗೆ ತೆರೆಯದ ಪಡಿಗಳ ಕುರುವಂಶಾಂಬರಸೂರ್ಯ ಜ್ಞಾನೇಂದು ತೆರೆದು ಜಿನೇಶನ ಕಂಡನೆ'ಂದು ಭಿತ್ತಿಯ ಮೇಲೆ ಬರೆದು ಮುಂದಣ ಮಂಟಪದಲ್ಲಿ ಕುಳಿತುಕೊಂಡನು. ಅಷ್ಟರಲ್ಲಿ ದೇವತೆಗಳು ಹೂಮಳೆಗರೆದರು. ಕಿನ್ನರಾದಿಗಳು ಬಂದು ಆತನ ಪ್ರಭಾವವನ್ನು ಕೊಂಡಾಡಿದರು.

ಇತ್ತ ಭಗ್ನಾರಿದೇಶದಲ್ಲಿ ಹರಿಪುರವೆಂಬುದೊಂದು ಶೋಭಾಯಮಾನವಾದ ಪಟ್ಟಣ. ಅದರ ದೊರೆ ವಿಮಲವಾಹನ, ಮಡದಿ ಮೃಗಾವತಿಯೊಡಗೂಡಿ ಸುಖದಿಂದ ರಾಜ್ಯಭಾರ ಮಾಡುತ್ತಿದ್ದನು. ಅವನಿಗೆ ಕಾಮಲತೆಯೆಂಬ ಮಗಳು. ಆಕೆ ಯೌವನಕ್ಕೆ ಅಡಿಯಿಡು ತ್ತಿರಲು ಅದೊಂದು ದಿನ ವನಪಾಲಕನು ಆಸ್ಥಾನಕ್ಕೈದಿ ಪುರದ ವನದಲ್ಲಿ ಬಂದಿಳಿದ ದಮವರ ಮುನಿಗಳ ಪ್ರಭಾವವನ್ನು ನಿರವಿಸಲು ವಿಮಲವಾಹನನು ಮುನಿದರ್ಶನಾಕಾಂಕ್ಷಿಯಾಗಿ ವನಕ್ಕೆ ತೆರಳಿದನು. ಪಾದಪೂಜೆಯನ್ನೆಸಗಿ ಧರ್ಮಶ್ರವಣಾನಂತರ ಅವಧಿಸಂಪನ್ನರಾದ ಮುನಿಗಳೊಡನೆ ತನ್ನ ಮಗಳು ಕಾಮಲತೆಗೆ ವರನಾವನಾಗುವನೆಂದು ಪ್ರಾರ್ಥಿಸಲು, ದಮವರ ಮುನಿಗಳು 'ದಶಶತಕೂಟಜಿನಾಲಯದ ಅನುಪಮ ವಜ್ರಪಡಿಗಳನ್ನುತೆಗೆದು ಜಿನರ ಪೂಜಿಪಾತನು ವರನಾಗುವನೆಂ'ದುದನ್ನು ಕೇಳಿ, ಆ ವಿಮಲವಾಹನನು ಮುನಿಗಳಿಗೆರಗಿ ಬೀಳ್ಕೊಂಡು ಅರಮನೆಗೆಯ್ದಿ ನಾಗದತ್ತನನ್ನು ಕರೆದು ಈ ವಿಷಯವನ್ನು ತಿಳಿಯ ಹೇಳಿ ಆತನನ್ನು ದಶಶತಕೂಟಜಿನಾಲಯಕ್ಕೆ ಕಳುಹಿಕೊಟ್ಟಿದ್ದನು. ಅಂದಿಂದ ಈ ದಿನ, ಜ್ಞಾನ

ಚಂದ್ರನ ಆಗಮನಪರ್ಯಂತರ ಅಲ್ಲಿ ಕಾದಿದ್ದ ನಾಗದತ್ತನು ಜ್ಞಾನಚಂದ್ರನ ಇದಿರ್ವಂದು ನಮಿಸಿ ಸಂತಸದ ಈ ವಾರ್ತೆಯನ್ನು ನಿವೇದಿಸಿದನು ಮತ್ತು ಕಾಮಲತೆಯನ್ನು ಕೋರಿ ಬಂದ ರತ್ನಮಾಲಿಯ ಉಪಟಳವನ್ನು ಸವಿಸ್ತಾರವಾಗಿ ನಿರವಿಸಿದನು.

ರತ್ನಮಾಲಿ ಮಣಿಚಂದ್ರನಾಡಿನ ಚಕ್ರಪುರದ ಮಂದರನಿಗೆ ಮೇನಕೆಯಲ್ಲಿ ಹುಟ್ಟಿದನು. ಈ ರತ್ನಮಾಲಿಗೆ ಕಾಮಲತೆಯನ್ನು ಕೊಡಬೇಕೆಂದು ಮಂದರನು ವಿಮಲವಾಹನನಿಗೆ ದೂತರನ್ನಟ್ಟಿದನು. ವಿಮಲವಾಹನನು ದಮವರ ಮುನಿಗಳು ನುಡಿದ ಭವಿಷ್ಯವನ್ನು ವಿವರಿಸಿ ದೂತನನ್ನು ಹಿಂದಕ್ಕಟ್ಟಿದನು. ಮೊದಲೆ ಉದ್ದಂಡನೆನಿಸಿದ ಅನುಚರ ತನ್ನ ದೊರೆ ಮಂದರನೊಡನೆ ವಿಮಲವಾಹನನು ಕನ್ನೆಯನ್ನು ಕೊಡಲು ನಿರಾಕರಿಸಿದನೆಂದು ಸಾವಿರ ಪಟ್ಟು ಸೇರಿಸಿ ಹೇಳಿದನು. ಮಂದರನೃಪತಿ ಅಭಿಮಾನಭಂಗವಾಯಿತೆಂದು ಕ್ರೋಧದಿಂದ ಕಿಡಿಕಿಡಿಯಾದನು. ಯುದ್ಧಭೇರಿಯನ್ನು ಹೊಡೆಸಿ ದಂಡೆತ್ತಿ ಹೊರಟು, ಹರಿಪುರವನ್ನು ಮೂವಳಸಾಗಿ ಮುತ್ತಿ, ಗುಡಿಗುಡಾರಗಳನ್ನು ಹಾಕಿಸಿದನು. ಇದನ್ನರಿತ ವಿಮಲವಾಹನನ ಪಾರುಪತ್ಯಗಾರ ಜಿತಶತ್ರು ಕೋಟೆಕೊತ್ತಳಗಳಲ್ಲಿ ಸಕಲ ಯುದ್ಧಸಿದ್ಧತೆಯನ್ನೆಸಗುತ್ತಿದ್ದನು. ಅರಮನೆಯೊಳಗಿದ್ದ ವಿಮಲವಾಹನನು ಈ ಗಲಭೆಯನ್ನು ಕೇಳಿ ದಿಗಿಲನೆದ್ದು, ಖಡ್ಗಪಾಣಿಯಾಗಿ ಬರುತ್ತಿರಲು ದಳವಾಯಿ ತಡೆದು 'ಜೀಯ, ಈ ಕಾರ್ಯಕೆ ತಾವು ಮುಂದಾಗುವುದು ಯುಕ್ತವಲ್ಲ'ವೆಂದು ನಿವಾರಿಸಿದನು. ಯುದ್ಧ ಸಿದ್ಧತೆಯನ್ನೆಸಗಿ ಜಿತಶತ್ರು ಅರಸನಲ್ಲಿ 'ಕಗ್ಗೊಲೆ ಬಿದ್ದು ಶತ್ರುಗಳನ್ನು ಸಂಹರಿಸುವರೆ ತನ್ನನ್ನು ಆಜ್ಞಾಪಿಸಬೇಕೆ'ಂದು ಬಿನ್ನವಿಸಲು ಅರಸನು ಸಕಲರ ಅನುಮತಿಯಂತೆ ಆತನಿಗೆ ಧುರವೀಳೆಯವನ್ನಿತ್ತನು.

## 13. ಕಗ್ಗೊಲೆ.

ಜಿತಶತ್ರು ಚಾವಡಿಗೆಯ್ದಿ ಕಗ್ಗೊಲೆ ಬೀಳುವ ಬಲುಭಟರ ಕರೆಸಲು ಒಡನೆ ಹಲವು ಜಾತಿಯ ವಿವಿಧ ಕಸುಬಿನ ವೀರರು ಮುಂದೆ ಬಂದು, ತಮ್ಮ ತಮ್ಮ ಪರಾಕ್ರಮಗಳನ್ನು ಹೊಗಳಿಕೊಳ್ಳುತ್ತ 'ತೇಜದಾಭರಣ'ವನ್ನು ನೀಡೆಂದು ಒಬ್ಬನಿನ್ನೊಬ್ಬನನ್ನು ಹಿಂದಿಕ್ಕಿ ಮುಂದೆ ನಿಲಲು ಜಿತಶತ್ರು 'ಯುದ್ಧದಲ್ಲಿ ವೈರಿಗಳನ್ನು ತರಿದಿಕ್ಕಿ ಗುರುತು ತಂದವರನ್ನು ಉಚಿತ ಉಡುಗೊರೆಗಳಿಂದ ಸನ್ಮಾನಿಸುವೆನೆ'ಂದು ಸಾರಿ ಎಲ್ಲರಿಗೂ ವೀಳೆಯ ಗಂಧ ಉಡೆಗಳನ್ನಿತ್ತು ಬೀಳ್ಕೊಟ್ಟನು. ಈ ಭಟರು ಚೋರಗಂಡಿಗಳಿಂದ ಕೋಟೆಯ ಹೊರಬಂದು ಪಾಳೆಯದೊಳಗೆ ಮೈಮರೆತು ಒರಗಿದ್ದ ಶತ್ರುಸೈನಿಕರ ಮೇಲೆ ಕವಿದು ಬಿದ್ದರು. ಬೆಳಗಿನ ಜಾವದ ನಿದ್ದೆಯ ಜೊಂಪಿನಲ್ಲಿ ಬಂದೊದಗಿದ ಈ ಆಕಸ್ಮಿಕವಿಪತ್ತಿನಿಂದ ವೈರಿಗಳ ಪಾಳೆಯದಲ್ಲಿ ದಿಗಿಲೆದ್ದಿತು. ನಿದ್ದೆಗಣ್ಣಿನ ಶತ್ರುಸೈನಿಕರ ಕೃತ್ಯವು ಯದ್ವಾತದ್ವವೆನಿಸಿ ಹಾಸ್ಯಾಸ್ಪದವಾಯಿತು. ಈ ಕಗ್ಗೊಲೆಯಲ್ಲಿ ದಾರಿಗಾಣದೆ ಮೊರೆಯಿಡುತ್ತಿರುವ ಭಟರ ಮತ್ತು ಬೆದರಿ

ಓಡಾಡಿ ಹಾವಳಿ ಗೆಯ್ಯುತ್ತಿರುವ ಆನೆಕುದುರೆಗಳ ಕೋಲಾಹಲವನ್ನು ಮುಂದರನು ಕೇಳಿ ಎಚ್ಚತ್ತನು. ಖಡ್ಗವನ್ನು ಜಡಿದು ಕಾಳಭೈರವನಂತೆ ತನ್ನ ಗೂಡಾರದಿಂದ ಹೊರಬಂದನು. ಪಂಜುಗಳನ್ನು ಹಿಡಿಸಿಕೊಂಡು ದಳವಾಯಿ ಸಹಿತ ಕೋಟೆಯ ಹೆಬ್ಬಾಗಿಲ ಕಡೆ ಬಂದನು. ಕೋಟೆಯ ಕಾವಲಿಗಿದ್ದ ಸೈನ್ಯಾಧಿಪತಿ ಸಿಂಹರಥನು ಕೋಟೆಯ ಕದವನ್ನು ಬಿಗಿದು, ವೈರಿಗಳು ತಲೆಯೆತ್ತದಂತೆ ಮೇಲ್ಗಡೆಯಿಂದ ಮದ್ದುಗುಂಡುಗಳನ್ನೂ ಕವಲಂಬುಗಳನ್ನೂ ಸುರಿದನು. ಮುಂದರನು ಇದನ್ನು ಕಂಡು ಕೋಪೋದ್ರಿಕ್ತನಾಗಿ 'ಇಂದು ಕೋಂಟೆಯ ಕೊಳ್ಳದಿರ್ದಡೆ ನಾ ಹೊತ್ತುದೊಂದು ಮಿಾಸೆಯೇ?' ಎಂದು ತನ್ನವರನ್ನು ಪ್ರೋತ್ಸಾಹಿಸಲು ಆತನ ಪಕ್ಷದ ಕಡುಗಲಿಗಳು ಜೇನುಹುಳಗಳಂತೆ ಕೋಟೆಯನ್ನು ಮುತ್ತಿ ಹೋರಾಡಿದರು. ಈ ಬಲುಲಗ್ಗೆಯಲ್ಲಿ ಜಯದ ಆಶೆಯನ್ನು ತೊರೆದ ವಿಮಲವಾಹನನು ಸ್ವಕುಟುಂಬ ಬೆರಸಿ ಚೋರಗಂಡಿಯಿಂದ ಹೊರಬಿದ್ದು ಶಂಖಗಿರಿಯ ಮೇಲಿರುವ ಕುಸುಮಪುರಕ್ಕಾಗಿ ಪಲಾಯನಗೆಯ್ದನು. ತನ್ನೆಡೆಗೆ ಬಂದ ಬಾವಾಜಿಯನ್ನು ಕುಸುಮಪುರಾಧಿಪತಿ ಸುದರ್ಶನನು ಆದರದಿಂದ ಬರಮಾಡಿಕೊಂಡು ಮುಂದರನಿಂದೊದಗಿದ ಚಿಂತೆಯನ್ನು ಕಳೆದು ತನ್ನಲ್ಲಿ ಇರಿಸಿಕೊಂಡನು. ವಿಮಲವಾಹನನು ಪಲಾಯನ ಹೂಡಿದ ಸುದ್ದಿ ಹಬ್ಬಲಾಗಿ ಮುಂದರನಿಗೆ ಸುಲಭದಲ್ಲಿ ಕೋಟೆ ಕೈವಶವಾದುದು. ಮುಂದರನು ಮುತ್ತಿಗೆಯನ್ನು ಬಿಡಿಸಿ ಪ್ರಜೆ, ಪರಿವಾರಕ್ಕೆ ಅಭಯವನ್ನಿತ್ತು ಮಂತ್ರಿಗಳನ್ನು ಕರೆದು ನಂಬುಗೆಯನ್ನಿತ್ತು ಹರಿಪುರದಲ್ಲಿ ರಾಜ್ಯ ಭಾರಕ್ಕೆ ತೊಡಗಿದನು.



## 14. ಕಾಮಲತೆಯ ವಿವಾಹ.

**ಮುಂ**ದರನ ಈ ಪ್ರಕಾರವಾದ ದುರ್ವರ್ತನೆಯನ್ನು ನಾಗದತ್ತನಿಂದ ಕೇಳಿ ತಿಳಿದ ಜ್ಞಾನಚಂದ್ರನು 'ಆ ದುಷ್ಟಬುದ್ಧಿಗೆ ತಕ್ಕುದನ್ನು ನಾನೆಸಗುವೆನೆಂದು ನುಡಿದು ಕುಸುಮ ಪುರದಲ್ಲಿದ್ದ ವಿಮಲವಾಹನನಿಗೆ ಈ ಸುದ್ದಿಯನ್ನು ತಿಳಿಸುವಂತೆ ನಾಗದತ್ತನನ್ನು ಕಳುಹಿ ಕೊಟ್ಟು ತಾನು ಹರಿಪುರದತ್ತ ತೆರಳಿದನು.

ಮುಂದರನು ವಿಜಯೋನ್ಮತ್ತನಾಗಿ ದೊರೆಗಳ ಮಧ್ಯದಲ್ಲಿದ್ದು ಕುಂಜರಯುದ್ಧವನ್ನು ನೋಡುತ್ತಿದ್ದನು. ಜ್ಞಾನಚಂದ್ರನಾದರೋ ಆನೆಯ ರೂಪವನ್ನು ತಾಳಿ ನೆರೆದಗಜಗಳ ಮಧ್ಯ ದಲ್ಲಿ ಸೇರಿಕೊಂಡು ಬೃಂಹಿಸುತ್ತಿದ್ದನು. ಚೌದಂತವನ್ನು ತಾಳಿ ಶ್ವೇತವರ್ಣದಿಂದೊಪ್ಪುವ ಈ ಗಜವನ್ನು ಸುರವಾರಣವೆಂದು ಬಗೆದು ಅದನ್ನೇರುವ ಬಯಕೆ ಮುಂದರನಿಗಾಗಲು, ಬಹುಶ್ರುತ ಮಂತ್ರಿ 'ಇದು ಮಾಯದ ಆನೆಯೇ ಆಗಿರಬೇಕು. ಇದನ್ನೇರುವುದು ತರವಲ್ಲ. ಹಿಂದೆ ಶ್ರೀಪಾಲಚಕ್ರಿ ಇಂತಹ ಆನೆಯಿಂದ ಮೋಸಹೋದುದನ್ನು ಜ್ಞಾಪಿಸಿಕೋ' ಎನಲು, ಆ ನೀತಿಗೆ ಕಿವಿಗೊಡದೆ ಚಪಲತೆಯಿಂದ ಸಿಂಹಾಸನವನ್ನಿಳಿದು ಆನೆಯ ಸನಿಯಕ್ಕೆ

ಬಂದೊಡನೆ ಅದು ಆತನನ್ನು ತನ್ನ ಸೊಂಡಿಲಲ್ಲಿ ಎತ್ತಿಕೊಂಡು ನಗರದ ಬೀದಿಗಳಲ್ಲಿ ಓಡಾಡುತ್ತಾ ರಂಭಾರೂಟಿಯನ್ನೆಸಗಿತು. ತಂದೆಗೊದಗಿದ ವಿಪತ್ತನ್ನು ಚರರ ಮುಖದಿಂದ ಕೇಳಿ ತಿಳಿದ ರತ್ನಮಾಲಿ ಹೆಣ್ಣಾನೆಗಳನ್ನು ಪಣ್ಣಿ ಕರಿಪತಿಯ ಕಾಲಿಗೆ ನಿಗಳವನ್ನು ಹಾಕಿಸಿದನು. ಆ ಸುರಗಜ ಸುಮ್ಮಗಿದ್ದು ಕೊನೆಗೊಮ್ಮೆ ಘೀಳಿಟ್ಟು ಸಂಕಲೆಯನ್ನು ತುಂಡರಿಸಿ ಮುಂದೋಡಲು ನೆರೆದ ಆನೆಗಳು ಚದರಿ ಪಟ್ಟಣದಲ್ಲೆಲ್ಲಾ ಕೋಲಾಹಲವನ್ನೆಬ್ಬಿಸಿತು. ನೆರೆದ ಮಂದಿ ಅರಸನ ವಿಧಿಗಾಗಿ ಮರುಗಿದುದು. ಅವನ ದುರ್ವರ್ತನೆಗಾಗಿ ಶಪಿಸಿತು. ಊರೆಲ್ಲಾ ಹಾವಳಿಯನ್ನೆಸಗುತ್ತಿರುವ ಆನೆಯನ್ನು ಕಂಡು ಬೆದರಿ ಚದರಿ ಓಡುತ್ತಿರುವ ಮಂದಿಯ ದುರವಸ್ಥೆಯನ್ನು ಹೇಳಿ ತೀರದು. ಮುನಿದ ಆನೆ ಪಟ್ಟಣವನ್ನೆಲ್ಲಾ ಸುತ್ತಿ ಪುಡಿಗೈದು ಪೊರಮಟ್ಟು ಪುಷ್ಪಪುರದತ್ತ ಬರುತ್ತಿರಲು, ಸುದರ್ಶನವಿಮಲವಾಹನರೀರ್ವರೂ ದೂರದಿಂದಲೆ ಕಂಡು ಆನಂದಭರಿತರಾದರು. ಸುರಗಜವು ಮಂದರನನ್ನು ತಂದು ವಿಮಲವಾಹನನ ಮುಂದಿಳುಹಿತು. ಆನೆಯ ರೂಪವನುಳಿದು ಜ್ಞಾನಚಂದ್ರನು ಪ್ರತ್ಯಕ್ಷನಾದನು. ಸುದರ್ಶನವಿಮಲವಾಹನರೀರ್ವರು ಕರಗಳನ್ನು ಜೋಡಿಸಿ ವಿನಯವಚನಗಳಿಂದ ಜ್ಞಾನಚಂದ್ರನನ್ನು ಕೊಂಡಾಡಿದರು.

ಶರಣಾಗತರಕ್ಷಕನಾದ ಜ್ಞಾನೇಂದು ಮಂದರನನ್ನುದ್ದೇಶಿಸಿ ‘ಹಿಂದಣ ವೈರವನ್ನುಳಿದು ವಿಮಲವಾಹನನಿಗಧೀನನಾಗಿ ನಡೆದುಕೊಳ್ಳತಕ್ಕದ್ದೆ’ನಲು, ಮಂದರನು ತಾನೆಸಗಿದ ಕಾರ್ಯಕ್ಕೆ ಪಶ್ಚಾತ್ತಾಪಪಟ್ಟು ವೈರಾಗ್ಯವನ್ನು ತಾಳಿ, ಮಧುರೋಕ್ತಿಯಿಂದ ಕ್ಷಮಾಯಾಚನೆಯನ್ನು ಮಾಡಿ, ತನ್ನ ಮಗ ರತ್ನಮಾಲಿಯನ್ನು ಜ್ಞಾನಚಂದ್ರನ ಕೈಲೆಡೆಕೊಟ್ಟು ಬೀಳ್ಕೊಂಡು, ಸುಮತಿಜಿನೇಂದ್ರಪಾದಸನ್ನಿಧಿಯಲ್ಲಿ ಜೈನೇಂದ್ರದೀಕ್ಷೆಯನ್ನು ತಾಳಿದನು.

ವಿಮಲವಾಹನನು ಕಡುಸುಮ್ಮಾನದಿಂದ ಜ್ಞಾನಚಂದ್ರನನ್ನು ಹರಿಪುರಕೆ ಕರೆದೊಯ್ದನು. ಶುಭಮುಹೂರ್ತದಲ್ಲಿ ವೈಭವದಿಂದ ಜ್ಞಾನೇಂದುಕಾಮಲತೆಯರ ವಿವಾಹಕಾರ್ಯವನ್ನೆಸಗಿ ಸಂತುಷ್ಟನಾದನು.

## 15. ಸಿಂಧೂದೇವಿಯ ರೂಪಾತಿಶಯ.

ಜ್ಞಾನಚಂದ್ರನು ಹರಿಪುರದ ಒಡೆತನವನ್ನು ವಿಮಲವಾಹನನಿಗೂ, ಚಕ್ರಪುರದ ಅರಸುತನವನ್ನು ರತ್ನಮಾಲಿಗೂ ಒಪ್ಪಿಸಿ ಕನಕಲತೆಯೊಡಗೂಡಿ ಮಾವನ ಮನೆಯಲ್ಲಿ ಸುಖದಿಂದಿರಲೊಂದು ಹಗಲು ಓರ್ವ ಪಾಠಕನು ಬಂದು ಆತನನ್ನು ಸ್ತುತಿಸಿ ಬಳಿಯಲ್ಲಿ ಕುಳಿತುಕೊಂಡನು. ಪಾಠಕನು ದೇಶಸಂಚಾರದಲ್ಲಿ ಕಂಡ ಕೌತುಕದ ಸುದ್ದಿಯನ್ನು ನಿವೇದಿಸುವಂತೆ ಅರಗುವರನು ಕೇಳಲಾಗಿ ಅವನು ಇಂತೆಂದು ನಿರವಿಸಿದನು—

ಅಂಗದೇಶದಲ್ಲಿ ಮೆರೆವ ಶ್ರೀಪುರಕ್ಕೆ ಅಧಿಪತಿ ಜಯಸೇನ; ಮದನಮಂಜೂಷೆಯೆಂಬಾಕೆ ಆತನ ಮಡದಿ. ಅವರೀರ್ವರ ಗರ್ಭದಲ್ಲಿ ಜನಿಸಿದಾಕೆ ಸಿಂಧೂದೇವಿ. 'ನವಕುವಲಯಗಂಧಿ, ಭುವನವಿಖ್ಯಾತೆ ಆಕೆ ತನ್ನಯದೊಂದು ರೂಪಿಂದ ದಿವಿಜಕನ್ನೆಯರ ಜರಿವಳು' ವೀಣಾವಾದನಕೋವಿದೆಯಾದ ಆಕೆ ಸರಸತಿಗೂ ಮಿಗಿಲು. ಸಮವಯಸ್ಕೆಯರಾದ ತರುಣಿಯರೊಡಗೂಡಿ ಕಂದುಕವನ್ನಾಡಿ ಬಳಲಿದ ಆಕೆಯನ್ನೊಂದು ದಿನ ಜಯಸೇನನು ತನ್ನೆಡೆ ಕರೆಸಿಕೊಂಡು ಮೈದಡವಿ ಅವಳು ಮನಮೆಚ್ಚಿದ ವರನಾವನೆಂದು ಪ್ರಶ್ನಿಸಲು, ಆಕೆ 'ವರವೀಣಾವಾದನದಿಂದ ಎನ್ನ ಮನವ ಸೋಲಿಸಿ ಸೊಗಸಿಂದ ಸೂರೆಯನಾಳ್ವ ಮನುಜೇಂದ್ರಸುತರಲ್ಲದೆ ಉಳಿದ ಬಿನಗು ನೃಪರ ನಾ ಕನಸಿನಲಿ ನೆನೆದಡೆ ತನುಜೆಯೆ ನಿನಗೆ ನಾನೆಂದು ನುಡಿದ ಮಗಳ ಮಾತುಗಳನ್ನು ಕೇಳಿ ಆಕೆಯನ್ನು ಕಳುಹಿಕೊಟ್ಟು ಮಂತ್ರಿಯನ್ನು ಕರೆಸಿ ಸ್ವಯಂವರ ಮಂಟಪವನ್ನೇರ್ಪಡಿಸಿ ಸಕಲಭೂಪಾಲರಿಗೂ ಓಲೆಯನ್ನು ಕಳುಹಿಸಿದನು. ಸ್ವಯಂವರಕ್ಕಾಗಿ ನೆರೆದು ಬಂದ ಅರಸರು ವೀಣಾವಾದನದಲ್ಲಿ ಆಕೆಯನ್ನು ಗೆಲಲಾರದೆ ಸೋತು ಹಿಂದಿರುಗಲು ಜಯಸೇನನು ನನ್ನನ್ನು ಕರೆದು 'ದಿಗ್ದೇಶಗಳನ್ನು ಸಂಚರಿಸಿ ವೀಣಾವಾದನದಲ್ಲಿ ಈಕೆಯನ್ನು ಗೆಲುವ ಸಮರ್ಥನನ್ನು ಶೋಧಿಸಿ ತರಬೇಕೆ'ಂದು ಆಜ್ಞಾಪಿಸಲು, ಅದನ್ನು ಶಿರಸಾ ವಹಿಸಿ ನಾನು ಹೊರಟು ಬಂದೆನು. ದೇಶವಿದೇಶಗಳನ್ನು ಹೊಕ್ಕು ಬರುತ್ತಿರಲು ಇಂದು ನಂದ್ಯಾವರ್ತವೆಂಬ ಪರ್ವತವನ್ನು ಕಂಡು ಏರಿ, ಅಲ್ಲಿದ್ದ ಸುವೃತಮುನಿಗಳೊಡನೆ ನನ್ನ ಉದ್ದೇಶವನ್ನರುಹಲು, ಅವರು 'ಎಲೈ ವೈತಾಳಿಕನೇ ಜ್ಞಾನಚಂದ್ರನು ಘೋಷವತಿಯೆಂಬ ವೀಣೆಯನ್ನು ಬಾಜಿಸಿ ಆಕೆಗೆ ಸಂತಸವನ್ನು ಪುಟ್ಟಿಸಿ ಸಿಂಧೂದೇವಿಯನ್ನು ವರಿಸುವನೆ'ನಲು ಆ ಮಾತನ್ನು ಕೇಳಿ ನಲಿದು ಮುನಿಗಳಿಗೆರಗಿ ನೆಟ್ಟನೆ ನಿನ್ನಲ್ಲಿಗೆಯ್ದಿದೆನು. ಅದೇ ಮುನಿಗಳು ನಿರವಿಸಿದಂತೆ ಸಿಂಧೂದೇವಿಯ ಪೂರ್ವಜನ್ಮ ವೃತ್ತಾಂತವಾದರೂ ಇಂತಿಹುದು—

ಕುಂದಪುರವೆಂಬ ಪಟ್ಟಣದಲ್ಲಿ ಕಾಕಜಂಘನೆಂಬೋರ್ವ ವೃಷಲ. ಆತನಿಗೆ ಶಂಕರಿ ಎಂಬವಳು ಮಗಳು. ಆಕೆ ನಿತ್ಯ ಜಿನಾಲಯದಲ್ಲಿ ಕಸಗುಡಿಸಿ ರಂಗವಲ್ಲಿಯನ್ನಿಕ್ಕಿ ಚೌವ್ವೀಸ ಜಿನರನ್ನು ಪರಮಭಕ್ತಿಯಿಂದ ಸ್ತುತಿಸುವಳು. ಅದೊಂದು ದಿನ ಸಂಜೆ ನುತಿಗೈವ ಸಮಯ ಸಿಡಿಲು ಬಡಿದು ಸಾಯಲು, ಪುಣ್ಯದತಿಶಯದಿಂದ ಕಿನ್ನರವಂಶದಲ್ಲಿ ಜನಿಸಿ ಕಿನ್ನರೇಂದ್ರನ ಪಟ್ಟದರಸಿಯಾಗಿ ಸುಖವನ್ನುಂಡು ಆಯುಷ್ಯಾವಸಾನದಲ್ಲಿ ಮಡಿದು ಈಗ ಸಿಂಧೂದೇವಿಯಾಗಿ ಜನಿಸಿರುವಳು.

ಪಾಠಕನ ಬಾಯಿಯಿಂದ ಸಿಂಧೂದೇವಿಯ ವೃತ್ತಾಂತವನ್ನು ತಿಳಿದ ಜ್ಞಾನಚಂದ್ರನಿಗೆ ಆಕೆಯನ್ನು ವೀಣಾವಾದನದಲ್ಲಿ ಗೆಲ್ಲುವ ಹಂಬಲವುಂಟಾದುದು. ಪಾಠಕನೂ ಶ್ರೀಪುರಕೆಯ್ದಿ ನಮ್ಮೆಲ್ಲರ ಅಭೀಷ್ಟವನ್ನು ನೆರವೇರಿಸಿಕೊಡಬೇಕೆಂದು ದೈನ್ಯದಿಂದ ಪ್ರಾರ್ಥಿಸಿದನು. ಹೀಗಾಗಿ ಕುವರನು 'ಸಿಂಧೂದೇವಿಯನ್ನು ವೀಣಾವಾದನದಲ್ಲಿ ಗೆದ್ದು ಆಕೆಯನ್ನು ವಿವಾಹವಾಗುವೆನೆಂದು ಭಾಷೆಯಿತ್ತು ಪಾಠಕನನ್ನು ಬೀಳ್ಕೊಟ್ಟನು.

## 16. ಕಾಳರಾಕ್ಷಸವಿಜಯ.

**ಜ್ಞಾ**ನಚಂದ್ರನು ತಂದೆ-ತಾಯ್ಗಳನ್ನು ಕಾಣಲು ಹೊರಟು ಕಾರ್ಯಬಾಹುಲ್ಯದಿಂದ ವಿಲಂಬವಾದುದಕ್ಕೆ ಕಳವಳಿಸಿ ಕನಕಲತೆ ವಿಮಲವಾಹನರಿಗೆ ಈ ವಿಷಯವನ್ನು ತಿಳಿಸಿ ಹರಿಪುರದಿಂದ ಹೊರಟು ನಿಜರಾಜಧಾನಿಗೆ ಬರುತ್ತಿರಲಾಗಿ, ದಾರಿಯಲ್ಲೊಂದೆಡೆ ಕೆಸರಲ್ಲಿ ಮುಳುಗಿ ಕಾಲೆತ್ತಲಾಗದೆ ಕಳೆದೇಳು ದಿವಸದಿಂದ ಉಪವಾಸ ಬಿದ್ದು ಕಂಠಗತಾಸುವಾದ ಗಜವನ್ನು ಕಂಡು ಮಂತ್ರಬಲದಿಂದ ಅದನ್ನು ಮೇಲಕ್ಕೆತ್ತಿ ಉಪಚರಿಸಿ ಧರ್ಮಸಾರವನ್ನರುಹಿ ಸನ್ಯಾಸವನ್ನಿತ್ತು, ಪಂಚನಮಸ್ಕಾರಮಂತ್ರವನ್ನು ಹೇಳತೊಡಗಿದನು. ಆನೆಯಾದರೋ ಜ್ಞಾನಚಂದ್ರನ ಉಪದೇಶಸಾರವನ್ನು ಗ್ರಹಿಸಿ ಧ್ಯಾನಾಸಕ್ತವಾಗಿ ಮಡಿದು, ಬ್ರಹ್ಮಕಲ್ಪದಲ್ಲಿ ಅಮಿತತೇಜನೆಂಬ ದೇವನಾಗಿ ಜನಿಸಿತು. ಈ ರೀತಿ ಉಪಕೃತನಾದ ದೇವನು ಜ್ಞಾನಚಂದ್ರನ ಬಳಿಗೈದಿ ಕೃತಜ್ಞತಾಪೂರ್ವಕ ಹಾರಾದಿ ಉಪಹಾರಗಳನ್ನಿತ್ತು, 'ಆವ ಕಾರ್ಯದೊಳಾದೊಡೆನ್ನ ಸ್ಮರಣೆಯ ಮಾಡಲು ಚರಣಸೇವೆಯ ಭಕ್ತಿಯಿಂದ ಕಿಂಕರನಾಗಿ ಮಾಡುವೆನೆಂದು ನುಡಿದು ಮರಳಿದನು.

ಮೃತಪಟ್ಟ ಆನೆಗಾಗಿ ತಾನು ಉಪವಾಸವನ್ನಾಚರಿಸಿ ಮರುದಿನ ಪಾರಣೆಗೆ ಮೊದಲು ಆಹಾರದಾನಕ್ಕಾಗಿ ಮುನಿಗಳ ಬರವನ್ನು ಎದುರು ನೋಡುತ್ತಿರಲು ಆಕಾಶ ಮಾರ್ಗದಿಂದ ಇಳಿದು ಬರುತ್ತಿರುವ ಚಾರಣಯುಗಲವನ್ನು ಕಂಡು ನಲಿದು ವಿಧಿವಿಹಿತರೀತಿಯಲ್ಲಿ ಮುನಿಭಿಕ್ಷೆಯನ್ನು ನೆರವೇರಿಸಲು ಭಕ್ತಿಗೆ ಮೆಚ್ಚಿದ ದೇವತೆಗಳು ಪಂಚಾಶ್ಚರ್ಯಗಳನ್ನೆಸಗಿದರು. ಅಲ್ಲಿಂದ ಹೊರಟು ಚಾರಣರು ಒಂದು ಮಾವಿನ ಮರದಡಿಯ ಹಾಸುಗಲ್ಲಿನ ಮೇಲೆ ಧ್ಯಾನಾಸಕ್ತರಾಗಿ ಕುಳಿತಿರಲು ಆಕಾಶಮಾರ್ಗದಿಂದ ಬರುತ್ತಿದ್ದ ಕಾಳರಕ್ಕಸನು ತನ್ನ ವಿಮಾನ ಆ ಸ್ಥಳದಲ್ಲಿ ಕೀಲಿಸಿ ಹೋದುದನ್ನು ಕಂಡು ಈ ಮುನಿಗಳೇ ಕಾರಣರೆಂದು ತಿಳಿದು ವಿಮಾನದಿಂದಿಳಿದು ಬಂದನು. ತತ್‌ಕ್ಷಣವೇ ಕೋಪಗೊಂಡ ಆ ಕಪಟಮಾನಸನು ವಿದ್ಯೆಗಳನ್ನು ಕರೆದು ಮುನಿಗೆ ಉಪಸರ್ಗವೆಸಗುವಂತೆ ಆಜ್ಞಾಪಿಸಿದನು. ಸ್ತ್ರೀರೂಪ ತಾಳಿದ ವಿದ್ಯೆಗಳು ಮಾಟಗಾತಿಯರಾಗಿ ಬಂದು ಯತಿಗಳನ್ನು ಮರುಳು ಮಾಡಲು ಯತ್ನಿಸಿ ವಿಫಲರಾಗಲು ಅಸುರನು ಕೋಪಗೊಂಡು ತನ್ನ ಪರಿವಾರದ ಪಿಶಾಚಗಳಿಗೆ ಆಜ್ಞಾಪಿಸಿದನು. ಅವುಗಳು ಭಯಾನಕರೂಪದಿಂದ ಬೆದರಿಸತೊಡಗಿದುವು. ಹಿರಿದಾಗಿ ಬೊಬ್ಬಿರಿದುವು. ಅರ್ಧರಾತ್ರಿಯಲ್ಲಿ ನಡೆಯುತ್ತಿದ್ದ ಈ ಗಲಭೆಯನ್ನು ಜ್ಞಾನಚಂದ್ರನು ಮಲಗಿದಲ್ಲಿ ಕೇಳಿ ಎಚ್ಚತ್ತು ಬಂದು ಈ ಬಾಧೆಯನ್ನು ಪರಿಹರಿಸಲೋಸುಗ ವಜ್ರದ ಆವರಣವನ್ನು ರಚಿಸಿದನು. ಜ್ಞಾನಚಂದ್ರ-ರಕ್ಕಸರೊಳಗೆ ನಡೆದ ಹೋರಾಟದಲ್ಲಿ ಚರಮದೇಹಿಯಾದ ಜ್ಞಾನಚಂದ್ರನನ್ನು ಭೇದಿಸಲು ರಾಕ್ಷಸನ ಅಸ್ತ್ರಗಳಿಗೆ ಸಾಮರ್ಥ್ಯವಿರದಿದ್ದರೂ ಅಸುರನಿಟ್ಟ ಶಕ್ತ್ಯಾಯುಧಕ್ಕೆ ಕುವರನು ಮೂರ್ಛೆಹೋದನು. ಮೂರ್ಛೆತಿಳಿದೆದ್ದು ರಥವೇರಿ ಬರುತ್ತಿರುವ ಅರಗುವರನನ್ನು ದಾನವನು ಚಕ್ರದಿಂದಿಡಲು, ಈ ಹಿಂದೆ ಹೇಳಿದ ಗಜಚರದೇವ ಅಮಿತತೇಜನು

ಬಂದು ಜ್ಞಾನೇಂದುವಿನ ಸಹಾಯಕೆ ನಿಂದು ಅಸುರನನ್ನು ಇದಿರಿಸಿದನು. ಅಮಿತತೇಜನ ವಜ್ರಾಯುಧದ ಆಘಾತಕ್ಕೆ ಸೋತು ತರಹರಿಸಲಾಗದೆ ಓಡುತ್ತಾ ಉಬ್ಬಸಪಟ್ಟವನಾಗಿ ದಾರಿ ಕಾಣದೆ, ಆಗ ತಾನೆ ಶುಕ್ಲಧ್ಯಾನಾಗ್ನಿಯಿಂದ ಕರ್ಮವನ್ನು ಸುಟ್ಟು ಆಗಸಕ್ಕೆ ಪುಟನೆಗೆದು ಗಂಧಕುಟಿಯಲ್ಲಿ ವಿರಾಜಮಾನರಾಗಿದ್ದ ಅದೇ ಚಾರಣರ ಆ ವಿಹಾರಮಂಟಪವನ್ನು ಪ್ರವೇಶಿಸಿ ಮರೆಹೊಕ್ಕನು. ಅಷ್ಟರಲ್ಲಿ ಅವನನ್ನು ಹಿಂಬಾಲಿಸುತ್ತಿದ್ದ ಜ್ಞಾನಚಂದ್ರ ಅಮಿತತೇಜರೂ ಗಂಧಕುಟಿಯನ್ನು ಹೊಕ್ಕು ಕೋಪ ತಿಳಿದು ಭಕ್ತಿಯಿಂದ ಅರುಹನಿಗೆರಗಿದರು.



## 17. ಜಯ-ವಿಜಯರ ಭವಾವಳಿ.

**ಜ್ಞಾ**ನಚಂದ್ರನು ಗಂಧಕುಟಿಯಲ್ಲಿ ವಿರಾಜಮಾನರಾದ ಕೇವಲಿಗಳೊಡನೆ ದಾನವನು ಅವರಿಗೆ ಉಪಸರ್ಗ ಕೊಡಲು ಕಾರಣವೇನೆಂದು ಬೆಸಗೊಳಲು, ಆ ಕೇವಲಿಗಳು ಇಂತೆಂದು ನಿರವಿಸಿದರು—

ದುರಿತಕೋಟಲೆಗೊಳಗಾಗಿ ಹಲವು ಭವಗಳಲ್ಲಿ ತಿರುಗಿದ ನಾವು ಮಲಯಾಚಲದಲ್ಲಿ ಶೂದ್ರರಾಗಿ ಜನಿಸಿ, ಕಾರುಣ್ಯಮೂರ್ತಿಯೆನಿಸಿದ ಮುನಿಗಳೊಬ್ಬರ ಉಪದೇಶದಿಂದ ರತ್ನತ್ರಯ ಧರ್ಮವನ್ನು ತಿಳಿದು ಅಷ್ಟಮೂಲಗುಣಗಳನ್ನು ಸ್ವೀಕರಿಸಿ ಧರ್ಮಮಾರ್ಗದಲ್ಲಿ ನಡೆಯುತ್ತಿದ್ದೆವು. ಇಂತಿರಲೊಂದು ದಿನ ಮಲಯಾಚಲದ ವನ ಒಂದರಲ್ಲಿ ಮಲಗಿರಲು ವರ್ಷಾಕಾಲದಲ್ಲಿ ನೆರೆಗೆ ಸಿಲುಕಿದ ಕಲ್ಲುಗುಂಡೊಂದು ಉರುಳಿ ಬಂದು ನಮ್ಮ ಮೇಲೆ ಬೀಳಲು ಸತ್ತು, ಕಿನ್ನರರಾಗಿ ಜನಿಸಿ ಸುಖದಿಂದ ಕಾಲಕಳೆಯುತ್ತಿದ್ದೆವು. ಆಯುಷ್ಯಾವಸಾನದಲ್ಲಿ ಇನ್ನೆಂತು ಕೊಳಕು ಮಾನವಜನ್ಮದಲ್ಲಿ ಜನಿಸುವೆವೆಂದು ಆರ್ತರಾಗಿ ಮಡಿದು ಮಲಯಪರ್ವತದ ಹೊಳೆಯ ಮಳಲಲ್ಲಿ ಚಂದನತರುಗಳಾಗಿ ಆ ಪರ್ಯಾಯವನ್ನುಳಿದು ಕಾಡುಹಂದಿಗಳಾಗಿ, ತನ್ನಂತರ ವಿಂಧ್ಯಗಿರಿಯಲ್ಲಿ ಗಿಳಿಮರಿಗಳಾಗಿ ಜನ್ಮತಾಳಿದೆವು. ಅಲ್ಲಿ ಶಬರಿಯೋರ್ವಳು ಆ ಗಿಳಿಮರಿಗಳನ್ನೊಯ್ದು ಉಜ್ಜೈನಿಪುರದ ವೃಷಭದತ್ತನೆಂಬ ಪರದನಿಗಿತ್ತಳು. ಆತನ ಮಡದಿ ಜಿನಮತಿ ಗಿಳಿಗಳನ್ನು ಅಕ್ಕರೆಯಿಂದ ಪೋಷಿಸುತ್ತಾ ಜಿನಾಂಕಮಾಲೆಯನ್ನು ಕಲಿಸಿದಳು. ಧಾರ್ಮಿಕವಾತಾವರಣದಲ್ಲಿ ಬಳೆದ ಗಿಳಿಮರಿಗಳು ಮುನಿಗಳಾಗಮನವನ್ನು ತಿಳಿದು ಮನೆಯೊಡತಿಯನ್ನು ಕೂಗಿ ಕರೆದು ಈ ಒಸಗೆಯನ್ನರುಹಿದುವು. ಜಿನಮತಿ ಮುನಿಗಳಿಗೆ ಆಹಾರದಾನವನ್ನೆಸಗಿದನಂತರ ಗಿಳಿಗಳು ಜಿನಪತಿಗಳ ಪಾದಗಳಿಗೆರಗಿದುವು. ತತ್‌ಕ್ಷಣ ದೊರೆಕೊಂಡ ಜಾತಿಸ್ಮರಣೆಯಿಂದ ತಮ್ಮ ಪೂರ್ವಭವವೃತ್ತಾಂತವನ್ನು ನೆರೆದವರಿಗರುಹಿ ಶ್ರಾವಕವ್ರತವನ್ನು ಗುರುಪಾದೋಪಾಂತ್ಯದಲ್ಲಿ ಸ್ವೀಕರಿಸಿದುವು.

ಇಂತಿರಲೊಂದು ದಿನ ಆ ಮನೆಯೊಳಗೆ ಧನದೇವನೆಂಬೋರ್ವನು ತನ್ನ ಭಗಿನಿಯೊಡನೆ ನೆರೆವುತ್ತಿರುವುದನ್ನು ಗಿಳಿಗಳು ಕಂಡು ವಿವೇಕವನ್ನು ಆತನಿಗೆ ಬೋಧಿಸಲಾಗಿ ಆ

ಚಾಂಡಾಲನು ಗಿಳಿಗಳ ದೆಸೆಯಿಂದ ತನ್ನ ದುರ್ವರ್ತನೆ ಬಯಲಾಗಬಹುದೆಂದು ಭೀತಿಯಿಂದ ಅವುಗಳ ಕೊರಳನ್ನು ಹಿಸುಕಿದನು. ಇಂತು ದುರಂತಕ್ಕೀಡಾಗಿ ಶುಭಭಾವನೆಯಿಂದ ಮಡಿದ ಕಾರಣ ಲಾಂತವಸ್ವರ್ಗದಲ್ಲಿ ದೇವತೆಗಳಾಗಿ ಜನಿಸಿದೆವು. ಆಯುಷ್ಯಾವಸಾನದಲ್ಲಿ ಮಡಿದು ಅವಂತೀದೇಶದಲ್ಲಿ ಉಜ್ಜೈನಿಪಟ್ಟಣದ ಕನಕರಥನ ಮಡದಿ ಧರಣೀದೇವಿಗೆ ಜಯ-ವಿಜಯ ರೆಂಬ ಅವಳಿಮಕ್ಕಳಾಗಿ ಜನಿಸಿದೆವು. ಮುಂದೆ ಸುಧರ್ಮಾಚಾರ್ಯರಲ್ಲಿ ದೀಕ್ಷೆಗೊಂಡು ಇಂದು ನಿನ್ನಲ್ಲಿ ಆಹಾರದಾನವನ್ನು ಸ್ವೀಕರಿಸಿ, ಆ ರಸಾಲವೃಕ್ಷದ ಬುಡದಲ್ಲಿ ತಪೋನಿರತ ರಾಗಿದ್ದೆವು. ಆಗತಾನೆ ಆ ಕಾಳರಾಕ್ಷಸನು ಭವಬದ್ಧದ್ವೇಷದ ಕಾರಣವಾಗಿ ಉಪಸರ್ಗವನ್ನಿ ತ್ತನು. ಈತನೇ ಆ ಹಿಂದಿನ ಧನದೇವನು. ಅಂದು ತನ್ನ ದುರ್ವರ್ತನೆ ಜನಜನಿತವಾಗಲು ನಾಚಿ ಪಟ್ಟಣವನ್ನು ತೊರೆದು ಔದುಂಬುರ ಕೋಷ್ಟದಿಂದ ನರಳಿ ಸತ್ತು ನಾನಾತಿರಿಯಂಚ ಜನ್ಮದಲ್ಲಿ ಸುತ್ತಾಡಿ ಮೃಗಶೃಂಗನೆಂಬ ತಾಪಸನಿಗೆ ಮಗನಾಗಿ ಪುಟ್ಟಿ, ಪಂಚಾಗ್ನಿತಪಸ್ಸನ್ನು ಗೈದು ಅಳಿದು ಈ ಕಾಳನೆಂಬ ವ್ಯಂತರನಾದನು. ದೈವಯೋಗದಿಂದ ನೀನು ನಮಗೊದಗಿದ ಉಪಸರ್ಗವನ್ನು ನಿವಾರಿಸಿದೆ.

ಕೇವಲಿಗಳ ಈ ಮಾತನ್ನು ಕೇಳಿ ಕಾಳರಕ್ಕಸನು ವೈರವನ್ನುಳಿದು ಜಿನರ ಪಾದಗಳಿ ಗೆರಗಿದನು. ಅಗತ್ಯ ಬಿದ್ದಾಗ ತನ್ನನ್ನು ಸ್ಮರಿಸಬೇಕೆಂದು ಜ್ಞಾನಚಂದ್ರನಿಗೆ ತಿಳಿಸಿ ತನ್ನ ಲೋಕಕ್ಕೆ ಹೋದನು. ಜನನಾಥನು ಜಿನಯುಗಲಗಳ ಬೀಳ್ಕೊಂಡು ತನ್ನ ಬೀಡಿಗೆ ಮರಳಿ ದನು.

---

## 18. ಸಿಂಧೂದೇವಿಯ ಸ್ವಯಂವರ.

**ಪಾಠಕನಿಗಿತ್ತ** ಮಾತನ್ನು ಜ್ಞಾಪಿಸಿಕೊಂಡು ಜ್ಞಾನಚಂದ್ರನು ಬೀಡಿಂದ ಹೊರಟವ ನಾಗಿ ವಂಗದೇಶದ ಶ್ರೀಪುರದೊತ್ತಿನ ವನದಲ್ಲಿ ಶೋಭಿಸುತ್ತಿರುವ ಸ್ವಯಂವರಗೃಹವನ್ನು ಹೊಕ್ಕು ರನ್ನ ಪೀಠದಲ್ಲಿ ಬೆಡಗಿಂದ ಕುಳಿತನು. ನೆರೆದ ರಾಜರು ಈತನ ರೂಪಾತಿಶಯವನ್ನು ಕಂಡು ಬೆರಗಾದರು. ದೊರೆಗಳೆಲ್ಲರ ಆಗಮನವನ್ನು ತಿಳಿದ ಜಯಸೇನನು ಸಿಂಧೂದೇವಿ ಯನ್ನು ಕರೆತರುವಂತೆ ಮಡದಿ ಮದನಮಂಜೂಷೆಗೆ ತಿಳಿಸಿದನು. ಮಂಗಲಸ್ನಾನಗೈದು ಸಾಲಂಕೃತಳಾದ ಕನ್ನೆಯನ್ನು ಸಖಿಯರು ಪಲ್ಲಕಿಯೇರಿಸಿ ಮಂಟಪಕ್ಕೆ ಕರೆತಂದರು. ವಾದ್ಯಗಳು ಭೋರಿಡಲು 'ಮಾರನ ಪಟ್ಟದ ಮದಕರಿಯಂತೆ' ಬರುತ್ತಿರುವ ಸಿಂಧೂದೇವಿ ಯನ್ನು ಕಂಡು ನೆರೆದ ರಾಜರು ತಮ್ಮ ತಮ್ಮ ದೈವಗಳಿಗೆ ಹರಕೆಹೊತ್ತರು; ಪಲ್ಲಕಿ ಯಿಂದಿಳಿದು ಯುವತಿಯರ ಕೈಲಾಗಿನಲ್ಲಿ ನಡೆದು ಬರುತ್ತಿರುವ ಆಕೆಯ ಮುಂದೆ ಶೃಂಗಾರ ಭಾವಗಳನ್ನು ಪ್ರದರ್ಶಿಸಿದರು. ಅವರನ್ನು ಹಾದು ಹೋಗುತ್ತಿರುವಲ್ಲಿ ಪ್ರತಿಯೊಬ್ಬ ರಾಜನ ಗುಣಕಥನವನ್ನು ಕೆಳದಿಯೊರೆದಳು. ಆವರೆ ಇವರಾರನ್ನು ಆರಗುವರಿ ಮನದಿಕೊಂಡುದಿಲ್ಲ.

ಮುಂದೆ ಶಾಂತಿಜಿನರ ಸಂತಾನದಲ್ಲೊಗೆದ ಕುರುವಂಶಲಲಾಮ ಜ್ಞಾನಚಂದ್ರನ ಸಾಹಸ ಕಾರ್ಯಗಳನ್ನು ಬಣ್ಣಿಸಲು ಕೊನೆಗಣ್ಣಿನಿಂದ ಆತನನ್ನು ನೋಡಿ ಸಾತ್ವಿಕಭಾವವನ್ನು ತಾಳಿದಳು. ಅವನ ಸಮವಯೋರೂಪತೆಗೆ ಮೆಚ್ಚಿ, ವೀಣಾವಾದನಪ್ರಾಜ್ಞನಹುದೋ ಅಲ್ಲವೋ ಎಂದು ಯೋಚಿಸುತ್ತಾ ವೀಣಾಮಂಟಪವನ್ನೇರಿ ತರುಣಿಯರ ಒಡ್ಡೋಲಗದೊಡನೆ ಕುಳಿತು ಕಡೆಗಣ್ಣಕೊನೆಯಿಂದ ಜ್ಞಾನಚಂದ್ರನನ್ನು ನೋಡತೊಡಗಿದಳು. ಅವನ ದೃಷ್ಟಿಯೂ ಈಕೆಯೊಡನೆ ಬೆರೆತುದು.



## 19. ವೀಣಾಲಾಪ.

ಸ್ವಯಂವರಕ್ಕೆ ನೆರೆದ ರಾಜಸಭೆಯನ್ನುದ್ದೇಶಿಸಿ ಕಟ್ಟಿಗೆಗಾರನು 'ವೀಣಾವಾದನ ಕೋವಿದರು ಬಂದು ವೀಣೆಯ ಬಾಜಿಸಿ ಕನ್ನಿಕೆಯನ್ನು ಮೆಚ್ಚಿಸಿ ವರಿಸಿರೆ'ಂದು ಸಾರಿದನು. ದರ್ಪಿಷ್ಟರಾದ ಕೆಲಮಂದಿ ರಾಜಕುಮಾರರು ಮೊದಲೆದ್ದು ಬಂದು ಕನ್ಯಾಸಕ್ತಚಿತ್ತರಾಗಿ ಮರುಳಾಟವಾಡಿ ಹಾಸ್ಯಕ್ಕೀಡಾದರು. ಅಷ್ಟರಲ್ಲಿ ಜ್ಞಾನಚಂದ್ರನು ಮುರುಕದಿಂದೆದ್ದು ಮಂಟಪಕ್ಕೆ ನಡೆತಂದು ದರಹಸಿತವದನಾರವಿಂದನಾಗಿ ಗದ್ದುಗೆಯನ್ನೇರಿ ಕುಳಿತನು. ತರಳೆಯ ಕಣ್ಮನಗಳು ಇವನ ಗಾಡಿಗೆ ಸೋತುವು. ಆಳಿಯರ ವಿನೋದೋಕ್ತಿಗೆ ಕಲೆಯೇರಿತು. ವೀಣಾಚಾರ್ಯ ಜಗನ್ಮೋಹಿ ಎಂಬಾತನು ಪರೀಕ್ಷಕನಾಗಿ ನಿಂತನು. ಹತ್ತೆಂಟು ವೀಣೆಗಳನ್ನು ಪರಿಚಾರಿಕೆಯರು ತಂದಿಟ್ಟರು. ಅವುಗಳಲ್ಲಿ ಪ್ರತಿಯೊಂದಕ್ಕೂ ದೋಷವಿಟ್ಟು ಕಳೆದನು. ಇನ್ನೆರಡು ವೀಣೆಗಳನ್ನು ತರುವಂತೆ ಕುವರಿಯು ಸನ್ನೆಮಾಡಲು ಸಖಿಯರು ಕೊಂಡುಬಂದರು. ಅವುಗಳಲ್ಲಿ ಒಂದಕ್ಕೆ ದೋಷವಿಟ್ಟು ಮತ್ತೊಂದನ್ನು ಎತ್ತಿಕೊಂಡನು. ಆಗ ವೀಣಾಚಾರ್ಯನು ಪರೀಕ್ಷೆಗೆ ತೊಡಗಿ ಆ ವೀಣೆಯ ಹೆಸರು, ಕುಲ, ಗೋತ್ರಗಳನ್ನು ಕೇಳಲು 'ಸುರಗಣ ನಡೆತಂದು ಶ್ರೀ ಶಾಂತಿಜಿನಪನು ಮೆರೆವ ಸಮವಸರಣದೊಳು ಅರುಹನ ಸಂಕೀರ್ತಿಸಿ ಭೂಚರಿಗಿತ್ತ ಕಾರಣ ಸುರಕುಲವಾಯಿತು. ಸರಸತಿ ಪಿಡಿದ ಕಚ್ಛಪಿಯ ಮಂದ್ರಧ್ವನಿಯಿಂದ ಜರಿದು ವರಘೋಷವತಿಯೆಂಬ ಶುಭನಾಮಕರಣ ದೊರಕಿದುದು' ಎಂದು ಜ್ಞಾನೇಂದು ಉತ್ತರವಿತ್ತನು. ಆಚಾರ್ಯನಿವನ ಜಾಣ್ಮೆಗೆ ತಲೆದೂಗಿದನು. ಕುಮಾರನು ಆ ಭಾರಿ ವೀಣೆಯನ್ನೆತ್ತಿ ತೊಡೆಯ ಮೇಲಿಟ್ಟು ಶ್ರುತಿಗೂಡಿಸಿದನು; ಮರಿದುಂಬಿ ಝೇಂಕರಿಸುವಂತೆ ತಂತಿಯನ್ನು ಮಿಡಿದು ಸ್ವರದೋರಿ ರಾಗಾಲಾಪನೆಗೆ ತೊಡಗಿ ಗೀತೆಯಿಂದ ವೀತರಾಗನನ್ನು ಹಾಡಿದನು. ಗಾನಕ್ಕೆ ಮೆಚ್ಚಿ ಸಭಾಸದರು ಕೊಂಡಾಡಿದರು; ಸುರಸಮೂಹ ಹೊಗಳಿದುದು. ಇಂಥಾ ಕಲಾವಿದನನ್ನು ಪಡೆದ ತನ್ನ ಸೌಭಾಗ್ಯಕ್ಕೆ ಉಬ್ಬಿ ಸಿಂಧೂದೇವಿ ಸ್ವಯಂವರಮಾಲೆಯನ್ನು ಕರದೊಳಗಾಂತು ಜ್ಞಾನಚಂದ್ರನ ಬಳಿಗೈದಿ 'ಸಿರಿದೇವಿ ಪದ್ಮನಾಭನ ನುಣ್ಗೊರಲಿಗೆ ವರಕೌಸ್ತುಭವಿಡುವಂತೆ' ಆತನ ಕೊರಳಿಗಿಕ್ಕಿದಳು.

ಪೂರ್ವಜನ್ಮದ ಪುಣ್ಯವಿಶೇಷದಿಂದ ತನಗೆ ಇಂತಹ ಚೆನ್ನಿಗ ಅಳಿಯ ದೊರೆಕೊಂಡನೆಂದು ಹಿಗ್ಗಿ ಜಯಸೇನನು ಸಕಲರೊಡಗೂಡಿ ವೈಭವದಿಂದ ಪುರವನ್ನು ಪ್ರವೇಶಿಸಿದನು.

ಇತ್ತ ಸ್ವಯಂವರಮಂಟಪದಲ್ಲಿ ಮುಖಭಂಗವಡೆದ ರಾಜಸಮೂಹ ಜ್ಞಾನಚಂದ್ರನಲ್ಲಿ ಮತ್ಸರ ತಾಳಿದವರಾಗಿ ಕುಟಿಲಕಾರಸ್ಥಾನಕ್ಕಿಳಿದು ಜಯಸೇನನ ಬಳಿಗೆ ದೂತನನ್ನಟ್ಟಿ ಮಗಳನ್ನು ತಮ್ಮವರಲ್ಲೊಬ್ಬರಿಗೆ ಒಪ್ಪಿಸುವಂತೆ ತಿಳಿಸಿದರು. ಮಾವನಾಸ್ಥಾನದಲ್ಲಿದ್ದ ಅರಗುವರನು ದೂತಮುಖೇನ ಅರಿರಾಯರ ದುರುದುಂಬಿತನವನ್ನು ಕೇಳಿ ಮುಳಿದು ಮಾವನಿಗೆ ಸಮಾಧಾನ ಹೇಳಿ ಊರಿಗೆ ಕಾಪಿಟ್ಟು ಸಾಸಿರಧಾರೆಯೆಂಬ ರಥವೇರಿ ಹೊರಟು ವೈರಿಗಳಿಗೆ ಯುದ್ಧಾಹ್ವಾನವನ್ನಿತ್ತನು. ದರ್ಪದಿಂದ ಎದುರಿಸಿದ ಭೂಭುಜರ ಮೇಲೆ ಬಾಣವನ್ನೆಸೆದು ಅವರ ರಥವನ್ನು ಹುಡಿಹಾರಿಸಿದನು. ಸಮರದಲ್ಲಿ ಶತ್ರುಗಳ ಸಂಹಾರಕ್ಕೆ ಮನತಾರದೆ ತಕ್ಕ ಬುದ್ಧಿಯನ್ನು ಕಲಿಸುವೆನೆಂದು ವಿದ್ಯಾಪ್ರಯೋಗವನ್ನೆಸಗಿದನು. ವೈತಾಳಿಯಿಂದ ಭಯಗೊಳಿಸಿದನು. ಉರಗಬಂಧನದಿಂದ ಕಟ್ಟಿ ಕೆಡಹಿದನು. ಸ್ತಂಭಿನಿಯಿಂದ ಮರವಟ್ಟವರನ್ನಾಗಿಸಿ, ರೂಪವಿಕಾರಗಳನ್ನೆಸಗಿಸಿ ತಮ್ಮ ದೇಹಕ್ಕೆ ತಾವೇ ಹೇಸುವಂತೆ ಮಾಡಿ ಅವರ ಗರ್ವವನ್ನಳಿಸಿದನು. ಅಷ್ಟರಲ್ಲಿ ಬಂಗವಡೆದ ರಾಜರ ಮಂತ್ರಿಗಳೈತಂದು ಜ್ಞಾನೇಂದುವನ್ನು ತಮ್ಮ ಒಡೆಯರ ಬಿಡುಗಡೆಗೆ ಪ್ರಾರ್ಥಿಸಲು, ಜ್ಞಾನೇಂದು ಮಂತ್ರವಿದ್ಯೆಯನ್ನು ಉಪಸಂಹರಿಸಿ ರಾಜರಿಗೆ ಬುದ್ಧಿಹೇಳಿ ಬೀಳ್ಕೊಟ್ಟನು. ಅಳಿಯನ ವಿಜಯವಾರ್ತೆಯನ್ನು ಕೇಳಿ ಸಂತೋಷಭರಿತನಾದ ಜಯಸೇನನು ಇದಿರ್ವಂದು ಅಭಿನಂದಿಸಿದನು. ಇಸಿಯನಿಗೊದಗಿದ ಉಪಸರ್ಗಪರಿಹಾರಾರ್ಥ ಜಿನಮಂದಿರದಲ್ಲಿ ಧ್ಯಾನಾಸಕ್ತಳಾದ ಪುತ್ರಿಗೆ ಈ ಸುದ್ದಿಯನ್ನು ತಿಳಿಸಿ ಕರೆಕಳುಹಿ ಮುಂದೆ ಶುಭತಿಥಿಯಲ್ಲಿ ಬಂಧುಸಾಕ್ಷ್ಯಗ್ನಿಸಾಕ್ಷಿಯಾಗಿ ಜ್ಞಾನಚಂದ್ರಸಿಂಧೂದೇವಿಯರ ವಿವಾಹಸಮಾರಂಭವನ್ನು ನೆರವೇರಿಸಿದನು.

## 20. ತೀರ್ಥವಂದನೆ.

**ಸಿಂ**ಧೂದೇವಿಯಲ್ಲಿ ರಮಿಸುತ್ತಿದ್ದ ಜ್ಞಾನೇಂದುವಿಗೆ ಎರಡೂವರೆ ದ್ವೀಪದಲ್ಲಿರುವ ಜಿನಮಂದಿರಗಳನ್ನು ಕಾಣಬೇಕೆಂಬ ಆಸೆ ಉಂಟಾದುದು. ಕನಕವಿಮಾನವೇರಿದ ಆತನು 'ಜಿನಸಿದ್ಧ ! ಶರಣೆ'ಂದು ಹೊರಟು ದಕ್ಷಿಣಭರತದ ಅಯೋಧ್ಯೆಗೈದಿ ಸುರನಿರ್ಮಿತಚೈತ್ಯಾಲಯವನ್ನು ಹೊಕ್ಕು ಪುರುಜಿನೇಂದ್ರನ ಪೂಜೆಗೆಯ್ದನು. ಅಲ್ಲಿಂದ ಪೌದನಾಪುರಕ್ಕೆ ಬಂದು ಭರತೇಶನಿರ್ಮಿತ ಐನೂರಿಪ್ಪತ್ತೈದು ಪುರುಷಪ್ರಮಿತದೋರ್ಬಲಿಯ ಕರಚೆಲುವಿನ ಬಿಂಬವನ್ನು ನುತಿಸಿದನು. ಮುಂದೆ ಚಂಪಾಪುರದಲ್ಲಿ ವಾಸುಪೂಜ್ಯಜಿನರನ್ನೂ, ಸಮ್ಮೇದಶೈಲದಲ್ಲಿ ವಿಂಶತಿತೀರ್ಥೇಶ್ವರರನ್ನೂ, ಪಾವಾಪುರಿಯಲ್ಲಿ ಪಂಚಕೋಟಿಯತೀಶ್ವರರನ್ನೂ, ಊರ್ಜಯಂತಗಿರಿಯಲ್ಲಿ ನೇಮಿನಾಥ ಮೊದಲಾದ ಎಪ್ಪತ್ತೆರಡುಕೋಟಿ ಮಹಾಪುರುಷರನ್ನೂ,

ಶತ್ರುಂಜಯದಲ್ಲಿ ಪಾಂಡವಾದ್ಯಷ್ಟಕೋಟಿ ಮುನಿಪುಂಗವರನ್ನೂ, ತುಂಗೀಗೋತ್ರದಲ್ಲಿ ರಾಘವಾದಿ ನವಕೋಟಿ ಯೋಗೀಶ್ವರರನ್ನೂ, ವಿಪುಲಾಚಲದಲ್ಲಿ ಶ್ರೀವೀರಸಮವಸರಣವನ್ನೂ, ವಿಜಯಾರ್ಧಗಿರಿಯಲ್ಲಿ ಸಿದ್ಧಕೂಟವಸತಿಯನ್ನೂ ಸ್ಮರಿಸಿ, ಪುಣ್ಯಭುವಿಗಳನ್ನು ನುತಿಸಿ ಪೂಜಿಸಿದನು. ಹಿಮಾಲಯದ ತಪ್ಪಲಲ್ಲಿ ಗಂಗಾದೇವಿಯ ಗೃಹದ ಮೇಲ್ಭಾಗದಲ್ಲಿದ್ದ ನಿರಂತರ ಗಂಗಾಭಿಷಿಕ್ತಜಿನಬಿಂಬವನ್ನು ವಿದ್ಯಾಬಲದಿಂದ ಪ್ರವಾಹವನ್ನು ತಡೆದು ದರ್ಶನಗೆಯ್ದು ಹಿಮಗಿರಿಯನ್ನೇರಿ ಕಮಲಸರಸ್ಸಿನಲ್ಲಿ ಮಿಂದು ಅಲ್ಲಿನ ಜಿನಮಂದಿರಸಂದರ್ಶನವನ್ನೆಸಗಿದನು.

ಅಲ್ಲಿಂದ ಮುಂದೆ ಹೈಮವತ, ಹರಿ, ವಿದೇಹ, ರಮ್ಯಕ, ಐರಣ್ಯವತ, ಐರಾವತ ಕ್ಷೇತ್ರಗಳನ್ನು ಸಂದರ್ಶಿಸಿದನು. ಅವುಗಳಲ್ಲಿ ಹರಿವ ರೋಹಿದ್ರೋಹಿತಾಸ್ಯ ಮೊದಲಾದ ನದಿಗಳಲ್ಲಿ ಜಲಕೇಳಿಯಾಡಿ, ದಡದ ವನಗಳಲ್ಲಿ ವನಕೇಳಿಯಾಡಿ, ಕ್ಷೇತ್ರವಿಭಾಗಕಾರಿಗಳಾದ ಮಹಾಹಿಮವನ್, ನಿಷದ, ನೀಲ, ರುಕ್ಮಿ, ಶಿಖರಿ ಪರ್ವತಗಳನ್ನೇರಿ ಅವುಗಳ ಮೇಲಿನ ಮಹಾಪದ್ಮ, ತಿಗಿಂಛ, ಕೇಸರಿ, ಮಹಾಪುಂಡರೀಕ, ಪುಂಡರೀಕಗಳೆಂಬ ಪಾವನಹೃದಗಳಲ್ಲಿ ಮಿಂದು ಪರ್ವತಶಿಖರದಲ್ಲಿದ್ದ ಜಿನಗೃಹಗಳನ್ನು ಸಂದರ್ಶಿಸಿದನು. ಮುಂದೆ ನಂದೀಶ್ವರ ದಿವಿ ಎಂಟರ ಐವತ್ತೆರಡು ಜಿನಮಂದಿರಗಳನ್ನೂ, ಕುಂಡಲರುಚಕಾದ್ರಿಯ ಜಿನಾಲಯಗಳನ್ನೂ ನೆನೆದು ನಮಿಸಿದನು. ಉರಗವ್ಯಂತರಜ್ಯೋತಿಷ್ಕಸುರಲೋಕದೊಳಗಿರ್ದ ಚೈತ್ಯಾಲಯಗಳ ಜಿನರನ್ನು ಸ್ಮರಿಸಿ ನಮಿಸಿ ಕುಸುಮಾಂಜಲಿಗರೆದು ಶ್ರೀಪುರಕ್ಕೈದಿ ಪ್ರಸನ್ನಮಾನಸನಾಗಿದ್ದನು.

---

## 21. ಪಟ್ಟಣಪ್ರವೇಶ.

ದಿಗ್ವಿಜಯಶಾಲಿಯಾಗಿ ತನ್ನ ಪುರಕ್ಕೆ ಮರಳಿ ತಂದೆ-ತಾಯ್ಗಳಿಗೆ ಸಂಪ್ರೀತಿಯನ್ನು ಪುಟ್ಟಿಸುವೆನೆಂದು ಬಗೆದು ಜ್ಞಾನಚಂದ್ರನು ಪ್ರಸ್ಥಾನ ಭೇರಿಯನ್ನು ಹೊಯ್ಸಿ ನೆರೆದ ಖೇಚರ ಸೈನ್ಯದೊಡನೆ ಉತ್ತರಾಭಿಮುಖವಾಗಿ ಹೊರಟು ಭೂಮಂಡಲವನ್ನೆಲ್ಲ ಸುತ್ತಾಡಿ ಮಲೆತು ನಿಂತ ರಾಜರನ್ನು ತೊತ್ತಳದುಳಿದು ಶರಣಾಗತರಿಗೆ ಆಶ್ರಯವಿತ್ತು, ಒಪ್ಪಿಸಿದ ಕಪ್ಪಕಾಣಿಕೆಗಳನ್ನೂ, ಇತ್ತ ಕನ್ಯಾರತ್ನವನ್ನೂ ಸ್ವೀಕರಿಸಿ ಶ್ರೀಪುರಕ್ಕೈದಿದನು. ನಂತರ ಜಯಸೇನನ ಅಪ್ಪಣೆವಡೆದು ಸಿಂಧೂದೇವಿಯೊಡಗೂಡಿ, ಹರಿಬಲ, ಹರಿಧನು, ಗರುಡವೇಗ, ಕುಸುಮಚೂಲರನ್ನು ಬರಮಾಡಿಸಿ ಅನುಮತ್ಯಾದಿ ಪೆಣ್ಮಣಿಗಳು ಸಹಿತ ಶ್ರೀಪುರದಿಂದ ಹೊರಟು ಬಹುಕಾಲದಿಂದ ಅಪೇಕ್ಷಿಸುತ್ತಿದ್ದ ಸ್ವದೇಶವನ್ನು ಹೊಕ್ಕನು. ಕಾಶ್ಮೀರನಾಡಿನ ಸಿರಿಸೌಭಾಗ್ಯಗಳನ್ನು ಕಂಡು ಹರಿಬಲ ಮುಂತಾದ ಖೇಚರನಾಯಕರು ಬೆರಗಾದರು. ಅರಗುವರನು ಕನಕಪುರದೊತ್ತಿನಲ್ಲಿ ಬೀಡುಬಿಟ್ಟು ತನ್ನ ಸೇವಕಿಯಾದ ಪ್ರಜ್ಞಪ್ತಿವಿದ್ಯೆಯನ್ನು

ಕಳುಹಿಕೊಟ್ಟು ತನ್ನ ತಂದೆಗೆ ತನ್ನಾಗಮನವಾರ್ತೆಯನ್ನು ತಿಳುಹುವಂತೆ ಹೇಳಿದನು. ಪ್ರಜ್ಞಪ್ತಿ ಪಾಠಕನ ವೇಷವನ್ನು ತಾಳಿ ಜಿನಚಂದ್ರನ ಸಭೆಗೆಯ್ದಿ ಅರಸನ ಮುಂಗಡೆಯಲ್ಲಿ ಹಸ್ತವೆತ್ತಿ ಜ್ಞಾನಚಂದ್ರನ ಗುಣಕಥನವನ್ನು ಮಾಡಿದನು. ಜಿನಚಂದ್ರನಿಗೆ ಪುತ್ರಶೋಕ ಮರುಕೊಳಿಸಿ ಮೂರ್ಛೆಗೆ ಸಂದನು. ಜಿನಚಂದ್ರನ ಶೋಚನೀಯಸ್ಥಿತಿಯನ್ನು ಕಂಡು ಅವನಲ್ಲಿ ಮರುಕಗೊಂಡ ಪ್ರಜ್ಞಪ್ತಿ ಪುತ್ರಾಗಮನವಾರ್ತೆಯನ್ನು ಸವಿವರವಾಗಿ ಹೇಳಿತು. ಮೇಘರವವನ್ನು ಕೇಳಿದ ನವಿಲಿನಂತೆ ಜಿನಚಂದ್ರನು ಎಚ್ಚತ್ತು ಹಿಗ್ಗಿದನು. ಮಂತ್ರಿಯನ್ನು ಕರೆದು ಪುತ್ರನನ್ನು ಸ್ವಾಗತಿಸಲು ಸಕಲಸಿದ್ಧತೆಗಳನ್ನೆಸಗುವಂತೆ ತಿಳಿಸಿದನು. ಪಟ್ಟಣವು ಶೃಂಗರಿಸಲ್ಪಟ್ಟಿತು. ವಾದ್ಯಾದಿ ಸಕಲವೈಭವಗಳು ಕೂಡಿ ನಿಂತುವು. ಜಿನಚಂದ್ರನು ವಿಂಧ್ಯ ಗಿರಿಯೆಂಬ ಕರಿಯನ್ನೇರಿ ಸಕಲಸನ್ನಾಹದೊಡನೆ ಪುರದ ಮುಂದಿನ ಬಯಲೊಳಗೆ ಪುತ್ರನನ್ನಿದಿರ್ಗೊಂಡನು. ಒಂದುಸಾವಿರ ವರ್ಷಗಳ ನಂತರದ ಪಿತಾ-ಪುತ್ರ ಪುನರ್ಮಿಲನವು ಪ್ರೇಮನಿರ್ಭರತೆಯಿಂದ ಮೆರೆಯಿತು. ಅರಸನು ಮಗನನ್ನು ತ್ರಿಜಗದ್ಭೂಷಣವೆಂಬ ಆನೆ ಯನ್ನೇರಿಸಿ, ಉಚಿತಗೌರವಗಳೊಡನೆ ಹರಿಬಲಾದಿಗಳನ್ನೊಡಗೊಂಡು ಸೊಸೆಯರನ್ನಾದರ ದಿಂದ ಸ್ವಾಗತಿಸಿ ಪುರಪ್ರವೇಶವನ್ನೆಸಗಿದನು. ಪುರಜನರು ಸಂಭ್ರಮದಿಂದ ಇದಿರ್ಗೊಳಲು ಕಾದಿದ್ದರು. ಮೆರವಣಿಗೆ ಪಟ್ಟಣದ ಬೀದಿಗಳಲ್ಲಿ ಹಾದು ಬರಲು ಇಕ್ಕಡೆಯ ಸೌಧವನ್ನೇರ್ದ ತರುಣೀಮಣಿಗಳು ತಮತಮಗೆ ಜ್ಞಾನಚಂದ್ರ ಹರಿಬಲಾದಿಗಳ ವಿಷಯ ಪ್ರಸ್ತಾವಿಸುತ್ತಿ ದ್ದರು. ಅರಮನೆಯ ಮುಂದೆ ಜ್ಞಾನಚಂದ್ರನು ಉತ್ತಮಗಜವನ್ನಿಳಿದು ಸಭಾಸದನವನ್ನು ಹೊಕ್ಕು ಭದ್ರಾಸನದಲ್ಲಿ ಕುಳಿತುಕೊಂಡನು. ಅತಿಥಿಗಳ ಸತ್ಕಾರೋಪಚಾರಗಳು ಯಥಾ ಯೋಗ್ಯವಾಗಿ ನಡೆದುವು. ಜಿನಚಂದ್ರನು ಅಭ್ಯಾಗತರಿಗೆ ಪಡಿಬಿಡಾರಗಳನಿತ್ತು ಅರಮನೆ ಯನ್ನು ಹೊಕ್ಕು ಲಕ್ಷ್ಮೀಮಂಟಪದಲ್ಲಿ ಹರಿಧನು ಮೊದಲಾದ ನಂಟರೊಡಗೂಡಿ ಸುಖ ಸಂಕಥಾಲಾಪದಲ್ಲಿರಲು ಬಂದೆರಗಿದ ಸೊಸೆಯರನ್ನು ಹಿಡಿದೆತ್ತಿ ಹರಸಿದನು. ಜ್ಞಾನಚಂದ್ರ ನೆದ್ದು ತಾಯನ್ನು ಕಾಣುವ ತವಕದಿಂದ ಭಾಮಿನಿಯರ ಸಹಿತ ಮಾತೆಯರಮನೆಯನ್ನು ಹೊಕ್ಕನು. ಕಾಲ್ಗೆರಗಿದ ಮಗನನ್ನೆತ್ತಿಕೊಂಡು ಎಳೆಹಸುಳೆಯಂತೆ ತೂಪಿರಿದು ಮುಂಡಾಡಿ ದಳು ಶ್ರೀಕಾಂತಾದೇವಿ. ಕಾಣಿಕೆಯಿತ್ತು ನಮಿಸಿದ ತರುಣಿಯರನ್ನು ಮನೆಗೆ ಬಂದ ಮಹಾ ಲಕ್ಷ್ಮಿಯರೆಂದೇ ಭಾವಿಸಿ ಹರಸಿ ಆದರಿಸಿ ಬಳಿಯಲ್ಲಿ ಕುಳ್ಳಿರಿಸಿಕೊಂಡು ಮಗನ ಮತ್ತು ಸೊಸೆಯಂದಿರ ಮೊಗವನ್ನು ನೋಡುತ್ತಾ ಸಂತಸದ ಕಡಲಲ್ಲಿ ಓಲಾಡಿದಳು. ಅಳಿಯನ ಮನೆಯಲ್ಲಿ ಕೆಲವು ದಿನ ಕಳೆದ ನಂತರ ದಿವಿಚರ ಭೂಚರನೃಪರು ಸ್ವನಗರಿಗೆ ತೆರಳಿದರು.



## 22. ಮುನಿನಿಂದೆ.

**ಒಂ**ದಾನೊಂದು ಹಗಲು ಜಿನಚಂದ್ರನು ಪುತ್ರಸಮೇತನಾಗಿ ಓಲಗಗೊಟ್ಟಿದ್ದನು. ಭೂಭುಜರು ನೆರೆದು ಬಂದು ಅರಸನನ್ನು ಕಂಡು ನಮಸ್ಕರಿಸಿ ಸಾಲಾಗಿ ನಿಂತಿದ್ದರು. ಅಷ್ಟರಲ್ಲಿ ವನಪಾಲಕನೋರ್ವನೈತಂದು ಫಲಪುಷ್ಪಗಳನ್ನು ಕಾಣಿಕೆಯಿತ್ತು, "ಜೀಯ! ನಮ್ಮೂರ ಬನದೊಳಗೆ ಜಯ-ವಿಜಯರೆಂಬನುಪಮ ಕೇವಲಿಗಳು ಗಂಧಕುಟಿಗಳಲ್ಲಿ ವಿರಾಜಮಾನರಾಗಿ ಬಂದಿರುವರು" ಎಂದು ಬಿನ್ನವಿಸಿದನು. ಜಿನಚಂದ್ರ ಹರಿಪೀಠದಿಂದೆದ್ದು 'ಸಪ್ತಪರಮಸ್ಥಾನಗಳು ದೊರೆಕೊಳಲೆ'ಂದು ಏಳಡಿ ನಡೆದು ಭಕ್ತಿಭರದಿಂದ ಸಾಷ್ಟಾಂಗವೆರಗಿದನು. ಒಸಗೆವೇಳಿದನಿಗೆ ಉಡುಗೊರೆಯಿತ್ತು 'ಕೇವಲಿದರ್ಶನಾಕಾಂಕ್ಷಿಗಳು ನೆರೆದು ಬರಲೆ'ಂದು ಆನಂದಭೇರಿಯನ್ನು ಹೊಯ್ಸಿದನು. ಬಂಧುವರ್ಗ ಪುರಪರಿಜನರನ್ನೊಡಗೊಂಡು ವನಕಾಗಿ ನಡೆದು ಬಂದು ದ್ವಾರದಲ್ಲಿಳಿದು ಗಂಧಕುಟಿಯನ್ನು ಮೂರುಬಾರಿ ಬಲವಂದು ಕೇವಲಿಗಳಿಗೆರಗಿ ಮನುಜಕೋಷ್ಠದಲ್ಲಿ ಕುಳಿತುಕೊಂಡನು. ಕೆಲಹೊತ್ತು ಜಿನರ ದಿವ್ಯಾಂಗವನ್ನು ನೋಡುತ್ತಿದ್ದು, ಬಳಿಕೆದ್ದು ಧರ್ಮದಿರವನ್ನು ಕೇಳಿ 'ಪ್ರಭೋ! ಕರ್ಮದ ಬಲೆಯಲ್ಲಿ ಸಿಲುಕಿ ತೊಳಲಿದ ನನ್ನ ಪೂರ್ವಭವವನ್ನು ನಿರವಿಸಿರೆ'ನಲು ಮೃದುಗಂಭೀರಸ್ವರದಿಂದ ಜಿನಪತಿಗಳಿಂತೆಂದರು—

ಸುರಗಿರಿಯ ತೆಂಕಲ್ಗೆ ಭರತಾರ್ಯಖಂಡ ಮಧ್ಯದಲ್ಲಿ ಮೆರೆವ ಗಂಧರ್ವದೇಶವಿಹುದು. ಅದರಲ್ಲಿ ಒಪ್ಪುವ ಶೈಲಪುರದಲ್ಲಿ ಅಜಿತಂಜಯ ಮಹಾರಾಜನು ಪ್ರಾಣೇಶ್ವರಿ ರೂಪಿಣಿಯೊಡನೆ ಸಕಲಭೂಪಾಲರಿಂದೋಲೈಸಿಕೊಂಡು ರಾಜ್ಯಭಾರ ಮಾಡುತ್ತಿದ್ದನು. ಅವರಲ್ಲುದಿಸಿದ ಸುಪುತ್ರ ಜಿತಶತ್ರು.

ಅಜಿತಂಜಯನೊಂದಿರುಳು ಸೆಜ್ಜೆವನೆಯಲ್ಲಿ ಪವಡಿಸಿದ್ದು ಬೆಳಗಪ್ಪ ಜಾವದಲ್ಲಿ ಕಲ್ಪವೃಕ್ಷ ಮನೆಬಾಗಿಲಿಗೈತಂದು ಫಲಕೊಡದೆ ಮರಳಿಪೋದ ದುಃಸ್ವಪ್ನವನ್ನು ಕಂಡು ದಿಗಿಲನೆಚ್ಚತ್ತು ಪಂಚನಮಸ್ಕಾರವನ್ನು ಉಚ್ಚರಿಸುತ್ತಾ ಇರುಳನ್ನು ಕಳೆದು ಉದಯದೊಳೆದ್ದು ಮಜ್ಜನಾನಂತರ ಜಿನಪತಿಗೆ ಅಭಿಷೇಕ ಪೂಜೆಯನ್ನೂ, ಮುನಿಗಳಿಗೆ ಅನ್ನದಾನವನ್ನೂ ಎಸಗಿ ತುಷ್ಟನಾದನು. ದುಃಸ್ವಪ್ನಜನಿತಫಲವು ಕೆಡಲೆಂದು ಶಾಂತಿಕ ಪೌಷ್ಟಿಕಗಳನ್ನೆಸಗುತ್ತಿದ್ದನು. ಇಂತಿರಲೊಂದು ದಿನ ಮಾಸೋಪವಾಸದ ಪಾರಣೆಗಾಗಿ 'ಪ್ರಿಯಧರ್ಮ'ರೆಂಬ ಮುನಿಗಳು ಭ್ರಾಮರಿಯಿಟ್ಟು ಬರುತ್ತಿರಲು ಕರುಮಾಡವೇರಿರ್ದ ರೂಪಿಣಿ ಅವರನ್ನು ಕಂಡು ರೇಗಿ ಇಂತೆಂದು ನಿಂದಿಸಿದಳು—

ತನ್ನ ಹೆಂಡತಿ-ಮಕ್ಕಳನ್ನು ಸಲಹಲಾರದ ಈ ಪಾಪಿಷ್ಠನು ಸನ್ಯಾಸವನ್ನು ಸ್ವೀಕರಿಸಿ, ಮನೆಮನೆಗೆ ತಿರುಗಿ ಉಳಿದವರನ್ನೂ ತನ್ನಂತೆ ಮಾಡುತ್ತಿರುವನು. 'ಮಾರಸುಖಕೆ ಭಂಗವನ್ನು ತಂದೊಡ್ಡುವ ವೈರಿ ಈತನು' ಎಂದವಳೆ ಹೆಬ್ಬಾಗಿಲ ಕದವನ್ನಿಕ್ಕಲು, ಪ್ರಿಯಧರ್ಮರು

ಭ್ರಾಮರಿಯನ್ನು ಮುರಿದು ಹಿಂದಿರುಗಿದರು. ದಾದಿಯ ಮುಖದಿಂದ ಈ ವಾರ್ತೆಯನ್ನು ತಿಳಿದ ಅಜಿತಂಜಯನು ತನಗೆ ಮಡದಿಯ ಪಾಪವಾಸನೆಯೆ ನಿರ್ವೇಗಕಾರಣವಾಗೆ, ಮಗ ಜಿತಶತ್ರುವನ್ನು ಬಲವಂತದಿಂದ ರಾಜ್ಯದಲ್ಲಿ ನಿಲ್ಲಿಸಲು ಯತ್ನಿಸಿದರೂ ಆತನೊಪ್ಪದೆ ತನ್ನನ್ನೇ ಅನುಸರಿಸಲು, ತನ್ನ ತಮ್ಮನಾದ ಅಪರಾಜಿತನಿಗೆ ರಾಜ್ಯವನ್ನಿತ್ತು ಪುತ್ರನೊಡಗೂಡಿ ಜೈನೀಯದೀಕ್ಷೆಯನ್ನಾಂತು ತಪಸ್ಸನ್ನೆಸಗುತ್ತಾ ತಿಂಗಳ ಆಯುಷ್ಯ ಉಂಟೆಂದಾಗ ಪ್ರಾಯೋಪಗಮನ ಸನ್ಯಾಸನವನ್ನು ಧರಿಸಿ ಪರಮಾತ್ಮಧ್ಯಾನದಿಂದ ದೇಹವನ್ನುಳಿದು ಸೌಧರ್ಮಕಲ್ಪದಲ್ಲಿ ಕನಕಪ್ರಭ-ಸೂರ್ಯಪ್ರಭರೆಂಬ ದೇವತೆಗಳಾಗಿ ಜನಿಸಿದರು.

ಆ ಪಾಪಿ ರೂಪಿಣಿಯಾದರೋ ಮುನಿನಿಂದೆಯ ಘೋರಪಾಪದ ದೆಸೆಯಿಂದ ಔದುಂಬರಕೋಷ್ಠಕ್ಕೆ ಬಲಿಬಿದ್ದು, ಪುಳುಪುಟ್ಟಿ ಆರುತಿಂಗಳು ನವೆಯುತ್ತ ದುಷ್ಕರ್ಮವಶದಿಂದ ಮನೆಯಲ್ಲಿದ್ದ ಬೆಂಕಿಗೆ ಬಲಿಯಾಗಿ ಸತ್ತು ಕಾಳಿಂದಿಯಲ್ಲಿ ಮೀನಾಗಿ ಪುಟ್ಟಿ ಧೀವರನ ಬಲೆಗೆ ಆಹುತಿಗೊಂಡು, ಕತ್ತೆಯಾಗಿ ಜನಿಸಿ ಸುರೆಹೊತ್ತು ಗಾಯಗೊಂಡು ನರಳಿ ಮಡಿದು ಇಂತು ಜನ್ಮ-ಸಾವುಗಳ ಮಧ್ಯೆ ಹಲವು ಭವಗಳಲ್ಲಿ ತೊಳಲಿ ಕೊನೆಗೊಮ್ಮೆ ವಿಂಧ್ಯಾಟವಿಯೊಳಗೆ ಹೆಣ್ಣಾನೆಯಾಗಿ ಹುಟ್ಟಿದಳು.

ಜನ್ಮಾಂತರ ಋಣಾನುಬಂಧವನ್ನಾರು ಬಲ್ಲರು ! ಸೌಧರ್ಮದಲ್ಲುದಿಸಿದ್ದ ಕನಕಪ್ರಭ ಸೂರ್ಯಪ್ರಭರು ಸ್ವರ್ಗೀಯ ಸುಖಭಾಗ್ಯಗಳಿಗಚ್ಚರಿವಟ್ಟು ಜಿನಧರ್ಮದ ಮಹಿಮೆಯನ್ನು ಹೊಗಳುತ್ತ ಜನ್ಮಜನ್ಮಾಂತರಗಳಲ್ಲಿ ಜೈನದೀಕ್ಷೆ ದೊರಕೊಳ್ಳುವಂತೆ 'ಮೊದಲಾಗಿ ಮನುಷ್ಯ ಭವದಲ್ಲಿ ಹುಟ್ಟಿದವನನ್ನು ಇನ್ನೊಬ್ಬನು ಬೋಧಿಸಬೇಕೆ'ಂದು ಭಾಷೆಯನ್ನು ನುಡಿದು, ಸುರಶೈಲಕೆ ನಡೆದು ಅರುಹನನ್ನು ಪೂಜಿಸಿ ಮರಳುತ್ತಿರುವಾಗ ರತ್ನವಿಮಾನವು ಒಂದು ಠಾವಿನಲ್ಲಿ ಕೀಲಿಸಿ ನಿಂತುದನ್ನು ಕಂಡು ಕೆಳಗೆ ನೋಡಲು ಅಡವಿಯೊಳಗಿನ ಹಳದು ಕರಿಣಿಯನ್ನು ಕಂಡರು. ಭೀಕರ ಅಡವಿಯನ್ನು ಹೊಕ್ಕು ಕರಿಣಿಯ ಮೇಲೆ ಕರುಣೆಗೊಂಡು ಮುನಿನಿಂದಾಫಲದಿಂದ ದೊರಕಿದ ಭವಪರಂಪರೆಯ ಕಷ್ಟಗಳನ್ನು ಆ ಆನೆಗೆ ತಿಳಿಯ ಹೇಳಲು ಅದಕ್ಕೆ ಜಾತಿಸ್ಮರಣೆ ಪುಟ್ಟಿದುದು. ಭವದುಃಖವನ್ನು ನೆನೆದು ಕಣ್ಣೀರಿಡುತ್ತಿದ್ದ ಆನೆಗೆ ಸದ್ಧರ್ಮೋಪದೇಶಗೈದು ಪಂಚಾಣುವ್ರತವನ್ನಿತ್ತು ಸುರರೀರ್ವರೂ ತೆರಳಿದರು. ಆ ಕರಿಣಿಯಾದರೋ ಹಿಡಿದ ಶ್ರಾವಕವ್ರತದಲ್ಲಿ ಚರಿಸುತ್ತಾ ಕೊನೆಕೊಂಬುಗಳನ್ನು ಮುರಿದುದಿಲ್ಲ; ಪ್ರಾಸುಕಜಲವನ್ನೆ ಸೇವಿಸುತ್ತಿದ್ದುದು. ಪಂಚಪದವನ್ನು ಬಿಡದೆ ಧ್ಯಾನಿಸುತ್ತಿದ್ದು ಶಾಂತಮನದಿಂದ ಮಡಿದು ಸೌಧರ್ಮಕಲ್ಪದಲ್ಲೆ ಕೀರ್ತಿಮತಿದೇವಿಯಾಗಿ ಜನಿಸಿ ಪತಿಪುತ್ರರನ್ನು ಕೂಡಿ ಮುದವಡೆಯಿತು.

ಮಗಧದೇಶದ ರಾಜಗೃಹದಲ್ಲಿ ಪುರುಷೋತ್ತಮ ರಾಜ; ಅನಂತಮತಿ ರಾಣಿ. ಇವರ ಬಸಿರಲ್ಲಿ ಕನಕಪ್ರಭದೇವನು ಅತಿವೀರ್ಯನೆಂಬ ಹೆಸರಿನಿಂದ ಜನ್ಮತಾಳಿ ಪ್ರಸಿದ್ಧನಾದನು. ಅತ್ತ ಚಾಂಪೇಯದೇಶದ ಜಯವರ್ಮನಿಗೆ ಕೀರ್ತಿಮತಿದೇವಿಯು ಮಗಳಾಗಿ ಜನಿಸಿ

ಸುನಂದೆಯೆಂಬ ಹೆಸರಿನಿಂದ ಮೆರೆದಳು. ಜನ್ಮಾಂತರಸಂಬಂಧ ಇಲ್ಲಿ ಬಳೆದು ಅತಿವೀರ್ಯ ಸುನಂದೆಯರ ದಾಂಪತ್ಯ ಕೈಗೂಡಿದುದು.

## 23. ಸೂರ್ಯಪ್ರಭನ ಉಪದೇಶ.

ಅತಿವೀರ್ಯನೊಂದುದಿನ ಮಡದಿಸುನಂದೆಯೊಡಗೂಡಿ ಜಲಕ್ರೀಡೆ-ವನಕ್ರೀಡೆಗಳಲ್ಲಿ ತಣಿದು ಎಳಲತೆವನೆಯಲ್ಲಿ ವಿಶ್ರಮಿಸುತ್ತಿರಲು ಅರಸಿ ಆಳಿಯರೊಡಗೂಡಿ ವನದಲ್ಲೊಂದೆಡೆ ವಿಹರಿಸುತ್ತಿದ್ದಳು. ಅತ್ತ ಸುರಲೋಕದಲ್ಲಿದ್ದ ಜಿತಶತ್ರುಚರ ಸೂರ್ಯಪ್ರಭದೇವನು ಅತಿ ವೀರ್ಯನಿಗೆ ಆತನ ಹಿಂದಣಭವದಲ್ಲಿ ತಾನಿತ್ತ ಪ್ರತಿಜ್ಞೆಯನ್ನು ನೆನೆದು, ಅವನು ಒರಗಿದ್ದ ವನಕಾಗಿ ಬಂದು ಹೆಬ್ಬುಲಿಯಾಕಾರವನ್ನು ತಾಳಿ, ಸುನಂದೆಯ ಬಳಿಗೈದಿ ಕೊರಳನ್ನಗಿದು ರಕ್ತವನ್ನು ಹೀರುತ್ತಿರಲಾಗಿ, ಸಖೀಜನದ ಬೊಬ್ಬೆಯನ್ನು ಕೇಳಿ ಅತಿವೀರ್ಯನೆಚ್ಚತ್ತೈ ತಂದು ಮಡದಿಯ ಕರುಣಾಮಯ ದುಃಸ್ಥಿತಿಯನ್ನು ಕಂಡು ಕಳಕಳಿಸಿ ಹುಲಿಯನ್ನಟ್ಟಲು, ಅದು ಕೋಪದಿಂದ ಘರ್ಜಿಸಿ ಆತನ ಮೇಲೆರಗಿದುದು. ಅತಿವೀರ್ಯನು ಕತ್ತಿಯನ್ನು ಹಿರಿದು ಹುಲಿಯನ್ನು ಕೆಡಹಿದನು. ಆ ಕಡೆ ಮಡಿದು ಬಿದ್ದ ಮಡದಿಯ ದೇಹವನ್ನು ನೊಣಗಳು ಮುತ್ತುತ್ತಿರುವುದನ್ನು ಕಂಡ ಅತಿವೀರ್ಯನಲ್ಲಿ ಜುಗುಪ್ಸೆ ತಲೋರಿದುದು; 'ಕಡು ಹೊಲಸಿನ ನಿಡುಮನೆಗೆ ಒಡಲಾದ ನಾರೀಜನಗಳಿಗೆ ಸೋತು ಮಡೆಯನಾಗಿರ್ದೆ' ನೆಂದು ವೈರಾಗ್ಯವನ್ನು ತಾಳಿ 'ಜೈನೀಯದೀಕ್ಷೆ ಕೈಗೊಂಡಲ್ಲದಾಗದೆ'ಂಬ ನಿರ್ಧಾರಕ್ಕೆ ಆತನು ಬಂದನು. ತನ್ನ ಪ್ರತಿಜ್ಞೆ ಕೈಗೂಡಿತೆಂದು ಮುದಿತಮಾನಸನಾಗಿ ಸೂರ್ಯಪ್ರಭನು ಮಾಯೆಯನ್ನು ತೊಲಗಿಸಿ ಸುನಂದೆಯೊಡಗೂಡಿ ಪ್ರತ್ಯಕ್ಷನಾದನು. ಹಿಂದಣ ಭಾಷೆಯನ್ನು ಜ್ಞಾಪಿಸಿ ವೈರಾಗ್ಯವನ್ನು ಸ್ಥಿರಪಡಿಸಿದನು. ಅತಿವೀರ್ಯನು 'ಯಮಧರ' ಪಾದಮೂಲದಲ್ಲಿ ದೀಕ್ಷೆಯನ್ನಾಂತನು. ಸುನಂದೆ ಜಿನಮತಿಯಜ್ಜೀರ ಕೈಯಲ್ಲಿ ದೀಕ್ಷೆಯನ್ನಾಂತಳು. ಸೂರ್ಯ ಪ್ರಭನು ಸ್ವರ್ಗಕ್ಕೆ ಮರಳಿದವನು ಕೆಲಗಾಲ ಕಳೆಯಲು ಆಯುಷ್ಯಾವಸಾನದಲ್ಲಿ ಸ್ವರ್ಗ ಲೋಕದಿಂದ ಚ್ಯುತನಾಗಿ ಹಿಂದಣ ಅನಂತಮತಿಯುದರದಲ್ಲಿ ಅತಿಬಲನಾಗಿ ಜನಿಸಿದನು. ಅತಿವೀರ್ಯ ಮುನಿಗಳು ಇದನ್ನು ತಿಳಿದು ತನ್ನ ತಮ್ಮನಲ್ಲಿಗೆ ಬಂದು ಪೂರ್ವಭವವೃತ್ತಾಂತ ವನ್ನರುಹಲು ಅತಿಬಲನು ಅದೇ ಅತಿವೀರ್ಯನ ಕೈಯಿಂದ ದೀಕ್ಷೆಯನ್ನಾಂತನು. ಈ ಮುನಿಗಳೀರ್ವರೂ ಹಲವು ಕಾಲಾನಂತರ ಮಡಿದು ಈಶಾನಕಲ್ಪದಲ್ಲಿ ಮಣಿಚೂಳ-ರತ್ನ ಚೂಳರೆಂಬ ಹೆಸರಿನಿಂದ ದೇವತೆಗಳಾಗಿ ಜನಿಸಿದರು. ಸುನಂದವತ್ಯಾರ್ಯಿಕೆಯೂ ಆಯು ಷ್ಯಾವಸಾನದಲ್ಲಿ ಅದೇ ಸ್ವರ್ಗದಲ್ಲಿ 'ಕುಸುಮಚೂಲ'ನೆಂಬಭಿದಾನದಿಂದ ದೇವನಾಗಿ ಜನಿಸಿ ಅವರನ್ನು ಕ್ಷಣಕಾಲವಗಲದೆ ಸುಖದಿಂದಿದ್ದಳು.

ಅವಂತಿ ಜನಪದದೊಳಗೆ ಉಜ್ಜೈನಿಯೆಂಬುದು ಪಟ್ಟಣ. ಅದಕ್ಕೊಡೆಯ ನಾಗಶರ್ಮ; ಆತನ ಮಡದಿ ನಾಗಲತೆ. ಇವಳಲ್ಲಿ ಜಿತಶತ್ರುಚರ ರತ್ನಚೂಲನು 'ವರಸೇನ'ನೆಂಬ ಕುವರ

ನಾಗಿಯೂ ರೂಪಿಣಿಚರ ಕುಸುಮಚೂಲನು 'ಸುರಮಂಜರಿ'ಯೆಂಬ ಕುವರಿಯಾಗಿಯೂ ಹುಟ್ಟಿದರು. ಕೌಶಂಬಿಪುರದ ಜಿನಪಾಲನಿಗೆ ಜಿನದತ್ತೆಯೆಂಬವಳಲ್ಲಿ ಹುಟ್ಟಿದ ಜಿನದತ್ತ ನೊಡನೆ ಸುರಮಂಜರಿಯ ವಿವಾಹವಾಯಿತು. ಇಂತಿರಲು ಸ್ವರ್ಗದಲ್ಲಿದ್ದ ಮಣಿಚೂಲ ದೇವನು ಅವಧಿಜ್ಞಾನದಿಂದ ವರಸೇನನ ಭವವನ್ನು ತಿಳಿದು ಸಂಸಾರಬಂಧನದಲ್ಲಿ ತೊಳಲುವ ಆತನನ್ನೆಚ್ಚರಿಸಲು ಉಜ್ಜೈನಿಗೆ ಬಂದನು.

ವರಸೇನನು ಗರುಡವಿದ್ಯಾಚಾರ್ಯನು. ಆದ್ದರಿಂದ ಮಣಿಚೂಲನು ಕೊರವನ ರೂಪಾಂತು 'ಗಾರುಡಿಗರರಸನೆ'ಂದೋದಿಸಿಕೊಳುತ ಸಭೆಗೆ ನಡೆತಂದನು. ಸಭಾಭವನದಲ್ಲಿ ನಾಗಶರ್ಮ ದೊರೆಯ ಮುಂಗಡೆ ಪೇಟಿಕೆಗಳನ್ನು ಮಡಗಿ 'ಜನನಾಥ ! ಛಪ್ಪನ್ನದೇಶ ಗಳನ್ನು ಸುತ್ತಾಡಿ ಬಂದ ನಾನು ನಿನ್ನ ಕುಮಾರನು ಉರಗವಿದ್ಯೆಯಲ್ಲಿ ದಕ್ಷನೆಂದು ತಿಳಿದು ಆತನೊಡನೆ ಸ್ಪರ್ಧಿಸುವ ಅಪೇಕ್ಷೆಯಿಂದ ಬಂದಿರುವೆ'ನೆನಲು ರಾಜನು ಕುಮಾರನಿಗೆ ಕರೆ ಕಳುಹಿದನು. ವರಸೇನನು ಬಂದು ಕೊರವ ಫಣಿಕುಂಡಲನನ್ನು ಕಂಡು ಪಂಥಕ್ಕೆ ತೊಡಗಿ ನೆರೆದ ಸಭಾಸದರ ಮುಂದೆ ತಡೆ, ದೃಗ್ಬಂಧ, ವಿಷವೈದ್ಯ ಮೊದಲಾದ ಉರಗವಿದ್ಯಾ ಪ್ರದರ್ಶನವನ್ನೆಸಗಿ ಕೊನೆಗೆ ಫಣಿಕುಂಡಲನು ಬಿಟ್ಟ ಸಾಸಿರಪೆಡೆಯ ಕೃಷ್ಣಾಹಿಯ ವಿಷ ಜ್ವಾಲೆಗೆ ತುತ್ತಾಗಿ ಮೂರ್ಛೆಗೆ ಸಂದನು. ಮಗನು ಮೃತಪಟ್ಟನೆಂದೇ ಬಗೆದು ನಾಗ ಶರ್ಮನು ಹಲವು ಹಂಬಲಿಸಿ 'ಕೊರವ ! ಸುತನಲ್ಲಿ ಸೈರಿಸು; ಪ್ರತಿವಿದ್ಯೆಯರಿಯದೆ ಮತಿಹೀನನೆಸಗಿದ ಅಪರಾಧವನ್ನು ಮರೆತು ವಿಷವನ್ನು ಕಳೆದು ಪುತ್ರನನ್ನುಳಿಸು, ನಿನಗೆ ಹಲವು ದೇಶಗಳನ್ನು ಕೊಡುವೆನೆ'ನಲು ಫಣಿಕುಂಡಲನು 'ರಾಜಾ ! ಈ ವಿಷವನ್ನು ಪರಿ ಹರಿಸುವರೆ ಎನ್ನ ಮಂತ್ರಶಕ್ತಿಯೂ ಅಳವಲ್ಲ. ಆದರೆ ಜಿನದೀಕ್ಷೆಯನು ತಾಳುವೆನೆಂಬವಗೆ ಯಾವೊಂದು ವಿಷವೂ ಎದುರಲ್ಲ' ಎನಲು, ನಾಗಶರ್ಮನು ಮಗನುಳಿದೊಡೆ ಸಾಕೆಂದು ನುಡಿದನು. ಕೊರವನು ತನ್ನ ಉಪಾಯ ಫಲಿಸಿತೆಂದು ಮುದಿತಮಾನಸನಾಗಿ ವಿಷಾಪಹಾರ ಮಂತ್ರವನ್ನು ಚಿಂತಿಸಲು ವರಸೇನನು ಮೂರ್ಛೆ ತಿಳಿದೆಚ್ಚತ್ತನು. ಕುಮಾರನು ಕೊರವನ ಸಾಮರ್ಥ್ಯಕೆ ಬೆರಗಾಗಿ 'ನೀನಾರೆ'ನಲು, ಕೊರವನು 'ಹಿಂದೆ ನಾಲ್ಕನೆ ಭವದಲ್ಲಿ ಅಜಿತಂ ಜಯನು ನಾನಾಗಿದ್ದಾಗ ನನ್ನ ಪುತ್ರ ಜಿತಶತ್ರು ನೀನಾಗಿದ್ದೆ. ಅಲ್ಲಿಂದ ಮುಂದಿನ ಭವಾಂ ತರಗಳನ್ನು ಜ್ಞಾಪಿಸಿಕೊ' ಎನಲು ಜಾತಿಸ್ಮರಣೆ ತನ್ನರಿವಿಗೆ ಕೈಗನ್ನಡಿಯಾದುದು; ನಿರ್ವೇಗ ವೊಳೆತುದು. ತಡೆಯೇನು ? ಜನನೀ-ಜನಕರನ್ನು ಬೀಳ್ಕೊಂಡು ಧರ್ಮಸೇನರ ಬಳಿಯಲ್ಲಿ ದೀಕ್ಷೆಯನ್ನಾಂತನು. ಕರ್ತವ್ಯಪೂರ್ತಿಯಿಂದುಬ್ಬಿದ ಮಣಿಚೂಲನು ದಿವಕ್ಕೆ ತೆರಳಿದನು. ಕೊನೆಗಾಲದಲ್ಲಿ ಸ್ವರ್ಲೋಕದಿಂದಿಳಿತಂದು ಪುತ್ರನಿರ್ವೇಗಾನಂತರ ದೀಕ್ಷೆಯನಾಂತ ನಾಗ ಶರ್ಮನ ಗದ್ದುಗೆಯನ್ನೇರಿದ್ದ ಆತನ ತಮ್ಮ ಜಯವರ್ಮನ ಪಟ್ಟದ ರಾಣಿ ರೋಹಿಣಿದೇವಿ ಯುದರದಲ್ಲಿ 'ಪದ್ಮರಥ'ನೆಂಬ ಕುಮಾರನಾಗಿ ಜನಿಸಿದನು. ಕೈಹಿಡಿದ ಸೌಭಾಗ್ಯವತಿ ಪುಷ್ಪಾವತಿಯೊಡನೆ ಪದ್ಮರಥನು ಬಹುಭೋಗಭಾಗ್ಯಗಳನ್ನನುಭವಿಸುತಿದ್ದನು.



## 24. ವರಸೇನಮುನಿಯುನ್ನು ಬೇಡರು ಹಿಡಿದುದು.

ವಿಂಧ್ಯಾಟವಿಯೊಳಗೆ ಬೇಡರ ದೊರೆ ಶೂರದತ್ತನು ಕ್ರೂರಕರ್ಮಿಯಾಗಿ ಜನರಿಗೆ ಭೀತಿಯನ್ನು ಹುಟ್ಟಿಸಿದ್ದನು. ಅವನ ಪಡೆಯೆಲ್ಲ ಅಡವಿಯನ್ನಾಕ್ರಮಿಸಿ ದಾರಿಹೋಕರನ್ನು ಸೂರೆ ಮಾಡಿ ಬಂಗಪಡಿಸುತ್ತಿದ್ದುದು. ಇಂತಿರಲಾಗೊಂದು ದಿನ ಕೌಶಂಬಿ ಪಟ್ಟಣದಲ್ಲಿದ್ದ ತನ್ನ ಮಗಳು ಸುರಮಂಜರಿಯನ್ನು ಕಾಣಬೇಕೆಂಬ ಬಯಕೆಯಿಂದ ಉಜ್ಜೈನಿಯಿಂದ ಹೊರಟ ನಾಗಲತೆ ವಿಂಧ್ಯಾಟವಿಯೊಂದೆಡೆಯಲ್ಲಿ ಬೀಡುಬಿಟ್ಟಿದ್ದಳು. ಮಗಳಿಗಾಗಿ ಬಹುರತ್ನ ಭೂಷಣಗಳನ್ನು ಒಯ್ಯುತ್ತಿರಬಹುದೆಂದು ಭಾವಿಸಿದ ಆ ಬೇಡಪಡೆ ಅವಳನ್ನು ಕವರ್ದುದು.

ಅದೇ ಸಮಯಕ್ಕೆ ಭರತಾರ್ಯಖಂಡದಲ್ಲಿ ಸಂಚರಿಸುತ್ತಿದ್ದ ವರಸೇನಮುನಿಗಳು ತನಗುದಿಸಿದ ಅವಧಿಬೋಧದಿಂದ ಪದ್ಮರಥನ ಸ್ಥಿತಿಯನ್ನು ತಿಳಿದು ತಮ್ಮ ಹಿಂದಣಭವದ ಪ್ರತಿಜ್ಞೆಯನ್ನು ತಾನಾತನಿಗೆ ಮಾಡಬೇಕಾದ ಉಪಕಾರವನ್ನು ನೆನೆದು ಉಜ್ಜೈನಿಗೆ ಅದೇ ವಿಂಧ್ಯಾಟವೀ ಮಾರ್ಗವಾಗಿ ಬರುತ್ತಿರಲು, ಆ ಬೇಡಪಡೆ 'ಇವರನ್ನು ಇಂತು ಬಿಟ್ಟಲ್ಲಿ ತಾವು ಎಸಗಿದ ಕೃತ್ಯವು ಬಯಲಾಗದೆ ಬಿಡದೆಂದು ಅಂಜಿ ಅವರನ್ನು ಸೆರೆ ಹಿಡಿದು ತಮ್ಮ ದೊರೆಯ ಬಳಿಗೆ ಕೊಂಡೊಯ್ದರು. ಶೂರದತ್ತನು ಮುನಿಮಹಾತ್ಮೆಯನ್ನು ಭಾವಿಸಿ ಕೊಂಡನು. ಆತನಿಗೆ ಒಳ್ಳೆಯದಾಗುವ ಕಾಲ ಬಂದಿತ್ತೋ ಏನೋ ! ಅವರನ್ನು ಸೆರೆ ಹಿಡಿದ ತನ್ನವರನ್ನು ಬೈದು ಭಂಗಿಸಿ, ಅವರೊಡನೆ ಕ್ಷಮೆ ಕೇಳಿ ಬೀಳ್ಕೊಟ್ಟನು. ಹಿಂತಿರುಗುತ್ತಿದ್ದ ವರಸೇನರನ್ನು ಬೇಡರ ವಶಕ್ಕೆ ಸಿಕ್ಕಿದ್ದ ನಾಗಲತೆ ಕಂಡು ತನ್ನ ಮಗನು ತನಗೆ ನೆರವಾಗುವ ನೆಂದು ಧೈರ್ಯದಿಂದ ಪರಿಪರಿಯಾಗಿ ಬೇಡಿಕೊಂಡರೂ ಅವರು ನಿರಾಸಕ್ತರೆಂಬಂತೆ ಹೊರಟುಹೋದರು. ನಾಗಲತೆಗೆ ಮಗನಲ್ಲಿ ದ್ವೇಷವು ಮೊಳೆಯಿತು. ಕೈಸೆರೆ ಸಿಕ್ಕಿದ ಆಕೆಯನ್ನು ವನಚರರು ಶೂರದತ್ತನ ಮುಂದೆ ನಿಲ್ಲಿಸಲು ಆಕೆ 'ಆ ಪಾಪಿ ನನಗೆ ಸುತನಾಗಿ ಕಷ್ಟವನೆಸಗಿದನು. ನಿನಗೆ ಹಿತವನೆ ಮಾಡಿದನು. ನೀ ತಳುವದೆ ಸುರಗಿಯ ನೀಡು. ಖಾತಿಯ ಮಾಡುವೆನವಗೆ' ಎಂದಳು. ಶೂರದತ್ತನು ಆಕೆಗಾಗಿ ಮರುಕಪಟ್ಟನು. ಸಮಾಧಾನೋಕ್ತಿ ಯನ್ನು ನುಡಿದನು. ಸೆರೆ ಬಿಡಿಸಿ ಸೂರೆಗೊಂಡ ವಸ್ತುವಾಹನಸಹಿತ ಕೌಶಾಂಬಿಗೆ ಕಳುಹಿ ಕೊಟ್ಟನು. ವರಸೇನ ಮುನಿಗಳ ಗಾಂಭೀರ್ಯಶಮತೆಗಳು ಶಬರನಾಯಕನ ಹೃದಯ ವನ್ನು ಪರಿವರ್ತಿಸಿ ದೈವಿಕಮನೋಭಾವನೆಯನ್ನು ಸ್ಥಿರಗೊಳಿಸಿತ್ತು. ಈ ಪರಿಯಂತರ ತಾನೆಸಗಿದ ಪಾಪಕರ್ಮಕ್ಕೆ ಮರುಗಿ ವರಸೇನ ಮುನಿಗಳನ್ನು ಬೆಂಬತ್ತಿ ಅಡಿದಳಕೆರಗಿ ದೀಕ್ಷೆಯನ್ನಾಂತನು. ನರನ ನೆಲೆಯರಿತವರಾರು !

ವರಸೇನ ಮುನಿಗಳು ಶಬರನಾಯಕನನ್ನುದ್ಧರಿಸಿ ನೆಟ್ಟಗೆ ಉಜ್ಜೈನಿಗೈತಂದು ಪುರು ಜಿನವಸತಿಯಲ್ಲಿ ಪದ್ಮರಥನನ್ನು ಕಂಡು ಆತನು ಅಜಿತಂಜಯಭವದಲ್ಲಿದ್ದ ಮೊದಲ್ಗೊಂಡು ತನಗಿದ್ದ ಜನಕ-ಸಖ-ಸೋದರ-ಮಿತ್ರ-ಸೋದರರೂಪದ ಭವಾಂತರ ಸಂಬಂಧವನ್ನರುಹಿ ನಿರ್ವೇಗವನ್ನು ಮೂಡಿಸಿ ದೀಕ್ಷೆಯನ್ನಿತ್ತು ತಮ್ಮ ಪ್ರತಿಜ್ಞೆಯಂತೆ ನಡಕೊಂಡರು. ಅಲ್ಲಿಂದ

ಅವರೀರ್ವರೂ ಕೌಶಾಂಬಿಗೆ ನಡೆತಂದು ತಂಗಿ ಸುರಮಂಜರಿಯನ್ನು ಕಂಡು ಮುನಿಯನ್ನು ನಿಂದಿಸಿದ ರೂಪಿಣಿ ಮುಂತಾದ ಆಕೆಯ ಭವಾವಳಿಯನ್ನರುಹಿದರು. ಭವಕ್ಕೆ ಹೇಸಿದ ಆಕೆ ಧರ್ಮದಿರವನ್ನು ಅವರಿಂದ ತಿಳಿದು 'ಕಂತಿಕೆ' ಚಾರಿತ್ರವನ್ನಾಂತಳು. ವರಸೇನ-ಪದ್ಮರಥ-ಸುರಮಂಜರಿಯರು ಧರ್ಮಾಮೃತವನ್ನು ಕರೆವುತ್ತಾ ಅನುಪಮತಪಸ್ಸುಗಳಲ್ಲಿ ತೊಡಗಿ ಕೊನೆಯಲ್ಲಿ ಪ್ರಾಯೋಪಗಮನ ಸನ್ಯಸನವನ್ನು ತಾಳಿ ದೇಹವನೀಡಾಡಿ ಲಾಂತವಕಲ್ಪದಲ್ಲಿ ಸುರರಾಗಿ ಜನಿಸಿದರು. ದೇವಲೋಕದ ಸುಖ ಉಣುತಿರ್ದು ಪರಮಾಯುಷ್ಯದ ಕಡೆಯಲ್ಲಿ ಈ ಭರತಧರೆಯ ಕಾಶ್ಮೀರದೇಶದ ಕನಕಪುರದ ಶ್ರೀಚಂದ್ರ-ಜ್ಯೋತಿರ್ಮಾಲೆಯರಿಗೆ ಪದ್ಮರಥಚರ ಸುರನು ಬಂದು ಜಿನಚಂದ್ರನೆಂಬ ಸಮ್ಯಗ್ದೃಷ್ಟಿ ನೀನಾದೆ. ಸುರಮಂಜರಿಚರ ದೇವನು ಸುರಲೋಕದಿಂದ ಬಂದು ಶ್ರೀಕಾಂತೆಯೆಂಬ ಅರಸಿ ನಿನಗಾದಳು. ವರಸೇನಚರ ಸುರನು ಸುರಲೋಕದಿಂದಲೆ ಬಂದು ಚರಮಾಂಗನಧಿಕತೇಜಸ್ವಿ ಜ್ಞಾನಚಂದ್ರಮನೆಂಬ ತನಯನಾದನು. ಇಂತು ನೀನು ಅಜಿತಂಜಯ-ಕನಕಪ್ರಭ-ಅತಿವೀರ್ಯ-ಮಣಿಚೂಲ-ಪದ್ಮರಥ-ನಿರ್ಜರನಾಗಿ ಈಗ ಜಿನಚಂದ್ರನಾದೆ. ನಿನ್ನ ಮಡದಿ ರೂಪಿಣಿ-ಅಸಂಖ್ಯಾತತಿರ್ಯಗ್ಭವದ ಕೊನೆಯಲ್ಲಿ ಕರಿಣಿ-ಕೀರ್ತಿಮತಿ-ಸುನಂದೆ-ಕುಸುಮಚೂಲ-ಸುರಮಂಜರಿ-ಸುರನಾರಿಯರಾಗಿ ಈಗ ಶ್ರೀಕಾಂತಾದೇವಿಯಾಗಿರುವಳು. ಹಿಂದೆ ಜಿತಶತ್ರು-ಸೂರ್ಯಪ್ರಭ-ಅತಿಬಲ-ರತ್ನಚೂಳ-ವರಸೇನ-ನಿರ್ಜರನಾಗಿದ್ದವನೆ ನಿನಗಿಂದು ಜ್ಞಾನೇಂದು ಸುತನಾದನು.

ಜಯ-ವಿಜಯಕೇವಲಿಗಳಿಂದ ತನ್ನ ಈ ಪೂರ್ವಭವವೃತ್ತಾಂತವನ್ನು ಕೇಳಿದವನೆ ಜಿನಚಂದ್ರನು ವಿರಕ್ತಿತಾಳಿದನು. ಕೇವಲಿಗಳನ್ನು ಬೀಳ್ಕೊಂಡು ಅರಮನೆಗೈತಂದು ಜ್ಞಾನಚಂದ್ರನಿಗೆ ಪಟ್ಟಾಭಿಷೇಕವನ್ನೆಸಗಿ ಸಾಮ್ರಾಜ್ಯಭಾರವನ್ನಿತ್ತು ಕೇವಲಿಗಳ ಗಂಧಕುಟಿಯಲ್ಲಿ ಸಹಸ್ರದೊರೆಗಳು ಸಹವಾಗಿ ದೀಕ್ಷೆಯನ್ನಾಂತನು. ಶ್ರೀಕಾಂತಾದೇವಿಯು ಮುನಿನಿಂದೆಯಿಂದೊದಗಿದ ಘೋರಭವಪರಂಪರೆಗಳನ್ನು ಭಾವಿಸಿ, ಸ್ತ್ರೀಜನ್ಮಕ್ಕೆ ಹೇಸಿ ನಿರ್ವೇಗಗೊಂಡು, ಸೊಸೆಯಂದಿರಿಗೆ ಪತಿವ್ರತೆಯರ ಸಾರಧರ್ಮವನ್ನು ಸವಿವರವಾಗಿ ತಿಳಿಸಿ, ತನ್ನ ನಿರ್ಧಾರವನ್ನು ತಿಳಿಸಿದಳು. ತನ್ನ ಮೇಲಿನ ಪ್ರೀತ್ಯಾದರಗಳಿಂದ ಪರಿಪರಿಯಾಗಿ ಹಂಬಲಿಸಿ ಅಳುತ್ತಿದ್ದ ಸೊಸೆಯರನ್ನು ಸಮಜಾಯಿಸಿ, ಜ್ಞಾನೇಂದುವನ್ನು ಕರೆದು 'ದೀಕ್ಷೆಗೆನ್ನನು ಕಳುಹಿಕೊಡೆ'ನಲು ಕಾಲನ್ನು ಕಟ್ಟಿ ಬೇಡಿಕೊಳುತ್ತಿದ್ದ ಪುತ್ರನನ್ನು ಎಂತಾನುಂ ಒಡಂಬಡಿಸಿ ರಾಜ್ಯಪದದಲ್ಲಿ ನಿಲ್ಲಿಸಿ ಅರಮನೆಯಿಂದ ಹೊರವಂಟಳು. ಮಗನಣಿಗೊಳಿಸಿದ ಪಲ್ಲಕಿಯೇರಿ ಜಿನವಾಸಕ್ಕೈತಂದು ಮುಂದೆ ಗಂಧಕುಟಿಯನ್ನು ಹೊಕ್ಕು ಐನೂರುಮಂದಿ ಅಬಲೆಯರೊಡನೆ ದೀಕ್ಷೆಯನ್ನಾಂತಳು. ಜ್ಞಾನಚಂದ್ರನು ಜಿನಪೂಜೆಯನ್ನೆಸಗುತ್ತಾ, ಶಾಸ್ತ್ರಶ್ರವಣವನ್ನು ಮಾಡುತ್ತಾ, ಜಿನಮುನಿಗಳಿಗನ್ನದಾನವನ್ನು ಈವುತ್ತಾ ಮಾತಾಪಿತೃವಿಯೋಗದುಃಖವನ್ನು ಕಳೆದನು. ಜ್ಞಾನಚಂದ್ರನ ಉರದೊಳು ಸಿರಿದೇವಿ, ಭುಜದಲಿ ವೀರಲಕ್ಷ್ಮಿ, ಆನನದಲಿ ಶಾರದಾಂಬಿಕೆ ನೆಲಸಿರಲು ಇವರಿಗೆ ಪುರುಡಿಸಿ ಎಂಬಂತೆ ಜಸವಧು ದಶದಿಕ್ಕುಗಳನ್ನು ಸಾರಿ ಮೆರೆದಳು.



# 25. ವನಕ್ರೀಡೆ.

ಕಾಶ್ಮೀರಸಾಮ್ರಾಜ್ಯಾಧೀಶಪದವಿಯನ್ನೇರಿದ ಜ್ಞಾನಚಂದ್ರನು ಅದೊಂದುದಿನ ಜಿನರಾಜನಿಗೆ ಮಹಾಮಹಿಮೆಯನ್ನೆಸಗಿ ವನಿತಾಶಿರೋಮಣಿ ಅನುಮತಿದೇವಿಯನ್ನು ಪಟ್ಟಮಹಿಷಿಯ ಸ್ಥಾನಕ್ಕೇರಿಸಿದನು. ಸುನಂದೆ–ಸಿಂಧುದೇವಿ–ಕನಕಲತೆ–ಕಾಮಲತೆಯರಿಗೆ ಅವಳೊತ್ತಿನ ರಾಜ್ಞೀಪದವಿಯನ್ನಿತ್ತು ಗೌರವಿಸಿದನು. ಇಂತು ಸುಖಸಮ್ಮೋದದಲ್ಲಿ ಕುವರನಿರಲು 'ಯೌವನವೆಂಬ ಕರಿಗೆ ಕಬಳವಿಕ್ಕುವಂತೆ' ವಸಂತರ್ತು ಕಾಲಿಟ್ಟುದು. ಆ ವೇಳೆಯಲ್ಲೊರ್ವ ವನಪಾಲಕನು ಓಲಗಸಾಲೆಗೆ ಬಂದು ಮಾವಿನ ತಳಿರು, ತಾವರೆಯಲರು, ಕೆಂಜಾಜಿಮಲ್ಲಿಗೆಗಳನ್ನು ಕಾಣಿಕೆಯಿತ್ತು ಪೊಡಮಟ್ಟು 'ಜನಪತಿ ! ಬಿನ್ನಹ, ಚಿತ್ರಕೂಟವೆಂಬ ವನದಿ ವಸಂತರಾಜೇಂದ್ರ ವನಲಕ್ಷ್ಮೀಸಹವಾಗಿ ಬಂದು ಬೀಡುಬಿಟ್ಟಿರುವನು. ಆತನು ಸ್ಮರಚಕ್ರೇಶಗೆ ರತಿದೇವಿಸಹವಾಗಿ ಪಟ್ಟವ ಕಟ್ಟಿ ಆರಾಮಲಕ್ಷ್ಮಿಯಿಂದ ಸ್ಮರಗು ರತಿಗು ನೀರಾಜನವನ್ನೆತ್ತಿಸಿದನು' ಎಂದು ನಿವೇದಿಸಿದನು. ಜ್ಞಾನಚಂದ್ರನು ಆನಂದಭರಿತನಾಗಿ ಅನುಮತಿಯೊಡನೆ 'ದೇವಿ ! ನಾನಿಲ್ಲಿ ನಿನಗೆ ಮಹಾದೇವಿಪಟ್ಟಕಟ್ಟಲು ಅಲ್ಲಿ ವನದೊಳಗೆ ಮನಸಿಜನು ರತಿದೇವಿಗೆ ಪಟ್ಟವ ಕಟ್ಟಿಹನಂತೆ; ನಡೆ, ನಾವೂ ಅಲ್ಲಿಗೆ ಹೋಗುವ. ನಿನ್ನ ರೂಪಿಂದ ರತಿಯನು ಜರೆದು ಆರಾಮಮಂಗಲೆಗೆ ಹರುಷವ ಪುಟ್ಟಿಸೆಂ'ದು ಸರಸವ ನುಡಿದು ತ್ರಿಜಗದ್ಭೂಷಣವನ್ನೇರಿ ಅನುಮತಿಮಹಾದೇವಿ ಮೊದಲಾದ ರಾಣಿಯರು ಪಲ್ಲಕಿಯೇರಿ ಹಿಂಬಾಲಿಸಿ ಬರುತ್ತಿರಲು ಕೋಟಿವಾದ್ಯಗಳ ರವದೊಡನೆ ಚಿತ್ರಕೂಟಕ್ಕೆ ಬಂದನು. ಅಲ್ಲಿ ಅವನನ್ನು ರಾಜಕೀರಗಳು ದನಿದೋರಿ ಕರೆದುವು; ದಕ್ಷಿಣಾನಿಲನು ಇದಿರ್ಗೊಂಡು ಸ್ವಾಗತಿಸಿದನು.

ಜ್ಞಾನೇಂದುಕುವರನು ಮದದಂತಿಯ ಶಿರದಿಂದಿಳಿದು ನರ್ಮಸಚಿವನ ಕೈಲಾಗಿನಲಿ ಪರಿಮಿತಜನಸಹವಾಗಿ ಮುತ್ತಿನಿಂದ ವಿರಚಿತವಾದ ವನದ್ವಾರವನ್ನು ಪ್ರವೇಶಿಸುತ್ತಿರುವಲ್ಲಿ ವನರಾಜಿಯೆ ಮೆಯ್ವೆತ್ತು ಬಂದ ವನಲಕ್ಷ್ಮಿ ಇದಿರ್ವಂದು ಕಂಕೇಲಿಪೂದೊಂಗಲನ್ನು ನಿವಾಳಿಯಿಟ್ಟು ನೀರಾಜನವೆತ್ತಿ 'ನಮ್ಮಾರಾಮವೆಂಬ ಅರಮನೆಯತ್ತ ಚಿತ್ತೈಸಬೇಕೆಂ'ದಾಗ ನರ್ಮಸಚಿವನನ್ನು ಬೀಳ್ಕೊಟ್ಟು ಕಾಡಿಗೆಕಣ್ಣ ಕಾಮಿನಿಯರ ಗೋಷ್ಠಿಯಿಂದ ವನದೊಳಗೆ ಅಡಿಯಿಟ್ಟನು. ಮಾವಿನ ಕೀಳ್ಗೊಂಬೊಂದರಲ್ಲಿ ಕುಳಿತಿದ್ದ ಅರಗಿಳಿ ಹಣ್ಣಿನ ರಸವನ್ನು ನೆರೆ ಪೀರ್ದು ಮೆಯ್ವೆರ್ಚಿ ಕೊರಳೆತ್ತಿ ಕುಸುಮಾಯುಧನ ಅಂಕಮಾಲೆಯನ್ನು ವಾಚಿಸಿದುದು. ಇದನ್ನು ಕೇಳಿದ ವಸುಧೇಶನು ನಸುನಕ್ಕು ಮಡದಿಯರ ಮುದ್ದುಮೊಗವನ್ನು ಕಂಡು ವನದೈಸಿರಿಯನ್ನು ಚಿತ್ತರವಾಗಿ ಬಣ್ಣಿಸುತ್ತಾ ಬರುವಲ್ಲಿ 'ಸ್ಮರರತಿಪವಡಿಪ ಸಜ್ಜಾಗೃಹದಂತೆ ಕರಚೆಲುವಾದ ವಸಂತವರಮಂಟಪ'ವನ್ನು ಕಂಡು ಒಳಹೊಕ್ಕು 'ಸ್ಮರತರಂಗಿಣಿ'ಯೆಂಬ ತೂಗುಮಂಚದ ಮೇಲೆ ಅನುಮತಿವೆರಸು ಕುಳಿತು ಓಲಗಗೊಟ್ಟನು. ನವಿಲು

ಕೋಗಿಲೆ ಮೊದಲಾದ ಪಕ್ಷಿಗಳು ನೃತ್ಯಸಂಗೀತಗಳಿಂದ ಸೇವಿಸಿದುವು. ಇಂತು ಬೆಡಗಿನೊಳಿರುತ್ತಿರಲು ತನ್ನ ಮುದ್ದುಮೊಗವನ್ನು ನೋಡಿದ ಅನುಮತಿಯ ಭಾವವನ್ನರಿತ ಜ್ಞಾನಚಂದ್ರನು ಕಣ್ಸನ್ನೆಗೆಯ್ಯಲು, ಅದನ್ನರಿತ ಯುವತಿಯರು ಇನಿಯನ ಸಿಂಗರಕ್ಕಾಗಿ ಪುಷ್ಪಾಪಚಯುವನ್ನೆಸಗಲು ತೆರಳಿದರು. ನೀರೆಯರೊಂದುಗೂಡಿ ಬನವೆಲ್ಲ ತಿರಿದು ಸಡಗರದಿಂದ ಪುಷ್ಪಗಳನ್ನಾರಿಸಿ, ನಾನಾವಿಧದ ಆಭರಣಗಳನ್ನು ವಿರಚಿಸಿ ಒಬ್ಬರಿಗೊಬ್ಬರು ತೊಡಿಸಿದರು; ತಮ್ಮಿನಿಯನಿಗೆ ಮನಮೆಚ್ಚಿದ ಆಭರಣಗಳನ್ನೂ ಆಯುಧಗಳನ್ನೂ ತಂದೊಪ್ಪಿಸಿ ನಲಿದರು. ನರನಾಥನು ಯೌವನೆಯರ ಪುರುಷಭಕ್ತಿಗೆ ಮೆಚ್ಚಿ ಠರತರದಿಂದ ತಕ್ಕ ಮೋಹನ ಸರಸಸಲ್ಲಾಪವಾಡಿ ಪುರಸ್ಕರಿಸಿದನು.

## 26. ಜಲಕ್ರೀಡೆ.

ವನಕ್ರೀಡೆಯಿಂದ ಬಳಲಿದ ಮನದನ್ನೆಯರ ಆಯಾಸವನ್ನು ಜಲಕ್ರೀಡೆಯಿಂದ ಪರಿಹರಿಸುವ ಅಪೇಕ್ಷೆಯಿಂದ ಜ್ಞಾನಚಂದ್ರನು 'ಜಿನಸಿದ್ಧ ! ಶರಣೆ'ಂದು ವಸಂತಮಂಟಪದಿಂದ ಹೊರಟು ಬಳಿಯ ತಿಳಿನೀರಕೊಳದತ್ತ ಅಡಿಯಿಟ್ಟನು. ತನ್ನೆಡೆಗೆ ಬಂದ ಕೌರವೇಶ್ವರನಿಗೆ ಆ ಕೊಳವು ಹಂಸಧ್ವನಿಯಿಂದ ಸ್ವಾಗತವನ್ನು ಬಯಸಿದುದು. ತೆರೆಯ ತುಂತುರುಗಳಿಂದ ಸೇಸೆಯನ್ನಿಕ್ಕಿದುದು. ನೊರೆವಿಂಡ ದುಗೂಲವನ್ನು ನಿವಾಳಿಸಿದುದು. ತೆರೆಯ ನೀರಿಂದ ಕಾಲ್ತೊಳೆದು ಅರವಿಂದದಾರತಿ ಎತ್ತಿದುದು. ತಡಿಯಲ್ಲಿ ನೆರೆದು ನಿಂತ ನೀರೆಯರು ಅರ್ತಿಯಿಂದ ಇಣಿಕಿ ನೋಡಲಾಗಿ ಅವರ ಮುಖಚಂದ್ರವದರಲ್ಲಿ ನಾರ್ಪೊಳೆದು ಉತ್ಪಲಗಳಿಗೆ ಸೋಮಬಿಂಬಭ್ರಾಂತಿಯನ್ನುಂಟುಮಾಡಿದುದು. ವಿಲಾಸಿನಿಯರು ಜಲಕ್ಕನೆ ಕೊಳಕ್ಕಿಳಿದು ಚೆಲ್ಲಾಟಕ್ಕಾರಂಭಿಸಿದರು.

ಜಲಕ್ರೀಡೆಯಲ್ಲಿ ವನಿತೆಯರೊಳಗೆ ವಿನೋದವೊಂದನ್ನು ಏರ್ಪಡಿಸಿ ಅದರಂದವನ್ನು ಕಾಣಬೇಕೆಂಬ ಅಪೇಕ್ಷೆಯಿಂದ ರಾಯನು ಪಟ್ಟದ ಸೀಮಂತಿನಿ ಅನುಮತಿಯನ್ನು ಕರೆದನು; ಉಳಿದವರನ್ನು ಕರೆಸಿಕೊಂಡನು. ಚೆಲ್ಲಗಾತಿಯರು ಉಲ್ಲಾಸದಿಂದ ನೆರೆದು ನಿಂದಿರಲು ಭೂವರನು ಅನುಮತಿದೇವಿಯ ಮುಖವನ್ನು ನೋಡಿ 'ಬಾಲಾಮಣಿ ! ಭೂಚರಿ-ಖೇಚರಿಯರ ಜಾಣ್ಮೆಯನ್ನಿಂದು ಪರಿಕಿಸಬೇಕು. ಕನಕಮಾಲೆ, ರತ್ನಮಾಲೆ, ಗುಣಮಾಲೆ ಮೊದಲಾದ ಏಳುಸಾವಿರ ವಿದ್ಯಾಧರಿಯರು ನಿನ್ನ ಪಕ್ಷ. ಕಾಮಲತೆ, ಕುಂದಲತೆ, ಕನಕಲತೆ ಮೊದಲಾದ ಎಂಟುಸಾವಿರ ಭೂಚರಯುವತಿಯರು ಸಿಂಧೂದೇವಿಯ ಪಕ್ಷ. ನೀವು ಜೀರ್ಕೊಳವೆಗಳನ್ನು ಪಿಡಿದು ಸ್ಪರ್ಧೆಯಿಂದ ಓರೋರ್ವರ ಜಲದಿಂದಿಟ್ಟು ಆಡುವುದು' ಎಂದನು.

'ಅಕ್ಕಾಜಿ ! ನೀ ನೋಡೆ; ತಂಗೀರ ನೀವೆಲ್ಲ ಕೇಳಿ ! ಭೂವರನ ಮನದಿರವನ್ನು ಅರಿಯಬಾರದೆ ! ನಮ್ಮೊಳಗೆ ಜಗಳವನ್ನು ಸಮುಕಟ್ಟಿ ತಾನು ಕುಳಿತು ನೋಡಬೇಕೆಂಬ

ಆಸೆಯಿಂದ ಇರುವನಲ್ತೆ !' ಎಂದು ರಮಣಿಯರು ತಮ್ಮೊಳಗೆ ಗುಣುಗುಟ್ಟಲು ಅನುಮತಿ ದೇವಿ ಮುಗುಳ್ನಕ್ಕು 'ಏಳಿಲೆ ತಂಗಿ! ಜಗದೀಶನ ಅರ್ತಿಯನು ಸಲಿಸುವುದು ನಮ್ಮ ಧರ್ಮ' ಎಂದುದೆ ಲಲನೆಯರು ಎರಡು ಫೌಜಾಗಿ ಮೋಹನಗಾಳಗವನೆಸಗಿದರು.

ಹೂವಿನ ಚೆಂಡುಗಳ ಎಸೆತದಿಂದ ಕಾಳಗ ಮೊದಲಿಟ್ಟುದು. ಉಭಯ ಪಡೆಯಲ್ಲಿ 'ಅಕ್ಕಾಜಿ ! ತಪ್ಪಿಸಿಕೊಳ್ಳಿ ನೀವು' ಮುಂತಾದ ಮಧುರ ನುಣ್ಣುಡಿಗಳು ಅರಸನಿಗೆ ಕರ್ಣಾನಂದವನ್ನುಂಟುಮಾಡಿದುವು. ಸಿಂಧೂದೇವಿಯು ಅಕ್ಕನ ಜಡೆವಿಡಿದು ಮಸ್ತಕಕ್ಕೆ ಗಂಧವುಡಿಯನ್ನು ಸುರಿದಳು. ಗಂಧವುಡಿಯ ಚೆಲ್ಲಾಟಾನಂತರ ನೀರ್ಕೊಳವೆಗಳನ್ನೆತ್ತಿಕೊಂಡು ಘನಸಾರಕುಂಕುಮಕಸ್ತೂರಿಮಿಶ್ರಿತ ಜಲವನ್ನು ಕೊಪ್ಪರಿಗೆಗಳಿಂದ ತುಂಬಿಕೊಂಡು ಒಬ್ಬರ ಮುಖಕ್ಕಿನ್ನೊಬ್ಬರು ಸುರಿಯಲು ತೊಡಗಿದರು. ಜೀರ್ಕೊಳವೆಗಳ ಜೀರಾಟಕ್ಕೆ ಕಳೆಗಟ್ಟಿತು. ನಗನೇಚರಿಯರು ಕರಗವನೆತ್ತಿ ಭೂಚರಿಯರ ಮೇಲೆ ನೀರನ್ನೆಸೆದು ಭೊ! ಎಂದು ಬೊಬ್ಬಿಡುತ್ತ ಹಿಂದಿರುಗಿದರು. ಧರಣೀಚರಿಯರು ವಿದ್ಯಾಧರಿಯರ ಶಿರದಲ್ಲಿ ಸ್ವರ್ಣಕುಂಭಗಳಿಂದ ಜಲವನ್ನು ಸುರಿದು ಮೊರೆಯುತ್ತ ಬೆನ್ನಿತ್ತರು. ಉಭಯತರೂ ಇನ್ನೊಬ್ಬರಿಂದ ಸೋತುದಿಲ್ಲ. ತಮ್ಮೊಳಗೆ ಜಗಳವನ್ನಿಟ್ಟು ಸೊಗಸನ್ನು ಸವಿವ ಅರಸನಿಗೆ ಬುದ್ಧಿ ಕಲಿಸಲೆಳಸಿದರು ಆ ತರಳೆಯರು. ಅನುಮತಿದೇವಿ ಶರಧಿದೇವಿಗೆ ಕಣ್ಣೊತ್ತಿದ್ದೆ ತಡ ! ಅವಳು ಉಳಿದವರನ್ನೆಬ್ಬಿಸಿ ಕೊಬ್ಬಿರಿದು ಕೂಗುತ್ತ ಬಂದು ಅರಸನನ್ನು ಬಳಸಿನಿಂದರು. ಕುಂಭದೊಳಿದ್ದ ಕುಂಕುಮರಸವನ್ನು ಶಿರದಲ್ಲಿ ಸುರಿದರು. ಅನುಮತಿದೇವಿ ಲೀಲೆಯಿಂದೈತಂದು ಜನಪನನ್ನು ತಬ್ಬಿ ಪಿಡಿದು ತಂಗಿಯರಿಗೆ ಸನ್ನೆದೋರಿದಳು. ವನಿತಾಸಮೂಹ ನರನಾಥನನ್ನು ನೆಗಪಿ ಗೊಬ್ಬಿರಿವುತ ತಂಗೊಳದಲ್ಲಿ ಮುಳುಗಿಸಿದರು; ಜೀರ್ಕೊಳವೆಗಳಿಂದ ಜಲವನ್ನು ಸೂಸಿದರು. ಅರಸನೂ ಜೀರ್ಕೊಳವೆಯನ್ನೆತ್ತಿಕೊಂಡು ಹೆಂಗಳೊಡನೆ ವಿನೋದಕೇಳಿಗೆ ತೊಡಗಿದನು. ಇಂತು ನಾನಾ ವಿನೋದಗಳಿಂದ ತಣಿದು ರಾಜೇಂದ್ರನು ಸರಸ್ಸಿನಿಂದ ಹೊರವಂಟನು. 'ರಾಜಹಂಸನ ಬಳಸಿ ಬರುತಲಿರ್ದ ಹಂಸೀಗಣದಂತೆ' ತರುಣೀಜನಗಳೂ ಅವನೊಡನೆ ಮೇಲಕ್ಕೈದಿದರು. ನೂತನ ವಸ್ತ್ರಾಭರಣಗಳಿಂದ ಸಿಂಗರಿಸಿಕೊಂಡು ವಿಶ್ರಮಿಸುತ್ತಿರುವಲ್ಲಿ ಪಟ್ಟಣದಿಂದ ಜೋನಗುಡಿಕೆಗಳು ಬಂದುವು. ಭೂಪಾಲನು ಭಾವಕಿಯರೊಡಗೂಡಿ ಆರೋಗಿಸಿ ಕೈಗರ್ಚಿ ವೀಟಿಕೆಯನ್ನಾಂತನು. ಆರಾಮಪಾಲಕನನ್ನು ಕರೆಸಿ ಚಾರುದುಕೂಲ ವಿಭೂಷಣಗಳನ್ನಿತ್ತು ಮನ್ನಿಸಿದನು. ತ್ರಿಜಗದ್ಭೂಷಣವನ್ನೇರಿ ಅರಸನು ಹೊರಟು ನಿಂದಿರಲು ಉಳಿದವರು ಪಲ್ಲಕಿ-ರಥಗಳನ್ನೇರಿ ಹಿಂಬಾಲಿಸಿದರು. ಸುರಪತಿ ಸುರಬಲದೊಡನೆ ಅಮರಾವತಿಯನ್ನು ಪುಗುವಂತೆ ಅರಸನು ತನ್ನ ಪಟ್ಟಣವನ್ನು ಪ್ರವೇಶಿಸಿದನು.

# 27. ಹರಿಶ್ಚಂದ್ರಕುಮಾರನ ಜನನ.

**ಅ**ನುಮತಿಮಹಾದೇವಿ ಅದೊಂದುದಿನ ಪುಷ್ಪಿತೆಯಾಗಿ ಚತುರ್ಥಸ್ನಾನಾನಂತರ ಸಾಲಂಕೃತಳಾಗಿ ಜಿನಗೆ ಪೊಡಮಟ್ಟು, ಮುನಿಗಳಿಗೆರಗಿ ಹರಕೆಯನ್ನಾಂತು ಅಂದಿನ ರಾತ್ರಿ ಇನಿಯನೊಡನೆ ಪೆಟ್ಟಿರ್ದು ಬೆಳಗಿನ ಜಾವದಲ್ಲಿ ಕನಸೊಂದನ್ನು ಕಂಡಳು. ಬೆಳಗಾಗಲೆದ್ದು ಅರುಹನ ಪೂಜಿಸಿ ಅರಸನೆಡೆಗೆಯ್ದಿ ಚರಣಗಳಿಗೆರಗಿ ಬಳಿಯಲ್ಲಿ ಕುಳಿತಿದ್ದು 'ಆರ್ಯ! ಕಳೆದಿರುಳು ಸ್ವಪ್ನದಲ್ಲಿ ರವಿ-ವಿಧು-ಸಿಂಹ-ಕರಿ ಇವುಗಳನ್ನು ಕಂಡುದಲ್ಲದೆ ಮರಿಯಂಚೆಯ ಪಲವಂಚೆಯ ಮರಿಗಳು ಚಂಚುಪುಟದಿಂದ ಕುಟುಕುವುದನ್ನೂ ನೋಡಿ ಭೀತಿಗೊಂಡು ಎಚ್ಚತ್ತೆನು' ಎಂದಳು. ನರನಾಥನು ಕೆಲಹೊತ್ತು ಭಾವಿಸಿ ಸ್ವಪ್ನಫಲವನ್ನು ಇಂತೆಂದು ವಿವರಿಸಿದನು— ದೇವಿ! ನೀನು ಕನಸಿನಲ್ಲಿ ರವಿಯನ್ನು ಕಂಡುದರಿಂದ ಪ್ರತಾಪಶಾಲಿಯೂ, ಚಂದ್ರನನ್ನು ಕಂಡುದರಿಂದ ಶಾಂತನೂ, ಸಿಂಹವನ್ನು ಕಂಡುದರಿಂದ ಪರಾಕ್ರಮಿಯೂ, ಆನೆಯನ್ನು ಕಂಡುದರಿಂದ ಮಹಾದಾನಿಯೂ ಆದ ಪುತ್ರನನ್ನು ಪಡೆಯುವೆ. ಆದರೆ ಮರಿಹಂಸವನ್ನು ಹಲವು ಹಂಸಗಳು ಕುಟುಕಿದುದನ್ನು ಭಾವಿಸಲಾಗಿ ನಿನ್ನಾ ಪುತ್ರನು ಕೆಡುಕದಾಯಿಗರ ಉಪಸರ್ಗಕ್ಕೆ ಬಲಿಯಾಗಿ ಬವಣೆಗೊಳಗಾಗುವನು. ಈಪರಿ ಸ್ವಪ್ನಫಲವನ್ನು ತಿಳಿಯೆ ಹೇಳಿ ತದ್ಬಾಧಾಪರಿಹಾರಾರ್ಥ ಜಿನಗೃಹದಲ್ಲಿ ಶಾಂತಿಕ ಪೌಷ್ಟಿಕಗಳನ್ನು ನಡೆಸುತ್ತಿದ್ದನು. ಪ್ರಥಮಕಲ್ಪದಿಂದ ನಿರ್ಜರನೈತಂದು ಅನುಮತಿಯ ಬಸಿರಲ್ಲಿ ನೆಲಸಿರಲು ಗರ್ಭವು ದಿನೇ ದಿನೇ ಬಳೆಯುತ್ತಿತ್ತು. ಆಕೆಗೆ ತಿಂಗಳು ಮೂರಾಗಲು 'ಪ್ರಮೋದವಿಧಿ'ಯನ್ನು ನಡೆಸಿದನು. ಐದನೆಯ ತಿಂಗಳಲ್ಲಿ 'ಪುಂಸವನವಿಧಿ'ಯನ್ನು ನಿರ್ವರ್ತಿಸಿದನು. ಏಳನೆ ತಿಂಗಳಲ್ಲಿ ವೈಭವದಿಂದ 'ಸೀಮಂತವಿಧಿ' ಜರಗಿದುದು. ನವಮಾಸಾಂತ್ಯದಲ್ಲಿ ಶುಭದಿನದೊಳಗೆ ಅನುಮತಿಮಹಾದೇವಿ ಗಂಡುಮಗುವನ್ನು ಹೆತ್ತಳು. ಮಗುವಿಗೆ ಶುಭತಿಥಿಯಲ್ಲಿ ನಾಭಿನಾಳವ ಕೊಯ್ದು 'ಜಾತಕರ್ಮವಿಧಿ'ಯನ್ನು ನೆರವೇರಿಸಿದನು. ಹತ್ತನೆದಿನ ಬಾಲಕನಿಗೆ ಜಿನಸಮ್ಮುಖದಲ್ಲಿ ಹರಿಚಂದ್ರನೆಂಬ ಹೆಸರಿಟ್ಟು ರಾತ್ರಿಯಲ್ಲಿ ಕಿವಿಚುಚ್ಚಿ ತೊಟ್ಟಿಲಲ್ಲಿಟ್ಟು ತೂಗಿ 'ನಾಮಕರ್ಮವಿಧಿ'ಯನ್ನು ಸಾಂಗಗೊಳಿಸಿದರು. ಮಗುವಿಗೆ ತಿಂಗಳು ಮೂರಾಗಲು ಅರಮನೆಯಿಂದ ಹೊರಟು ಜಿನಾಲಯಕ್ಕೈದಿ ಕೂಸಿಗೆ ಜಿನರನ್ನು ಬೊಟ್ಟಿಟ್ಟು ತೋರಿಸಿ ಹೊರಗೆ ರವಿಬಿಂಬವನ್ನು ಕಾಣಿಸಿ 'ಬಹಿರ್ಯಾನವಿಧಿ'ಯನ್ನು ಮುಗಿಸಿದನು. ಐದನೆ ತಿಂಗಳಿಗೆ ಬಾಲಕನನ್ನು ಪಲ್ಯಂಕಾಸನದಲ್ಲಿ ಕುಳ್ಳಿರಿಸಿ 'ಉಪವೇಶವಿಧಿ'ಯನ್ನು ಪೂರೈಸಿದನು. ಏಳನೆಯ ತಿಂಗಳಿಗೆನೇ 'ಅನ್ನಪ್ರಾಶನವಿಧಿ' ಮುಗಿದುದು. ತಿಂಗಳೊಂಭತ್ತಕ್ಕೆ ಗಮನೋಚಿತ ನಕ್ಷತ್ರದಲ್ಲಿ ಮಗನನ್ನು ನಡೆಸಿ 'ಗಮನವಿಧಿ' ಏರ್ಪಟ್ಟಿತು. ಮೂರನೆಯ ವರ್ಷಕ್ಕೆ 'ಚೌಲಕರ್ಮ'ವೂ ಆಯಿತು. ಐದನೆ ವರ್ಷಕ್ಕೆ 'ಅಕ್ಷರಾಭ್ಯಾಸವಿಧಿ'ಯೊಡನೆ ವಿದ್ಯಾಭ್ಯಾಸಕ್ಕೆ ತೊಡಗಿಸಿದನು. ಶ್ರುತಾರ್ಚನೆಯನ್ನೆಸಗಿದ ನಂತರ 'ಪುಸ್ತಕ

ಗ್ರಹಣವಿಧಿ'ಯು ನೇರ್ಪಟ್ಟುದು. ಸಾತಿಶಯವಿದ್ಯೆಗಳನ್ನು ಕಲಿತಾದನಂತರ 'ಮೌಂಜೀ ಬಂಧನ'ವಾದುದು.

ಇಂತು ಕಲ್ಯಾಣಪರಂಪರೆಯೊಡನೆ ಹರಿಚಂದ್ರಕುಮಾರನು ಬಳೆಯುತ್ತಿರಲು, ಪ್ರಜ್ಞಪ್ತಿ ಮೊದಲಾದ ವಿದ್ಯೆಗಳಲ್ಲಿ ಪಾರಂಗತನಾದನು. ಜ್ಞಾನಚಂದ್ರನಿಗೆ ಅವನ ಉಳಿದ ಸುದತಿಯರಲ್ಲಿ ಸಹಸ್ರಮಂದಿ ಕುವರರು ಜನಿಸಿ ಶಾಸ್ತ್ರಶಸ್ತ್ರಗಳನ್ನು ಕಿರಿವರೆಯದಲ್ಲೆ ಕಲಿತರು. ಆದರೆ ಹರಿಚಂದ್ರನ ಪುಣ್ಯದೇಳ್ಗೆಯನ್ನು ಕಂಡು ಅವರು ಸಹಿಸದಾದರು. 'ಅವನ ಕೊಂದಲ್ಲದೆ ಬದುಕೆಮಗಿಲ್ಲೆ'ಂದು ಅವರೊಳಗೆ ಯೋಚಿಸಿಕೊಂಡರು. ಅದಕ್ಕಾಗಿ ಒಂದು ಹಂಚಿಕೆಯನ್ನೂ ಹೂಡಿದರು. ಹರಿಚಂದ್ರನನ್ನು ಒಂದೆಡೆ ಕರೆದು 'ಹರಿವಿಕ್ರಮಿ ಎಲೆ ಹರಿಚಂದ್ರ ಕೇಳೈ ! ರತ್ನಮಯಕೂಟಗಿರಿಯ ಬಾಗಿಲಲ್ಲೊಂದು ಮಾವಿನಮರವಿರುವುದು. ಅದರ ಫಲಗಳನ್ನು ಸೇವಿಸಿದವರು ಈ ಧರೆಯನೆಲ್ಲ ಆಳುವರು; ಸಕಲ ವಿದ್ಯೆಗಳು ಕೈಸೇರುವುವು; ಅಂಗಚ್ಛವಿ ಮಿರುಗುವುದು. ಅದುಕಾರಣ ನಾವೆಲ್ಲ ಅಲ್ಲಿಗೆ ಹೋಗಲಿರುವೆವು ನೀನೂ ಬಾರ !' ಎಂದು ನಂಬಿಸಿ ಕರೆದೊಯ್ದು ಗಿರಿಯನ್ನೇರಿ ಉಬ್ಬಿಸಿ ಮರವನ್ನೇರುವಂತೆ ಮಾಡಿ ತಾವು ಕೆಳಗಿದ್ದು ಅವನೇರಿದ್ದ ಕೊಂಬೆಯನ್ನು ಕೊಡಲಿಯಿಂದ ಕಡಿದರು. ಕೊಂಬೆ 'ಛಿಟಿಲನೆ' ಮುರಿದು ಹರಿಚಂದ್ರನು ಕೆಳಗೆ ಹರಿಯುತ್ತಿರುವ ನದಿಯ ಗುಂಡಿಯೊಳಕ್ಕೆ ಬಿದ್ದು ಮುಳುಗೆದ್ದು ಭರದಿಂದ ಹರಿಯುತ್ತಿದ್ದ ಹೊಳೆಯ ಸುಳಿಯಲ್ಲಿ ತೇಲುತ್ತ ಹೋದನು.

ಕಪಟಿಗಳು ಅಳುವನ್ನು ನಟಿಸುತ್ತ ತಂದೆಯ ಬಳಿಗೈದಿದರು. 'ಹರಿಚಂದ್ರಕುವರನು ನಮ್ಮ ಮಾತನ್ನು ಕೇಳದೆ ದುರುದುಂಬಿತನದಿಂದ ಮಾವಿನಮರವನ್ನೇರಿ ಹಣ್ಣುಗಳನ್ನು ಕೊಯ್ಯುತ್ತ ಮೇಲಕ್ಕೇರಿ ಗೆಲ್ಲಿನ ಕೊನೆಯಲ್ಲಿ ವಿನೋದದಿಂದ ತಲೆಕೆಳಗೆ ಮಾಡಿ ತೂಗಲು ಗೆಲ್ಲು ಮುರಿದು ಕೆಳಗೆ ಬಿದ್ದನು. ಕಾಡಿನ ಎಲ್ಲೆಡೆ ಹುಡುಕಿದರೂ ಕಾಣದೆ ನಾವಿಲ್ಲಿಗೆ ಬಂದೆವು' ಎಂದು ಹುಸಿನುಡಿದರು. ಅರಸನಾ ನುಡಿಗೇಳಿ ಕಂಬವನೆಮ್ಮಿ ಬೊಂಬೆಯಂತೆ ಕುಳಿತನು. ಧೈರ್ಯನಿಧಿಯಾದ್ದರಿಂದ ದುಃಖವನ್ನು ಹೊರಗೆ ಕಾಣಗೊಡಲಿಲ್ಲ. ಅನುಮತಿ ಈ ವಾರ್ತೆಯನ್ನು ಕೇಳಿ ಮೂರ್ಛೆಗೆ ಸಂದಳು. ಕೆಳದಿಯರ ಶೈತ್ಯೋಪಚಾರದಿಂದೆಚ್ಚತ್ತು ಕುಮಾರನಿಗಾಗಿ ಹಲವು ಹಂಬಲಿಸಿದಳು.

ಪುತ್ರಶೋಕದಿಂದ ಕಾತರಳಾದ ಅನುಮತಿಯನ್ನು ಸಮಾಧಾನಗೊಳಿಸಿ ಜ್ಞಾನೇಂದುವು ಪುತ್ರನನ್ನರಸಲು ದಿಕ್ಕುದಿಕ್ಕಿಗೆ ಭಟರನ್ನಟ್ಟಿದನು. ತಾನು ಕಾಡಿಗೆ ತೆರಳಿ ಪುತ್ರಾನ್ವೇಷಣದಲ್ಲಿ ತೊಡಗಿರಲು ಆಕಾಶವಾಣಿಯಾದುದು. 'ಹರಿಚಂದ್ರನು ಪರದೇಶವನ್ನು ಹೊಕ್ಕು ಹಲವು ತರುಣಿಯರನ್ನು ವರಿಸಿ, ಹಲವು ರಾಜ್ಯಗಳನ್ನು ಸಾಧಿಸಿ ಮರಳುವನೆ'ಂಬ ಅಶರೀರವಾಣಿಯನ್ನು ಕೇಳಿ ಜ್ಞಾನಚಂದ್ರನು ಸಮಾಧಾನ ತಾಳಿದನು.

## 28. ಷೋಡಶಭಾವನೆ.

ವಾಮಲೋಚನೆಯರ ಪ್ರೇಮಸಂಕಲೆಗೆ ಸಿಲುಕಿ ಜ್ಞಾನಚಂದ್ರನು ಸುಖಭೋಗದಲ್ಲಿ ತೊಡಗಿರಲು ಹಿಮಋತು ಕಾಲಿಟ್ಟುದು. ಪೂರ್ವದಿಕ್ಕಿನಿಂದ ತಂಗಾಳಿ ಬೀಸಿತು. ಗಿರಿ-ನದಿ-ವನ-ಭೂಮಿಗಳೆಲ್ಲಾ ಮಂಜಿನಿಂದ ಭರಿತವಾದುದು. ಇಂತಪ್ಪ ಚಳಿಗಾಲದಲ್ಲಿ ಮಡದಿಯರೊಡನಾಟದಲ್ಲಿ ಜ್ಞಾನಚಂದ್ರನಿರಲು ಆರಾಮಪಾಲಕನು ಬಂದು ಜಿನಚಂದ್ರ ಋಷಿರಾಜರು ಪುರಕೆ ಬಿಜಯಂಗೈದ ಒಸಗೆಯನ್ನರುಹಿದನು. ಅರಸನು ಪತ್ನೀಪುತ್ರ, ಪುರಜನಪರಿಜನ ವೆರಸು ಮುನಿದರ್ಶನಾಕಾಂಕ್ಷಿಯಾಗಿ ಹೊರಟನು. ಪುರೋದ್ಯಾನವನವನ್ನು ಹೊಕ್ಕು ಶಾಂತಿರಸವೆ ಮೂರ್ತಿವೆತ್ತಂತೆ ಧ್ಯಾನಮುದ್ರೆಯಲ್ಲಿದ್ದ ಮುನಿರಾಜನಿಗೆ ಬಲವಂದು ನಮಸ್ಕರಿಸಿದನು. ಧ್ಯಾನತಿಳಿದೆದ್ದ ಯತಿವರರು 'ಉದಯಾರ್ಕಸಮ ಕೇವಲಜ್ಞಾನವು ನಿನಗಾಗಲೆ'ಂದು ಅರಸನನ್ನೂ, 'ವರಧರ್ಮವೃದ್ಧಿರಸ್ತೆ'ಂದು ನಮಿಸಿದ ಭವ್ಯವೃಂದವನ್ನೂ ಹರಸಿದರು. ಜ್ಞಾನೇಂದುವು ಜಿನಚಂದ್ರಯತಿಗಳ ತಳಿರಡಿಗಳನ್ನು ಭಕ್ತಿಭರದಿಂದ ಪೂಜಿಸಿ, ಸ್ವಜನರೊಡಗೂಡಿ ಮುನಿಸನ್ನಿಧಿಯಲ್ಲಿ ಕುಳಿತಿದ್ದು ಷೋಡಶಭಾವನೆಯ ತೆರನ ನಿರೂಪಿಸಬೇಕೆಂದು ಬಿನ್ನವಿಸಿಕೊಂಡನು. ಜಿನಚಂದ್ರಯತಿವರರು ತೀರ್ಥಕರತ್ವಕಾರಣಗಳಾದ— 1. ದರ್ಶನವಿಶುದ್ಧಿ 2. ವಿನಯಸಂಪನ್ನತೆ 3. ಶೀಲವ್ರತದಲನತಿಚಾರ 4. ಅಭೀಕ್ಷ್ಣ ಜ್ಞಾನೋಪಯೋಗ 5. ಸಂವೇಗ 6. ಶಕ್ತಿತಸ್ತ್ಯಾಗ 7. ಪರಮತಪಸ್ಸು 8. ವರಸಮಾಧಿ 9. ವೈಯ್ಯಾವೃತ್ಯಕರಣ 10. ಅರ್ಹದ್ಭಕ್ತಿ 11. ಆಚಾರ್ಯಭಕ್ತಿ 12. ಬಹುಶ್ರುತಭಕ್ತಿ 13. ಪ್ರವಚನಭಕ್ತಿ 14. ಆವಶ್ಯಕಾಪರಿಹಾಣಿ 15. ಮಾರ್ಗಪ್ರಭಾವನೆ 16. ಪ್ರವಚನ ವತ್ಸಲತ್ವಗಳೆಂಬ ಹದಿನಾರು ಭಾವನೆಗಳನ್ನು ಸವಿವರವಾಗಿ ಬೋಧಿಸಿದರು. ಈ ಭವ ತಾರಕಧರ್ಮಶ್ರವಣದಿಂದ ತಾನು ಕೃತಾರ್ಥನಾದೆನೆಂದು ಜ್ಞಾನಚಂದ್ರನು ಅಮಂದಾನಂದ ವನ್ನು ತಾಳಿದನು.

## 29. ಹರಿಚಂದ್ರನ ಭವಾವಳಿ.

ಅನುಪಮಧರ್ಮದಿರವನ್ನು ಜಿನಚಂದ್ರಮುನಿಮುಖದಿಂದ ಕೇಳಿ ಜ್ಞಾನಚಂದ್ರನು ಮೇಘಧ್ವನಿಯನ್ನು ಕೇಳಿದ ಸೋಗೆನವಿಲಂತೆ ನಲಿದನು. ನಂತರ ಮುನಿಗಳಿಗೆ ಕೈಮುಗಿದು ತನ್ನ ಸುಕುಮಾರ ಹರಿಚಂದ್ರನ ಪೂರ್ವಭವವೃತ್ತಾಂತವನ್ನು ಹೇಳಬೇಕೆಂದೆನಲು ಯತಿಗಳಿಂತೆಂದರು—

ಕಾಂಪಿಲ್ಯಮಹಾಪುರದರಸು ನರಸಿಂಹ. ಆತನ ಪುತ್ರ ವಸುಕಾಂತ. ಆ ಪಟ್ಟಣಕ್ಕೆ ನೈಋತ್ಯದಿಕ್ಕಿನಲ್ಲಿ ಕಾನನದೊಳಗೆ ಚಂಡಮಾರಿಯ ಗುಡಿಯೊಂದಿರುವುದು. ಒಂದಾನೊಂದು

ಚೈತ್ರಮಾಸದಲ್ಲಿ ಜಾತ್ರೆ ನೆರೆದು ಅರಗುವರನು ಅಲ್ಲಿಗೈತಂದು ಸಹಸ್ರಾರು ಕುರಿಗಳನ್ನು ದೇವಿಯ ಮುಂದೆ ತರಿದನು. ಮಡಿದ ಕುರಿಗಳು ಸಮೀಪದ ಗಿರಿಯೊಂದರ ಮೇಲಿನ ಕರಂಜವೃಕ್ಷದಲ್ಲಿ ಸಾಸಿರಪಕ್ಕಿಗಳಾಗಿ ಜನಿಸಿದುವು. ಬೇಡಪಡೆಯೊಡಗೂಡಿದ ವಸುಕಾಂತನು ಬಲೆಬೀಸಿ ಅವುಗಳನೆಲ್ಲ ಕೊಂದಿಕ್ಕಿದನು. ಆ ಹಕ್ಕಿಗಳು ಮಡಿದು ಹೊಳೆಯೊಂದರಲ್ಲಿ ಸಾವಿರಮೀನುಗಳಾಗಿ ಜನಿಸಲು ಆ ದುಷ್ಟಾತ್ಮನು ಅಲ್ಲಿಯೂ ಬಲೆಬೀಸಿ ಅವುಗಳನ್ನು ಕೊಂದು ಹೊಳೆಯನ್ನು ಹಾದುಬರುತ್ತಿರಲಾಗಿ 'ಕೊಂದವನಿಗೆ ಕೊಲೆತಪ್ಪದೆಂ'ಬಂತೆ ಮೊಸಳೆಯೊಂದು ವಸುಕಾಂತನನ್ನು ಹಿಡಿದೆಳೆದು ಹರಿದು ತಿಂದಿತು. ಆ ಪಾಪಿ ಸತ್ತು ಪಂಚಮ ನರಕದಲ್ಲಿ ಹುಟ್ಟಿದನು. ಅಲ್ಲಿ ಘೋರೋಪಸರ್ಗವನ್ನು ಅನುಭವಿಸುತ್ತಿದ್ದು ಹದಿನೇಳು ಸಾಗರಾಯುಷ್ಯ ಕಳೆಯಲಾಗಿ ಭರತದ ವಿಂಧ್ಯಗಿರಿಯಲ್ಲಿ ಹೆಬ್ಬುಲಿಯಾಗಿ ಜನಿಸಿದನು.

ಇತ್ತ ವಸುಕಾಂತನ ಬಲೆಗೆ ಬಲಿಬಿದ್ದು ಮಡಿದ ಮೀನುಗಳು ಭವಭವಗಳಲ್ಲಿ ದುಃಖ ವನ್ನುಂಡು ಕೊನೆಗೆ ಅದೇ ವಿಂಧ್ಯಾಚಲದಲ್ಲಿ ಬೇಡರಾಗಿ ಜನಿಸಿದರು. ಆ ಬೇಡಪಡೆ ನೆರೆದು ವಿಂಧ್ಯಾಟವಿಯಲ್ಲಿ ಮೊರೆದು ಘರ್ಜಿಸುತ್ತಾ ಬೇಟೆಗಾಗಿ ಬರುತ್ತಿರಲು, ಈ ಗಲಭೆಯನ್ನು ಕೇಳಿ ಗುಹೆಯೊಳಗಿದ್ದ ವ್ಯಾಘ್ರವು ಕೆರಳಿ ನೆಲವನ್ನು ಕೆರೆವುತ್ತ ಗುಹೆಯ ಬಾಗಿಲಿಗೈದಿ ನಿಂದುದು. ಕೋಪಾಟೋಪದಿಂದ ಹೊರಬಿದ್ದು ಬೇಟೆನಾಯಿಗಳನ್ನೂ ಬೇಡಪಡೆಯನ್ನೂ ಸೀಳಿಸೀರುಂಬುಳಾಡಿ ಗುಹೆಗೆ ಮರಳಿತು. ಉದ್ವಿಗ್ನರಾದ ಬೇಡಪಡೆ ಕಲಿತನದಿಂದ ಗುಹೆ ಯನ್ನು ಹೊಕ್ಕು ಹುಲಿಯನ್ನು ಕೊಂದಿಕ್ಕಿದರು. ಅದು ಮಡಿದು ಪ್ರಥಮನರಕದಲ್ಲಿ ಹುಟ್ಟಿ ಒಂದಂಬುಧಿ ಆಯುಷ್ಯ ತೀರಲು ಭರತಕ್ಷೇತ್ರದ ಸಹ್ಯಾಚಲದಲ್ಲಿ ಮೆರೆವ ರೋಹಟಕಪುರ ದರಸು ಗಂಧರ್ವಗೆ 'ಅರಿಂಜಯ'ನೆಂಬ ಕುಮಾರನಾಗಿ ಜನಿಸಿದನು. ಕಾಲಲಬ್ಧಿಯಿಂದ ಮುನಿಯೋರ್ವನನ್ನು ಮರೆಹೊಕ್ಕು ಸಮ್ಯಕ್ತ್ವನಾಂತು ಜಿನಧರ್ಮಾರಾಧಕನಾದನು.

ಇಂತಿರಲು ಅತ್ತ ಆ ಬೇಡಪಡೆ ಮಡಿದು ಸಂಸಾರದಲ್ಲಿ ತೊಳಲಿ ಕೊನೆಗೆ ಆ ರೋಹ ಟಕಪುರದೊಳಗೆ ಸಾವಿರಮಂದಿ ಬ್ರಾಹ್ಮಣರಾಗಿ ಜನಿಸಿದರು. ಒಂದಾನೊಂದು ದಿನ ಈ ಹಾರುವರು ರಾಜಸಭೆಗೈದಿ ಗಂಧರ್ವೇಶ ನರಸಿಂಹನನ್ನು ಹರಸಿ ಇಂತೆಂದು ಶಾಸ್ತ್ರಪ್ರಸಂಗಕ್ಕೆ ತೊಡಗಿದರು:— ನರನಾಥ ! ನಾವೀ ಲೋಕದಲ್ಲಿ ನರಜನ್ಮದೊಳಗುತ್ತಮರು. ನಮ್ಮನ್ನು ಬಿಟ್ಟು ಬೇರೆ ಪಾತ್ರವಿಲ್ಲ. ಆದ್ದರಿಂದ ನೀನು ನಮಗೆ ಕರಿ, ಹಯ, ದಾಸಿ, ಕನ್ಯೆ, ಅವನಿ, ಸ್ವರ್ಣ, ಗೋವು, ತಿಲ, ರಥ, ಭವನಗಳೆಂಬ ದಶದಾನಗಳನ್ನು ಕೊಟ್ಟು ಸುರಪದವಿ ಯನ್ನು ಸೂರೆಗೊಂಡು ಕೈವಲ್ಯದರಸನಾಗಿ ಅನವರತವಿರಬಹುದು.'

ಅರಿಂಜಯನಿದನ್ನು ಕೇಳಿ ನಸುನಕ್ಕು ಇಂತೆಂದನು:— ಪಾಪಿಗಳಿರ ! ಯಜ್ಞದ ನೆವದಿಂದ ಜೀವಿಗಳನ್ನು ಕಡಿದು ತಿಂಬ ನಿಮ್ಮನ್ನು ವರವಂಶಪವರೆನ್ನಬಹುದೆ ? ಕರುಣ ರಹಿತರಿಗೆ ನಿಮಗಿತ್ತದಾನವು 'ಉರಗಗೆ ಪಾಲನೆರೆದಂತೆ; ಮರುಭೂಮಿಯಲ್ಲಿ ಬೀಜವನು ಬಿತ್ತಿದಂತೆ; ಹಸಿಯ ಮಡಕೆಯಲ್ಲಿ ಮಡಗಿದ ಹಾಲಂತೆ'. ರಾಟೆಯ ಹಗ್ಗದಂತೆ ಮುಂಗೈ

ತೋರಹಗ್ಗವನ್ನು ಕೊರಳಿಗಿಕ್ಕಿ, ಕಾಗೆಗಳಂತೆ ನದೀತಟಾಕಗಳಲ್ಲಿ ಮುಳುಗಿ, 'ಕಳ್ಳಹೊನ್ನಿಗೆ ದೊಡ್ಡಮುದ್ರೆ'ಯೆಂಬಂತೆ ಹಣೆ, ತೋಳು, ಕೊರಳುಗಳಲ್ಲಿ ಗಂಧ-ಬೂದಿ ಬಳಿದು, ಹೊಲೆಯರ ಮನೆಯಾದಿ ಹದಿನೆಂಟುಜಾತಿಯ ಮನೆಗೈದಿ ಬೇಡುತ್ತಿರುವಿರಿ. ಪಡೆದೊಡನೆ ಗಳನ್ನು ವೇಶ್ಯೆಯರಿಗಿತ್ತು ಸಪ್ತವ್ಯಸನಗಳಲ್ಲಿ ನಡೆವ ನಿಮಗೆ ದಾನವಿತ್ತೊಡೆ ನರಕವೇ ಗತಿ. ದಶದಾನವೆಂಬುದಿದು ಋಷಿಪ್ರೋಕ್ತವಲ್ಲ. ಅನ್ನಾಭಯಭೈಷಜ್ಯಶಾಸ್ತ್ರದಾನಗಳೆಂಬ ಚತುರ್ವಿಧದಾನಗಳೆ ಸನ್ನುತ ಮೋಕ್ಷಫಲವನ್ನು ಕೊಡುವ ಬೀಜಗಳು."

ಅರಗುವರನ ಈ ನುಡಿಯನ್ನು ಕೇಳಿದ ಬ್ರಾಹ್ಮಣರು ತಮಗೆ ದೊರೆಯುವ ದಾನಕ್ಕೆ ಈತನು ತಡೆಯಾದನೆಂದು ಬಗೆದು, ತಮಗುಂಟಾದ ಮಾನಭಂಗಕ್ಕೆ ಈತನನ್ನು ಬಲಿಕೊಡಲು ಯೋಚಿಸಿದರು. ರೂಪಿಣಿಯೆಂಬ ವೇಶ್ಯೆಯ ಕೈಯಲ್ಲಿ ವಿಷಮಿಶ್ರಿತ ತಾಂಬೂಲವನ್ನು ಕೊಡಿಸಿ ಕೊಲಿಸಿದರು. ಈಪರಿ ಮಡಿದ ಕುವರನು ಸೌಧರ್ಮಸ್ವರ್ಗದಲ್ಲಿ ಜಲಕಾಂತವೆಸರ ವಿಮಾನದೊಳಗೆ ಅನಿಮಿಷನಾಗಿ ಜನಿಸಿದನು. ತನ್ನ ಮಗನ ಮರಣಕ್ಕೆ ಈ ಹಾರುವರೆ ಕಾರಣರೆಂದು ತಿಳಿದ ಗಂಧರ್ವೇಶನು ಅವರನ್ನು ಗರಗಸದಿಂದ ಸೀಳಿ ದಿಗುಬಲಿ ಕೊಡಲು ಸೇವಕರನ್ನು ಆಜ್ಞಾಪಿಸಿದನು. ಈ ವಾರ್ತೆಯನ್ನು ಕೇಳಿದ ಬ್ರಾಹ್ಮಣರು ಅಂದಿನ ರಾತ್ರಿಯೆ ಪುರದಿಂದ ಹೊರಬಿದ್ದು ವಿಂಧ್ಯಾಟವಿಯನ್ನು ಹೊಕ್ಕು ಮಿಥ್ಯಾತಾಪಸರಾಗಿ ಉಪಶಾಂತತೆಯಿಂದ ಮಡಿದು ಸೌಧರ್ಮಸ್ವರ್ಗದಲ್ಲಿ ಕಿಲ್ವಿಷದೇವರಾಗಿ ಜನಿಸಿದರು. ಆ ಅರಿಂಜಯಚರದೇವನೆ ನಿನಗೆ ಹರಿಚಂದ್ರಕುಮಾರನಾಗಿ ಜನಿಸಿರುವನು. ಅದೇ ಕಿಲ್ವಿಷತ್ರಿದಶರೆ ಕ್ರಮದಿಂದಿಳಿದು ಬಂದು ನಿನಗೆ ಸಾಸಿರಕುಮಾರಕರಾಗಿ ಜನಿಸಿದರು.

---

## 30. ಕಾಂಪಿಲ್ಯನಗರದ ಮುತ್ತಿಗೆ.

ಹರಿಚಂದ್ರಕುಮಾರಕನ ಪೂರ್ವಭವವೃತ್ತಾಂತವನ್ನು ನಿರವಿಸಿದ ನಂತರ ಜಿನಚಂದ್ರಯೋಗಿಗಳು ಮುಂದುವರಿಸಿ ಜನ್ಮಾಂತರವೈರ ಕಾರಣವಾಗಿ ಸಾವಿರಮಂದಿ ಕುಮಾರಕರು ಕೂಡಿ ಹರಿಚಂದ್ರನನ್ನು ಹೊಳೆಯಲ್ಲಿ ಕೆಡಹಿದ ಕತೆಯನ್ನುಸುರಿದರು. ನಂತರ ಜ್ಞಾನದೃಷ್ಟಿಯಿಂದ ಅರಗುವರನ ವಾರ್ತೆಯನ್ನು ಭಾವಿಸಿ ತಿಳಿದು ಸವಿವರವಾಗಿ ಕಥಿಸಿದರು.

ಪುಣ್ಯವಶದಿಂದ ಹೊಳೆಯಲ್ಲಿ ಕೈಗೆ ಸಿಲುಕಿದ ಮರದಬೇರನ್ನು ಹಿಡಿದು ದಡಸೇರಿದ ಹರಿಚಂದ್ರನು ಜಿನನಾಮಂಗಳನ್ನು ಉಚ್ಚರಿಸುತ್ತಾ ಮರದಡಿಯಲ್ಲಿ ಕುಳಿತಿರಲು ಅಲ್ಲಿಗೆ ಓರ್ವ ವಣಿಜನೈತಂದನು. ಸ್ಮರರೂಪಿನ ಈ ಚೆನ್ನಿಗನನ್ನು ಕಂಡ ವಣಿಜನು ವಿಸ್ಮಯಬಟ್ಟನು. ಫಲಗಳನ್ನು ಕಾಣಿಕೆಯಿಟ್ಟು ನಮಿಸಿದ ವಣಿಜನು ತನ್ನ ವೃತ್ತಾಂತವನ್ನು ಕೇಳಲಾಗಿ ನಡೆದ ಘಟನೆಯನ್ನು ತಿಳುಹಿ ಹರಿಚಂದ್ರನು ಶ್ರೇಷ್ಠಿಯೊಡನೆ ಅವನ ಸಮಾಚಾರವೇನೆಂದು ಕೇಳಲಾಗಿ ಆತನಿಂತೆಂದನು—

ಪಾಂಚಾಳದೇಶದಲ್ಲಿ ಕಾಂಪಿಲ್ಯಪಟ್ಟಣಕ್ಕೆ ದೊರೆ ಮಹಾವೀರನೂ, ಸಮ್ಯಗ್ದೃಷ್ಟಿಯೂ, ಸುಂದರನೂ ಆದ ವಿದ್ಯುತ್ಪ್ರಭನು. ಆತನ ಮಡದಿ ವಸುಮತಿ. ಅವರಿಗೆ ನಂದೆ-ಸುನಂದೆಯರೆಂಬೀರ್ವರು ಮಕ್ಕಳು. ಅವರೊಂದುದಿನ ಶ್ರೀಪಂಚಮಿ ಬರಲು ಜಿನ ಮಂದಿರಕ್ಕೈದಿ ಪೂಜೆಯನ್ನು ಮುಗಿಸಿ ಕನಕದ ಬಟ್ಟಲೊಳಗೆ ಪ್ರಸಾದವನ್ನಾಂತು ತಂದೆಯ ಕೈಗೀಯಲು ಯೌವನದ ಹೊಸ್ತಿಲನ್ನೇರಿದ ಕುವರಿಯರನ್ನೀಕ್ಷಿಸಿ ಅವರ ವಿವಾಹಕ್ಕೆ ಮನ ದಂದವನಾಗಿ ಮಂತ್ರಿಯನ್ನು ಕರೆದು ಇವರಿಗೆ ಯೋಗ್ಯನಾದ ವರನಾವನೆಂದು ವಿಚಾರಿಸಲು ಅವನು 'ದೊರೆಯೆ! ನಾನೊಂದುದಿನ ವತ್ಸಜನಪದದೊಳಗೆ ಕೌಶಾಂಬಿಪುರದರಸು ವಸುಮತಿಯನ್ನು ಗೆದ್ದು ಮರಳುತ್ತಿರುವಾಗ, ವೃಷಭಾವರ್ತದ ಶೈಲಾಗ್ರದಲ್ಲಿ ಕೀರ್ತಿಧರರೆಂಬ ಮುನಿಗಳನ್ನು ಕಂಡು ನಿನ್ನ ಕುವರಿಯರಿಗೆ ವರನಾವನಾದಪನೆಂದು ಬೆಸಗೊಳಲು, ಆ ಮುನಿಗಳು ಅವಧಿಜ್ಞಾನದಿಂದ ಭಾವಿಸಿ ತಿಳಿದು, ನೆರೆತುಂಬಿ ಹರಿವ ಸಿಂಧೂನದಿಯಲ್ಲಿ ಈಸಿ ಬಂದಾತನೆ ಅವರ ಕೈಹಿಡಿಯುವನೆಂದರು. ನೀನಿದನ್ನು ನಂಬು' ಎಂದನು. ಅಲ್ಲಿಂದ ಮುಂದೆ ಅರಸನ ಆಜ್ಞೆಯ ಮೇರೆಗೆ ನಾನಿಲ್ಲಿ ನಿನಗಾಗಿ ಪ್ರತೀಕ್ಷಿಸುತ್ತಿರುವೆನು. ದೈವಯೋಗದಿಂದ ಆಸಮಸಾಹಸಿ ನೀನಿಂದು ದೊರಕಿದೆ. ನನ್ನೊಡಗೂಡಿ ಪುರಕೆ ದಯಮಾಡಬೇಕು.

ವಣಿಜನ ಈ ವಿನಯೋಕ್ತಿಗೆ ಒಡಂಬಟ್ಟು ಹರಿಚಂದ್ರನು ಕಾಂಪಿಲ್ಯಕ್ಕೆ ನಡೆತಂದನು. ದಾರಿಯಲ್ಲಿ ಶೂರಭಟರಿಬ್ಬರು ತಮ್ಮೊಳಗೆ ಕಾದುತ್ತಿರುವುದನ್ನು ಕಂಡು ವಸುಮಿತ್ರ ಶ್ರೇಷ್ಠಿಯೊಡನೆ ಕುಮಾರನು ಇದೇಕೆಂದು ಕೇಳಲು ವಸುಮಿತ್ರನು ನೆರೆದವರಲ್ಲೊಬ್ಬನನ್ನು ವಿಚಾರಿಸಿದನು. ನಂದ-ಸುನಂದೆಯರನ್ನು ಬಯಸಿ ಬಂದ ಶ್ರೀಪುರದ ಅರಸುವರ ವಸುಪಾಲನನ್ನು ವಿದ್ಯುತ್ಪ್ರಭನು ನಿರಾಕರಿಸಲಾಗಿ ಮುನಿದೆದ್ದ ಆತನು ನಮ್ಮ ನಗರಿಯನ್ನು ಮುತ್ತಿರುವನು. ಉಭಯಪಕ್ಷಗಳೊಳಗೆ ನಗರದಾದ್ಯಂತ ಹೊಯ್ದಾಟ ನಡೆಯುತ್ತಿದೆಯೆಂದು ತಿಳಿದುಬಂತು. ಕೂಡಲೆ ಹರಿಚಂದ್ರನು ನಸುನಕ್ಕು ಮುಂದಿರ್ದ ಆನೆಯನ್ನು ಕಂಡು ಸಿಂಹನಾದವನ್ನು ಮಾಡಿದನು. ಆನೆಯು ಬೆದರಿ ಓಡುತ್ತಿರಲಾಗಿ ಹಿಂಬಾಲಿಸಿ ಬಂದು ಬಾಲವನ್ನು ಹಿಡಿದೆಳೆದು ಕೆಡವಿದನು. ಬಿದ್ದ ಆನೆಯ ದಂತವನ್ನು ಕಿತ್ತು ಹೆಗಲೊಳಗಿಟ್ಟು ಕುರಿಹಿಂಡಿಗೆ ತೋಳಹೊಕ್ಕಂತೆ ಪರಸೈನ್ಯರಂಗಕ್ಕಿಳಿದನು. ಇದಿರಾದ ರಾಜಕುವರರನ್ನು ಸವರಿದನು. ರಥಗಳನ್ನು ಪುಡಿಗುಟ್ಟಿದನು. ವಾರಣವಾಜಿಗಳನ್ನು ಗುದ್ದಿ ಕೆಡಹಿದನು. ಕಾಲಾಳುಗಳು ಚದರಿ ಓಡಿದರು. ಇಂತು ಕಾಲಭೈರವನಂತೆ ಮುಂಬರಿದು ಬರುವ ಕುಮಾರಕನನ್ನು ವಿದ್ಯುತ್ಪ್ರಭನು ಕಂಡು ಈತನೆ ಮುನಿಭಾಷಿತಸತ್ಪುರುಷನಾಗಿರಬೇಕೆಂದೂಹಿಸಿ ಚತುರಂಗಬಲವನ್ನು ಕೂಡಿಕೊಟ್ಟು ದಂಡನಾಯಕ ಸಿಂಹೋದರನನ್ನು ಆತನ ಸಹಾಯಕ್ಕೆ ಕಳುಹಿದನು.



## 31. ಪದ್ಮವ್ಯೂಹ ವಿಜಯ.

**ಸಿಂ**ಹೋದರನು ಹರಿಚಂದ್ರನ ಬಳಿಗೈದಿ ಕೈಮುಗಿದು ನಿಂದಿರಲು ತನ್ನ ನೆರವಿಗೆ ಬಂದ ಈತನನ್ನು ಹಗೆಯೊಡ್ಡಿಗೆ ಇದಿರಾಗಿ ಗರುಡವ್ಯೂಹವನ್ನು ರಚಿಸಿ, ಆತನ ಸೈನ್ಯವನ್ನು ನಿಲ್ಲಿಸುವಂತೆ ಆಜ್ಞಾಪಿಸಿದನು. ಶಿರದಲ್ಲಿ ಸಿಂಹೋದರ, ಕೊಕ್ಕಿನಂದದಿ ಜಯವರ್ಮ, ಉರದಂತೆ ಶಚಿವೇಂದ್ರ, ರೆಕ್ಕೆಯಾಕಾರದಲ್ಲಿ ಪಟುಭಟರು ನಿಂದಿರಲು ಅತ್ತ ಸಿಂಹಬಲ-ವಸುಪಾಲನ ತಂದೆ-ತನ್ನ ದಂಡನಾಯಕನನ್ನು ಕರೆದು ತಮ್ಮ ಪಡೆಯಿಂದ ಪದ್ಮವ್ಯೂಹವನ್ನು ರಚಿಸುವಂತೆ ಆಜ್ಞಾಪಿಸಿದನು. ದಳದಂತೆ ಸುತ್ತಲು ಅಶ್ವಸೈನ್ಯವು ನಿಂದುದು; ಕಿರುವೆಸಳುಗಳಾಗಿ ಕಾಲಾಳುಗಳು ನಿಂತರು; ಉಳಿದ ಭೂಭುಜರು ಕೇಸರದಂತೆ ನಿಲ್ಲಲಾಗಿ ಒಳಗಣ ಕರ್ಣಿಕೆಯಂತೆ ವಸುಪಾಲನು ನಿಂತನು. ಹರಿಚಂದ್ರಕುಮಾರನು ವೀರಶೃಂಗಾರವನ್ನಾಂತು ಮಣಿಮಯರಥವನ್ನೇರಿ ಬಂದು ಮುಸಕದಿಂದ ಪದ್ಮವ್ಯೂಹಕ್ಕೆರಗಿದನು. ಎಸೆದ ಬಾಣಕ್ಕೆ ಕುದುರೆಗಳ ಮತ್ತು ಕಾಲಾಳುಗಳ ವ್ಯೂಹವು ಮುರಿದುದು. ದೊರೆಗಳು ಹರಿಚಂದ್ರನ ವಜ್ರಗದೆಗೆ ಹೆದರಿ ಒಳಹೊಕ್ಕು ಅಡಗಿದರು. ಇದಿರಾದ ಸಿಂಹಬಲನ ದಳಪತಿಯ ಮೈದುನ ಹರಿಕೇತುವನ್ನೂ, ಪ್ರಧಾನ ಜಯಸೇನನನ್ನೂ ಮುಟ್ಟಿ ಮೂದಲಿಸಿ ಬಂಗಿಸಿದನು. ಈ ವಾರ್ತೆ ಚರರಿಂದ ಸಿಂಹಬಲನಿಗೆ ತಿಳಿದುಬರಲು ಸರ್ಪದಂತೆ ಕನಲಿ ಖಡ್ಗಕ್ಕೆ ಕೈನೀಡಿದ ತಂದೆಯನ್ನು ಮಾಣಿಸಿ ವಸುಪಾಲನು ಮುಂದಾದನು. ಅವನನ್ನು ಹಿಂದಿಕ್ಕಿ ಹರಿಧನು, ಜಯಸಿಂಹ, ಹರಿವರ್ಮ ಮೊದಲಾದ ದೊರೆಗಳು ಯುದ್ಧಕ್ಕೆ ಸಿದ್ಧರಾದರು. ಸಿಂಹಬಲನ ಅಪ್ಪಣೆಯನ್ನು ಪಡೆದು ಹರಿಚಂದ್ರನನ್ನು ಇದುರಿಸಿದರು. ಹರಿಚಂದ್ರನು ಅವರನ್ನು ಬಾಣಗಳಿಂದೆಸೆದನು; ನಾಗಪಾಶದಿಂದ ಬಂಧಿಸಿದನು; ಗದೆಯಿಂದ ಹೊಯ್ದನು. ಇಂತು ಸೋತು ಸುಣ್ಣವಾದ ಅವರು ಕಾಡನ್ನು ಮರೆಹೊಕ್ಕರು. ದೇವತೆಗಳು ಹೂಮಳೆಗರೆದರು; ಪರಾಕ್ರಮಾತಿಶಯವನ್ನು ಕೊಂಡಾಡಿದರು. ಅಲ್ಲಿಗೆ ಸಂಜೆಯಾಗಲು ಉಭಯಸೈನ್ಯಗಳು ಯುದ್ಧದಿಂದ ವಿರಮಿಸಿದುವು. ಹರಿಚಂದ್ರನು ಗೂಡಾರವನ್ನು ಹೊಕ್ಕು ಸ್ನಾನಗೈದು ಜಿನರಾಜನ ಪಾದಾರ್ಚನೆಯನ್ನೆಸಗಿ ತನ್ನ ಪಡೆಯವರನ್ನು ವೀಳ್ಯಾದಿಗಳಿಂದ ಸಂಭಾವಿಸಿ ಅರುಹನೆ ಗತಿಯೆಂದು ಶಕುನಿಮಂಚವನ್ನೇರಿ ಸುಖನಿದ್ರೆಗೈದನು. ಮರುದಿನ ಇನನುದಯದಲ್ಲಿ ಸ್ನಾತಾನುಲಿಪ್ತನಾಗಿ ಜಿನಾರ್ಚನೆಗೈದು ಸಾಲಂಕೃತನಾಗಿ ಓಲಗಗೊಟ್ಟನು.

## 32. ಸಿಂಹಬಲನ ಮರಣ.

**ಎ**ರಡನೆಯ ದಿನದ ಯುದ್ಧದಲ್ಲಿ ಉಭಯಸೇನೆಗಳು ಮುನ್ನಿನಂತೆ ವ್ಯೂಹವೊಡ್ಡಿ ನಿಂತುದು. ರಣಕಹಳೆ ಮೊಳಗಲು ಧುರಗಲಿಗಳು ಯುದ್ಧಕ್ಕೆ ತೊಡಗಿದರು. ಅಷ್ಟರಲ್ಲಿ ವಿದ್ಯುತ್ಪ್ರಭನು ಊರ ಹೆಬ್ಬಾಗಿಲನ್ನು ತೆಗಿಸಿ ರಥವನ್ನೇರಿ ಬಂದು ಅರಿಬಲವನ್ನು ಕಾಲಭೈರವ

ನಂತೆ ಇದುರಿಸಿದನು. ಇದನ್ನು ಕಂಡ ವಸುಪಾಲನು ಸಿಂಹನ ಕಟ್ಟಿದ ರಥವನ್ನೇರಿ ಬಂದು ಮಾರಾಂತು ಇಂತೆಂದನು:– 'ಎಲವೊ, ಕಾಂಪಿಲೇಶ ! ಯುದ್ಧದಲ್ಲಿ ಹೇಡಿಗಳನ್ನು ಕೊಂದಿಕ್ಕಿದೆನೆಂಬ ಕೊಬ್ಬಿನಿಂದ ಬಂದಿರುವ ನಿನ್ನನ್ನು ಇದೊ ಈ ಕಣೆಯಿಂದ ಕೆಡಿಸಿ ಕೊಲ್ಲುವೆನು. ಬಾ, ಇದಿರಾಗು.'

ವಿದ್ಯುತ್ಪ್ರಭನು ನಸುನಕ್ಕು:– 'ದುಷ್ಟ ! ವ್ಯರ್ಥವಾಗಿ ಏಕೆ ಸಾಯಲಿರುವೆ, ಜೋಕೆಯಿಂದ ನಿನ್ನ ತಲೆಯನ್ನು ಉಳಿಸಿಕೋ'ಯೆಂದು ನುಡಿದು ಕಣೆಯೊಂದರಿಂದ ವಸುಪಾಲನ ಬಿಲ್ಲು, ಕವಚ, ರಥಗಳನ್ನು ಪುಡಿಗೈದನು. ವಸುಪಾಲನು ಬೇರೊಂದು ರಥವೇರಿ ಬಂದು ವಿದ್ಯುತ್ಪ್ರಭನ ಬಿಲ್ಲನ್ನು ತುಂಡರಿಸಲಾಗಿ, ವಿದ್ಯುತ್ಪ್ರಭನು ಮುಳಿದೆದ್ದು ಚಕ್ರದಿಂದಿಡಲು ವಸುಪಾಲನ ತಲೆಯನ್ನದು ತುಂಡರಿಸಿ ನಭಕ್ಕೆ ಹಾರಿದುದು. ಮಗನಳಿದ ಸುದ್ದಿಯನ್ನು ಕೇಳಿದ ಸಿಂಹಬಲನು ಕೋಪಾಟೋಪದಿಂದ ರಣರಂಗವನ್ನು ಹೊಕ್ಕು ರಿಪುಸೈನ್ಯವನ್ನು ಒಕ್ಕಲಿಕ್ಕಿ ವಿದ್ಯುತ್ಪ್ರಭನನ್ನಿದಿರಿಸಿ 'ಎಲವೊ, ಯಾವನೊ ಒಬ್ಬ ಪರದೇಶಿ ಹಸುಳೆಯನ್ನು ನಂಬಿ ಬಂದು ನನ್ನ ಪುತ್ರನನ್ನು ಕೊಂದಿರುವಿಯಷ್ಟೆ ? ಈ ಕದನದಲ್ಲಿ ನಿನ್ನ ಉಸುರಿಗುಬ್ಬಸವನ್ನು ಮಾಡದಿರೆನು' ಎಂದು ಬಾಣಗಳ ಮಳೆಯನ್ನು ಸುರಿದನು. ವಿದ್ಯುತ್ಪ್ರಭನು ಬೆದರದೆ ಎದುರಾಗಿ ಬರುವ ಅಂಬುಗಳನ್ನು ಬದಿಗೆ ಸರಿಸಿ ತೋಮರಾಯುಧದಿಂದಿಡಲು ಅದು ಸಿಂಹಬಲನ ರಥವನ್ನೂ ವಜ್ರಕವಚವನ್ನೂ ಪುಡಿಗುಟ್ಟಿದುದು. ವಿರಥನಾದ ಸಿಂಹಬಲನು ಮಗದೊಂದು ಕನಕರಥವನ್ನಡರಿ ವೈರಿಯ ತಲೆಗಡಿವೆನೆಂದು ಬರುವಷ್ಟರಲ್ಲಿ ಹರಿಚಂದ್ರನು ಇದಿರ್ವಂದು ಮಾತುಳನನ್ನು ಹಿಂದಿಕ್ಕಿ ಬಿಲ್ಲಿಗೆ ಹೆದೆಯೇರಿಸಿ ಜೇವಡೆದನು. ಇದನ್ನು ಕೇಳಿದ ಸಿಂಹಬಲನು ಇಂತೆಂದನು:— ಎಲೆ, ದುರುಳಬಾಲಕನೆ ! ನರಿ ಕೂಗಲಾಗಿ ಸಿಂಹ ವಂಜುವದೆ ? ಈ ಬಿಲ್ಲ ಠೇಂಕಾರಕ್ಕೆ ನಾನಂಜುವವನಲ್ಲ. ಬರಿದೆ ಈ ಪಾಂಚಾಲನದೆಸೆಯಿಂದ ಮಡಿಯದಿರು.

ಹರಿಚಂದ್ರನು ನಸುನಕ್ಕು ಮಾರ್ನುಡಿದನು:— ಹೇಡಿಗಳಾದ ಶಿಖಂಡಿಗಳನ್ನು ಕೊಂದಿಕ್ಕಿದೆನೆಂದು ನನ್ನೊಡನೆ ಪಂಥಪರಾಕ್ರಮವನ್ನು ನುಡಿಯದಿರು. ಹರಿಬಲನೇ ನಿನ್ನ ದೈವವನ್ನು ಸ್ಮರಿಸಿಕೋ.

ಇಂತು ಪಡಿನುಡಿದು ಬಿಟ್ಟ ಕೂರ್ಗಣೆಗೆ ಹರಿಬಲನ ಶಿರ ಹರಿದು ಬಿದ್ದುದು. ಸುರರು ಹೂಮಳೆಗರೆದರು. ದೇವದುಂದುಭಿ ಮೊಳಗಿದುದು. ವಿದ್ಯುತ್ಪ್ರಭನು ಅಭಯಘೋಷಣೆಯನ್ನು ಮಾಡಿದನು. ಉಭಯ ಸೈನ್ಯಗಳಲ್ಲೂ ಶವದಹನಾದಿಕ್ರಿಯೆಗಳು ಸಾಂಗವಾಗಿ ನಡೆದುದು. ಪಾಂಚಾಲನು ವಿನಯೋಪಚಾರಪೂರ್ವಕ ಹರಿಚಂದ್ರನನ್ನು ತನ್ನರಮನೆಗೆ ಕರೆದೊಯ್ದನು. ಶುಭದಿನ ಶುಭಮುಹೂರ್ತದಲ್ಲಿ ತನ್ನ ಕನ್ನಿಕೆಯೊರ್ವರನ್ನೂ ಹರಿಚಂದ್ರನಿಗೆ ಧಾರೆಯೆರೆದಿತ್ತನು.



## 33. ಪುಷ್ಪಮಾಲಾಪರಿಣಯ.

ಜನಪತಿ ವಿದ್ಯುತ್ಪ್ರಭನು ಹರಿಚಂದ್ರನನ್ನು ಸಿಂಹವಿಷ್ಟರದಲ್ಲಿ ಕುಳ್ಳಿರಿಸಿ 'ಹರಿಚಂದ್ರ ಕುಮಾರ ! ತರುಣಿಯರೆನ್ನ ಸುತೆಯರ್ಗೆ ಎರೆಯ ನೀನಾದಮೇಲೆ ಈ ಪಾಂಚಾಲದೇಶಕ್ಕೂ ನೀನೆ ಒಡೆಯನೆ'ಂದು ಪಟ್ಟಾಭಿಷೇಕವನ್ನೆಸಗಿದನು. ಗಂಡು ಸಂತಾನವಿಲ್ಲದ ವಿದ್ಯುತ್ಪ್ರಭನು ಈ ತನಕ ರಾಜ್ಯದ ಒಡೆತನವನ್ನು ನೋಡಿಕೊಳ್ಳುತ್ತಿದ್ದು ಈಗ ಅಳಿಯನಿಗೆ ರಾಜ್ಯಭಾರ ವನ್ನೊಪ್ಪಿಸಿ ತಾನು 'ದ್ವಾದಶವಿಧ ತಪವೆಂಬ ಪೊಡವಿಯನಾಳ್ದು ನಿರ್ವಾಣಮಡದಿಯ ನಾಳುವೆನೆ'ಂದು ದೀಕ್ಷೆಗೆ ತೆರಳಿದನು. ಆತನ ಹಿಂದೆ ಸಾಸಿರದೈನೂರು ಮಂದಿ ಅರಸಿಯರು, ಐವರು ಮಂತ್ರಿಯರು, ಭೂಪಾಲರನೇಕರು ವಿರಕ್ತರಾಗಿ ಹೊರಟರು. ಹರಿಚಂದ್ರನು ಮರುಗುತ್ತಿರುವ ತನ್ನ ಮಡದಿಯರನ್ನು ಸಂತಸವಿಟ್ಟು ವಸುಮಿತ್ರನೆಂಬ ವಣಿಜನನ್ನು ಕರೆದು ರಾಜಶ್ರೇಷ್ಠಿಪಟ್ಟವಕಟ್ಟಿ ಸುಖದಿಂದಿದ್ದನು.

ಒಂದು ದಿನ ಸೇವಕನೋರ್ವನೈತಂದು ಹರಿಚಂದ್ರನಿಗೆರಗಿ, ತಾನು ಶ್ರೀಪುರದಿಂದ ಬಂದಿರುವೆನಾಗಿ ತಿಳಿಸಿ ಭೈರವಮಂತ್ರಿಯಿತ್ತ ಓಲೆಯೊಂದನ್ನು ಒಪ್ಪಿಸಿದನು. ಪತ್ರವನ್ನು ಒಡೆದು ನೋಡಲಾಗಿ ಶ್ರೀಪುರದ ಹರಿಬಲನ ಮರಣಾನಂತರ ಅನಾಯಕವಾದ ಆ ಪಟ್ಟಣಕ್ಕೆ ಪುಳಿಂದೇಶನು ಮುತ್ತಿಗೆ ಹಾಕಿ ಉಪಸರ್ಗವೆಸಗುತ್ತಿರುವನೆಂದು ತಿಳಿದು ಬಂತು. ಹರಿ ಚಂದ್ರನು ಕೂಡಲೆ ಪಡೆಯನ್ನೊಡಗೂಡಿ ಶ್ರೀಪುರದ ಬಳಿಗೆ ಬಂದು ತನ್ನ ಸೈನಿಕರಿಗೆ ಪುಳಿಂದೇಶನನ್ನು ಹಿಡಿತರಲು ಆಜ್ಞೆಯಿತ್ತನು. ಸೈನಿಕರು ಬಾಳನ್ನು ಬೀಸಿ ಬೇಡಪಡೆಯನ್ನು ಸವರಿದರು. ಬೇಡನಾಯಕನನ್ನು ಹೆಡಮುರಿಕಟ್ಟಿ ತಂದು ದೊರೆಯ ಕಾಲಬಳಿಯಲ್ಲಿ ಕೆಡಹಿದರು. ಹರಿಚಂದ್ರನು ನೊಂದ ಶಬರೇಶನನ್ನು ಎತ್ತಿ ಅಭಯವನ್ನು ನುಡಿದು ತನ್ನ ವೀರರನ್ನು ಸಂಭಾವಿಸಿದನು. ಕೋಟೆಯ ಮೇಲ್ಗಡೆಯಿದ್ದು ಇದನ್ನು ನೋಡುತ್ತಿದ್ದ ಭೈರವ ಮಂತ್ರಿ ಅಲ್ಲಿಂದಿಳಿದು ಬಂದು ಹೆಬ್ಬಾಗಿಲನ್ನು ತೆರೆದು ಹರಿಚಂದ್ರನನ್ನು ಸ್ವಾಗತಿಸಿದನು. 'ಪುರದೊಡೆಯ ವಸುಪಾಲನ ಮರಣಾನಂತರ ನಿರ್ಗತಿಕರಾದ ಪ್ರಜೆಗಳ ಆಳ್ವಿಕೆಯ ಭಾರ ವನ್ನು ನೀನೆ ವಹಿಸಿ ಕಾಪಾಡಬೇಕೆಂದು ಪ್ರಾರ್ಥಿಸಿದನು. ಚಿತ್ತಾಪಹಾರಿಯೆಂಬ ಮುತ್ತಿನ ಚಾವಡಿಗೆ ಕರೆದೊಯ್ದು ಸಿಂಹವಿಷ್ಟರದಲ್ಲಿ ಕುಳ್ಳಿರಿಸಿ ರತ್ನಾಂಕಿತ ದಿವ್ಯಮುಕುಟವನ್ನು ತಲೆಗೇರಿಸಿ ಪಟ್ಟಾಭಿಷೇಕವನ್ನು ನೆರವೇರಿಸಿದನು. ಅದೇ ಸುಮುಹೂರ್ತದಲ್ಲಿ ತನ್ನ ಪುತ್ರಿ ಪುಷ್ಪಮಾಲೆಯನ್ನು ಅರಮಗನಿಗೆ ಧಾರೆಯೆರೆದು ಬಾಂಧವ್ಯವನ್ನು ಬಲಿದನು.

ನವವಧು ಪುಷ್ಪಮಾಲೆಯೊಡಗೂಡಿ ಸರಸವಿನೋದದಿಂದ ಹರಿಚಂದ್ರನು ಹೊತ್ತು ಗಳೆಯುತ್ತಿರಲು ಅದೊಂದು ರಾತ್ರಿ ಪವಡಿಸಿದ್ದು ತನಗಾಗಿ ಮರುಗುತ್ತಿರುವ ತಾಯಿಯ ಶೋಕಾತಿಶಯವನ್ನು ಕನವರಿಸಿ ಕಂಡವನಾಗಿ ಎಚ್ಚತ್ತು ಜನನೀಜನಕರನ್ನು ಕಾಣಬೇಕೆಂಬ ಬಯಕೆ ಹೆಚ್ಚಾಗಲು ಭೈರವಮಂತ್ರಿಗೆ ಇದನ್ನೊರೆದು ಹೊರಟನು. ಉಳಿದ ದೇಶಗಳನ್ನು

ಸಾಧಿಸಲು ಉತ್ತರಾಭಿಮುಖನಾಗಿ ಹೊರಟು ದೇಶಾಂತರಗಳ ರಾಜರನ್ನು ಗೆದ್ದು ಹಿಂದಿರುಗುತ್ತಿರುವಾಗ ಶ್ರೀಪುರದೊತ್ತಿನಲ್ಲಿ ಬೀಡು ಬಿಟ್ಟು ತನ್ನ ಮಡದಿ ಪುಷ್ಪಮಾಲೆಯನ್ನು ಕರೆಸಿಕೊಂಡು, ರಾಜ್ಯಭಾರವನ್ನು ಮಂತ್ರಿ ಭೈರವೇಶನ ಕೈಗೊಪ್ಪಿಸಿ ಹೊರಟನು. ಬರುತ್ತಾ ಜಲಾವರ್ತಗಿರಿಯಲ್ಲಿ ಬೀಡುಬಿಟ್ಟು ಕಾಂಪಿಲ್ಯನಗರಿಯಿಂದ ನಂದೆ-ಸುನಂದೆಯರನ್ನು ಕರೆಸಿಕೊಂಡು ರಾಜಶ್ರೇಷ್ಠಿ ವಸುಮಿತ್ರನಿಗೆ ಆ ದೇಶದ ಮಂತ್ರಿಪದವಿಯನೊಪ್ಪಿಸಿ ಅಲ್ಲಿಂದ ಹೊರಟು ತನ್ನ ಜನ್ಮಭೂಮಿಯಾದ ಕಾಶ್ಮೀರದೇಶಕ್ಕೈತಂದು ಪಟ್ಟಣದ ಹೊರಗಿನ ಉದ್ಯಾನದಲ್ಲಿ ಬೀಡನ್ನು ಬಿಡಿಸಿದನು.

ಜಿನಚಂದ್ರ ಮುನಿರಾಜರಿಂದ ತನ್ನ ಪುತ್ರನ ಈ ವಾರ್ತೆಯನ್ನು ಕೇಳಿದ ಜ್ಞಾನಚಂದ್ರನು ಸಂತುಷ್ಟಮಾನಸನಾಗಿ ಅವರ ಪಾದಗಳಿಗೆರಗಿದನು.



## 34. ಕುಮಾರರ ದೀಕ್ಷೆ.

ಹರಿಚಂದ್ರನಾಗಮನವಾರ್ತೆಯಿಂದ ಅರಮನೆಯಲ್ಲೆಲ್ಲ ಸಂತೋಷದ ಸುಗ್ಗಿ. ಆದರೆ ಸಾಸಿರಕುವರರ ವೈರಾಗ್ಯವೃತ್ತಾಂತ ಜನನೀಜನಕರನ್ನು ದುಃಖದ ಕಡಲಲ್ಲಿ ಅದ್ದಿದುದು. 'ಭವಬದ್ಧವೈರದ ದೆಸೆಯಿಂದ ಹಿರಿಯಣ್ಣನಲ್ಲಿ ಪ್ರೇಮವನ್ನು ತೊರೆದು ಇಂತು ಪಾಪಕರ್ಮವನ್ನೆಸಗಿದ ತಾವು ಲೋಕಾಪವಾದಕ್ಕೊಳಗಾದೆವು; ದುರಿತವ ನೆರಪಿದೆವು. ಇವನ್ನು ಕೆಡಿಸಲು ಜಿನದೀಕ್ಷೆನ್ನಾವುದೊಂದೆ ಹಾದಿ'ಯೆಂದು ನಿರ್ಧಾರಕ್ಕೆಬಂದ ಅವರು ತಾಯ್ತಂದೆಗಳ ಸಮಾಧಾನೋಕ್ತಿಗಳಿಗೆ ಕಿವಿಗೊಟ್ಟುದಿಲ್ಲ. ಪುತ್ರಶೋಕಕ್ಕೊಳಗಾದ ಮಾತಾಪಿತರನ್ನು ದಿವದಿಂದಿಳಿದು ಬಂದ ದೇವನೋರ್ವನು ಅಚ್ಚರಿಯಾಗೆ ಇಂತೆಂದು ಸಂತೈಸಿದನು:– 'ಅಮ್ಮಾಜಿರ ! ನಿಮಗೆ ನಾನೀ ಹಿರಿಯಕುಮಾರನಿರೆ ಇವರೊಳೇತರಾಸೆಯೋ ? ಸಾಲಾಗಿ ನಿಂತಿರುವ ಈ ಸೊಸೆಯಂದಿರನ್ನು ಕಾಣಬಾರದೇ ! ನಿಮ್ಮ ಸೇವೆಗಾಗಿ ಕಾದಿರುವರು. ನಿಮ್ಮ ಈ ಕುವರರ ಮೋಹವನ್ನು ತೊರೆಯಿರಿ.' ಈಪರಿ ನುಡಿದ ನಿರ್ಜರನೀತನಾರೆಂದು ಅರಸಿಯರು ಬೆರಗಾಗಿ ನೋಡುತ್ತಿರಲು ಅವನು 'ಜನನಿಯರುಗಳಿರಾ ! ಹಿಂದಿನಜನ್ಮದಲ್ಲಿ ಆನೆಯಾಗಿದ್ದ ನಾನು ಬಾಯಾರಿ ಬಂದು ಹೊಳೆಯೊಂದರಲ್ಲಿ ಸಿಲುಕಿ ಬಿದ್ದು ಸಾಯುತ್ತಿರುವಲ್ಲಿ ಜ್ಞಾನೇಂದು ನನ್ನನ್ನು ಉದ್ಧರಿಸಿದನು. ಅವನು ಉಪದೇಶಿಸಿದ ಪಂಚಪದದ ಮಹಿಮೆಯಿಂದ ದಿವಿಯಲ್ಲಿಂದು ದೇವನಾಗಿ ಮೆರೆಯುತ್ತಿರುವೆನು' ಎಂದನು. ಸಂಸಾರದ ಅಸಾರತೆಯನ್ನು ಈ ದೇವನ ಉಪದೇಶದಿಂದ ತಿಳಿದ ದೇವಿಯರು ಕುಮಾರರ ದೀಕ್ಷೆಗೆ ತಡೆಯಲಿಲ್ಲ. ಸರ್ವರೊಡಗೂಡಿ ಜಿನಚಂದ್ರ ಯೋಗೀಶ್ವರರ ಪಾದಮೂಲಕ್ಕೆ ಬಂದರು. ತಮ್ಮ ನಿರ್ಧಾರವನ್ನು ಸಾಸಿರಕುವರರು ಪೊಡಮಟ್ಟು ಬಿನ್ನವಿಸಿದರು. 'ಬಾಲಕರಾದ ನೀವು ದೀಕ್ಷೆಗಾಗಿ ಆಗ್ರಹಪಡಬಾರದೆ'ಂದು ಜಿನಚಂದ್ರ ಯತಿಗಳು ಇವರ ಚಿತ್ತಪರೀಕ್ಷಾರ್ಥ ನುಡಿದರೂ

ಅವರು ‘ನಿನ್ನ ಮೊಮ್ಮಕ್ಕಳು ನಾವು ಮೋಕ್ಷದುರ್ಗವನ್ನು ಸೂರೆಗೊಳದಿರೆ ಜ್ಞಾನೇಂದು ಸುತರೇ ?’ ಎಂದು ನುಡಿದರು. ಈ ವೀರೋಕ್ತಿಗೆ ಸೋತು ಯೋಗೀಂದ್ರರು ಕುವರರಿಗೆ ಅನಾಗಾರಧರ್ಮವನ್ನು ಸವಿಸ್ತಾರವಾಗಿ ಬೋಧಿಸಿದರು. ಉಪದೇಶಾನಂತರ ತಪಸಿವೇಷವ ತಾಳಿರೆನಲು ಕುವರರೆಲ್ಲ ‘ಇಚ್ಛಾಮಿ, ಇಚ್ಛಾಮಿ’ ಎನುತ ವಸ್ತ್ರಾಭರಣಗಳನ್ನು ತೊರೆದರು. ಕರ್ಮದ ಬೇರನ್ನು ಕೀಳುವಂತೆ ಕೇಶವನ್ನು ಪರಿದೀಡಾಡಿದರು. ಸುರರು ಹೂಮಳೆಗರೆದರು; ದೇವದುಂದುಭಿ ಮೊಳಗಿದುದು. ತನಗೆರಗಿದ ಆ ಕುಮಾರ ಮುನಿಗಳಿಗೆ ಜಿನಚಂದ್ರ ಯತಿಗಳು ‘ನಮೋಸ್ತೆ’ಂದು, ಕುಂಚ ಮೊದಲಾದ ಉಪಕರಣಗಳನ್ನು ಒಸೆದಿತ್ತರು. ಅವರವರ ಪೂರ್ವನಾಮಗಳಿಂದಲೇ ಈ ನೂತನ ಯತಿಗಳನ್ನು ಕರೆದರು. ನೆರೆದವರು ತರುಣಸಂಯಮಿಗಳಿಗೆರಗಿ ಅವರ ಘನತೆಯನ್ನು ಕೊಂಡಾಡಿ, ಸ್ವಸ್ಥಾನಕ್ಕೆ ಮರಳಿದರು. ಜ್ಞಾನಚಂದ್ರನು ಸಹಸ್ರಕುಮಾರರ ದೀಕ್ಷೆಯಿಂದ ನೊಂದಿದ್ದರೂ ಹರಿಚಂದ್ರನಾಗಮನದಿಂದ ಸಂತುಷ್ಟನಾಗಿ ಅನುಮತಿ ಸಹಿತ ಪುತ್ರನಿದ್ದ ಬನಕಾಗಿ ಬಂದನು. ಅಲ್ಲಿಳಿದು ಸಾವಿರ ವರ್ಷಕಾಲ ಅಗಲಿದ್ದ ಹರಿಚಂದ್ರ ಕುಮಾರನನ್ನು ಕಂಡು, ತಕ್ಕೈಸಿ, ಮುದ್ದಿಸಿ ಆನಂದಾಶ್ರುವಿನಿಂದ ಮೈದೊಳೆದು, ಒಡಗೂಡಿ ನಿಜ ನಗರಿಗೈದಿದನು.

## 35. ಮಲ್ಲಯುದ್ಧ.

ಬಹುಕಾಲಾನಂತರ ಪುತ್ರಮಿಲನದಿಂದ ಸಂತುಷ್ಟನಾದ ಜ್ಞಾನಚಂದ್ರನು ಹರಿಚಂದ್ರನೊಡನೆ ಸುಖಸಂಕಥಾಗೋಷ್ಠಿಯಲ್ಲಿ ಕಾಲಕಳೆಯುತ್ತಿದ್ದನು. ಇಂತಿರಲೊಂದು ದಿನ ಹರಿಚಂದ್ರನು ಪುರವಿಹಾರಕ್ಕೆ ಹೊರಟಿರಲು ಕರುಮಾಡವೇರಿದ ನರಸಿಂಹ ಮಂತ್ರೀಶ್ವರನ ಪುತ್ರಿ ರತ್ನಾವಳಿಯು ಈತನನ್ನು ಕಂಡು ಮೋಹಪರವಶಳಾದಳು. ಕೆಳದಿಯಿಂದ ಈ ವಾರ್ತೆಯನ್ನು ಕೇಳಿ ತಿಳಿದ ನರಸಿಂಹನು ದೊರೆಯ ಸನ್ನಿಧಿಗೈದಿ ಪುತ್ರಿಯ ಮನೋಗತವನ್ನು ನಿವೇದಿಸಿದನು. ಜ್ಞಾನಚಂಪ್ರಸಿದಕ್ಕೊಡಂಬಟ್ಟು ಗುಡಿತೋರಣಗಳನ್ನೆತ್ತಿಸಿ ಗುರುಪಂಚಮಿಯ ಶುಭದಿನದಂದು ಹರಿಚಂದ್ರ-ರತ್ನಾವಳಿಯರ ವಿವಾಹವನ್ನು ನೆರವೇರಿಸಿದನು.

ಜ್ಞಾನಚಂದ್ರನೊಂದು ದಿನ ಚಿತ್ರದ ಚಾವಡಿಯಲ್ಲಿ ಒಡ್ಡೋಲಗಗೊಡುತ್ತಿದ್ದನು. ಮುಂಗಡೆ ಊರ್ವಶಿ, ರಂಭೆ, ತಿಲೋತ್ತಮೆಯರಿಗೆಣೆಯಾದ ವಾರವನಿತೆಯರು ನಾಟ್ಯವಾಡುತ್ತಿದ್ದರು. ಅಷ್ಟರಲ್ಲಿ ವರದತ್ತನೆಂಬ ಪರದನೋರ್ವನೈತಂದು ಮುತ್ತುರತ್ನಗಳನ್ನು ಕಾಣಿಕೆಯಿತ್ತು ಕೈಮುಗಿದನು. ದೂರಾಂತರದಿಂದ ಆಗಮಿಸಿದ ಈ ಪರದನೊಡನೆ ವಾರ್ತಾವಿಶೇಷವೇನೆಂದು ಕೇಳಲು ಪರದನು ‘ವತ್ಸದೇಶದ ರೋರುಕಪುರದ ವನದಲ್ಲಿ ಜಿನಚಂದ್ರ ಯೋಗೀಂದ್ರರು ತಮಗೆ ಆಯುಷ್ಯವು ಇನ್ನುಳಿದುದು ಒಂದು ತಿಂಗಳೆಂದರಿತು ಸಕಲ ಸನ್ಯಸನವನ್ನು ಕೈಗೊಂಡು ಯೋಗಾಸಕ್ತರಾಗಿರುವರೆ’ಂದನು. ಜ್ಞಾನಚಂದ್ರನು ಒಡನೆ

ಹರಿಚಂದ್ರನನ್ನು ಕನಕಪುರದ ರಕ್ಷಣೆಯಲ್ಲಿ ನೇಮಿಸಿ, ತಾನು ವಿಮಾನವನ್ನಡರಿ ರೋರುಕ ಪುರಕ್ಕೆ ಬಂದನು. ಅಲ್ಲಿಯ ವನದಲ್ಲಿ ಮುನಿಮಧ್ಯದಲ್ಲಿ ಆಸೀನರಾಗಿದ್ದು ಪರಮಾತ್ಮಧ್ಯಾನ ದಲ್ಲಿ ನಿರತರಾದ ಜಿನಚಂದ್ರ ಮುನಿರಾಜರ ಪಾದಕಮಲಗಳಿಗೆರಗಿದನು. ನಿರಂತರ ಅವರ ಸೇವೆಯಲ್ಲಿ ನಿರತನಾಗಿರಲು ಇಪ್ಪತ್ತೆರಡನೆಯ ದಿನಕ್ಕೆ ವೀರಶಯ್ಯಾರೂಢರಾಗಿದ್ದ ಯೋಗೀ ಶ್ವರರು ಶಾಂತತೆಯಿಂದ ಇಹಶರೀರವನ್ನು ತೊರೆದು, ಪುಣ್ಯಪ್ರಭಾವದಿಂದ ಲಾಂತವಸ್ವರ್ಗ ದಲ್ಲಿ ಮಹರ್ದಿಕದೇವನಾಗಿ ಜನಿಸಿದರು.

ಲಾಂತವಸ್ವರ್ಗದಲ್ಲಿ ಜಿನಚಂದ್ರಚರ ದೇವನು ಸಿಂಹಧ್ವಜನೆಂಬ ಹೆಸರಿನಿಂದ ಮೆರೆ ದನು. ತನಗೊದಗಿದ ಅವಧಿಜ್ಞಾನದಿಂದ ತನ್ನ ಪೂರ್ವಭವವೃತ್ತಾಂತವನ್ನು ತಿಳಿದನು. ರೋರುಕಪುರದ ವನದಲ್ಲಿ ಜ್ಞಾನೇಂದುವು ಪಿತೃವಿಯೋಗದಿಂದ ಮುನಿವೃಂದದೊಡನೆ ಉಪ ವಾಸ ಕೈಗೊಂಡುದನ್ನು ಭಾವಿಸಿ ದಿವದಿಂದಿಳಿದು ಅಲ್ಲಿಗೈತಂದನು. ಮಗನನ್ನು ಮುದ್ದಿಸಿ ಬಿಗಿದಪ್ಪಿ 'ದೊರೆಯೆ ! ನಿನ್ನ ಪಿತ ಜಿನಚಂದ್ರನಾಗಿದ್ದ ಈ ನಾನು ಪಾವನ ಜೈನೀಯ ತಪ ವನ್ನಾಚರಿಸಿದುದರ ಫಲವಾಗಿ ಲಾಂತವವೆಂಬ ಏಳನೇ ಸ್ವರ್ಗದಲ್ಲಿ ದೇವನಾಗಿ ಜನಿಸಿದೆನು. ನೀನಾದರೂ ವಂಶಪರಂಪರೆಯಾಗಿ ಬಂದ ಜೈನಧರ್ಮವನ್ನು ಜಗತ್ತಿನಲ್ಲಿ ಪಸರಿಸಿ ಕೀರ್ತಿ ಭಾಜನನಾಗು. ನಿನಗಗತ್ಯ ಬಿದ್ದಾಗ ನೆನದಲ್ಲಿ ನಾನೊದಗಿ ಬಂದು ನೆರವಾಗುವೆನೆಂದನು. ಬಳಿಕ ದಿವ್ಯವಸ್ತುಗಳನ್ನಿತ್ತು ಬೀಳ್ಕೊಂಡು ದೇವಲೋಕಕ್ಕೆ ಮರಳಿದನು. ಪಾರಣೆಯ ದಿನ ಮುನಿಗಳಿಗೆಲ್ಲಾ ಆಹಾರದಾನವನ್ನಿತ್ತು ಜ್ಞಾನಚಂದ್ರನು ಶೇಷಾನ್ನವನ್ನು ಭುಂಜಿಸಿದನು. ಆರೋಗಣಾನಂತರ ಮುನಿಗಳಿಗಾನತನಾಗಿ ಕುಳಿತುಕೊಂಡಿರಲು ರೋರುಕಪುರಾಧೀಶ ಜಯವರ್ಮನೈತಂದು ಇಂತೆಂದು ಬಿನ್ನವಿಸಿದನು:–

ಸುರಗಿರಿಯಲ್ಲಿ ಮೆರೆವ ಸಾಸಿರಕೂಟ ಮಣಿಮಯಚೈತ್ಯಾಲಯದ ಮುಂಗಡೆ ಗೊಂಡಾರಣ್ಯವೊಂದಿರುವುದು. ಅದರೊಳಗೊಬ್ಬ ಭಯಂಕರ ಮೂರ್ತಿ ಕಾಳರಕ್ಕಸನಿರು ವನು. ದೇವದರ್ಶನಾರ್ಥ ಅಲ್ಲಿಗಡಿಯಿಟ್ಟ ಶ್ರಾವಕ ಜನರನ್ನು ಹಿಡಿದು ಪೀಡಿಸುವನಾತನ ದೆಸೆಯಿಂದ ಎಲ್ಲರೂ ಭಯಭೀತರಾಗಿರುವರು. ನೀನಿದನ್ನು ಪರಿಹರಿಸಿ ಉಪಕಾರವನ್ನೆಸಗ ಬೇಕು. ಈ ನುಡಿಗೇಳಿದ ಜ್ಞಾನಚಂದ್ರನು ಒಡನೆ ವಿಮಾನವೇರಿ ಅಲ್ಲಿಗೆ ಹೋದನು. ವಿಮಾನವಿಳಿದು ತನ್ನೆಡೆಗೆ ಬರುತ್ತಿರುವ ಜ್ಞಾನಚಂದ್ರನನ್ನು ಕಂಡು ಆ ಕಾಳರಕ್ಕಸನು ಮರ ವೊಂದನ್ನು ಕಿತ್ತು ಗದೆಯಾಗೆ ಪಿಡಿದೈದಿ ದೊರೆಯನ್ನು ಬಡಿದನು. ಜ್ಞಾನೇಂದುವು ಆತನನ್ನು ಕಂಕುಳಲ್ಲಿ ಬಿಗಿದು ಕೈಗೆ ಬಲವಾಗಿ ಗುದ್ದಲು, ಹಿಡಿದ ಮರ ಕೆಳಗುರುಳಿದುದು. ರಕ್ಕಸನು ಮಲ್ಲಯುದ್ಧಕ್ಕೆ ಅಣಿಯಾದನು. ಮಂದರ-ನೀಲಗಿರಿಗಳೆರಡು ಹೋರಾಡುವಂತೆ ಇಬ್ಬರೂ ಭಯಂಕರವಾಗಿ ಹೋರಾಡಿದರು. ತೋಳಲಿ ತೊಡರಿ, ದಂಡೆಯನೊತ್ತಿ, ವಜ್ರಮುಷ್ಟಿ ಯಿಂದಿಟ್ಟು ಪರಸ್ಪರ ಹೋರಾಡಿದರು. ರಾಜೇಂದ್ರನು ಅಡ್ಡಗಾಲಿಕ್ಕಿ ದಾನವನನ್ನು ಕೆಡಹಿ ದನು. ರಕ್ಕಸನೆದ್ದು ಬಂದು ಜ್ಞಾನಚಂದ್ರನನ್ನು ಮಗುಚಿ ಎದೆಯ ಮೇಲೆ ಕುಳಿತಿರಲು

ದೊರೆರನ್ನನು ಎದೆಯನ್ನು ಮೇಲಕ್ಕೆ ಚಿಮ್ಮಲು ಪುಟಚೆಂಡು ನೆಗೆವಂತೆ ವೇತಾಳನು ಮಾರುದ್ದ ನೆಗೆದು ಬಿದ್ದನು. ಕೊನೆಯಲ್ಲಿ ಕಾಳಮುಖನು ಬಿಲ್ಲನ್ನಾಂತು ಸರಳಮಳೆಗರೆಯಲು ಜ್ಞಾನ ಚಂದ್ರನು ಖಡ್ಗವನ್ನಾಂತು ನಡುವಿಗಿಟ್ಟನು. ರಕ್ಕಸನು ಎರಡು ತುಂಡಾಗಿ ಬೀಳಲು ಅವೆರಡು ಉಭಯರೂಪುಗಳಾಗಿ ಎದ್ದು ಬಂದುವು. ಅದನ್ನು ಕಡಿಯಲು ರೂಪು ನಾಲ್ಕಾದುದು. ಈಪರಿ ಹೆಚ್ಚುತ್ತಿರುವ ಅಸುರನ ಮಾಯೆಯನ್ನರಿತು ಪರವಿದ್ಯಾಚ್ಛೇದಿನಿಯೆಂಬ ಮಂತ್ರಾಸ್ತ್ರದಿಂದಿ ಡಲು ಮಾಯೆಯೆಲ್ಲ ಬಯಲಾದುದು. ಈಪರಿ ನಡೆದ ಹೋರಾಟದಲ್ಲಿ ದಾನವನು ಮುನೀಂದ್ರನ ವೀರ್ಯಾತಿಶಯವನ್ನು ಕಂಡು ಮಾರುಹೋದನು. ಕೋಪವನ್ನುಳಿದು ಜ್ಞಾನ ಚಂದ್ರನಿಗೆ ಮಣಿದು 'ಭುವನವಲ್ಲಭ ! ಭುವನೈಕವೀರ ! ನಿನ್ನಯ ಕೋಪಕೆ ನಾನು ಹವಣೇ ? ನಿನ್ನಂಗವು ಸೋಂಕೆ ನಿಜವಾಗಿಯೂ ನನ್ನ ಶರೀರವು ಸಿದ್ಧರಸವ ಸೋಂಕಿದ ಲೋಹದಂತೆ ಪಾವನವಾದುದು' ಎಂದನು. ಶರಣಾಗತರಕ್ಷಕನು ರಾಕ್ಷಸನನ್ನೆತ್ತಿ ಸಲಹಿದನು.

## 36. ಬೇತಾಳನ ಭವಾವಳಿ.

**ದೊರೆ**ರನ್ನ ! ನನ್ನ ಬಿನ್ನಹವ ಲಾಲಿಪುದು. ನಾನು ಉರಗಲೋಕದ ಸೌಪರ್ಣ ಕುಲದಲ್ಲಿ ಜನಿಸಿದೆನು. ನನ್ನ ಹೆಸರು ವೇಣುಕುಮಾರನೆಂದು. ಫಾಲ್ಗುಣ ಶುದ್ಧ ನಂದೀಶ್ವರದಷ್ಟಮಿಯಂದು ಒಂದು ದಿನ ನಾನು ಸಾಸಿರಕೂಟ ಜಿನಗೃಹವನ್ನು ಹೊಕ್ಕು ಸುತ್ತಿಗೈದು ಮುಂದಿನ ಮಂಟಪದಲ್ಲಿ ಸ್ಫಟಿಕಶಿಲೆಯಲ್ಲಿ ಆಸೀನರಾಗಿದ್ದ ಯಮಧರ ಮುನಿಗಳಿಗೆ ವಂದಿಸಿ, 'ನನಗಿನ್ನುಳಿದಿರುವ ಆಯುಷ್ಯವೆಷ್ಟು? ಮುಂದೆ ನಾನೆಲ್ಲಿ ಹುಟ್ಟುವೆನು. ನನ್ನ ಹಿಂದಿನ ಭವಾಂತರಗಳಾವುವು ? ಕರುಣೆಯಿಂದೊರೆಯಬೇಕೆಂದು ಪ್ರಾರ್ಥಿಸಿದೆನು. ಅದಕ್ಕಾ ಮಹಾನುಭಾವರು 'ಈ ಬಸದಿಯ ಮುಂಭಾಗದಲ್ಲೊಂದು ಕಾನನಮುಂಟು. ಅಲ್ಲಿ ನೀನಿರಲು ಯಾವಾತನು ಬಂದು ನಿನ್ನನ್ನು ಜಯಿಸುವನೋ ಆತನಿಗೆ ನೀನು ಮುಂದಣಭವದಲ್ಲಿ ಮಗನಾಗಿ ಜನಿಸುವೆ. ನಿನಗಿನ್ನುಳಿದಿರುವ ಆಯುಷ್ಯವು ಆರು ತಿಂಗಳು ಮಾತ್ರ'ವೆಂದು ನುಡಿದರು. ಹಿಂದಣಭವಪರಂಪರೆಯನ್ನು ಸಪ್ರಪಂಚವಾಗಿ ಇಂತೆಂದು ನಿರೂಪಿಸಿದರು:-

ಸಾಲಿಗ್ರಾಮದಲ್ಲಿ ಶಿವಶರ್ಮನೆಂಬ ವಿಪ್ರನು ಬಳಲಿದ ಮುನಿಪನ ದೇಹದ ಬೆವರಿನ ವಾಸನೆಗೆ ಮುನಿದು ಅವರನ್ನು ಊರ ಹೊರಗೆ ದೂಡಿಸಿದನು. ತತ್ಪರಿಣಾಮವಾಗಿ ಆ ಬ್ರಾಹ್ಮಣನ ಮನೆ ಅಗ್ನಿಗಾಹುತಿಯಾಗೆ ಆತನು ಮಡಿದನು. ಮುಂದೆ ಆ ಜೀವ ಮಲಯಾಚಲದಲ್ಲಿ ಮಲಯಭೂಷಣವೆಂಬ ಆನೆಯಾಗಿ ಪುಟ್ಟಿದುದು. ಅದೊಂದು ದಿನ ಕರಿಣಿಯೊಡನೆ ಕ್ರೀಡಿಸುತ್ತಿರಲು ಮಗದೊಂದು ಆನೆ ಕೋಪಗೊಂಡು ಅದನ್ನು ಕೊಂದಿಕ್ಕಿದುದು. ಈಪರಿ ಮಡಿದು ಮುಂದೆ ನೀಲಗಿರಿಯ ಕೂಪಜಲದಲ್ಲಿ ಮೀನಾಗಿ ಪುಟ್ಟಿದುದು. ಬೆಸ್ತನ ಬಲೆಗೆ ಆ ಮೀನು ಸಿಲುಕಿ ಮಡಿದು ಸೌರಾಷ್ಟ್ರದಲ್ಲಿ ಶಬರಿಯೋರ್ವಳ ಹೊಟ್ಟೆಯಲ್ಲಿ ಬಂದು ಜನ್ಮ

ತಾಳಿತು. ಔದುಂಬರ ಕೋಷ್ಠಕ್ಕೆ ಬಲಿಯಾಗೆ ಮನೆಯಿಂದ ಹೊರದೂಡಲು ಕಾಡಿನಲ್ಲಿ ಒಂದು ಹೆಬ್ಬುಲಿಯ ಬಾಯಿಗೆ ತುತ್ತಾದುದು. ಘನಕರ್ಮವಶದಿಂದ ನರಕ ದುಃಖವನ್ನುಂಡ ಆ ಜೀವವು ಪುನಃ ಭರತಖಂಡದ ಪೌದನಪುರದಲ್ಲಿ ಜಿತರಂಗನೆಂಬ ದ್ವಿಜನಿಗೆ ತ್ರಿಪುರೆ ಯೆಂಬವಳಲ್ಲಿ ಕಾಪಿಲನಾಗಿ ಜನಿಸಿದುದು. ಸಪ್ತವ್ಯಸನಿಯಾದಾತನು ಮನೆಮನೆಗಳನ್ನು ಹೊಕ್ಕು ಕಳ್ಳತನವನ್ನೆಸಗುತ್ತಿರಲು ತಳಾರರು ಓಡಿಸಿ ಬರಲಾಗಿ ಕಾಡನ್ನು ಹೊಕ್ಕು ಸುವ್ರತ ರೆಂಬ ಮುನೀಶ್ವರರ ಮರೆಹೊಕ್ಕನು. ಮುನಿಗಳೊರೆದ ಧರ್ಮಸಾರವನ್ನೂ ಹಿಂದಣಭವ ವೃತ್ತಾಂತವನ್ನೂ ಕೇಳಿ ನಿರ್ವೇಗ ತಾಳಿ ಅವರ ಪಾದಮೂಲದಲ್ಲಿ ದೀಕ್ಷೆಯನ್ನಾಂತು ತಪಸ್ಸನ್ನಾಚರಿಸುತ್ತಿರಲು, ಮೇಲ್ಗಡೆ ಹೋಗುತ್ತಿರುವ ದೇವವಿಮಾನವನ್ನು ಕಂಡು ಆ ಸಂಪತ್ತು ತನಗೆ ದೊರಕಲೆಂದು ಭಾವಿಸಿದ ನಿದಾನದಿಂದ ಮಡಿದು ಅದೇ ಹಿಂದಿನ ಶಿವ ಶರ್ಮಜೀವಿ ಇಂದು ವೇಣುಕುಮಾರನೆಂಬ ಹೆಸರಿನಿಂದ ನೀನಾಗಿ ಜನಿಸಿರುವೆ.

ಇಂತಿದು ಯಮಧರ ಮುನಿಗಳೊರೆದ ನನ್ನ ಕಥೆ. ಋಣಾನುಬಂಧದಿಂದ ನೀನಿಂದು ಸಿಕ್ಕಿದೆ. ನನ್ನ ಜನ್ಮ ಪಾವನವಾದುದು.

ರಕ್ಕಸ ವೇಣುಕುಮಾರನು ಈಪರಿ ನುಡಿದು ಅಪೂರ್ವವಸ್ತುಗಳನ್ನು ಉಡುಗೊರೆ ಯಿತ್ತು ಉರಗಲೋಕಕ್ಕೆ ಮರಳಿದನು. ಜ್ಞಾನಚಂದ್ರನು ಮಂದಿರವನ್ನು ಹೊಕ್ಕು ನೂರೆಂಟು ಬಿಂಬಗಳನ್ನು ನುತಿಸಿ ಪೂಜಿಸಿ ಬೀಳ್ಕೊಂಡನು. ಹೊರಗೈದಿ ಮುಂದಿನ ಮಣಿಮಯ ಮಂಟಪದಲ್ಲಿ ಕುಳಿತುಕೊಂಡನು.

ಇತ್ತ ಪುರಜನರು ದನುಜನ ಹಾವಳಿ ದೂರವಾದುದಕ್ಕೆ ಸಂತಸದಿಂದ ಅರಸ ಜಯ ವರ್ಮನೊಡಗೂಡಿ ಜಿನಮಂದಿರಕ್ಕೈದಿ ನೂರೆಂಟು ಬಿಂಬಗಳನ್ನು ಪೂಜಿಸಿ ನುತಿಗೈದರು. ಬಳಿಕ ಜ್ಞಾನಚಂದ್ರನ ಬಳಿಗೈದಿ ಆತನೆಸಗಿದ ಉಪಕಾರಕ್ಕೆ ತಮ್ಮ ಕೃತಜ್ಞತೆಯನ್ನು ವ್ಯಕ್ತ ಪಡಿಸಿದರು. ಅವರಲ್ಲಿ ಜಿನದತ್ತ ಶ್ರೇಷ್ಠಿಯ ಪುತ್ರಿ ಜಿತರಂಭೆಯೆಂಬಾಕೆ ಜ್ಞಾನಚಂದ್ರನ ಸೌಂದರ್ಯಕ್ಕೆ ಸೋತು ಮನೆಗೆ ಮರಳಿದವಳು ಸ್ಮರಬಾಧೆಯಿಂದ ಪರಿತಪಿಸುತ್ತಿರಲು ಜಿನದತ್ತನು ಆಕೆಯ ಸಖಿಯರಿಂದ ಕೇಳಿ ತಿಳಿದು ದೊರೆಯಲ್ಲಿಗೆ ತೆರಳಿ ಈ ಸಮಾಚಾರ ವನ್ನು ತಿಳಿಸಿದನು. ಜಯವರ್ಮನು ಜ್ಞಾನಚಂದ್ರನ ಬಳಿಗೈದಿ ಜಿತರಂಭೆಯನ್ನು ಕೈಹಿಡಿದು ಉದ್ಧರಿಸಬೇಕೆಂದು ಕೇಳಿಕೊಂಡನು. ಅದಕ್ಕೊಪ್ಪಿದ ಜ್ಞಾನೇಂದು ಜಯವರ್ಮನೊಡನೆ ಅರಮನೆಗೈದಿದನು. ವಿದ್ಯಾದೇವತೆಯಿಂದ ಅನುಮತ್ಯಾಧಿ ತರುಣಿಯರನ್ನು ಕರೆಸಿಕೊಂಡನು. ಜಿನದತ್ತ ಶ್ರೇಷ್ಠಿಯು ಸ್ವಗೃಹದಲ್ಲಿ ವೈಭವಪೂರ್ವಕ ಜ್ಞಾನಚಂದ್ರ-ಜಿತರಂಭೆಯರ ವಿವಾಹ ಕಲ್ಯಾಣವನ್ನು ನೆರವೇರಿಸಿದನು.



## 37. ಪಟ್ಟಾಭಿಷೇಕ.

ಜಿತರಂಭೆ ತನ್ನ ಇನಿಯನೊಡಗೂಡಿ ಸಂಸತದಿಂದಿರಲೊಂದುದಿನ ಋತುಮತಿಯಾಗಿ ಚತುರ್ಥ ಸ್ನಾನಾನಂತರ ಪತಿಯ ಬಳಿಯಲ್ಲಿ ಪಟ್ಟಿರ್ದು ಬೆಳಗಿನ ಜಾವದಲ್ಲಿ ಕನಸೊಂದನ್ನು ಕಂಡಳು. ಬೆಳಕು ಹರಿಯಲೆದ್ದು ಸ್ನಾನ ಪೂಜಾನಂತರ ದೊರೆಯ ಬಳಿಗೈದಿ ತಾನು ಕಂಡ ಕನಸನ್ನು ವಿವರಿಸಿದಳು. ಜ್ಞಾನಚಂದ್ರನು ಕ್ಷಣಕಾಲ ಭಾವಿಸಿ ಅದರ ಫಲವನ್ನು ಇಂತೆಂದು ವಿವರಿಸಿದನು:- 'ಎಲೆ ಮೀನಲೋಚನೆ ! ನೀನು ಸ್ವಪ್ನದಲ್ಲಿ ಭರಣಿಯೊಳಗಿರುವ ಸ್ವಚ್ಛೋದಕದಲ್ಲಿ ಎರಡು ಮೀನುಗಳನ್ನು ಕಂಡುದರಿಂದ ನಿನ್ನುದರದಲ್ಲಿ ಅವಳಿಮಕ್ಕಳು ಜನಿಸುವರು. ಪೂರ್ಣಚಂದ್ರಬಿಂಬವನ್ನು ಕಂಡುದರಿಂದ ಆ ಮಕ್ಕಳು ಸಕಲ ಕಲಾಧರರಾಗುವರು. ಸೂರ್ಯಮಂಡಲವೆರಡು ಕಾಣಿಸಿದುದರಿಂದ ಅವರು ಮಹಾಪರಾಕ್ರಮಿಗಳಾಗುವರು. ಕಲ್ಪವೃಕ್ಷವೆರಡನ್ನು ಕಂಡುದರಿಂದ ಮಹಾದಾನಿಗಳಾಗುವರು. ಸಮುದ್ರ ಯುಗವನ್ನು ನೋಡಿದ ಕಾರಣ ಮಹಾನುಭಾವರಾಗಿ ಮೆರೆವರು.'

ರಾಜೇಂದ್ರನ ನುಡಿಗೇಳಿ ಜಿತರಂಭೆ ಹರ್ಷವದನೆಯಾದಳು. ಆಗ ತಾನೆ ವೇಣುಕುಮಾರನು ಆಯುಷ್ಯತೀರಿ ಬರುತ್ತಿರಲಾಗಿ, ಅತ್ತ ಧರಣೇಂದ್ರಲೋಕದಿಂದ ಶ್ರೀಕಾಂತೆಯೂ ಆಯುಷ್ಯಾವಸಾನದಲ್ಲಿ ಬಂದು ಇದೇ ಜಿತರಂಭೆಯ ಉದರದಲ್ಲಿ ಅವಳಾಗಿ ನೆಲೆಸಿದರು. ಮಡದಿಗೆ ಎರಡೂವರೆ ದ್ವೀಪವೊಳಗಣ ಜಿನಮಂದಿರಗಳನ್ನು ದರ್ಶನಗೈಯಬೇಕೆಂಬ ಬಯಕೆ ಪುಟ್ಟಲು ಅರಸನು ತೀರ್ಥಯಾತ್ರೆಗೆ ಸಕಲ ಸಿದ್ಧತೆಗಳನ್ನೆಸಗಿದನು. ಅನುಮತಿ ಮೊದಲಾದ ಪದಿನೈದು ಸಾಸಿರ ಮಡದಿಯರೊಡಗೂಡಿ ಹೊರಟನು. ವಿಮಾನವೇರಿ ಸುರಗಿರಿಯಾದಿಯಾಗಿ ಗಿರಿಗಳ ಮೇಲಿದ್ದ ಜಿನರನ್ನು ವಂದಿಸಿ ಧಾತಕೀಖಂಡದ್ವೀಪವನ್ನು ದಾಟಿ ಬರುತ್ತಿರಲು ಕಾಣಿಸಿಕೊಂಡ ಸಮುದ್ರವನ್ನು ಮಡದಿಯರಿಗೆ ಬಣ್ಣಿಸಿ ತೋರಿದನು. ವಿದ್ಯಾಬಲದಿಂದ ರತ್ನಾಂಕಿತ ಹಡಗವೊಂದನ್ನು ರಚಿಸಿ ಪತ್ನಿಯರೊಡಗೂಡಿ ಕಾಳೋದಕ ವಾರ್ಧಿಯಲ್ಲಿ ನಡೆಸಿದನು. ವಿನೋದಕ್ಕೆಂದು ತನ್ನ ಮಾಯಾಬಲದಿಂದ ಬಿರುಗಾಳಿಯೆಬ್ಬಿಸಿ ಹಡಗೊಡೆವಂತೆ ತೋರಿದನು. ನಂಬಿದ ಸತಿಯರು ಇನಿಯನ ಕೈಕಾಲು ನಡುಕೊರಳುಗಳಿಗೆ ತಕ್ಕೆಬಿದ್ದು ಮರುಗಿದರು. ನರನಾಥನು ಮನದೊಳಗೆ ನಕ್ಕು ಗರುವೆಯರಾಟವನ್ನು ಕಂಡು ಉಬ್ಬಿ ಮಾಯೆಯನ್ನು ತೊಲಗಿಸಿದನು. ತರುಣಿಯರಿದನ್ನರಿತು ತಮ್ಮಿನಿಯನ ಮಾಟಗಾರಿಕೆಗೆ ದೂರಿದರು; ಅವನ ಚಾತುರ್ಯಕ್ಕೆ ಹಿಗ್ಗಿದರು. ನಂತರ ಧಾತಕೀಖಂಡ ದ್ವೀಪವನ್ನು ಹೊಕ್ಕು ಅಲ್ಲಿನ ಗಿರಿ-ನಗರಗಳನ್ನು ತೋರುತ್ತಾ ಭರತಖಂಡಕ್ಕೆ ಬರುತ್ತಿರಲು ಕ್ಷುಲ್ಲಕ ಜಲಧಿಮಧ್ಯದೊಳಿರುವ ರತ್ನದ್ವೀಪದ ಪರಿಚಯವನ್ನು ಅನುಮತಿಗೆ ಮಾಡಿಕೊಟ್ಟನು. ಅಲ್ಲಿನ ಕಾಂಚನಗಿರಿಯನ್ನು ಕಂಡು ಅವರ ಅಂದಕ್ಕೆ ಮಾರುಹೋಗಿ ಅಲ್ಲಿಯೆ ನೆಲೆಸುವ ಯೋಚನೆಗೈದನು. ವಿದ್ಯಾಬಲದಿಂದ ನೂತನ ನಗರಿಯೊಂದನ್ನು ರಚಿಸಿದನು.

ಪಟ್ಟಣದ ಬೀದಿಗಳು ಕೂಡುವಲ್ಲಿ ಶ್ರೀ ಶಾಂತಿಜಿನೇಶನ ಚೈತ್ಯಾಲಯವು ರಚಿತವಾದುದು. ಅದರ ಮುಂಗಡೆಗೆ ರಾಜಾಲಯ. ಜ್ಞಾನಚಂದ್ರನು ಪತ್ನಿಯರೊಡಗೂಡಿ ನಿಶ್ಚಿಂತೆಯಿಂದ ಅಲ್ಲಿ ನೆಲೆಸಿದನು.

ಜಗನ್ಮೋಹನವೆಂಬ ಮೆರೆವ ಮುತ್ತಿನ ಚಾವಡಿಯಲ್ಲಿ ಜ್ಞಾನಚಂದ್ರ ಓಲಗ ಗೊಟ್ಟಿರಲು ಕರಿಚರದೇವ ಮತ್ತು ಹರಿಕೇತು ದೇವಾಂಗನೆಯರೊಡಗೂಡಿ ವಿಮಾನದಿಂದಿಳಿದರು. ಅರಸನು ಅವರನ್ನು ಸ್ವಾಗತಿಸಿದನು. ಸತ್ಕೃತರಾದ ಅವರು ಜ್ಞಾನಚಂದ್ರನಿಗೆ ಸ್ಥಿರ ಸಾಮ್ರಾಜ್ಯಪಟ್ಟವನ್ನು ಕಟ್ಟಲೈದಿದ ತಮ್ಮ ಕಜ್ಜವನ್ನರುಹಿದರು. ಹರಿಕೇತುವಿನ ಮಡದಿ ಸ್ವಯಂಪ್ರಭೆಯಿಂದ ಈ ಸುದ್ದಿ ಅನುಮತಿದೇವಿಗೂ ತಿಳಿದುದು. ತಡೆಯೇನು, ಜ್ಞಾನ ಚಂದ್ರನು ತನ್ನ ಇಷ್ಟಮಿತ್ರರು, ಬಂಧುಬಾಂಧವರು ಎಲ್ಲರನ್ನೂ ಕರೆಸಿಕೊಂಡನು. ಇಳೆ ಯಾಣ್ಮರು ಸಹವಾಗಿ ಸುರರು ವಿಧಿವಿಧಾನಗಳೊಡನೆ ಸೂರ್ಯಪ್ರಭವೆಂಬ ಮುಕುಟವನ್ನು ಜ್ಞಾನಚಂದ್ರನ ಶಿರಕ್ಕಳವಡಿಸಿ ಸಾಮ್ರಾಜ್ಯಪಟ್ಟವನ್ನು ಕಟ್ಟಿದರು. ಭೂಚರಿಯರು ಚಾಮರ ವನ್ನು ಬೀಸುತ್ತಿರಲು, ದೇವಾಂಗನಾನೃತ್ಯವು ಪಟ್ಟಾಭಿಷೇಕ ಮಹೋತ್ಸವಕ್ಕೆ ಕಳೆಗಟ್ಟಿ ದುದು. ದೇವತೆಗಳು ಅಪೂರ್ವವಸ್ತುಗಳನ್ನೂ ಅಸಾಧಾರಣ ವಿದ್ಯೆಗಳನ್ನೂ ಜ್ಞಾನಚಂದ್ರ ನಿಗೆ ಇತ್ತು ಉಚಿತ ಉಡುಗೊರೆಗಳಿಂದ ಸಂಭಾವಿತರಾಗಿ ಮರಳಿದರು. ಮಹಾಮಂಡ ಲೇಶ್ವರನು ಭೂಭುಜರ ಮಧ್ಯೆ ಸಂತೋಷದಿಂದ ಮೆರೆಯುತ್ತಿರುವಾಗಲೆ ಅತ್ತ ಜಿತರಂಭಾ ದೇವಿ ಅವಳು ಗಂಡು ಮಕ್ಕಳನ್ನು ಹೆತ್ತಳು. ಒಸಗೆಯ ಮೇಲೆ ಒಸಗೆ ಜ್ಞಾನಚಂದ್ರನಿಗೆ ಆತನ ಪುಣ್ಯಪ್ರಭಾವದಿಂದ ಸಂಘಟಿಸಿದುದು. ಪಟ್ಟಣದಲ್ಲೆಲ್ಲೆಡೆ ದಾನಪೂಜೆಗಳನ್ನು ಅರಸನು ನಡೆಸಿ ಸಂತೋಷವನ್ನು ವ್ಯಕ್ತಪಡಿಸಿದನು. ಮಕ್ಕಳಿಗೆ ಭಾನು-ಸುಭಾನುವೆಂದು ಹೆಸರಿಟ್ಟು ನಾಮಕರಣಮಹೋತ್ಸವವನ್ನು ವೈಭವದಿಂದ ನೆರವೇರಿಸಿದನು. ಕಾಶ್ಮೀರದೇಶದಿಂದ ಹರಿಚಂದ್ರಕುಮಾರನನ್ನು ಕರೆಸಿಕೊಂಡು ಕಾಶ್ಮೀರದೇಶಾಧಿಪತ್ಯವನ್ನು ಆತನಿಗೊಪ್ಪಿಸಿ ನೆರೆದ ನೃಪರ ಮುಂದೆ ಪಟ್ಟಗಟ್ಟಿದನು. ತಾಯ್ತಂದೆಯರಡಿಗೆರಗಿ ಆಶೀರ್ವಾದವನ್ನು ಪಡೆದು, ಹರಿಚಂದ್ರರಾಜನು ಸ್ವದೇಶಕ್ಕೆ ಮರಳಿದನು. ಜ್ಞಾನಚಂದ್ರನು ಕಾಂಚನಗಿರಿಯಲ್ಲಿ ಸಾಮ್ರಾಜ್ಯ ವನ್ನಾಳುತ್ತಾ ಭೂರಿವೈಭವದಿಂದ ಮೆರೆದನು.

## 38. ಚಂದ್ರಿಕಾವಿಹಾರ.

**ಜ್ಞಾ**ನಚಂದ್ರನು ಸಕಲ ಸಾಮ್ರಾಜ್ಯವನ್ನಾಳುತ್ತಿದ್ದು ಅದೊಂದು ದಿನ ಚಂದ್ರಿಕಾ ವಿಹರಣವನ್ನು ಮಾಡಬೇಕೆಂದು ಬಯಸಿದನು. ಅತ್ತ ಪಡುಗಡೆಯಲ್ಲಿ ಸೂರ್ಯನು ಮುಳುಗಿದನು. ಅನುಪಮಸಂಜೆಗೆಂಪು ಆಕಾಶಮಂಡಲದಲ್ಲಿ ಹಬ್ಬಿದುದು. ಕಮಲಗಳು ಮುಗಿದುವು. ಚಕ್ರಾಂಗಯುಗಲಗಳಿಗೆ ಅಗಲಿಕೆ ಸಮನಿಸಿದುದು. ಇಂತಪ್ಪ ಸಂಧ್ಯಾಕಾಲ ದಲ್ಲಿ ಜಿನಮಂದಿರಗಳೊಳಗೆ ಘಂಟಾರವ ಮೊಳಗಿದುದು. ಭವ್ಯರು ಜಿನಚಂದ್ರನನ್ನು

ಸ್ತುತಿಸತೊಡಗಿದರು. ಅತ್ತ ನೈದಿಲೆಗಳು ಬಿರಿಯುತ್ತಿರಲು, ಸುರಭಿಮಾರುತ ತೀಡಿದುದು. ಅಂಧತಮಸು ವ್ಯಾಪಿಸತೊಡಗಿತು. ಜಾರೆಯರ ಕೈತವಕೆ ಎಡೆದೊರೆತುದು. ಅಲ್ಲಲ್ಲಿ ತಾರೆಗಳು ಮಿನುಗುತೊಗೆದುವು. ಮೂಡುದಿಕ್ಕು ಚಂದ್ರಗಾವಿಯಿಂದ ರಂಜಿಸಲು ಚಂದಿರನುದಿಸಿ ಬಂದನು. ಕರಿಯೊಡಲ ಶಶಧರನು ಕಳೆಯೇರಿದನು. ಬೆಳುದಿಂಗಳು ಜಗವನ್ನು ತುಂಬಲು ಜ್ಞಾನಚಂದ್ರನು ದೇವತಾರ್ಚನೆಗೈದು ಸಿಂಗರವಾಂತನು. ಚಂದನದಣ್ಪನ್ನು ಮೈಗನುಗೈದನು. ಶಠದೃಷ್ಟಾದಿ ಚತುರನಾಯಕರೊಡಗೂಡಿ ಬೀದಿಗಿಳಿದುಬಂದನು. ಅಲ್ಲಲ್ಲಿ ಕುಲಟೆಯರ ಕುಟಿಲಗೆಯ್ತಗಳನ್ನು ಕಂಡು ಮುಂದುವರಿಯುತ್ತಿರಲು ಕ್ಷತ್ರಿಯರ ವೀಥಿಯಲ್ಲಿ ರಾಜನೀತಿಪರವಾದ ಆಲಾಪಗಳನ್ನು ಕೇಳಿ ಜೂಜುಗಾರರ ಬೀದಿಯಲ್ಲಿ ಬಂದನು. ಅವರ ಆಟಗಳನ್ನು ಪರಿಶೀಲಿಸುತ್ತ ಬರುತ್ತಿರಲು ಒಂದೆಡೆ ಪಟುಭಟರು ಕೂಡಿ ತಮ್ಮ ಪೌರುಷಗಳನ್ನಾಡುತ್ತಿದ್ದರು. ಮುಂದೆ ಬರಲು ಅದೇ ಪರದರ ಬೀದಿ. ತಮ್ಮ ಅಂಗಡಿಗಳ ಮುಂದೆ ಪಣ್ಯವಸ್ತುಗಳನ್ನು ಹರಹಿ ಜನರನ್ನು ಸೆಳೆಯುತ್ತಿದ್ದರು. ಅವರಲ್ಲಿ ಮಾಲೆಗಾತಿಯರ, ಘಟ್ಟಿವಳ್ತಿಯರ ಬೆಡಗು ಅರಸನ ಮನಸ್ಸನ್ನು ಸೆಳೆದುದು. ಮುಂದಕ್ಕೆ ಗೋಚರಿಸಿದುದು ಗಣಿಕಾವಾಟ. ಸುರವನಿತೆಯರೆ ಭೂಮಿಗಿಳಿದು ಬಂದಂತೆ ಮನೆಬಾಗಿಲುಗಳಲ್ಲಿ ವೈಯ್ಯಾರದಿಂದ ನಿಂತ ಶತಸಾವಿರ ಲೆಕ್ಕದ ವಾರಾಂಗನೆಯರು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿದ್ದರು. ಅಲ್ಲಿ ಒಂದೆಡೆ ಮೆಲ್ಲಿದೆಗಾತಿಯೊಬ್ಬಳು ವೀಣೆಯನ್ನು ಸ್ತನದೊಳಗಿಟ್ಟು ನುಡಿಸುತ್ತಿದ್ದರೆ, ಮತ್ತೊಂದೆಡೆ ಒಬ್ಬಳು ಲತಾಂಗಿ ಚರಣದಂದುಗೆ ಝುಣಝುಣರೆನಲು ಸ್ಮರನಂಕಮಾಲೆಯೋದುತ ನರ್ತನವೆಸಗುತ್ತಿದ್ದಳು. ಬೀದಿಯುದ್ದಕ್ಕೆ ವಾರವನಿತೆಯರ ಚೆಲ್ಲಾಟ-ಮುರುಳಾಟ, ಸರಸೋಕ್ತಿ-ಚತುರೋಕ್ತಿಗಳನ್ನು ಕಂಡು, ಕೇಳಿ ಉಲ್ಲಸಿತನಾಗಿ ಚಂದ್ರನು ಪಡುಗಡೆಗೆ ಸಾರಿದ ಮೂರನೆ ಜಾವದಲ್ಲಿ ಅರಮನೆಗೈತಂದು ವಿಶ್ರಮಿಸಿದನು.

## 39. ಆರೋಗಣೆ.

ಚಂದ್ರಿಕಾವಿಹಾರದಿಂದ ತಣಿದ ಜ್ಞಾನಚಂದ್ರನು ಅನುಮತಿಯ ತೋಳತೆಕ್ಕೆಯಲ್ಲಿ ಉಳಿದ ಇರುಳನ್ನು ಕಳೆದನು. ಬೆಳಗಪ್ಪಜಾವದಲ್ಲಿ ಕೋಳಿ ಕೂಗಿದುದು. ತಿಳಿಗೊಳಗಳಿಂದ ತಂಗಾಳಿ ತೀಡಿದುದು. ಜಿನಮಂದಿರಗಳ ಜಯಘಂಟಾರವ, ಪಾವನ ಶಂಖಧ್ವನಿ ಕೇಳಬಂದುದು. ಕೋಗಿಲೆ, ಕೇಕಿಗಳು ಕೊರಳೆತ್ತಿ ಕೂಗಿದುವು. ಸೂರ್ಯನು ಉದಯಾದ್ರಿಯನ್ನು ಏರಿ ನಿಂದನು. ಅರಮನೆ ಬಾಗಿಲಲ್ಲಿ ಮಂಗಳ ಪಾಠಕರು ಕೈಗಳನೆತ್ತಿ ಜ್ಞಾನೇಂದುಗುಣಾವಳಿಯನ್ನು ಹೊಗಳತೊಡಗಿದರು. ಅರಸನು ನಿದ್ದೆತಿಳಿದೆದ್ದನು. ತನ್ನ ಪಾದಗಳಿಗೆರಗಿದ ಅನುಮತಿಯನ್ನು ಹರಸಿ ಹಾವುಗೆ ಮೆಟ್ಟಿ ಶಯ್ಯಾಗಾರದಿಂದ ಹೊರಬಿದ್ದನು. ರಾಣಿಯರು ಬಿತ್ತರದಿಂದ ಕೈಮುಗಿದು ಇದಿರ್ಗೊಂಡರು. ಅಷ್ಟರಲ್ಲಿ ಸಿಂಧೂದೇವಿಯು ಮುಂದೆ

ಬಂದು ಅರಸನ ಪಾದಗಳಿಗೆರಗಿ ಇಂತೆಂದಳು:- ಪ್ರಾಣಪ್ರಿಯ ! ಇಂದೆನ್ನರಮನೆಗೆ ಬಿಜಯಂಗೈದು ನನ್ನ ಗೃಹವ ಪಾವನ ಮಾಡಬೇಕು. ಇದಕ್ಕರಸನು ನಸುನಕ್ಕು 'ಎಲೆ ಏಣಾಕ್ಷಿ ! ನಾನು ಮೊದಲೆ ಯೋಚಿಸಿದ್ದೆನು. ಇದೀಗ ಬೇಡಿದ ಹೊಲದೊಳು ಮಳೆ ಯಾದಂತಾಯ್ತು. ಅವಶ್ಯ ಬರುವೆನೆ'ಂದನು. ಸಿಂಧೂದೇವಿ ಅನುಮತಿ ಬಳಿಗೈದಿ 'ಎಲೆ ದೇವಿ, ನನ್ನ ಮಂದಿರಕಿಂದು ನಡೆತಂದು ನಲವಿಂದ ದೊರೆಯ ಪಂಕ್ತಿಯೊಳು ಚೆಲುವರ ಗಂಡನ ಪಾನಾಶನವುಂಡು ನಿಳಯವ ಪಾವನಮಾಡಿ ಬರಬೇಕೆ'ಂದು ಸಕ್ಕರೆಮಾತನ್ನಾಡಿ ದಳು. ಇದಕ್ಕೆ ಅನುಮತಿಯು 'ಎಲೆ ತಂಗಿ, ನನ್ನ ಮನೆಗೆ ನಾನು ಬರುವುದಕೆ ನೀನೊರೆಯ ಬೇಕೆ ? ನಾ ಬಾರೆನೆ ! ಚಂದಿರ ಬರುವಾಗ ಷೋಡಶ ಕಲೆಗಳು ಹಿಂದುಳಿವವೆ ?' ಎಂದು ವಿನಯವ ನುಡಿದು ಉಡುಗೊರೆಯಿತ್ತು ಬೀಳ್ಕೊಟ್ಟಳು. ಸಿಂಧೂದೇವಿ ಸವತಿಯರ ಮನೆ ಮನೆದಪ್ಪದೆ ಗಂಧಾಕ್ಷತೆಗೊಟ್ಟು ಇನಿಯನ ಸಹಪಂಕ್ತಿ ಭೋಜನಕ್ಕೆ ಆಮಂತ್ರಣವಿತ್ತಳು.

ಜ್ಞಾನಚಂದ್ರನು ನಿತ್ಯಕರ್ಮಗಳನ್ನು ತೀರಿಸಿ ದೇವತಾರ್ಚನಾನಂತರ ಮುನಿಗಳಿಗೆರಗಿ ನಿತ್ಯವ್ರತಗಳನ್ನು ಕೈಕೊಂಡು ಅರಮನೆಗೈದಿ ಸಿಂಹಾಸನವೇರಿ ಓಲಗಗೊಟ್ಟಿರ್ದು ವಿಪ್ರಾದಿ ಜನರನ್ನು ದಾನಸನ್ಮಾನಗಳಿಂದ ಸಂತೋಷಪಡಿಸಿದನು. ಅಷ್ಟರಲ್ಲಿ ಊಳಿಗದವನೈತಂದು 'ಆರೋಗಣೆಗೆಡೆಯಾಯ್ತು ತೆರಳಬೇಕೆ'ನಲು ಮನುಜೇಶ್ವರನು ಸಭೆಯನ್ನು ವಿಸರ್ಜಿಸಿ ಲೀಲೆಯಿಂದ ಬರುತ್ತಿದ್ದನು. ಸಿಂಧೂದೇವಿ ಇದಿರ್ಗೊಂಡು ಬಂದು ಮುಗುಳ್ನಗೆಯಿಂದ ಸ್ವಾಗತಿಸಿದಳು. 'ಅಡುಗೆಯಾದುದೊ' ಎಂದು ಬೆಸಗೊಂಡ ಇನಿಯನಿಗೆ 'ಆಯಿತು ಸ್ವಾಮಿ! ಚಿತ್ತೈಸಿ' ಎಂದು ಮರುನುಡಿದು ಕೈಲಾಗನ್ನು ಕೊಟ್ಟು ಗೃಹಕೆ ಕರೆದೊಯ್ದಳು. ನಿವಾಳಿ ಇಟ್ಟು, ಪನ್ನೀರಿಂದ ಪಾದವ ತೊಳೆದು ಮುಂಡೆಗೆ ತಳಿದುಕೊಂಡಳು. ಅರಸನನ್ನು ಕರೆ ದೊಯ್ದು ಜ್ಯೋತಿರ್ಲೋಕವೆಂಬಂದದಿ ಮೆರೆವ ತನ್ನ ಜಿನಮಂದಿರದ ದರ್ಶನ ಮಾಡಿಸಿ ದಳು. ಅರಸನು ಮಡದಿಯ ಸಮ್ಯಕ್ತ್ವವನ್ನು ಮೆಚ್ಚಿದನು. ಮಡದಿಯಿತ್ತ ದಿವ್ಯ ವಸನ ವುಟ್ಟು ಭೋಜನಗೃಹವನ್ನು ಹೊಕ್ಕನು. ಕನಕವಿಷ್ಟರದಲ್ಲಿ ಕುಳಿತುಕೊಂಡನು. ಯುವತಿ ಯರು ಬಂಗಾರದ ಹರಿವಾಣ ಬಟ್ಟಲುಗಳನ್ನು ತಂದು ಮಡಗಿದರು. ಪನ್ನೀರಿಂದ ತೊಳೆದು ಪರಿಮಳದುದಕದಿಂದ ಭರಿತವಾದ ಹೊನ್ನಕುಜಾಯಿಗಳು ಎಡಭಾಗದಲ್ಲಿ ಮಡಗಿ ನಿಂದುವು. ಜ್ಞಾನಚಂದ್ರನು ಸಿಂಧೂದೇವಿಯನ್ನುದ್ದೇಶಿಸಿ ಸಿನ್ನರಕದ ಅಕ್ಕ-ತಂಗಿಯರ ಕರೆಯೆನಲು ಅವರೆಲ್ಲರೈತಂದು ಇನಿಯನಿಗೆ ಕೈಮುಗಿದು ನಾಚಿ ನಿಂದರು. ಅರಸನು 'ನೀವು ನಾಚಿ ನಿಂತರೆ ಎರೆಯನ ಪಂಕ್ತಿಯಲ್ಲಿ ಚೆನ್ನಾಗಿಯುಂಬುದೆಂತೆ'ಂದು ಸರಸವಚನದಿಂದ ನುಡಿಯಲು ಸುಲೋಚನೆ 'ಗಂಡನ ಪಂಕ್ತಿಲಿ ಪೆಂಡಿರುಂಬುವುದಕೆ ನಾಚಿಕೆಯೇಕೆ'ಂದು ಮುಂದಾದಳು. ಉಳಿದವರು ಆಕೆಯನ್ನು ಅನುಸರಿಸಿದರೂ ಒಬ್ಬಾಕೆ ಹಿಂದುಳಿದು ನಿಂತಳು. ರಾಯನು ಕುಳಿರೆಂದರೂ 'ಬೇಡ ದಮ್ಮಯ್ಯ ಬಳಿಕುಂಬೆನೆ'ಂದು ಅಂಜಿ ನುಡಿದಳು. ನೆರೆದವರು ಮುಗ್ಧೆಯಿವಳೆಂದು ದೊರೆಗೊರೆದರು. ಅರಸನು ನಸುನಕ್ಕು ಇಂತೆಂದನು:- ಹೌದು, ತಪ್ಪಲ್ಲ; ಯುವತಿಯರೊಳು ಬಲು ಮುಗ್ಧೆ; ಇವಳು ಮೊನ್ನೆಯ ರಾತ್ರಿಯೊಳು ಮಾಡಿದ

ಚೇಷ್ಟೆ ಹವಣಿಸುತಿದೆ ಮುಗ್ಧೆಯೆಂದು.’ ರಾಜನ ಈ ನುಡಿ ಅಭಿಮಾನಿನಿಯ ಮಾನವನ್ನೆ ಕಳೆದುದು. ಓಡಿ ಬಂದು ಪಂಕ್ತಿಯಲ್ಲಿ ಸೇರಿಕೊಂಡಳು. ನಲ್ಲನ ಜಾಣ್ಮೆಗೆ ಎಲ್ಲರೂ ತಲೆ ದೂಗಿದರು. ಅನಿತರಲ್ಲಿ ಬಳಸಲು ನಿಂತ ಮಡದಿಯರು ಪರಿಪರಿಯ ಭಕ್ಷ್ಯಭೋಜ್ಯಗಳನ್ನಾಂತು ಗಮಕದಿಂದಡಿಯಿಡುತ್ತಾ ಎಡೆಗೈದರು. ದೊರೆರನ್ನನು ಅರೆಗಣ್ಣ ಮುಚ್ಚಿ ಚಿನ್ಮಯನ ನೆನೆದು ‘ಶರಣೋತ್ತಮ ಮಂಗಲ’ವೆಂದು ತುತ್ತನ್ನೆತ್ತಿದನು. ರಾಯನು ಉಣ್ಣುತ್ತಿರುವಲ್ಲಿ ಸಿಂಧೂದೇವಿ ವೇಳೆವೇಳೆಗೆ ಚೆಂದೆಂಗಿನ ಎಳನೀರನ್ನು ನೀಡುತ್ತಿದ್ದಳು. ಎಡಬಲದಲ್ಲಿ ಕುಳಿತಿದ್ದ ರಮಣಿಯರು ತುತ್ತನ್ನೆತ್ತದಿರುವುದನ್ನು ಕಂಡು ರಾಜನು ‘ಹೂಂ’ ಎನಲು ದೇವಿಯರು ‘ಶೇಷಾನ್ನವಿತ್ತಲ್ಲದೆ ಉಣ್ಣೆವೆ’ಂದರು. ಅರಸನು ಮುಗುಳ್ನಕ್ಕು ಸಿಂಧೂದೇವಿಯ ಮೊಗ ನೋಡಲು ಆಕೆ ರಾಯನ ಹರಿವಾಣದಿಂದ ಕಜ್ಜಾಯವನ್ನೆತ್ತಿ ಬಳಸಿದಳು. ಒಡನೆ ಔತಣದ ಸಂಭ್ರಮಕ್ಕೆ ಕಳೆಯೇರಿದುದು. ಕಜ್ಜಾಯಗಳನ್ನು ತುಪ್ಪದಲ್ಲಿ ಮುಳುಗಿಸಿ ಚಪ್ಪರಿಸಿದರು. ಸೀಕರಣೆಯನ್ನು ಹೀರಿದರು. ಚಕ್ಕುಲಿಗಳನ್ನು ಗರಿಗರಿಕೆಂದು ಮೆದ್ದರು. ಬಗೆಬಗೆಯ ಪಾಯಸವನ್ನು ಸವಿದರು. ಕಳವೆಯನ್ನವನ್ನು ಬೇಳೆರಸ ಪಳದ್ಯಗಳಲ್ಲಿ ಕಲಸಿ ಉಂಡರು. ಅರಸನಿಗೆ ಎಂಜಲಕೊಂಡೊಯ್ದು ಬಾಯೊಳಗಿಡುವ ಮನಸ್ಸು ಯುವತಿಯರಿಗಾದರೂ ನಾಚಿ ಹಿಂದುಳಿದರು. ಕೊನೆಗೆ ನಿಂಬೆ, ನೆಲ್ಲಿ, ಮಾದಳ ಮೊದಲಾದ ಉಪ್ಪಿನ ಕಾಯಿಗಳನ್ನು ನಂಚಿ, ಮುಳ್ಳುಸೌತೆಯ ಪಚ್ಚಡಿ ಬೆರೆತ ತೊಯ್ದನ್ನವನ್ನುಂಡ ನಂತರ ಮೊಸರನ್ನವನ್ನುಂಡು ಕೈತೊಳೆದರು.

ಜ್ಞಾನಚಂದ್ರನು ಪಂಚಗುರುಗಳ ನಾಮೋಚ್ಚಾರಣೆಯನ್ನು ಒಂಭತ್ತು ಬಾರಿಗೈದು ಸಿದ್ಧರನ್ನು ಭಾವಿಸಿದನು. ರಮಣಿಯರೆಲ್ಲ ಸೇರಿ ಕೊಟ್ಟ ಕರ್ಪೂರವೀಳೆಯವನ್ನು ಮೆಲ್ಲುತ್ತಾ ಸಿಂಧೂದೇವಿಯನ್ನು ಭೋಜನಕ್ಕೆ ಕಳುಹಿಕೊಟ್ಟನು. ಆಕೆ ಕನಕಲತೆ ಮುಂತಾದವರೊಡನೆ ಸಹಪಂಕ್ತಿಯಲ್ಲಿ ಆರೋಗಣೆಯನ್ನೆಸಗಿ ಬರುವಷ್ಟರಲ್ಲಿ ಮಹಾರಾಜನು ಕಿಂಚಿತ್ತು ಹೊತ್ತು ವಿಶ್ರಮಿಸಿ ಎಚ್ಚತ್ತನು. ದೇವಿಯ ಕೈಲಾಗುವಿನೊಡನೆ ಮೊಗಸಾಲೆಗೈದಿ ತೂಗುಮಂಚದ ಮೇಲೆ ಕುಳಿತು ನಾರಿಯರ ನಡುವೆ ಓಲಗಗೊಟ್ಟನು. ಸಿಂಧೂದೇವಿ ಗಂಧ, ಪುಣುಗು, ಜವಾದಿಗಳಿಂದ ಅರಸನ ಅಂಗಲೇಪನಗೈದು ನವರತ್ನಖಚಿತ ಹಾರದಿಂದ ಪ್ರಿಯನನ್ನಲಂಕರಿಸಿದಳು. ಅನುಮತಿ ಮೊದಲಾದ ಸವತಿಯರನ್ನು ಉಚಿತ ಉಡುಗೊರೆಗಳಿಂದ ಸನ್ಮಾನಿಸಿದಳು. ಇಂತು ಜ್ಞಾನಚಂದ್ರನು ಒಲವಿನ ಮಡದಿಯರೊಡಗೂಡಿ ಸುಖಾಬ್ಧಿಯೊಳೋರಂತೆ ತೇಂಕಾಡುತಲಿದ್ದನು.

## 40. ರಥೋತ್ಸವ.

ರತ್ನಪುರದಲ್ಲಿ ಎತ್ತ ನೋಡಿದರತ್ತ ಸಂಭ್ರಮವೇ ಸಂಭ್ರಮ ! ಬೀದಿಬೀದಿಗಳಲ್ಲಿ ಕುರುಜುತೋರಣಗಳೆದ್ದು ಮೆರೆಯುತ್ತಿದ್ದುವು. ಕತ್ತುರಿಯ ಸಾರಣೆ, ಕುಂಕುಮದ ಕಾರಣೆ,

ಮುತ್ತಿನ ರಂಗವಲ್ಲಿಗಳಿಂದ ಕೇರಿಕೇರಿಗಳು ಚೆಲ್ವೆತ್ತು ರಾಜಿಸುತ್ತಿದ್ದುವು. ಜಗದಾರಾಧ್ಯ ಜಿನನ ಮಂದಿರವು ಬಗೆಬಗೆಯ ಪಟ್ಟೆ-ಪೀತಾಂಬರಗಳಿಂದ ಶೃಂಗರಿಸಲ್ಪಟ್ಟು ಸೂರ್ಯಬಿಂಬದಂತೆ ಶೋಭಿಸುತ್ತಿತ್ತು. ದಿಕ್ಕುದಿಕ್ಕುಗಳಿಂದ ಬರುವ ಜನಸಂದಣಿಯಿಂದ ಪಟ್ಟಣದೊಳಗೆ ಕಾಲಿಡಲೆಡೆಯಿಲ್ಲ. ಇದೇಕೆ? ಹೌದು! ಇಂದೀಗ ಬಂದುದು ಸಿತಫಾಲ್ಗುಣ ಮಾಸದೊಳು ನುತವೆತ್ತ ನಂದೀಶ್ವರ ಪರ್ವ. ಜ್ಞಾನೇಂದು ನಡೆಸುವ ನಂದೀಶ್ವರ ಉತ್ಸವದ ಆಮಂತ್ರಣ ಛಪ್ಪನ್ನದೇಶಗಳಿಂದಲೂ ರಾಜಮಹಾರಾಜರನ್ನು ಬರಮಾಡಿದುದು. ಎಲ್ಲೆಡೆಗಳಿಂದಲೂ ಮುನಿಗಳು ಶ್ರಾವಕ-ಶ್ರಾವಕಿಯರನ್ನೊಡಗೂಡಿ ಬಂದು, ಈ ಪುಣ್ಯೋತ್ಸವವನ್ನು ಕಾಣುವ ಹಂಬಲದಲ್ಲಿದ್ದರು. ಆ ಕಡೆ ಕಟ್ಟಿಗೆಗಾರರು ಸಾರಿದುದೇನು? 'ಶ್ರೀಪಂಚಮಿ ದಿನ ಉತ್ಸವ ಪ್ರಾರಂಭ. ಆ ರಾತ್ರಿಯಲ್ಲಿ ಜಿನರಿಗೆ ಪ್ರಂಚಾಮೃತಾಭಿಷೇಕ ಮಾಡಿ ರಾತ್ರಿ ಅಂಕುರಾರ್ಪಣೆ ಮಾಡಲಿಕ್ಕಿರುವುದು. ನಾರಿಯರೆಲ್ಲ ಸೇರುವೆಯಿಂ ಬರಬೇಕೆಂದು. ಸರಿ, ಮುತ್ತೈದೆಯರ ಸಂಭ್ರಮವನ್ನು ಹೇಳುವುದೇನು? ಶೃಂಗಾರವಾಂತು ಬೆಡಗಿನಿಂದ ಬಳುಕುತ ನಡೆದು ಬಂದು ಜಿನಗೃಹವನ್ನು ಹೊಕ್ಕರು. ಜಿನಪತಿಗೆರಗಿ ಜ್ಞಾನಚಂದ್ರನಿತ್ತ ಅಷ್ಟಾದಶ ಧಾನ್ಯಗಳನ್ನು ಹಾಲೊಳು ನೆನೆ ಹಾಕಿ ಐದು ಬಾಯುಳ್ಳ ಕುಂಭ ಮೊದಲಾದ ಚಿನ್ನದ ಭಾಜನಗಳಲ್ಲಿ ಬಿತ್ತಿದರು. ತರಳೆಯರಿಗೆ ಬಾಗಿನವಿತ್ತು ಅರಸನು ಬೀಳ್ಕೊಟ್ಟನು. ಮರುದಿನ ಷಷ್ಠಿಯಂದು ಜಿನಾಲಯದಲ್ಲಿ ಧ್ವಜಪ್ರತಿಷ್ಠೆಯಾದುದು. ಸರ್ವಾಹ್ಣಯಕ್ಷನ, ಸುರಪತಿ ಮೊದಲಾದ ದೇವತೆಗಳ ಧ್ವಜಪತಾಕೆಗಳು ಹಾರಿಸಲ್ಪಟ್ಟುವು. ಸಪ್ತಮಿಯ ಉತ್ಸವದ ವೈಭವವನ್ನೇನೆನ್ನಲಿ! ನಾನಾ ದೇಶದ ಭವ್ಯ ಜನರು ನೆರೆದಿರಲು ಸರ್ವಾಹ್ಣಯಕ್ಷನ ಬಿಂಬವನ್ನೊಯ್ದು ಬೀದಿಯಲ್ಲಿ ಪ್ರಭಾವನಾಮಹೋತ್ಸವವು ಜರಗಿದುದು. ದಾನ-ಧರ್ಮಾದಿಗಳು ಯಥೇಷ್ಟ ನಡೆದುವು. ಅಷ್ಟಮಿಯಂದು ಅದೇ ಸರ್ವಾಹ್ಣಯಕ್ಷನನ್ನು ಒಂಭತ್ತು ಹೆಡೆಯುಳ್ಳ ಸರ್ಪವಾಹನದಲ್ಲಿ ಇರಿಸಿ ಪ್ರಭಾವನೆಯನ್ನೆಸಗಿ ಬಂದವರನ್ನು ದಾನ-ಸನ್ಮಾನಗಳಿಂದ ಅರಸನು ತಣಿಸಿದನು. ಸಿಂಹವಾಹನದಲ್ಲಿ ನವಮಿಯಂದು, ಹಂಸವಾಹನದಲ್ಲಿ ದಶಮಿಯಂದು, ತುರಗವಾಹನದಲ್ಲಿ ಏಕಾದಶಿಯಂದು, ಕರಿವಾಹನದಲ್ಲಿ ದ್ವಾದಶಿಯಂದು ವೈಭವಪೂರ್ಣವಾದ ಉತ್ಸವ ನಡೆದುದು. ತ್ರಯೋದಶಿಯಂದು ಜರಗಿದ ಪುಷ್ಪಯಾನ ಮಹೋತ್ಸವವನ್ನೇನೆನ್ನಲಿ! ವಜ್ರಾಯುಧನೆಂಬ ದಳವಾಯಿ ಗುರಿಕಾರರೊಡಗೂಡಿ ಹೂವಿನ ಝುಲ್ಲಿಯಿಂದಲೆ ರಚಿಸಿದ ಮಂಟಪಮಧ್ಯದಲ್ಲಿ ಸಹಸ್ರದಳಕಮಲದ ಮೇಲೆ ಸರ್ವಾಹ್ಣಯಕ್ಷನನ್ನಿರಿಸಿ ಮುಂಗಡೆ ವಾರಾಂಗನೆಯರು ನಾಟ್ಯವಾಡುತ್ತಿರಲು ಪಟ್ಟಣದ ಬೀದಿಗಳಲ್ಲಿ ಪ್ರಭಾವನೆಯನ್ನೆಸಗಿದನು. ಚತುರ್ದಶಿಯಂದು ಉತ್ಸವದ ಸಂಭ್ರಮಕೆ ಕಳೆಗಟ್ಟಿದುದು. ದೇಶವಿದೇಶಗಳಿಂದ ಆಪ್ತೇಷ್ಟರಷ್ಟೆ ಬಂದು ನೆರೆದುದಲ್ಲ; ದೇವಲೋಕದಿಂದ ದೇವತೆಗಳೂ ಬಂದು ನೆರೆದರು. ಅತಿಥಿಗಳನ್ನಿದಿರ್ಗೊಂಡು ಸ್ವಾಗತಿಸಿದರು ಸ್ವತಹ ಜ್ಞಾನಚಂದ್ರ ಮತ್ತು ಅನುಮತಿಯರು. ಸಂಜೆಗೆ ಕನಕರತ್ನಾಂಕಿತವಾದ ಸಾಸಿರ ಕಂಭದ ಮಂಟಪ ಸಿಂಗರಗೊಂಡು ಸಿದ್ಧವಾದುದು. ಜ್ಞಾನಚಂದ್ರನು ಸರ್ವರನ್ನೊಡಗೊಂಡು ಜಿನಾಲಯಕ್ಕೆ ಬಂದು ಕಾಂಚನಮಯ ಜಿನಬಿಂಬವನ್ನು

ಬಿಜಯಮಾಡಿಸಿ ಕರೆತಂದನು. ಮುತ್ತುರತ್ನಗಳಿಂದ ಕೀಲಿಸಿದ ತೂಗುಯ್ಯಾಲೆಯಲ್ಲಿ ಜಿನ ಬಿಂಬವು ವಿರಾಜಿಸಲು, ವಿಲಾಸಿನಿಯರು ಜಿನರಾಜನಿಗೆ ದರ್ಪಣವನ್ನು ತೋರಿ, ಬೀಸಣಿಗೆಯಿಂದ ಬೀಸಿದರು; ವಾದ್ಯಘೋಷ ಸ್ತೋತ್ರಪಠಣೆ ನಡೆಯುತ್ತಿರಲು ಹೊನ್ನೇಣ ಪಿಡಿದು ನವಿಲುಯ್ಯಲನ್ನು ತೂಗಿದರು.

ಪೂರ್ಣಮಿಯಂದು ರಥೋತ್ಸವ. ದೊಡ್ಡ ಜಾತ್ರೆ. ಒಡೆಯನಾಣತಿಯಂತೆ ಮಂತ್ರಿ ವಿದ್ಯಾಧರ ಶಿಲ್ಪಿಗಳಿಂದ ರಚಿಸಲ್ಪಟ್ಟ ಪಂಚರಥಗಳನ್ನು ಬಸದಿಯ ಎದುರುಗಡೆ ಎಳೆತಂದು ಸಾಲಾಗಿ ನಿಲ್ಲಿಸಿದನು. ಜ್ಞಾನಚಂದ್ರನು ನೆರೆದ ಜನರನ್ನೊಡಗೊಂಡು ಜಿನವಸತಿಯೊಳಗಣ ಮೂಲವಿಗ್ರಹಕ್ಕೆ ಪಂಚಾಮೃತಾಭಿಷೇಕವನ್ನೆಸಗಿ ಪಂಚಪರಮೇಷ್ಠಿಗಳ ಮೂರ್ತಿಗಳನ್ನು ರಥಾರೋಹಣಕ್ಕಾಗಿ ಒಯ್ದನು. ನಡುವಣ ರಥದಲ್ಲಿ ಅರಹಂತರನ್ನೂ, ಅವರ ಬಲಕ್ಕೆ ಸಿದ್ಧರು ಉಪಾಧ್ಯಾಯರನ್ನೂ, ಎಡಕ್ಕೆ ಆಚಾರ್ಯರು ಸಾಧುಗಳನ್ನೂ ಏರಿಸಿದನು. ರಥಕ್ಕೆ ತೆಂಗಿನಕಾಯಿಗಳನ್ನು ಕೋಟಿ ಲೆಕ್ಕದಲ್ಲಿ ಒಡೆದ ನಂತರ ಅರಸನು ಸ್ವತಹ ರಥದ ಹೊನ್ನ ಹಗ್ಗವನ್ನು ಹಿಡಿಯಲಾಗಿ ಖೇಚರ-ಭೂಚರರೆಲ್ಲ ಒಡನಂದರು. ಬಾಣ ಬಿರುಸುಗಳು ಆಕಾಶಕ್ಕೆ ನೆಗೆದುವು; ವಾದ್ಯಗಳು ಮೊಳಗಿದುವು; ವಿದ್ಯಾಧರರು ನೆಲ ಮುಟ್ಟದೆ ರಥದ ಮುಂಗಡೆ ನರ್ತನಕ್ಕೆ ತೊಡಗಿದರು; ಡೊಂಬರ ಲಾಗ, ಮರಗಾಲಿಂದ ಲಾಗಗಳಿಗೆ ಮೊದಲಿಟ್ಟುದು. ರಥ ಗಂಭೀರವಾಗಿ ಬೀದಿಯಲ್ಲಿ ವಿಹರಿಸತೊಡಗಿದುದು. ಬರುತ್ತಾ ಅರಮನೆ ಮುಂಗಡೆ ನಿಲಲು ಕಾಂತಾಮಣಿಗಳು ಹಣ್ಣುಕಾಯಿಗಳನ್ನು ಒಪ್ಪಿಸಿದರು. ವಿಧವಿಧವಾಗಿ ರೂಪಿಸಿದ ಆರತಿಗಳನ್ನು ಎತ್ತಿಸಿದರು. ಮೇರುಗಳೈದು ನಡೆದು ಬರುವಂತೆ ರಥಗಳು ಬಂದು ಬಸದಿಯೆದುರಿಗೆ ನಿಂದುವು. ಪಂಚಪರಮೇಷ್ಠಿ ಬಿಂಬಗಳನ್ನು ರಥದಿಂದಿಳಿಸಿ ಬಸದಿಗೊಯ್ದು ಅಭಿಷೇಕ ಪೂಜಾನಂತರ ಓಕುಳಿಯನ್ನೆಸಗಿ ನೆರೆದವರನ್ನು ದಾನ-ಸನ್ಮಾನಗಳಿಂದ ಸಂತುಷ್ಟಿಗೊಳಿಸಿದನು.

## 41. ಒಡ್ಡೋಲಗ.

ಜ್ಞಾನಚಂದ್ರನು ಇಂತು ಪ್ರತಿ ತಿಂಗಳು ಉತ್ಸವ ನೋಂಪಿಗಳನ್ನು ನಡೆಸುತ್ತ ಚರಿತ ಪುರಾಣವಾಚನಗಳಿಂದ ಹೊತ್ತು ಕಳೆಯುತ್ತಿದ್ದು, ಅದೊಂದುದಿನ ಷೋಡಶಭೂಷಣಾಲಂಕೃತನಾಗಿ ಮುತ್ತಿನ ಹಾವುಗೆಯನ್ನು ಮೆಟ್ಟಿಬಂದು ಆಸ್ಥಾನಮಂಟಪಕ್ಕೈತಂದನು. ಪಟ್ಟಿಯ ಗದ್ದುಗೆಯಲ್ಲಿ ಎಡಗಾಲನ್ನು ಮಡಚಿಟ್ಟು, ಇಳಿಬಿಟ್ಟ ಬಲಗಾಲ ಮೇಲೆ ಹೊನ್ನೊರೆ ಬಂಕನ್ನು ಪಿಡಿದ ಕೈಯ್ಯನ್ನಿಟ್ಟು ಎಡದ ಕೈಯನ್ನು ಲೋಡಿನ ಮೇಲೂರಿ ದೇವೇಂದ್ರನಂತೆ ಓಲಗಗೊಟ್ಟನು. ಓಲಗಶಾಲೆಯಲ್ಲಿ ವಾದ್ಯಗಳು ಸಿಡಿಲದನಿಯಂತೆ ಮೊರೆದವು; ಮಣಿದೀಪಗಳು ಸೂರ್ಯ-ಚಂದ್ರರಂತೆ ಬೆಳಗಿದುವು. ಅನುಮತಿ ಮೊದಲಾದ ಹದಿನೈದು ಸಾವಿರ ವನಿತಾಮಣಿಗಳು ಬೆಂಗಡೆಯಲ್ಲಿ ತೆರೆಯ ಮರೆಯಲ್ಲಿ ಸುಪ್ಪತ್ತಿಗೆಯ ಸೇರಿ ಕುಳಿತರು.

ಕಟ್ಟಿಗೆಗಾರನೈತಂದು ಸಭೆಯಲ್ಲಿ ನೆರೆದು ಬಂದು ಅರಸನಿಗೆ ಅಭಿವಂದಿಸುವ ಸಾಮಂತ ಮನ್ನೆಯರ ಪ್ರತ್ಯೇಕ ಪರಿಚಯವನ್ನೊರೆದನು. ವಾದಿ-ಗಮಕಿ-ವಾಗ್ಮಿ-ಪಂಡಿತರು ಮೊದಲಾದವರು ರಾಜನಿಗೆ ಕೈಮುಗಿದು ವಿನೋದವಾಡಿದರು. ಒಂದೆಡೆ ವೀಣೆಯನ್ನು ಮಿಡಿಯುತ್ತಿರುವ ವೇಶ್ಯೆಯರ ತಂಡ, ಬೇರೊಂದೆಡೆ ಚತುರಂಗಸೈನ್ಯ, ಮಗದೊಂದೆಡೆ ಹರಿಚಂದ್ರ ಮೊದಲಾದ ಒಂಭತ್ತು ಸಾಸಿರ ಕುವರರು. ಇವರೆಲ್ಲರು ಇಳೆಯಾಣ್ಮನ ಮುಂದೆ ಮಣಿದು ಬಂದು ಆಸೀನರಾಗಿದ್ದರು. ಮುತ್ತಿನ ಸತ್ತಿಗೆಯ ನೆರಳಲ್ಲಿ ಬೀಸುವ ಚಾಮರಗಳ ಮಧ್ಯೆ ದೊರೆರನ್ನನು ನವಮನ್ಮಥನಂತೆ ಮೆರೆದನು.

ಅಷ್ಟರಲ್ಲಿ ನಟ್ಟುವ ನಾಯಕನೋರ್ವನು ನಡೆತಂದು ದೊರೆಗೆರಗಿ, 'ಸ್ವಾಮಿ ! ಪರಾಕು, ಕೋಮಲಾಂಗಿಯರೀ ಎನ್ನ ಹೆಮ್ಮಕ್ಕಳೀರ್ವರನ್ನು ನರ್ತನ ವಿದ್ಯೆಯಲ್ಲಿ ಭೂಮಿಯೊಳಗೆ ಮಿಗಿಲೆನಲು ತಿದ್ದಿರುವೆನು. ಪರಿಕಿಸಬೇಕು' ಎಂದು ಬಿನ್ನವಿಸಲು ಅರಸನು ಸಮ್ಮತಿಸಿದನು. ನಟ್ಟುವನು ರಂಗಮಂಟಪವನ್ನೇರಿ ನಿಂದನು. ಹಿಮ್ಮೇಳದ ತಾಳಮದ್ದಳೆಯವರು ಸಿದ್ಧರಾದರು. ಸರ್ವಕಲಾಧರನೆಂಬ ಗಾಯಕನು ರಂಗವನ್ನೇರಿ ಕುಳಿತು ಶ್ರುತಿಗೂಡಿಸಿದನು. ಗಾಯಕನು ಆಲಾಪನೆ ಹಾಡುಗಾರಿಕೆಯಲ್ಲಿ ತೊಡಗಿರಲು ನರ್ತಕಿಯರು ನೇಪಥ್ಯವನ್ನೆಸಗಿ ಸಿದ್ಧರಾದರು. ಕರಿಯ ತೆರೆಯ ಮರೆಯಲ್ಲಿ ಮಿಂಚಿನಂತೆ ಕ್ಷಣಕಾಲ ಮಿಂಚಿ ತೆರೆ ಸರಿಯಲು ನಳಿತೋಳ್ಗಳನ್ನೆತ್ತಿ ಪುಷ್ಪಾಂಜಲಿಗೈದು, ರಂಗಮಂಟಪದಲ್ಲಿ ಕಾಲ್ಗಳನ್ನು ಪಸರಿಸಿ ನಿಂತು ಹಸ್ತಗಳನ್ನು ಕಟೀತಟದಲ್ಲಿರಿಸಿ ಮೂಜಗಂಗಳನ್ನು ಅನುಕರಿಸಿ ಕಾಣಿಸಿಕೊಂಡರು. ತಾಳಲಯವರಿತು ಹಸ್ತಕ್ಷೇಪ, ಪದವಿನ್ಯಾಸ, ಶಿರೋಭೇದಗಳಿಂದ ಭಾವ, ವಿಭಾವ, ಅನುಭಾವಗಳನ್ನು ತೋರುತ್ತ ಜನಪನ ಮನವನ್ನು ಸೂರೆಗೊಂಡರು. ಕೊರವಂಜಿ, ನಾಗಕನ್ಯಾ ಮೊದಲಾದ ನೃತ್ಯಗಳನ್ನು ಕಂಡು ಜನ ಮೆಚ್ಚಿದುದು. ಅರಸನು ನಾಟ್ಯವನ್ನು ನೋಡಿ ಸಂತುಷ್ಟನಾಗಿ ನಟ್ಟುವನನ್ನು ಕರೆದು 'ನರ್ತಕಿಯರನ್ನು ಚೆನ್ನಾಗಿ ಶಿಕ್ಷಣವಿತ್ತು ಪರಿಣತರನ್ನಾಗಿ ಮಾಡಿರುವೆಯೆ'ಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿ ಅವನ ದಾರಿದ್ರ್ಯ ಹರಿವಂತೆ ಸಂಭಾವನೆಯನ್ನಿತ್ತು ಸನ್ಮಾನಿಸಿದನು.

ಆಗತಾನೆ ಸಭೆಗೋರ್ವನೈತಂದು 'ದೇವ! ಬಿನ್ನಹ. ಸಂಗೀತಪುರದ ಖೇಚರನಾಯಕ ಶತಬಲನು ತನ್ನ ಕನ್ಯಾರತ್ನ ಮಣಿಮಾಲೆಯನ್ನು ನಿನ್ನ ನಂದನ ಭಾನುಕುವರನಿಗೆ ಕೊಡುವೆನೆಂದು ನುಡಿದು ನನ್ನನ್ನು ಇಲ್ಲಿಗೆ ಕಳುಹಿದನೆನಲು ಜ್ಞಾನಚಂದ್ರನು ಅದಕ್ಕೆ ಸಮ್ಮತಿಸಿ ಆಗಂತುಕನನ್ನು ಬೀಳ್ಕೊಟ್ಟು ಅಂದಿನ ಒಡ್ಡೋಲಗವನ್ನು ವಿಸರ್ಜಿಸಿ 'ಜನನಾಥ ನಮೋ' ಎನುತ ಹರಿಪೀಠದಿಂದೆದ್ದು ಅರಮನೆಯೊಳಕ್ಕೆ ನಡೆದನು.



# 42. ದ್ವಾದಶಾನುಪ್ರೇಕ್ಷೆ.

ಅದೊಂದು ದಿನ ಕನಕಪುರದಿಂದ ಬಂದ ದೂತನೊಬ್ಬನು ಜ್ಞಾನಚಂದ್ರನನ್ನು ಕಂಡು ಕೈಮುಗಿದು 'ದೇವ! ಬಿನ್ನಹವು. ತಮ್ಮ ಸುಕುಮಾರ ಹರಿಚಂದ್ರನ ಪಟ್ಟದರಸಿ ನಂದೆ ಗರ್ಭವತಿಯಾಗಿದ್ದು ತಮ್ಮ ಚರಣಾರವಿಂದಗಳನ್ನು ಪೂಜಿಸಬೇಕೆಂಬ ಹಿರಿಯ ಬಯಕೆಯನ್ನು ವ್ಯಕ್ತಪಡಿಸಲು ಇದನ್ನು ತಮಗೆ ನಿವೇದಿಸಲೆಂದು ಕುಮಾರರೆನ್ನನ್ನು ಇಲ್ಲಿಗೆ ಕಳುಹಿಸಿಕೊಟ್ಟರು' ಎಂದನು. ಜ್ಞಾನಚಂದ್ರನು ಇದನ್ನು ಕೇಳಿ ಪರಮಾಹ್ಲಾದಿತನಾಗಿ ಆನಂದ ಭೇರಿಯನ್ನು ಹೊಯ್ಸಿ, ತನ್ನ ಮಡದಿಮಕ್ಕಳೊಡಗೊಂಡು ವಿಮಾನವೇರಿ ಕನಕಪುರಕಾಗಿ ತೆರಳಿದನು. ತನ್ನ ತಂದೆಯ ಬರವನ್ನೆ ನಿರೀಕ್ಷಿಸುತ್ತಿದ್ದ ಹರಿಚಂದ್ರನು ಇದಿರ್ಗೊಂಡು ನಿವಾಳಿಯಿಕ್ಕಿ ನಮಸ್ಕರಿಸಿದನು. ಅನುಮತ್ಯಾದಿ ಪದಿನೈದು ಸಾಸಿರ ಜನನಿಯರಿಗೂ ತಲೆವಾಗಿ, ತಮ್ಮಂದಿರನ್ನು ಅಕ್ಕರಿಂದ ಅನುರ್ದಪ್ಪಿ ಅರಮನೆಗೆ ಕರೆದೊಯ್ದನು. ಸಿಂಹಾಸನಾಸೀನನಾದ ಮಾವಾಜಿಯನ್ನು ನಂದೆ ಬಳಿಗೈದಿ ಕಂಡು ಹಿಗ್ಗಿದಳು; ಮೂಮೆ ಬಲವಂದು ಕೇಸಡಿಗಳಿಗೆರಗಿದಳು; ಪಾದಗಳನ್ನು ಪನ್ನೀರಿಂದ ಪ್ರಕ್ಷಾಲಿಸಿ ಶಿರದಲ್ಲಿ ತಳಿದುಕೊಂಡಳು. ಅಷ್ಟದ್ರವ್ಯಗಳಿಂದ ಮಾವನ ಪಾದಪೂಜೆಯನ್ನೆಸಗಿ ಆರತಿಯನ್ನೆತ್ತಿ ಶಾಂತಿಧಾರಾಪೂರ್ವಕ ಪುಷ್ಪಾಂಜಲಿಗೈದಳು. ಸೊಸೆಯ ಭಕ್ತಿ, ವಿನಯಗಳಿಗೆ ಮೆಚ್ಚಿದ ಮಾತುಳನು 'ಭೂಮಂಡಲವನ್ನು ಏಕಚ್ಛತ್ರಾಧಿಪತಿಯಾಗಿ ಆಳುವ ಪುತ್ರನನ್ನು ಪಡೆ'ಯೆಂದು ಹರಸಿ, ಜ್ಯೋತಿರ್ಮಾಲೆಯೆಂಬ ದಿವ್ಯಹಾರವನ್ನು ಕೊರಳೊಳಗಿಕ್ಕಿದನು.

ನಂದೆಗೆ ನವಮಾಸ ತುಂಬಲು ಗಂಡುಮಗುವನ್ನು ಪ್ರಸವಿಸಿದಳು. ಹರಿಚಂದ್ರನು ತಂದೆವೆರಸು ಒಡ್ಡೋಲಗದಲ್ಲಿರಲು ಈ ಸುದ್ದಿಯನ್ನು ದಾದಿಯೋರ್ವಳು ಮುಟ್ಟಿಸಿದಳು. ಜ್ಞಾನಚಂದ್ರನು ಒಸಗೆಪೇಳಿದಳಿಗೆ ಅಂದುಗೆ ಮುಂಗೈ ಸರಪಣಿಯಿತ್ತು ಸಂಭಾವಿಸಿದನು. ಒಸಗೆವರೆಗಳು ಮೊಳಗಿದುವು. ದಾನ-ಸನ್ಮಾನಗಳು ಯಥೇಷ್ಟವಾಗಿ ನಡೆದುವು. ಹತ್ತನೆಯ ದಿನಕ್ಕೆ ಮಂದಿರದಲ್ಲಿ ಮಹಾಮಹಿಮೆಯೆಂಬ ಪೂಜೆಯನ್ನೆಸಗಿ ನೆರೆದ ರಾಜರು ಮಂತ್ರಿ ಗುರುಜನರ ಮುಂದೆ ಇನನ ಕಿರಣವ ಮರೆಸುವ ಮೊಮ್ಮಗನಿಗೆ ಪ್ರತಿಸೂರ್ಯನೆಂಬ ಅನ್ವರ್ಥನಾಮವನ್ನಿತ್ತು ನಾಮಕರಣೋತ್ಸವವನ್ನು ನೆರವೇರಿಸಿದನು.

ಜ್ಞಾನಚಂದ್ರನು ಮೊಮ್ಮಗನ ಬಾಲಲೀಲೆಗಳನ್ನು ಕಂಡು ಆನಂದಸಾಗರದಲ್ಲಿ ಓಲಾಡುತ್ತಿರಲು ಅತ್ತ ಸಂಗೀತಪುರದಿಂದ ಶತಬಲ ಖೇಚರನ ದೂತನೈತಂದು 'ತನ್ನ ಪುತ್ರಿ ಮಣಿಮಾಲೆಯನ್ನು ಭಾನುಕುಮಾರನಿಗಿತ್ತು ಪರಿಣಯವನ್ನೆಸಗುವ ಅಭಿಪ್ರಾಯವನ್ನು ವ್ಯಕ್ತಪಡಿಸಿ ಪತ್ನೀಪುತ್ರರು ಸಹಿತ ತಮ್ಮನ್ನು ಕರೆತರಬೇಕೆಂದು ನನ್ನನ್ನಿಲ್ಲಿಗೆ ಕಳುಹಿಸಿರುವನೆಂದನು. ಅರಸನು ಸಮ್ಮತಿಸಿ ಬಂಧುಗಳನ್ನೊಡಗೂಡಿ ಸಂಗೀತಪುರಕ್ಕೆ ತೆರಳಿದನು. ಶತಬಲನು ಶುಭದಿನದಲ್ಲಿ ಭಾನುಕುಮಾರ-ಮಣಿಮಾಲೆಯರ ವಿವಾಹಕಾರ್ಯವನ್ನು ವೈಭವ

ದಿಂದ ನಡೆಸಿದನು. ಅದೇ ಮಂಟಪದಲ್ಲಿ ಗೀತಪುರಪತಿ ಹರಿಣಸುಕೇಶು ತನ್ನ ಪುತ್ರಿ ಸುಮತಿಯನ್ನೂ ಭಾನುಕುಮಾರನಿಗೆ ಧಾರೆಯೆರೆದಿತ್ತನು. ಉಳಿದ ಕುವರರಿಗೂ ಬೇರೆ ನೀರೆಯರೊಡನೆ ಶತಬಲನು ವಿವಾಹ ಮಾಡಿಸಿದನು.

ಜ್ಞಾನಚಂದ್ರನು ಸಂಗೀತಪುರದಲ್ಲೆ ಕೆಲವು ವರ್ಷವಿದ್ದು ಅದೊಂದು ದಿನ ಶತಬಲ ಖೇಚರನನ್ನು ಬರಮಾಡಿ ತಾನು ತನ್ನ ರತ್ನಪುರಕ್ಕೆ ಮರಳುವ ಯೋಚನೆಯನ್ನು ತಿಳುಹಲು ಶತಮುಖನು ಕಾಲ್ವಿಡಿದು ಬೆರಕೆವರಲ ಕಿರಣಮಾಲೆಯೆಂಬ ಮಣಿಹಾರವನ್ನು ಅರಸನ ಕೊರಳಿಗಿಕ್ಕಿ ಬೀಳ್ಕೊಟ್ಟನು. ಮಂಡಲೇಶ್ವರನು ಸತಿ-ಸುತರನ್ನೊಡಗೂಡಿ ವಿಮಾನವೇರಿ ಬರುತ್ತಿದ್ದು ದಾರಿಯುದ್ದಕ್ಕೂ ತನ್ನ ರಾಜ್ಯದೈಸಿರಿಯನ್ನು ತೋರಿ ಬಣ್ಣಿಸುತ್ತಿದ್ದನು. ವಿಮಾನವು ಘೋರಾಟವಿಯೊಂದನ್ನು ಹಾದುಹೋಗುತ್ತಿರುವಲ್ಲಿ ಹೆಣ್ಣಾನೆಯೊಂದನ್ನು ಕಂಡ ಭಾನುಕುಮಾರನು ಮೂರ್ಛೆಗೆ ಸಂದನು. ಶೈತ್ಯೋಪಚಾರದಿಂದ ಎಚ್ಚತ್ತ ಕುಮಾರನನ್ನು 'ಇದೇನು ಚೋದ್ಯ'ವೆಂದು ಅರಸನು ಕೇಳಲಾಗಿ ಭಾನುಕುಮಾರನಿಂತೆಂದನು:- ಈ ಕರಿಣಿಯನ್ನು ಕಂಡು ನನಗೆ ಜಾತಿಸ್ಮರಣೆಯಾದುದು. ಗಂಧರ್ವದೇಶದ ಶೈಲಪುರದಲ್ಲಿ ಅಜಿತಂಜಯ ಮಹಾರಾಜನಿಗೆ ರೂಪಿಣಿಯೆಂಬ ಮಡದಿಯಾಗಿದ್ದಂದು ನಾನು ಮಾಡಿದ ಮುನಿನಿಂದೆಯ ಫಲವಾಗಿ ಅನೇಕ ಭವಗಳಲ್ಲಿ ತೊಳಲಿ ಕಡೆಗೊಮ್ಮೆ ಇದೇ ರೀತಿ ಹೆಣ್ಣಾನೆಯಾಗಿದ್ದೆ. ಆ ಸಮಯ ರೂಪಿಣಿಯ ವರ್ತನೆಯಿಂದ ನೊಂದು ಅಜಿತಂಜಯನೂ, ಮಗ ಜಿತಶತ್ರುವೂ ದೀಕ್ಷೆಯನ್ನಾಂತು ಮಡಿದು ಸ್ವರ್ಗದಲ್ಲಿ ಕನಕಪ್ರಭ-ಸೂರ್ಯಪ್ರಭರೆಂಬ ದೇವತೆಗಳಾಗಿದ್ದವರು ಒದಗಿಬಂದು ನನ್ನನ್ನು ಬೋಧಿಸಿ ತಿರಿಯಂಚ ಜನ್ಮದಿಂದ ಉದ್ಧರಿಸಿದರು. ಅಲ್ಲಿಂದ ಮುಂದೆ ದೇವ-ಮಾನವ ಜನ್ಮಗಳಲ್ಲಿ ಹುಟ್ಟಿ ಬಂದು ಶ್ರೀಕಾಂತೆಸೆಸರಿಂದ ನಿನ್ನ ತಾಯಾದೆನು. ಅರಸ ಜಿನಚಂದ್ರನೊಡನೆ ದೀಕ್ಷೆಯನ್ನಾಂತು ತಪಸ್ಸಿನ ಫಲದಿಂದ ಇಂದು ನಿನಗೆ ಮಗನಾಗಿ ಜನಿಸಿರುವೆನು. ಆ ಹಿಂದಿನ ಜಿತಶತ್ರುವೇ ನೀನೆಂದು ತಿಳಿದುಕೋ. ನಮ್ಮೊಳಗಿನ ತಾಯಿ-ಮಗ, ಪಿತ-ಪುತ್ರ, ಅಣ್ಣ-ತಂಗಿ ಮೊದಲಾದ ಭವಗಳೆಂದರೆ ಅದೊಂದು ಕೋಟಲೆಯೆ. ಇದನ್ನು ಪರಿಭಾವಿಸಿಯೆ ನಾನು ಮೂರ್ಛೆಹೋದೆನು.

ಮಗನ ಬಾಯಿಯಿಂದ ಜನ್ಮಾಂತರಗಳನ್ನು ಕೇಳಿದ ಜ್ಞಾನಚಂದ್ರನು ವಿಸ್ಮಯಪಟ್ಟನು. ಅದೆ ಆತನಲ್ಲಿ ವಿರಕ್ತಿಯನ್ನು ಹುಟ್ಟಿಸಿದುದು. ಆತನು ಈ ವಿಷಯವನ್ನೆ ಮೆಲುಕು ಹಾಕುತ್ತಿರುವಲ್ಲಿ ಆ ಕಡೆ ಭಯಂಕರ ಸಿಂಹವೊಂದು ಘರ್ಜಿಸುತ್ತಾ ಬಂದು ಆ ಹೆಣ್ಣಾನೆಯ ಮಸ್ತಕಕ್ಕೆ ನೆಗೆಯಲು ಅನುವಾದುದು. ಕರುಣಾಳುವಾದ ಜ್ಞಾನಚಂದ್ರನು ಇದನ್ನು ನೋಡಿ ಸೈರಿಸದೆ ವಿದ್ಯಾಬಲದಿಂದ ತಾನು ಶಬರರೂಪಾಂತು ಅವುಗಳ ಮಧ್ಯಕ್ಕೆ ನೆಗೆದನು. ಎರಿ ಬರುವ ಸಿಂಹವನ್ನಿದಿರಿಸಿ ಭೂಮಿಯಲ್ಲಿ ಕೆಡಹಿ ಬಾಲದಿಂದ ಹಿಡಿದು ಬೀಸಿ ಆಗಸಕ್ಕೆ ಒಗೆದನು. ಸೂರ್ಯಮಂಡಲದ ವರೆಗೆ ಮೇಲಕ್ಕೆ ಎಸೆಯಲ್ಪಟ್ಟ ಸಿಂಹವು ಘುಡಿಘುಡಿಸುತ್ತಾ ಇಳಿದೈತಂದು ನೆಟ್ಟಗೆ ಕರಿಣಿಯ ಮಸ್ತಕಕ್ಕೆರಗಿ ಅದನ್ನು ಕೆಡಹಿ ಕೊಂದು ತಾನೂ

ಆಕಡೆ ಬಿದ್ದು ಪ್ರಾಣವನ್ನು ಬಿಟ್ಟಿತು. ಅರಸನು ಈ ಸ್ಥಿತಿಯನ್ನು ಕಂಡು ಮರುಗಿದನು. 'ಒಂದನ್ನು ರಕ್ಷಿಸಲು ಹೊರಟು ನಾನು ಎರಡನ್ನೂ ಕೈಯಾರೆ ಕೊಂದಂತಾಯ್ತಲ್ಲಾ! ಹಿರಿದಾದ ಪಾಪವನ್ನೆಸಗಿದೆನು' ಎಂದು ಸಂಸಾರಕ್ಕೆ ಹೇಸಿ ದ್ವಾದಶಾನುಪ್ರೇಕ್ಷೆಗಳನ್ನು ಭಾವಿಸಿದನು. ಜ್ಞಾನಚಂದ್ರನಲ್ಲಿ ವೈರಾಗ್ಯವು ನೆರೆಬಲಿತುದು. ಅತ್ತ ಮಡಿದು ಬಿದ್ದ ಹರಿ ಕರಿಣಿಗಳು ಮಾಯಗೊಂಡು ಸುರರೀರ್ವರು ದೊರೆಯ ಮುಂದೆ ನಿಂತರು. ಅವರೇ ಕರಿಚರ ದೇವ-ಸಿಂಹಧ್ವಜರು. ನೃಪನನ್ನು ಬಿಗಿದಪ್ಪಿ ಇಂತೆಂದರು:- ಎಳವೆಯಲ್ಲಿ ಜೀವಿಗಳಿಗೆಲ್ಲಾ ಪಂಚಪದವನ್ನು ಬೋಧಿಸಿ ಸುರಲೋಕದ ಸಂಪದವನ್ನಿತ್ತೆ. ಇನ್ನು ಮುಂದೆ ಧರೆ ಕಾಯು ತಿದೆ ಮೋಕ್ಷವನ್ನು ಬಯಸಿ ನಿನ್ನ ಧರ್ಮಾಮೃತವರ್ಷಣಕ್ಕೆ. ಅದನ್ನರುಹಿ ನಿನ್ನನ್ನು ಎಚ್ಚರಿಸ ಲೇಂದೇ ನಾವೀ ನಾಟಕವನ್ನು ಹೂಡಿದೆವು. ಈ ಮಾತನ್ನು ಕೇಳಿ ಅರಸನು ಪ್ರಸನ್ನನಾದನು. ಸುರರೀರ್ವರ ಉಪಕಾರವನ್ನು ಶ್ಲಾಘಿಸಿ ಬೀಳ್ಕೊಟ್ಟು ನಿಜನಗರಿಯತ್ತ ತೆರಳಿದನು.

## 43. ದೀಕ್ಷೆ.

ಜ್ಞಾನಚಂದ್ರನು ರತ್ನಪುರಕ್ಕೈದಿ ಒಡ್ಡೋಲಗದಲ್ಲಿ ಆಸೀನನಾಗಿದ್ದು ಹರಿಚಂದ್ರ ಕುಮಾರನನ್ನು ಕರೆದು ತನ್ನ ವೈರಾಗ್ಯವನ್ನು ತಿಳಿಯಹೇಳಿ ರಾಜ್ಯದೊಡೆತನವನ್ನು ಸ್ವೀಕರಿಸು ವಂತೆ ಹೇಳಿದನು. ಆದರೆ ಹರಿಚಂದ್ರಕುಮಾರನು ತಾನು ಕೇಳಿದ ಭಾನುಕುಮಾರನ ಭವ ಜಾಲದಿಂದ ಮೊದಲೆ ಜುಗುಪ್ಸೆಗೊಂಡವನಾಗಿದ್ದು ತಾನೂ ಜಿನದೀಕ್ಷೆಯನ್ನಾನುವ ನಿರ್ಧಾರ ವನ್ನು ವ್ಯಕ್ತಪಡಿಸಿದನು. ಅರಸನು ಮುಗುಳ್ನಕ್ಕು ಜಿನಚಂದ್ರ ಮುನಿಚಂದ್ರ ಮೊದಲಾದ ತನ್ನ ಕುಮಾರಕರನ್ನು ಕರೆದು ಕೇಳಲಾಗಿ ಯಾರೊಬ್ಬರೂ ಈ ಸಾಮ್ರಾಜ್ಯವನ್ನೊಪ್ಪದೆ ತಮಗೆ ಮುಕ್ತಿಸಾಮ್ರಾಜ್ಯವೇ ಬೇಕೆಂದು ನುಡಿದರು. ಕೊನೆಗೆ ತನ್ನ ಮೊಮ್ಮಗ ಕೀರ್ತಿಕುಮಾರ ನನ್ನು ಕರೆದು ಮುದ್ದಿಸಿ 'ಪದ್ಧತಿಯೊಳು ಬಂದ ರಾಜ್ಯದೊಳಗೆ ನೀನಿದ್ದು ಪ್ರಜೆಯ ರಕ್ಷಿಸೆ' ನಲು ಅವನು ಕಂಬನಿಗರೆಯುತ್ತಾ 'ನಿಮ್ಮನ್ನಗಲಿ ನಾನೆಂತು ರಾಜ್ಯವಾಳುವೆನು. ನಾನೂ ನಿಮ್ಮಂತೆ ಮಳಧಾರಿಯಾಗುವೆನೆ'ನಲು ಅವನನ್ನು ಸಂತೈಸಿ ಆಗ್ರಹಪೂರ್ವಕ ಕನಕಪುರದ ಒಡೆತನವನ್ನಿತ್ತನು. ಸುಭಾನುಕುಮಾರನನ್ನು ಕರೆದು ರತ್ನಪುರದ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಮಣಿಕಿರೀಟವನ್ನು ಶಿರದಲ್ಲಿಟ್ಟು ಪಟ್ಟಾಭಿಷೇಕವನ್ನು ನೆರವೇರಿಸಿದನು. ಅಲ್ಲಿಂದ ಅನುಮತಿದೇವಿಯ ಬಳಿಗೈದಿ ಮೊಮ್ಮಗನನ್ನು ಮುಂದಿಟ್ಟುಕೊಂಡು ಕನಕಪುರದಲ್ಲಿ ರಾಜ್ಯಭಾರವನ್ನು ಎಸಗುತ್ತಿರೆಂದನು. ಆಕೆ ಒಡಂಬಡುವಳೇ? 'ಇನಿತು ಕಾಲ ನಿಮ್ಮೊಡ ನಿದ್ದು ಪರುಷವ ಸೋಂಕಿದ ಲೋಹದಂತೆ ಪಾವನಳಾದ ನಾನು ಇನ್ನೀ ಬದುಕಿಗೆ ಸೋಲು ವೆನೇ. ನಿಮ್ಮ ಮಾರ್ಗವೆ ನನಗಿರುವಂತೆ ಅನುಗ್ರಹಿಸೆ'ಂದಳು. ಉಳಿದ ಲಲನಾಮಣಿಗಳೂ ಪತಿಯನ್ನು ಅನುಸರಿಸಲೆಂದು ಹೊರಟುನಿಂದರು. ಜ್ಞಾನಚಂದ್ರನು ಅನ್ಯಥಾ ನುಡಿವಂತಿಲ್ಲ. ತನ್ನನ್ನು ಹಿಂಬಾಲಿಸಿದ ಎಲ್ಲರನ್ನೊಡಗೂಡಿ ಅರಮನೆಯಿಂದ ಹೊರಬಿದ್ದು ಪುರವೀಥಿಯಲ್ಲಿ

ನಡೆತಂದನು. ನೆಚ್ಚಿನ ಪುರಜನ-ಪರಿಜನ ಬಂಧುವರ್ಗ ಗೋಳಿಡುತ್ತಾ ಹಿಂಬಾಲಿಸಿ ಬರಲು ಪುರದ ಹೊರವಲಯಕ್ಕೈದಿ ಅಲ್ಲಿ ನಿಂದು ಅವರನ್ನೆಲ್ಲಾ ಸಂತವಿಟ್ಟು ಬೀಳ್ಕೊಟ್ಟು ವಿಮಾನ ವನ್ನಡರಿ ಗಗನಮಾರ್ಗದಿಂದ ಕುರುಜಾಂಗಣದೇಶಕ್ಕೈದಿದನು. ರತ್ನಪುಷ್ಪಕವಿಳಿದು ಶ್ರೀ ಜಯಜಿನ-ವಿಜಯಜಿನರುಗಳ ಗಂಧಕುಟಿಯನ್ನು ಮೂನೆ ಬಲವಂದು ಸಾಷ್ಟಾಂಗವೆರಗಿ ಕೈಮುಗಿದು ನುತಿಗೈದನು. ಜಿನಮುಖಕಮಲದಿಂದ ದುಂದುಭಿರವದಂತೆ ದಿವ್ಯನಾದ ಕೇಳ ಬಂದುದು. ಕರ್ಣರಸಾಯನ ಮನಸ್ಸಿಗೆ ಪರಿಣಾಮವೆನಿಸಿದ ಈ ಪರಮ ತತ್ತ್ವೋಪದೇಶ ವನ್ನಾಸ್ವಾದಿಸಿ ಜ್ಞಾನಚಂದ್ರನು ಕೃತಾರ್ಥನೆನಿಸಿದನು.

ಇನ್ನೇನು ? ತಡೆಯುಂಟೆ ? ಜ್ಞಾನಚಂದ್ರನು ಜಿನದೀಕ್ಷೆಯನ್ನು ಸ್ವೀಕರಿಸಲು ಸಿದ್ಧ ನಾದನು. ಅಮರಿಯರು ಶಿಲಾತಲದಲ್ಲಿಕ್ಕಿದ ಮುತ್ತಿನ ಚೌಕದಲ್ಲಿ ಜ್ಞಾನೇಂದು ಕುಳಿತನು. ಸರ್ವಾಭರಣಗಳನ್ನು ಇನಿತುಳಿಯದಂತೆ ತೆಗೆದಿರಿಸಿದನು. ಮಿರುಗುವ ಚಂದ್ರಪ್ರಭೆಯೆಂಬ ಮಕುಟ ತಲೆಯಿಂದಿಳಿದುದು. ಘನಕರ್ಮವಲ್ಲಿಯ ಬೇರನ್ನು ಕೀಳ್ವಂತೆ ನೀಳಕುಂತಳವನ್ನು ಪಂಚಮುಷ್ಟಿಯಿಂದ ಪರಿದಿಟ್ಟನು. ಉಟ್ಟಬಟ್ಟೆಯನ್ನು ಕಿತ್ತೊಗೆದು ಜಾತರೂಪಧರನಾದನು. ಜ್ಞಾನೇಂದು ಮುನಿನಾಥನಿಗೆ ನೆರೆದರೆಲ್ಲ ಎರಗಿದರು. ಹರಿಚಂದ್ರಾದಿ ಒಂಭತ್ತು ಸಾವಿರ ಕುಮಾರರೂ, ಹರಿಬಲಾದಿ ಹದಿಮೂರು ಸಾವಿರ ದೊರೆಗಳೂ ದಿಗಂಬರ ದೀಕ್ಷೆಯನ್ನಾಂ ತರು. ಅನುಮತ್ಯಾದಿ ಪದಿನೈದು ಸಾವಿರ ವನಿತಾಮಣಿಗಳು ಮಣಿಮಾಲೆಯೊಡಗೂಡಿ ಕುಂಚ-ಕಮಂಡಲುಗಳನ್ನು ಪಿಡಿದು ಕಂತಿಯರಾದರು.

ಜ್ಞಾನೇಂದುಮುನಿ ಜಿನಪಾದಮೂಲದಲ್ಲಿ ದ್ವಾದಶಾಂಗ, ಚತುರ್ದಶ ಪೂರ್ವಿ ಗಳನ್ನು ತಿಳಿದು ಮತಿಶ್ರುತಾವಧಿಬೋಧಸಂಪನ್ನನಾದನು. ಶುಭಭಾವನೆಯಿಂದ ಮನಃ ಪರ್ಯಯ ಜ್ಞಾನವೂ ದೊರಕೊಂಡುದು. ತನ್ನಂತರ ಮುನಿಗಳ ಹಿಂಡನ್ನಗಲಿ ಏಕವಿಹಾರಿ ಯಾಗಿ ಸಂಚರಿಸುತ್ತಾ ಧರೆಯೊಳಗೆ ಅನುಪಮ.ಧರ್ಮವೃಷ್ಟಿಯನ್ನು ಕರೆದನು. ದ್ವಾದಶ ವಿಧ ತಪಸ್ಸುಗಳಲ್ಲಿ ತೊಡಗಿದನು. ಘೋರ ತಪಃಪ್ರಭಾವದಿಂದ ಮುನಿರಾಯನಲ್ಲಿ ಅನೇಕಾ ನೇಕ ಪವಾಡಗಳು ಕಾಣಿಸಿಕೊಂಡವು. ಇಂತು ಲೋಕೋಪಕಾರ, ಆತ್ಮೋದ್ಧಾರಗಳಲ್ಲಿ ಜ್ಞಾನೇಂದುಮುನಿ ನಿರತನಾಗಿದ್ದನು.

## 44. ಸಮವಸರಣ.

ಜ್ಞಾನಚಂದ್ರಯೋಗೀಂದ್ರನು ಅದೊಂದು ದಿನ ಹನ್ನೆರಡು ದಿನಗಳ ಉಪವಾಸವನ್ನು ಕೈಗೊಂಡು ತಪೋಯೋಗದಲ್ಲಿದ್ದನು. ಆಗ ಅದೇ ಗಿರಿವನದಲ್ಲಿ ನಿವಾಸಿಸುತ್ತಿದ್ದ ಪವಿಗಲ (ವಜ್ರಕಂಠ)ಚರನಾದ ದುರುಳ ರಕ್ಕಸನು ತಿರುಗಾಡುತ್ತಾ ಬಂದು ಈ ಮುನಿವರನನ್ನು ಕಂಡನು. 'ರತ್ನಪುರದ ಸಿಂಹಬಲನ ಅನುಮತ್ಯಾದಿ ಅಷ್ಟಕುಮಾರಿಯರು ಆತನ ಅಳಿಯ ವಜ್ರ

ಕಂಠನಾದ ಎನಗೆಂದಿರಲು ನನ್ನನ್ನು ಕೊಂದಿಕ್ಕಿ ಆ ಕನ್ನಿಕೆಯರನ್ನು ಅಪಹರಿಸಿದ ಧೂರ್ತನು ಇವನೆಂದು ಭವಸ್ಮರಣೆಯಿಂದ ತಿಳಿದವನಾಗಿ ಸೇಡು ಮರುಕೊಳಿಸಲು ಜ್ಞಾನಚಂದ್ರ ಮುನಿಗೆ ಭೀಕರ ಉಪಸರ್ಗನ್ನೆಸಗಲು ತೊಡಗಿದನು. ಮರುತ ಬೀಸಲು ಮಂದರ ಚಲಿಸುವುದೇ ? ಜ್ಞಾನೇಂದು ಮುನಿ ಪುಟಕ್ಕಿಟ್ಟ ಕಾಂಚನದಂತೆ ಕ್ಷಣಕ್ಷಣಕ್ಕೆ ಪರಿಶುದ್ಧನಾಗುತ್ತಾ ಬಂದನು. ಪರಮ ಶುಕ್ಲಧ್ಯಾನನಿರತನಾಗಿದ್ದ ಮುನಿವರನಲ್ಲಿ ಪೂರ್ಣಿಮಿಯ ಚಂದ್ರನಂತೆ ಆತ್ಮಕಳೆ ಬೆಳಗಿದುದು; ಕರ್ಮಮಲ ಸಡಿಲ್ದುದು. ಇಂತು ಅರುವತ್ತಮೂರು ಕರ್ಮಗಳು ನಾಶವಾಗಲು ಸೂರ್ಯನಂತೆ ಪ್ರಕಾಶಮಾನವಾದ ಕೇವಲಜ್ಞಾನವು ಪುಟ್ಟಿದುದು. ಸರೋವರದಲ್ಲಿ ಕೆಸರುಳಿದ ಅಲಾಬುವಿನಂತೆ ಮುನಿರಾಜನು ಸಾವಿರ ಬಿಲ್ಲುತ್ಸೇದ ಮೇಲಕ್ಕೆ ನೆಗೆದು ನಿಂತು ಜಿನನಾದನು. ಸುರಲೋಕದಲ್ಲಿ ಜಯಘಂಟೆಯು ನಿನಾದ ಕೇಳಿಬರಲು ದೇವೇಂದ್ರನು ಆನಂದತುಂದಿಲನಾದನು. ಕುಬೇರನಿಗೆ ಆಜ್ಞೆಯಿತ್ತು ಗಂಧಕುಟಿಯನ್ನು ಮಾಡಿಸಿದನು. ಜಿನೇಶ್ವರನ ಕೇವಲಜ್ಞಾನಕಲ್ಯಾಣಕ್ಕೆಂದು ಇಂದ್ರಾಣಿ ಸಹವಾಗಿ ಸಕಲ ದೇವತೆಗಳನ್ನೊಡಗೊಂಡು ಸುರೇಂದ್ರನು ಆಗಮಿಸಿದನು. ಭವ್ಯರಾದ ನರೋರಗತಿರ್ಯಂಚ ಜೀವಿಗಳು ಗಂಧಕುಟಿಯನ್ನಡರಿ ತಮ್ಮ ತಮ್ಮ ಕೋಷ್ಠಗಳಲ್ಲಿ ಮೆರೆದರು. ಅನಿತರಲ್ಲಿ ಜಿನಮುಖಕಮಲದಿಂದ ಉರುಶಂಖಧ್ವನಿಯಂತೆ ಗುಂಗುಂಮ್ಮೆಂದು ದಿವ್ಯಧ್ವನಿ ಹೊರಹೊಮ್ಮಿತು. ಹದಿನೆಂಟು ಮಹಾಭಾಷೆಗಳಲ್ಲಿ, ಏಳ್ನೂರು ಕ್ಷುಲ್ಲಕ ಭಾಷೆಗಳಲ್ಲಿ ನೆರೆದ ಮಂದಿ ಪರಮ ತತ್ವಗಳನ್ನು ನೆರೆಯರಿತು ಕೃತಾರ್ಥರಾದರು.

---

## 45. ನಿರ್ವಾಣಕಲ್ಯಾಣ.

ಅತ್ತ ಜ್ಞಾನಚಂದ್ರಮುನಿಗೆ ಉಪಸರ್ಗ ಕೊಡುತ್ತಿದ್ದ ವಜ್ರಕಂಠನು ಈ ತೆರನಾದ ಜಿನಮಹಿಮೆಯನ್ನು ಕಂಡು ತನ್ನ ಕಾರ್ಯಕ್ಕೆ ಹೇಸಿ ಭವಬದ್ಧವೈರವನ್ನು ಮರೆತು ಗಂಧಕುಟಿಗೈತಂದು ಜಿನರಾಜನಿಗೆರಗಿ ಸಮ್ಯಕ್ತ್ವಾದಿ ವ್ರತಗಳನ್ನು ಕೈಗೊಂಡನು. ಗಂಧಕುಟಿಯು ವಿಹರಿಸುತ್ತಾ ಪಲ್ಲವದೇಶಕ್ಕೆ ಬಂದು ನೆಲಸಿರಲು ಪ್ರತಿಸೂರ್ಯ ಮತ್ತು ಸುಭಾನು ಇದನ್ನು ಕೇಳಿ ಬಂದು ಜಿನರಡಿಗಳಿಗೆರಗಿ ಪೂಜೆ ಮಾಡಿ ಹರಿಚಂದ್ರ ಮೊದಲಾದ ಮುನಿಸಮುದಾಯಕ್ಕೆ ಭಕ್ತಿಯಿಂದೆರಗಿದರು. ಮನುಜಕೋಷ್ಠದಲ್ಲಿ ಕುಳಿತಿದ್ದ ಪ್ರತಿಸೂರ್ಯನು ತನ್ನ ಪೂರ್ವಜನ್ಮವೃತ್ತಾಂತವನ್ನು ನಿರವಿಸಬೇಕೆಂದು ಬಿನ್ನವಿಸಿಕೊಳ್ಳಲು ದಿವ್ಯಧ್ವನಿ ಪೊಣ್ಮಿದುದು:

ಭರತಾರ್ಯಖಂಡದ ವಿಂಧ್ಯಾಚಲಗುಹೆಯೊಳಗೆ ಶ್ರೀದತ್ತಮುನಿಗಳು ತಪೋನಿರತರಾಗಿ ಕುಳಿತಿರಲು ಶಬರನಾಯಕನೋರ್ವನಲ್ಲಿಗೈತಂದವನು ಮುನಿಗಳ ದಿವ್ಯಾಂಗವನ್ನು ಕಂಡು ಭಯಭಕ್ತಿಯಿಂದ ಮಣಿದು, ಹಲಗಾಲದಿಂದ ತನ್ನನ್ನು ಬಾಧಿಸುತ್ತಿರುವ ರೋಗಕ್ಕೆ ಔಷಧವನ್ನೊರೆಯಬೇಕೆಂದು ಬಿನ್ನವಿಸಿಕೊಳ್ಳಲು 'ಎಲೆ ಮಗನೆ ಕೇಳು, ಈ ಪ್ರಪಂಚದಲ್ಲಿ

ರೋಗಶತಗಳನ್ನಾದರೂ ನಾಶಮಾಡಬಲ್ಲ ದಿವ್ಯೌಷಧವೆಂದರೆ ಜಿನಪತಿಮಾರ್ಗವೊಂದೆ. ಸಮ್ಯಗ್ದೃಷ್ಟಿಯಾಗಿ ಪಂಚಾಣುವ್ರತಗಳನ್ನು ಕೈಗೊಂಡು ದಯಾಪರನಾಗಿ ವರ್ತಿಸಿ ನಿನ್ನ ಕಲ್ಯಾಣವನ್ನು ಸಾಧಿಸಿಕೋ. ನಿನಗಿರುವುದಾದರೂ ಇನ್ನು ಕೇವಲ ಒಂದೇ ವರುಷ ಆಯುಷ್ಯವೆಂದರು. ಶಬರನಾಯಕನಿಗೆ ಪುಣ್ಯೋದಯದಿಂದ ಮುನಿವಚನದಲ್ಲಿ ವಿಶ್ವಾಸ ಪುಟ್ಟಿದುದು. ಮನೆಗೆ ತೆರಳಿದವನೆ ಹಿಂಸಾಚಾರಗಳನ್ನೆಲ್ಲಾ ತೊರೆದು, ಹೆಂಡಿರುಮಕ್ಕಳ ಆಶೆಯನ್ನು ನೀಗಿ, ಮರದ ಹಣ್ಣುಹಂಪಲುಗಳನ್ನು ಕೊಯ್ದು ತಿಂದು ಜೀವಿಸುತಿದ್ದು ಪಂಚಪದವನ್ನು ಸ್ಮರಿಸುತ್ತಾ ಕಾಲವನ್ನು ಕಳೆಯುತ್ತಿರಲಾಗಿ ಅವನಾಯುಷ್ಯವು ತೀರಿದುದು. ಅಲ್ಲಿಂದ ಸೌಧರ್ಮಸ್ವರ್ಗದಲ್ಲಿ ದೇವನಾಗಿ ಹುಟ್ಟಿದ ಆತನು ಮುನಿಗಳ ಅದೊಂದು ಉಪಕಾರವನ್ನೂ, ವ್ರತದೊಂದು ಮಹಿಮೆಯನ್ನೂ ಭಾವಿಸಿ ಶ್ರೀದತ್ತಮುನಿಗಳ ಬಳಿಗೈದಿ ಪೊಡಮಟ್ಟನು. ಧರ್ಮಮಾರ್ಗದಲ್ಲಿ ನಡೆಯುತ್ತಿದ್ದ ಆತನು ಆ ದೇವಾಯುವು ತೀರಲು ವಿದೇಹದೇಶದ ಮಿಥಿಲಾನಗರಿಯ ರತಿವರ್ಧನನೆಂಬ ಅರಸನಿಗೆ ಪಟ್ಟದರಸಿ ರತ್ನಾಂಕಿನಿ ಎಂಬವಳಲ್ಲಿ ರತಿಕಾಂತನೆಂಬ ಮಗನಾಗಿ ಹುಟ್ಟಿದನು. ರತಿವರ್ಧನನೊಂದು ದಿನ ಕರುಮಾಡವೇರಿ ಕುಳಿತಿದ್ದವನು ಆಗಸವನ್ನು ನೋಡುತ್ತಿದ್ದು, ಅಲ್ಲಿ ಗೋಚರಿಸಿದ ಸಾಸಿರಕೂಟ ಜಿನಾಲಯದಂತೆ ರೂಪುಗೊಂಡಿದ್ದ ಬೆಳ್ಮುಗಿಲಿಗೆ ಮನಸೋತು, ಅದನ್ನು ಚಿತ್ರಕ್ಕಿಳಿಸಬೇಕೆಂದು ಬಯಸಿ ಕುಂಚಹಲಗೆಗಳನ್ನು ತರಿಸುವಷ್ಟರಲ್ಲಿ ಅದು ಮಾಯವಾಗಲು ಅದೇ ನಿರ್ವೇಗಕಾರಣವಾಗೆ ರತಿಕಾಂತನಿಗೆ ಭೂಭಾರವನ್ನಿತ್ತು ತಾನು ದೀಕ್ಷೆಗೆ ತೆರಳಿದನು.

ಕುವರ ರತಿಕಾಂತನಾದರೋ ಪಲಗಾಲ ದೇವೇಂದ್ರ ವೈಭವದಿಂದ ಧರೆಯನ್ನಾಳುತ್ತಿದ್ದು ಅದೊಂದು ದಿನ ವಿಂಧ್ಯಾಚಲಕ್ಕೆ ಬೇಟೆಗೆ ತೆರಳಿದನು. ಅಲ್ಲಿ ತನ್ನ ಪೂರ್ವದ ಹಗೆಯೋರ್ವನನ್ನು ಕಂಡೊಡನೆ ಜಾತಿಸ್ಮರಣೆಯಾದುದು. ಹಿಂದಣ ಭವಗಳು ಕಣ್ಗೆ ಕಟ್ಟಿದಂತಾಗಲು ಸಂಸಾರ ಸ್ಥಿತಿಗೆ ನೊಂದು ಗೃಹಕ್ಕೈದಿ ತನ್ನ ಕುವರ ರತಿಷೇಣನಿಗೆ ರಾಜ್ಯವನ್ನಿತ್ತು ಪಿತೃಪಾದಮೂಲದಲ್ಲಿ ದೀಕ್ಷೆಯನ್ನಾಂತನು. ಆಯುರವಸಾನದಲ್ಲಿ ಮುಡಿದು ಬ್ರಹ್ಮಕಲ್ಪದಲ್ಲಿ ಹುಟ್ಟಿ ತನ್ನ ಸ್ಥಿತಿ-ಗತಿಗಳನ್ನು ಅವಧಿಯಿಂದರಿತು ಭೂಮಿಗಿಳಿದು ಬಂದು, ತನ್ನ ಹಿಂದಿನ ಮುನಿರೂಪಿನಲ್ಲಿರುವ ಕಾಯವನ್ನು ಕಂಡು ಕೈಮುಗಿದು ದಹನ ಕ್ರಿಯೆಯನ್ನು ನಡೆಸಿ ದೇವಲೋಕಕ್ಕೆ ಹಿಂತೆರಳಿದನು. ಅಲ್ಲಿ ಚಿರಕಾಲ ಸುಖವನ್ನುಂಡು ಆ ಪರಮಾಯುಷ್ಯವು ತೀರಲು ಅದೇ ದೇವನೈತಂದು ಹರಿಚಂದ್ರಕುಮಾರನಿಗೆ ನೀನು ಪ್ರತಿಸೂರ್ಯನೆಂಬಭಿದಾನದಿಂದ ಪುತ್ರನಾಗಿ ಜನಿಸಿರುವೆ.

ಈ ಭವಪರಂಪರೆಯನ್ನು ಕೇಳಿ ನೊಂದ ಪ್ರತಿಸೂರ್ಯನು ನಿರ್ವೇಗ ತಾಳಿದವನಾಗಿ ಚಿಕ್ಕಪ್ಪನಾದ ಸುಭಾನುವಿಗೆ ರಾಜ್ಯಭಾರವನ್ನರ್ಪಿಸಿ ದೀಕ್ಷೆಯನ್ನಾಂತು ತನ್ನಜ್ಜನ ಗಂಧಕುಟಿಯನ್ನು ಸೇರಿದನು. ಅದು ಮುನ್ನೂರು ವರ್ಷ ದೇಶಾಂತರಗಳಲ್ಲಿ ಅಲೆದುದು. ಕೊನೆಗೆ ತನಗಾಯುಷ್ಯವು ತಿಂಗಳುಟೆಂಬಾಗ ಜಿನದೇವನು ಗಂಧಕುಟಿಯನ್ನುಳಿದು ತಾರಾದ್ರಿ

ಶಿಖರವನ್ನೇರಿ ತುದಿಯೊಳಗೊಂದು ಚಂದ್ರಕಾಂತ ಶಿಲಾತಲದಲ್ಲಿ ಪಲ್ಯಂಕಯೋಗದಲ್ಲಿ ಕುಳಿತನು. ಹರಿಚಂದ್ರ ಭಾನುಕುಮಾರ ಮುನಿಗಳೂ ತಪೋನಿರತರಾಗಿ ಈ ದೇಹವನ್ನು ಬಿಟ್ಟು ಸರ್ವಾರ್ಥಸಿದ್ಧಿಯಲ್ಲಿ ಜನಿಸಿದರು. ಪ್ರತಿಸೂರ್ಯನೂ ತಪಸ್ಸನ್ನು ನೆಗಳ್ದು ಎಂಟನೆಯ ಸ್ವರ್ಗದಲ್ಲಿ ಜನಿಸಿದನು. ಉಳಿದವರೂ ಈ ರೀತಿ ಸ್ವರ್ಗಪದವಿಗಡರಿ ಸುಖವನ್ನನುಭವಿಸುತ್ತಿದ್ದರು. ಕರಿಚರದೇವ ಅಮಿತತೇಜನೂ, ಸಿಂಹಧ್ವಜನೂ ಅನುದಿನ ಜ್ಞಾನೇಂದು ಜಿನಪನ ಚರಣಪೂಜೆಯಲ್ಲಿ ನಿರತರಾಗಿದ್ದರು. ಕೊನೆಗೆ ಜಿನರಾಜಮಲ್ಲನು ಧ್ಯಾನಾಗ್ನಿಯಿಂದ ಅಘಾತಿಕರ್ಮಗಳನ್ನು ಸುಟ್ಟು ಅನಂತಚತುಷ್ಟಯಬಲಸಂಪನ್ನನಾಗಿ ಮೋಕ್ಷವನ್ನೈದಿದನು. ಆಗತಾನೆ ಸುರಪನ ಮಣಿವಿಷ್ಟರ ಕಂಪಿಸಿದುದು. ದೇವೇಂದ್ರನು ಜ್ಞಾನಚಂದ್ರಮುನಿ ನಿರ್ವಾಣವನ್ನೈದಿರುವುದನ್ನು ಅವಧಿಬೋಧದಿಂದ ತಿಳಿದು ಜಿನಪತಿಗೆ ಕೊನೆಯ ಕಲ್ಯಾಣವನ್ನೆಸಗಲು ಇಂದ್ರಾಣಿ ಸಹಿತ ಚತುರ್ಣಿಕಾಯ ದೇವರೊಡಗೂಡಿ ಬಂದನು. ಪಳುಕಿನ ಶಿಲೆಯ ಮೇಲೆ ಕರ್ಪೂರ ಶ್ರೀಗಂಧ ಗುಗ್ಗುಳಗಳನ್ನು ಹೇರಿ ಶರೀರವನ್ನು ಅದರ ಮೇಲೆ ಇರಿಸಿ ಸಿದ್ಧವಾಗಲು, ಅಗ್ನೀಂದ್ರ ಬಂದು ಜ್ವಾಲಾಂಕಿತ ಕಿರೀಟವನ್ನು ಮುಟ್ಟಿಸಲು ಕಿಚ್ಚುರಿದು ಕ್ಷಣಾರ್ಧದಲ್ಲಿ ದೇಹವನ್ನು ಸುಟ್ಟಿತು. ದೇವತೆಗಳೆಲ್ಲಾ ಜಯಜಯಕಾರದೊಡನೆ ಜಿನನ ಗುಣಗಾನವನ್ನು ಮಾಡುತ್ತಾ ಕುಣಿಕುಣಿದು ನಲಿನಲಿದರು. ಚಿತಾಭಸ್ಮವನ್ನು ಪ್ರಸಾದವೆಂದು ಮೈಗೆ ಪೂಸಿಕೊಂಡರು. ಇಂತು ನಿರ್ವಾಣಕಲ್ಯಾಣ ಪೂಜೆಯನ್ನೆಸಗಿ ಕೃತಾರ್ಥರಾಗಿ ದಿವಕ್ಕೆ ಮರಳಿದರು.



# ಅನುಕ್ರಮಣಿಕೆ.

ಓಂ

ಮಹಾಕವಿ ಪಾಯಣವರ್ಣಿ ವಿರಚಿತ

# ಜ್ಞಾನಚಂದ್ರಚರಿತೆ.

## ಪೀಠಿಕೆ.

ಒರವೆನು ಜ್ಞಾನಚಂದ್ರನ ಚಾರುಚರಿತೆಯ । ಧರೆಯ ಭವ್ಯರು ಲಾಲಿಪುದು ॥
ಮಾರಾರಿ ಶಾಂತಿಜಿನೇಂದ್ರನೆಂಬುವ ಸೂರ್ಯ । ನೀ ಮೂಡು ಮನ್ಮನಾದ್ರಿಯೊಳು ॥ ೧ ॥

ಸುಖವೆ ಮೆಯ್ಯಾಗಿ ಸುಜ್ಞಾನೋದರದೊಳ । ಗಖಿಲ ಲೋಕವನಿಂ ಬಿಟ್ಟು ॥
ಮುಕುತಿ ವೆಣ್ಣಾಳ್ದ ಸಿದ್ಧರ ಪಾದ ನಖಚಂದ್ರ । ವಿಕಸಿಕ್ಕೆ ಮನ್ಮನೋತ್ಪಲವಾ ॥ ೨ ॥

ಘೋರಸಂಸಾರಾರ್ಣವದೊಳು ಮುಳುಗಿರ್ದ । ಭೂರಿ ಜೀವಂಗಳನೆತ್ತಿ ॥
ಚಾರುಚರಿತ್ರನಾವೆಯೊಳಿಟ್ಟು ದಾಂಟಿಪ । ಸೂರಿಗಳಡಿಗೆರಗುವೆನು ॥ ೩ ॥

ದುರಿತತಿಮಿರಹರ ಪರವಾದಿ ಪದ್ಮಾ । ರರುಹನ್ಮತಾರ್ಣವಾನಂದ ॥
ವರಧರ್ಮಕಿರಣವ ಕರೆವ ಪಾಠಕಚಂದ್ರ । ಚರಿಸೆನ್ನ ಹೃನ್ನಭದೊಳಗೆ ॥ ೪ ॥

ದೇಹಮೂಸೆಯೊಳು ಮಾಸಿದ ಜೀವಧನ ವಿ- । ಟ್ಟೂಹಿಸಿ ಧ್ಯಾನಾಗ್ನಿಯಿಂದ ॥
ಮೋಹಕಿಟ್ಟವ ಕಳೆದಾತ್ಮಹೇಮವ ಕಂಡು- । ತ್ಸಾಹ ಸಾಧುಗಳಿಗೆರಗುವೆನು ॥ ೫ ॥

ವರಪಂಚಗುರುಗಳ ಪಾದಗಳೆಂದೆಂಬ । ಸುರತರು ಮನ್ಮನವೆಂಬ ॥
ಉರುನಂದನವೊಳು ನೆಲಸಿ ಮೋಕ್ಷಫಲವನು । ಕರುಣಿಸಲೆಮಗೆ ಬೆಳಗುತ ॥ ೬ ॥

ಭರತವೈದರೊಳೈರಾವತವೈದರೊ- । ಳ್ಮೆರೆವ ಕಾಲತ್ರಯದೊಳಗೆ ॥
ಸಿರುತದಿ ವರ್ತಿಪ ಯೆಳನೂರಿಪ್ಪತ್ತು । ವರ ತೀರ್ಥಕರಿಗೆ ವಂದಿಪೆನು ॥ ೭ ॥

ಅಷ್ಟಕೋಟಿಯು ಛಪ್ಪನ್ನ ಲಕ್ಕವು ಮೇಲೆ । ಯಷ್ಟಾದ ನವತಿಸಹಸ್ರ ॥
ಮುಟ್ಟಿದ ನಾನೂರೆಂಭತ್ತೊಂದಕೃತ್ರಿಮ । ಶಿಷ್ಟ ವಸತಿಗೆ ಕೈ ಮುಗಿವೆ ॥ ೮ ॥

ನವಶತಪಂಚವಿಂಶತಿ ಕೋಟಿ ಪಂಚಾಶ- । ತ್ರಿವಿಧ ಲಕ್ಷವು ಇಪ್ಪತ್ತೇಳು ॥
ಕವಿದಸಾಸಿರದೊಂಬೈನೂರ್ನಾಲ್ವತ್ತೆಂಟು । ಹವಣಿನ ಚೈತ್ಯಕೆರಗುವೆ ॥ ೯ ॥

ಹಿಮವನ್ನಗಸಮ ಜಿನಮುಖ ಸರಸಿಯೊ- । ಳಮಲ ವಾಗ್ಗಂಗೆ ತಾನೊಗೆದು ॥
ಮಮತೆಯಿಂ ಭವ್ಯಾಬ್ಧಿಯ ಸಾರಿದ ವಾಣಿ । ನಮಗೆ ಒಳ್ನುಡಿಯನು ಕೊಡುಗೆ ॥ ೧೦ ॥

ನೂರಹನ್ನೆರಡು ಕೋಟಿಯು ಮತ್ತೆಯೆಂಭತ್ತ । ಮೂರುಲಕ್ಷವುಮಯ್ವತ್ತೆಂಟು ॥
ತೋರಿದ ಸಾಸಿರದೈದು ಪದವನುಳ್ಳೀ- । ಚಾರು ಶ್ರುತಕೆ ವಂದಿಸುವೆನು ॥ ೧೧ ॥

ಜಿನಮುಖಚಂದ್ರಕಾಂತದೊಳೊಗೆದಪ್ಪವಾ- । ಕ್ಕನಿಗಳನೀಂಟಿ ಸುಖಿಸುವ ॥
ಮುನಿಕುಲತಿಲಕ ಗಣಧರ ಚಕೋರವ- । ನನುದಿನ ನಾನು ನೆನೆವೆನು ॥ ೧೨ ॥

ಮೂವರುಗುಂದಿದ ನವಕೋಟಿಮುನಿಗಳ । ಪಾವನ ಪದ ನೀರೇಜವನು ॥
ಭಾವಶುದ್ಧಿಯೊಳಾನು ಬಲವಂದು ತುಂಬಿಗ- । ಳಾವಿಧದೊಳಗೆರಗುವೆನು ॥ ೧೩ ॥

ಅದ್ರಿಸಮಾನಧೈರ್ಯನ ವಾದಿಜನವಾ- । ಜ್ಯಾದ್ರಿತ ಶ್ರುತಕೇವಲಿಯ ॥
ಭದ್ರ ಶ್ರೀ ಬಾಹುಬಲಿಯ ಪದಕೆರಗುವೆ । ಭದ್ರಪದವಿ ಬೇಕೆಂದು ॥ ೧೪ ॥

ಪ್ರಥಮಾನುಯೋಗವೆಂಬಬ್ಧಿಯಿಂತೆಗೆದು ಸ- । ನ್ನುತ ತ್ರಿಷಷ್ಠಿಪುರುಷರ ॥
ಕಥೆಯ ಪೇಳಿದ ಕವಿಪರಮೇಷ್ಠಿಯಂಘ್ರಿಗೆ । ನತನಹೆ ನಾನನವರತ ॥ ೧೫ ॥

ಕಾಮಿನಿಯರ ಬಿಟ್ಟಬಳಿಕಿನ್ನು ಭೂಮಿ- । ಕಾಮಿನಿಯನು ಮುಟ್ಟೆನೆಂದು ॥
ವ್ಯೋಮಮಾರ್ಗದೊಳೆಯ್ದುವ ಕುಂದಕುಂದಾರ್ಯ- । ರ್ಗಾಮೋದದಿಂದೆರಗುವೆನು ॥

ಗುಂಡಿಗೆಯುದಕ ಮಂತ್ರಿಸಿ ಮೀನೆಂದು । ಕೊಂಡು ಕೊನರೆ ಮಿಥ್ಯಾಜನವು ॥
ಕಂಡು ಮೊಲ್ಲೆಯ ಕುಸುಮವ ಮಾಡಿ ಜಯಿಸಿದ । ಕುಂದಕುಂದಾರ್ಯರ್ಗೆರಗುವೆ ॥

ಗಿರಿಪುರದೊಳು ಕಲ್ಯಾಣಿಯ ನುಡಿಯಿಸೆ । ವರಮೂಲಸಂಘವೆಯೆಂದು ॥
ದುರುಳ ಶ್ವೇತಾಂಬರರನು ಗೆಲ್ದುಮಾಸ್ವಾತಿ । ವರಮುನಿಯಡಿಗೆರಗುವೆನು ॥ ೧೮ ॥

ಹಿಮಶೀತಳೇಶನ ಸಭೆಯೊಳು ಬೌದ್ಧರ । ಭ್ರಮಣೆಗೊಳಿಸಿ ವಾದದಿಂದ ॥
ಕ್ರಮದಿಂದ ಘಟವನೊಡೆದು ಗೆಲ್ದಕಲಂಕ । ಯಮಿಯ ಪಾದಕೆ ನಮಿಸುವೆನು ॥ ೧೯ ॥

ದೊರೆಭೋಜರಾಜಾಸ್ಥಾನಾಂಬುಜವನು । ಕೊರಗಿಸಿ ಸ್ವಮತಕ್ಕೈರವವ ॥
ಪೊರೆದಮಾವಾಸ್ಯೆಯ ಹುಣ್ಣಿಮೆಯನು ಮಾಳ್ದ । ಗರುವ ಪ್ರಭೇಂದುಗೆರಗುವೆ ॥ ೨೦ ॥

ಪಾದಲೇಪದಿ ಪೋಗಿ ಕೈಲಾಸಗಿರಿಯೊಳಿ- । ರ್ದಾದಿಜಿನಗೆ ಪೊಡಮಟ್ಟ ॥
ವಾದಿಗಜಕೆ ಸಿಂಹನೆನಿಸಿದ ಶ್ರೀ ಪೂಜ್ಯ- । ಪಾದವ್ರತಿಗೆ ನಮಿಸುವೆನು ॥ ೨೧ ॥

ಕೊಲ್ಲಾಪುರದೊಳು ಸಕಲಶಾಸ್ತ್ರಂಗಳ । ಸೊಲ್ಲಿಸಿ ಕೀರ್ತಿಯನಾಂತ ॥
ಫುಲ್ಲಶರನ ಗೆಲ್ದ ಮಾಘನಂದ್ಯಾರ್ಯನ । ಸೊಲ್ಲು ಬಂದೆನ್ನೊಳಗಿರಲಿ ॥ ೨೨ ॥

ಲಬ್ಧಿಗೊಮ್ಮಟತ್ರಿಲೋಕಸಾರಗಳಿಂ- । ಬಬ್ಧಿವರ್ಧನ ಶಶಾಂಕ ॥
ಬೌದ್ಧಾಬ್ಧಿಕುಂಭೋದ್ಭವ ನೇಮಿಚಂದಿರ । ಸೈದ್ಧಾಂತಿಕಗೆ ವಂದಿಪೆನು ॥ ೨೩ ॥

ಸಿದ್ಧಾಂತಾಂಬುಧಿಯನು ಹೆಚ್ಚಿಸಿ ಮ- । ತ್ತದ್ವೈತಮತ ಗಜ ಶಿರವ ॥
ಸ್ಯಾದ್ವಾದಗದೆಯೊಳ್ಪೊಡೆದ ಶುಭಚಂದಿರ । ಸೈದ್ಧಾಂತಿಕ ಜಯ ಜಯತು ॥ ೨೪ ॥

ಆ ಗುರುವಿನ ಪ್ರೇಮದ ಶಿಷ್ಯ ಭಾರತಿ- । ರಾಗದೆರೆಯ ಮನ್ಮಥನ ॥
ಬೇಗದೊಳಗೆ ಗೆದ್ದ ಚಾರುಸುಕೀರ್ತಿ । ಯೋಗಿಯ ಪದಕೆರಗುವೆನು ॥ ೨೫ ॥

ಸಕ್ಕದದಿಂದ ಟೀಕನು ಗೊಮ್ಮಟ ಸಾ- । ರಕ್ಕೆ ಸಪಾದ ಲಕ್ಷವನು ॥
ಅಕ್ಕರಿಂದೊರೆದ ಪಂಡಿತರಾಯನಂಘ್ರಿಗೆ । ಯಿಕ್ಕುವೆನೆನ್ನಳಕವನು ॥ ೧೬ ॥

ಪಲವು ಜೀವಂಗಳ ತರಿಸಿಯಗುರ್ವಿಪ । ಬಿಲದೊಳು ಹಾಕೆ ಹೊಳದುದ ॥
ಫಲವಂದದಿಂದ ಹೊಳಿದ ಪಂಡಿತಾರ್ಯನ । ಚೆಲುವಡಿಗಳಿಗೆರಗುವೆನು ॥ ೧೭ ॥

ಡಿಂಡಿಮವಾದಿ ಗಿರಿಗಳ ಬಡಿದ ವಜ್ರ- । ದಂಡನೆನಿಸಿ ಶಿಬಿಕೆಯನು ॥
ಗಂಡುತನದಿ ದೈವಗಳಿಂದ ಹೊರಿಯಿಪ । ಪಂಡಿತಮುನಿಗೆರಗುವೆನು ॥ ೧೮ ॥

ಫುಲ್ಲಶರನ ಕಬ್ಬುವಿಲ್ಲ ಮುರಿದು ಜಸ- । ವಲ್ಲರಿಯನು ಜಗದೊಳಗೆ ॥
ನಿಲ್ಲದೆ ಪರ್ವಿಪ ಲಲಿತಕೀರ್ತ್ಯಾರ್ಯನ । ಮೆಲ್ಲಡಿಗಳಿಗೆರಗುವೆನು ॥ ೧೯ ॥

ಫೂತ್ಕರಿಸುವ ಮನ್ಮಥಸರ್ಪಕಕೆ ಬ- । ಲಾತ್ಕಾರಗಣವಾರ್ಧಿಚಂದ್ರ ॥
ಸ್ಯಾತ್ಕಾರಮತ ಭೂಷಣ ವಿದ್ಯಾನಂದ । ಸತ್ಕವಿತೆಯನು ಕುಡೆನಗೆ ॥ ೨೦ ॥

ವಾಣಿಯನೊಲಿಸಿ ಗರ್ವೋದ್ಧತನಾಗಿರ್ಪ । ಬಾಣಪಂಚಕನನು ಗೆಲಿದ ॥
ಕಾಣೂರ್ಗಣ ಪ್ರಭುದೇವ ಕೀರ್ತೀಶನ । ಜಾಣು ನುಡಿಗಳೆನಗಿರಲಿ ॥ ೨೧ ॥

ಮಾನಿನಿಯರ ಬಿಟ್ಟು ಚಾರಿತ್ರವೆಂದೆಂಬ । ಮಾನಿನಿಯರ ತಾನೊಲಿಸೆ ॥
ಮೀನಾಂಕನ ಗೆಲ್ದು ಜಸವಾಂತ ಲಕ್ಷ್ಮೀ- । ಸೇನಯತಿಯ ವಂದಿಪೆನು ॥ ೨೨ ॥

ಇವರಾದಿಯಾಗುಳ್ಳ ಭುವಸದಿ ವರ್ತಿಪ । ಭವನಾಶಕ ಮುನಿವರರ್ಗೆ ॥
ಸವಿನಯದಿಂದ ವಂದಿಸಿ ನಾನು ಪಡೆವೆನು । ಭುವನತ್ರಯದೊಡೆತನವ ॥ ೨೩ ॥

ಜಿನಸೇನಾರ್ಯನ ಮೃದುನುಡಿ ಗುಣಭದ್ರ । ಮುನಿಯಕಲಂಕರಜಾಣ್ಮೆ ॥
ಕನಕನಂದಿಯ ಕಾವ್ಯದ ರೀತಿ ಎನ್ನೊಳ- । ಗನುದಿನವಿರಲಿ ಕೃಪೆಯೊಳು ॥ ೨೪ ॥

ಪ್ರಥಮ ಚಕ್ರೇಶನ ಸಂಗತಿಯನು ಪೇಳ್ದ । ಪೃಥುಮತಿ ರತ್ನಾಕರನ ॥
ಅತಿಶಯವಾದ ಜಾಣ್ನುಡಿಗಳು ನನ್ನನು । ಸತತ ಪ್ರಾರ್ಥಿಸಲಿ ನಲ್ಮೆಯೊಳು ॥ ೨೫ ॥

ಕುಮುದಚಂದ್ರನ ಒಳ್ನುಡಿ ಪ್ರಭಾಚಂದ್ರನ । ರಮಣೀಯವಾದ ವಾಕ್ಪಾಟು ॥
ಯಮಿಗಳರಸು ಸೋಮದೇವನ ನೀತಿಯು । ಸಮನಿಸಿರಲಿ ಕೃತಿಯೊಳಗೆ ॥ ೨೬ ॥

ಶ್ರೀಮತ್ಪಂಡಿತಾಚಾರ್ಯನ ಶಿಷ್ಯನು । ಧೀಮಚ್ಛ್ರೀ **ಪಾಯಣವರ್ಣಿ** ॥
ಸೋಮಕುಲೋತ್ತಂಸ ಜ್ಞಾನೇಂದುಚರಿತವ । ಪ್ರೇಮದಿಂದೊಲಿದು ಪೇಳಿದನು ॥ ೨೭ ॥

ಋಷಿಜನಂಗಳ ಕಬ್ಬದೊಳು ರಾಜಿಸುತಿರ್ಪ । ರಸರೀತಿ ಭಾವ ಶೃಂಗಾರ ॥
ಕುಶಲದ ನುಡಿ ಕೋಮಲವಾದ ಕವಿತೆಯು । ಒಸೆದೆನ್ನೊಳು ಬಂದಿರಲಿ ॥ ೨೮ ॥

ಈ ಕಾವ್ಯ ಕಲ್ಪಿತಕಾವ್ಯವೋ, ನೀನೀಗ । ಲೋಕಮೆಚ್ಚಲಿ ಎಂದೊರೆದುದೋ ? ॥
ಜೋಕೆಯಿಂ ಪೇಳೆನೆ ಬುಧರು ನಾನೊರೆವೆನು । ಲೋಕದ ಜನಗಳು ಕೇಳಿ ॥ ೨೯ ॥

ಶ್ರೀವೀರಜಿನಪನ ಸಮವಸರಣದಲ್ಲಿ । ದೇವೇಂದ್ರನುತ ಗೌತಮನು ॥
ಕೋವಿದ ಶ್ರೇಣಿಕನಿಗೆ ಜ್ಞಾನಚಂದ್ರನ । ಪಾವನ ಚರಿತವ ಪೇಳೆ ॥ ೪೦ ॥

ಗುರುಪರಂಪರೆಯಿಂದ ನಡೆದು ಬಂದುದನಾ- । ಗರುವ ವಾಸವಚಂದ್ರಮುನಿಯು ॥
ವರಪ್ರಾಕೃತದಿಂದ ಪೇಳಿ ಸತ್ಕೀರ್ತಿಯ । ಧರೆಯೊಳು ಪಸರಿಸಿ ಮೆರೆದ ॥ ೪೧ ॥

ಅದನೋದಿ ಕರ್ಣಾಟಕದೊಳ್ನುಡಿಯೊಳು । ಮೊದವಿದ ಚಾರು ಷಟ್ಪದವ ॥
ಮುದದಿಂದ ಶ್ರೀ ಪೂಜ್ಯಪಾದಯೋಗೀಶನು । ಸದಮಲ ಜ್ಞಾನಿ ಪೇಳಿದನು ॥ ೪೨ ॥

ಆ ಷಟ್ಪದಗಂಡು ಪಾಡುಗಬ್ಬದೊಳು ವಿ- । ಲಾಸದಿಂ ಜ್ಞಾನೇಂದು ನೃಪನ ॥
ಲೇಸಾದ ಕತೆಯ ಪೇಳಿದೆ ಭವ್ಯಜನರು ಸಂ- । ತೋಷದಿಂ ಕೇಳಲೆಂದೆನುತ ॥ ೪೩ ॥

ಖ್ಯಾತಿಗಾಶಿಸಿ ಪೇಳಿದುದಲ್ಲ ಶ್ರೀ ಜಗ- । ನ್ನಾಥನ ಸತ್ಕಾವ್ಯವನು ॥
ಸೋತು ಬರಲಿ ಮೋಕ್ಷಾಂಗನೆ ಎಂದು ಸಂ- । ಪ್ರೀತಿಯಿಂದಾನು ಪೇಳಿದೆನು ॥ ೪೪ ॥

ಇದರೊಳಗೇನಾನು ತಪ್ಪುಂಟಾದರೆ । ಬುಧಜನಗಳು ಆರಯ್ದು ॥
ಒದವಿದ ಕಾರುಣ್ಯದಿಂ ತಿದ್ದಿಕೊಂಬುದು । ಮದಮುಖರಾಗದೆ ತಾವು ॥ ೪೫ ॥

ನನ್ನೀ ಕೃತಿಯೊಳಗಿರ್ದ್ದ ದೋಷಂಗಳ । ಸನ್ನುತ ಕವಿಗಳು ತಿದ್ದೆ ॥
ರನ್ನಗನ್ನಡಿಯನು ಬೆಳಗೆ ಕಿಲುಬುಗುಂದಿ । ಚೆನ್ನಾಗಿ ತೋರುವಂತಿಹುದು ॥ ೪೬ ॥

ಮಿಗೆಯಮೃತವ ಬಿಟ್ಟು ರಕ್ತವನರಸುವ । ಜಿಗುಳೆಯಂತಾ ದುರ್ಜನರು ॥
ಅಗಣಿತ ಗುಣಗಳ ಬಿಟ್ಟು ದೋಷಂಗಳ । ಬಗೆಗೆ ಬಂದಂತೆ ಪೇಳುವರು ॥ ೪೭ ॥

ತಾನಳಿದನ್ಯರ್ಗೆ ವಾಕರಿಕೆಯ ಮಾ- । ಳ್ಪಾ ನೊಣದಂತೆ ದುರ್ಜನರು ॥
ಮಾನಭಂಗವು ತಮಗಾಗೆ ಸಜ್ಜನರನು । ನಾನಾ ತೆರದಿ ದೂಷಿಪರು ॥ ೪೮ ॥

ಗುಣವುಳ್ಳರೆಂದು ದುರ್ಜನರ ಸೇರಲು ಅವ- । ರ್ಗುಣಿದು ಕೆಡಿಪರೆ ಪಾಪಿಗಳು ॥
ಗುಣವನೆ ನೆಮ್ಮಿ ಮಾರ್ಗಣಗಳು ಲೋಕರ್ಗೆ । ಕ್ಷಣದಿ ಮರಣವ ನೆಯ್ದಿಸದೆ ॥ ೪೯ ॥

ಏಸು ಪರಿಯೊಳು ಮನ್ನಣೆ ಮಾಡೆ ದುಷ್ಟರು । ದೂಷಿಸದಲ್ಲದೆ ಬಿಡರು ॥
ಲೇಸಪ್ಪ ಪಾಲನೆರೆಯೆ ಫಣಿವೃಂದವು । ಸೂಸದಿಹವೆ ಗರಳವನು ॥ ೫೦ ॥

ಪರರೊಳಗೆಳ್ಳನಿತು ಗುಣವಿರಲದ । ಗಿರಿಯ ಸದೃಶಗಳ ಮಾಡಿ ॥
ಹರುಷವ ತಾಳಿ ನಲಿವ ಸಜ್ಜನರುಗ- । ಳಿರಲಿ ಲೋಕದೊಳಾವಾಗ ॥ ೫೧ ॥

ಕಾಸಿ ಕುಟ್ಟಲು ಕಾಂಚನ ರಂಗುವಡೆವಂತೆ । ದೂಷಕರಾ ಸಜ್ಜನರಾ ॥
ಗಾಸಿಯ ಮಾಡಲು ಗುಣವ ಧರಿಸಿ ಮತ್ತೆ । ಲೇಸನವರಿಗೆ ಮಾಡುವರು ॥ ೫೨ ॥

ಒಡಲೊಳಗಿದ್ದ ಬಡಬ ಜಲವನು ಪೀರೆ । ಕೆಡಿಸದಂಬುಧಿ ರಕ್ಷಿಪಂತೆ ॥
ಒಡನಾಡಿ ದುಷ್ಟರು ಕಷ್ಟವನೆಸಗಲು । ಒಡನೆ ಪೋಷಿಪರು ಸಜ್ಜನರು ॥ ೫೩ ॥

ನದಿಯಂತೆ, ಕುಜದಂತೆ, ಯಂಬೋಧರದಂತೆ । ನಿಧಿಯಂತೆ ಗೋವುಗಳಂತೆ ॥
ಸದಮಲಚರಿತ ಸಜ್ಜನರುಗಳಾವಾಗ । ಮುದದಿಂದಲುಪಕರಿಸವರು ॥ ೫೪ ॥

ಈ ವಿಧದೊಳು ದುಷ್ಟರು ಸತ್ಪುರುಷರ । ತೀವಿದ ಗುಣಗಳ ಪೇಳಿ ॥
ವ್ಯಾವರ್ಣಿಸುವೆ ಲೋಕವನು ಬಲ್ಲನಿತಾನು । ಕೋವಿದರುಗಳು ಲಾಲಿಪುದು ॥ ೫೫ ॥

ಅರೆಮದ್ದಳೆಯುಪರಿಮ ಭಾಗದೊಳೊಂದು । ನೆರೆಮದ್ದಳೆಯನಿಟ್ಟಂತೆ ॥
ತೆರದರುಶನವಾಗಿ ಕಾಂಬುದು ಲೋಕವು । ಅರುಹನ ದಿವ್ಯವಾಕ್ಕಿದುವೇ ॥ ೫೬ ॥

ನಟನೆಯಿಂದಂಗಮಂಟಪದೊಳು ನಿಂದೋರ್ವ । ಕಟಿತಟದೊಳು ಹಸ್ತವಿಟ್ಟು ॥
ನಟಿಸುವ ನಟನಂದದಿ ಲೋಕವೊಪ್ಪುಗುಂ । ದಿಟವಿದು ಜಿನರ ನಿರೂಪ ॥ ೫೭ ॥

ಏಳೊಂದೈದೊಂದು ರಜ್ಜುವಿನಗಲದೀ- । ರೇಳು ರಜ್ಜುವಿನುದ್ದದಲಿ ॥
ಗಾಳಿಮೂರುಗಳಾಧಾರದಿಂ ಮೂಲೋಕ । ಮೇಳೈಸಿ ಕೊಂಡು ತಾನಿಹುದು ॥ ೫೮ ॥

ಚತುರಸ್ರಕಟಿಮಣಿ ಘಂಟೆಮದ್ದಳೆಯದೊಂ- । ದತಿಶಯವನು ನೆರೆನಗುವ ॥
ಕ್ಷಿತಿತಳಮಧ್ಯಮುಪರಿಮ ಲೋಕಂಗಳು । ಸತತ ಸ್ವಯಂಭೂವಾಗಿಹವು ॥ ೫೯ ॥

ಲೋಕದ ಬಹುಮಧ್ಯ ದೇಶದೊಳಗೆಯೊಂದು । ಏಕರಜ್ಜುವಿನಗಲದಲಿ ॥
ಲೋಕೋತ್ಸೇಧದ ತ್ರಸನಾಳವಿಹುದಾ- । ನೇಕ ಜೀವಕಕೆ ಪಕ್ಕಾಗಿ ॥ ೬೦ ॥

ಆ ಜಂತುನಾಳದ ನಡುವೆಯಸಂಖ್ಯಾತ । ರಾಜಿಪ ದ್ವೀಪವಾರ್ಧಿಗಳು ॥
ಸೋಜಿಗವಡೆದಿಹವದರ ಮಧ್ಯದೊಳೊಂದು । ಯೋಜನಲಕ್ಷ ವ್ಯಾಸದೊಳು ॥ ೬೧ ॥

ಜಂಬೂವೃಕ್ಷದಿಂದುಪಲಕ್ಷಿತವಾದ । ಜಂಬೂದ್ವೀಪವೊಪ್ಪಿಹುದು ॥
ಇಂಬಿನಿಂದಲರ್ದುರಾಜಿಪದೊಂದು ನೂತನ- । ದಂಬುಜವ್ರೋ ಎಂಬಂತೆ ॥ ೬೨ ॥

ಜಂಬೂದೀವಿಯೆಂಬಂಬುಜವದನೆ ನೀ- । ಲಾಂಬರವುಟ್ಟಳೆಂಬಂತೆ ॥
ತುಂಬಿದ ನವರತ್ನರಾಶಿಗಳಿಂ ಲವ- । ಣಾಂಬುಧಿ ಕಣ್ಗೆ ರಾಜಿಪುದು ॥ ೬೩ ॥

ಲಕ್ಷವೆರಡುಯೋಜನವ್ಯಾಸಗಳಿಂದ । ಕುಕ್ಷಿನಿವಾಸಗಳಿಂದ ॥
ಯಕ್ಷರಾವಾಸಕು ಭೋಗಭೂಮಿಗಳಿಂದ । ಲಕ್ಷಿತಲವಣಾರ್ಣವಿಹುದು ॥ ೬೪ ॥

ಗಿರಿಗಳಂದದಿ ತೆರೆ ಮೊರೆದು ತಡಿಯ ಹೊಯ್ವ । ಸರವೊಪ್ಪಿದುದಂದು ಸುರರು ॥
ಭರದಿ ವಸ್ತುಗಳ ಕದ್ದೊಯ್ವಾಗಂಬುಧಿರಾಜ । ಕರದಿ ಘೂರ್ಣಿಸಿ ಬಡೆದಂತೆ ॥ ೬೫ ॥

ಬೆಟ್ಟಗಳನು ತೆರೆ ಬಡಿದು ಮುಳುಗಿಸಿ ಓ- । ಮ್ಮೆಟ್ಟುವ ರಭಸನೊಪ್ಪಿದುದು ॥
ಗುಟ್ಟುಗೆಡಿಸಿದ ಮಂದರದ ಕುಲಂಗಳ । ಮೆಟ್ಟುವಂಬುಧಿವಾದದಂತೆ ॥ ೬೬ ॥

ತೆರೆ ಸೀರೆಗಳಾಗೆ, ಮರಿಮೀನು ಕಣ್ಣಾಗೆ । ವರ ಪವಳವು ತುಟಿಯಾಗೆ ॥
ಕೊರಲಾಗೆ ಶಂಖವಂಬುಧಿಯು ನೋಡುವರಿಗೆ । ಸಿರಿವೆಣ್ಣಿನಂತೊಪ್ಪಿಹುದು ॥ ೬೭ ॥

ಕರಿಗಳಿಂ ಕಮಠಗಳಿಂದ ನೆಗಳಿನಿಂದ । ನೊರೆನಿಂತಿನಿಂದ ವಿಶಾನಿಂದ ॥
ಭರದಿಂದಿಳಿತದಿಂದಾ ನೀರಭಂಡಾರ । ಧರೆಗೆ ಕೌತುಕವಾಗಿಹುದು ॥ ೬೮ ॥

ಸುರಭಿ ದಿವಿಎಂಬ ಕಳದ ಮಧ್ಯದಿ ಬೇಗ । ಸರಸಿಜೋದ್ಭವನೆಂಬ ಕುಡಿಯ ॥
ಎರಕದಿ ಕಾಲರತ್ನದರಾಶಿ ಸುರಿದಂತೆ । ಮೆರೆದುದು ಮಂದರ ಶೈಲ ॥ ೬೯ ॥

ಭೂಮಿಯೆಂಬಂಬುಜಾಕಾರದ ಮಧ್ಯದಿಂ । ಹೇಮವರ್ಣದ ಕಂಜವೊಗ್ಗೆ ॥
ರಾಮಣೀಯಕಮಾಗಿ ಮೆರೆವಂತೆ ತೋರಿದು- । ದಾಮೇರು ಕಡುಚೆಲುವಿಂದ ॥ ೭೦ ॥

ಇಳೆಯೆಂಬ ಲಕ್ಷ್ಮಿಗೆ ನಳಿನಜ ಮನದಂದು । ನೆಳಲಿಗಂಬರ ಸತ್ತಿಗೆಯ ॥
ಘಳಿಲನೆ ಪಿಡಿದೆತ್ತಿದ ರನ್ನಗಾವೆನೆ । ಪೊಳೆದುದು ಸುರಗಿರಿ ಕಣ್ಗೆ ॥ ೭೧ ॥

ಉರಗಭವನವ ನಿರ್ಮಿಸಿಯಂಬುಜಭವ । ವರಗೃಹದುಪರಿಮದೊಳಗೆ ॥
ಎರಕದಿಂ ರಚಿಸಿದ ಹೊನ್ನಗೋಪುರವೆನೆ । ಸುರಶೈಲ ಕಣ್ಗೆರಾಜಿಪುದು ॥ ೭೨ ॥

ನನ್ನಿಂದಮೇಲೀ ಸುರಪುರವಿಹುದಿದು । ಚೆನ್ನಾಯ್ತು ಎಂದು ತಾ ಜೆಳೆದು ॥
ಉನ್ನತ ಶಿರವಿಂದಲೆತ್ತಿ ಹಾಕುವೆನೆಂಬ । ಗನ್ನದಿ ಸುರನಗವಿಹುದು ॥ ೭೩ ॥

ಭೂಮಿಯೊಳಗೆ ಸಾಸಿರನಾಂಟಿರೆ ಮತ್ತೆ । ವ್ಯೋಮದಿ ತೊಂಬತ್ತೊಂಬತ್ತು ॥
ಸೀಮೆ ತಾನಾದ ಸಾಸಿರಯೋಜನಮುಳ್ಳ । ಹೇಮ ಕುಕ್ಷ್ಮೀಲವೊಪ್ಪಿಹುದು ॥ ೭೪ ॥

ಅರುವತ್ತೊಂದು ಸಾಸಿರಪರಿಯಂತರ । ಚೆರಕೆವರಲಮಯವಾದ ॥
ಪರಿಕಿಸೆ ಹೇಮವರ್ಣವುವದಂ ಮೇಲೆ । ಸುರನಗವಿಂತು ರಾಜಿಪುದು ॥ ೭೫ ॥

ಆ ಕನಕಾದ್ರಿಯ ತೆಂಕ ದಿಗ್ಭಾಗದಿ । ನಾಕಲೋಕವನು ಜರೆವುತ ॥
ನೂಕುತ ಸಿರಿಯ ಸಿರಿಯನಾರ್ಯಾಖಂಡನ- । ನೇಕಸಂಪದದಿವೊಪ್ಪಿದುದು ॥ ೭೬ ॥

ಅದರ ಮಧ್ಯದೊಳ್ಮೆವತ್ತಾರು ದೇಶವು । ಮದನನಾಡುಂಬೊಲದಂತೆ ॥
ಪದುಮವಿಷ್ಟರನ ಭಂಡಾರದ ಮನೆಯಂತೆ । ಸದಮಲವಾಗಿಯೊಪ್ಪಿದುದು ॥ ೭೭ ॥

ಚಪ್ಪನ್ನದೇಶಗಳೆಂಬ ಕೋಮಲೆಯವೊಂ- । ದೊಪ್ಪುವ ನಗೆಮೊಗದಂತೆ ॥
ಇಪ್ಪುದು ಕಾಶ್ಮೀರದೇಶವದರದೊಂ- । ದೊಪ್ಪವನೇನೆನ್ನಬಹುದು ॥ ೭೮ ॥

ಸರಸಿಜಭವ ಕುಂಭಜನ ಭಯಕೆಯಳ್ಕಿ । ಪರನಿಧಿಯನು ಖಂಡಿರಿಸಿ ॥
ಮರೆಯಲ್ಲಲ್ಲಿ ಬೈಚಿಟ್ಟನೋ ಎಂಬಂತೆ । ಕೆರೆಗಳೊಪ್ಪಿದವಾದೇಶದೊಳು ॥ ೭೯ ॥

ಹೊಳೆಯೆಂಬ ಕೋಮಲೆ ಕೂಪಾರವೆಂದೆಂಬ । ಯೆಳೆವಿಟನನು ಕೂಡಲೆಂದು ॥
ಘಳಿಲನೆ ಬಂದಮರ್ದಪ್ಪಿದಳೋ ಎನೆ । ಹೊಳೆಗಳಾರ್ಣವವ ಕೂಡಿಹವು ॥ ೮೦ ॥

ನದಿವೆಣ್ಣು ದೇಶಗಳೆಂಬ ಭುಜಂಗರ । ಸದಮಲವಾದೆರ್ದೆಯೊಳಗೆ ॥
ಮುದದಿಂದ ನೀಡಿದ ತೋಳ್ಗಳೋ ಎಂಬಂತೆ । ನದಿಯ ಕಾಲುವೆಗಳೊಪ್ಪಿದವು ॥ ೮೧ ॥

ವಿಷಯವೆನಿಪ ಕಾಮಿನಿಯ ದೇಹದೊಳು ರಾ- । ಜಿಸುವ ನಾಭಿಯೋ ಎಂಬಂತೆ ॥
ಹಸನಾದ ಕೂಪಗಳಿಹವವರದೊಂದ- । ತಿಶಯವನು ಏನೆಂಬೆ ॥ ೮೨ ॥

ಕುಟಿಲವೆಂಬುದು ಮಹಿಳೆಯರ ಕುಂತಳದೊಳು । ಶಠೆಯೆಂಬುದು ವೇಶಿಯರೊಳು ॥
ಕಠಿಣವೆಂಬುದು ಕಾಮಿನಿಯರ ಕುಚದೊಳಾ- ।ರ್ಭಟಿಯೆಂಬ ನುಡಿ ತಿದಿಗಳೊಳು ॥ ೮೩ ॥

ಹೊಡೆಯೆಂಬ ನುಡಿ ಧಾನ್ಯದ ಸಸಿಯೊಳು ನೋಡೆ । ತಡೆಯೆಂಬ ನುಡಿ ಫಣಿಗಳೊಳು ॥
ಜಡಿಯೆಂಬ ಮಾತು ಖಡ್ಗಂಗಳೊಳಲ್ಲದೆ । ಪೊಡವಿಯೊಳಿಲ್ಲ ಭಾವಿಸಲು ॥ ೮೪ ॥

ಸೆರೆಯೆಂಬ ನುಡಿಯಂಜಲಿಪುಟದೊಳು ನೋಡೆ । ಯಿರಿಯೆಂಬ ನುಡಿ ಗಣಿತದೊಳು ॥
ಖರ ದಂಡಂಗಳು ಕಂಜದೊಳಲ್ಲದೆ । ಯರಿಕೆಯೊಳಾ ನಾಡೊಳಿಲ್ಲ ॥ ೮೫ ॥

ತೊಡಕೆಂಬ ನುಡಿಗಳು ಹಗಲು-ಕತ್ತಲೆಯೊಳು । ಬಡಿಯೆಂಬ ನುಡಿ ಕಳದೊಳಗೆ ॥
ಬಡತನವೆಂಬುದು ಕೋಮಲೆಯರುಗಳ । ನಡುವಿನೊಳಲ್ಲದಲ್ಲಿಲ್ಲ ॥ ೮೬ ॥

ತುಂಬಿಗುರುಳಿಯರು, ತುರುಗೆವೆ ನಾರಿಯ- । ರಂಬುಜಮುಖದ ಮುಗ್ಧೆಯರು ॥
ಬಿಂಬಾಧರೆಯರು ಪೊಂಬಗರ್ವೊಲಿಯರು । ತುಂಬಿಹರಾ ನಾಡೊಳಗೆ ॥ ೮೭ ॥

ನಳಿತೋಳ ನೀರೆಯರೆಳೆವಾಳೆದೊಡೆಯರು । ಕಳಕಂತನುಡಿಯ ಜಾಣೆಯರು ॥
ಕಳಶಕುಚದ ಕಾಮಿನಿಯರಾ ನಾಡೊಳು । ಯೆಳಸಿ ನೋಡಲು ತುಂಬಿಹರು ॥ ೮೮ ॥

ಪುರವೆಂಬ ಭಾಮಿನಿ ಪಚ್ಚೆಯ ಸೀರೆಯ । ಹರುಷದಿಂದುಟ್ಟಳೆಂಬಂತೆ ॥
ಉರುನಂದನವನ ಊರಬಳಸಿಕೊಂ- । ಡಿರುತಿಹುದದನೇನೆಂಬೆ ॥ ೮೯ ॥

ಆರಾಮದೈಸಿರಿಯನು ಪೇಳುವುದಕ್ಕೆ । ವಾರಿಜೋದ್ಭವನಾಗದೆನಲು ॥
ಆರದ ವರ್ಣಿಪರಂತಾದೊಡಾನದ । ಕಿರಿದು ಪೇಳುವೆ ಬಲ್ಲನಿತಂ ॥ ೯೦ ॥

ಪಸುರ್ಗಲ್ಲ ಕೋಡುಗಳಿಂ ವಸಲಕುಮಿಯ । ಮಿಸುನಿವಣ್ಣದ ತೋಳಿಂದ ॥
ಹಸನಾಗಿ ವ್ಯೋಮಕೇಶವಗೆ ನೀರೆರೆವಂತೆ । ಎಸೆದವು ಖಾತಫಲಗಳು ॥ ೯೧ ॥

ವನರಾಜನು ಭೂಪತಿಗೆ ಪಚ್ಚೆಯ ಕಾ- । ವಿನದೊಂದು ಮೆರೆವ ಸತ್ತಿಗೆಯ ॥
ಅನುರಾಗದಿಂದೆತ್ತಿಸಿದನೋ ಎಂಬಂತೆ । ವನದೊಳು ಕೌಂಗುರಾಜಿಪುದು ॥ ೯೨ ॥

ಮನಸಿಜರಾಜಗೆ ವನಮಹಾಲಕ್ಷ್ಮಿಯು । ವಿನಯದಿಂದಾರತಿವಿಡಿದು ॥
ಮನಪರ್ತಿಯಿಂದೆತ್ತುವಳೋ ಎಂಬಂದದಿಂ । ನನೆಕೊನೆಯೇರಿ ಮಾವಿಹವು ॥ ೯೩ ॥

ನೇರಿಲಮರಗಳನೇರಿ ಗಿಳಿಯವಿಂಡು । ದೋರೆವಣ್ಣನು ಕರ್ದುಂಕಲು ॥
ವಾರಿಜಾಕ್ಷಿಯರು ಪ್ರಿಯರಿಗೆ ಚೆಂದುಟಿಯನು । ಪೀರಿಸುವಂತೊಪ್ಪಿದವು ॥ ೯೪ ॥

ಪನಸಿನ ಪಣ್ಗಳ ಮನದಕ್ಕರಿಂ ಬಂದು । ಘನವಾಗಿ ತಿಂದುಂಡರೆಂದು ॥
ವನಪಾಲಕರ ನೇಡಿಸುವ ಕಪಿಗಳಿಂದ । ಪನಸಿನ ವೃಕ್ಷರಾಜಿಪವು ॥ ೯೫ ॥

ವನದೊಳು ಏಸುಫಲಗಳಿರೆ ಯಕ್ಷರ । ಘನಹಸ್ತಕೆ ಯೋಗ್ಯ ನಾವೇ ॥
ಎನುತ ಮೂದಲಿಸುತ ಬೀಜಪೂರಗಳಾ- । ವನದೊಳು ತುಂಬಿಹವೆಲ್ಲ ॥ ೯೬ ॥

ರತಿಪತಿಗಾ ಭಾರತೀಶ ಪಂಜುಗಳ ತಾ- । ನತಿಶಯದಿಂದಿತ್ತರದೊಳು ॥
ಸತತವೆತ್ತಿಸಿವನೋ ಎಂಬಂತೆ ವನದೊಳು । ನುತವೆತ್ತು ಕೇತಕಿಯಿಹುದು ॥ ೯೭ ॥

ಅಂಗಜರಾಜನಾಜ್ಞೆಯನು ಮೀರಿದ ಜ- । ನಂಗಳನಾಗ ಪದ್ಮಜನು ॥
ಅಂಗವ ಸೀಳುವ ಗರಗಸಗಳೊ ಎನೆ । ಹೊಂಗೇದಗೆಯು ಮುಳ್ಳಿಹವು ॥ ೯೮ ॥

ವಸುಧಾಸತಿ ಬಂದು ವನವ ನೋಡುವೆನೆಂದು । ಒಸೆದು ಮುಖವ ಫಲವಾಂತು ॥
ದೆಸೆದೆಸೆಗಳ ನೋಳ್ಪಂದದಿಂ ಪುನ್ನಾಗ । ಹೊಸ ಹೂವನಾಂತೊಪ್ಪಿಹವು ॥ ೯೯ ॥

ಮಾರನ ಓಲಗದಲ್ಲಿ ಚಾಮರವನು । ನಾರೀರು ಪಿಡಿದು ನಿಂದಂತೆ ॥
ರಾರಾಜಿಸುವವಶೋಕೆಯ ತರುಗಳ । ಭೂರಿಮಂಜರಿಗಳೊಪ್ಪಿದವು ॥ ೧೦೦ ॥

ವನರಾಜ ನೋಡುವ ಕನ್ನಡಿಯಂದದಿ । ವನಜ ಕೈರವಗಳುತೀವಿ ॥
ಮಿನುಗುವ ಕಾಸಾರಗಳೊಳೊಪ್ಪಿದುವಲ್ಲಿ । ವನಧಿ ಗಂಭೀರದಿ ನಗುತ ॥ ೧೦೧ ॥

ಆ ವನದೊತ್ತಿಲಿ ಪುಂಡ್ರೇಕ್ಷುರಸದಾಳಿ । ಕಾವನ ಕೈಸೇಜದಂತೆ ॥
ಆವಾವ ತಾವೀಲಿಯಿಕ್ಷುವಾಟಿಗಳಿಂದ । ತೀವಿ ರಾಜಿಪುದಾ ಭೂಮಿ ॥ ೧೦೨ ॥

ಪೊಡವಿಯೊಳಿಲ್ಲದ ದಂಡನೆಮೆಮಗೆ ನೀ । ಕೊಡುವರೆ ಬಿಡಿ ಬೇಡವೆಂದು ॥
ಒಡನೆಕೂಗಿಡುವಂತೆ ಇಕ್ಷುಯಂತ್ರಧ್ವನಿ । ಪೊಡವಿಯ ತುಂಬಿ ಕೊಂಡಿಹುದು ॥ ೧೦೩ ॥

ತೃಷೆಯೊಳೇತಕೆ ಪಾಂಥಜನ ಪೋಪಿರ್ಪೈ ಇಕ್ಷು । ರಸಗಳನೀಂಟಿ ನೀವೆಂದು ॥
ಒಸೆದು ಕೂಗಿಡುವಂತೆ ಇಕ್ಷುಯಂತ್ರದರವ । ವಸುಧೆಯ ತುಂಬಿ ಕೊಂಡಿಹುದು ॥ ೧೦೪ ॥

ಚೆಂದೆಂಗು ಶಶಿಗಲ್ಲುರಸದಾಳಿಕಬ್ಬುಗ- । ಳಿಂದೊಡೆದೊಗುವ ರಸಗಳಿಂ ॥
ಗಂಧಶಾಲಿಗಳ ಕೆಯ್ಬೆಳದೊರಗಿರಲದ- । ರಂದವನೇನ ಬಣ್ಣಿಪೆನು ॥ ೧೦೫ ॥

ಪಾಲುದುಂಬಿದ ತೆನೆಗಳ ಗಿಳಿಗಳು ಕರ್ಚಿ । ಮೇಲಕೆ ನೆಗೆಯಲೊಪ್ಪಿದವು ॥
ಶಾಲಿಯಸ್ಯಕೆ ಹಾಕಿದ ನಿಡು ಝಲ್ಲಿಯ । ಜಾಲವೋ ಎನಲೆಸೆದಿಹುದು ॥ ೧೦೬ ॥

ನಳಿತೋಳನೆತ್ತಿ ಪಾಮರಿಯರು ಸೋವುವ । ಚಳಕವೊಪ್ಪಿತು ಗಿಳಿಗಳನು ॥
ಘಳಿಲನಂಗಜ ಧೀವರವೋಹಿ ಮೀನ್ಗಳ । ಸೆಳೆವರ್ಪೈ ಜೆಳವೆಗಳಂತೆ ॥ ೧೦೭ ॥

ಫಲವಣ್ಣದ ಪಕ್ಕಿಯೆರಗಲು ಸೋವುವ । ಲಲನೆಯುರುಲುಹುವೊಪ್ಪಿದುದು ॥
ಅಲರ್ವಿಲ್ಲನೋದುವ ಕಾಮಶಾಸ್ತ್ರಂಗಳ । ವಿಲಸಿತ ಧ್ವನಿಯೆಸಲಿಹುದು ॥ ೧೦೮ ॥

ನಾರಿಯರಾಗಿಳಿವಿಂಡ ಪೊಡೆಯಲವು । ಪಾರಿಯಾಗಸಕ್ಕೈದುವಾಗ ॥
ಓರೆಗಣ್ಣಿಂ ನೋಡೆ ಕಾಂತಿ ಬೆಳ್ಳರವನು । ಬೀರಿ ಬೀಸಿದ ತೆರನಾಯ್ತು ॥ ೧೦೯ ॥

ನಳಿತೋಳನೆತ್ತಿ ಸೋವುವ ಪಾಮರಿಯರ । ಪೊಳೆವ ಕಂಕಣದುಲುಗಿಹವು ॥
ನಳಿನಾಸ್ತ್ರ ರತಿಯೊಳು ನೆರೆವಾಗ ಮಾಡುವ । ಗಳರವದಂತೊಪ್ಪಿದವು ॥ ೧೧೦ ॥

ಕಳವೆಯ ಕ್ಷೇತ್ರಕೆ ಗಿಳಿಗಳೆರಗಲೋರ್ವ । ನಳಿನಾಕ್ಷಿ ನೋಡೆ ಕಣ್ಬೆಳಗು ॥
ಸುಳಿಯಲವರ ಮೇಲೆ ಬೆಳ್ಳಿಯುರುಳನಿಕ್ಕಿ । ಸೆಳೆದಳೋ ಎಂಬಂತಿಹುದು ॥ ೧೧೧ ॥

ಅಲ್ಲಿಂದ ಮುಂದೆ ಪಾನೀಯ ಶಾಲೆಗಳೊಳು । ಪುಲ್ಲಾಕ್ಷಿಯರು ಪಥಿಕರ್ಗೆ ॥
ಉಲ್ಲಾಸದಿಂ ನೀರೆರೆವರವರದೊಂದು । ಚೆಲ್ವಿಕೆಯನು ಏಂ ಪೊಗಳ್ವೆ ॥ ೧೧೨ ॥

ರತಿಫಲವಂದದ ರೂಪಸೌಂದರವಾಂತು । ಪಥಿಕರ್ಗೆ ನೀರೆರೆವಂತೆ ॥
ಸತತಪಾನೀಯಶಾಲೆಗಳೊಳಂಗನೆಯರು । ನುತವೆತ್ತು ನೀರನೆಟ್ಟುವರು ॥ ೧೧೩ ॥

ಇಂದುಕಾಂತದ ಕರಗದೊಳು ಪಥಿಕರಿಗೆ । ನಿಂದು ನೀರೆರೆವಾಗಳೋರ್ವ ॥
ಸೌಂದರಿ ಮಾರ್ಪೊಳೆದಳು ಹಸ್ತಕಮಲದಿ । ಇಂದಿಂದಿರೆ ಎಂಬಂತೆ ॥ ೧೧೪ ॥

ನೀರೆಯೋರ್ವಳು ಸ್ವರ್ಣಘಟದಿ ಪಥಿಕರಿಗೆ । ನೀರನೆಟ್ಟುವ ಭಾವವಿಹುದು ॥
ತೋರಮೊಲೆಗಳೆನ್ನೀ ಘಟಕೆಣೆಯೆಂದು । ತೋರುವಳೆನಲಿಟ್ಟುವಳು ॥ ೧೧೫ ॥

ತರುಣಿಯೋರ್ವಳು ಹಸ್ತಕಮಲದಿ ಪಳುಕಿನ । ಕರಗದಿ ಜಲವೆಟ್ಟಲಿಹುದು ॥
ಮರಿಹಂಸ ಕಮಲದ ಮೇಲೆ ತಾನೊರಗಿ ಕೊಂ- । ಡಿರುವಂದವ ಸೂಚಿಪುದು ॥ ೧೧೬ ॥

ಊರ ಬಳಸಿ ಸೊಬಗನು ಬೀರುತಲಾಳ । ನೀರಗಳಿಹುದೆಂತೆನಲು ॥
ವಾರಿಜಸಖನ ಮಂಡಲವನು ಬಳಸಿದ । ಭೂರಿಯ ಪರಿವೇಷದಂತೆ ॥ ೧೧೭ ॥

ತನ್ನಯ ಸುತೆ ಪಟ್ಟಣದೊಳಗಿರಲಾ । ಮುನ್ನೀರು ಪರಿಖಾವ್ಯಾಜದೊಳು ॥
ಹೊನ್ನಕೋಂಟೆಯ ಬಂದು ಸುತ್ತಿನಿಂದುದೋ ಎನೆ । ಉನ್ನತ ನೀರುಗಳಿಹುದು ॥ ೧೧೮ ॥

ತ್ರ್ಯಂಬಕಸಖನ ಪಟ್ಟಣವ ನೋಡುವೆನೆಂದು । ಇಂಬಾಗಿ ನಿವಿರ್ದುರ್ಗ ಬೆಳೆದುದೋ ॥
ಎಂಬಂತೆ ಹುಲಿಮುಖ ಬುರುಜು ಕೊತ್ತಳಗಳಿಂ । ಚೆಂಬೊನ್ನಕೋಂಟೆಯೊಪ್ಪಿದುದು ॥

ಪುರಲಕ್ಷ್ಮಿ ರಾಜ್ಯಸಂಪದವ ನೋಡುವೆನೆಂದು । ಭರದಿ ಮುಖವ ಫಲವಾಂತು ॥
ಹರಿಸದಿ ಕಾಣ್ಬಳೋ ಎನೆ ಶುದ್ಧಸ್ಫಟಿಕದ । ಸುರುಚಿರ ತೆನೆಗಳೊಪ್ಪಿದವು ॥ ೧೨೦ ॥

ಮುಗಿಲಮುಟ್ಟುವ ಮುಗಿಲಟ್ಟಳೆವಿಂಡಿಂದ । ಸೊಗಯಿಪಾಳ್ವೇರಿಗಳಿಂದ ॥
ತೆಗೆದಂಬುಗಂಡಿಗಳಿಂದಲಾ ಕೋಂಟೆಯು । ಜಗಕೆ ಕೌತುಕವ ಬೀರುವುದು ॥ ೧೨೧ ॥

ನಗರವೆಂದೆಂಬ ತಳೋದರಿ ತಾನೊಂದು । ಪಗೆರಾಯರು ಬಂದರೆಂದು ॥
ನಗೆಗಣ್ಗಳಿಂದ ನೋಳ್ಪಳೊ ಎಂಬಂದದಿ । ಸೊಗಯಿಪ ಹೆಬ್ಬಾಗಿಲಿಹುದು ॥ ೧೨೨ ॥

ಚಂದ್ರಕಾಂತದ ಕೀಳ್ಮೇಲು ಪಡಿಗಳಿಂದ । ಇಂದ್ರನೀಲದ ದ್ವಾರದಿಂದ ॥
ಸಾಂದ್ರಪಚ್ಚೆಯ ಯನುಳ್ಳಡಿಗಳಿಂಬಾಗಿಲು । ಮಂದ್ರದೊಳಗೆ ರಾಜಿಪುದು ॥ ೧೨೩ ॥

ಕಿರುದಿಡ್ಡೆಗಳಿಂದ ಚೋರಗಂಡಿಗಳಿಂದ । ವರವಜ್ರದರ್ಗಳದಿಂದ ॥
ಅರಿರಾಯರ ಹಮ್ಮ ಹಾರಿಸುತಾ ಕೋಂಟೆ । ಮೆರೆದುದು ಧರೆ ಬಣ್ಣಿಪಂತೆ ॥ ೧೨೪ ॥

ಪತ್ತನ ದೇಹವಾಗಲು ಗೋಪುರಗಳು । ಉತ್ತಮಾಂಗವು ತಾನಾಗೆ ॥
ಮುತ್ತಿನ ಬಾಗಿಲು ನಾಲ್ಮೊಗವಾಗೆ ಭೂ- । ಪೆತ್ತನಂತೊಪ್ಪಿತಾ ನಗರಿ ॥ ೧೨೫ ॥

ಲೋಕೇಶನಾ ಪುರಲಕ್ಷ್ಮಿಯಾಡಲ್ಕೆಂದು । ಹಾಕಿದ ಹಾಸಂಗಿಯಂತೆ ॥
ನಾಕಲೋಕವ ಜರೆವುತ ಸೊಬಗಿಂದಾ । ನೇಕ ಚವ್ವೀಥಿ ರಾಜಿಪುದು ॥ ೧೨೬ ॥

ಮಂಡಳೀಕರ ಮನ್ನೆಯರ ಸಾಮಂತರ । ದಂಡನಾಯಕರ ಮಂತ್ರಿಗಳ ॥
ಕೊಂಡಾಟದವರ ನಾಯಕರ ವಿದ್ವಾಂಸರ । ತಂಡ ತಂಡದ ಕೇರಿ ಇಹವು ॥ ೧೨೭ ॥

ಅರಸುಮಕ್ಕಳ ಕುಮಾರರಳಿಯಂದಿರ । ವರವಣಿಜರ ಸುಕವಿಗಳ ॥
ಸರಸಗಾಯಕರ ಗಣಿಕೆಯರು ಮೊದಲಾದ । ತರತರ ವೀಥಿ ರಾಜಿಪ್ಪವು ॥ ೧೨೮ ॥

ಮಾಟಸುಕೂಟ ಪ್ರಸಾದಂಗಳ ಮೇಲೆ । ಕೋಟಿ ಪತಾಕೆ ಧ್ವಜಗಳು ॥
ವಿರಾಟನಿಸುವ ಸ್ವರ್ಣಘಟ ಸೌಧ ತಳದಿ ಸ- । ಘಾಟಕೆಂದೊಳು ರಾಜಿಪವು ॥ ೧೨೯ ॥

ಪಲವು ಕೇತನಗಳು ವಾಯುವಿನಿಂದಾಗ । ಚರಿಸುವ ಭಾವವೊಪ್ಪಿದುದು ॥
ಚೆಲುವ ಕರವ ಬೀಸಿ ಪುರಸತಿ ಬುಧರನು । ನಲವಿನಿಂ ಕರೆವಂತಿಪವು ॥ ೧೩೦ ॥

ಖರಕರ-ದೋಷಾಕರರು ನಮ್ಮೂರತ್ತ । ಬರಬೇಡ ಹೋಹೋಗೆಂದು ॥
ಭರದಿಂದ ಕೂಗಿ ಪೇಳ್ದಪವೋ ಎಂಬಂದದಿ । ವರಧ್ವಜಮಲುಹು ರಾಜಿಪುದು ॥ ೧೩೧ ॥

ಚೆಲುವರ ಧನಿಕರ ಪ್ರೌಢರ ನಿಪುಣರ । ಸಲೆ ಜಾಣರ ಸರಸಿಗಳ ॥
ಕಲೆವಂತರ ಕವಿಗಳ ವಿದ್ವಾಂಸರ । ವಲವೆ ಪಟ್ಟಣವ ತುಂಬಿಹವು ॥ ೧೩೨ ॥

ಕರುಮಾಡವ ಕಂಡು ಸ್ವರ್ಣಶೈಲಗಳೆಂದು । ಸುರಸತಿಯರುಗಳೆಯ್ತಂದು ॥
ಹರುಷದಿ ಗಿರಿಯೇರಿ ನಿಂದು ನಟಿಪರೆನೆ । ವರಪತಾಕೆಗಳು ನಲಿವವು ॥ ೧೩೩ ॥

ರೂಪವಂತೆಯರು ಪತಿವ್ರತೆಯರುಗಳು । ಚಾಪಲನೇತ್ರೆಯರುಗಳು ॥
ಪಾಪಭೀತೆಯರು ಪಂಡಿತೆಯರು ಪುರದೊಳು । ಯೇಪ್ರೊತ್ತು ಎಡೆವಿಡದಿಹರು ॥ ೧೩೪ ॥

ಸಿರಿ ಸರಸ್ವತಿ ಜಯವೆಣ್ಣಾ ಪುರದೊಳು । ವರಗೃಹಗಳ ಮಾಡಿಕೊಂಡು ॥
ಹರುಷದೊಳಾವಾಗಲಿರ್ದಪರೆಸಲೂರ । ಸಿರಿಯನದೇನ ಬಣ್ಣಿಪೆನು ॥ ೧೩೫ ॥

ನಾಗನಗರ, ನಾಕನಗರವನಜನಂದು । ಬೇಗ ಸೃಜಿಸಬೇಕೆಂದು ॥
ಆಗಲೀಪುರವ ಮೇಲ್ಪಂಕ್ತಿಯ ಮಾಡಿತಾ । ರಾಗದಿಂ ಮೊದಲು ಸೃಷ್ಟಿಸಿದ ॥ ೧೩೬ ॥

ಅಜ ತಾನು ಮನದಂದು ಸೃಷ್ಟಿಸಿ ಧರೆಯನು । ತ್ರಿಜಗದೊಳುಳ್ಳ ನಗರವ ॥
ಭಜಿಸಲಾರ್ಪವೆ ಯೆನ್ನೊಂದು ತೆನೆಯನೆಂದು । ನಿಜದಿಂದ ನಗುತಲೊಪ್ಪಿಹುದು ॥ ೧೩೭ ॥

ಸುರಲೋಕ ಲಘುವಾಗೆ ಮೇಲಕೆ ಪಾರಿತು । ಉರಗಲೋಕವು ಕಡುನಾಚ್ಚಿ ॥
ಧರೆಗಿಳಿಯಿತು ಎಂದು ನಗುತಲಾ ಪಟ್ಟಣ । ಮೆರೆದುದು ಕಡು ಸೊಬಗಿಂದ ॥ ೧೩೮ ॥

ಪುರದ ಮಧ್ಯದಿ ನವರತ್ನಖಚಿತವಾದ । ಅರುಹನಾಲಯವೊಪ್ಪಿದುದು ॥
ಪುರಲಕ್ಷ್ಮಿಯೆದರ್ಪಣಯೊಳು ಬಿನದಕೆ ಹಾಕಿದ । ಮೆರೆವೈದೆ ದಾಳಿಯಂದದೊಳು ॥ ೧೩೯ ॥

ಕನಕನಿರ್ಮಿತ ಕೋಂಟೆ ಜಂಬೂದೀವಿಯುಮೆಂದು । ಮಿನುಗುವ ನಿರ್ಜರ ಶೈಲ ॥
ಮನವಕ್ಕರಿಂಬಂದು ನಡುವೆ ನಿಂದುದೊ ಎನೆ । ಜಿನಗೇಹ ನಡುವಿಹುದೂರ ॥ ೧೪೦ ॥

ಭೇದಿಸಿ ತತ್ವವ ನುಡಿವ ಮುನಿಗಳಿಂದ- । ಲೋದುವ ಶಿಷ್ಯಾಳಿಯಿಂದ ॥
ಆದರದಿಂ ಧರ್ಮಗೇಳ್ವ ಶ್ರಾವಕರಿಂ ವಿ- । ನೋದವಾಗಿಹುದಾ ಬಸದಿ ॥ ೧೪೧ ॥

ಪರಮಾತ್ಮನ ಧ್ಯಾನಿಸುವ ಮುನಿಗಳಿಂದ । ವರಧರ್ಮಧ್ಯಾನಗಳಿಂದ ॥
ಪರವಾದಿಗಳ ಖಂಡಿಸುವ ವಾದಿಗಳಿಂದ । ಮೆರೆದುದು ಜೈನಾಗಾರ ॥ ೧೪೨ ॥

ಅಲ್ಲಲ್ಲಿ ಚಿನ್ನ-ಬೆಳ್ಳಿಯ ಗಿಂಡಿ ನೀರಲಿ । ಬಲ್ಲ ಶ್ರಾವಕರೂರೊಳಗೆ ॥
ನಿಲ್ಲಿಸಬೇಕು ಮಹಾಮುನಿಗಳ ನೆಂ- । ದುಲ್ಲಾಸದಿಂ ಪಿಡಿದಿಹರು ॥ ೧೪೩ ॥

ಅಲ್ಲಲ್ಲಿ ಬಾವಲಿಯಿಡುವ ಮುನಿಗಳಿಂ- । ದಲ್ಲಲ್ಲಿ ನಿಲಿಸುವರಿಂದ ॥
ಅಲ್ಲಲ್ಲಿಯುದಕಶುದ್ಧಿಯಕೊಡುವರುಗಳಿಂ- । ಗೆಲ್ಲವಾಂತಿಹುದಾ ಪುರವು ॥ ೧೪೪ ॥

ಅಲ್ಲಲ್ಲಿ ಜಯಘಂಟೆ ನಾದಗಳಿಂದ- । ಲ್ಲಲ್ಲಿ ನಮೋಸ್ತೆಂಬರಿಂದ ॥
ಅಲ್ಲಲ್ಲಿ ನಿರಂತರಾಯುವಾಯ್ತೆಂಬರ । ಸೊಲ್ಲೆ ಪಟ್ಟಣವ ತುಂಬಿಹುದು ॥ ೧೪೫ ॥

ಭಿಕ್ಷೆಯ ಮಾಡುವರಿಂದ ಭಿಕ್ಷೆಯ ಮಾಡಿ । ಯಕ್ಷಯಫಲವೆಂಬರಿಂದ ॥
ಭಿಕ್ಷೆಯಾಗಲು ಚೈತ್ಯಗೃಹಕೆ ಬರುವ ಮು- । ಮುಕ್ಷುಗಳಿಂದಲೊಪ್ಪಿಹುದು ॥ ೧೪೬ ॥

ಅರುಹನ ಗೃಹದ ದಕ್ಷಿಣದಿಕ್ಕಿನೊಳು ದೊರೆ- । ಯರಮನೆಸೊಬಗನೇಳಿಸುತ ॥
ಸಿರಿದೇವಿಯಿರ್ಪರಮನೆಯೋ ಎಂಬಂದದಿ । ಮೆರೆವುದೆಂತೆನಲು ಪೇಳುವೆನು ॥ ೧೪೭ ॥

ಕನಕನಿರ್ಮಿತವಾದ ಮೂರುಸುತ್ತಿನ ಕೋಂಟೆ । ದಿನಕರಬಿಂಬವ ನಗುತ ॥
ಮಿನುಗುವ ಕರ್ಣಿಕೆಯನು ಸುತ್ತಿ ರಾಜಿಪ । ಕನಕಾಬ್ಜದೊಲು ಕೋಂಟೆಯಿಹುದು ॥
ಮುತ್ತಿನ ದಾರವಂದದಿ ಪದ್ಮರಾಗದ । ಬಿತ್ತರನಾದವುಳ್ವಡಿಯಿಂ ॥
ತೆತ್ತಿಸಿ ವಜ್ರದಲಾಳ ಮುಂಡಿಗೆಯಿಂದ । ಉತ್ತರ ಮುಖವಾಗಿ ಮೂರು ॥ ೧೪೯ ॥

ಕರಡಿಗೆ ಬಾಯನು ತೆರೆದಂತೆ ಸಿರಿವೆಣ್ಣು । ಮೆರೆದವು ಬಾಗಿಲು ಮೊದಲ ॥
ವರದ್ವಾರದ ಎಡಬಲದೊಳು ಮುತ್ತಿನ । ಸೆರೆವ ಹಜಾರವೊಪ್ಪಿಹುದು ॥ ೧೫೦ ॥

ಮೊದಲ ಕೋಂಟೆಯ ಬಾಗಿಲಮೇಲೆ ನವರತ್ನ । ಹುದುಗಿದ ಹದಿಮೂರು ನೆಲೆಯ ॥
ತ್ರಿದಶಗಿರಿಯನು ನಗುತ ಕರುಮಾಡವು । ಪದಪಿಂದ ವಿಭ್ರಾಜಿಪುದು ॥ ೧೫೧ ॥

ಬೆಡಗಿನಿಂದಾ ಕೋಂಟೆಯು ಮೂರು ದಿಕ್ಕಿಲಿ । ಕಡೆಯಾಣಿಮಾಟದ ಮೂರು ॥
ಕಡುರಂಗುವಡೆದ ಸಜ್ಜೆಗಳು ಕುಲಾದ್ರಿಯ । ಮಿಡುವುತಿಹವು ಸೊಬಗಿಂದ ॥ ೧೫೨ ॥

ಮೊದಲ ಕೋಂಟೆಯ ಒಳಭಾಗ ವಿರಾಜಿಪು- । ದುದಯಾರ್ಕನಂತೆ ಮಾರ್ಪೊಳೆವ ॥
ಸದಮಲಮಪ್ಪ ಸೌಂದರ ವಿಲಾಸವು । ಹುದುಗಿದ ರತ್ನದಿಂದಿಹುದು ॥ ೧೫೩ ॥

ಮರುಗ ಮಲ್ಲಿಗೆ ಜಾಜಿ ಕಲುಹಾರ ಕರವೀರ । ಸುರಹೊನ್ನೆ ನಾಗಸಂಪಿಗೆಯು ॥
ಇರುವಂತಿ ಸೇವಂತಿಗೆ ದಾಡಿಮದ್ರಾಕ್ಷೆ । ಸರಸಾಮ್ರ ಕರ್ಪೂರವಾಳೆ ॥ ೧೫೪ ॥

ಇವು ಮೊದಲಾದ ಅನೇಕ ಕುಸುಮಜಾತಿ । ವಿವಿಧ ತರುಗಳಾ ಕೋಂಟೆಯಲಿ ॥
ಕವಿದ ತುಂಬಿಗಳಿಂದ ದಶದಿಕ್ಕುಗಳಿಗೆ । ನವಪರಿಮಳಗೊಡುತಿಹವು ॥ ೧೫೫ ॥

ಎರಡನೆ ಕೋಂಟೆಯ ಒಳಸುತ್ತುಗಳೊಳು । ದೊರೆಯ ಸೇವೆಯ ಹೆಣ್ಣುಗಳ ॥
ಅರಸಿಯರೂಳಿಗವೆಣ್ಣದಾದಿಯರ್ಗಳ । ವರ ಗೃಹಗಳು ಸಾಲಾಗಿಹವು ॥ ೧೫೬ ॥

ಮೂರನೆ ಕೋಂಟೆಯ ನಟ್ಟನಡುವಿನಲ್ಲಿ । ನೇರಾಳಿಗೆಲಸದಿ ಮೆರೆವ ॥
ಸೇರಿದ ನಂದ್ಯಾವರ್ತ್ಯಾಕಾರದಿ । ಭೂರಮಣೇಶನದೊಂದು ॥ ೧೫೭ ॥

ಮಲಗುವ ಮನೆ ವಜ್ರದ ಸಿಲುಗಸ್ನದಿ । ಬಲಿದು ಮಾರ್ಪೊಳೆವುತಲಿರಲು ॥
ಕಲಧೌತದಿಂ ಥಳಥಳಿಸುವ ಹದಿನೈದು । ನೆಲೆಯ ಪ್ರಾಸಾದವೊಪ್ಪಿದುದು ॥ ೧೫೮ ॥

ಆ ಗೃಹವನು ಪರಿವೇಷ್ಟಿಸಿ ಸೂರ್ಯನ । ತೇಜವ ಜರೆವುತ ಸೊಬಗಿಂ ॥
ಭೂಗಧಿನಾಥನ ರಾಣೀರ ಸೌಧವು । ಪೂಗೆಲಸದೊಳೊಪ್ಪಿಹವು ॥ ೧೫೯ ॥

ಅರಮನೆ ಬಲಗಡೆಯೊಳು ತೋರಮುತ್ತಿನ । ಮೆರೆವ ಚಾವಡಿ ರಾಜಿಪುದು ॥
ಸುರಪತಿಯೋಲಗ ಸೌಧರ್ಮಸಭೆಯನು । ಜರೆವುದು ಸೊಬಗಿನಿಂ ತನ್ನ ॥ ೧೬೦ ॥

ಇಂತು ರಾಜಿಸುವ ಕನಕಪುರದೊಳಗೆ ಪ್ರ- । ತ್ಯಂತ ಭೂಭುಜಗಜಸಿಂಹ ॥
ಕಂತು ಸದೃಶಜಿನಚಂದ್ರ ಮಹಾರಾಜ । ಸಂತೋಷದೊಳಗೊಪ್ಪಿದನು ॥ ೧೬೧ ॥

ನೀತಿಶಾಸ್ತ್ರವೆ ಮೂರ್ತಿಗೊಂಡುದೋ ಮೇಣ್ ಕ್ಷಾತ್ರ । ರೀತಿಲಕ್ಷಣದೊರೆಯಾಯ್ತೋ ? ॥
ಮಾತೇನು ! ಜಗದ ಪುಣ್ಯವೆ ಪೂರುಷರೂಪ । ತಾ ತಳೆದಂತೆ ರಾಜಿಸಿದ ॥ ೧೬೨ ॥

ಅವನ ರೂಪನು ಕಂಡಂಗಜ ಕಡು ನಾಣ್ಚಿ । ತವಕದಿಂ ತಾ ಮೆಯ್ಗರೆಯೆ ॥
ಭುವಿಯೊಳಗಂದಿಂದನಂಗಜನಾದನು । ಅವನಂಗ ಸೌಂದರವೆಂತೊ ! ॥ ೧೬೩ ॥

ದಾಮೋದರ ತನ್ನ ಧವನೆಂದು ಸಿರಿಬಿಟ್ಟು । ಪ್ರೇಮದಿಂ ನೃಪತಿಯ ಸಾರೆ ॥
ಕಾಮಿಸೆಯಂದಿಂದ ಹರಿ ಸರ್ಪಶಯನದಿ । ತಾ ಮಲಗಿರುವ ಚಿಂತೆಯೊಳು ॥ ೧೬೪ ॥

ಮೊರೆಗೆಟ್ಟು ಮಗಳಿಗಳುಪಿದನು ಪ್ರಿಯನೆಂದು । ಸರಸತಿ ನೃಪಮುಖ ಸೇರೆ ॥
ವಿರಹದಿಂ ಬೊಮ್ಮನೂರ್ವಶಿಗೆ ತಾ ಮೋಹಿಸಿ । ಶಿರನಾಲ್ಕನಾಂತನಂದಿಂದ ॥ ೧೬೫ ॥

ಜಿನಚಂದ್ರರಾಜನ ಕೀರ್ತಿಮೂಜಗವನು । ಘನವಾಗಿ ತುಂಬಿರೆ ಕಂಡು ॥
ವನಜಾರಿ ಮುಖಕಂದಿ ಕುಂದಿದನಂದಿಂದ । ತನುವಕ್ರವಾಗಿ ನಡೆವನು ॥ ೧೬೬ ॥

ತನ್ನ ತೇಜಸ್ಸವೆ ಮಹದುಷ್ಣವೆಂದಿರ್ದೆ । ನನ್ನಿಂದ ನೃಪನ ತೇಜಸ್ಸು ॥
ನನ್ನಿಯಿಂ ತ್ರಿಗುಣೋಷ್ಣವೆಂದಳ್ಕಿ ಸೂರ್ಯನು । ತಾಂ ನೆರೆ ಚರಿಪ ಗಗನದಿಂ ॥ ೧೬೭ ॥

ಅದಿಗಡಿಗೇಕೆ ಎನ್ನನು ಜಡಿದಪೆ ನೃಪ । ತೊಡರ್ದರಿನೃಪರ ನಿನ್ನಡಿಗೆ ॥
ಕೆಡಹದಿರ್ದೊಡೆ ಜಡಿ ಎಂಬೊಂದು ಗಮಕದಿಂ । ಪೊಡವಿಪ ಜಡಿದಸ್ತ್ರವಿಹುದು ॥

ಧರಣೀಧರನಾಗಿ ಮತ್ತೆಯಾನೃಪತಿಯು । ಪರಿಕಿಸಲಲ್ತು ದ್ವಿಜಿಹ್ವಾ ॥
ಸಿರಿಕಾಂತಾಪತಿಯಾಗಿ ದಾಮೋದರನಲ್ತು । ವರಭೋಗಿಯಾಗಿಯಾ ನೃಪತಿ ॥ ೧೬೯ ॥

ವಿಷಧರನಲ್ತು ಕಲಾಧರನಾಗಿಯು । ಎಸೆವ ದೋಷಾಕರನಲ್ಲ ॥
ಹಸನಪ್ಪ ವಂಶೋತ್ಪನ್ನನು ತಾನಾಗಿ । ವಸುಧೆಗೆ ಕಂಟಕನಲ್ಲ ॥ ೧೭೦ ॥

ಸೂರನಾಗಿಯು ಕುವಲಯಕೆ ತಾನರಿಯಲ್ತು । ಮಾರನಾಗಿಯು ದರ್ಪನಲ್ತು ॥
ಆರೈದು ನೋಡೆ ತಾ ಭುವನಾಧಿಪತಿಯಾಗೆ । ಭೂರಿ ಜಡಾಶ್ರಯನಲ್ತು ॥ ೧೭೧ ॥

ರಾಜರಾಜನುಮಾಗಿ ಗುಹ್ಯಕೇಶ್ವರನಲ್ತು । ರಾಜಿಪ ಜಗತ್ಪ್ರಾಣನಾಗಿ ॥
ಓಜೆಯಿಂದಲಿ ಚಲನಾತ್ಮಕ ತಾನಲ್ತು । ಸಾಜಾದ ಗುಣವಂತನಾಗಿ ॥ ೧೭೨ ॥

ಕೋದಂಡ ತಾನಲ್ತು ಧರ್ಮರಾಜನುಮಾಗಿ । ಭೇದಿಸಲಂತಕನಲ್ತು ॥
ಈ ಧರೆಯೊಳು ದಾನವಂತನು ತಾನಾಗಿ- । ಯಾದುದಿಲ್ಲವ ಮಹಾವ್ಯಾಲ ॥ ೧೭೩ ॥

ದೊರೆ ರನ್ನನ ವಿತರಣಗುಣವನು ಕೇಳಿ । ಸುರತರು ಸ್ವರ್ಗವೆಯ್ದಿರಲು ॥
ಪರಿಕಿಸೆ ಚಿಂತಾಮಣಿ ಕಲ್ಲಾದುದು । ಸುರಭಿ ತಾ ಮೂಗುವಟ್ಟಿಹುದು ॥ ೧೭೪ ॥

ಇವು ಮೊದಲಾದ ಗುಣವನುಳ್ಳ ಜಿನಚಂದ್ರ । ದಿವಿಪದವಿಯನಾಳುವಂತೆ ॥
ಭುವನಾಧೀಶ ಕನಕಪುರವಾಳುವ । ನವಮನ್ಮಥನಂತೊಪ್ಪಿದನು ॥ ೧೭೫ ॥
ಅಸುವೊಂದೆ ಗಾತ್ರವೆರಡು ಎಂಬಂದದಿ । ವಸುಧೇಶ್ವರನ ಚಿತ್ತವನು ॥
ಶಶಿಮುಖಿ ಸೂರೆಯಾಡುತ ಪಟ್ಟದರಸಿಯಾ- । ಗೆಸೆದಳು **ಶ್ರೀಕಾಂತಾದೇವಿ** ॥ ೧೭೬ ॥
ಜಿನಧರ್ಮ ರಕ್ಷಾಮಣಿ ಶಾಸ್ತ್ರದ ಕಣಿ । ಜನಪರ ಮಸ್ತಕಸುಮಣಿ ॥
ನೆನವು ಮೋಕ್ಷಾಗ್ರದೊಳಿರುವ ಚಿಂತಾಮಣಿ । ಜಿನಚಂದ್ರನೊಪ್ಪಿದ ತ್ರಾಣಿ ॥ ೧೭೭ ॥

ಇದು ಸುರನರಫಣಿಪತಿ ಮುಕುಟತಟಘಟಿತ ಮಾಣಿಕ್ಯಮರೀಚಿ ಮಾಲಾಲಂಕೃತ ಕ್ರಮ ಕಮಲಯುಗಲ ಶ್ರೀಮಜ್ಜಿನಾಧೀಶ್ವರ ಮತಾಂಬರದ್ಯುಮಣಿ ಸ್ಯಾದ್ವಾದ ವಿದ್ಯಾಭರಣ ಭೂಷಿತ ಶ್ರೀಮಚ್ಚಾರುಕೀರ್ತಿಪಂಡಿತಾಚಾರ್ಯ ಪದೇಂದೀವರಾನಂದಮಂದ ಮಕರಂದ ಸಂದೋಹಬಂಧುರ ಕುಸುಮಂದಯ ಶ್ರೀಮತ್ಪಾಯಣವರ್ಣಿ ವಿರಚಿತಮಪ್ಪ **ಜ್ಞಾನ ಚಂದ್ರ ಚರಿತ ಪುರಾಣದೊಳು** ಕಥಾ ಪೀಠಿಕಾವ್ಯಾವರ್ಣನಂ ಪ್ರಥಮಾಶ್ವಾಸಂ ॥ ೧ ॥



# ಶ್ರೀಕಾಂತಾದೇವಿಯ ಲಾವಣ್ಯ.

## ಶ್ರೀ ಶಾಂತಿನಾಥಾಯ ನಮಃ

ಸೊಲ್ಲಿಪೆ ಶ್ರೀಕಾಂತಾದೇವಿಯ ಚೆಲುವನು । ಸಲ್ಲೀಲೆಯಿಂದ ಕೇಳುವುದು ॥ಪ॥

ಶ್ರೀಮದ್ಗೀರ್ವಾಣಪತಿವಂದಿತಪಾದ । ಕಾಮನ ಗೆಲಿದ ನಿಸ್ಸೀಮ ॥
ನಾಮ ಸಾಸಿರದೆಂಟ ತಾಳಿದ ಶಾಂತೀಶ । ಧಾಮಧೂಮವ ಮಾಡೆನ್ನಘವ ॥ ೧ ॥

ಕುರುವಂಶಾಂಬರ ದಿನಮಣಿ ಮದವೆ- । ದ್ವರಿರಾಯಗಿರಿವಜ್ರದಂಡ ॥
ಪರನಾರಿಯರ ಸೋದರ ಶ್ರೀ ಜಿನಚಂದ್ರ । ದೊರೆಗಳ ದೇವನೊಪ್ಪಿದನು ॥ ೨ ॥

ಆ ಜಿನಚಂದ್ರನ ಪಟ್ಟಮಹಾದೇವಿ । ಶ್ರೀ ಜಿನಭಕ್ತೆ ಸುಶೀಲೆ ॥
ಮೂಜಗನ್ನುತೆ ಶ್ರೀಕಾಂತಾದೇವಿ ವಿ- । ಭ್ರಾಜಿತೆ ಚೆಲುವೆಯೊಪ್ಪಿದಳು ॥ ೩ ॥

ವಾಣಿ ಶ್ರೀಕಾಂತೆಯ ಜಾಣ್ನುಡಿಯನು ಕೇಳಿ । ಜಾಣು ಸಾಲದು ತನಗೆಂದು ॥
ಮಾಣದೆಯಿಂದ ಜಪಸರವಿಡಿದಾ । ವಾಣಿ ಮಾಡುವಳು ಜಪವನು ॥ ೪ ॥

ಸಿರಿದೇವಿ ತನಗಿಂತಾಯಕನಿಗೆ ಸಿರಿಯೆಂದು । ಕೊರಗಿ ಕೊಳನ ಪೊಕ್ಕಬ್ಜದೊಳು ॥
ವರಹಿಮಕಳ್ಕದೆ ತಪವ ಮಾಳ್ಪಳು ಎನೆ । ಸಿರಿಕಾಂತೆಯ ಸಿರಿಯೆಂತೋ ! ॥ ೫ ॥

ದೋಷಾಕರನಿಗೊಲಿದಳಾ ರೋಹಿಣಿ । ವಾಸವಕಡು ಜಾರನಿಗೆ ॥
ಹೇಸದೆ ಒಲಿದಳು ಶಚಿಯೆಂದು ಸ್ವಗುಣದಿಂ । ದಾ ಸಿರಿಕಾಂತೆ ಹಳಿವಳು ॥ ೬ ॥

ಸಿರಿ ಎಂಬ ಕಂಬಜ್ಜಿಯಿಂದಜ ಮನದಂದು । ವರನೀಲ ಸಣ್ಣ ಸರಿಗೆಯ ॥
ಭರದಿ ತೆಗೆದು ಒಪ್ಪವಿಟ್ಟನೋ ಎಂಬಂತೆ । ತರುಣಿಯ ಕಚಗಳೊಪ್ಪಿದವು ॥ ೭ ॥

ದುಷ್ಟರಾಹುವಿಗಳ್ಕಿ ಸುರರೆಲ್ಲ ನೆರೆದಾ- । ಗಷ್ಟಮಿ ಚಂದ್ರನ ತಂದು ॥
ಶಿಷ್ಟೆ ಶ್ರೀಕಾಂತೆಯ ನಿಟಿಲವ್ಯಾಜದಿ ಬೈ- । ಚಿಟ್ಟರೋ ಎನೆ ಪಣೆಯಿಪ್ಪುದು ॥ ೮ ॥

ವಿರಹಿಜನರ ತಟ್ಟುರ್ಚಿ ಕಿವಿಯಲೆಂದು । ಭರದಿ ಮನ್ಮಥ ಕೈವಿಡಿದ ॥
ಎರಲೆಯ ಕೋಡ್ಗಳೋ ಎನಲೊಪ್ಪಿದ ವಾ । ಗರುವೆಯ ಪುರ್ವಿನ ಭಾವ ॥ ೯ ॥

ನರಸುರನಾಗಲೋಕವ ಜಯಿಸುವರಾಗ । ಸ್ಮರವೀರ ತಾ ಮನದಂದು ॥
ಕರದೊಳು ವಿಡಿದ ಸುವರ್ಣ ಸಿಂಗಡಿಯನು । ಜರೆವವು ಕಿವಿ ಕೋಮಲೆಯ ॥ ೧೦ ॥

ಲಲನೆಯ ನಿಡಿದಾದ ಲೋಚನವನು ಕು- । ವಲಯವು ಕಂಡು ತಾ ನಾಣ್ಚಿ ॥
ಚೆಲುವೆಯ ದೃಷ್ಟಿಯ ಸಮನಾಗುವೆನೆಂದು । ಜಲವೊಕ್ಕು ತಪಿಪವಂದಂದ ॥ ೧೧ ॥

ದೇಹಜ ತನಗೆ ಮಾರ್ಮಲೆವ ತಾಪಸರೆಂಬ । ವಿಹಂಗಮಗಳ ತಲೆಯನು ॥
ಮೋಹನ ಘುಟಿಕೆಯನೂದಿ ಇಡುವ ಹೊನ್ನ । ನೇಹದ ಪೆಟಲೋ ನಾಸಿಕವೋ ? ॥ ೧೨ ॥

ನೊಲ್ಲೆಯ ನೊಗ್ಗೆ ತನ್ನಿಂದ ಅಂಗಜರಾಜ । ಕ್ಸ್ನಲ್ಲಕರೆಸೆವನೆಂದಂಜಿ ॥
ನಿಲ್ಲದೈತಂದು ದಂತಗಳಾದುವೊ ಎನೆ । ಫುಲ್ಲಾಕ್ಷಿರದನ ರಾಜಿಪವು ॥ ೧೩ ॥

ಸೌಂದರಿಯಧರದ ರಕ್ತಿಮೆಯನು ಕಂಡು । ಚಂದವಿಲ್ಲೆನ್ನ ವೈ ಬಣ್ಣ ॥
ಎಂದು ತಾ ತಲೆಕೆಳಗಾಗಿ ಬಿಂಬಾಫಲ । ನಿಂದು ತಪಿಪವಂದಿಂದ ॥ ೧೪ ॥

ಜಿನಚಂದ್ರನಾವಾಗ ನೋಡುವದಕೆಯೆಂದು । ವನಜಜ ನಿರ್ಮೈಯ್ಯ ದರ್ಪಣವ ॥
ವನಿತೆಯ ಕದಪಿನ ಛಲದಿ ಮಾಡಿದನೆನೆ । ಮಿನುಗಿತಾಗವಳ ಸುಣ್ಣದಪು ॥ ೧೫ ॥

ಇನಗಂಡ ಸರಸಿಜವನು ಭಾವಿಸಿ ನೋಡೆ । ಮಿನುಗುವ ವಜ್ರದರ್ಪಣದ ॥
ಮನಸಿಜಸಖಮಂಡಲವನು ಗೆಲಿದ । ವನಿತೆಯ ಮುಖರಾಜಿಪುದು ॥ ೧೬ ॥

ತಿರಿಕರು ಮನೆಮನೆದಪ್ಪದೆ ತಾವೈದಿ । ತಿರಿವಾಗ ಕರ್ಚಿ ಪೂರಿಸುವ ॥
ಮುಳ್ಳುಕು ಶಂಖದ ಮೂರೇಖೆಗೂಡಿದ ಮುದ್ದು । ಕೊರಲಿಗೆ ಸರಿಯೆನ್ನಬಹುದೇ ॥ ೧೭ ॥

ನನ್ನ ಸೊಬಗನಾಯಕನ ಕುಚಂಗಳು । ಬನ್ನಬಡಿಸಿದ ಮೇಲಾನು ॥
ಇನ್ನು ಜೀವಿಪೆನೆ ಎಂದಾ ಯೆಣೆವಕ್ಕಿಯು । ನನ್ನಿಯಿಂ ಜಲಪೊಕ್ಕಿಹವು ॥ ೧೮ ॥

ಸ್ತನಸುಘಟಗಳೊಳಿರದೆ ಮೇಲಕ್ಕೈತಂದ । ವನಿತಳಕೆ ಪೋಗುತಿರ್ದ ॥
ಮಿನುಗುವ ಪಂಚಫಣೋರಗಗಳೊ ಎನೆ । ವನಿತೆಯ ತೋಳ್ಗಳೊಪ್ಪಿದವು ॥ ೧೯ ॥

ಹೊಂಗೇದಗೆಯೆಸಳನು ಜರೆದೊಪ್ಪಿದು- । ದಂಗನೆಹಸ್ತದ ಬೆರಳು ॥
ಶೃಂಗಾರವಾದ ಚೆಳ್ಳುಗುರು ರಂಜಿಸುವಲ್ಲಿ- । ಯಂಗಜನಲಗಿನಂದದೊಳು ॥ ೨೦ ॥

ಸ್ಥಿರವಾದ ತಾಣವು ನನಗೆಲ್ಲಿಯಿಲ್ಲೆಂದು । ಸಿರಿ ಸಿರಿಕಾಂತೆಯುದರದಿ ॥
ವರವೃತ್ತಗೃಹವ ರಚನೆ ಮಾಡಿದಳೆನೆ । ಸುರುಚಿರನಾಭಿಯೊಪ್ಪಿದುದು ॥ ೨೧ ॥

ಸುಳಿನಾಭಿಯೆಂದೆಂಬ ಕೊಡದೊಳಿದ್ದಮೃತವ । ನಳಿನಾಕ್ಷಿರತಿಮನದಂದು ॥
ಘಳಿಲನೆ ಕಡೆವ ಮಂಥಿಸ ನೀಲಗಾವೆನೆ । ಲಲನೆಯ ಬಡ ಬಾಸೆಯಿಹುದು ॥ ೨೨ ॥

ಕರಿಯ ಮಸ್ತಕವೆಂದು ಪೊರವಾರ ಹರಿ ಕಂಡು । ಭರದಿ ಸೇರಿತೊ ಎಂಬಂತೆ ॥
ಗರುವೆಯೊಪ್ಪಿತು ನಡುರಾಜಿಪದದರೊಂ- । ದಿರವ ಬಣ್ಣಿಸಬಲ್ಲನಾರು ॥ ೨೩ ॥

ಕಟ್ಟುರುಟಾಯ್ತು ನಿತಂಬವಿನ್ನೇತಕ್ಕೆ । ಹೆಟ್ಟುಗೆಗೆಂದು ಗಜಗಳು ॥
ಸುಟ್ಟು ಹೋಗಲಿ ನಮ್ಮ ಶಿರದ ಚೆಲುವು ಎಂ- । ದಿಟ್ಟುಕೊಂಬವು ದೂಳಿ ಶಿರಕೆ ॥ ೨೪ ॥

ಮೂಲೋಕದೊಳಗುಳ್ಳ ಚೆಲುವಿಕೆಗಳು ಬಂದು । ಸಾಲಾಗಿ ಮೂರೇಖೆಯನು ॥
ತಾಳಿ ಸಿಂದವೊ ಎಂಬಂತೆ ತ್ರಿವಳಿಗಳು । ಬಾಲಕಿಗೊಪ್ಪಿದವಾಗ ॥ ೨೫ ॥

ಅವಳಂಗವೆಂದೆಂಬ ಶೃಂಗಾರವನದೊಳು । ತವೆ ಶೋಭಿಪ ಕರ್ಬೊನ್ನ ॥
ಜವಳಿ ಬಾಳೆಯ ಕಂಬಗಳೊ ಎಂದೆಸಲಾ । ಯುವತಿಯ ಊರು ರಾಜಿಸವು ॥ ೨೬ ॥

ನರರೂಹುಗಳನು ಬರೆಯ ಬೇಕೆಂದಾಗ । ಸರಸಿಜಭವನಲತಿಗೆಯ ॥
ವರರಸವನು ತೀವಿದ ಗಿಣ್ಣಲುಗಳೋ । ತರುಣಿಯ ಗೂಢಗುಲ್ಫಗಳೋ ॥ ೨೭ ॥

ಸ್ಮರ ಸಂಯಮಿಗಳ ಜಯಿಸಲ್ಕೆ ಪೋಪಾಗ । ಶರದುಂಬಿ ಬೆನ್ನೊಳಗಿಟ್ಟ ॥
ಕರ ಚೆಲುವಾದ ಬತ್ತಳಿಕೆಯ ಕಾಂತಿಯ । ಕಿರುದೊಡೆ ಗೆಲಿದು ರಾಜಿಪವು ॥ ೨೮ ॥

ಹರವೈರಿ ತನ್ನ ಬತ್ತಳಿಕೆಯಡಿಗಳೊಳು । ವರವಜ್ರಮಯುದಗುಬ್ಬಿಯನು ॥
ಭರದಿ ಕೀಲಿಸಿದನೋ ಎನೆ ಕೋಮಲಾಂಗಿಯ । ಹರಡುಗಳಿಹವು ಚೆಲ್ವಿಂದ ॥ ೨೯ ॥

ಅತಿಶಯವಾದ ಮೇಗಾಲ ಚೆಲ್ವಿಕೆಯನು । ಶತಮೂರ್ಖ ಕಮಠ ತಾ ಕಂಡು ॥
ಕ್ಷಿತಿತಲವನು ಪೊಕ್ಕು ಭೂಮಿಗುಂಡನು ಪೊತ್ತು । ಸತತ ಭ್ರಾಂತಿಕನಾಗಿಹನು ॥ ೩೦ ॥

ಬಂಧುರವಾದ ಮಾಂದಳಿರ ಕೆಂಪುಗಳನು । ನಿಂದಿಸುತ ಮೃದುತ್ವವನು ॥
ಸೌಂದರಿಯಂಘ್ರಿಯ ತಳ ಮೃದು ಕೆಂಪುಗ- । ಳಂದವ ಬಣ್ಣಿಪರಾರು ॥ ೩೧ ॥

ನಿನ್ನ ಚೆಲುವಿಕೆಯ ನನಗೆ ಪಾಲಿಸೆಲೇ । ಗನ್ನಗಾತಿಯೆ ! ಎಂದು ರತಿಯು ॥
ಚಿನ್ನಮುತ್ತುಗಳನು ಬೆರಳೊಳಿಟ್ಟಳೊ ಎನೆ । ಕನ್ನೆಯ ಪದನಖಮಿಹವು ॥ ೩೨ ॥

ಕುಂದಣದಿಂದ ಸಮೆದ ತಗಡಿನದೊಂ- । ದಂದವ ನುರೆ ತಾ ನಗುತ ॥
ಸೌಂದರಿಯಂಗದ ಕಾಂತಿ ಮಾರ್ಪೊಳೆದವು । ಬಂಧುರವಾಗಿ ನೋಳ್ಪರಿಗೆ ॥ ೩೩ ॥

ಇಂತು ಚೆಲುವಿಕೆಯನಾಂತು ಮೆರೆವ ಸಿರಿ- । ಕಾಂತಾದೇವಿಯೊಳ್ಕೂಡಿ ॥
ಕಂತುಸನ್ನಿಭ ಜನಚಂದ್ರ ಭೂಪಾಲ ನಿ- । ಶ್ಚಿಂತೆಯಿಂ ಸುಖದೊಳಗಿಹನು ॥ ೩೪ ॥

ಸಿರಿ ಹರಿಯೊಳು, ಉಮೆ ಯೀಶನೊಳಗೆ, ರತಿ । ಸ್ಮರನೊಳು ಭಾರತಿದೇವಿ ॥
ಸರಸಿಜಭವನೊಳಗೆಂತು ಕೂಡಿಹ ರಂ- । ತರಸನೊಳರಸಿ ಕೂಡಿಹಳು ॥ ೩೫ ॥

ಜಿನರ ಪೂಜಿಸುತಾವಾಗಲು ಭಕ್ತಿಯಿಂ । ಜಿನಮುನಿಗಳಿಗೆ ದಾನವನು ॥
ವಿನಯದಿಂದೀವುತ ಜಿನಪುರಾಣಗಳನು । ಮನದಕ್ಕರಿಂದ ಲಾಲಿಸುತ ॥ ೩೬ ॥

ನಂದೀಶ್ವರ, ಸೌಭಾಗ್ಯ ಪುಷ್ಪಾಂಜಲಿ । ಚಂದನಷಷ್ಠಿ ಮುಂತಾದ ॥
ಬಂಧುರವಾದ ನೋಂಪಿಗಳ ನೋಸುತಲಾ- । ನಂದದಿ ವಧುವರರಿಹರು ॥ ೩೭ ॥

ಒಂದಾನೊಂದು ಹಗಲು ಪರಿಚರಿಯರ । ವೃಂದವ ತಾ ಕೂಡಿಕೊಂಡು ॥
ಬಂದು ಶ್ರೀಕಾಂತೆ ಸೌಧವನೇರಿದಳದ । ರಂದವದೆಂತು ಬಣ್ಣಿಸುವೆ ॥ ೩೮ ॥

ಹಡಪಚಾಮರಗಿಂಡಿ ಕಾಳಂಚಿ ಕನ್ನಡಿ । ಕಡುರಮ್ಯವಾದ ವ್ಯಜನವ ॥
ಸಡಗರದಿಂದಾಳಿಯರು ಪಿಡಿದು ಬರೆ । ಮಡದಿಯೇರಿದಳುಪ್ಪರಿಗೆಯ ॥ ೩೯ ॥

ತಾರಾಪತಿಯರೊಗ್ಗಿನೊಳು ವಿಮಾನವ । ನಾ ರೋಹಿಣಿಯೇರುವಂತೆ ॥
ಆ ರಾಜಾಂಗನೆ ಹೊನ್ನುಪ್ಪರಿಗೆಯ- । ನೇರಿದಳಾಳಿಯರ್ವೆರಸು ॥ ೪೦ ॥

ಸರಸ ಚೂತವ ಗಿಳಿವಿಂಡುವೆರಸಿ ಪೆ- । ಣ್ಣರ ಗಿಳಿಯೇರುವಂದದೊಳು ॥
ಗುರುಕುಚೆಯರ ಒಗ್ಗಿಲಿ ಪ್ರಾಸಾದವ- । ನರಸಿಯೇರಿದಳು ಲೀಲೆಯೊಳು ॥ ೪೧ ॥

ಶರದಭ್ರವ ವಿಲಾಸದಿಯಡರುವ । ವರಶಶಿಲೇಖೆಯಂದದೊಳು ॥
ತರುಣಿಯೇರಿದಳು ಹೊನ್ನುಪ್ಪರಿಗೆಯನಾಗ । ನೆರೆಜಾಣೆಯರು ಸುತ್ತ ಬರಲು ॥ ೪೨ ॥

ನಾಗಕನ್ನೆಯರೊಡಬರಲಾ ನಾಗಿಣಿ । ಬೇಗದಿ ಭೂಯೇರುವಂತೆ ॥
ಸೋಗೆಗಂಗಳ ಬಾಲೆ ಸಖಿಯರೊಂದಾಗಿ ತಾ- । ರಾಗದಿ ಸೌಧವೇರಿದಳು ॥ ೪೩ ॥

ಕಱುಮಾಡವನೇರಿದ ಕೋಮಲಾಂಗಿಯು । ಮುರುಕವೊಪ್ಪಿತುವೆಂತೆನಲು ॥
ಗಿರೀಶನ ಮಸ್ತಕವೇರುವ ಗಂಗಾ । ತರುಣಿಯೋ ತಾನೆಂಬಂತೆ ॥ ೪೪ ॥

ಒಡನೇರಿ ಸೌಧವ ರಾಜ್ಯ ಸಂಪದವನು । ಸಡಗರದಿಂ ನೋಡಿ ಮತ್ತೆ ॥
ಕಡುರಮ್ಯವಾದ ಪಟ್ಟಣದ ಸೊಬಗನಾ । ಮುದದಿ ನೋಡಿದಳರ್ತಿಯಿಂದ ॥ ೪೫ ॥

ದೊರೆದೊರೆಗಳ ಹೊನ್ನುಪ್ಪರಿಗೆಯ ಮೇಲೆ । ತರುಣಿಯರುಯ್ಯಲಾಡುವುದ ॥
ಸರಸವಿನೋದದಿಂ ಚೆಂಡನಾಡುವರನಾ । ಗರುವೆ ಕಂಡಳು ಹರುಷದೊಳು ॥ ೪೬ ॥

ಕೆಲವೆಡೆಯೊಳು ವಿಪಂಚಿಯ ಸ್ತನಕಿಟ್ಟು । ಲಲನೆ ಪಂಚಮ ರಾಗವನು ॥
ನಲವಿನಿಂ ಸ್ವರವೆತ್ತಿ ಪಾಡುವ ಗಮಕವ । ಚೆಲುವೆ ಕಂಡಳು ಬೆಡಗಿನೊಳು ॥ ೪೭ ॥

ಕೆಲವೆಡೆಯೊಳಗಾನೆಯ ಪೋರಾಟವ । ಕೆಲವೆಡೆಯೊಳು ಟಗರುಗಳ ॥
ಕೆಲವೆಡೆಯೊಳು ಮಹಿಷಗಳ ಕಾಳಗವನಾ । ಲಲನೆ ಕಂಡಳು ನಲವಿಂದ ॥ ೪೮ ॥

ಕಡಿತ ಹಲಗೆ ಬಳಹಪ್ರೋಲೆ ಕಂಠವ । ಪಿಡಿದು ಹಸ್ತದಿ ವಿನೋದದಲಿ ॥
ಸಡಗರದಿಂದ ಮಠಕೆ ಪೋಪ ಕುವರರ । ಮುದದಿ ಕಂಡಳು ಲೀಲೆಯಿಂದ ॥ ೪೯ ॥

ಒಂದೆಡೆಯೊಳು ಗರ್ದುಗವನಾಡುತಿರಲಾಗ । ಬಂದೋರ್ವ ಹಾಲ್ಪರೆಯೆಂದು ॥
ಅಂದೆತ್ತಿಕೊಂಡೋಡಿ ಹಿಡಿವ ಕುಮಾರರ । ವೃಂದವ ಕಂಡಳಾ ಚದುರೆ ॥ ೫೦ ॥

ಒಂದೆಡೆಯೊಳು ಬುಗುರಿ ಒಂದೆಡೆ ಲಗ್ಗೆ । ಒಂದೆಡೆಯೊಳು ಹಿಲ್ಲೆಚೆಂಡು ॥
ಒಂದೆಡೆಯೊಳು ಸಡುಗುಡನಾಡುವ ವಟು- । ವೃಂದವ ಕಂಡಳಾ ನೀರೆ ॥ ೫೧ ॥

ಅಂದುಗೆ ಕಾಲೊಳು ಝಣಝಣರೆನುತಿರೆ । ಬಂದಿಕೋಲನು ಕೈಯೊಳಾಂತು ॥
ಚಂದಚಂದದ ಸಾಧನೆಯಾಡುವ ವಟು । ವೃಂದವ ಕಂಡಳಾ ಪ್ರೌಢೆ ॥ ೫೨ ॥

ಒಂದೆಡೆಯೊಳು ಹೂವಿನ ಕೋಲ ಪಿಡಿದಾಗ । ನಿಂದು ಲೀಲೆಯೊಳು ಚವುಪದನ ॥
ಅಂದಗಾರಿಕೆಯಿಂದ ಪೇಳುವ ಕುವರರ । ಸೌಂದರಿ ನೋಡಿದಳಾಗ ॥ ೫೩ ॥

ಕರಿಶಾಬಕಂಗಳಂಗಡಿಯೊಳು ಮಡಗಿರ್ದ । ಕರಿಯ ಕಬ್ಬಿನ ಜಲ್ಲೆಗಳನು ॥
ಭರದಿ ತೆಗೆಯೆ ಹಿಡಿ ಹಿಡಿಯೆನಲೋಡುವ । ಕರಿಯ ಮರಿಯ ಕಂಡಳಾಗ ॥ ೫೪ ॥

ಕಳಭ ಸುಮ್ಮನೆ ನೋಡುತಲಿರ್ದಂಗಡಿ- । ಯೊಳಗಣ ಹುರಿಗಡಲೆಯನು ॥
ಫಳಿಲನೆ ತೆಗೆದು ಬಾಯೊಳಗಿಟ್ಟೋಡುವುದನು । ನಳಿನಾಕ್ಷಿ ನೋಡಿದಳಾಗ ॥ ೫೫ ॥

ಪಾರಾವತವೊಂದು ಮರಿಯೆಡೆಗೈತಂದು । ಸಾರಿಕುಳ್ಳಿರ್ದು ಗುಟುಕನು ॥
ಸೇರಿಸಿ ಬಾಯೊಳು ಬಾಯಿಟ್ಟು ಕುಡುವುದ । ನೀರೆ ಕಂಡಿಂತು ನೆನೆವಳು ॥ ೫೬ ॥

ತಿರಿಯಂಚ ಮೊದಲಾದವೆಲ್ಲ ಜೀವಂಗಳು । ಹರುಷದಿಂ ಸುತರ ಮುದ್ದಿಪವು ॥
ನರಜನ್ಮವಾಗಿ ಮಕ್ಕಳ ಪಡೆಯದ ಮೇಲೆ । ತಿರಿಯಂಚಗಿಂದಾವು ಕಡೆಯೆ ? ॥ ೫೭ ॥

ಪುತ್ರನಾಡದ ಮನೆ ಪಾಳ್ಮನೆ ಭಾವಿಸೆ । ಪುತ್ರನಿಲ್ಲದ ಭಾಗ್ಯ ವ್ಯರ್ಥ ॥
ಪುತ್ರರ ಪಡೆಯದ ನಾರಿಯ ಜನ್ಮವು । ಕತ್ತೆಯ ಜನ್ಮವು ನೋಡೆ ॥ ೫೮ ॥

ಗರ್ಭವ ತಾಳಿ ಗೌಟಿಕೆಗಟ್ಟಿ ಚೆಲುವಾ- । ಗರ್ಭಕನನು ಪಡೆದಾನು ॥
ಕಾರ್ಬೊನ್ನ ತೊಟ್ಟಿಲೊಳಗೆ ತೂಗುವ ಭಾಗ್ಯ- । ದದ್ಭುತವಿನ್ನೆಂದಿಗಹುದೋ ? ॥ ೫೯ ॥

ಅಂದುಗೆಗಾಲಿಂದ ತೊಟ್ಟಿಲನೊದೆವ ಹೂ । ಯೆಂದು ನಗುತ ಲಲ್ಲೆಗರೆವ ॥
ಕಂದನನೆತ್ತಿ ತೂಪಿರಿದು ಮುದ್ದಿಪ ಭಾಗ್ಯ- । ವೆಂದಿಗೆನಗೆ ದೊರಕುವುದೋ ? ॥ ೬೦ ॥

ತೊಡೆಯೊಳು ಕುಳಿತಿರ್ದವನಿಂದ ಮೊಲೆಗರ್ಚಿ । ಗುಟುಕಿ ಹಾಲನು ತಾನುಣುತ ॥
ಎಡದ ಕೈಯಲಿ ಮೊಲೆ ತೊಟ್ಟಹಿಸುಕುತಿರ್ದ । ಹುಡುಗನನೆಂದು ಪಡೆವೆನು ॥ ೬೧ ॥

ಮರಿಯಾನೆಯಂತೋಡಿ ಬಂದು ಕಾಣುತಲೆನ್ನ । ಸೆರಿಯ ಪಿಡಿದು ಚಂಡಿಗೊಳುತ ॥
ಸೆರೆಗ ತೆಗೆದು ಮೊಲೆಯುಂಡು ಮತ್ತೋಡುವ । ವರಕುವರನನೆಂದು ಪಡೆವೆ ॥ ೬೨ ॥

ಇವು ಮೊದಲಾದರ್ಭಕರ್ದೋಹಳವನು । ಯುವತಿ ಚಿಂತಿಸುತುಪ್ಪರಿಗೆಯ ॥
ತವಕದಿಂದಿಳಿದು ಶಯ್ಯಾಗೃಹಕೆಯ್ತಂದು । ಕವುಚಿ ದುಃಖದಿ ಮಲಗಿದಳು ॥ ೬೩ ॥

ದುಗುಡದೊಳೊರಗಿರ್ದರಸಿಯ ಕಾಣುತ । ಮಿಗೆ ಬೆರ್ಚಿಯಾಳಿಯರೆಲ್ಲ ॥
ಸುಗುಣೆಯ ಮಾತನಾಡಿಸಲಮ್ಮದೆ ತಾವು । ಮಿಗೆ ಚಿಂತಿಸುತಿರಲೋರ್ವ ॥ ೬೪ ॥

ಅರಸಿಯ ನೇಹದ ಕೆಳದಿ ಬೇಗೈತಂ- । ದರಸಗೆ ಕೈಗಳ ಮುಗಿದು ॥
ಸಿರಿಕಾಂತಾದೇವಿ ದುಗುಡದಿ ಮಂಚದೊ- । ಳೊರಗಿ ಕೊಂಡಿಹಳು ಎಂದೆನಲು ॥ ೬೫ ॥

ಮಿಗೆ ಬೆರ್ಚಿ ಜಿನಚಂದ್ರನಾ ನುಡಿಗೇಳುತ । ಬಗೆಯೊಳು ತಾ ಕಡು ನೊಂದು ॥
ಧಿಗಿಲನೆ ನಡೆತಂದು ಸಜ್ಜಾಗೃಹ ಪೊಕ್ಕು । ಮೃಗನೇತ್ರೆಯೊತ್ತಿಲಿ ಕುಳಿತು ॥ ೬೬ ॥

ತೆಗೆದಪ್ಪಿಕೊಂಡು ಬಾಯೊಳು ಬಾಯನು ಇಟ್ಟು । ಒಗುವ ಕಣ್ಬನಿ ವಸ್ತ್ರದಿಂದ ॥
ಮಿಗೆ ತೊಡೆವುತ ಚಿಕುರವ ತಿದ್ದುತಲಾಗ । ಜಗದೀಶ ನುಡಿದನಿಂತೆಂದು ॥ ೬೭ ॥

ಏಕೆ ಬಂದುದೊ ಈ ಚಿಂತೆ ನಿನಗೆ ಎಂದು । ಲೋಕೇಶ ತಾ ಮನನೊಂದು ॥
ಕೋಕಿಲಾಲಾಪದಿ ಕೇಳಿದನಾಗ ಮ- । ತ್ತಾ ಕುವಲಯಗಂಧಿಯನು ॥ ೬೮ ॥

ಸವತಿಯರಿಂದಲಾದುದೊ ಚಿಂತೆ ಮತ್ತಿನ । ಯುವತಿಯರಿಂದಲೇನಾಯ್ತೋ ॥
ನೆವನಾವುದು ಈ ಚಿಂತೆಗೆ ಎಂದಾಗ । ಯುವತಿಯು ಕೀರಿ ಕೇಳಿದನು ॥ ೬೯ ॥

ಬಂಗಾರದಿಂದ ಕಡಿಮೆಯಾದುದೋ ಸೇವೆ । ವೆಂಗಳಿಂ ಕಡಿಮೆಯೇನಾಯ್ತೋ ? ॥
ಪೊಂಗಳು ಬರುವುದು ತಡವಾಯ್ತೋ ದೇಶದಿಂ । ಕಂಗಳ ಸಿರಿಯೆ ನೀ ಪೇಳು ॥ ೭೦ ॥

ಕೀಲಾರದೊಳಗೇನು ಕಡಿಮೆಯಾಯಿತೊ ವಸ್ತು- । ಜಾಲದೊಳಿನಿಸಿಲ್ಲವಾಯ್ತೋ ? ॥
ಓಲಗವೆಂಗಳಿಂದೇನು ತಪ್ಪಿದುದೋ ಸು- । ಲೋಲಾಕ್ಷಿ ನೀ ಪೇಳೆಂದ ॥ ೭೧ ॥

ನನ್ನಿಂದ ತಪ್ಪುತಾನೇನಾಯ್ತೋ ಮನೆಯಲ್ಲಿ । ಗನ್ನಗದುಕನಾಡಿದರೋ ॥
ಹೊನ್ನಬೊಂಬೆಯೊಲು ಹೊಳೆವ ವೈಯಳೆ ಪೇಳು । ನನ್ನಾಣೆ ನನಗೆ ಪೇಳದೊಡೆ ॥ ೭೨ ॥

ಎಂದು ಮುಂಡಾಡಿ ಮುದ್ದಿಸಿ ಗಲ್ಲವಲುಗುತ । ಬಂಧುರೋಕ್ತಿಗಳಿಂದ ನೃಪತಿ ॥
ಕುಂದಕುದ್ಮಲರದನೆಯೆ ಪೇಳು ಪೇಳೆಂದು । ಚಂದದಿಂ ಕೀರಿ ಕೇಳಿದೊಡೆ ॥ ೭೩ ॥

ಏಸು ಪರಿಯೊಳು ಪೇಳಲು ಮಸ್ತಕವಾಗಿ । ಸೂಸುತ ಕಣ್ಬನಿಗಳನು ॥
ಆ ಶಶಿಮುಖಿ ಮಾಗಿಯ ಕೋಗಿಲಂದದಿ । ಬಾಸೆದೋರದೆ ಸುಮ್ಮನಿರಲು ॥ ೭೪ ॥

ಅವಳ ನೇಹದ ಕೆಳದಿಯರೊಳಗೋರ್ವಳು । ಯುವತಿ ಕೈಗಳ ಮುಗಿದಾಗ ॥
ಸವಿನಯದಿಂದ ಬಿನ್ನವಿಸಿದಳೆಲೆ ನೃಪ । ರವಿಯುಂತೆಸೆವ ಸೌಧವನು ॥ ೭೫ ॥

ಇಂದಿನ ದಿನದೊಳಗೇರಿ ಪಟ್ಟಣದೊಂ- । ದಂದವ ನೋಡುತಲಿರಲು ॥
ಕಂದರ್ಪರೂಪಿನ ಬಾಲಕರನು ಕಂಡು । ನೊಂದರು ಪುತ್ರರಿಲ್ಲೆಂದು ॥ ೭೬ ॥

ಅದ ಕೇಳಿ ನೃಪತಿಯಿಂತೆಂದು ನುಡಿದನಾಗ । ಇದಕೇಕೆ ಮಾನಿನಿ ಚಿಂತೆ ॥
ಮುದದಿಂದಲಿರು ಬಾಲಪ್ರಾಯವಲ್ಲದೆ ಯಿ- । ನ್ನುದಯಿಪ ಕುವರನು ಮುಂದೆ ॥ ೭೭ ॥

ಎಂದು ಕಾಂತೆಯ ಚಿಂತೆಯ ಪರಿದೀಡಾಡಿ । ಚಂದದಿಂ ರಸದಂಬುಲವ ॥
ಅಂದು ತಾಸಿರದಿತ್ತು ಚುಂಬಿಸಿ ಬಿಗಿಯಪ್ಪಿ । ಮಂದಗಮನೆಯ ಮುದ್ದಿಸುತ ॥ ೭೮ ॥

ಸರಸದೊಳಗೆ ಯುಕ್ತಿವಾತುಗಳನು ಪೇಳೆ । ಹರುಷದಿಂ ತಲೆಯನು ತಡಹಿ ॥
ಅರಸಿಯ ಸಂತೈಸಿ ಓಲಗಸಾಲೆಗೆ । ದೊರೆ ರನ್ನ ಬಂದು ಕುಳಿತನು ॥ ೭೯ ॥

ಅತ್ತ ನೃಪತಿಯಿರುತಿರಲಿತ್ತಲೋರ್ವನು । ಉತ್ತಮ ಸತ್ವ ಸಂಯುತನು ॥
ಗುಪ್ತಿತ್ರಯಧಾರಿ ಮುನಿರಾಜ ಕುಂಜರ । ಚಿತ್ತಶುದ್ಧಿಯೊಳು ತಾನಾಗ ॥ ೮೦ ॥

ದಕ್ಷಿಣ ಕರವ ಭುಜದೊಳಿಟ್ಟು ಜೀವಸು- । ರಕ್ಷಾನಿಮಿತ್ತ ಕುಂಚವನು ॥
ಲಕ್ಷಣವರಿದೆಡಗೈಲಿ ಗುಂಡಿಗೆಯಾಂತು । ಮೋಕ್ಷ ಪಾರಣೆಗೆ ತೆರಳಿದ ॥ ೮೧ ॥

ನೊಗದಂತರದ ಭೂಮಿಯ ಮುಂದೆ ನೋಡುತ । ಸುಗುಣಿ ಪಾಪವು ಬಾರದಂತೆ ॥
ನೆಗಪಿ ನೆಗಪಿ ಪಜ್ಜೆಗಳನಿಡುತಲಾಗ । ಸೊಗಯಿಪ ಕುಕ್ಕುಟನಂತೆ ॥ ೮೨ ॥

ಚಂದ್ರಮಂಡಲವು ಭೂಮಿಗೆಯವತರಿಸಿ ಮು- । ನೀಂದ್ರನ ರೂಪಾಂತುದೆನಲು ॥
ಚಂದ್ರಗತಿಯಲಿ ನಡೆದು ನಡೆದು ಯೋ- । ಗೀಂದ್ರ ಪುರದ ವೀಥಿಯೊಳು ॥ ೮೩ ॥

ಮನೆ ಮನೆದಪ್ಪದೆ ಕೆಲವು ಕೆಲವು ಹೊತ್ತು । ಮುನಿಕುಲತಿಲಕ ತಾನಿಲುತ ॥
ನನೆವಿಲ್ಲವೈರಿ ಶ್ರೀ ವರದತ್ತ ಮೋಕ್ಷನಾ- । ಗರಮನೆಯತ್ತ ಭಾಮರಿಯ ॥ ೮೪ ॥

ಸುರನರಪೂಜಿತನಿಟ್ಟು ಬರುವುದನಾ- । ಗರಸು ಕಾಣುತ ಶೀಘ್ರದೊಳು ॥
ಹರುಷದಿ ಬಂದು ನಮೋಸ್ತೆಂದು ನಿಲಿಸಿದ । ಕರಗಳ ಮುಗಿದು ಭಕ್ತಿಯೊಳು ॥ ೮೫ ॥

ಮೂರು ಸೂಳನು ಬಲವಂದು ತಿಷ್ಠತ ಎಂದು । ಧೀರ 'ನಮೋಸ್ತು'ನ ಮಾಡಿ ॥
ವಾರಿಶುದ್ಧಿಯನಿತ್ತು ಗೃಹಕ್ಕೊಡಗೊಂಡಾ । ಮಾರಸನ್ನಿಭನೈದಿದನು ॥ ೮೬ ॥

ಪನ್ನೀರಿನಿಂದ ಪಾದಂಗಳ ತೊಳೆದಾಗ । ತನ್ನ ಶಿರದಿ ತಳಿಕೊಂಡು ॥
ಉನ್ನತಾಸನದೊಳು ಕುಳ್ಳಿರಿಸಿ ಮುನಿಯ ಸಂ- । ಪನ್ನ ಪೂಜಿಸಿದನಡಿಗಳ ॥ ೮೭ ॥

ಮನವಚನಂಗಶುದ್ಧಿಯೊಳೊಳಗಾ ರಾಯ । ಮುನಿಗೆ ನಮೋಸ್ತು ತಾ ಮಾಡಿ ॥
ಅನುವೆತ್ತ ನವಪುಣ್ಯ ಸಪ್ತಗುಣಗಳಿಂದ । ಘನಪುಣ್ಯವಂತ ಸಂತಸದಿ ॥ ೮೮ ॥

ಸಕಲದೋಷೋಜ್ಝಿತ ದಿವ್ಯಾಹಾರವ- । ನಕಲಂಕ ಚರಿತಗೆ ರಾಯಂ ॥
ಭಕುತಿಯಿಂ ಸಿದ್ಧಭಕ್ತಿಯ ಪೇಳಿ ತುತ್ತನು । ಯುಕುತಿಯಿಂದಿಡಲಾ ವೇಳೆಯೊಳು ॥

ಜಯಘಂಟಿ ದಿಕ್ಕುದಿಕ್ಕಿನೊಳು ಬಾರಿಸೆಯಾಗ । ಜಯಘೋಷವೆಲ್ಲಿ ನೋಡಿದರು ॥
ನಯಶೀಲ ಮುನಿರಾಯ ತುತ್ತನೆತ್ತಿದನಾಗ । ಜಯ ಸಿದ್ಧಪರಮೇಷ್ಠಿ ಎಂದು ॥ ೯೦ ॥

ಸನ್ನುತ ಭಕ್ಷಗಳಿಂದ ಘೃತಗಳಿಂದ । ಪನ್ನೀರಿಂದನ್ನದಿಂದ ॥
ಚೆನ್ನ ಪಾನದ್ರವ್ಯಗಳಿಂದ ಯತಿಯ ಪ್ರ- । ಸನ್ನ ಹೃದಯವ ತಣಿಸಿದ ॥ ೯೧ ॥

ಕೈಯಲೆತ್ತುವ ಬಿನ್ನಾಣವನೇನೆಂಬೆ । ನಯದಯವಿನಯಗಳಿಂದ ॥
ಭಯಭಕ್ತಿಗೂಡಿ ಮುನಿಗೆಯನ್ನದಾನವ । ಸೈಯೆನೆ ಕೊಟ್ಟನಾ ಭೂಪ ॥ ೯೨ ॥

ಮುನಿಯುಂಡು ದಣಿದು ಕೈಗರ್ಚಿ ಜಿನೇಶನ । ವಿನಯದಿಂ ನೆನೆದು ಮತ್ತಾಗ ॥
ಮನದಕ್ಕರಿಂದಕ್ಷಯದಾನಫಲಮೆಂದು । ಜನಪತಿ ನುತಿಸಿ ಕುಳ್ಳಿರಲು ॥ ೯೩ ॥

ಪಂಚಮುಷ್ಟಿಗಳಿಂದಾರಾಯನಾಗ ನಿ- । ರ್ವಂಚಕಯತಿಯಡಿದಳಕೆ ॥
ಚಂಚಲವಿಲ್ಲದ ಮನದಿಂದೆರಗಲು । ಪಂಚಮಗತಿಯಾಗಲೆಂದು ॥ ೯೪ ॥

ರಾಣಿಯರೆಲ್ಲರು ಪಂಚಮುಷ್ಟಿಗಳಿಂದ । ಜಾಣ ಮುನಿಯ ಪಾದಯುಗಕೆ ॥
ಮಾಣದೆರಗಿ ಪರಸಿದ ಮುನಿರಾಯ ನಿ- । ರ್ವಾಣಪದವಿಯಕ್ಕೆಂದು ॥ ೯೫ ॥

ಪರಸಿ ಮುನೀಂದ್ರನು ಧರ್ಮಾಧರ್ಮವ । ನಿರವಿಸಲಾ ರಾಜೇಂದ್ರ ॥
ಕರಗಳ ಮುಗಿದು ಕೇಳುತ ಸಂತಸವೆಂಬ । ಶರಧಿಯೊಳೋಲಾಡುತಿರಲು ॥ ೯೬ ॥

ಮಾಣಿಕ್ಯ ಪುಷ್ಯಗೋಮೇಧಿಕ ಹವಳ ನೀ- । ಲಾಣಿ ಮೌಕ್ತಿಕ ಪದ್ಮರಾಗ ॥
ನಾಣೆಯ ವಜ್ರವೈಡೂರ್ಯದ ಮಳೆಗಳು । ಕ್ಷೋಣೀಶನ ಮುಂದೆ ಸುರಿಯೆ ॥ ೯೭ ॥

ಮಂದರದರಳು ಮಲ್ಲಿಗೆ ಪಾರಿಜಾತದ । ಚಂದ ಚಂದದ ಕುಸುಮಗಳು ॥
ಗಂಧವ ಪತ್ತು ದಿಕ್ಕಿಗೆ ವ್ಯಾಪಿಸುತಲೈ- । ತಂದು ಸುರಿದವಂಗಣದೊಳು ॥ ೯೮ ॥

ಸುರದುಂದುಭಿಯಾಕಾಶದೊಳಗೆಯಾಗ । ಸ್ವರದೋರಿ ದಿಕ್ತಟಗಳನು ॥
ಪರಿಪೂರ್ಣವಾಗಿ ತುಂಬಿತು ಎಂದೆನಲಾ । ವರದಾನ ಮಹಿಮೆ ಸದರವೇ ॥ ೯೯ ॥

ಸುರರೆಲ್ಲ ನೆರೆದಾಕಾಶದೊಳಗೆ ನಿಂದು । ಕರಗಳನೆತ್ತಿ ಲೀಲೆಯೊಳು ॥
ಸ್ವರವೆತ್ತಿಯಹೋ ! ಧಾತ ಜಯಜಯಾಹೋ ! ಪಾತ್ರ । ನಿರಘನಿರ್ಮಲರೆಂದು ಪೊಗಳೆ॥

ಸುರತರಂಗಿಣಿಯೊಕ್ಕು ತುಂತುರ್ವನಿಯಕೊಂಡು । ಸರಸಿಜದರಳೊಳು ಪೊರಳಿ ॥
ವರಶೈತ್ಯ ಸೌರಭ್ಯಮಾಂದ್ಯಗೂಡಿ ಬಂದು । ಮರುತ ತೀಡಿದುದು ಘಂಮೆಂದು ॥ ೧೦೧ ॥

ಈ ರೀತಿಯಿಂದ ಪಂಚಾಶ್ಚರ್ಯವಾಗೆ ಮ- । ತ್ತಾ ರಾಯ ಕಂಡು ಹರುಷವಾ ॥
ಸಾರಹೃದಯ ತಾಳಿ ಮುನಿಯ ಮಹಾತ್ಮ್ಯಕೆ । ಧೀರನಚ್ಚರಿವಡುತಾಗ ॥ ೧೦೨ ॥

ಮಗುಳಿ ಮುನೀಶಗೆರಗಿ ನೃಪ ತನ್ನಯ । ಸೊಗಯಿಪ ಕರಗಳ ಮುಗಿದು ॥
ಜಗದಾರಾಧ್ಯನೆ ಎನ್ನ ಬಿನ್ನಪವನು । ಬಗೆಗೆ ನೀ ತಂದು ಲಾಲಿಪುದು ॥ ೧೦೩ ॥

ಸುರನರೋರಗಪತಿ ಮುಕುಟತಾಟಿತಪಾದ । ವರಶಾಂತಿ ಜಿನಚಂದ್ರಮನ ॥
ಪರಮ ಸಂತಾನದಿ ಬಂದೆ ನಾನೀಗೆನ್ನ । ವರಸತಿಯಮಲಗರ್ಭದೊಳು ॥ ೧೦೪ ॥

ಕುರುವಂಶವ ಬೆಳಗುವ ಪುತ್ರಸಂತಾನ । ದೊರಕುವುದೋ ಬೋಧನಿಧಿಯೆ ! ॥
ನಿರವಿಸೆಂದೆನುತ ನುಡಿದ ನೃಪ ವಚನವ । ವರದತ್ತ ಮುನಿ ಕೇಳುತಲಿ ॥ ೧೦೫ ॥

ದಂತಪಂಕ್ತಿಗಳ ಕಾಂತಿಯ ಬಾಯಿದೆರೆಯ ದಿ- । ಗಂತ ಮುಸುಕಿಕೊಂಡಿರಲು ॥
ಕಂತುಮದಾಪಹರಣ ಮೃದು ವಚನದಿಂ- । ದಿಂತು ನುಡಿದನಾ ಯತಿಯು ॥ ೧೦೬ ॥

ಜಿನಚಂದ್ರ ನೃಪತಿ ! ಕೇಳೈ ನಿನ್ನ ಗರ್ಭದಿ । ಮನಸಿಜರೂಪಮಾರಾಂತ ॥
ಜನಪ ಮೇಘಾನಿಲ ಜಯಲಕ್ಷ್ಮೀ ವಲ್ಲಭ- । ನನುಪಮ ಕೀರ್ತಿ ಸಂಪನ್ನ ॥ ೧೦೭ ॥

ವಿನಯನಿದಾನ ವಿವೇಕ ವಿದ್ಯಾವಂತ । ವಿನಮಿತಜನಸುರಧೇನು ॥
ಘನ ಪುಣ್ಯವಂತ ಗಾಂಭೀರ್ಯರತ್ನಾಕರ- । ನನುಪಮಗುಣಗಣಾಭರಣ ॥ ೧೦೮ ॥

ಕವಿಜನಕಲ್ಪಭೂರುಹ ಹಸ್ತಿ ಸಮದಾನಿ । ರವಿಗೆ ಸಮಾನ ತೇಜಸ್ವಿ ॥
ಭುವನಭುಂಭುಕನರು ತಿಂಗಳಿಗೋರ್ವನು । ಕುವರ ಪುಟ್ಟುವ ನಿನ್ನಿಯದಕೆ ॥ ೧೦೯ ॥

ಕುರುಹ ಕೇಳೆಲೆರಾಯ ! ಪದಿನೈದು ದಿನಕೋರ್ವ । ಸುರಪುರಗಿರಿಗೈತಂದು ॥
ವರಜಿನಭವನವ ಪೊಕ್ಕು ಜಿನೇಶಗೆ । ಕರಗಳ ಮುಗಿದು ಭಕ್ತಿಯೊಳು ॥ ೧೧೦ ॥

ಅಷ್ಟವಿಧಾರ್ಚನೆಯನು ಮಾಡಿ ನಮಿಸಿ ವಿ- । ಶಿಷ್ಟ ತನ್ನಯ ಲೋಕಕ್ಕಾಗಿ ॥
ತಟ್ಟನೆ ತೆರಳಬೇಕೆಂಬ ವೇಳೆಯದೊಳು । ದಿಟ್ಟ ನಿನ್ನಲ್ಲಿಗೆ ಬಂದು ॥ ೧೧೧ ॥

ವಿನಯದಿಂ ಕೈಗಳ ಮುಗಿದೆಲೆ ಜಿನಚಂದ್ರ । ಜನಿಸುವ ನಿನ್ನುದರದೊಳು ॥
ಎನುತ ತೊಡವ ನಿನಗಿತ್ತಾ ತ್ರಿದಶನು । ಘನ ಸುಪಥಕೆ ಲಂಘಿಸುವನು ॥ ೧೧೨ ॥

ಅವನಿಪ ! ಕೇಳು ನೀನಿಲ್ಲಿಂದ ಮೂರನೆ । ಭವದೊಳು ಘಾತಿಕರ್ಮವನು ॥
ತವೆ ನುಗ್ಗುಗುಟ್ಟಿ ಶುಕ್ಲಧ್ಯಾನ ಬಲದಿಂದ । ಭವದೂರ ಕೇವಲಿಯಾಗಿ ॥ ೧೧೩ ॥

ಧನದ ನಿರ್ಮಿತ ಗಂಧಕುಟಿಯಲ್ಲಿ ನಿಂದಿರ್ದ- । ವಸಿಯೊಳ್ ಧರ್ಮಾಮೃತವ ॥
ಅನುವಾಗಿ ಕರೆದು ಅಘಾತಿಕರ್ಮವ ಸುಟ್ಟು । ವಿನುಗವ ಮುಕ್ತಿಯ ಪಡೆವೆ ॥ ೧೧೪ ॥

ಇಂತು ನಿರೂಪಿಸಿ ರಾಯನ ಚಿತ್ತದ । ಚಿಂತೆಯ ಪರಿದೀಡಾಡಿ ॥
ಸಂತೋಷವೆಂಬ ಕೂಪಾರದಿ ಮುಳುಗಿಸಿ । ಕಂತುಮರ್ದನ ತಾ ಪರಸಿ ॥ ೧೧೫ ॥

ವರದತ್ತ ಮುನಿರಾಯ ತೆರಳಿ ಪೋಗುತಲಿರೆ । ನರನಾಥ ಪಿಂತವೆ ಪೋಗಿ ॥
ಮರಳಿ ಮರಳಿ ವಂದಿಸಿ ಬೀಳ್ಕೊಂಡು ತಾ । ಕಿರಿದು ಹೊತ್ತಲ್ಲಿ ನಿಂದಿರ್ದು ॥ ೧೧೬ ॥

ಮುನಿಯತ್ತ ತೆರಳಲು ರಾಯ ಕೈಮುಗಿದಿತ್ತ । ಮನವೆಂಬ ಕಾಸಾರದೊಳು ॥
ಮುನಿಯಂಘ್ರಿ ಕಮಲವನಿಟ್ಟು ತೆರಳಿದ ನಾ- । ಗನುಪಮಗುಣಿ ತನ್ನ ಪುರಕೆ ॥ ೧೧೭ ॥

ಅರಮನೆಯನು ಪೊಕ್ಕು ರಾಣಿವಾಸಿಯರೊಳು । ವರದತ್ತ ಮುನಿಯ ನುತಿಸುತ ॥
ಹರುಷದಿಂ ಭೂಪ ಕುಳ್ಳಿರುವಾಗ ಪಟ್ಟ- । ದರಸಿ ಬಿನ್ನವಿಸಿದಳಿಂತು ॥ ೧೧೮ ॥

ಆರೋಗಣೆಗೆ ವೇಳೆಯವಾಯಿತೆನಲಾ । ಮಾರಸನ್ನಿಭ ಜಿನಚಂದ್ರ ॥
ಚಾರುಮೌಕ್ತಿಕದ ಹಾವುಗೆಯನು ತಾ ಮೆಟ್ಟಿ । ಭೂರಮಣೇಶ ನಡೆಯಲು ॥ ೧೧೯ ॥

ಸಿರಿಕಾಂತಾದೇವಿ ಕೈಲಾಗ ಬೆಡಗಿಂ- । ದರಸಗೆ ಕೊಡಲು ಗಾಡಿಯೊಳು ॥
ಬಿರುದಾವಳಿಯ ನೀರೆಯರುಪ್ಪಡಿಸಲು । ನರನಾಥ ನಡೆತಂದನಾಗ ॥ ೧೨೦ ॥

ಪಟ್ಟದರಸಿಯಲ್ತೆ ಚದುರಿಂದ ತಾನಾಗ । ಪಟ್ಟೆ ನಿವಾಳಿಯನಿಟ್ಟು ॥
ಮುಟ್ಟಿ ಕೈಯಾರೆ ಪನ್ನೀರಿಂದ ಪಾದವ । ಹೆಟ್ಟುಗೆ ತೊಳೆದು ಗಮಕದಿಂ ॥ ೧೨೧ ॥

ಕಣ್ಣು ಮೂಗಿಗೆ ನೀರತೆಗೆದೊತ್ತಿಕೊಂಡಾಗ । ಹೆಣ್ಣುಗಳರಸಿ ದುಗುಲದಿ ॥
ಬಣ್ಣಿಸಿಯಂಗದಟ್ಟಕ್ಕಿಯಾರತಿಯನು । ಹೆಣ್ಣುಗಳಿಂದೆತ್ತಿಸಿದಳು ॥ ೧೨೨ ॥

ಚೆಲುವೆ ಕೈಲಾಗದಿಂ ಬಿಜಮಾಡಿ ಸೊಳಯಿಂಕೆ । ತೊಳೆದ ದುಗುಲ ಪಟ್ಟೆ ಕೊಡಲು ॥
ಫಳಿಲನೆ ಹೊದೆದಾರೋಗಣೆಯನು ಮಾಳ್ಪ । ನಿಳಯಕೆ ಬಂದನಾ ರಾಯ ॥ ೧೨೩ ॥

ನವರತ್ನ ನಿರ್ಮಿತ ಭದ್ರಾಸನದಲ್ಲಿ । ಭುವನೇಶ ಬಂದು ಕುಳ್ಳಿರಲು ॥
ಯುವತಿಯೋರ್ವಳು ನೀಲದಟ್ಟಣಿಕೆಯ ಮೇಲೆ । ನವಸ್ವರ್ಣಪಾತ್ರವನಿರಿಸೆ ॥ ೧೨೪ ॥

ಇಕ್ಕೆಲದೊಳು ಬೆಳ್ಳಿಚಿನ್ನದಿಂ ಸಮೆದಿರ್ದ । ಚೊಕ್ಕ ಬಟ್ಟಲುಗಳನಿರಿಸಿ ॥
ಅಕ್ಕರುವಿಗೆ ತೊಳದಳವಡಿಸಾಯಕ । ಗಕ್ಕನೆ ತೆರಳಿದಳಾಗ ॥ ೧೨೫ ॥

ವನಿತೆ ಶ್ರೀಕಾಂತಾದೇವಿಯ ಕರೆಯಿರೋ । ಕನಕಲತೆಯ ಕರತನ್ನಿ ॥
ಜಿನಮತಿ ಜ್ಯೋತಿರ್ಮಾಲೆಯ ಬರಹೇಳೋ । ವನಜಲತೆಯ ಬೇಗ ಕರೆಸಿ ॥ ೧೨೬ ॥

ಮದನಮಂಜೂಷೆಯ ಮಂಜುಲಘೋಷೆಯ । ಚದುರೆ ಲಕ್ಷ್ಮೀಮತಿಯನ್ನು ॥
ಸುದತಿ ಸುಲೋಚನೆ ರೋಹಿಣಿ ರುಕ್ಮಿಣಿ । ಬೆದರ್ವುರ್ಗಣ್ಣಿಗಣ್ಣ ದ್ರೌಪದಿಯ ॥ ೧೨೭ ॥

ತರುಣಿ ಶ್ರೀ ಬಂಧುಮತಿಯ ಗುಣವತಿಯನು । ಹರಿಮಧ್ಯೆರತ್ನಮಾಲೆಯನು ॥
ಗರುವೆ ಪದ್ಮಾವತಿ ಮುಂತಾದ ಹೆಂಗಳ । ಕರೆತನ್ನಿರೊ ಸಖಿಜನರೇ ॥ ೧೨೮ ॥

ದೊರೆಯಿಂತೆಂದು ನಿರೂಪಿಸಲೆಲ್ಲರ । ಕರೆಯಲು ಪಟ್ಟದ ರಾಣಿ ॥
ಹರುಷದಿಂದೊಡಗೊಂಡು ಬಂದು ರಾಯಗೆ ಕೈಯ- । ನ್ನರಸಿಯರ್ಮುಗಿಯೆ ಬೆಡಗಿನಿಂ ॥

ಜನಪತಿ ಕಡೆಗಣ್ಣ ಕೊನೆಯಿಂದ ರಾಣೀರ । ಬಿನದದೊಳಗೆ ನೋಡಿ ನುಡಿದ ॥
ಮುನಿಯ ಶೇಷಾನ್ನವ ಸಹಪಂಕ್ತಿಯೊಳಾವು । ಉಣಬೇಕು ಬನ್ನಿರೌ ಎಂದ ॥ ೧೩೦ ॥

ಯತಿಯ ಶೇಷಾನ್ನವ ದೇವರುಣ್ಣಲು ನಾವು । ಯತಿಪತಿ ಶೇಷಾನ್ನವನು ॥
ಅತಿಶಯದಿಂದ ಬಳಿಕ ಉಂಬೆವು ಎಂದು । ಸತಿಯರಾಡಿದರೊಗ್ಗಿನಲಿ ॥ ೧೩೧ ॥

ಮುನಿಯುಂಡ ಶೇಷಾನ್ನ ಪುತ್ರಸಂತಾನಕೆ । ಘನಪಿಂಡ ಬೀಜವಿದೆಂದು ॥
ಸನುಮಾನಿಸೆ ರಾಯ ಬಂದೆಲ್ಲ ಸಾಲಾಗಿ । ವನಿತೆಯರಾಗ ಕುಳಿತರು ॥ ೧೩೨ ॥

ಕನ್ನೆಯರಾಗ ಸಿಂಗರವಾಗಿ ಬೆಡಗಿಂದ । ಚಿನ್ನದ ಕೆಲವಟ್ಟಲುಗಳ ॥
ಗನ್ನಗಮಕದಿಂದ ಕೈಲಳವಡಿಸಿ ಸಂ- । ಪನ್ನೆಯರ್ಪಂಕ್ತಿ ತಿದ್ದಿದರು ॥ ೧೩೩ ॥

ಬೆಲ್ಲಗಾಯಿಗಳನು ಸಾಸಿವೆಗಾಯಿಗ- । ಳಲ್ಲದೆ ಕೊನೆಯುಪ್ಪು ಶುಂಠಿ ॥
ಕಲ್ಲುಪ್ಪು ಮಾದಳಕಾಯುಪದಂಶವ । ಚಲ್ಲೆಗಂಗಳೆಯರಿಕ್ಕಿದರು ॥ ೧೩೪ ॥

ಚೆಳ್ಳೆಯಕಾಯಿ ನಿಂಬೆಯ ಹುಳಿಹಣ್ಣನು । ಉಳ್ಳಿ ಮಾವಿನಕಾಯಿಗಳನು ॥
ಮುಳ್ಳುಸೌತೆಕಾಯ ಪಚ್ಚಡಿಯನು ತಂದು । ತಳ್ಳೋದರಿಯರಿಕ್ಕಿದರು ॥ ೧೩೫ ॥

ಮಿಡಿ ಹಾಗಲು ಗುಳ್ಳ ತೊಂಡೆ ಬದನೆ ನುಗ್ಗೆ । ಕಡು ರುಚಿಯಾದ ಕೂಷ್ಮಾಂಡ ॥
ಕದಲಿಯವರೆ ಹೀರೆಕಾಯ ಶಾಕಂಗಳ । ಮಡದಿಯರಿಕ್ಕಿದರೊಲಿದು ॥ ೧೩೬ ॥

ಕರಜಿಗೆಕಾಯತಿರಸ ಮನೋಹರದುಂಡೆ । ತರಗು ಚಕ್ಕುಲಿ ಬೀಸುರಿಗೆಯ ॥
ಗರುಗದ ಮುತ್ತಿನ ಸರವುದ್ದಿನೊಡೆಗಳ । ತರುಣಿಯರಿಕ್ಕಿದರಾಗ ॥ ೧೩೭ ॥

ಅಕ್ಕಿಯ ಪಾಯಸ ಸಜ್ಜಿಗೆ ಪಾಯಸ । ಚೊಕ್ಕ ಗೌಲಿಯ ಪಾಯಸವನು ॥
ಇಕ್ಕಿ ಹಾಲೆರೆದು ಸಕ್ಕರೆ ಬಡಿಸಿದರಾಗ । ಸೊಕ್ಕು ಜವ್ವನೆಯರು ಸೊಗಸಿಂ ॥ ೧೩೮ ॥

ಜಳಜಗಂಧದ ಪರಿಮಳದಕ್ಕಿಯನ್ನವ । ತಿಳಿದುಪ್ಪವನು ಹಪ್ಪಳವನು ॥
ನಳಿನಳಿಸುವ ಚೊಕ್ಕ ತೊಗರಿಯ ತೋವೆಯ । ನಳಿನಾಕ್ಷಿಯರಿಕ್ಕಿದರು ॥ ೧೩೯ ॥

ಕುಂಬಳ ಸಂಡಿಗೆ ಪಳಿದ್ಯ ಮುಂತಾದುವ- । ನಂಬುಜಾಕ್ಷಿಯರಿಕ್ಕಲಾಗ ॥
ಕುಂಭಿನೀಪತಿ ಕಣ್ಣಸನ್ನೆಯಿಂ ತನ್ನಯ । ಬಿಂಬಾಧರೆಯರ ನೋಡೆ ॥ ೧೪೦ ॥

ಯತಿಯ ಶೇಷಾನ್ನವನಿಕ್ಕಿದ ಬಳಿಕೆಮ್ಮ । ಪತಿಯ ಶೇಷಾನ್ನವ ನಾವು ॥
ಅತಿಶಯದಿಂದುಣ್ಣಬೇಕೆಂದು ಸುಮ್ಮನಾ । ಸತಿಯರು ಕುಳಿತಿರಲಾಗ ॥ ೧೪೧ ॥

ಜನಪನವರ ಮೊಗ ನೋಡಿ ಮುಗುಳ್ನಗೆ । ಮಿಸುಗುತ ಶೇಷಾನ್ನವನು ॥
ವನಿತೆಯರಿಗೆ ಇಕ್ಕಿಸಲಾಗ ಜಯಘಂಟೆ । ನಿನದವುಣ್ಮಿತು ಢಣರೆಂದು ॥ ೧೪೨ ॥

ವರಪಂಚಗುರುಗಳ ನೆನೆದುಕೊಳುತ ಮತ್ತೆ । ವರದತ್ತ ಮುನಿಯ ಪಾದವನು ॥
ಸ್ಮರಿಸುತ ತುತ್ತನೆತ್ತಲು ರಾಯನದ ಕಂ- । ಡರಸಿಯರುಣತೊಡಗಿದರು ॥ ೧೪೩ ॥

ಕಾಜ್ಜಾಯದ ಸ್ವಾದ ನೋಡುತಲೊಮ್ಮೆ ನೀ- । ರ್ಮಜ್ಜಿಗೆಯೀಂಟುತಲೊಮ್ಮೆ ॥
ಸಜ್ಜಿಗೆ ಪಾಯಸವನು ಸುರಿಯುತಲೊಮ್ಮೆ । ಸಜ್ಜಾಯುತ್ತ ಪಾಯಸವೆನುತ ॥ ೧೪೪ ॥

ತಾಳಿದ ಸ್ವಾದನ ನೋಡುತಲೊಮ್ಮೊಮ್ಮೆ । ಮೇಳೈಸಿ ತೋವೆಯನ್ನವನು ॥
ಹೇಳುವೆನೇನ ತುಪ್ಪವ ಮಿಶ್ರವ ಮಾಡಿ- । ಯಾ ವೇಳೆ ಭುಂಜಿಪನರಸು ॥ ೧೪೫ ॥

ಒಮ್ಮೊಮ್ಮೆ ರಾಣಿವಾಸದ ಮೊಗ ನೋಡುತ- । ಲೊಮ್ಮೊಮ್ಮೆ ತುತ್ತನೆತ್ತುತ್ತ ॥
ಒಮ್ಮೊಮ್ಮೆ ಪಾನಪನ್ನೀರನೀಂಟುತಲಾಗ । ಸುಮ್ಮಾನದಿಂದುಂಡು ದಣಿದ ॥ ೧೪೬ ॥

ಒಮ್ಮೊಮ್ಮೆ ಚಿಲುಪಾಲ ಬಟ್ಟುವಾಲುಗಳಸು । ಒಮ್ಮೊಮ್ಮೆ ಕೆನೆವಾಲನೀಂಟೆ ॥
ಒಮ್ಮೊಮ್ಮೆ ಕೆನೆಮೊಸರೊಳಗೆ ಕಳಮೆಯಿಕ್ಕಿ । ಕಮ್ಮಸುಪ್ಪನ್ನವ ಕಲಸಿ ॥ ೧೪೭ ॥

ಸುಮ್ಮಾನದಿಂ ತುತ್ತನೆತ್ತುತ ಮಾವಿನ । ಕಮ್ಮನಪ್ಪುಪದಂಶಕವ ॥
ಒಮ್ಮೊಮ್ಮೆ ನೆಂಚುತ ಜಿನಚಂದ್ರ ಭೂಪಾಲ । ಹೆಮ್ಮೆಯಿಂದುಂಡು ತಾ ದಣಿದು ॥ ೧೪೮ ॥

ಕೈಗರ್ಚಿ ಜಿನರ ನೆನೆದು ಪಟ್ಟಸಾಲಿಗೆ । ರಾಗದಿಂ ಬಂದು ವಿಷ್ಟರದಿ ॥
ಭೋಗಿಗಳರಸ ಕುಳ್ಳಿರಲಷ್ಟರೊಳಗತ್ತ । ಬೇಗದಿಂ ರಾಣಿಯರುಗಳು ॥ ೧೪೯ ॥

ಹರುಷದಿಂ ಕೈಗಳ ತೊಳೆದು ಸುಮ್ಮಾನದಿಂ- । ದರಸಿಯರೆಲ್ಲರು ಬಂದು ॥
ಅರಸಗೆ ಕೈಗಳ ಮುಗಿದು ಬಿನ್ನಾಣದಿ । ದೊರೆಯ ಬಳಸಿಕೊಂಡು ಕುಳಿರೆ ॥ ೧೫೦ ॥

ಸಿರಿಕಾಂತಾದೇವಿ ಬೆಳ್ಳೆಲೆಯ ಫಳಿಗೆಯ ತಾ- । ನರಸಗೆ ನೀಡುತ ಬೆಡಗಿಂ ॥
ದರಹಸಿತಾನನೆ ಕಡೆಗಣ್ಣ ಕೊನೆಯಿಂ- । ದರಸನ ನೋಡುತಲಿಹಳು ॥ ೧೫೧ ॥

ಸರಸವಿನೋದವನರಸಿಯರೊಳು ರಾಯ । ಹರುಷದಿಂ ಸವಿಮಾತನಾಡಿ ॥
ವರಸುಖಶರಧಿಯೊಳೋಲಾಡುತಲಿರ್ದ । ಪರಮಲೀಲೆಯೊಳು ರಾಜೇಂದ್ರ ॥ ೧೫೨ ॥

ಜಿನಮತಕಮಲಮಾರ್ತಾಂಡ ಸೊಕ್ಕಿದ ವೈರಿ- । ಜನಪತಿ ಕದಳೀವೇತಂಡ ॥
ಅನುಪಮಗುಣಿ ಜಿನಚಂದ್ರನೊಪ್ಪಿದ ಗಂಡ । ಘನಪುಣ್ಯವಂತನುದ್ದಂಡ ॥ ೧೫೩ ॥

— ಸಮಾಪ್ತಂ — ೩೩೦

# ಜ್ಞಾನಚಂದ್ರೋದಯ.

ಬಣ್ಣಿಸುವೆನು ಜ್ಞಾನಚಂದ್ರನುದಯಿಸುವ । ಪುಣ್ಯದೇಳಿಗೆಯ ಲಾಲಿಪುದು ॥ ಪ ॥

ಮೂಲೋಕದೊಳುಳ್ಳ ಸಕಲ ಪದಾರ್ಥವ । ಲೀಲಾಮಾತ್ರದಿ ಕಂಡು ತಿಳಿದು ॥
ಮೂಲೋಕಕೆ ಪೇಳಿದ ಶಾಂತಿಜಿನಚಂದ್ರ । ಪಾಲಿಸೆನಗೆ ಮುಕ್ತಿಯನು ॥ ೧ ॥

ಪಟ್ಟೆರ್ದು ನಿಮಿಷ ಮಾತ್ರದಿ ನಿದ್ರೆ ಹರಿಯಲು । ಬಟ್ಟ ಮೊಗವನೊಮ್ಮೆ ತೊಳೆದು ॥
ಇಟ್ಟು ಕತ್ತುರಿಯ ತಿಲಕವನಾಭರಣವ । ತೊಟ್ಟು ದುಕೂಲವ ಹೊದೆದು ॥ ೨ ॥

ಮೆಟ್ಟಿ ಮುತ್ತಿನ ಹಾವುಗೆಯನು ಜಿನಚಂದ್ರ । ದಿಟ್ಟನಾಸ್ಥಾನಮಂಟಪಕೆ ॥
ಭಟ್ಟರು ಪೊಗಳುತಲಿರೆ ಪೋಗಿ ಸಿಂಹ ಸು- । ವಿಷ್ಟರದೊಳಗೆ ಕುಳಿತನು ॥ ೩ ॥

ಮೊಳಗಿತು ವಾದ್ಯ ಕೋಟಾಕೋಟಿರವವಲ್ಲಿ । ಇಳೆಯಾಣ್ಮರಾಗೆಲ್ಲ ಬಂದು ॥
ತುಳಿಲು ಗೆಯ್ದು ಸಾಲು ಸಾಲಾಗಿ ನಿಂದರು । ಜಲಧಿಯಂದದ ಗಂಭೀರದೊಳು ॥ ೪ ॥

ಮಂಡಳೀಕರು ಕರಣಿಕರು ಸಾಮಂತರು । ದಂಡನಾಯಕರು ಮಂತ್ರಿಗಳು ॥
ಕಂಡು ರಾಯಗೆ ಕೈಯ ಮುಗಿದು ನಿಂದರು ಪ್ರ- । ಚಂಡರೊಂದೆಡೆಯೊಳಗಾಗ ॥ ೫ ॥

ಕೋಟಿಭಟರು ಲಕ್ಷಭಟರು ಮನ್ನೆಯರು ಕಿ- । ರೀಟಪತಿಗಳು ನಾಯಕರು ॥
ತಾಟಿಸಿ ರಾಯನ ಪದಕೆ ಮಂಡೆಗಳ ಸ- । ಘಾಟಿಕೆಯೊಳು ನಿಂದರಾಗ ॥ ೬ ॥

ವಾದಿಗಳ್ವಂದಿಜನರು ವಿದ್ವಾಂಸರ್ವಿ- । ನೋದಿಗಳಿಂದ್ರಜಾಲಿಗಳು ॥
ಮೇಧಿನೀಶ್ವರಗೆ ಕೈಮುಗಿದು ನಿಂದರು ಪ್ರ- । ಮೋದವ ತೋರುತಲಾಗ ॥ ೭ ॥

ಕವಿಗಮಕಿಗಳು ಗಾಯಕರು ನಟುವರ್ಗಳು । ಪವನವಿದ್ಯೆಯನಾಡುವವರು ॥
ಭುವನೇಶ್ವರಗೆ ಕೈಮುಗಿದು ನಿಂದರು ಮತ್ತೆ । ಸವಿನಯದಿಂದೊಂದೆಡೆಯೊಳು ॥ ೮ ॥

ಓಲಗವೆಣ್ಣಳು ಶೃಂಗಾರವನಾಂತು । ಲೀಲೆಕೈಮಿಗೆ ನಡೆತಂದು ॥
ಭೂಲಲನೇಶಗೆರಗಿ ನಿಂದರು ಬೇಗ । ಸಾಲಭಂಜಿಗಳ ಮಾಳ್ಕೆಯೊಳು ॥ ೯ ॥

ಆ ವೇಳೆಯೊಳು ಶ್ರೀಕಾಂತಾದೇವಿಯು । ಭಾವಕಿ ಸಿಂಗಾರವಾಂತು ॥
ಕೋವಿದೆ ಕೆಳದಿಯರುಗಳ ಒಗ್ಗಿಲಿ ಬಂದು । ತೀವಿದ ಸಂತೋಷದಿಂದ ॥ ೧೦ ॥

ಜಿನಚಂದ್ರ ನೃಪತಿಯು ಬೆಂಗಡೆಯೊಳು ತಾ- । ನನುಪಮ ಸುಪ್ಪತ್ತಿಗೆಯೊಳು ॥
ಮಿಸುಗುವ ತೆರೆಯ ಮರೆಯಲಿ ವಿನೋದದಿಂ । ಘನಕುಚೆ ಕುಳಿತಳೇನೆಂಬೆ ॥ ೧೧ ॥

ಕಂಕಣ ಝುಣಝುಣರೆನೆ ಇಕ್ಕೆಲದೊಳು । ಪಂಕಜಾಕ್ಷಿಯರು ಚಾಮರವ ॥
ಬಿಂಕದಿಂ ಢಾಳಿಸೆ ಕರ್ವಿಲ್ಲನ ಬಿಲ್ಲ । ಠಂಕಾರದಂತಿಪುದುಲುಹು ॥ ೧೨ ॥

ಉಭಯ ಚಾಮರಗಳ ನಡುವೆಯೋಲಗಗೊಟ್ಟು । ಪ್ರಭುಕುಲಶೇಖರನೆಸೆದ ॥
ಸ್ವಭು ರತ್ನಾಕರ ವೀಚಿಯ ಮಧ್ಯದೊ- । ಳಭಿರಾಜಿಸುವಂತೊಪ್ಪಿದನು ॥ ೧೩ ॥

ಕರಗಕಾಳಂಚಿ ಹಡಪಗಿಂಡಿ ಡವಕೆಯ । ವರತಾಲವೃಂತ ಕನ್ನಡಿಯ ॥
ಗುರುಕುಚೆಯರು ದತ್ತಾವಧಾನದೊಳಾಂತು । ಅರಸನ ಬಳಸಿ ನಿಂದಿಹರು ॥ ೧೪ ॥

ರಂಭೆಯೂರ್ವಶಿಯರ ಜರೆವ ಸೊಬಗನು- । ಳ್ಳಂಬುಜಾಕ್ಷಿಯರ ನರ್ತನವ ॥
ಇಂಬಿನಿಂ ನೋಡುತ ಗಾನವ ಕೇಳುತ । ಕುಂಭಿನೀಪತಿಯೊಪ್ಪಿಹನು ॥ ೧೫ ॥

ಅಷ್ಟವಧಾನ ಪರಾಕು ಎಚ್ಚರಿಕೆ ವಿ- । ಶಿಷ್ಟ ಜತನ ಜೀಯ ಎನಲು ॥
ಕಟ್ಟಿಗೆಗಾರರು ಸದಸಿಯೊಳಗೆ ಮನ- । ಮುಟ್ಟಿಯುಗ್ಗಡಿಸುವರಾಗ ॥ ೧೬ ॥

ಗುರುಬುಧಕವಿಕಲಾಧರರುಗಳಿಂದಲಿ । ಪರಿವೇಷ್ಟಿಸಿ ರಾಜೇಂದ್ರ ॥
ಇರುತಿರ್ದನೆಂತೆನೆ ಸೌಧರ್ಮ ಸಭೆಯೊಳಾ । ಸುರಪ ಲೀಲೆಯೊಳಿರುವಂತೆ ॥ ೧೭ ॥

ತಾರಾಗಣದ ಮಧ್ಯದೊಳು ರಾರಾಜಿ- । ಪಾ ರೋಹಿಣಿಪತಿಯಂತೆ ॥
ಭೂರಮಣೀಶರ ನಡುವೆಯೋಲಗಗೊಟ್ಟು । ಧೀರ ಶ್ರೀ ಜಿನಚಂದ್ರನಿಹನು ॥ ೧೮ ॥

ವರದತ್ತ ಮುನಿಯತಿಶಯದಿಂದ ಸುರಿದಿರ್ದ । ನವರತ್ನರಾಶಿಯನರಸ ॥
ಪುರಜನಂಗಳಿಗಿರಲೆಂದು ಡಂಗುರವನು । ಹರುಷದಿಂ ಪೊಯ್ಸಿದನಾಗ ॥ ೧೯ ॥

ಪುರಜನಂಗಳು ಡಂಗುರದ ರವವ ಕೇಳಿ । ತ್ವರಿತದಿಂ ನೆರೆದೆಲ್ಲ ಬಂದು ॥
ಅರಮನೆಯಂಗಣದೊತ್ತಿಲಿ ಸುರಿದಿರ್ದ । ನವರತ್ನ ರಾಶಿಯ ಕಂಡು ॥ ೨೦ ॥

ಹೆಡಿಗೆ ಹೆಡಿಗೆ ಮೊರ ಮೊರ ತಮ್ಮಯದೊಂದು । ಮಡಿಲು ಮಡಿಲುಗಳ ತುಂಬಿ ॥
ಸಡಗರವಿಗೆ ಹೊತ್ತುಕೊಂಡೋಡಿ ಸುರಿದು ಮ- । ತ್ತಡಿಯಿಡುವರು ಬೇಗದಿಂದ ॥ ೨೧ ॥

ಮುಪ್ಪಿನವರುಗಳೇಳುತ ಬೀಳುತ ಬಂ- । ದಪ್ಪಂದಿರ ರನ್ನವಿರುವ ॥
ನೆಪ್ಪ ನಮಗೆ ತೋರಿಗೊಡಿಯೆಂದು ಬಾಯ್ಗಳ । ಚಪ್ಪರಿದಾಡಿ ಸುಡಿವರು ॥ ೨೨ ॥

ಚಿಗವಾರ ದೊಡ್ಮಾರ ಮಕ್ಕರಿಗಳ ಕೊಂಡು । ಮಗದೀರ ಬನ್ನೀಚೆಗೆಂದು ॥
ನೆಗವಿ ನೆಗವಿ ಕೈಯನೆತ್ತಿ ಕೂಗುವರಲ್ಲಿ । ಮುಗುದೆ ಹೆಂಗಳು ಕೆಲರಲ್ಲಿ ॥ ೨೩ ॥

ಮೇಲುಸೆರಗು ಜಾರಿ ಹೋದುದನರಿಯದೆ । ಬಾಲಕಿಯರು ಕೆಲರಲ್ಲಿ ॥
ಮೇಲುರನ್ನವ ಹೊತ್ತುಕೊಂಡೋಡುವುದನು । ಓಲಗದವರ್ಕಂಡು ನಗಲು ॥ ೨೪ ॥

ಕೆಲರು ವೃದ್ಧೆಯರು ಕೋಲೂರಿ ಕೊಂಡಾಗಲ್ಲಿ । ತಲೆಯ ನಡುಗಿಸುತ ಬರಲು ॥
'ಹೊಲಗೆಟ್ಟ ಮೂಳಿ ನೀ ಸಾರೆ'ಂದು ಕೆಳನೂಂಕಿ। ಕುಲಟೆಯರೋಡಿ ಪೋಗುವರು ॥ ೨೫ ॥

ನಮ್ಮ ದಾರಿದ್ರವೆಲ್ಲವು ಓಡಿ ಹೋದುದು । ಸುಮ್ಮಾನದೊಳಗೀ ರಾಯ ॥
ಮೊಮ್ಮಕ್ಕಳ ಮರಿಮಕ್ಕಳುಗಳನೆತ್ತಿ । ಬ್ರಹ್ಮಾಂಡಕಾಲ ಬದುಕಲಿ ॥ ೨೬ ॥

ಎನುತಾಗ ಕೇರಿ ಕೇರಿಗಳೊಳು ಜನಗಳು । ಘನರವದಲ್ಲಿ ನುತಿಸುತ ॥
ನನಗೆ ತನಗೆ ಎಂದು ಬೇಗ ಬೇಗದಿ ತುಂಬಿ । ಮನೆ ಮನೆಗೊಯ್ವರು ಮುದದಿ ॥ ೨೭ ॥

ಅರಸು ತಮ್ಮಯ ಜನಪದದ ಸಂಭ್ರಮಗಂಡು । ಹರುಷವ ತಾಳಿ ಮನದೊಳು ॥
ದರಹಸಿತಾನನನಾಗಿ ಜಿನೇಶನ । ಸ್ಮರಿಸುತ ಸುಖದೊಳಗಿರಲು ॥ ೨೮ ॥

ಅತ್ತಲೋರ್ವನು ದಿವಿಜನು ದಿವದಿಂ ಬಂದು । ಉತ್ತಮ ದ್ವ್ಯರ್ಧದ್ವೀಪದೊಳು ॥
ಬಿತ್ತರದೊಳಗುಳ್ಳ ಜಿನರ ಪೂಜಿಸುತಲಾ- । ಗರ್ತಿಯಿಂ ಸುರಗಿರಿಗೆಯ್ದು ॥ ೨೯ ॥

ಪದಿನಾರು ಜಿನಗೃಹಗಳ ತಾ ಬಲವಂದು । ಮದನಾರಿ ಜಿನಪತಿಗೆರಗಿ ॥
ಮುದದಿಂದ ಅಷ್ಟವಿಧಾರ್ಚನೆಯನು ಮಾಡಿ- । ಯೊದವಿದ ಭಯಭಕ್ತಿಯಿಂದ ॥ ೩೦ ॥

ಮರಳಿ ಮರಳಿ ಸ್ತೋತ್ರವ ಮಾಡಿ ಬೀಳ್ಕೊಂಡು । ತೆರಳಿ ಪೋಗುತ ಸ್ವರ್ಣಪುರಕೆ ॥
ಭರದಿಂದಾಕಾಶಮಾರ್ಗದಿ ಬರುತಿರಲಿ- । ತ್ತರಸು ಗಗನದತ್ತ ನೋಡೆ ॥ ೩೧ ॥

ದಿವದೊಳಗಿಂದು ಎರಡು ರವಿ ಬಿಂಬವ- । ನವಿರಳದೊಳು ಕಂಡೆನೆಂದು ॥
ಸವಿನಯದಿಂ ನೋಡಿ ನೋಡಿ ಎಂದೆಲ್ಲರ್ಗೆ । ಭುವನೇಶ ತೋರೆ ಕೌತುಕವ ॥ ೩೨ ॥

ಜನವೆಲ್ಲ ಕವ್ವರಿಗೊಂಡು ನೋಡುತಲಿರೆ । ಘನರತ್ನಮಯದ ಪುಷ್ಪಕವ ॥
ಮಿನುಗುವ ಕಾಂತಿ ದಿಕ್ತಟವನು ವ್ಯಾಪಿಸೆ । ನನೆವಿಲ್ಲನ ಬಿಲ್ಲರವಕೆ ॥ ೩೩ ॥

ಸರಿಯಾದ ರನ್ನದ ಕಿರು ಘಂಟೆಯ ಧ್ವನಿ । ಧರೆಯನು ತೆಕ್ಕನೆ ತೀವಿ ॥
ಖರಕರಬಿಂಬದ ಕಾಂತಿ ಸಮೂಹವ । ಜರೆವಂಗರುಚಿ ತಾನು ಮೆರೆಯೆ ॥ ೩೪ ॥

ದಿವ್ಯಾಂಬರ ದಿವ್ಯಾಭರಣಂಗಳ । ನವ್ಯ ಕುಸುಮ ಮಾಲೆಗಳ ॥
ದಿವ್ಯ ದೇಹದ ಕಾಂತಿ ಪಸರಿಸುತಿರಲಾಗ । ದಿವ್ಯ ಸಭೆಯ ಪೊಕ್ಕ ದೇವ ॥ ೩೫ ॥

ಅರಸನ ಮೊಗನೋಡಿ ನಸುನಗೆ ನಗುತಾಗ । ಕರಗಳ ಮುಗಿದನು ದಿವಿಜ ॥
ಚಿರಕೆವರಲ ಸಿಂಹಪೀಠದೊಳ್ಕುಳ್ಳಿರಲು । ದೊರೆ ನೋಡಿ ತ್ರಿದಶನ ಮೊಗವ ॥ ೩೬ ॥

ಅವನೀಶನಿಟ್ಟ ದಿಟ್ಟಿಯ ತೆಗೆಯದೆ । ತವಕದಿಂದೆನ್ನ ನೋಳ್ಪಂದ ॥
ಹವಣಿಸುತಿದೆ ಮುನ್ನ ಕಂಡ ಸ್ನೇಹಿತವನು । ಭುವನದೊಳ್ಕಂಡದೇನುಂಟು ॥ ೩೭ ॥

ತೆರದರುಶನವಾಗಿ ಪ್ರೀತಿಯಿಂದೆನ್ನೊಳು । ನಿರವಿಸೆಂದಾ ನಿರ್ಜರನು ॥
ಹರುಷದಿಂ ಕೇಳಲು ರಾಯ ತಾನಿಂತೆಂ- । ದೊರೆದನು ಗೀರ್ವಾಣನೊಡನೆ ॥ ೩೮ ॥

ವರಗುಣಗಣಭೂಷಣನು ದಿಗಂಬರ । ವರದತ್ತನೆಂಬೋರ್ವ ಮುನಿಯು ॥
ಚರಿಗೆನೆ ಬರಲು ನಿಲಿಸಿ ಭೋಜನವಿತ್ತು । ಕರಗಳ ಮುಗಿದೆಲೆ ಮುನಿಯೆ ॥ ೩೯ ॥

ದೊರಕುವದೋ ಪುತ್ರ ಸಂತಾನ ನನಗೆನೆ । ಕರುಣವಾರಿಧಿ ಚಂದ್ರಮನು ॥
ಸಿರಿವಂತನೋರ್ವ ಕುವರನು ಪುಟ್ಟುವನೆಂ- । ದೊರೆದನದಕೆ ವಿಸ್ಮಣವ ॥ ೪೦ ॥

ಇಂದಿಗೆ ಪದಿನೈದು ದಿವಸಗಳೊಳಗೋರ್ವ । ವೃಂದಾರಕನೈತಂದು ॥
ಕಂದನಾಗುವೆ ನಿನಗೆಂದು ಪೇಳುವನವ- । ನೆಂದು ಮುನೀಶ್ವರ ಪೋಗೆ ॥ ೪೧ ॥

ಮುನಿ ಮುಂಪೇಳಿದ ದೇಶಪುರುಷನೆಂದು । ಮನದಕ್ಕರಿಂದಲಿ ನಾನು ॥
ಅನಿಮಿಷಲೋಚನದಿಂದ ನೋಡುವೆ ನಿನ್ನ- । ನನಿಮಿಷನೆಂದನಾ ರಾಯ ॥ ೪೨ ॥

ನಾಕೀಗನೆಂದನೀನಜಿತಂಜಯ ನಾ- । ದಾ ಕಾಲದೊಳು ನಾನು ನಿನಗೆ ॥
ಲೋಕೈಕ ಚೆನ್ನಿಗ ಜಿತಶತ್ರುವೆಂದೆಂಬ । ಜೇಕಾದ ವರಸುತನಾದೆ ॥ ೪೩ ॥

ಬಿಡದೇಳು ಭವಬದ್ಧಪುತ್ರಪಿತೃಗಳಾಗಿ । ನಡದು ಬಂದತಿಸ್ನೇಹದಿಂದ ॥
ಪೊಡವಿಪ ನಿನಗೂ ಶ್ರೀಕಾಂತಾದೇವಿಗೂ । ಒಡನರುದಿಂಗಳಿಂ ಮೇಲೆ ॥ ೪೪ ॥

ವರಪುತ್ರನಾಗುವೆನೆಂಬ ನುಡಿಯ ಕೇಳಿ । ದೊರೆ ಮೂರ್ಛಿತನಾಗಿ ಬಿದ್ದು ॥
ಭರದಿಂದಲೆಚ್ಚತ್ತು ಜಾತಿಸ್ಮರನಾಗಿ । ಹರುಷದಿಂ ಭವಸಂಬಂಧವನು ॥ ೪೫ ॥

ತೆರದರುಶನವಾಗಿ ಸಭೆಗೆ ತಿಳಿಯ ಪೇಳಿ । ಮುರುಕದಿಂ ತಾನೆದ್ದು ನಿಂದು ॥
ಸುರನ ಬಿಡದೆಯಾಲಿಂಗನವನು ಮಾಡಿ । ದೊರೆ ಮುಂಡಾಡಿ ಮುದ್ದಿಸಿದ ॥ ೪೬ ॥

ಬಳಿಕಲಮರಕಾಂತಿಯು ದಿಕ್ಕು ದಿಕ್ಕಿಗೆ । ತುಳುಕುವ ಚೊಕ್ಕ ಪದಕವ ॥
ಥಳಥಳಿಸುವ ದಿವ್ಯ ಮೌಕ್ತಿಕ ಹಾರವ- । ನಿಳೆಯಾಣ್ಮಸಿಗಿರದಿತ್ತ ॥ ೪೭ ॥

ರನ್ನಗುಂಡಲ ಬಾಹುಪುರಿ ವೀರಮುದ್ರಿಕೆ । ಸನ್ನುತ ಕಾಲಪೆಂಡೆಯವ ॥
ರನ್ನಗೆಲಸದ ಕಿರೀಟವನಿತ್ತ ಗು- । ಣೋನ್ನತ ಜಿನಚಂದ್ರನೃಪಗೆ ॥ ೪೮ ॥

ನೊರೆವಿಂಡಿನಂದದಿಂದತಿಶುಭ್ರಮಾಗಿರ್ದ । ವರನೂತನ ವಸ್ತ್ರವನು ॥
ಸುರುಚಿರಮಪ್ಪ ಪೈತಣೆ ಮುಂತಾದುವ । ದೊರೆಗುಡಲಿತ್ತನಾ ದೇವ ॥ ೪೯ ॥

ದೊರೆಯ ಸಿಂಹಾಸನದೊಳು ಶ್ರೀಕಾಂತೆಯ । ಕರೆದು ಕುಳ್ಳಿರಿಸಿ ಲೀಲೆಯೊಳು ॥
ಕರಗಳ ಮುಗಿದು ಸಂಪ್ರೀತಿಯಿಂ ನುತಿಗೆಯ್ದು । ಸುರಚಾಪವನಿಳಿಕೆಯ್ವ ॥ ೫೦ ॥

ವರಜ್ಯೋತಿರ್ಮಾಲೆಯೆಂದೆಂಬ ಪದಕವ । ಹೀರೆಯುಂದಗಿ ಪ್ರಜ್ವಲಿಪ ॥
ಕರಚೆಲವಾದ ಮುತ್ತಿನ ಬೊಟ್ಟ ದೇವನು । ಎರಕದೊಳಿತ್ತನೇನೆಂಬೆ ॥ ೫೧ ॥

ಕುಡಿಮಿಂಚ ತನ್ನ ಕಾಂತಿಗಳಿಂದಲಿಳಿಕೆಯ್ವ । ಕಡುರಮ್ಯವಾದ ಕಾಂಚಿಯನು ॥
ಕಡಗ ಮುತ್ತಿನ ಸರ ಪಾದದಂದುಗೆಯನು । ಕಡುಜಾಣೆಗಿತ್ತ ನಿಳಿಂಪ ॥ ೫೨ ॥

ಹಾರಹೀರಾವಳಿ ವಸನ ಕಂಚುಕವನು । ನಾರೀಮಣಿಗೆ ಮತ್ತಾಗ ॥
ಸೇರಿದ ಮುರುಕದೊಳಗೆ ಕೊಟ್ಟನೇನೆಂಬೆ । ಸಾರಹೃದಯ ಗೀರ್ವಾಣ ॥ ೫೩ ॥

ಮರಳಿ ಮರಳಿ ನುತಿಗೆಯ್ದು ಸಿಳಿಂಪನು । ಕರಗಳ ಮುಗಿದು ಪ್ರೀತಿಯೊಳು ॥
ಒರೆದು ವಿನಯವಚನವನು ತಾ ಬೀಳ್ಕೊಂಡು । ಸುರ ಸುರಪುರಕೆಯ್ದಿದನು ॥ ೫೪ ॥

ಇತ್ತಲಾ ದಂಪತಿಗಳು ಜಿನಪೂಜೆಯ । ಬಿತ್ತರದಿಂ ಮಾಡುತಾಗ ॥
ಉತ್ತಮ ಮುನಿಗಳಿಗನ್ನವನೀಡುತ- । ಲತ್ತಿಯಿಂದಿರಲೊಂದು ದಿವಸ ॥ ೫೫ ॥

ಶ್ರೀ ಜಿನಚರಣ ಕಮಲಭೃಂಗಿ ಪತಿಭಕ್ತೆ । ರಾಜೀವ ವದನೆ ಶ್ರೀಕಾಂತೆ ॥
ಭೂಜನನುತೆಯ ಮೊಗದೊಳು ಮೊಡವಿಗಳು । ರಾಜಿಸಿದವು ಮೂಡಿ ಪಲವು ॥ ೫೬ ॥

ತದನಂತರದೊಳು ಮಾಣಿಕಗಂಡಾ । ಸುದತಿ ಲೀಲೆಯೊಳಿರುತಿರಲು ॥
ಮುದದಿಂದ ಕೆಂಪಿನ ವಸ್ತ್ರಾಭರಣವ । ಹದಗೊಳಿಸಿದರಾಳಿಯರು ॥ ೫೭ ॥

ಆಣಿವಿದ್ರುಮದೊಳು ಕಡೆದ ಬೊಂಬೆಯೊ ತಾನು । ಮಾಣಿಕದೊಂದು ಪುತ್ಥಳಿಯೋ ॥
ಶೋಣರಾಗದ ಸಂಜೆಗೆಂಪೆ ಪೆಣ್ಣಾದಂತೆ । ಜಾಣೆ ಚೆಂದೊಡವಿಟ್ಟೊಪ್ಪಿದಳು ॥ ೫೮ ॥

ಪಾವನವಾದ ನದಿಯ ತೀರ್ಥಜಲವನು । ಭಾವಕಿಯರು ಸ್ವರ್ಣಘಟದಿ ॥
ತೀವಿ ನಾಲ್ಕೀರನೆಟ್ಟಿದರೊಂದು ಸೊಬಗಿಂದ । ದೇವಿಯ ಮಸ್ತಕದಲ್ಲಿ ॥ ೫೯ ॥

ಮಿಂದ ಶ್ರೀಕಾಂತೆಗೆ ಜಲಧಿಯ ತೆರೆಯನು । ಹಿಂದು ಮಾಡುವ ಶುಭ್ರಾಂಶುಕವ ॥
ಅಂದು ಕೋಮಲೆಯರು ನಿರಿವಿಡಿದುಡಿಸಿದ- । ಸೌಂದರಾಂಗಿಯರು ಮಧ್ಯದೊಳು ॥ ೬೦ ॥

ಲಲನಾಮಣಿ ತೊಟ್ಟತಿಶುಭ್ರವಾದೊಂದು । ಕೆಲಸದ ರವಕೆಯೊಪ್ಪಿದುದು ॥
ಜಲಜಕುಡ್ಮಲಯುಗ್ಮವ ಸುತ್ತಿ ರಾಜಿಪ । ವಿಲಸಿತ ತೆರೆಯೋ ಎಂಬಂತೆ ॥ ೬೧ ॥

ನೊಸಲೊಳು ತಿಲಕವ ತಿದ್ದಿ ಕಜ್ಜಳವನು । ಕುಶಲದಿಂ ನೇತ್ರದೊಳೆಚ್ಚಿ ॥
ಶಶಿಯ ಜರಿವ ಮುತ್ತಿನ ಬೊಟ್ಟು ಭಾಳದಿ । ಎಸಕದಿಂ ಕಟ್ಟಿಯಾಳಿಯರು ॥ ೬೨ ॥

ಸುರರಿನ್ನರಿವೆರೆಯನು ಕದ್ದು ಶ್ರೀಕಾಂತೆ- । ವರನಿಟಿಲವ ಮಾಳ್ದರೆಂದು ॥
ಅರಿವೆರಿ ಬಂದು ತಂದರಿವೆರಿ ಸಾರ್ದಂತೆ । ಮೆರೆದುದು ನೊಸಲಾಭರಣ ॥ ೬೩ ॥

ಕೆಳದಿಯರುಗಳು ಕುಂತಳವನೊಪ್ಪವ ಮಾಡಿ । ವಿಲಸಿತ ತುರುಬನು ರಚಿಸಿ ॥
ಚೆಲುವಿಂದ ಮಘಮಘಿಸುವ ಪೂಸರಗಳ । ಲಲನೆಯ ಮುಡಿಗಿಟ್ಟರಾಗ ॥ ೬೪ ॥

ಗರುವೆಯ ಮುಖವಿಧುವನು ಪಿಡಿಯಲು ಬಂದ । ದುರುಳ ರಾಹುವ ಸುತ್ತಮುತ್ತಿ ॥
ಭರದಿ ಮುಸುಕಿದ ಭಗಣಗಳೋ ಎಂಬಂತೆ । ತರುಣೀಮಣಿಯ ಪೂವಿಹವು ॥ ೬೫ ॥

ಆಣಿಮೌಕ್ತಿಕದ ಮಣಿಗಳಿಂದ ಸಮೆದಿ- । ರ್ಬಾಣಿ ಸರದ ಓಲೆಯನು ॥
ಜಾಣೆಯ ಚೆಲುವಾದ ಕರ್ಣಯುಗದೊಳಾಗ । ಜಾಣೆಯರಳವಡಿಸಿದರು ॥ ೬೬ ॥

ಸ್ಮರ ತನ್ನ ಸಿಂಗಾಡಿಯ ಬಿಲ್ಲಕೊಪ್ಪಿನೊ- । ಳಿರದರ್ಚನೆ ಗೆಯ್ದು ಮೆರೆವ ॥
ಕರಚೆಲುವಿನ ಬೆಳು ನೈದಿಲೋ ಎಂಬಂತೆ । ವರಕರ್ಣಪತ್ರ ರಾಜಿಪವು ॥ ೬೭ ॥

ಥಳಥಳಿಸುವ ಮುತ್ತಿನ ವೆಂಡೆಗಳನು । ನಳಿನಾಕ್ಷಿಯ ಕರ್ಣಯುಗಕೆ ॥
ಕೆಳದಿಯರುಗಳು ವಿಲಾಸದಿಂ ಸೇರಿಸಿ- । ಯಳವಡಿಸಿದರ್ಪೊನ್ನ ಪೂವ ॥ ೬೮ ॥

ಸುರಲೋಕದ ವಧೂವರರನೆಸೆಯಲೆಂದು । ಸಿರಿಕಾಂತೆ ಕರ್ಣಸಿಂಗಡಿಗೆ ॥
ಸ್ಮರಮಲ್ಲಿಗೆಯ ಮುಗುಳ ಬಾಣಬಿಟ್ಟಂತೆ । ಮೆರೆದುದು ಮುತ್ತಿನೆಂಚೆಯವು ॥ ೬೯ ॥

ನಳಿನಾಕ್ಷಿಯ ನಾಸಿಕದೊಳು ಮುತ್ತಿನ । ಪೊಳೆವ ಮೂಗುತಿಯುಡರಿಹುದು ॥
ವಿಲಸಿತ ಚಾಂಪೇಯದ ಮೊಗ್ಗೆ ತುದಿಯೊಳು । ನೆಲಸಿದ ತುಹಿನಾಂಬುವೆನಲು ॥ ೭೦ ॥

ಲಲನೆಯ ಕಂಠದೊಳಗೆ ತೋರಮುತ್ತಿನ । ಚೆಲುವ ಹಾರವಸಿತಲಿಹುದು ॥
ಜಲಜನಾಭನು ಕಂಬುಕರ್ಚನೆಯನು ಮಾಳ್ಪ । ಚೆಲುವ ಮೊಲ್ಲೆಯ ಸರದಂತೆ ॥ ೭೧ ॥

ಗರುವೆಯ ಒರ್ಪಿಡಿ ನಡುವಿಗೆ ಮುತ್ತಿನ । ನೆರೆ ನೇವಳವಿಡಲಿಹುದು ॥
ಪರಮೇಶ ಭಾಜಿಪ ಢಮರುಗಮಧ್ಯದಿ । ಮೆರೆವ ಮಾಧವಿದಂಡೆಯಂತೆ ॥ ೭೨ ॥

ಪಂಕಜಾಕ್ಷಿಯ ಕರಯುಗದೊಳು ಮುತ್ತಿನ । ಕಂಕಣವನು ಇಡಲಿಹುದು ॥
ಪಂಕಜಬಾಣನ ಚಾರುಸುಪಾಶವ । ಸೋಂಕಿದ ಬೆಳುಲತೆಯಂತೆ ॥ ೭೩ ॥

ಇವು ಮೊದಲಾದ ಪಲವು ಬೆಳ್ದೊಡವನು । ಯುವತೀಮಣಿಗೆ ಆಳಿಯರು ॥
ಸವಿನಯದಿಂ ಸಿಂಗರಿಸಲು ಮೆರೆದಳು । ನವ ಭಾರತಿಯೋ ಎಂಬಂತೆ ॥ ೭೪ ॥

ಪಳುಕಿನ ಕರುವೋ ಕರ್ಪೂರದ ಬೊಂಬೆಯೋ ತಾ । ಬೆಳಕಿನಿಂದಾದ ಪುತ್ಥಳಿಯೋ ॥
ಥಳಥಳಿಸುವ ವಜ್ರದ ಮೂರ್ತಿಯೊ ಎನೆ । ಲಲನೆ ಚೆಲ್ದೊಡವಿಟ್ಟೊಪ್ಪಿದಳು ॥ ೭೫ ॥

ಇಂತು ಸಿಂಗರವಾಗಿ ಶ್ರೀಕಾಂತಾದೇವಿ । ಕಂತುಮರ್ದನ ಜಿನಗೃಹವ ॥
ತಾಂತಳುವವೆ ಪೊಕ್ಕು ಜಿನಪಗೆ ಪೊಡಮಟ್ಟು । ಸಂತಸದಿಂ ಚಾಮೀಕರದ ॥ ೭೬ ॥

ಎಲೆಗಳನೊಂಭತ್ತು ಜಿನ ಸನ್ಮುಖದೊಳಿಟ್ಟು । ನಲವಿನಿಂ ಮುತ್ತಿನಾಕ್ಷತೆಯ ॥
ಫಲಿಸಲಿ ನವಕೇವಲಲಬ್ಧಿ ತನಗೆಂದು । ಲಲನೆ ಪುಂಜವನಿಕ್ಕಿದಳು ॥ ೭೭ ॥

ಈರ್ಯಾಪಥಶುದ್ಧಿಗೈದು ಜಿನಾಕ್ಷರ । ಚಾರುಮಾಲೆಗಳಿಂದ ನುತಿಸಿ ॥
ನಾರೀಮಣಿ ಏಕೀಭಾವ ವಿಷಾಪ- । ಹಾರವ ಮುದದಿಂದ ಪೇಳಿ ॥ ೭೮ ॥

ಹರುಷದೊಳಗೆ ಸಹಸ್ರ ಸುನಾಮವ । ತರುಣಿ ತಾ ಪೇಳಿದ ಬಳಿಕ ॥
ವರಶುದ್ಧಸ್ಫಟಿಕಾಕ್ಷಮಾಲೆಲಿ ನೂರೆಂಟು । ಗುರುಪಂಚಕವನು ಜಪಿಸಿ ॥ ೭೯ ॥

ಜಿನರಿಗೆ ಪಂಚಾಮೃತದಭಿಷೇಕವ । ವನಿತೆ ತಾ ಮಾಡಿಸಿ ಮುದದಿ ॥
ಇನಿಸು ಬೇಗದೊಳಷ್ಟವಿಧದರ್ಚನೆಯನು । ಅನುರಾಗ ಭಕ್ತಿಯಿಂದೆಸಗಿ ॥ ೮೦ ॥

ನುತಿಗೆಯ್ದು ಸಿದ್ಧಶೇಷೆಯ ಶಿರದೊಳಗಾಂತು । ಮತಿವಂತೆ ಜಿನರ ಬೀಳ್ಕೊಂಡು ॥
ಯತಿಜನಗಳ ಪಾದಾರ್ಚನೆಯನು ಮಾಡಿ । ನತಳಾಗಿ ಧರ್ಮಾಧರ್ಮವನು ॥ ೮೧ ॥

ಕಡುಭಕ್ತಿಯೊಳು ಕೇಳಿ ನಿತ್ಯವ್ರತಂಗಳ । ಮುದದಿರನ್ನಳು ಕೈಕೊಂಡು ॥
ಅಡಿಯಿಟ್ಟು ರಾಜಭವನಕಾಗಿ ನಲ್ಮೆಯಿಂ- । ದೊಡನೆಯಾರೋಗಣೆ ಮಾಡಿ ॥ ೮೨ ॥

ಇನನಸ್ತಂಗತನಾಗಲು ಶ್ರೀಕಾಂತೆಯು । ಜಿನಚಂದ್ರನಿರ್ದೇಳು ನೆಲೆಯ ॥
ಮಿನುಗುವ ಹೊನ್ನುಪ್ಪರಿಗೆಯ ಗಮಕದಿಂ । ವನಿತೆಯೇರಿದಳು ಲೀಲೆಯೊಳು ॥ ೮೩ ॥

ಅರಸಂಚೆಯಿರ್ದ ತಾಣಕೆ ಪೋಗುತಲಿರ್ದ್ದ । ತರುಣಿಮರಾಳಿಯಂದದೊಳು ॥
ದೊರೆರನ್ನ ಕುಳಿತಿರ್ದ ಶಕುನಿಮಂಚವನಾ- । ಗರಸಿಯೇರಿದಳು ಲೀಲೆಯೊಳು ॥ ೮೪ ॥

ತೊಡೆ ಸೋಂಕೆ ಕುಳಿತಳು ನಲ್ಲನ ಮೊಗವನು । ಮುದದಿ ತಾ ಕಡೆಗಣ್ಣಿನಿಂದ ॥
ಬೆಡಗಿಂದ ನೋಡುತ ನೃಪತಿಯ ಮನವನು । ಒಡನೆ ತಾ ಸೂರೆಮಾಡಿದಳು ॥ ೮೫ ॥

ಕತ್ತುರಿ ಪುಣುಗು ಚಂದನ ಕುಂಕುಮ ಸೊಂಪು- । ವೆತ್ತು ರಾಜಿಪ ಪನ್ನೀರ ॥
ಉತ್ತಮ ಪರಿಮಳ ದ್ರವ್ಯಪೂಸರವನು । ವೃತ್ತಕುಚೆಯರು ತಂದಿರಿಸಿ ॥ ೮೬ ॥

ಮಿಂಚಿನಂದದಿ ಪೊಳೆದಾಡಿ ಜನರು ಪೋಗೆ । ತಾಂ ಚದುರಿಂದಾ ನೃಪತಿ ॥
ಚಂಚಲನೇತ್ರೆಯ ರಾರಾಜಿಪದೊಂದು । ಕಂಚುಕವನು ಚದುರಿಂದ ॥ ೮೭ ॥

ಕಳೆದು ಸ್ತನಂಗಳ ತಟದೊಳು ಕುಂಕುಮ । ವಿಲಸಿತ ಲೇಪನಗೆಯ್ದು ॥
ಅಳಿಕುಂತಳವನು ನೇವರಿಸುತಲಾಗ । ಎಲೆಘಳಿಗೆಯ ಕೈಗೊಳುತಾ ॥ ೮೮ ॥

ತರುಣಿಯ ಬಾಯೊಳು ಬಾಯಿಟ್ಟು ಚುಂಬಿಸಿ । ಸರಸದಂಬುಲವನು ಇತ್ತು ॥
ಮುರುಕದೊಳಗೆ ಮೈಯೊಡೆವಂತೆಯಮರ್ದಪ್ಪಿ । ಗುರುಕುಚಗಳನು ಮರ್ದಿಸುತ ॥ ೮೯ ॥

ಸರಸವಿನೋದದೊಳಗೆ ಕೆಲನ್ರೊತ್ತಿರ್ದು । ಸುರತಸುಖದೊಳೋಲಾಡಿ ॥
ಅರಸಿಪಟ್ಟಿರ್ದು ಕಂಡಳು ಸ್ವಪ್ನಂಗಳ । ವರಮನೋಹರ ಜಾವದೊಳು ॥ ೯೦ ॥

ಹರಿ ರವಿ ವಿಧು ಕರಿಗಳ ಕನಸಿನೊಳಾ । ಸರಸಿಜಾಕ್ಷಿಯು ತಾನು ಕಂಡು ॥
ಹರುಷವ ತಾಳಿ ಪಟ್ಟಿರುತಿರಲಪ್ಪರೊ- । ಳ್ಮೊರೆದವು ಮಂಗಳ ಶಂಖ ॥ ೯೧ ॥

ಜಿನಭವನದೊಳು ಢಣಂ ಢಣರಿಂದಾಗ । ಸರವುಣ್ಮಿತು ಘಂಟೆಗಳ ॥
ಘನ ಭೇರಿಯ ರವ ದಿಕ್ತಟವನು ತುಂಬೆ । ಮನದಕ್ಕರಿಂ ಬೋಧಕರು ॥ ೯೨ ॥

ಜಿನರಂಕಮಾಲೆಯ ಕರಗಳ ತಾವೆತ್ತಿ । ಘನಸ್ವನದಿಂದ ನುತಿಸಲು ॥
ವನಿತೆಯ ಕಿವಿಯೊಗೆ ನಿದ್ರೆಯಿಂದೆಚ್ಚತ್ತು । ಜಿನಪನ ಸ್ಮರಿಸಿ ಮೆಯ್ಮುರಿದು ॥ ೯೩ ॥

ದೊರೆ ತೋಳತೆಕ್ಕೆ ಸಡಿಲವಾಗೆ ಶ್ರೀಕಾಂತೆ । ಹರುಷದಿಂದೆದ್ದು ದೇಹವನು ॥
ವರ ಶುಚಿಯನು ಮಾಡಿ ನಗೆ ಮುದ್ದು ಮೊಗವನು । ಅರಸಿ ತೊಳೆದು ಜಿನಪತಿಯ ॥

ಫಲವರ್಑ನೆಯಿಂದಲರ್ಚಿಸಿ ನುತಿಗೆಯ್ದು । ನಲವಿನಿಂ ಸಿದ್ಧ ಶೇಷೆಯನು ॥
ಚೆಲುವೆ ಮಸ್ತಕದೊಳಗಿರದಾಂತು ಮುನಿಗಳ । ವಿಲಸಿತ ಚರಣ ಕಮಲಕೆ ॥ ೯೫ ॥

ಎರಗಿ ನಿರ್ಭರ ಭಕ್ತಿಯಿಂ ದಿನವ್ರತಗಳ । ಮರಿಹಂಸಗಮನೆ ಕೈಕೊಂಡು ॥
ಹರುಷದೊಳಗೆ ಬಂದು ಸಿಂಗರವನು ತೊಟ್ಟು । ಗುರುಕುಚೆಯರ ಒಗ್ಗಿನೊಳು ॥ ೯೬ ॥

ನಡೆತಂದು ಗಮಕದಿಂ ನಲ್ಲನಿರ್ದೆಡೆಗಾ- । ಮಡದಿರನ್ನಳು ಕೈಮುಗಿದು ॥
ಕಡೆಗಣ್ಣಳ ಕಾಂತಿ ಪಸರಿಸುತಿರಲಾಗ । ಒಡನೇರಿಯರ್ಧಾಸನದೊಳು ॥ ೯೭ ॥

ಹರುಷದೊಳಗೆ ಕುಳಿತುಕೊಂಡು ರಾಯನ । ಸರಸಿಜ ಮೊಗವನು ನೋಡೆ ॥
ದರಹಸಿತಾನನೆ ತಾ ಕಂಡ ಕನಸನು । ಕರಗಳ ಮುಗಿದು ಬಿನ್ನವಿಸೆ ॥ ೯೮ ॥

ಕೆಂಬಲ್ಲ ಕಾಂತಿ ದಿಕ್ತಟವನು ಪಸರಿಸೆ । ಕುಂಭಿನೀಶ್ವರ ಬಾಯದೆರೆದು ॥
ಅಂಬುಜವದನೆಯಾನನವ ತಾ ನೋಡುತ । ಇಂಬಿನಿಂದಿಂತು ನುಡಿದನು ॥ ೯೯ ॥

ಹರಿಸನ್ನಿಭಮಧ್ಯೆ ಹರಿಯ ನೀನಿಂದಿ- । ನಿರುಳು ಕಂಡುದರಿಂದ ನಿನಗೆ ॥
ಅರಿಗಳ ತಂಡಕೆ ಕೇಸರಿಯೆಂದೆನಿಸುವ । ವರಕುವರನು ಪುಟ್ಟುವನು ॥ ೧೦೦ ॥

ರವಿಗಂಡ ಅಂಬುಜವದನೆ ನೀ ಕನಸಿಲಿ । ರವಿಯ ಕಂಡುದರಿಂದ ನಿನಗೆ ॥
ರವಿಯಂತೆ ಥಳಥಳಿಸುವ ದಿವ್ಯ ಕಾಯದ । ಕುವರನೋರ್ವನು ಪುಟ್ಟುವನು ॥ ೧೦೧ ॥

ಬಂದುಗೆದುಟಿಯಳೆ ಕನಸಿನೊಳಗೆ ನೀ- । ನಿಂದುವ ಕಂಡುದರಿಂದ ॥
ಕಂದರ್ಪಸಮರೂಪ ಸರ್ವ ಕಲಾಧರ । ನಂದನನೊಗೆವನು ನಿನಗೆ ॥ ೧೦೨ ॥

ಕರಿನಿಭಗಮನೆ ಇಂದಿನ ಸ್ವಪ್ನದೊಳು ನೀನು । ಕರಿಯ ಕಂಡುದರಿಂದ ನಿನಗೆ ॥
ಸುರಭೂಜಸಮದಾನಿ ಸುಜನಗುಣಸ್ತುತ್ಯ । ನೆರೆಜಾಣನೋರ್ವ ಪುಟ್ಟುವನು ॥ ೧೦೩ ॥

ಕನಸಿನ ಫಲಗಳಸಿಂತೆಂದು ಜಿನಚಂದ್ರ- । ನಿನಿಸುಳಿಯದೆ ಪೇಳೆ ಕೇಳಿ ॥
ಘನರವವನು ಕೇಳಿ ನವಿಲು ತಾ ನಲಿವಂತೆ । ವನಿತೆ ಸಂತಸವನು ತಾಳಿ ॥ ೧೦೪ ॥

ಜಿನರ ಪೂಜಿಸುತ ಜಿನಾಗಮ ಕೇಳುತ । ಜಿನಮುನಿಗಳಿಗೆ ವಂದಿಸುತ ॥
ಘನಪುಣ್ಯವಂತೆಯು ಸುಖದೊಳಗಿರಲಿತ್ತ । ಅನಿಮಿಷನತ್ತ ತಾ ಮುನ್ನ ॥ ೧೦೫ ॥

ಸುರಲೋಕದೊಳಗುಳ್ಳ ಸರ್ವಸುಖಂಗಳ । ಸುರನನುಭವಿಸುತಲಿರ್ದು ॥
ಕೊರಗಿದ ಮಾಸಿದ ಪೂಮಾಲಾಂಬರ ಕಂ- । ಡರು ತಿಂಗಳಾಯುವೆಂದರಿತು ॥ ೧೦೬ ॥

ನಂದೀಶ್ವರ ಮುಂತಾದ ಗಿರಿಗಳಿಗಾ- । ನಂದದಿಂ ದೇವ ತಾ ಪೋಗಿ ॥
ಕಂದರ್ಪ ಮದಹರ ಜಿನರ ಪೂಜೆಗಳಾ- । ನಂದು ಮಾಡುತ ಭಕ್ತಿಯೊಳು ॥ ೧೦೭ ॥

ಲೋಕತ್ರಯದಕೃತ್ರಿಮ-ಕೃತ್ರಿಮದ- । ನೇಕ ಜಿನಾಗಾರವನು ॥
ನಾಕಿಗನಂದು ಪೂಜಿಸಿ ಬಲವಂದು ಸ್ವ- । ರ್ಲೋಕಕೆ ತೆರಳಿ ತಾ ಪೋಗಿ ॥ ೧೦೮ ॥

ಅನುಪ್ರೇಕ್ಷೆಗಳ ಭಾವಿಸುತ ಸುರರಿಗೆಲ್ಲ । ಜಿನಮಹಿಮೆಯ ಪ್ರಕಟಿಸುತ ॥
ಅನುಪಮ ಪಂಚಪದಂಗಳ ನೆನೆವುತ । ಮುನಿಮಾರ್ಗದೊಳು ತಾ ಕುಳಿತು ॥ ೧೦೯ ॥

ವೈಯಾರದಿಂದ ಸನ್ಯಸನವ ಕೈಕೊಂ- । ಡಾಯುರಂತ್ಯದಿ ತನ್ನ ದೇಹ ॥
ಮಾಯವಾಗಲು ಬಂದು ಶ್ರೀಕಾಂತೆಯುದರದಿ । ಕಾಯವ ಧರಿಸಿ ಪುಟ್ಟಿದನು ॥ ೧೧೦ ॥

ವಿಲಸಿತ ರೋಮವಂಕುರಿಸಲಾಗವಳಿಗೆ- । ಯಲಸಿಕೆ ಪುಟ್ಟಿ ದೇಹದೊಳು ॥
ಜಲಗಳು ಬಾಯಿಂದಲೊಡನೊಗುತಿರಲಾ । ಲಲನೆಯ ಗರ್ಭಚಿನ್ಹದೊಳು ॥ ೧೧೧ ॥

ಕುಶಲೆಯ ಮೊಗವಾಗ ಬಿಳುಪೇರಿತೆಂತೆನೆ । ಬಸಿರೊಳಗಿರ್ದ ಬಾಲಕನ ॥
ಜಸ ಮುಖದಿಂದ ಹೊರಟು ದಿಕ್ತಟವನು । ಪಸರಿಪ ಬೆಳ್ಪಿನಂದದೊಳು ॥ ೧೧೨ ॥

ಪೊಂದಾವರೆಯ ಶೋಭಿಪ ಮೊಗ್ಗೆಯ ಮೇಲೆ । ಇಂದಿಂದಿರ ಕುಳಿತಂತೆ ॥
ಸೌಂದರಾಂಗಿಯ ವಕ್ಷೋಜ ಚೂಚುಕದೊಳು । ನಿಂದುದು ಕಪ್ಪು ರಂಜಿಸುತ ॥ ೧೧೩ ॥

ಜಾತಿಜರಾಮರಣಗಳ ಗರ್ಭದೊಳಿ- । ರ್ದಾತ ಕೆಡಿಪ ಮುಂದಕೆಂದು ॥
ಖ್ಯಾತಿಸುವಂತೆ ಮಾಜಿದವು ಮತ್ತೇನೆಂಬೆ । ಆ ತರಳೆಯ ತ್ರಿವಳಿಗಳು ॥ ೧೧೪ ॥

ಬಡತನವೆಂಬುದು ಇನ್ನಿಲ್ಲ ಲೋಕಕೆ । ಒಡಲೊಳು ಶಿಶು ಪುಟ್ಟಲೆಂದು ॥
ಒಡನೆ ಪೂಜಿಸುವಂತೆ ಕೋಮಲೆಯುದರವು । ಪಡೆದುದು ಕಡು ವೃದ್ಧಿಯನು ॥ ೧೧೫ ॥

ಶಿಶು ಗರ್ಭದೊಳು ಬೆಳೆಯುತಿರಲಾಗೊಂದು । ಹೊಸತಾದ ಬಯಕೆಯು ಸತಿಗೆ ॥
ಎಸಕದಿಂ ಪುಟ್ಟಿಯಂಗವು ಬಡವಾಗಲಾ । ಬೆಸಗೊಂಡರಾಗಾಳಿಯರು ॥ ೧೧೬ ॥

ತನುವೇನು ಕಾರಣ ಬಡವಾದುದಮ್ಮಾಜಿ । ಘನವಾದ ಬಯಕೆ ಪುಟ್ಟಿದುದೋ ॥
ಅನುಮಾನ ಬೇಡ ನನ್ನೊಳು ಬೇಗ ಪೇಳೆನೆ । ವನಿತೆಯಿಂತೆಂದು ನುಡಿದಳು ॥ ೧೧೭ ॥

ಪರಮ ಜಿನೇಶನ ಪಲವು ವಸ್ತುಗಳಿಂದ । ಹರುಷದಿ ಪೂಜಿಪುದೊಂದು ॥
ವರದಾನಗಳಿಂದ ಪಟ್ಟಣದೊಳಗಿರ್ದ । ಗುರುವರ ತಣಿಯಿಪದೊಂದು ॥ ೧೧೮ ॥

ಎರಡು ಬಯಕೆಗಳು ಪುಟ್ಟಿತು ನನಗೆಂ- । ದೊರೆಯಲಾಗಾಳಿಯರೊಡನೆ ॥
ಹರಿ ತಂದು ರಾಯಗೆ ಪೇಳಲು ವಸ್ತುವ । ತರಿಸಿ ನಿರ್ಭರ ಭಕ್ತಿಯಿಂದ ॥ ೧೧೯ ॥

ಜಿನರಾಜನಿಗೆ ಮಹಾಮಹಿಮೆಯಿಂ- । ಬನುಪಮ ಪೂಜೆಯನೆಸಗಿ ॥
ಮನದಕ್ಕರಿಂದ ವಸಂತವನಾಡಿಸಿ । ಕನಕ ವಸಂತವ ಮತ್ತೆ ॥ ೧೨೦ ॥

ಊರೊಳು ಮಾಡಿಸಿ ಜಿನಮುನಿಗಳಿಗಾ- । ಹಾರದಾನವನಿತ್ತು ಬಳಿಕ ॥
ಭೂರಮಣನು ಚತುಸ್ಸಂಘ ಪೂಜೆಯ ಮಾಡಿ । ಭೂರಿ ದಾನವನಿತ್ತನಾಗ ॥ ೧೨೧ ॥

ಪುರದ ಜನಗಳೊಳಗೊಬ್ಬರುಳಿಯದಂತೆ । ಕರೆಸೆಂದು ರಾಯನು ಪೇಳೆ ॥
ವರಮಂತ್ರಿ ಕರೆಯಿಸಿ ನೃಪಗೆ ಬಿನ್ನವಿಸಲು । ಹರುಷವನಾಂತ ಮನದೊಳು ॥ ೧೨೨ ॥

ಭೋಜನಗಳ ಮಾಡಿಸಿ ತಾಂಬುಲವಿತ್ತು । ತೇಜೋಧಿಕರಿಗುಡುಗೊರೆಯ ॥
ಆ ಜನಪದಕೆ ತಾ ಪಣಹೊನ್ನ ಚಿನ್ನವ । ರಾಜೇಂದ್ರ ಕೊಟ್ಟು ತಣಿಸಿದ ॥ ೧೨೩ ॥

ಇಂತು ಮಾಡಿಸಿ ತನ್ನ ಕಾಂತೆಯ ಮನಸಿಗೆ । ಸಂತಸವನು ರಾಯ ಮಾಡಿ ॥
ಅಂತವಿಲ್ಲದ ಸುಖದೊಳಗಿರೆ ನವಮಾಸ- । ದಂತ್ಯದೊಳಗೆ ಶೋಭಿಸುವ ॥ ೧೨೪ ॥

ವರಚೈತ್ರ ಶುದ್ಧ ಪಂಚಮಿ ಗುರುವಾರದ । ಸುರುಚಿರ ಬೆಳಗು ಜಾವದೊಳು ॥
ಮೆರೆವ ಶ್ರಾವಣತಾರೆ ಬ್ರಹ್ಮಯೋಗದೊಳಂ- । ದರಸಿ ಪೆತ್ತಳು ಗಂಡು ಮಗನ ॥ ೧೨೫ ॥

ಸೊಗಯಿಪ ಮೂಡಣದಿಕ್ಕಿಗು ದಿವಸಕು । ಪಗಲೆರೆಯನು ಪುಟ್ಟುವಂತೆ ॥
ಸುಗುಣೆ ಶ್ರೀಕಾಂತೆಗು ಜಿನಚಂದ್ರ ನೃಪತಿಗು । ಜಗದೇಕವೀರ ಪುಟ್ಟಿದನು ॥ ೧೨೬ ॥

ಸುರಪ ಶಕ್ರಾಣಿಗೆ ಸುಜಯಂತನೆಂತುಟು । ಸರಸೇಕ್ಷ್ವನು ತುಂಬಿದೆಡೆಗೆ ॥
ಅರಲಶರನು ಪುಟ್ಟುವಂತೆ ದಂಪತಿಗಳ್ಗೆ । ವರಕುವರನು ಪುಟ್ಟಿದನು ॥ ೧೨೭ ॥

ಶ್ರವಣ ನಕ್ಷತ್ರದೊಳಗೆ ಪುಟ್ಟಿದರಿಂದ । ಭುವಿಯನಾಳ್ವನು ಕಟ್ಟಕಡೆಗೆ ॥
ಶ್ರವಣರಿಗೆಲ್ಲರ್ಗೆ ಮುಖ್ಯನು ತಾನಾಗಿ । ಕವಿನುತ ದೀಕ್ಷೆಯಗೊಂಡು ॥ ೧೨೮ ॥

ಮೆರೆವತಿ ಶುಕ್ಲಪಕ್ಷದೊಳು ಪುಟ್ಟಿದರಿಂದ । ಪರಮಶ ಪದ ಬಲ್ಮೆಯೊಳು ॥
ಸುರುಚಿರ ಶುಕ್ಲಧ್ಯಾನಿಯು ತಾನಾಗಿ । ಪರಮಾತ್ಮನ ಸುರಿ ಕಾಣ್ಬ ॥ ೧೨೯ ॥

ಬ್ರಹ್ಮಯೋಗದೊಳು ಸಂಜನಿಸಿದ ಕಾರಣ । ನಿರ್ಮೂಲ ಮಾಡಿ ಘಾತಿಯನು ॥
ಧರ್ಮನಿರ್ಮಿತವಾದ ಗಂಧಕುಟಿಯನಾಳ್ದು । ನಿರ್ಮಲ ಕೇವಲಿಯಹನು ॥ ೧೩೦ ॥

ಗುರುಪಂಚಮಿ ದಿನದೊಳು ಪುಟ್ಟಿದರಿಂ- । ದುರುಹಿ ಪಂಚ ಸಂಸಾರವನು ॥
ತರಿದುಯಘಾತಿಯ ಸಿದ್ಧಲೋಕವನೈದಿ । ಗುರು ಮೂಲೋಕಕ್ಕಾಗುವನು ॥ ೧೩೧ ॥

ಆದರ್ಶೋಪಮವಾದುದು ಭೂಮಿ ಮ- । ತ್ತಾದುದಂಬರ ನಿರ್ಘೋಷ ॥
ಪೂದುಂಬಿ ಕೊಳ ಸ್ವಚ್ಛೋದಕವಾಯ್ತು ವಿ- । ನೋದದರ್ಭಕ ಪುಟ್ಟಲೊಡನೆ ॥ ೧೩೨ ॥

ರವಿಸಮಪಿಂಗಾಂಗ ಭಾಸುರವಹ್ನಿಯು । ತವೆ ದಕ್ಷಿಣಾವರ್ತವಾಯ್ತು ॥
ನವಪರಿಮಳ ಶೈತ್ಯ ಮಂದಗುಣಾನ್ವಿತ । ಪವನ ಭೂಮಿಯೊಳು ತೀಡಿದುದು ॥ ೧೩೩ ॥

ಸುರರಾಕಾಶದೊಳಗೆ ನಿಂದು ಬಗೆ ಬಗೆ । ಪರಿಮಳದರಳು ಮಂದಾರ ॥
ಕರಿಯ ಮಲ್ಲಿಗೆಯಾದಿ ಪುಷ್ಪವೃಷ್ಟಿಗಳನು । ಕರೆದರು ಪುತ್ರ ಸಂಜನಿಸೆ ॥ ೧೩೪ ॥

ಕೆಳದಿಯಾಗೋರ್ವಳು ಸಡಗರದಿಂ ಬಂದು । ಇಳೆಯಾಳ್ಮಗೆ ಕೈಯ ಮುಗಿದು ॥
ನಳಿನಾಕ್ಷಿ ಶ್ರೀಕಾಂತಾದೇವಿ ಪುತ್ರನ । ಬೆಳಗು ಜಾವದೊಳು ಪಡೆದಳು ॥ ೧೩೫ ॥

ಎಂದು ಬಿನ್ನವಿಸಲು ಜಿನಚಂದ್ರ ಭೂಪನಾ- । ನಂದವ ತಾಳಿ ಮನದೊಳು ॥
ಅಂದಿತ್ತ ಒಸಗೆಯ ಪೇಳಿದ ಕೆಳದಿಗೆ । ಅಂದುಗೆ ಕಾಲಸರವನು ॥ ೧೩೬ ॥

ಹರಳೋಲೆ ರನ್ನಕಂಕಣ ಮುತ್ತಿನ ಸರ । ಮೆರೆವ ಕಾಂಚೀ ಧಾಮವನು ॥
ವರವೀರ ಮುದ್ರಿಕೆ ದಿವ್ಯ ವಸನಗಳ । ನರನಾಥನಿತ್ತನೈನೂರು ॥ ೧೩೭ ॥

ವರನಿಷ್ಕಪುಟ್ಟುವ ಗ್ರಾಮವನಿರದಿತ್ತು । ತರುಣಿಯ ಕಳುಹಿಸಿ ನೃಪತಿ ॥
ಹರುಷದೊಳಗೆ ಬಂದು ಪುತ್ರ ಮುಖವ ಕಂಡು । ಪರಮಾನಂದವೈದಿದನು ॥ ೧೩೮ ॥

ಪಲವು ವಾದ್ಯಗಳು ಭೋರೆಂದು ಮೊರೆದುವಾಗ । ನಲಿದರು ನರ್ತಕಿ ಜನರು ॥
ನಲವೇರಿತು ಪಟ್ಟಣದ ಜನಗಳ ಭೂ- । ಲಲನೇಶನ ಪುತ್ರ ಪುಟ್ಟೆ ॥ ೧೩೯ ॥

ದೊರೆ ದೊರೆಗಳು ಉಡುಗರೆಗಳ ತಂತಮ್ಮ । ವರಮಂತ್ರಿಗಳಿಂದ ನೃಪಗೆ ॥
ಹರುಷದಿ ಕಳುಹಿಸಿ ತಮ್ಮ ಪಟ್ಟಣದೊಳು । ಭರದಿಯಾಡಿಸಿ ಓಕುಳಿಯ ॥ ೧೪೦ ॥

ಧರಣೀಶನಿತ್ತ ಪಟ್ಟಣದೊಳು ನವರತ್ನ । ವರ ವಸಂತೋತ್ಸಾಹವನು ॥
ಹರುಷದೊಳಗೆ ಮಾಡಿಸಿಯುಡುಗೊರೆಗಳ । ದೊರೆ ದೊರೆಗಳಿಗೆ ತಿದ್ದಿಸಿದ ॥ ೧೪೧ ॥

ವರಕುಂಕುಮದ ಗಂಧವ ದೊರೆ ದೊರೆಗಳ । ಶಿರದೊಳು ಚರ್ಚನೆಗೆಯ್ದು ॥
ತರಿಸಿ ಕರ್ಪುರದ ಪಟ್ಟಿ ವೀಳ್ಯಗಳ । ಸರಸ ಕವಿಗಳು ಪಂಡಿತರ್ಗೆ ॥ ೧೪೨ ॥

ಪುರಜನ ರಾವುತ ರಾಣುವೆ ವರ್ಗಕೆ । ವರ ಸ್ವರ್ಣ ಮಳೆಯ ಕರೆಯಿಸಿ ॥
ಹರುಷದಿಂ ಭೂರಿದಾನವ ತಾ ಕೊಟ್ಟನು । ವರಕುವರನು ಪುಟ್ಟಲೊಡನೆ ॥ ೧೪೩ ॥

ಬಟ್ಟಲಾಗಿಂಡಿಯ ಮಕರತೋರಣಗಳ । ಕಟ್ಟಿಸಿ ಪನ್ನೀರ ಚಳೆಯ ॥
ಕೊಟ್ಟು ಕಸ್ತುರಿ ಸಾರಣೆ ಪೂವಲಿಗೆಳ । ಪಟ್ಟಣದೊಳು ರಚಿಸಿದರು ॥ ೧೪೪ ॥

ವಸುಧೇಶ್ವರ ದಶದಿವಸದೊಳಗೆ ಜನ- । ವಸತಿಯೊಳಗೆ ಸಂಭ್ರಮದಿ ॥
ಶಿಶುವಿನ ಪೆಸರಿಂದಭಿಷೇಕ ಪೂಜೆಯ । ಪಸನಾಗಿ ಮಾಡಿಸಿ ಬಳಿಕ ॥ ೧೪೫ ॥

ದೊರೆ ದೊರೆಗಳ ಮಂತ್ರಿ ಮಂಡಳೀಕರುಗಳ । ನೆರವಿಯ ಮುಂದೆ ಸಂತಸದಿ ॥
ಅರುಹನ ಸನ್ಮುಖದೊಳು ತಾ ನಿಂದಾಗ । ಕರೆದನು ಪೆಸರನಿಂತೆಂದು ॥ ೧೪೬ ॥

ಕೇವಲಜ್ಞಾನವ ಮುಂದಕೀ ಕುವರನು । ಕೋವಿದ ಪಡೆವನೆಂದರಿದು ॥
ಭಾವಜ್ಞ ಜಿನಚಂದ್ರ **ಜ್ಞಾನಚಂದ್ರಮ**ನೆಂದು । ಪಾವನ ನಾಮವನಿಟ್ಟು ॥ ೧೪೭ ॥

ಅರುಹನ ಸಿದ್ಧಶೇಷೆಯ ಸುಕುಮಾರನ । ಶಿರದೊಳು ತಳೆಯಲು ಮುದದಿ ॥
ಅರಮನೆಗೊಡಗೊಂಡು ಸರ್ವಸಂಭ್ರಮದಿಂದ । ನರನಾಥಚಂದ್ರಮ ಬಂದ ॥ ೧೪೮ ॥

ತದನಂತರದೊಳು ನವರತ್ನಗಳಿಂದ । ಹುದುಗಿದ ರನ್ನದೊಟ್ಟಿಲೊಳು ॥
ಚದುರಿಂದ ಕುವರನ ಮಲಗಿಸಿ ಹೊನ್ನೇಣ । ಚದುರೆಯರಾಂತು ತೂಗಿದರು ॥ ೧೪೯ ॥

ಜಯ ಜಯ ಜಿನಮತವಾರ್ಧಿವರ್ಧನ ಚಂದ್ರ । ಜಯ ಜಯ ಗುಣಗಣಸಾಂದ್ರ ॥
ಜಯ ಜಯ ಪ್ರತ್ಯಂತ ಭೂಭೃದ್ದೇವೇಂದ್ರ । ಜಯ ಲೋಕನುತ ಜ್ಞಾನಚಂದ್ರ ॥ ೧೫೦ ॥

ಜೋ ರಾಜಮುಕುಟ ತಾಟಿತ ದಿವ್ಯ ಚರಣನೆ । ಜೋ ರಿಪುವನ ದಾವಾಗ್ನಿ ॥
ಜೋ ರವಿದೀಪ್ತಿ ಸಮಾನ ತೇಜಸ್ವಿಯೆ । ಜೋ ರಾಮಾವಲ್ಲಭ ಜೋ ಜೋ ॥ ೧೫೧ ॥

ಜೋ ಮಾನುಜಮುಂದರವಾರ್ಧಿಗಂಭೀರ । ಜೋ ಮನಸಿಜನವತಾರ ॥
ಜೋ ಮಹಿಳಾಮನೋಂಬುಜ ಬಾಲಭಾಸ್ಕರ । ಜೋ ಮನೋಜನ ಕೈಗಿಳಿಯೆ ॥ ೧೫೨ ॥

ಜೋ ಜೋ ಚೌಷಷ್ಟಿಕಲೆಗಳಿಗಾಧಾರ । ಜೋ ಜೋ ಕವಿಜನವಿನುತ ॥
ಜೋ ಜೋ ಸಕಲ ಶಾಸ್ತ್ರಾಂಬುಧಿ ಹಿಮಕರ । ಜೋ ಜೋ ಕುರುವಂಶ ತಿಲಕ ॥ ೧೫೩ ॥

ಜೋ ಜೋ ಯಾಜಕ ಜನ ಕಲ್ಪಭೂರುಹ । ಜೋ ಜೋ ವೀರಾಗ್ರಗಣ್ಯ ॥
ಜೋ ಜೋ ಪಾವನ ಚಾರಿತ್ರ ಬೋಧೇಂದು । ಜೋ ಜೋ ಎಂದಂಗನೆಯರು ॥ ೧೫೪ ॥

ಈ ರೀತಿಯಿಂದ ತೊಟ್ಟಿಲ ತೂಗಿ ಹರುಷದಿ । ನೀರೆಯರ್ಮುತ್ತಿನಾಕ್ಷತೆಯ ॥
ದಾರಕನ ಮೇಲೆ ತಳಿದು ಹರಸಿದರಾ- । ಪಾರವರ್ಷ ಬದುಕೆಂದು ॥ ೧೫೫ ॥

ಸಿರಿಕಾಂತಾದೇವಿಯಾ ವೇಳೆಯೊಳು ತಾನು । ನೆರೆದಿರ್ದ ಮುತ್ತೈದೆಯರಿಗೆ ॥
ವರಮುತ್ತಿನಕ್ಷತೆಯನು ಸೋವಿಲುದುಂಬಿ । ಬೆರೆಕೆವರಲುಗಳ ತೀವಿ ॥ ೧೫೬ ॥

ಈರಾರು ಸಾಸಿರ ಬಾಗಿನಗಳನಾಗ । ನಾರಿಯರುಗಳಿಗೆ ಕೊಟ್ಟು ॥
ಚಾರುದುಕೂಲ ವಸ್ತ್ರಾಭರಣಂಗಳ । ವಾರಿಜಾಕ್ಷಿಯರಿಗೆ ಇತ್ತು ॥ ೧೫೭ ॥

ಹರುಷದೊಳಗೆ ಕುಂಕುಮಗಂಧವನಿತ್ತು । ಮೆರೆವ ಕರ್ಪೂರದ ವೀಳೆಯವ ॥
ತರಿಸಿ ವಿನಯದೊಳಗಿತ್ತು ನೀವೆಲ್ಲರು । ನೆರೆ ಬಳಲಿದಿರೆಂದು ನುಡಿದು ॥ ೧೫೮ ॥

ಸಿರಿಕಾಂತಾದೇವಿಯು ಬೀಳ್ಕೊಡೆ ಎಲ್ಲರು । ನೆರೆದ ಸ್ತ್ರೀಯರು ಕೈಯ ಮುಗಿದು ॥
ತೆರಳಲು ಸಂತಸಪಾಲ್ಗಡಲೊಳಗಾಳಿ- । ಯರಸಿ ಸಲಹುತಿರೆ ಸುತನ ॥ ೧೫೯ ॥

ಬಂಧುಜನಗಳೆಂಬ ಸೈದಿಲಿಗಾನಂದ । ಕೆಂದು ಕುಂದನು ರಿಪುಜನಕೆ ॥
ಅಂದು ಮಾಡುತ ಬಿದಿಗೆಯ ಚಂದ್ರನಂತೆ ಜ್ಞಾ- । ನೇಂದು ವೃದ್ಧಿಯನೈದುತಿಹನು ॥

ಪೊರವಾರನೆತ್ತೆತ್ತಿ ಹಾಕುತ ತೊಟ್ಟಿಲ । ಚರಣದಿಂದೊದ್ದು ನಲಿವುತ ॥
ಕರಗಳಿಂ ತೊಟ್ಟಿಲ ಗುದ್ದುತ 'ಹೂಂ' ಎಂದು । ಕರೆವುತ ಮುದ್ದುದೋರುವನು ॥ ೧೬೧ ॥

ಚರಣದಿಂ ತೊಟ್ಟಿಲನೊದೆವಂದವೊಪ್ಪಿತು । ಧುರದೊಳು ಮುಂದೆ ವೈರಿಗಳ ॥
ಭರದಿಂದಲೊದೆದು ನೂಂಕುವುದ ಕುಮಾರನು । ತೆರೆದರುಶನವ ಮಾಳ್ಪಂತೆ ॥ ೧೬೨ ॥

ಕರದಿಂದ ತೊಟ್ಟಿಲಗುದ್ದುವ ಶಿಶುವಿನ । ವರಭಾವವೊಪ್ಪಿತು ಮುಂದೆ ॥
ದುರುಳ ರಕ್ಕಸವಿಂಡನು ಗುದ್ದಿ ಕೆಡಹುವ । ಮುರುಕವ ತೋರುವಂತಿಹುದು ॥ ೧೬೩ ॥

ಹೊಡೆಮುಗುಳ್ವಂಬೆಗಾಲಿಂ ತುಂಬಿಗರೆವನು । ಒಡನೆ ದಟ್ಟಡಿಯ ತಾನಿಡುವ ॥
ಕಡುಮುದ್ದಾದ ತೊದಲು ನುಡಿ ನುಡಿವುತ । ನಡೆವುದ ಕಲಿತ ಲೀಲೆಯೊಳು ॥ ೧೬೪ ॥

ಹೊಂಗೆಜ್ಜೆ ಕಾಲಗಗ್ಗರ ಹೊನ್ನುಡಿದಾರ । ರಂಗುಡಾಳಿಪ ಬುಲ್ಲಿಕಾಯಿ ॥
ಸಿಂಗದುಗುರು ಎಣ್ಣೆಮಣಿ ಹೊನ್ನ ಸರಿಗೆಯು । ಮಾಂಗಾಯಿ ರನ್ನದಿ ಸಮೆದ ॥ ೧೬೫ ॥

ಅರಳೆಲೆಕೈವಾಕು ರನ್ನದುಂಗುರಗಳು । ಕರ ಶೋಭಿಪ ದೃಷ್ಟಿಮಣಿಯು ॥
ಮುರುಕದಿಂದಿವು ಮುಂತಾದ ಬಾಲ್ತೊಡವಿಟ್ಟು । ಮೆರೆದನಾ ರಾಜಕುವರನು ॥ ೧೬೬ ॥

ನೀಲಕುಟ್ಟಿಮದೊಳು ನಡೆವಾಗ ಪ್ರತಿಬಿಂಬ । ಬಾಲಕನಂದದಿ ತೋರೆ ॥
ಲೀಲೆಯಿಂ ಬಾ ಬಾರೆಂದು ಕರೆಯಲಾ । ಬಾಲೆಯರ್ನಕ್ಕು ಮುದ್ದಿಪರು ॥ ೧೬೭ ॥

ಪಳುಕಿನ ಕುಟ್ಟಿಮದೊಳು ತಾ ನಡೆವಾಗ । ಪೊಳೆದವು ಪಲವು ಬಿಂಬಗಳು ॥
ಎಳೆವರೆಯದಿ ಬಹುರೂಪಿಣಿ ವಿದ್ಯೆಯ । ತಳೆದನೋ ಎಂಬಂತಿಹವು ॥ ೧೬೮ ॥

ಚರಣದಂದುಗೆ ಝುಣಝುಣರೆನೆ ಕುವರನು । ಮರಿಯಾನೆಯಂತೋಡಿ ಬಂದು ॥
ನಿರಿವಿಡಿದೆಳೆವುತ ಚಂಡಿಗೊಳುತ ತಾಯ । ಉರೋಜವನುಂಡೋಡುವನು ॥ ೧೬೯ ॥

ವರುಷವೈದಾಗಲು ಜಿನಪೂಜೆಯ ಮಾಡಿ । ವರಗುರುಗಳ ಸಮೀಪದೊಳು ॥
ಗುರುವನು ಸಿದ್ಧಮಾತೃಕೆಯ ವೃದ್ಧಿಯೊಳು ತಾ । ಬರೆದನು ಬಹು ಜಾಣ್ಮೆಯಿಂದ ॥

ಮುನ್ನ ಮರೆದ ಶಾಸ್ತ್ರವ ತೋರೆ ಕಲಿವಂತೆ । ಚೆನ್ನಿಗ ಲೀಲಾಮಾತ್ರದೊಳು ॥
ಸೊನ್ನಾರದಿಂದ ಶಬ್ದಾಗಮ ನಯವ ಪ್ರ- । ಸನ್ನಹೃದಯ ಪಠಿಸಿದನು ॥ ೧೭೧ ॥

ಭರತಾಲಂಕಾರ ಸಂಗೀತ ಛಂದಸ್ಸು । ವರನೀತಿ ಗಣಿತ ಜ್ಯೋತಿಷ್ಯ ॥
ವರಮಂತ್ರತಂತ್ರಗಾರುಡಕೋಕವ- । ನರಮುಗ ಕಲಿತ ಲೀಲೆಯೊಳು ॥ ೧೭೨ ॥

ಸಲಿಲಸ್ತಂಭನ ಪಾವಕಸ್ತಂಭನ । ನಲವಿನಿಂ ಶಸ್ತ್ರಸ್ತಂಭನವ ॥
ವಿಲಸಿತ ಘಟಿಕಾವಾದ ವೈದ್ಯಂಗಳ । ಇಳೆಯಾಣ್ಮಸುತ ತಾ ಕಲಿತ ॥ ೧೭೩ ॥

ಮೆರೆವಿಂದ್ರಜಾಲ ಮಹೇಂದ್ರ ಸುಜಾಲವ । ಪರಕಾಯ ಸುಪ್ರಯೋಗವನು ॥
ಸಿರಿಗಲಿವಟ್ಟಿ ಪ್ರಯೋಗ ಭಾರಣೆ ವಿದ್ಯೆ । ಸುರುಚಿರ ರತ್ನ ಪರೀಕ್ಷೆ ॥ ೧೭೪ ॥

ಕರಿತುರಂಗಮುಗಳ ಚಾರುಪರೀಕ್ಷೆಯ । ವರಸಾಮುದ್ರಿಕ ವಾಸ್ತುಗಳ ॥
ಮೆರೆವ ಲಕ್ಷಣಗಳ ನಿಶಿತದ ಬುದ್ಧಿಯಿಂ- । ದರಮುಗ ಕಲಿತ ಲೀಲೆಯೊಳು ॥ ೧೭೫ ॥

ಗರುಡಿಯ ಮನೆಹೊಕ್ಕು ಗದೆ ಬಿಲ್ಲು ಚಕ್ರವ । ಹರಿಗೆ ಸಬಳ ಮುಂತಾದ ॥
ವರಬತ್ತೀಸ ತೆರದ ಶಸ್ತ್ರಂಗಳ । ಎರಕದಿ ಕಲಿತ ಲೀಲೆಯೊಳು ॥ ೧೭೬ ॥

ಎಳಗನ ಮೇಲೆ ಕುಳಿತುಕೊಂಡು ತನ್ನಯ । ಕೆಳೆಯರುಗಳ ಕೂಡಿಕೊಂಡು ॥
ಇಳಿಯಾಣ್ಮನಸುತ ಬೀದಿ ಬೀದಿಗಳೊಳು । ಕಳಭನಂದದಿ ಸುತ್ತುವನು ॥ ೧೭೭ ॥

ಗಡುಗು ಬುಗರಿ ಲಗ್ಗೆ ಚೆಂಡನಾಡುತಲೊಮ್ಮೆ । ಚದುರರ ತಾ ಕೂಡಿಕೊಂಡು ॥
ಕುದುರೆಯ ಕುಣಿಸುತ ತೈ ತೈ ಎಂದೊಮ್ಮೆ । ಚದುರರ ದೇವ ಚೆನ್ನಿಗನು ॥ ೧೭೮ ॥

ಇವು ಮೊದಲಾಗಿರ್ದ್ದ ಚೌಷಷ್ಟಿ ಕಲೆಗಳ । ಕುವರ ಕಲಿತು ವಿನೋದದೊಳು ॥
ಭುವನಾಧೀಶಗು ಶ್ರೀಕಾಂತಾದೇವಿಗು । ತವೆ ಸಂತಸವ ಪುಟ್ಟಿಸುತ ॥ ೧೭೯ ॥

ಅರಗಿಳಿಯಂದದಿ ಮುದ್ದು ವಾತಾಡುತ । ಪುರಪರಿಜನಕೆ ಮುದ್ದಾಗಿ ॥
ಇರುತಿರ್ದು ಶೈಶವವನು ಪತ್ತುವಿಟ್ಟು ತಾ । ವರಷೋಡಶಾಬ್ದವನಾಂತ ॥ ೧೮೦ ॥

ಹೊಂಜೆಳೆಯಂದದಿಂ ಬಳಕುವ ಕಾಯದಿ । ಕಂಜ ಕುಲಿಶ ಚಕ್ರ ಕಳಶ ॥
ಮಂಜುಳ ನಂದ್ಯಾವರ್ತ ಸ್ವಸ್ತಿಕ ಶಂಖ । ರಂಜಿಪ ನೇಗಿಲು ಝಷವು ॥ ೧೮೧ ॥

ರವಿಚಂದ್ರಕಾರೆಳ್ಳು ಬಲದೊಡೆಯೊಳು ಮತ್ತೆ । ವಿವರಿಸೆ ದೀರ್ಘಸುಕರ್ಣ ॥
ತವೆ ನಿಡಿದಾದ ಲೋಚನ ಉನ್ನತ ಶಿರ । ಕವಿನುತ ಕಂಬುಸುಕಂಠ ॥ ೧೮೨ ॥

ಮೊಳಕಾಲು ಮುಟ್ಟುವ ನಿಡಿದಾದ ಭುಜಗಳು । ವಿಲಸಿತ ಗಂಭೀರ ನಾಭಿ ॥
ನೆಲನ ಮುಟ್ಟುವ ಸೂಕ್ಷ್ಮ ನಿಡಿದಾದ ಕುಂತಳ । ಚೆಲುವಾದ ದ್ವಾತ್ರಿಂಶದ್ದಂತ ॥ ೧೮೩ ॥

ವೃಷಭನ ಸ್ಕಂಧಾಕಾರದ ಸ್ಕಂಧವು । ಎಸಳು ಹಾವುಗೆಯಂದದಂಘ್ರಿ ॥
ಒಸರುತಿರ್ದುದೋ ರಕ್ತವೆನೆ ಪದತಳಕೆಂಪು । ಅಸಿನಡು ತೆರವಾದೆರ್ದೆ ॥ ೧೮೪ ॥

ಇವು ಮೊದಲಾದ ಲಕ್ಷಣಯುಕ್ತಾಂಗನು । ದಿವಿಜರ ಜರಿವ ಚೆಸ್ನಿಗನು ॥
ನವ ಪುಷ್ಪಬಾಣನು ಚದುರನು ಜ್ಞಾನೇಂದು । ಕುವರನೊಪ್ಪಿದನು ಲೀಲೆಯೊಳು ॥ ೧೮೫ ॥

ಶ್ರೀ ಜಿನಚರಣಾಂಬುಜದಿಂದಿಂದಿರ । ರಾಜಾಧಿರಾಜ ವಂದಿತನು ॥
ಭೂಜಾಯೆವಲ್ಲಭ ಬೋಧೇಂದುಕುವರನು । ರಾಜಿಸಿದನು ಗುಣಾಂಬುಧಿಯು ॥ ೧೮೬ ॥

**॥ ಅಂತು ಸಂಧಿ ೩ಕ್ಕಂ ಪದ ೫೧೬ಕ್ಕಂ ಮಂಗಲಂ ॥**

## ಜ್ಞಾನಚಂದ್ರಕುಮಾರನ ಪರದೇಶಗಮನ.

ಕರಿಯನೇರಿದ ಜ್ಞಾನಚಂದ್ರನ ವಿದ್ಯಾ- । ಧರ ಕೊಂಡುಪೋದುದ ಪೇಳ್ವೆ ॥ ಪ ॥

ಸುರನರನಾಗಜ್ಯೋತಿರ್ವಂದಿತ ಪಾದ । ಜರೆಮೃತಿ ಜನನ ವಿದೂರ ॥
ಕರುಣವಾರಿಧಿಚಂದ್ರ ಶಾಂತಿಜಿನೇಶ್ವರ । ಕರುಣಿಸೆಮಗೆ ನಿರ್ವೃತಿಯ ॥ ೧ ॥

ಒಂದಾನೊಂದು ಪಗಲು ಜಿನಚಂದ್ರನ । ನಂದನ ನಂದನ ವನಕೆ ॥
ಅಂದು ತಾ ಪೋಗುವೆನೆಂದೆಂಬ ಮನದಿಂದ । ಚಂದದಿಂ ಸಿಂಗರಿಸಿದನು ॥ ೨ ॥

ಕವಿದಾದ ಸೂರಿಯ ಪುಟದ ಚಲ್ಲಣದೊಟ್ಟು । ಕರ ಶೋಭಿಪ ಗೋಪೇಂದ್ರ ॥
ಸುರುಚಿರನಾದವಮೂಸಿನದಟ್ಟಿಯು । ಮುರುಕದಿ ಸುತ್ತಿ ನಡುವಿಗೆ ॥ ೩ ॥

ವೀರಗಾಸೆಯ ಸೊಗಸಿಂದಲಿಳಿಯ ಬಿಟ್ಟು । ಸೂರ ಚಿಮ್ಮುರಿ ಸುತ್ತಿ ಶಿರಕೆ ॥
ಸೇರಾಣಿ ಸರಿಗೆಯಲೆಪ್ಪಟ್ಟೆಯಳವಡೆ । ಚಾರು ಮೌಕ್ತಿಕದ ತುರಾಯಿ ॥ ೪ ॥

ಚೆಲುವಿಂದ ಶಿರದೊಳಗಳವಡಿಸಿಯು ಮತ್ತೆ । ಮೆರೆವ ಮುತ್ತಿನ ಪೈರಣೆಯ ॥
ಅರಮುಗ ಬಳುಕುವ ದೇಹಕ್ಕೆ ತಾ ತೊಟ್ಟು । ತೆರವಾದ ತನ್ನ ನಿಟಲದಿ ॥ ೫ ॥

ಕಸ್ತೂರಿ ತಿಲಕವ ಬೆಡಗಿನೊಳಗೆ ತಿದ್ದಿ । ಮುತ್ತಿನ ತೋರ ಚೌಕುಳಿಯ ॥
ಉತ್ತಮ ಕರ್ಣದೊಳಗೆಯಳವಡಿಸಿ ತಾ । ಮತ್ತೆ ನೀಲದ ಒಂಟಿಯನು ॥ ೬ ॥

ಹರುಷದಿಂದಿಟ್ಟು ತೋರಂಬಟಿಕಾಯನು । ಜರಿವ ಮೌಕ್ತಿಕದ ಬಾವುಲಿಯ ॥
ಮೆರೆವ ಕರ್ಣದೊಳಳವಡಿಸಲು ನಲ್ಮೆಯಿಂ । ವರ ತೋರಹಾರವ ಕೊರಳ್ಗೆ ॥ ೭ ॥

ಕಡುವಿನ್ನಾಣದೊಳಗೆಯಿಟ್ಟು ನವರತ್ನ । ಬಿಡದೆ ತೆತ್ತಿಸಿ ಥಳಥಳಿಪ ॥
ಕಡುಮಿಂಚಿನಂದದ ಜ್ಯೋತಿಪ್ರಭೆಯೆಂಬ । ಕಡುರಮ್ಯವಾದ ಹಾರವನು ॥ ೮ ॥

ಕೊರಳೊಳಗಳವಡಿಸಿಯು ರಾಜಕುವರನು । ಬೆರಳೊಳು ವೀರಮುದ್ರಿಕೆಯ ॥
ಕರದೊಳು ತೋರಮುತ್ತಿನ ಸರವನು ಸುತ್ತಿ । ಮರಕತಪಿಂಡಿಗಂಕಣವ ॥ ೯ ॥

ಚರಣಯುಗಕೆ ಪೆಂಡೆಯ ಕಾಲಸರವನು । ಎರಕದೊಮುರಿಸಿ ಕಟ್ಟಿ ॥
ವರನವರತ್ನದ ಕೈಯೆಂಬ ನಾಗೆಡ- । ಕರದೊಳು ಪಿಡಿದಳವಡಿಸಿ ॥ ೧೦ ॥

ಥಳಥಳಿಸುವ ಸ್ವರ್ಣಕಮಲ ಶಾಲೆಯ ಬಡ । ಬಳುಕುವ ನಡುವಿಗೆ ಸುತ್ತಿ ॥
ವಿಲಸಿತ ನವರತ್ನದೊರೆಯ ಬಾಕನು ಕಟ್ಟಿ । ನಲವಿನಿಂ ಚಂದ್ರಗಾವಿಯನು ॥ ೧೧ ॥

ಹೊದೆದು ಸುಗಂಧಿ ವಿಡಿಯ ಮೈಯೊಳು ಚೆಲ್ಲಿ । ಚದುರರ ದೇವ ಸಿಂಗರಿಸಿ ॥
ಮುದದಿಂದ ಮಿಸುನಿಸಾಣೆಯಗಂಡೆಯವನು । ಪದಪಿಂದ ಕರದೊಳಗಾಂತು ॥ ೧೨ ॥

ಮುರುಕದಿಂ ನವರತ್ನಖಚಿತ ಹಾವುಗೆ ಮೆಟ್ಟಿ- । ಯರಮನೆಯಿಂ ಪೊರಮಟ್ಟು ॥
ಮೆರೆವ ಸುಚಿತ್ರದ ಚಾವಡಿಗೈತರೆ । ಮೊರೆದವು ವಾದ್ಯಕೋಟಿಗಳು ॥ ೧೩ ॥

ಬೆಡಗಿಂದ ಸಾಣೆಯ ಖಂಡೆಯ ನೆಲಕೂರಿ । ಪೊಡವಿಪಸೂನು ಗಮಕದಿ ॥
ಅಡಿಯ ಮೇಲಡಿಯಿಟ್ಟು ನಿಂದುಕೊಂಡಾಗಲ್ಲಿ । ಪೊಡವಿಪಾಲರ ನಂದನರ ॥ ೧೪ ॥

ಕರೆಯಿಸಲೈನೂರು ಒಂದೋರಗೆಯಾದ । ವರ ರಾಜಕುವರರು ತಾವು ॥
ಹರುಷದಿಂದುಟ್ಟು ಸಿಂಗರಿಸಿ ಕೊಂಡೈತಂ- । ದರಮಗನಿಗೆ ಕೈಮುಗಿದು ॥ ೧೫ ॥

ವರಮಂತ್ರೀಶ ಪುರೋಹಿತ ತಳವಾರ । ಪರದರೆಂಬೀ ಚತುಷ್ಟಯರ ॥
ನರಸಿಂಹ ಜಯಕಪಿಲ ಧನದತ್ತನೆಂದೆಂಬ । ವರಸೂನುಗಳ ಕರೆಸಿದನು ॥ ೧೬ ॥

ಪವನಂಜಯನೆಂಬಶ್ವರತ್ನವನಾಗ- । ಲವನೀಶಸುತ ತರಹೇಳಿ ॥
ತವಕದೊಳಗೆ ಕುದುರೆಯ ಸಾಣಿಹಿಡಿತಂದು । ಕುವರನ ಮುಂದೆ ನಿಲಿಸಲು ॥ ೧೭ ॥

ಕುದುರೆಯ ಲಕ್ಷಣವನು ಜ್ಞಾನಚಂದ್ರನು । ಚದುರಿಂದ ಬಲ್ಲನಾದೊಡೆಯು ॥
ಮುದದಿಂದಲೋರ್ವನೈತಂದು ಕುಮಾರಗೆ । ಪದಪಿಂದ ಕೈಗಳ ಮುಗಿದು ॥ ೧೮ ॥

ಚೆಲುವರ ಚೆನ್ನಿಗ ಲಾಲಿಸಿ ಕುದುರೆಯ । ವಿಲಸಿತ ಲಕ್ಷಣಗಳನು ॥
ನಲವಿನಿಂ ಪೇಳುವೆನೆಂದತಿ ಚದುರಿಂದಾ- । ಗಲಸದೆ ಪೇಳ್ದನಿಂತೆಂದು ॥ ೧೯ ॥

ಪರಿಕಿಸಲೀ ವಾಜಿಯ ದೃಷ್ಟಿಯುಗಲವು । ಹರಿಣಲೋಚನದಂತಿಹುದು ॥
ವರಶುಭಲಕ್ಷಣವಿದನಾಳ್ವ ಕುವರನು । ಧರೆಯನೆಲ್ಲವನಾಳುವನು ॥ ೨೦ ॥

ಕಿವಿಗಳು ಸಣ್ಣವಾಗಿಯು ಸೇರಿದವಾಗಿ । ವಿವರಿಸೆ ಮೊನೆ ತಾವಾಗಿ ॥
ನವನೂತನವಾಗಿದೆ ಇದನೇರಿದ । ಕುವರ ತಾನತಿ ಶೂರನಹನು ॥ ೨೧ ॥

ವರಗಂಡಮಂಡಲ ಸಣ್ಣನು ತೆಳುಪಾ- । ಗಿರಲದು ಶುಭವಿದನಾಳ್ವ ॥
ದೊರೆ ಶತ್ರುರಾಯರ ಭಾಗ್ಯಕೀರ್ತಿಗಳನು । ಭರದಿ ಶಿಥಿಲ ಸಣ್ಣ ಮಾಳ್ಪ ॥ ೨೨ ॥

ದಶನವು ಕೆಳಗಾರು ಮೇಲಾರು ತಾವಾಗಿ । ಶಶಿಯಂತೆ ಶುಭ್ರವಾಗಿದಕೋ ॥
ಕುಶಲದಿಂದಿದನಾಳ್ವ ಕುವರನ ಕೀರ್ತಿಯು । ಪಸರಿಸುವುದು ಮೂಜಗವ ॥ ೨೩ ॥

ಅಸಿದು ತೆಳ್ಳಿತು ಕೆಂಪು ಸೀಳ ಮೊನೆಯುಮಾಗಿ । ರಸನವಿದಕೊ ತಾನು ಶುಭದ ॥
ಎಸಕದಿಂದಿದನೇರಿದ ರಾಜಕುವರನ । ಹೊಸವಿಕ್ರಮ ಕುವ್ಯಾಪಿಪ್ಪುದು ॥ ೨೪ ॥

ನೊಸಲೊಳುರದೊಳದರದ ಮೇಲೆ ಮತ್ತೊಂ- । ದೆಸೆವ ಸುಳಿಗಳಿವೆ ಇದಕೆ ॥
ಹಸನಪ್ಪ ಶುಭವಿದನೇರಿದ ಕುವರನ । ದೆಸೆ ಲೋಕದೊಳು ಮೆರೆದಪ್ಪುದು ॥ ೨೫ ॥

ಪೇರುರವಾಗಿ ಸಿಡಿದು ಚಾಪಸ್ಕಂಧವು । ಚಾರು ಲಕ್ಷಣವಿದೆ ಇದಕೆ ॥
ಭೋರನೆ ಇದನೇರಿದ ರಾಜಕುವರಗೆ । ಸಾರವಸ್ತುಗಳು ಕೈಸಾರ್ಗು ॥ ೨೬ ॥

ಖುರಗಳ ಪಸರಿಸಿ ರೋಮ ತಾ ನರ್ತಿಸೆ । ಖುರ ಶುಭ್ರವಾಗಿದೆ ಇದಕೆ ॥
ಹರುಷದಿಂದಿದನೇರಿದ ರಾಯಕುವರನು । ನೆರೆ ಪುಣ್ಯವಂತ ತಾನಹನು ॥ ೨೭ ॥

ಧರೆಯನೀ ಕುದುರೆ ದಕ್ಷಿಣ ಪಾದದಿಂದ ತಾ- । ನಿರಿವುತ ದಕ್ಷಿಣದೆಸೆಗೆ ॥
ತ್ವರಿತದಿ ವಾಲ ಬೀಸುತಲಿದೆ ಇದನಾಳ್ವ । ಪುರುಷಸಿಂಹನು ಧರೆಯೊಳಗೆ ॥ ೨೮ ॥

ತುರಗ ಸೂರ್ಯನ ನೋಡುತಿದೆ ಬಲದಂಗವ । ಎರಕದಿಂದೀಕ್ಷಿಸುತಿದಕೋ ॥
ಹರುಷದಿಂದಿದನೇರಿದ ರಾಯಕುವರನು । ತರುಣಿಯರಾಳ್ವನು ಪಲರ ॥ ೨೯ ॥

ವರಮೇಘಧ್ವನಿಯಾಗಿದೆ ಪರಿಕಿಸಿ ನೋಡೆ । ಉರವ ತನ್ನಾಸ್ಯದಿ ತಾನು ॥
ಮೊರೆವುತ ಮುಟ್ಟುತಲಿದೆ ಇದನೇರಿದ । ದೊರೆ ಪಡೆವನು ವಿದ್ಯೆಗಳನು ॥ ೩೦ ॥

ಜಲಕೇಳಿಪ್ರಿಯ ಮಲ್ಲಿಗೆ ಗಂಧನುಳ್ಳುದು । ವಿಲಸಿತ ರಾಜ್ಯಾಜ್ಯಪ್ರಿಯನು ॥
ಪೊಳೆವ ರಜತನಿಭ ಶುಭ್ರಸುಕಾಯನು । ಸುಲಭನು ಶುಚಿ ಸನ್ನಿದ್ರ ॥ ೩೧ ॥

ಮೊರೆವ ಸಂಗೀತದೊಳಗೆ ಪ್ರೀತಿಯುಳ್ಳುದು । ಹರಿಯು ಗಮನ ಮತ್ತಿದಕೆ ॥
ವರ ಕೋಮಲ ದೇಹ ಜಾತಿಯೊಳ್ ಬ್ರಾಹ್ಮಣ । ಸುರುಚಿರ ಶುದ್ಧಾಶ್ವಾಸೀ ॥ ೩೨ ॥

ಸಿರಿಯನುಳ್ಳುದು ಮೇಧಾವಿ ಸ್ಥಿರಂಜೀವಿ । ವರಭದ್ರ ಪರಿಣಾಮಿ ತಾನು ॥
ಪರಿಕಿಸೆ ಸತ್ವಗುಣವನುಳ್ಳುದು ಇದು । ತುರಗರಾಜನು ಎಲೆ ಕುವರ ! ॥ ೩೩ ॥

ಇದನೀನೇರಲು ಸಕಲ ಸಾಮ್ರಾಜ್ಯವ । ಮುದದಿಂದಲಾಳ್ವೆ ವೈರಿಗಳ ॥
ಕದನದೊಳಗೆ ಗೆದ್ದು ದಿವ್ಯರೂಪವನುಳ್ಳ । ಸುದತಿಯರನು ಪಲವಾಳ್ವೆ ॥ ೩೪ ॥

ಇದಕೆ ಸಂಶಯ ಬೇಡವೆಂದು ನುಡಿದವಗೆ । ಚದುರರ ದೇವ ತಾ ಮೆಚ್ಚಿ ॥
ಪದಕ ಮುತ್ತಿನ ಸರ ಬಿಲ್ಲೆಯ ಸರಗಳ । ಮುದದಿಂದಲಿತ್ತ ತಾನವಗೆ ॥ ೩೫ ॥

ತುರಗವ ಸಿಂಗರಿಸೆಂದು ಕುಮಾರನು । ಒರೆಯಲಾಗೋರ್ವ ಚದುರನು ॥
ಎರಕದೊಳಗೆ ಸಿಂಗರಿಸಿದನೆಂತೆನೆ । ಒರೆವೆನು ಬಲ್ಲನಿತಾನು ॥ ೩೬ ॥

ಮಿರಿಮಿರಿ ಮಿಂಚುವ ಚಿನ್ನದ ಮೊಗರಂಬ । ತುರಗದ ಮುಖಕಳವಡಿಸೆ ॥
ಕರ ಚೆಲುವಿನ ಮುತ್ತಿನ ಕುಚ್ಚ ಕೆನ್ನೆಯೊ- । ಳ್ಕರ ಶೋಭಿಪಂತೆ ಕಟ್ಟಿದರು ॥ ೩೭ ॥

ಗಿಲಿಗಿಲಿರೆಂಬ ಪೊಂಗೆಜ್ಜೆಯ ಕೊರಲಿಗೆ । ನಲವಿನಿಂ ಕಟ್ಟಿ ಪಾದದೊಳು ॥
ಗಲಗಲರೆಂಬ ರನ್ನದ ಗಗ್ಗರಂಗಳ- । ನಳವಡಿಸಿದರಾಗ ನಾಲ್ಕ ॥ ೩೮ ॥

ಥಳಥಳಿಸುವ ನವರತ್ನದಿಂ ರಚಿಸಿದ । ವಿಲಸಿತವಾದ ಹಲ್ಲಣವ ॥
ಫಳಿಲನೆ ಹಾಕಿ ಮಾಣಿಕದ ಪಾವುಡಗಳ- । ನಿಳಿಯ ಬಿಟ್ಟರು ಎಡಬಲಕೆ ॥ ೩೯ ॥

ಅಲ್ಲಲ್ಲಿ ಸಾಲಾಗಿ ಮುತ್ತಿನ ನೀಲದ । ಉಲ್ಲಾಸದಿ ಮಾಣಿಕದ ॥
ನಿಲ್ಲದೆ ಪೊಳೆವ ಕುಚ್ಚಗಳೆಡಬಲದಲ್ಲಿ । ಸಲ್ಲೀಲೆ ಇಳಿಬಿಟ್ಟರಾಗ ॥ ೪೦ ॥

ಸೂರೆವಿಂಡುಗಳನು ತಮ್ಮಯ ಶುಭ್ರದಿ । ಜರೆದತಿ ನಿಡಿದಾಗಿ ತೋರ್ಪ ॥
ಕರ ಸೊಗಯಿಪ ಸನುಕಟ್ಟಿನ ಝುಲ್ಲಿಯ । ನೆರೆ ಇಳಿಬಿಟ್ಟರಿತ್ತೆರದಿ ॥ ೪೧ ॥

ಕಾಮನ ಬಿಲ್ಲ ಜರಿವ ಕಾಂತಿಯನುಳ್ಳ । ಹೇಮಾಸ್ತರಣವ ಚೆಲ್ವಿಂದ ॥
ಸೋಮವರ್ಣದ ವಾಜಿರಾಜನ ಪೃಷ್ಠಕೆ । ಪ್ರೇಮದಿಂದಳವಡಿಸಿದರು ॥ ೪೨ ॥

ಇಂತು ಸಿಂಗರಗೈದಶ್ವರತ್ನವ ಕಂಡು । ಸಂತಸದಿಂದಲಾ ಕುವರ ॥
ಕಂತುಮರ್ದನ ಜಿನದೇವನ ನೆನೆವುತ । ತಾಂ ತಳುವದೆ ಏರಿದನು ॥ ೪೩ ॥

ಮುತ್ತುಮಾಣಿಕದಿಂದ ಸಮೆದು ರಾರಾಜಿಪ । ಉತ್ತಮ ವಾಘೆಯ ಕುವರ ॥
ಬಿತ್ತರದಿಂ ವಾಮಕರದೊಳು ತಾನಾಂತು । ಉತ್ತಮನಾಯಕ ಸಖಗೆ ॥ ೪೪ ॥

ತುರಗವ ನೀನೇರಿ ಎಂದಪ್ಪಣೆಗೊಡೆ । ಹರುಷದಿಂದೈನೂರು ಮಂದಿ ॥
ಅರಸು ಮಕ್ಕಳು ವಾಜಿಗಳನು ತಾವೇರಿ । ಹರಿಸಾಡುತವಂದು ಬೆಡಗಿಂ ॥ ೪೫ ॥

ಮೆರೆವ ನೇಜಗಳನು ಮೇಲಕೆ ಹಾರಿಸಿ । ದೊರೆಮಗನಿಗೆ ಕೈಯ ಮುಗಿದು ॥
ಭರದಿಂದಲಿಳಿತಪ್ಪ ನೇಜೆಯಗಳನಾಂತು । ಸ್ವರದೋರಿದರು ಭೋ ಎಂದು ॥ ೪೬ ॥

ಮುತ್ತಿನ ಧವಳಾತಪತ್ರಂಗಳನಾ- । ಗೆತ್ತಿ ಪಿಡಿದರು ಲೀಲೆಯೊಳು ॥
ಬಿತ್ತರದಿಂದ ಕನಕದಂಡ ಚಮರವ- । ನಿತ್ತೆರದೊಳು ಢಾಳಿಸಲು ॥ ೪೭ ॥

ಕೊಳಲು ತಪ್ಪಟೆರುಂಜೆ ಚಿನ್ನಗಾಳೆಯು ಭೇರಿ । ಉಲಿವ ತಮ್ಮಟ ನಿಸ್ಸಾಳ ॥
ಬಲಮುರಿಜವಳಿ ಧವಲ ಶಂಖನಾದವು । ಘಳಿಲನೆ ಭೋರೆಂದು ಮೊರೆಯೆ ॥ ೪೮ ॥

ಪಲವು ಠಿಕ್ಕೆಗಳಾಕಾಶಮಂಡಲವನಂ- । ಡಲೆವುತೇರಲು ಬೆಡಗಿಂದ ॥
ಉಲಿವುತಿರಲು ವಂದಿಗಳು ಕೈಗಳನೆತ್ತಿ । ಚೆಲುವರದೇವ ಕುದುರೆಯ ॥ ೪೯ ॥

ಕರದಿಂದ ಕಂಧವ ತಟ್ಟಲು ವಾಜಿಯು । ವರದಕ್ಷಿಣ ಪಾದದಿಂದ ॥
ಧರೆಯನು ಬಡಿವುತ ತಥೈ ಥೈ ಎಂದು । ಕರಸೊಬಗಿಂದ ಕುಣಿವುತ ॥ ೫೦ ॥

ಥಳಥಳಿಸುವ ಮಿಂಚಿನಂತೆ ಬಲಕೆ ತಾ । ಹೊಳೆವುತ ಸಿಂಹನಂದದೊಳು ॥
ಘಳಿಲನೆ ಲಂಘಿಸಿ ಲಂಘಿಸಿ ನೆಗೆವುತ । ಇಳೆಯ ಮೆಟ್ಟದೆ ವಾಜಿರತ್ನ ॥ ೫೧ ॥

ಬುಸುಬುಸುಗುಟ್ಟುತ ಕೀಲನು ಕಡೆವುತ । ವಸುಧೆಗೆ ನೊರೆಯ ಕೆಡವುತ ॥
ಎಸಕದೊಳಗೆ ಹಮ್ಮಿಸುತ ಕುಣಿವುತೇರಿ । ವಸುಧೇಶ ಕುವರ ವೀಥಿಯೊಳು ॥ ೫೨ ॥

ದೌರತಿಕಸ್ಕಂಧಿತ ಪ್ಲುತ ವಲ್ಗಿತ । ಚಾರು ರೇಚಿತಗಳೆಂದೆಂಬ ॥
ಸೇರಿದ ಪಂಚಮಗತಿಯಿಂದ ಹಯವನು । ಭೂರಮಣೇಶ ನಂದನನು ॥ ೫೩ ॥

ಅತಿವಿಸ್ನಾಣದಿ ನಟಿಸಿ ಕುಣಿಸುತಾಗ । ಕ್ಷಿತಿಪಸುತರ ಕೂಡಿಕೊಂಡು ॥
ಮತಿವಂತ ಗಮಕದೊಳಗೆ ಬರುತಿರಲಾ । ನುತವೆತ್ತ ಪುರದ ನಾರಿಯರು ॥ ೫೪ ॥

ಮಾಡ ಮಡಿಲು ಸಜ್ಜೆ ಗೋಪುರ ಮರಗಳ । ಪ್ರೌಢೆಯರೇರಿಯಾತುರದಿ ॥
ನೋಡಿದರಾಗಿಟ್ಟ ದಿಟ್ಟಿಯ ತೆಗೆಯದೆ । ಗಾಡಿಕಾರನ ಬೆಡಗಿಂದ ॥ ೫೫ ॥

ಕಾಮಿನಿಯರು ಕಡೆಗಣ್ಣ ಕೊನೆಗಳಿಂದ । ಭೂಮಿಪಸುತನನು ನೋಡೆ ॥
ಕಾಮನ ಬಾಣಗಳವರಂಗವ ತಾಗಿ । ಭೂಮಿಯೊಳೊರಗಿಸೆಯವರು ॥ ೫೬ ॥

ಕಳವಳಿಸುವರು ಕಾತರಿಪರು ಕುವರನ । ಪೊಳೆವ ದಿವ್ಯಾಂಗವ ಕಂಡು ॥
ಘಳಿಲನೆ ಮೂರ್ಚ್ಛೆಯೊಗುವರೆಚ್ಚರುವರು । ಸುಳಿವರು ತಾವುಸ್ಸೆಂದು ॥ ೫೭ ॥

ದೊರೆ ದೊರೆಗಳ ಕುಮಾರಿಯರ್ರೈತಂದು । ಮುರುಕದಿಂ ಕುವರನ ನೋಡೆ ॥
ನೆರೆ ಸೋತು ಇವನೇ ಪ್ರಾಣೇಶ್ವರನುಳಿದರು । ಪರಿಕಿಸೆ ಸಹಜಾತರೆಂದು ॥ ೫೮ ॥

ತರುಣಿಯರುಗಳು ಭಾಷೆಯ ಮಾಡಿಕೊಂಡಾ- । ಗರಮಗನನು ನೋಡುತಿರಲು ॥
ತುರಗವ ಕುಣಿಸುತ ಬೀದಿ ಬೀದಿಗಳೊಳು । ಮೆರೆದಾಡುತ ಲೀಲೆಯೊಳು ॥ ೫೯ ॥

ಊರ ಹೊರಟು ಹೋಗಿ ಸಾರಿಯ ಮಾಳಕೆ । ಭೋರೆಂಬ ವಾದ್ಯದೊಗ್ಗಿನೊಳು ॥
ಮಾರಸನ್ನಿಭ ಜ್ಞಾನಚಂದ್ರ ಕುಮಾರನು । ಧೀರರರಸನೈತಂದು ॥ ೬೦ ॥

ಇತ್ತರದೊಳಗೆ ಸಾಲಾಗಿ ಕುದುರೆಗಳ । ಚಿತ್ತರದಿಂದ ತಾ ನಿಲಿಸಿ ॥
ಉತ್ತಮ ವಾಜಿಯ ಕಂಧವ ಬೊಳೈಸಿ । ಕತ್ತಿಯನಿಟ್ಟಂಬರಕೆ ॥ ೬೧ ॥

ಧರೆಯೊಳು ನಿಂಬೆಯ ಹಣ್ಣನುರುಳ ಬಿಟ್ಟು । ತುರಗವನೋಡಿಸಾಡುತ್ತ ॥
ತ್ವರಿತದಿಂ ಮೇಣದ ಬೊಂಬೆಯಂದದಿ ಬಾಗಿ- । ಯರಮುಗ ನಿಂಬೆಯಹಣ್ಣ ॥ ೬೨ ॥

ಎರಕದಿಂ ಪಿಡಿದು ತಾ ಕೆಳಯಿಕೆ ಬರುತಿರ್ದ । ಸುರಗಿಯ ಮೊನೆಯನು ಪಿಡಿದು ॥
ಹರುಷದಿಂ ಭೋಯೆಂದಾಲಿ ಬೊಬ್ಬಿರಿವುತ । ತುರಗವನೋಡಿಸಾಡಿದನು ॥ ೬೩ ॥

ತುರಗದ ಮೇಲು ಭಾಗದಿ ನಿಂದು ಕುವರನು । ಕರದಿ ಚಕ್ರಗಳ ತಿರಿವುತ ॥
ದುರಗಲಿದುವ್ವಾಟದಿಂದ ವಾಜಿಯ ತಾ । ಭರದಿಂದಲೋಡಿಸಾಡುವನು ॥ ೬೪ ॥

ಕುದುರೆಯ ಬಟುವ ತಿರುಗಿಸುತಿರ್ದಂದದಿ । ಚದುರರರಸ ಕೆಳಗಿದ್ದ ॥
ರದುನವ ಹೊಂಜೆಳೆಯಂದದಿ ತಾ ಬಾಗಿ । ಕುದುರೆಯ ಮೇಲಿರ್ದು ತೆಗೆವ ॥ ೬೫ ॥

ದೊರೆಕುವರರನೆಲ್ಲರಗೂಡೆರಡು ಫೌಜ- । ನರಮುಗ ಮಾಡಿ ಲೀಲೆಯೊಳು ॥
ಎರಕದಿಂ ನೇಜೆಯವನು ಕರದೊಳಗಾಂತು । ಭರದಿ ಭೋ ಎಂದಾಲಿ ಕೂಗಿ ॥ ೬೬ ॥

ತುರಗವನೋಡಿಸಾಡುತಲೊಬ್ಬರೊಬ್ಬರು । ಭರದಿ ತೀವಿದ ಪೆಟ್ಟುಗಳ ॥
ಕರಣದಿಂ ಹೊಡೆದು ಹೊಡೆದು ತಪ್ಪಿಸಿಕೊಂಡು । ಹರಿಸಾಡುವರು ಹರಿಗಳನು ॥ ೬೭ ॥

ರಾಜಕುಮಾರಕರುಗಳೆಲ್ಲರ ಹಿಂದೆ । ಫೌಜಾಗಿ ನಿಲ್ಲಿಸಿ ಮುದದಿ ॥
ಆ ಜಿನಚಂದ್ರನ ಸೂನು ತಾನೊಬ್ಬನೆ । ತೇಜಿಯನೇರಿ ಕುಣಿಸುತ ॥ ೬೮ ॥

ಕುವರಸಿರಲು ಬೋ ಎಂದುಲಿ ಬಂದೆಲ್ಲ । ತವಕದಿಂ ಸುತ್ತಿಕೊಂಡಾಗ ॥
ಅವುದಿ ನೇಜೆಯವು ಮುಂತಾದಾಯುಧಗಳ । ಲವಲವಿಕೆಯಿಂ ಬೀಸುತಿರಲು ॥ ೬೯ ॥

ಹೊರಕೈಯಿಂ ತಟ್ಟಿ ಹುಯ್ದು ನೇಜಗಳನು । ಸುರಗಿಯ ಮೊನೆಯಿಂ ತಪ್ಪಿಸುತ ॥
ಬರುವ ಗದೆಯ ಕಂಕುಳ ಸಂಧಿಂತೌಚುತ । ತುರಗರೆನಂತೆ ಜ್ಞಾನೇಂದು ॥ ೭೦ ॥

ದೊರೆಕುವರರುಗಳ ಹಿಂದು ಹಿಂದುಗಳನು । ತುರಗಹೊಗಿಸಿ ಕೆದರಿಸುತ ॥
ನೆರೆಗಲಿಗಳ ಹಿಂದುಮುಂದನು ಮಾಡುತ । ಕರದಿ ತಟ್ಟುತ ವಾಜಿಕೊರಲ ॥ ೭೧ ॥

ಅವನೀರಮಣರ ನಂದನರುಗಳನು । ಸವಿನಯದಿಂ ಕೂಡಿಕೊಂಡು ॥
ಭುವನವ ತುಂಬಲು ವಾದ್ಯದ ರಭಸವು । ದಿವಿಜೇಂದ್ರ ವೈಭವದಿಂದ ॥ ೭೨ ॥

ಜ್ಞಾನಚಂದ್ರನು ಹಿರಿದಹ ಸಂತಸದೊಳು- । ದ್ಯಾನವನಕೆ ನಡೆತಂದು ॥
ಮಾನಿತನುಪ್ಪುಪ್ಪರತ್ನವನಿಳಿದು ಸು- । ಮಾನದಿಂ ವನದೊಳಪೊಕ್ಕು ॥ ೭೩ ॥

ದೊರೆ ದೊರೆಗಳ ಕುಮಾರಕರೊಡವರೆ । ನೆರಗಲಿ ಹಾವುಗೆ ಮೆಟ್ಟಿ ॥
ಮುರಿದು ನಿಟ್ಟಿಸುತ ನಾಲ್ದೆಸೆಯ ವಿಡಾಯದಿ- । ನರಮುಗ ನಡೆತರುತಿರ್ದ ॥ ೨೪ ॥

ಪಲಸಿನ ಬೇರೊಳು ಪಣ್ಣಾಗಿ ಗಂಧವ । ಪಲವು ದಿಕ್ಕಿಗೆ ಬೀರೆ ತುಂಬಿ ॥
ನಲಿದು ಬಂದಾಗ ಝೇಂಕರಿಸಿ ಎರಗುವುದ । ಕಲಿಗಳರಸ ಕಂಡನಾಗ ॥ ೨೫ ॥

ಮಾವಿನ ಕೊನೆ ಕೊನೆದಪ್ಪದೆ ಪಣ್ಗಳು । ಶೀವಿರೆ ಗಿಳಿ ಬಂದು ಕುಟುಕಿ ॥
ಕಾವರಾಯನ ಬಿರುದನು ಪಾಡುತಿರ್ದುದ । ಭೂವರಸುತ ಕಂಡನಾಗ ॥ ೨೬ ॥

ಜಂಬುಸೇರಿಲ ಪಣ್ಗಳ ಫಲವನು ತಿಂದು । ಕೊಂಬೇರಿಯೊಂದರಗಿಳಿಯು ॥
ಕುಂಭಿನೀಪತಿ ಬಂದಿರೆ, ಕ್ಷೇಮವೆ ಎಂಬ । ಸಂಭ್ರಮವನು ಕೇಳಿ ನಕ್ಕ ॥ ೨೭ ॥

ಒಂದು ಕೋಡಗ ತಾಳವ ಬಾಜಿಸೆ ಮ- । ತ್ತೊಂದು ಕೋಡಗ ಮದ್ದಳೆಯ ॥
ನಿಂದು ಪಲವು ಕೋಡಗ ನರ್ತನದಿಂ ನ- । ರೇಂದ್ರಸುತನ ನಗಿಸಿದವು ॥ ೨೮ ॥

ಕುವರ ನಿನ್ನಯ ಕೀರ್ತಿಲತೆಯೀಯಂದದಿ । ಧವಲವರ್ಣವು ಎಂದು ತಾವು ॥
ಸವಿನಯದಿಂ ಪೇಳ್ದಪವೋ ಎಂಬಂದದಿ । ನವಮಲ್ಲಿಗೆ ಮೊಗ್ಗೆಯಿಹವು ॥ ೨೯ ॥

ನಂದನವನವಕ್ಕು ನೃಪ ನಿನ್ನಯ ಬೀರ- । ದಂದವಿಂತೆಂದು ತೋರ್ಪಂತೆ ॥
ಬಂಧುರವಾದ ಮೊಗ್ಗೆಯನಾಂತು ರಾಜಿಪ । ಬಂದುಗೆಯರಳನು ಕಂಡ ॥ ೩೦ ॥

ಆಡುವ ನವಿಲಿಂದ ಪಾಡುವ ಪಿಕದಿಂ ಮಾ- । ತಾಡುವ ರಾಜಕೀರಗಳಿಂ ॥
ಕೂಡೆಗೊಡಸುವ ಗೋರವಗಳಿಂದುದ್ಯಾನ । ಮಾಡಿತಚ್ಚರಿಯನು ನೃಪಗೆ ॥ ೩೧ ॥

ಇಂತು ವಿರಾಜಿಪ ವನವ ನೋಡುವ ಭೂ- । ಕಾಂತತನಯ ಸಖರ್ವೆರಸಿ ॥
ಮುಂತೆ ಪೋಗುತ ಕಟ್ಟಿದಿರೊಳಗಾಗೊಂದು । ದಂತೀಂದ್ರನ ಕಂಡು ಕುವರ ॥ ೩೨ ॥

ಇದರ ಸಾಮರ್ಥ್ಯವ ನೋಡಬೇಕೆಂದಾಗ । ಚದುರಿಂದ ತಾನೈತಂದು ॥
ಬೆದರಿಸಿ ಕೊಬ್ಬುರಿತವ ಮಾಡಲಾಗದು । ಒದವಿದ ಕೋಪಾಟೋಪದೊಳು ॥ ೩೩ ॥

ಶಿರವ ಮೇಲಕೆ ಎತ್ತಿ ನೋಡಿ ಬೃಂಹಿತ ಮಾಡಿ । ಕರವ ತಾನೆತ್ತಿ ಭೂಮಿಯನು ॥
ಒರಸುತ ಪಾದಗಳಿಂದ ಬಾಲವ ತಾ- । ನಿರದೆತ್ತಿಕೊಂಡು ಮೊರೆವುತ ॥ ೩೪ ॥

ಭರದಿಂದ ಲಂಘಿಸಿ ಕುವರನೆಡೆಗೆ ಬಂದು । ಕರವನು ಪಿಡಿವೆನೆಂಬಾಗ ॥
ಶಿರಬಾಗಿ ಕುವರ ಭೂಮಿಯೊಳು ಮಲಗಿಕೊಂಡು । ಪರಿಪನಳಲಿ ಪಾವದಿಂದ ॥ ೩೫ ॥

ಒರಸುವ ಪದದೊಳು ನಾಲ್ಕಡಿ ಮಧ್ಯಕೆ । ಉರುಳಿದನತಿ ಬಿನ್ನಾಣದೊಳು ॥
ಶಿರವ ಕೊಡಹಿ ಕೆಕ್ಕಳಗೇಳಲು ಮತ್ತ- । ದ್ವಿರದ ಹಿಂದಣ ಚರಣದೊಳು ॥ ೩೬ ॥

ಒದೆಯೆ ಮುಂದಣ ಚರಣಕೆ ಬರೆ ಕುವರನು । ಮದದಂತಿ ಮುಂದಣಾಂಘ್ರಿಯೊಳು ॥
ಒದಿವೆನೆಂಬಷ್ಟರೊಳಗೆ ರಾಜಕುವರನಾ- । ಗುದರವ ಬಂದು ಸೇರಿದನು ॥ ೩೭ ॥

ಶುಂಡಾಲ ಕೆಕ್ಕಳಗೆಳಲಿ ಘೋರ್ವರಿವುತ । ಮುಂಡೆಯ ಕೊಡಹುತ ತನ್ನ ॥
ಶುಂಡಿಲನುದರಕೆ ತಂದಾಗಲರಸುತ । ಬೆಂಡಾಗಿ ಬೆದ ಬೆದ ಬೆಂದು ॥ ೮೮ ॥

ಕರದಿಂದ ಭೂಮಿಯನಪ್ಪಳಿಸುತ ಬೇಗ । ಚರಣವನಿರದೆ ಚಿಮ್ಮಿಸುತ ॥
ನೊರೆ ಬಾಯಿಂದ ಜೊಲ್ಲಿಡುತ ಬೆಮರ್ವನಿ । ಸುರಿವುತ ಕಂಪನ ಪುಟ್ಟಿ ॥ ೮೯ ॥

ನಾಗನ ಕೋಪವ ಕಂಡು ಕುಮಾರಕ । ಬೇಗವಿಂ ಜಗುಳಿಯುದರದಿ ॥
ತೂಗಿ ಬೊಬ್ಬಿರಿದು ಭುಜವ ತಟ್ಟಿಕೊಳ್ಳುತ- । ಲಾಗ ಮುಂದಕೆ ಬಂದು ನಿಲಲು ॥ ೯೦ ॥

ಕಂಡು ಕುವರನ ಕೋಪದೊಳು ತೀವಿದ ವೇ- । ತಂಡವೊಪ್ಪಿತು ಈಶನಡಿಯು ॥
ಲಂಡತನದಿ ಕಾಷ್ಟನೆಂದಾದಿ ಸೃಷ್ಟಿ ಭೂ- । ಮಂಡಲವಿರದಂತಾಯ್ತು ॥ ೯೧ ॥

ಎರಡು ದಂತಂಗಳ ಮಧ್ಯದಿ ರಾಜಿಪ । ದೊರೆಯೊಪ್ಪಿದನೆಂತೆನಲು ॥
ಕರಿಯ ಮೇಘದೊಳಿರ್ದ್ದ ತಟಿದ್ಯುಗ ಮಧ್ಯದಿ । ಮೆರೆವ ಸೂರ್ಯನೊ ಎಂಬಂತೆ ॥ ೯೨ ॥

ಮರಣ ನಡೆಯುಮದ ಕಂಡು ಕೋಪದಿ ಕರಿ । ಭರದಿ ಒದರಿ ನೆಲಕಿಡಲು ॥
ಅರಮಗ ಲಘುಕರಣದೊಳು ಭೂಮಿಯೊಳಿರೆ । ದ್ವಿರದ ಕೊಲುವೆನೆಂದು ಬರಲು ॥ ೯೩ ॥

ದುಗುಲವ ಮೊಗದೊಳು ಕೌಚಿ ಕುಬ್ಬಿರಿತವ । ಜಗದೇಕವೀರ ತಾ ಮಾಡೆ ॥
ತೆಗೆ ಬಿಗಿಯಿಂದಲಾ ಸಾಮಜ ವಸ್ತ್ರವ । ಸಿಗಿದು ಹಾಕುವೆನೆಂಬಷ್ಟರೊಳು ॥ ೯೪ ॥

ನೆಗೆದು ದಂತವ ಮೆಟ್ಟಿ ಬೆನ್ನಮೇಲಕೆ ಬಂದು । ದಿಗಿಲನೆ ಕುಂಜರಪತಿಯ ॥
ಅಗಣಿತ ಕರಣದಿ ಮದವನು ಉಡುಗಿಸಿ । ಹೆಗಲನೇರಿದ ಜ್ಞಾನಚಂದ್ರ ॥ ೯೫ ॥

ಕರಿಯ ಮಸ್ತಕದೊಳು ರಾಜಿಪ ಕುವರನ । ಮುರುಕವೊಪ್ಪಿತು ಎಂತೆನಲು ॥
ಕರಿಯ ಮೇಘದ ಮೇಲ್ಭಾಗದಿ ರಂಜಿಪ । ಪರಿಪೂರ್ಣಚಂದ್ರನಂತಿಹನು ॥ ೯೬ ॥

ಕರಿಘಟಸ್ಕಂಧವನಡರಿ ರಾಜಿಸುತ್ತಿ- । ರ್ಪರಮಗನೆಸೆದನೆಂತೆನಲು ॥
ಸುರಕರಿಮಸ್ತಕವಡರಿ ರಾಜಿಸುತಿರ್ದ । ಸುರಪನೋ ತಾನೆಂಬಂತೆ ॥ ೯೭ ॥

ಆ ಸಮಯದೊಳೋರ್ವನಂಬರಚರನಾ- । ಕಾಶದಿಂ ಭರದಿಳಿತಂದು ॥
ಭೂಸತಿಯಾಣ್ಮನ ಕರಿಶಿರದಿಂದ ವಿ- । ಲಾಸದೊಳಗೆ ಕೊಂಡು ಪೋದ ॥ ೯೮ ॥

ವನಕರಿಶಿರದ ಮೇಲಿರ್ದ ಕುಮಾರನ । ಘನಪಥಕೊಯ್ಯೆ ಕಂಡಿತ್ತ ॥
ವನದೊಳಗಿರ್ದ ಸಖರು ತಳವೆಳಗಾಗಿ । ಘನದುಃಖದೊಳಗಳಲುತ್ತ ॥ ೯೯ ॥

ವನವ ಪೊರಟು ಬಂದೈನೂರು ಕುವರರು । ಇನಿಸು ಬೇಗದಿ ಪುರವೊಕ್ಕು ॥
ಮನುಜೇಶನೋಲಗ ಶಾಲೆಗೆ ನಡೆತಂದು । ಜಿನಚಂದ್ರ ನೃಪಗೆ ಕೈ ಮುಗಿದು ॥ ೧೦೦ ॥

ದೇವ ! ಬಿನ್ನಪ ನಮ್ಮೆಲ್ಲರನೊಡಗೊಂಡು । ಕೋವಿದ ಜ್ಞಾನೇಂದು ಕುವರ ॥
ಈ ಊರಾರಾಮದಿ ಕ್ರೀಡಿಸುತಿರಲೊಂದು । ಭೂವರ ಮದಸೊಕ್ಕಿದಾನೆ ॥ ೧೦೧ ॥

ಮೇಲುವಾಯಲು ಬಂದು ಜ್ಞಾನೇಂದು ಕುವರನಾ- । ಗಾರ್ದು ಬೊಬ್ಬಿರಿದು ಕುಣಿವುತ ॥
ಚಾಲಿವರಿಸಿ ಬತ್ತೀಸ ಬಿನ್ನಣದಿಂದ । ಮೇಲಕ್ಕೆ ನೆಗೆದು ಕುಳ್ಳಿರಲು ॥ ೧೦೨ ॥

ಕರಿಯ ಮುಗಿಲನೇರಿರ್ದಿಂದುಲೇಖೆಯು । ಉರಗನು ಕರ್ಚಿ ಪಾರ್ದಂತೆ ॥
ಕರಿಯ ಮಸ್ತಕದಲ್ಲಿ ಕುಳಿತಿರ್ದ ಕುವರನ । ದುರುಳನೋರ್ವನು ಕೊಂಡುಪೋದ ॥

ಎಂದಾಗ ನರಸಿಂಹ ಮುಂತಾದ ಗೆಣೆಯ- । ರಂದು ಕುವರನ ವಿಕ್ರಮವ ॥
ಒಂದುಳಿಯದೆ ತಾವು ವಿಸ್ತರದಿಂ ಜ- । ನೇಂದು ನೃಪಗೆ ಪೇಳೆ ಕೇಳಿ ॥ ೧೦೪ ॥

ಅಕಟಕಟಾ ಕೊಂಡುಪೋದನೆ ಎನ್ನಯ । ಸುಕುಮಾರನನೆಂದಿಳೆಯೊಳು ॥
ಅಕಲಂಕತೇಜ ಮೂರ್ಛಿತನಾಗಿ ಬೀಳಲು । ಸಕಲ ಬಂಧುಗಳೆಲ್ಲ ನೆರೆದು ॥ ೧೦೫ ॥

ಪನ್ನೀರನು ಕಣ್ಣ ಮೂಗಿಗೆ ತಂದೊತ್ತಿ । ಪನ್ನೆಗರ್ಪುರವ ನಯನಕೆ ॥
ಚೆನ್ನಾಗಿ ತೊಡೆದು ಬಿಜ್ಜಣಿಗೆಯಿಂ ಬೀಸಿ ಸಂ- । ಪನ್ನನೆಚ್ಚತ್ತಿಂತು ನುಡಿದ ॥ ೧೦೬ ॥

ಚಾಂಡಾಲ ಗಜ ನಿನ್ನ ಕಂಡು ಕೊಲುವೆನೆಂದು । ಶುಂಡಿಲ ತಾನೆತ್ತಿ ಬರಲು ॥
ದಂಡಿಸಿ ಮದವ ಪ್ರಚಂಡ ನೀಸಿರದೆ ವೇ- । ತಂಡದ ಶಿರವೇರಿ ಕಂಡು ॥ ೧೦೭ ॥

ಕುರುಬತನದಿ ಎತ್ತಿಕೊಂಡು ಪೋದವನವ । ಸುರನೋ ಕಿನ್ನರನೋ ರಾಕ್ಷಸನೋ ॥
ಗರುಡನೋ ವಿದ್ಯಾಧರನೋ ಕಿಂಪುರುಷನೋ । ಉರಗನೋ ಯಕ್ಷಕುಲಜನೋ ॥ ೧೦೮ ॥

ಆರು ಕೊಂಡೊಯ್ದರೋ ಎನ್ನ ಕಂದನ ನಿ- । ಸ್ಸಾರಹೃದಯರು ಪಾಪಿಗಳು ॥
ಕ್ರೂರರು ಖಳರು ನಿರ್ದಯರು ವಂಚಕರಾದ । ನಾರಕಗಮನರಿಂದಳಲ್ದು ॥ ೧೦೯ ॥

ಹಾ ಹಾ ಸಕಲ ಭೂಪಾಲವಂದಿತ ಪಾದ । ಹಾ ಹಾ ಮನುಜ ಮಂದಾರ ! ॥
ಹಾ ಹಾ ಚತುರ್ವಿಧ ಪಾಂಡಿತ್ಯ ಕೋವಿದ । ಹಾ ಹಾ ಮನ್ಮಥಾಕಾರ ! ॥ ೧೧೦ ॥

ಹಾ ಹಾ ಕುರುವಂಶಾಂಬರ ದಿನಮಣಿ । ಹಾ ಹಾ ಬುಧಜನವಿನುತ ! ॥
ಹಾ ಹಾ ಯಾಚಕಜನಕಲ್ಪಭೂರುಹ । ಹಾ ಹಾ ಗೃಹಮಣಿದೀಪ ! ॥ ೧೧೧ ॥

ಹಾ ಹಾ ಸಂಗೀತ ಸಾಹಿತ್ಯ ನಿಪುಣನೆ ! । ಹಾ ಹಾ ಗುಣಗಣಾಭರಣ ! ॥
ಹಾ ಹಾ ಯುವತೀಜನರ ಕೈರವಚಂದ್ರ । ಹಾ ಹಾ ರಿಪುವನದಹನ ! ॥ ೧೧೨ ॥

ಎಂದಿಂತು ಮೊದಲಾದ ದುಃಖಾಕುಲದಿಂದ । ಅಂದು ದಂಪತಿಗಳು ಪಲುಬಿ ॥
ನಂದನ ನಮ್ಮನು ಬಿಟ್ಟು ಪೋಗುವುದಕೆ । ಬಂದೆಯೆಲಾ ಬಸಿರೊಳಗೆ ॥ ೧೧೩ ॥

ಕಡುಬಡವನು ಚಾರಿವರಿವುತಲಿರ್ದೊಮ್ಮೆ । ಕಡವರವನು ಕಂಡಂತೆ ॥
ಒಡನೆ ಜಾತ್ಯಂಧಕ ಕಣ್ಗಳ ಪಡೆದಂತೆ । ಪಡೆದೆ ನಾನಿಂತಾಯ್ತೆ ಅಕಟ ॥ ೧೧೪ ॥

ಅನಿತರೊಳಗೆ ಕುಮಾರಕನೇರುವ ಹಯ- । ವನಿಲಂಜಯವೆಂದೆಂಬ ॥
ಘನವಾಜಿಯು ತಂದು ಮುಂದೆ ಹಿಡಿಯಲದು । ಮನದೊಳು ಕೊರಗಿ ಶಿರವನು ॥ ೧೧೫ ॥

ಬಾಗಿ ಕಣ್ಬನಿಗಳ ಘುಳುಘುಳು ಸುರಿವುತ । ಬೇಗದಿ ಮೂರ್ಛೆಗೆ ಸಂದು ॥
ಲಾಗಿಸಿ ಭೂಮಿಯೊಳೊರಗಿರೆ ಜಿನಚಂದ್ರ- । ಗಾಗ ಉಣ್ಮಿತ್ತು ಬಹುದುಃಖ ॥ ೧೧೬ ॥

ಸಿರಿಕಾಂತೆಯುದ ಕಂಡು ಭೂಮಿಯೊಳಗೆ ಬಿರ್ದು । ಹೊರಳಿದಳ್ಪುರಜನವೆಲ್ಲ ॥
ಮೊರೆಯಿಟ್ಟು ಗೋಳಿಟ್ಟರು ದೊರೆದೊರೆಗಳು । ಶಿರಬಾಗಿ ಸುರಿದು ಕಣ್ಬನಿಯ ॥ ೧೧೭ ॥

ಬೇಡ ತನುಜ ನನ್ನನಳಲಿಸುವುದು ಈಗ । ಪಾಡಲ್ಲ ಬಾಬಾರೆಂದು ॥
ನೀಡಿ ಹಸ್ತವ ಭ್ರಾಂತಿಗೊಂಡು ಭೂಪಾಲ ನಾ- । ತಾಡುತಲಿರಲಷ್ಟರೊಳಗೆ ॥ ೧೧೮ ॥

ಎಲೆ ಜಿನಚಂದ್ರ ! ಶೋಕವ ಬಿಡು ನೀನೀಗ। ಪಲಬದಿರ್ಕೈ ಬಹುತೆರದಿ ॥
ಕಲೆವಂತನಾಗಿ ಪಲವು ಕನ್ಯಾರತ್ನವ । ನಲವಿನಿಂ ಪಡೆದರಿನೃಪರ ॥ ೧೧೯ ॥

ಸೊಕ್ಕ ಮುರಿದು ಬಹು ರತ್ನವಾಹನಗಳ- । ನಕ್ಕರಿಂದಾಂತು ಕೀರ್ತಿಯನು ॥
ದಿಕ್ಕುದಿಕ್ಕಿಗೆ ಪಸರಿಸಿ ಜಯವೆಣ್ಣನು । ಗಕ್ಕನೆ ತಾನಮರ್ದಪ್ಪಿ ॥ ೧೨೦ ॥

ಗಗನೇಚರಭೂದೇಶವ ಸಾಧಿಸಿ । ಸುಗುಣ ವಿದ್ಯವ ಪಲವಾಂತು ॥
ಜಗದೇಕವೀರ ಕೆಲವು ದಿನದಿಂ ಮೇಲೆ । ಸೊಗಸಿಂದ ಜ್ಞಾನೇಂದುಕುವರ ॥ ೧೨೧ ॥

ನಿನ್ನ ಸಾರುವ ನಿನಗೇಕೆಯುಮ್ಮಳವೆಂದು । ಸನ್ನುತ ದೇವವಾಕ್ಯಾಗ ॥
ಚೆನ್ನಾಗಿಯಂಬರದೊಳು ನುಡಿಯಲು ಕೇಳಿ । ಗನ್ನಗಾರನು ಚಿಂತೆಯನು ॥ ೧೨೨ ॥

ಉಳಿದು ತನ್ನಯ ಪ್ರಾಣಕಾಂತೆ ಶ್ರೀಕಾಂತೆಯ । ಕಳವಳವನು ಪರಿಹರಿಸಿ ॥
ಇಳೆಯನು ಪ್ರತಿಪಾಲಿಸುತ ಸಂತೋಷದಿ । ಗೆಲವೆರೆಯುತ್ತ ಖೇಚರನು ॥ ೧೨೩ ॥

ತನ್ನಾಳ್ದನಾಜ್ಞೆಯ ಮೀರದೆ ರಜತಾದ್ರಿ । ಪ್ರೋನ್ನತ ದಕ್ಷಿಣ ತಟದ ॥
ಉನ್ನತ ರತ್ನಪುರದ ಬಹಿರ್ವನದ ಪ್ರ- । ಸನ್ನ ಜಿನಾಲಯದೊಳಗೆ ॥ ೧೨೪ ॥

ಇರಿಸಲೊಡನೆ ಜ್ಞಾನೇಂದು ಕುಮಾರಕ- । ನೆರಕದೊಳಗೆ ಜಿನಗೃಹವ ॥
ಕರಜೋಡಿಸಿ ಬಲವಂದು ಒಳಗೆಪೊಕ್ಕು । ಅರುಹಗೆ ಸಾಷ್ಟಾಂಗವೆರಗಿ ॥ ೧೨೫ ॥

ಕರಗಳ ಸೊಸಲಿಗೆ ತಂದತಿ ಭಕ್ತಿಯಿಂ । ನರನಾಥ ಚಂದ್ರಮನಾಗ ॥
ದರುಶನ ಸ್ತೋತ್ರವನತಿ ಚದುರಿಂದ ತಾ- । ನೊರೆದನೆಂತೆನಲು ಪೇಳುವೆನು ॥ ೧೨೬ ॥

॥ **ಸ್ತೋತ್ರ** ॥ ದೇವನಾರಕತಿರಿಯಂಚಮಾನುಷವೆಂಬ। ತೀವಿದಾರ್ಣವ ಮಧ್ಯದೊಳು॥
ಕಾವರ ಕಾಣದೆ ಕರ್ಮಾವರ್ತದಿ ಸಿಕ್ಕಿ । ನೋವೆನ್ನೆತ್ತೆಲಿ ಅರುಹ ! ॥ ೧೨೭ ॥

ಪರಮಾಗಮ ನಿನ್ನೊಳುನುಡಿಯಿಸ್ಸದೆ । ದುರುಳರೊರೆದ ಕುಶಾಸ್ತ್ರವನು ॥
ಪರಮಾಗಮವೆಂದು ನಂಬಿ ನಾ ಕೆಟ್ಟೆನು । ವರಮುಕ್ತಿದೋರಿಲೆ ಅರುಹ ! ॥ ೧೨೮ ॥

ಪರಮ ದಯಾಳು ! ನೀನೆಂಬುದನರಿಯದೆ । ಹರಿಹರ ಬಿದಿಗಳ ನಂಬಿ ॥
ತಿರುಗಿಯನಂತ ಭವಾರಣ್ಯದೊಳು ನೊಂದೆ । ವರಪಥದೋರಿಲೆ ಅರುಹ ! ॥ ೧೨೯ ॥

ಅಷ್ಟಮದಗಳಿಂದ ಗರ್ವೋದ್ಧತನಾಗಿ । ಶಿಷ್ಟರ ನಾನು ಲೆಕ್ಕಿಸದೆ ॥
ಕೆಟ್ಟೆನು ನಿಮ್ಮಡಿಗಾಣದೆಯೆಂದು ತಾ । ಕೊಟ್ಟು ಮೋಕ್ಷವ ರಕ್ಷಿಸರುಹ ! ॥ ೧೩೦ ॥

ಜರೆಮೃತ್ಯು ಜನ್ಮವೆಂದೆಂಬ ದಾವಾಗ್ನಿಯಿಂ । ನೆರೆ ಬೆಂದು ದುಃಖಿಸುವೆನ್ನ ॥
ವರಸಮ್ಯಕ್ತ್ವವೆಂಬಮೃತವ ಕರೆದೀಗ । ವರಮೋಕ್ಷಕಟ್ಟೆಲೆ ಅರುಹ ! ॥ ೧೩೧ ॥

ಇವು ಮೊದಲಾದ ಪಲವು ಸ್ತೋತ್ರಗಳಿಂದ । ಭವಹರ ಜಿನನ ಕೊಂಡಾಡಿ ॥
ಕುವರ ಬೀಳ್ಕೊಂಡು ರನ್ನದ ಮಂಟಪದೊಳು । ಸವಿನಯದಿಂ ಕುಳಿತಾಗ ॥ ೧೩೨ ॥

ಎಲೆ ಖೇಚರ ! ನನ್ನ ನೀನಿಲ್ಲಿಗೆ ತಂದ । ನೆಲೆಯನೆನ್ನೊಡನೆ ಚೆನ್ನಾಗಿ ॥
ಅಂತರಿಸದೆ ಪೇಳೆನೆ ಕರಮುಗಿದವ । ನಲವಿನಿಂ ನುಡಿದನಿಂತೆಂದು ॥ ೧೩೩ ॥

ಈ ರತ್ನಪುರವನಾಳುವ ವಿದ್ಯಾಧರ । ಮಾರಸನ್ನಿಭ ಸಿಂಹಬಲಗೆ ॥
ವಾರಿಜಾಕ್ಷಿಯರು ಸಂಭವಿಸಿದರೆಣ್ಬರು । ಕಾರುಣಪುರುಷ ! ನೀ ಕೇಳು ॥ ೧೩೪ ॥

ಇಂದುವದನೆಯರು ಹಂಸಗಮನೆಯರು । ಕುಂದಕುಡ್ಮಲ ರದನೆಯರು ॥
ಇಂದೀವರ ಮೊಗ್ಗೆ ಮೊಲೆಯ ಚೆನ್ನೆಯರು । ಬಂದುಗೆದುಟಿಯ ಸೀರೆಯರು ॥ ೧೩೫ ॥

ಕಂಬುಕಂಧರಿಯರು, ನೀಳಾಳಕಿಯರು । ಪೊಂಬಾಳೆದೊಡೆಯ ಪ್ರೌಢೆಯರು ॥
ತುಂಬುಜವ್ವನೆಯರೊಪ್ಪಿದರು ದಿಗ್ವೆಣ್ಣುಗ- । ಳೆಂಬಂತೆ ತಮ್ಮ ರೂಪಿಂದ ॥ ೧೩೬ ॥

ಒಂದಾನೊಂದು ಪಗಲು ನಮ್ಮಯ ಊರ । ನಂದನವನಕೋರ್ವ ಮುನಿಯು ॥
ಬಂದಿರಲಾ ಸಿಂಹಬಲ ಖೇಚರನಾ- । ನಂದದಿಂದಲ್ಲಿಗೆ ಪೋಗಿ ॥ ೧೩೭ ॥

ಎರಗಿ ಧರ್ಮಾಧರ್ಮದಿರವನು ತಾ ಕೇಳಿ । ಕರಗಳ ಮುಗಿದೆಲೆ ಜತಿಯೆ ! ॥
ಗರುವೆಯರೆಣ್ಬರೆನ್ನಯ ನಂದನೆಯರ್ಗೆ । ವರನಾರು ನಿರವಿಸೆಂದೆನಲು ॥ ೧೩೮ ॥

ಖಗ ! ಕೇಳು ಕನಕಪುರದ ಬಹಿರ್ವನದೊಳು । ನಗದಂತೆಸೆವ ದಂತಿಯನು ॥
ಸೊಗಯಿಪ ಕರುಣದಿಂ ಬಳಲಿಸಿ ಹಸ್ತಿಯ । ಹೆಗಲೇರಿದನಾವನೋರ್ವ ॥ ೧೩೯ ॥

ಮದನಸನ್ನಿಭ ಶತ್ರುಗಜಕಂಠೀರವ । ಸದಮಲ ಚರಮ ಶರೀರಿ ॥
ಅದಟನವನು ನಿನ್ನೆಣ್ಬರು ಸುತೆಯರ್ಗೆ । ಚದುರರರಸ ವರನಹನು ॥ ೧೪೦ ॥

ಎಂದು ಮುನೀಶ್ವರ ನಿರವಿಸೆ ಕೇಳಿಯಾ- । ನಂದದಿಂದೆಮ್ಮ ಖೇಚರನು ॥
ಬಂದು ಪುರವ ಪೊಕ್ಕು ತನ್ನ ತನ್ನಲ್ಲಿಗಾ- । ಗಂದು ಕರೆಸಿ ಖೇಚರನು ॥ ೧೪೧ ॥

ಮುನಿನುಡಿದಾದೇಶ ವಚನವನೆನ್ನೊಳು । ಮನವಕ್ಕರಿಂದಲಿ ಪೇಳೆ ॥
ಮನುಜೇಶ ! ಎನ್ನ ನಿನ್ನಲ್ಲಿಗೆ ಕಳುಹಿದ- । ನನಿಲಗತಿಯು ಎನ್ನ ಪೆಸರು ॥ ೧೪೨ ॥

ಅಂದಿಂದಲಿ ಬಂದು ಕಾಳ್ಮೃಗದೊಳಗೆಯಾ- । ನೊಂದು ಮಿಗವುಮಾಗಿರ್ದು ॥
ಇಂದು ನಿನ್ನನು ಕಂಡು ನಾ ಕರೆತಂದೆನು । ಮಂದರ ಧೈರ್ಯನೆ ! ಎಂದು ॥ ೧೪೩ ॥

ವಿನಯ ವಚನಗಳ ನುಡಿದು ತಾ ಬೀಳ್ಕೊಂ- । ಡನಿಲವೇಗನು ಲೀಲೆಯಿಂದ ॥
ಮಿನುಗುವ ರತ್ನಪುರವ ಪೊಕ್ಕು ನೃಪನಿ- । ರ್ದನುಪಮವೆನಿಪ ಚಾವಡಿಗೆ ॥ ೧೪೪ ॥

ಭರದಿಂದಲೈತಂದುಡೆ ಸುತ್ತನಿಲವೇಗ । ದೊರೆ ಸಿಂಹಬಲ ಖೇಚರಗೆ ॥
ಶಿರಬಾಗಿ ಎರೆದನು ಕನಕನಗರಿಯುರೆ । ಮೆರೆವ ಬಹಿರ್ವನದೊಳಗೆ ॥ ೧೪೫ ॥

ಕರಿಯ ಮದವ ಪಲತೆರದ ಬಿನ್ನಾಣದಿ । ದೊರೆಮಗನುಡುಗಿಸಿ ಶಿರವ ॥
ಇರದೇರುವನಿತರೊಳಗೆ ಹೋಗಿ ಕುವರನ । ಕರತಂದೀ ಪುರವರದ ॥ ೧೪೬ ॥

ಜಿನಮಂದಿರದೊಳು ಬಿಟ್ಟುಬಂದೆನು ಎಂ- । ದನಿಲವೇಗನು ಪೇಳೆ ಕೇಳಿ ॥
ಮನದಕ್ಕರಿಂ ಸಿಂಹಬಲ ತಾನೈತಂದು । ಜಿನಪತಿಯನು ಕೊಂಡಾಡಿ ॥ ೧೪೭ ॥

ಕೆಲವು ತೆರದ ಪೂಜೆಯ ಜಿನಚಂದ್ರಗೆ । ನಲವಿನಿಂ ಖೇಚರ ಮಾಡಿ ॥
ಕಲಿಲಹರಗೆ ಸಾಷ್ಟಾಂಗವೆರಗಿ ಮತ್ತೆ । ಗೆಲವಿನಿಂ ಬೀಳ್ಕೊಂಡು ಬಗನು ॥ ೧೪೮ ॥

ಬರುತ ಬರುತ ಮಂಟಪದೊಳು ಕುಳಿತಿರ್ದ । ದೊರೆಗುವರನ ಮೇಲೆ ತನ್ನ ॥
ಅರವಿಂದಸದೃಶ ಲೋಚನಗಳು ಪರಿಯಲು । ಪರಿಕಿಸಿದನು ಇಂತೆಂದು ॥ ೧೪೯ ॥

ಸ್ಮರನೆಂಬೆನೆ ಕಬ್ಬುವಿಲ್ಲು ಹಸ್ತದೊಳಿಲ್ಲ । ಸುರನೆಂಬೆನೆ ವಜ್ರವಿಲ್ಲ ॥
ಹರನೆಂದೆನೆ ಉರಿಗಣ್ಣು ಬಾಳದೊಳಿಲ್ಲ । ಸರಸಿಜಭವನೆಂದಪೆನೆ ॥ ೧೫೦ ॥

ಶಿರ ನಾಲ್ಕು ಬೇರಿಲ್ಲ ಧರಣೇಂದ್ರನೆಂದೆನೆ । ಉರಗ ಲಾಂಛನವಿಲ್ಲ ಶಿರದಿ ॥
ಪರಿಕಿಸೆ ಬೇರಿವನಾರೆಂದು ಕುವರನ । ಹರಿಬಲ ನೀಡುಂ ನೋಡಿ ॥ ೧೫೧ ॥

ಇಂದು ಶಾಲೆಯ ಮಂಟಪದೊಳಗಿರ್ದ ಬೋ- । ಧೇಂದು ಕುವರನ ತಾ ಕಂಡು ॥
ಬಂಧುರೋಕ್ತಿಗಳಿಂದ ವಿನಯ ವಚನಗಳ- । ನಂದು ನುಡಿದು ಹರಿಬಲನು ॥ ೧೫೨ ॥

ಬಿಗಿಬಿಗಿದಮರ್ದಪ್ಪಿಕೊಂಡು ತಾನಳಿಯನ । ಮೊಗ ನೋಡಿ ಮತ್ತಿಂತು ನುಡಿದ ॥
ಸುಗುಣ ! ಕೇಳೆನಗೆಣ್ಬರು ಹೆಣ್ಣುಮಕ್ಕಳು । ಬೊಗಸೆಗಂಗಳ ಭಾವೆಯರು ॥ ೧೫೩ ॥

ಅವರ ಕೈಯಿಂದ ನಿನ್ನಯ ಪಾದಸೇವೆಯ । ಕುವರ ಮಾಡಿಸಿಕೊ ಎಂದು ॥
ಸವಿನಯದಿಂದ ಪ್ರಾರ್ಥಿಸಿ ಖೇಚರೇಂದ್ರನು । ಕುವರನೆಂದನು ಎಲೆ ಮಾವ ! ॥ ೧೫೪ ॥

ಸನ್ನುತ ವಿದ್ಯವ ಸಾಧಿಸಿದಲ್ಲದೆ । ಕನ್ನಿಕೆಯರ ಮುಟ್ಟೆನೆಂದು ॥
ಮುನ್ನ ಪ್ರತಿಜ್ಞೆಯ ನಾ ಮಾಡಿದುದುಂಟು । ಉನ್ನತ ಭಾಗ್ಯ ! ನೀ ಕೇಳು ॥ ೧೫೫ ॥

ಪಲವು ವಿದ್ಯಗಳು ಸಾಧಿಸಿ ಬಳಿಕಾನು । ಸಲಿಸುವೆ ನಿನ್ನರ್ತಿಯನು ॥
ನಲವೇರಿಪೆ ಕನ್ನಿಕೆಯರ ಮನಕೆಂದು । ಚೆಲುವರ ಚೆನ್ನಿಗ ನುಡಿಯೆ ॥ ೧೫೬ ॥

ಆ ನುಡಿಯನು ಕೇಳಿ ಹರಿಬಲ ಖೇಚರ- । ನಾನಂದವ ತಾಳಿ ಮನದಿಂ ॥
ಮಾನವೇಂದ್ರನ ಪಲವಂದದಿ ಕೊಂಡಾಡಿ । ಜೈನೇಶ್ವರಗೃಹವ ಪೊಕ್ಕು ॥ ೧೫೭ ॥

ಜಿನಪತಿಗೆರಗಿ ಬೀಳ್ಕೊಂಡು ಜ್ಞಾನೇಂದುವ । ವಿನಯದಿಂ ತಾನೊಡಗೊಂಡು ॥
ಮನದಕ್ಕರಿಂ ಪಟ್ಟಣವನು ಪೊಕ್ಕಾಗ । ಜನಪರೀರ್ವರು ಬರುತಿರಲು ॥ ೧೫೮ ॥

ನಮ್ಮ ದೊರೆಯ ಜಾಮಾತೃ ಬಂದನು ಗಡ । ಹೆಮ್ಮಕ್ಕಳಿರ ಬನ್ನಿಮೆಂದು ॥
ಸುಮ್ಮಾನದಿಂದ ಖೇಚರಿಯರು ಮದಿಲವ । ಗಮ್ಮನೆ ಬಂದೇರಿದರು ॥ ೧೫೯ ॥

ಕರುಮಾಡವನೇರಿ ಮಾಳಿಗೆಗಳ ಸೇರಿ । ಮರನೇರಿ ಮಾಡುವೆಟ್ಟಗಳ ॥
ಹರುಷದಿಂ ಸಜ್ಜೆ ಗೋಪುರಗಳ ತಾವೇರಿ । ದೊರೆಕುವರನ ನೋಡಿದರು ॥ ೧೬೦ ॥

ಆರಿವ ನಳನೋ ಜಯಂತನೋ ಧನದನೋ । ಸೂರಿಯನೋ ಚಂದ್ರಮನೋ ॥
ಕಾರಣಪುರುಷನಾಗಿವನ ನೋಡಿದರೆಂದು । ವಾರಿಜಾಕ್ಷಿಯರು ನೋಡಿದರು ॥ ೧೬೧ ॥

ಹರಸುರಿಗಣ್ಣಿಂದ ಮದನನ ಸುಟ್ಟನೆಂ- । ದೊರೆದ ಜನರುಗಳ ತಾವು ॥
ಮರುಳುಗಳಲ್ಲವೇ ಸಾಕ್ಷಾತ್ ಮದನನಿವ । ಗರುವೆ ನೋಡೆಂದು ತೋರಿದಳು ॥ ೧೬೨ ॥

ಕಿನ್ನರ ಕುಲದೊಳು ಸಂಜಾತನೆಂದೆನೆ । ಕನ್ನೆಯ ಚಿಹ್ನೆಗಳಿಲ್ಲ ॥
ಹೊನ್ನ ಬಣ್ಣದ ಕಾಯದನಿವನಾರೆಂದು । ಹೆಣ್ಣುಗಳೆಲ್ಲ ನೋಡಿದರು ॥ ೧೬೩ ॥

ಭೂಚರರೊಳಗೆ ಇಂತಪ್ಪ ಚೆನ್ನಿಗನನು । ಲೋಚನಗಳು ಕಂಡುದಿಲ್ಲ ॥
ಖೇಚರನೆಂದೆನೆ ಈ ರೂಪು ಬಾರದೆಂ- । ದಾ ಚದುರೆಯರು ನೋಡಿದರು ॥ ೧೬೪ ॥

ಚೆಲುವೆಯರುಗಳು ನೋಡುವ ದೃಷ್ಟಿ ಕುವರನ । ಚೆಲುವ ದೇಹದೊಳು ಮಾರ್ಪೊಳೆಯೆ ॥
ಪಲಗಣ್ಣನಾಂತ ಸಹಸ್ರಾಕ್ಷನೆಂಬಂತೆ । ಲಲನೆಯರಿಗೆ ತೋರಿದನು ॥ ೧೬೫ ॥

ನೀರೆಯರುಗಳ ನಿಟ್ಟಿಸಲ್ಕಂಗಳ ಕಾಂತಿ । ಧೀರನ ಮೈಯೊಳು ಮುಸುಕಿ ॥
ಚಾರುಹರ್ಮ್ಯಕೆ ಕೊಂಡುಪೋಗಲಿಕಿರ್ದ ಬೆ- । ಳ್ದೈರವೊ ಎಂಬಂತಿಹುದು ॥ ೧೬೬ ॥

ಚೆಲುವೆಯರುಗಳು ನಾವಾದಮೇಲಿಂತಪ್ಪ । ಚೆಲುವನ ವರಿಸದ ಮೇಲೆ ॥
ಹೊಲೆ ಜನ್ಮ ನಮ್ಮ ಜನ್ಮವು ಸುಡು ಸುಡಲೆಂದು । ಲಲನೆಯರ್ಕೆಲಬರಾಡುವರು ॥ ೧೬೭ ॥

ಕೆಲಬರು ಕನ್ನೆಯರಿವನೇ ವಲ್ಲಭನೆಂದು । ಸಲೆ ಸೋದರರನ್ಯರೆಂದು ॥
ನಲವಿನಿಂ ಭಾಷೆಯ ಮಾಡಿ ಕುಮಾರನ । ಚೆಲುವನೆ ನೋಡುತಲಿಹರು ॥ ೧೬೮ ॥

ಇಂದುವದನೆ ಸ್ವರ್ಣಘಟಕುಚೆ ಸುಲಿಪಲ್ಲ । ಚೆಂದಳಿರ್ದುಟಿಯನುಮತಿಯು ॥
ಸೌಂದರಾಂಗಕೆ ತಕ್ಕ ವರನೆಂದೋರ್ವಳಾ- । ನಂದದಿ ನೋಡಿದಳಾಗ ॥ ೧೬೯ ॥

ಅರವಿಂದಾನನೆ ಕಳಶಶೋಭಿಪ ಕುಚೆ । ಹರಿಮಧ್ಯದ ಸುಪ್ರಭೆಯು ॥
ಅರಸನೀತನು ಗಡ ನೋಡಿ ನೀವೆಂದೋರ್ವ । ತರುಣಿ ತೋರಿದಳೆಲ್ಲರಿಗೆ ॥ ೧೭೦ ॥

ಬಾಳೆದೊಡೆಯ ಬುಗುರಿಮೊಲೆಯಲರ್ಗಣ್ಣ । ನೀಳಾಳಕಿಪುಷ್ಪ ನಖಿಯು ॥
ಆಳುವ ಒಡೆಯನೀತನು ಗಡ ಎಂದಾಗ । ಹೇಳಿದಳೋರ್ವಳೋರ್ವಳಿಗೆ ॥ ೧೭೧ ॥

ನಳಿನಕುಡ್ಮಳಕುಚ ತೊಂಡೆವಣ್ಣಧರದ । ನಳಿತೋಳು ಕುಸುಮಲತೆಗೆ ॥
ಕೆಳದಿಯರೇ ! ಕೇಳಿ ಕುವರನು ಪತಿಯೆಂ- । ದೆಳಸಿ ತೋರಿದಳೊರ್ವ ನೀರೆ ॥ ೧೭೨ ॥

ಕಂಬುಕಂಧರೆ ಶ್ರೀಫಲನಿಭಕುಚಯುಗೆ । ಅಂಬುಜವದನೆ ಶ್ರೀಮತಿಗೆ ॥
ಇಂಬಿನಿಂ ನೋಡಿವ ಪತಿ ಗಡ ಎಂದೋರ್ವ । ಕೆಂಬಲ್ಲ ಚೆನ್ನೆ ತೋರಿದಳು ॥ ೧೭೩ ॥

ಬಡನಡುವಿನ ಜಂಬೀರನಿಭದ ಕುಚ । ಕುಡಿತೆಗಂಗಳ ರೋಹಿಣಿಗೆ ॥
ಕಡುಜಾಣೆ ನೋಡಿವ ಕಾದಲನೆಂದೋರ್ವ । ಮಡದಿ ತೋರಿದಳು ಲೀಲೆಯೊಳು ॥ ೧೭೪ ॥

ಚಿಣ್ಣಂಚೆ ನಡೆ ಹೊನ್ನಡಕೆದೊರೆಯಸ್ತನ । ಸಣ್ಣಪೂವಿನ ಪದ್ಮಲತೆಗೆ ॥
ಹೆಣ್ಣೆ ನೋಡಿವನೀಗ ಪತಿಯೆಂಬೋರ್ವಳು । ಬಣ್ಣಿಸಿ ಪೇಳ್ದಳೊರ್ವಳಿಗೆ ॥ ೧೭೫ ॥

ಬಳುಕುವ ಲತೆಮೈಯ ಗರ್ದುಗಸಮಸ್ತನ । ಗಿಳಿಯ ನುಡಿಯ ಸುಲೋಚನೆಗೆ ॥
ಜಲಜಸುಗಂಧಿನಿ ನೋಡಿವ ಪತಿಯೆಂದು । ನಳಿನಾಕ್ಷಿ ಪೇಳ್ದಳೊರ್ವಳಿಗೆ ॥ ೧೭೬ ॥

ಇಂತು ತಮ್ಮೊಳಗೋರ್ವರೋರ್ವರು ನುಡಿವುದ । ಕಂತು ಸನ್ನಿಭ ತಾನು ಕೇಳಿ ॥
ಸಂತೋಷದಿಂದ ಪುರದ ಚೆಲ್ವ ನೋಡುತ । ದಂತಿಯಾನದಿ ಬರುತಿರಲು ॥ ೧೭೭ ॥

ಹಾರಬಂಧದ ನೀರಾಜನವಾಗೋರ್ವ । ವಾರಿಜಾಕ್ಷಿಯು ತಂದು ನೃಪಗೆ ॥
ಸೇರುವೆಯಿಂದೆತ್ತಲು ಕಂಠಮಾಲೆಯ । ಧೀರರವಳಿಗಿತ್ತರಾಗ ॥ ೧೭೮ ॥

ಪದ್ಮಬಂಧದ ನೀರಾಜನವಾಗೋರ್ವ । ಪದ್ಮಗಂಧಿನಿ ನೃಪರ್ಗೆತ್ತೆ ॥
ಪದ್ಮರಾಗದಮಣಿದೊಡವನಿತ್ತವಳಿಗೆ । ಪದ್ಮರಾಗಾಂಘ್ರಿ ಪಲ್ಲವರು ॥ ೧೭೯ ॥

ಉರಗಬಂಧದ ನೀರಾಜನವಾಗೋರ್ವ । ಸರಸಿಜಾಕ್ಷಿಯು ನೃಪರ್ಗೆತ್ತೆ ॥
ಹರಳೋಲೆಗಳನಿತ್ತು ಕಳುಹಿದರವಳಿಗೆ । ಸರಸಕಲಾ ಕೋವಿದರು ॥ ೧೮೦ ॥

ಆಡುವ ನೃತ್ಯವ ನೋಡುತಲೊಮ್ಮೊಮ್ಮೆ । ಪಾಡುವ ಗೀತಕೆ ಕಿವಿಯ ॥
ಪಾಡುಗಾಡಿಕೆಯಿಂದ ಕೊಡುತಲಾಗೊಮ್ಮೊಮ್ಮೆ । ಪ್ರೌಢಿಯಿಂದಡಿಯಿಡುತಿರಲು ॥ ೧೮೧ ॥

ದೊಂಬರಾಗಲು ಭೋಯೆಂದಾಡುತ ಬಂದು । ಸಂಭ್ರಮದಿಂದ ಲಾಗಗಳ ॥
ಇಂಬಿನಿಂ ತೋರಲು ಜಾಗವನಿತ್ತಾಗ । ಗಂಭೀರದೊಳು ನಡೆತಂದು ॥ ೧೮೨ ॥

ಅರಮನೆಬಾಗಿಲೊಳಗೆ ನಿಂದು ಸರ್ವರ । ಹರುಷದೊಳಗೆ ಬೀಳ್ಕೊಟ್ಟು ॥
ದೊರೆಗಳೀರ್ವರು ಸೌಂದರವಿಲಾಸಕೆ ಬಂದು । ಹರಿವಿಷ್ಟರದೊಳು ಕುಳಿತರು ॥ ೧೮೩ ॥

ಆ ವೇಳೆಯೊಳು ಜಟ್ಟಿಗಳಿಂದ ಹರಿಬಲ । ಕೋವಿದ ಬೋಧೇಂದು ನೃಪಗೆ ॥
ಪಾವನವಾದ ಕಮ್ಮೆಣ್ಣೆಯ ತಿಗುರಿಸಿ । ತೀವಿದ ಹರುಷದೊಳಾಗ ॥ ೧೮೪ ॥

ಪನ್ನೀರಿಂದ ಮಜ್ಜನವ ಮಾಡಿಸಿ ಗು- । ಣೋನ್ನತ ದುಗುಲವ ಪೊದಿಸಿ ॥
ತನ್ನೊಡವೆ ಪಲವನು ಹರಿಬಲ ಖಗ । ತನ್ನ ಕೈಮುಟ್ಟಿ ಸಿಂಗರಿಸಿ ॥ ೧೮೫ ॥

ಒಂದೆ ಪಂಕ್ತಿಯೊಳಾರೋಗಣೆಯನು ಮಾಡಿ । ಕಂದರ್ಪನಿಭ ಜ್ಞಾನಚಂದ್ರ ॥
ಕುಂದದ ಸೌಖ್ಯಾರ್ಣವದೊಳು ಮುಳುಗಿಯಾ- । ನಂದದೊಳಿರುವನಾವಾಗ ॥ ೧೮೬ ॥

ಜಿನಪದಸರಸೀರುಹಮತ್ತಮಧುಕರ- । ನನುಪಮಗುಣಗಣಾಭರಣ ॥
ಘನಪುಣ್ಯವಂತ ಬೋಧೇಂದುವೊಪ್ಪಿದನಾ । ದಿನಕರನಿಭ ತೇಜಸ್ವಿ ॥ ೧೮೭ ॥

**॥ ಅಂತು ಸಂಧಿ ೪ಕ್ಕಂ ಪದ ೭೦೩ಕ್ಕಂ ಮಂಗಲಂ ॥**

## ವಜ್ರಕಂಠನ ಗೆಲಿದುದು.

ಪೇಳುವೆ ಜ್ಞಾನಚಂದ್ರನು ವಜ್ರಕಂಠನ । ಕಾಳಗದೊಳು ಗೆದ್ದ ಕತೆಯ ॥ ಪ ॥

ದುರಿತಾರಣ್ಯದಾವಾನಲ ಮಂದರ- । ಗಿರಿಯೊಳು ಮಿಂದತಿಧೀರ ॥
ವರಮೋಕ್ಷಾಂಗನೆ ಪ್ರಾಣೇಶ **ಶಾಂತೀಶ** । ಕರುಣಿಸೆಮಗೆ ಕೈವಲ್ಯವನು ॥ ೧ ॥

ಒಂದಾನೊಂದು ಪಗಲು ಜ್ಞಾನಚಂದ್ರನು । ಬಂದು ಲಕ್ಷ್ಮಿಯ ಮಂಟಪದೊಳು ॥
ನಿಂದುಕೊಂಡಿರೆ ಹರಿಬಲನೆಂಟುಮಂದಿ ಸು- । ನಂದನೆಯರು ನಲ್ಮೆಯಿಂದ ॥ ೨ ॥

ಕರುಮಾಡವನೇರಿ ಪುರದಂದವ ನೋಡಿ । ಗರುವೆಯರ್ಲಕ್ಷ್ಮೀಮಂಟಪವ ॥
ಮುರುಕದಿಂ ನಿಟ್ಟಿಸೆ ಜ್ಞಾನೇಂದು ಕಾಯವು । ತರಣಿಯಂದದಿ ತೋರಿದಾಗ ॥ ೩ ॥

ಇಟ್ಟದಿಟ್ಟಿಗಳ ತೆಗೆಯದೆ ನೋಡುತಲಿರೆ । ತೊಟ್ಟನೆ ಮನ್ಮಥಶರದಿ ॥
ತಟ್ಟುರ್ಚಿ ಬೀಳುವಂದದೊಳು ಎಸೆಯಲಾಗ । ಬಟ್ಟಕುಚೆಯರು ಕಾತರದಿ ॥ ೪ ॥

ಕಳವಳಿಸುವರು ಕಾಮಿಸುವರು ಸುಳಿವರು । ಇಳೆಯಾಣ್ಮ ಸಲಹೆಮ್ಮನೆಂದು ॥
ಘಳಿಲನೆ ಪಾದಕೆ ಕೆಡದು ತಮ್ಮೊಳು ತಾವು । ನಳಿನಾಕ್ಷಿಯರು ಮುದ್ದಿಪರು ॥ ೫ ॥

ಕುವರನ ಕರತಂದು ಮದನನ ಬಾಧೆಯ । ತವಿಸೆಲೆ ಸಖಿಯೆ ! ನೀನೆಂದು ॥
ಸವಿನಯದಿಂದಲೆರಗಿ ಹಾರವನಿತ್ತು । ಯುವತಿಯರ್ದೈನ್ಯಬಡುವರು ॥ ೬ ॥

ಒಂಭತ್ತನೆಯಾವಸ್ಥೆಯೊಳಗೆಯಾ । ಬಿಂಬಾಧರೆಯರು ತಾವು ॥
ಕುಂಭಿನಿಯೊಳು ಬಿರ್ದು ಮೂರ್ಛಿತರಾಗಲಾ- । ಗಂಬರಚರ ಕೇಳ್ದು ಬಂದು ॥ ೭ ॥

ಮರವಟ್ಟು ಬಿದ್ದಿರ್ದ ಕನ್ನಿಕೆಯರ ಕಂಡು । ತರಿಸಿ ಪನ್ನೀರ ಕರ್ಪುರವ ॥
ಭರದಿಂದ ಶೈತ್ಯೋಪಚಾರವ ಮಾಡಿಸೆ । ತರುಣಿಯರನು ಸಂತೈಸಿ ॥ ೮ ॥

ಇದು ಜ್ಞಾನಚಂದ್ರನ ದೆಸೆಯಿಂದ ವಿರಹವು । ಸುದತಿಯರಿಗೆ ಪುಟ್ಟಿತೆಂದು ॥
ಹೃದಯದೊಳಗೆ ಚಿಂತಿಸಿ ಖೇಚರೇಶ್ವರ । ಒದವಿದ ಮುರುಕದೊಳಾಗ ॥ ೯ ॥

ನೃಪನ ಕರೆದು ಷೋಡಶಾಕ್ಷರ ಮಂತ್ರವ- । ನುಪದೇಶವನು ತಾನು ಮಾಡಿ ॥
ಜಪಿಸಿ ಜಿನನ ಮುಂದೆ ಶತಕೋಟಿ ಜಪಗಳ- । ನಪರಿಮಿತದ ವಿದ್ಯೆಗಳು ॥ ೧೦ ॥

ನಿನ್ನ ಕೈವಶವಾಗುವುದೆಂದು ಹರಿಬಲ । ಮನ್ನಿಸಿಯಳಿಯನ ಕಳುಹೆ ॥
ಗನ್ನಗಾರನು ಉದ್ಯಾನವ ಪೊಕ್ಕು ಪ್ರ- । ಸನ್ನಮಾನಸ ಜಿನರಡಿಗೆ ॥ ೧೧ ॥

ಪಲವು ತೆರದ ಪೂಜೆಗಳನು ತಾ ಮಾಡಿ । ಕಲಿಲಹರಣನ ಬೀಳ್ಕೊಂಡು ॥
ನಲವಿಂದ ಬಂದೊಂದು ವೃಕ್ಷದ ಮೂಲದಿ । ಚೆಲುವರ ದೇವ ಜ್ಞಾನೇಂದು ॥ ೧೨ ॥

ಪಲ್ಯಂಕಾಸನದಲ್ಲಿ ಕುಳಿತುಕೊಂಡು । ಸಲ್ಲೀಲೆಯಿಂ ಪಂಚಪದವ ॥
ನಿಲ್ಲದೆ ನೆನೆದಾ ಷೋಡಶವರ್ಣಮಂತ್ರಗ- । ಳಲ್ಲಿ ಜಪವ ಮಾಡುತಿರಲು ॥ ೧೩ ॥

ಅನುಮತಿ ಮೊದಲಾದ ಕೋಮಲಾಂಗಿಯರಾಗ । ಜನಪಗೆ ಕೈಗಳ ಮುಗಿದು ॥
ವನದೊಳಗಿರ್ದ ಕುವರನ ಸಮೀಪಕೆ । ಇನಿಸು ಬೇಗದಿ ನಡೆತಂದು ॥ ೧೪ ॥

ಜಪಕೆ ವಿಘ್ನಂಗಳನಾರು ಕೆಲಂಬರು । ಕುಪಿತ ಚಿತ್ತರು ಮಾಡದಂತೆ ॥
ಚಪಲಲೋಚನೆಯರು ಎಂಟುದಿಕ್ಕುಗಳೊಳು । ನೃಪಸಿಂಹನ ಕಾದುಕೊಂಡು ॥ ೧೫ ॥

ಪರಿಚಾರಕಿಯರು ತಾವಾಗಿ ವಸ್ತುವ । ಹರುಷದೊಳಗೆ ತಂದುಕೊಡುತ ॥
ಪುರುಷಭಕ್ತಿಯೊಳಿರೆ ಸಿಂಹಬಳೇಶನ । ದುರುಳ ಜಾಮಾತ ತಾ ಕೇಳಿ ॥ ೧೬ ॥

ಸರಸಿಜಮುಖಿಯರ ನನಗೆ ಕೊಡದೆ ಮಾವ । ತಿರುಕನೋರ್ವನ ಕರತಂದು ॥
ಎರಕದಿಂ ಮಂತ್ರವನುಪದೇಶವನು ಮಾಡಿ । ತರುಣಿಯರನು ಕೂಡಿಕೊಟ್ಟು ॥ ೧೭ ॥

ಪುರದ ಉದ್ಯಾನವನಕೆ ಕಳುಹಿದ ಗಡ । ಮರುಳ ಭೂಚರ ತಾನು ಪೋಗಿ ॥
ಮರದಡಿಯಲ್ಲಿ ಕುಳಿತುಕೊಂಡು ಜಪವನು । ಎರಕದಿಂ ಮಾಡಿ ವಿದ್ಯೆಗಳ ॥ ೧೮ ॥

ಸಾಧಿಸುವೆನು ಕಂಡವನ ಮಂತ್ರಂಗಳ । ಭೇದಿಸುವೆನು ತಾನೆಂದು ॥
ಭೇದ ಮಾನಸ ಪಾಪಿಷ್ಠ ಕುಲಿಶಗಲ । ಕ್ರೋಧವನಿರದೆತ್ತಿಕೊಂಡು ॥ ೧೯ ॥

ಬೇಗದೊಳಗೆ ಬಂದು ನೀಚ ಕುಲಿಶಗಲ- । ನಾಗಸದೊಳು ನಿಂದವನಿಯ ॥
ತೂಗಿ ತಾ ನೋಡಿ ಕೆಳಗೆ ಇರ್ದ ನೃಪನಾ- । ಸೋಗೆಗಂಗಳ ನೀರೆಯರನು ॥ ೨೦ ॥

ಕಂಡು ಘೃತಾಹುತಿಗೊಂಡಗ್ನಿಯಂದದಿ । ಚಂಡಮಾನಸ ಭುಗಿಲೆಂದು ॥
ಕೆಂಡದ ಮಳೆಯ ಕುವರನ ಮಸ್ತಕದಲ್ಲಿ । ಲಂಡತನದಲಿ ಕರೆದನು ॥ ೨೧ ॥

ಸಿಡಿಲಂತಂಬರದೊಳಗಾರ್ಭಟಿಸುತ ಖಗ । ಗಡಿಯಿಲ್ಲದ ಗುಂಡುಗಳನು ॥
ಒಡನೆ ಬಿಡಲು ಘುಡಿಘುಡಿಸುತಲವು ಬಂದು । ಪೊಡೆದವು ಕುವರನ ಶಿರವ ॥ ೨೨ ॥

ಉರುಶಿಂಗಿಯಿಂದ ವೃಶ್ಚಿಕದ ಹಿಂಡುಗಳಿಂದ । ಭರದಿಂದ ಸರ್ವಾಂಗವನು ॥
ಉರುಕೋಪದಿಂದ ಉರಿಸುತ ಭೋ ಎಂದಾಗ । ಮೊರೆದು ಬೊಬ್ಬಿರಿದಾಲುತ್ತ ॥ ೨೩ ॥

ಹುಲಿವಿಂಡಿನಿಂದ ಬೆದರಿಸುವ ಸಿಂಹದ । ಬಲು ಘರ್ಜನೆಯೊಳು ಬೆರ್ಚಿಸುತ ॥
ಪಲವು ಶ್ವಾನಗಳಿಂದೂಳಿಡಿಸುತ ಖಗ । ಕಲಿತನದೊಳಗಿಂತು ನುಡಿದ ॥ ೨೪ ॥

ನೀನಾರು ಷೋಡಶಾಕ್ಷರಮಂತ್ರಗಳಾರು । ಹೀನ ಭೂಚರ ಬಿಡು ಬಿಡುತ ॥
ಮಾನಿನಿಯರ ಬಿಟ್ಟು ನೀ ಪೋಗದಿರ್ದೊಡೆ । ನಾನು ಸೈರಿಸುವನಲ್ಲೆಂದು ॥ ೨೫ ॥

ಉರಗನ ಕೊರಳಲ್ಲಿ ಸುತ್ತುತ ನಿಷ್ಠುರ- । ಸ್ವರದೋರುತ ಕೋಪದೊಳು ॥
ಕರಗಳಿಂದಲಿ ಹಿಂಗಟ್ಟುತಾ ಕಟ್ಟುತ । ಸುರಗಿಯಿಂದಿರಿಯಿರಿ ಎನುತ ॥ ೨೬ ॥

ಡಾಣೆಯಿಂದಲಿ ಹಣೆಗೆನ್ನೆಯ ಬಡಿಯೆಂದು । ಗೋಣ ಮುರಿದು ಹಾಕೆನುತ ॥
ಸೇಣನು ಬಲಿಯೆಂದುರ್ಜಿಸುತಾ ಖಗ । ಮಾಣದೆ ನುಡಿವ ನುಡಿಗಳ ॥ ೨೭ ॥

ತರುಣಿಯರಿಣ್ಬರಾ ವೇಳೆಯುದೊಳು ಕೇಳಿ । ಭರದಿ ವಿದ್ಯಾಬಲದಿಂದ ॥
ವರವಜ್ರಮಯುದ ಭಿತ್ತಿಯ ನೃಪಸಿರ್ದಲ್ಲಿ । ಪರಿವೇಷ್ಠಿಸಿಯುಪರಿಮುದಿ ॥ ೨೮ ॥

ಕುಲಿಶದ ಭಾರಿ ಕರ್ಪರವನು ಕೌಚಿಕ್ಕಿ । ಪಲವು ವಿದ್ಯೆಗಳ ಕಾಪಿರಿಸಿ ॥
ಪಲವಾನೆ ತೇರು ಕುದುರೆ ಕಾಲಾಳ್ಗಳ । ಬಲವನ್ನು ನಿರ್ಮಿಸಿಕೊಂಡು ॥ ೨೯ ॥

ಕಂಚುಕವನು ಹಿಂದುಮುಂದಾಗಿ ತೊಟ್ಟು ಪ- । ಳಂಚುವಾಭರಣವನಿಟ್ಟು ॥
ಚಂಚಲಾಕ್ಷಿಯರು ಕಾಸೆಯ ತಾವು ಬಿಗಿದುಟ್ಟು । ಮಿಂಚಿನಂದದಿ ಖಡ್ಗವಿಡಿದು ॥ ೩೦ ॥

ರನ್ನದ ಖೇಟಕವನು ಕೈಯೊಳಗಾಂತು । ಪೊನ್ನ ಬಾಂಕನು ಕಟ್ಟಿ ಕಟಿಗೆ ॥
ಉನ್ನತ ಧನುವಿಗೆ ನಾರಿಯನೇರಿಸಿ । ಗನ್ನಗಾತಿಯರೋಜೆವಡೆಯೆ ॥ ೩೧ ॥

ನೆಲನದುರಿತು ಎಂಟು ದೆಸೆಯುಳ್ಳ್ಯಾಡಿತು । ಬಲು ಬಂಟರು ಬೆದರಿದರು ॥
ಕುಲಿಶಗಳನ ಎರ್ದೆ ಹೌವನೆ ಹಾರಿತು । ಬಲುಹನದೇನು ಪೇಳುವೆನು ॥ ೩೨ ॥

ವರರತ್ನಮಯುದ ವಿಮಾನವನಿರದೇರಿ । ಭರದಿಂದಲಾಕಾಶವಡರಿ ॥
ತರುಣಿಯರೋರ್ವರೋರ್ವರು ಪಂಥವಾಡುತ । ಮೊರೆದು ಬೊಬ್ಬಿರಿದು ಭೋ ಎನುತ ॥

ಶರಸಂಧಾನವ ಕಾರ್ಮುಕದೊಳು ಮಾಡೆ । ಕರೆದರಂಬಿನ ಮಳೆಗಳನು ॥
ಕೊರೆದರು ಸುರಗಿಯಿಂ ಶಿರವ ಪದಾತಿಯ । ತರಿದಟ್ಟಿದರಶ್ವಗಳನು ॥ ೩೪ ॥

ಕರಿಘಟೆಗಳ ಕವಲಂಬಿನಿಂದೆಸೆಯಲು । ಶಿರವ ಕತ್ತರಿಸಿ ಬೀಳುವವು ॥
ಭರದಿಂದ ರಥಗಳ ನುಚ್ಚಾಗುವಂದದಿಂ । ಶರಗಳನೆಸೆದು ಮೆರೆದರು ॥ ೩೫ ॥

ಕಾಮಿನಿಯರು ಸವ್ಯಾಪಸವ್ಯಗಳಿಂದ । ತೋಮರಗಳ ಮಳೆಗರೆಯೆ ॥
ವ್ಯೋಮದಿಂದುರುಳ್ದು ಬೀಳುವ ಪಟುಭಟರ್ಗಳು । ಭೂಮಿಯೊಳಗೆ ಲೆಕ್ಕವಿಲ್ಲ ॥ ೩೬ ॥

ಬೋಳಂಬಿನ ಕುರುಪಾಟವೇಳಿಗೆಯನು । ತಾಳಲಾರದೆ ಭಟತತಿಯು ॥
ಕಾಳುಗಿಚ್ಚನು ಕಂಡ ಹರಿಣವಿಂಡುಗಳಂತೆ । ಪಾಳೆಯ ಬಿಟ್ಟು ಸಾಗಿದರು ॥ ೩೭ ॥

ಸುರಗಿಯಿಂದಿರಿವುತ ಲೌಡಿಯಿಂ ಸದೆವುತ । ಕರವಾಳದಿಂದ ಖಂಡಿಸುತ ॥
ಪರಶುಗಳಿಂದ ಹೊಳಚುತ ಭೋ ಎಂದಾಲಿ । ತರುಣಿಯರ್ಕೊಂದರಾ ಬಲವ ॥ ೩೮ ॥

ಇಂತು ದಂಭೋಳಿಗಲನ ಬಲವನು ನಿ- । ಸ್ಸಂತಾನವನು ತಾವು ಮಾಡಿ ॥
ಕಾಂತೆಯರುಗಳಾಗ ಕುಲಿಶಗಲನ ಮೇ- । ಲಂತಕನಿಭ ಕೋಪದೋಳು ॥ ೩೯ ॥

ಸರಳ ಮಳೆಗಳ ಭೋ ಎಂದಾಲಿ ಕೂಗುತ । ನೆರೆ ದಿಟ್ಟೆಯರು ಕರೆವುತ ॥
ದುರುಳ ಕುಲಿಶಗಲನೆಮಗಿದಿರಾಗೆಲೋ । ಪರಮ ಶಾಂತಿಯೊಳಿರ್ದ ನೃಪನ ॥ ೪೦ ॥

ಮೇಲೆ ನಿನ್ನಯ ಪೌರುಷದೋರಿದ ವೀರ । ಜಾಲವದಾರು ಮೆಚ್ಚುವರು ॥
ಬಾಲಿಶ ಕಡುಪಾಪಿ ದುರುಳ ದುರ್ವಿಚಾರಿ । ಶ್ಯಾಲ ನಿನ್ನುಸುರಿಗುಬ್ಬಸವ ॥ ೪೧ ॥

ಮಾಡದೇ ಬಿಡುವೆವೆ ಎಂದು ಮೂದಲಿಸುತ । ಗಾಢದೊಳಗೆ ದಿವ್ಯ ಶರದಿ ॥
ಜೋಡು ಕಾರ್ಮುಕ ರಥ ನುಗ್ಗಾಗುವಂದದಿಂ । ಗಾಡಿಕಾತಿಯರಾಗೆಸೆದರು ॥ ೪೨ ॥

ಆದಕಂಡು ಕುಲಿಶಗಲನು ನಾಸಾಗ್ರದಿ । ತುದಿ ಬೆರಳನು ಇಟ್ಟು ಶಿರವ ॥
ಪದಪಿಂದ ತೂಗಿ ಚಿತ್ತದೊಳು ವಿಸ್ಮಯಬಟ್ಟು । ಸುದತಿರ ಧೈರ್ಯಕೆ ಮೆಚ್ಚಿ ॥ ೪೩ ॥

ಕಡುಕೋಪದಿಂದ ಮುಂದಕೆ ರಥವನು ನೂಂಕಿ । ಒಡನೆ ತಾನಂಬಿನ ಮಳೆಯ ॥
ಮಡದಿಯರುಗಳ ಮೇಲಾಲಿ ಬೊಬ್ಬಿರಿವುತ । ಕೆಡುಕ ಕರೆದನವಶ್ಯದೊಳು ॥ ೪೪ ॥

ಬರುವ ಶರಗಳನು ಮಾರ್ಗಣದಿಂದಾಗ । ತರುಣಿಯರ್ಖಂಡಿಸಿ ತಾವು ॥
ಭರದಿಂದ ಬಹುರೂಪಿಣಿ ವಿದ್ಯೆಯನಾಂತು । ಧುರದೊಳಗೆಲ್ಲಿ ನೋಡಿದರು ॥ ೪೫ ॥

ತಮ್ಮಯ ರೂಪುಗಳನು ಶತಕೋಟಿಯ । ಸುಮ್ಮಾನದಿಂ ಮಾಡಿಕೊಂಡು ॥
ಹಮ್ಮುಗಾರಿಕೆಯಿಂದಲಾಲಿ ಬೊಬ್ಬಿರಿವುತ । ಕುಮ್ಮುತಲವನ ಗರ್ವವನು ॥ ೪೬ ॥

ಅಂತವಿಲ್ಲದ ನಾರಾಚವೃಷ್ಟಿಗಳನು । ಕಾಂತೆಯರ್ಕಡು ಕೋಪದಿಂದ ॥
ಭ್ರಾಂತಿಗೊಳಿಸುವಂತೆ ಕರೆವುತಿರಲು ನಿ- । ಶ್ಚಿಂತೆಯೊಳಿತ್ತ ಕುಮಾರ ॥ ೪೭ ॥

ತನುವಿಗೆ ಕುಲಿಶಗಲನು ಮಾಡಿದುಪಸರ್ಗ- । ವಿನಿತು ಮಾತ್ರವು ಲೆಕ್ಕಿಸದೆ ॥
ಮನದೊಳು ಷೋಡಶಾಕ್ಷರಮಂತ್ರಧ್ಯಾನದಿಂ । ಮುನಿಗಳಂದದಿ ತಾ ಕುಳಿತು ॥ ೪೮ ॥

ಅಕ್ಷಮಣಿಯನುಂಗುಲಿಯಿಂ ಜಾರಿಸುತಾ- । ಗಕ್ಷಿಯ ಕಿಂಚಿತ್ ಮುಚ್ಚಿ ॥
ಲಕ್ಷಣವರಿದು ಜಪವ ಮಾಡುತಿರಲಾಗ । ಯಕ್ಷಿಣಿಯರು ಜಯವೆನುತ ॥ ೪೯ ॥

ಜಪ ಪರಿಪೂರ್ಣವಾಗದ ಮುನ್ನ ತಾವೆಯ್ದಿ । ನೃಪನ ಸಮೀಪದೊಳ್ನಿಂದು ॥
ಲಭಿಸಿದವಿಂತೇಳುನೂರು ದೇವತೆಗಳಾ- । ಗಪರಿಮಿತ ಸ್ತೋತ್ರದಿಂದ ॥ ೫೦ ॥

ಭಳಿರೆ ! ಭಾಪುರೆ ! ನಿನ್ನಂತಪ್ಪ ಬೀರರೀ । ನೆಲದೊಳಗುಂಟೆ ಭಾವಿಸಲು ॥
ಅಲುಗಿಸಿದೆ ನಮ್ಮ ಸಿಂಹಪೀಠವ ಮಂತ್ರ- । ಫಲಿಸದ ಮುನ್ನವೆ ಎಂದು ॥ ೫೧ ॥

ಸಾಸಿರಸಾಸಿರ ದೇವತೆ ಕೈಯಿಂದ । ಓಸರಿಸದೆ ಸೇವೆಗೊಂಬ ॥
ಆ ಸಮಯದಿ ಏಳ್ನೂರು ವಿದ್ಯೆಗಳಾ । ಸಾಸಿಗನೊಳಗಿಂತೊರೆದವು ॥ ೫೨ ॥

ಸ್ಮರಣೆಮಾತ್ರದೊಳಾವು ಐತಂದು ನಿನ್ನಯ । ಚರಣ ಸೇವೆಯ ಭಕ್ತಿಯಿಂದ ॥
ನೆರಗಲಿ ಕಿಂಕರರಾಗಿ ಮಾಡುವೆವೆಂದಾ- । ಗೆರಗಿದವಧಿಕ ಲೀಲೆಯೊಳು ॥ ೫೩ ॥

ಎರಗಿದ ದೇವತೆಗಳನು ತಾ ಕಂಡಾಗ । ದೊರೆಗುವರನು ಕೈಯೆತ್ತಿ ॥
ಹರುಷದೊಳಗೆ ಬಂದು ಚೈತ್ಯಗೃಹವ ಪೊಕ್ಕು । ಅರುಹಗೆ ಸಾಷ್ಟಾಂಗವೆರಗಿ ॥ ೫೪ ॥

ಪಲವು ತೆರದ ನುತಿಗೈದು ಕೈಮುಗಿದಾ । ಕಲಿಲಹರನ ಬೀಳ್ಕೊಂಡು ॥
ಕುಲಿಶಗಲನು ಮಾಡಿದುಪಸರ್ಗವನಾ । ಲಲನೆಯರ್ಕಳು ತಸಗಾಗಿ ॥ ೫೫ ॥

ಕಾದಿದ ವರ್ತಮಾನಗಳನು ತಾ ಕೇಳಿ । ಮೇಟನೀಶ್ವರ ತುರಿಪದೊಳು ॥
ಚ್ಛೇದಿಸುವೆನು ವಜ್ರಗಲನ ಶಿರವನೆಂದು । ಬೋಧೇಂದು ರತ್ನಪುಷ್ಪಕವ ॥ ೫೬ ॥

ಇರದೇರಿ ಗಗನಕ್ಕೆ ಲಂಘಿಸಿ ಕಾದುವ । ತರುಣಿಯರನು ಪಿಂತಿಕ್ಕಿ ॥
ಭರದಿ ನಾರಿಯ ಬಿಲ್ಲ ಕೊಪ್ಪಿಗೆ ಏರಿಸಿ । ನೆರೆಗಲಿ ಧನುವಜೀವಡೆಯೆ ॥ ೫೭ ॥

ಅದುರಿತವನಿಯಾಕಾಶದಿಂದುಡುತತಿ- । ಯುದುರಿತು ಸುರಸಂದೋಹ ॥
ಚೆದರಿತು ಫಣಿಪತಿಯದರಿದನೇನೆಂಬೆ । ಅದಟಿನ ಧನುವಿನಾರ್ಭಟಿಯ ॥ ೫೮ ॥

ಶರಸಂಧಾನವ ಕಾರ್ಮುಕದೊಳು ಮಾಡಿ । ನರನಾಥ ಚಂದ್ರಮನಾಗ ॥
ಉರು ಕೋಪದಿಂದ ಕುಲಿಶಗಲಗಿದಿರಾಗಿ । ಜರೆದು ನುಡಿದನಿಂತೆಂದು ॥ ೫೯ ॥

ಎಲವೊ! ಚಾಂಡಾಲ ಖಚರ, ನಿನ್ನ ಬೀರವ । ಲಲನೆಯರೊಳು ತೋರಬಹುದೇ! ॥
'ನಿಳಯದೊಳಗೆ ಹೆಳವನ ಪಾರುಪತ್ಯ'ವೆಂ- । ಬೊಳುನಾನ್ನುಡಿಗೆಡೆಯಾದೆ ॥ ೬೦ ॥

ಕಾಗೆಯಂಬರದೊಳು ತಿರುಗಿದೊಡದು ತಾನೆ । ಸೋಗೆಗೆ ಸರಿಪಾಟಿಯಹುದೇ ॥
ಬಾಗುಳಿ ನನಗಿದಿರಾಗು ನಿನ್ನಂಗವ । ಬೇಗದಿ ಸೀಳಿ ಹಾಕುವೆನು ॥ ೬೧ ॥

ಎಂದ ನುಡಿಯು ಕೇಳಿ ಕಾದಾಜ್ಯದಿ ನೀ- । ರ್ಜಂದೊಗೆ ಘುಳುಘುಳಿಪಂತೆ ॥
ತಂದು ಮನಕೆ ಕೋಪವ ವಜ್ರಗಳನಿಂ- । ತೆಂದು ಮೂದಲಿಸಿ ನುಡಿದನು ॥ ೬೨ ॥

ಎಲವೋ ಕಾಲ್ಮುರಿದ ಕುಕ್ಕುಟನಂತೆ ನೀನೀಗ । ನೆಲದೊಳಗಿರ್ದ ಪಾಮರರ ॥
ಬಲುಹಿಂದ ಹೆದರಿಸಿಯುದರ ಪೋಷಣವನು । ಒಲಿದು ಮಾಡುವೆ ಗಬ್ಬಿತನದಿ ॥ ೬೩ ॥

ಸತಗರದಿಂದಿರಾದೆ ಸಂಗ್ರಾಮದ । ಗೊಡವೆ ಯಾತಕೆ ಎಲೆ ಹುಡುಗ! ॥
ಮಡಗಿಕೋ ನಿನ್ನಯ ತಲೆಯ ಜೋಕೆಯಲೆಂದು । ಒಡನೆ ಬೊಬ್ಬಿರಿದಾಲುತಾಗ ॥ ೬೪ ॥

ಅಂಬಿನ ಮಳೆಯಿಂದ ಭೂಮಿಯಾಗಸವನು । ತುಂಬುವಂತಾ ವಜ್ರಗಳನು ॥
ಬೆಂಬಿತದೆಸೆಯಲು ಕೌರವನದಕಂಡು । ಇಂಬಿನಿಂದಿಂತು ನುಡಿದನು ॥ ೬೫ ॥

ಎದೆಗಳ್ಳತನದಿಂದ ನನಗಿದಿರಾಗಿ ನಿಂ- । ದಿದಿರಾದೆಸೆವೊಡೊಳ್ಳಿತಾಯ್ತು ॥
ಬಿದಿರಸುಗಳ ನಿನ್ನ ನಿರವರಿದಾ ನಾಕ- । ಸುದತಿಯೊಳ್ಮದುವೆ ಮಾಡಿಸುವೆ ॥ ೬೬ ॥

ಎಂದು ಮೂದಲಿಸಿ ಕೌರವ ರೋಪಣಗಳ- । ನಂದು ಪುಂಖಾಪುಂಖಿಯಲಿ ॥
ನಿಂದು ಕಡಿಯೆ ವಜ್ರಗಲನ ಪದಾತಿಯ । ವೃಂದ ತಲ್ಲಣಗೊಂಡುದಾಗ ॥ ೬೭ ॥

ಬಲಯುತರೀವರೀರ್ವರ ಕಾಳೆಗವನಾ- । ವಲಸದೆ ನೋಡುವೆವೆಂದು ॥
ನಲವೇರಿ ಧನುಜಾಮರರಾಗಸದೊಳು । ಪಲಬರು ಬಂದು ನೋಡಿದರು ॥ ೬೮ ॥

ಹರಿಬಲ ಖೇಚರೇಶ್ವರ ಪುಷ್ಪಕವ ತಾ- । ನಿರದೇರಿಯಂಬರಕಡರೆ ॥
ಸುರರ ಸಮೂಹದೊಳಗೆ ತಾನು ನಿಂದಾ- । ಗೆರಕದಿ ನೋಡುತಲಿಹನು ॥ ೬೯ ॥

ಇತ್ತಲು ಜಿನಚಂದ್ರ ನೃಪನ ಕುಮಾರನು । ಮತ್ತಗಜದ ಶಿರವರಿದು ॥
ಸತ್ವಸಂಯುತ ರಾಜಕುವರರ ಜವನಿಗೆ । ತುತ್ತು ಮಾಡಿದನೊಂದೆ ತೆರದಿ ॥ ೭೦ ॥

ಕರಿ ನೂರು ರಥ ಸಾಸಿರ ಪತ್ತುಸಾಸಿರ । ಹರಿಗಳು ಕಾಲಾಳು ಲಕ್ಷ ॥
ಧುರದೊಳು ಜ್ಞಾನೇಂದು ಶರವೊಂದರಿಂ ಯಮ- । ಪುರಕೆಯೊಕ್ಕಲು ಹೋಗುವರು ॥

ನರಗಳು ಹರಿದು ಕೈಕಾಲು ತುಂಡುಗಳಾಗಿ । ಬರಿಯೆಲು ನುಚ್ಚು ನುಗ್ಗಾಗಿ ॥
ಶಿರಗಳು ನೆಗೆದು ಭೂತಳಕೆಯುರುಳಿ ಬೀಳ್ವ । ಕರಿಹರಿಗಳು ಲೆಕ್ಕವಿಲ್ಲ ॥ ೭೧ ॥

ಹೆಣದೊಟ್ಟಲಿಯಿಂದ ಕರುಳ ರಾಶಿಗಳಿಂದ । ಕುಣಿದಾಡುವ ಮುಂಡದಿಂದ ॥
ಬಣಬೆಗಳಿಂದಸ್ಥಿಗಳಿಂದ ರಣರಂಗ । ಹೆಣಮಯವಾಗಿ ರಾಜಿಪುದು ॥ ೭೨ ॥

ಬೇಡ ನೃಪನೆ ನಮ್ಮೊಳಗಿಪ್ಪು ನಿಷ್ಠುರ । ಮಾಡು ಕೃಪೆಯ ನೀನೀಗ ॥
ಕೇಡಾಳಿ ಖಗನೊಡನಾಡಿ ಕೆಟ್ಟೆವು ಎಂದು । ಬೇಡಿಕೊಂಬರು ಕೆಲಭಟರು ॥ ೭೪ ॥

ಕೆಲರೋಡಿ ಪೋದರು ಶರದಾರ್ಭಟೆಗಳ್ಕಿ । ಕೆಲರು ಹೆಣವ ಮೇಲಿಕ್ಕಿ ॥
ಸಲೆ ಹೆಣದೊಳಗೆ ಹೆಣಗಳಾಗಿ ತಮ್ಮಯ । ತಲೆಯ ಮರಸಿಕೊಂಡಿಹರು ॥ ೭೫ ॥

ನರಹುಳುಗಳ ಕೊಂದುದರಿಂದ ಫಲವೇನು । ಕುರುವಂಶಶೇಖರ ! ಬೇಡ ॥
ಕರೆವವು ನಮ್ಮ ಮಕ್ಕಳು ನಿಮ್ಮ ಹೆಸರನು । ಶಿರನೀ ಕೊಟ್ಟದಾಗಿರಲಿ ॥ ೭೬ ॥

ಮರುಳು ತಂಡಗಳು ರಣಾಗ್ರಕೆ ನಡೆತಂದು । ಕರುಳ ಜಗಿದು ರಕ್ತಗುಡಿದು ॥
ದೊರೆರನ್ನ ಜ್ಞಾನೇಂದು ! ಸ್ಥಿರ ಬಾಳು ನೀನೆಂದು । ಪರಸಿ ನಲಿದು ನರ್ತಿಪವು ॥ ೭೭ ॥

ಬಿಸಿಯ ಮಾಂಸವನು ಪೂತಿನಿಯ ಜನರುಗಳಿ- । ನಿಸು ತಿಂದು ಸಿಡಿಮಿಡಿಗೊಳಲು ॥
ಅಸವಸದಿಂದ ಬಾಯಿಂದ ತೆಗೆದು ಹಾಕಿ । ಒಸೆದು ಪೂತಿನಿಯರಾಡಿಪರು ॥ ೭೮ ॥

ರಣಮಯ ಹೆಣಮಯವಾದುದ ತಾ ಕಂಡು । ಕಣೆಯವಳಿಯ ವಜ್ರಗಲನು ॥
ಎಣಿಸದೆ ಭೋ ಎಂದಾಲಿ ಬೊಬ್ಬಿರಿದು ತತ್- । ಕ್ಷಣದೊಳುಸುರಿದನೇನೆಂಬೆ ॥ ೭೯ ॥

ತಾಯಿತಂದೆಗಳನಗಲಿ ಬಂದು ಹರಿಬಲ- । ರಾಯನ ಮರೆಯಾಳಾದ ॥
ತೋಯಮೆಲ್ಲಕ ನನ್ನ ಶರದಿಂದ ನಿನ್ನಯ । ಕಾಯವ ಸೀಳುವೆನೆಂದು ॥ ೮೦ ॥

ಹರನುರಿಗಣ್ಣನು ಪ್ರಳಯ ಕಾಲದೊಳು ತಾ । ತೆರೆದನೋ ಎಂಬ ಮಾಳ್ಕೆಯೊಳು ॥
ಧರೆಯಾಗಸವ ದಂದಹ್ಯಮಾನವ ಮಾಳ್ಪ । ಉರಿವ ಬಾಣವ ಮಂತ್ರಿಸಿಡಲು ॥ ೮೧ ॥

ಅದ ಕಂಡು ಕೋಪಾಟೋಪದಿ ನಸುನಕ್ಕ । ಕದನಲಂಪಟ ಜ್ಞಾನೇಂದು ॥
ಒದವಿದ ದಿವ್ಯ ಶರವನು ಕಾರ್ಮುಕಕಿಟ್ಟು । ಚದುರರರಸನಿಂತು ನುಡಿದ ॥ ೮೨ ॥

ಬಿರುಗಾಳಿ ಬೀಸಲು ಸುರಗಿರಿ ಚಲಿಪುದೇ । ದುರುಳ ! ನೀನೆಚ್ಚಗ್ನಿ ಶರಕೆ ॥
ನೆರಗಲಿ ಜ್ಞಾನೇಂದು ಹೆದರುವನಲ್ಲೆಂದು । ಭರದಿಂದಲೆಚ್ಚಭ್ರ ಶರವ ॥ ೮೩ ॥

ಸಿಡಿಲಿಂದ ಮಿಂಚಿಂದಾಲಿಗಲ್ಲುಗಳಿಂದ । ಘುಡುಘುಡಿಸುವ ಗುಡುಗಿಂದ ॥
ಬಿಡದೆ ಸುರಿವ ಸೀರ್ಧಾರೆಗಳಿಂ ಬಂದು । ಕೆಡಿಸಿತು ವಹ್ನಿ ಬಾಣವನು ॥ ೮೪ ॥

ತೂಪುರಗೊಳ್ಳಿಯಂದದಿ ಛಿಟಿಛಿಟಿಲೆಂದು । ಕೋಪವ ಮನಕೆ ತಾ ತಂದು ॥
ಏ ಪೇಳ್ವೆ ವಜ್ರಗಳನು ಫಣಿ ಬಾಣವ । ಭೂಪನ ಮೇಲಿರದೆಸೆಯೆ ॥ ೮೫ ॥

ಗರಳವನುಗುಳುತ ಜಿಹ್ವೆಯ ನೀಡುತ । ಮೊರೆವುತ ಹೆಡೆಗಳನೆತ್ತಿ ॥
ಧರೆಯನಪ್ಪಳಿಸುತ ಫೂತ್ಕರಿಸುತ ಬ- । ರ್ಪುರಗ ಬಾಣವ ಕಂಡು ಕುವರ ॥ ೮೬ ॥

ಗರುಡ ಬಾಣವ ಬಿಡಲಾರ್ಭಟಿ ಮಾಡುತ । ಭರದಿಂದಲೊದಗಿ ತಾ ಬಂದು ॥
ಚರಣದಿಂ ಮೆಟ್ಟಿ ಕೊಕ್ಕಿಂದಿರಿದು ಮತ್ತೆ । ಗರಳವ ಕೆಡಿಸಿ ಸೀಳಿದುದು ॥ ೮೭ ॥

ಖೇಚರರುಗಳ ಕೆಣಕಿ ಬಾಳ್ವೆನೆಂಬುದ । ಭೂಚರರಿಗೆ ಉಂಟೆ ಮರುಳೆ ! ॥
ನಾಚಿಕೆ ಹೋಗಾಡಿಕೋ ಬೇಡ ತೊಲಗೆಂದು । ಖೇಚರನೆಚ್ಚಬ್ಧಿಶರವ ॥ ೮೮ ॥

ನೊರೆವಿಂಡುಗಳಿಂದ ತೆರೆಮಾಲೆಗಳಿಂದ । ಭರದಿ ಘೂರ್ಣಿಸಿ ಮೊರಹಿಂದ ॥
ಶರಧಿ ಪ್ರಲಯಕಾಲದಿ ಮೀರಿ ಬರ್ಪಂತೆ । ತ್ವರಿತದಿ ಬರುವುದ ಕಂಡು ॥ ೮೯ ॥

ಕುಂಭಿನಿಪತಿಗಳಿಗಾಳುಗಳಲ್ಲದೆ- । ಯಂಬರಚರರು ದೊರೆಗಳೇ ? ॥
ಡೊಂಬತನದ ಮಾತು ಬೇಡೆಂದು ವಡಬಾಗ್ನಿ- । ಯಂಬುವಿಂದೆಚ್ಚನಾ ಕುವರ ॥ ೯೦ ॥

ಕಿಡಿಗಳನುಗುಳುತ ಒಡನೆ ಭೋರ್ಮೊರೆಯುತ । ಕಡುಮಿಂಚಿನಂತೆ ನಾಲಿಗೆಯ ॥
ಕಡುಪಿಂದಲಾಕಾಶಕೆ ನೀಡುತ ಬಂದು । ಕುಡಿದುದು ಕೂಪಾರ ಶರವ ॥ ೯೧ ॥

ಅದ ಕಂಡು ಕುಲಿಶಗಲನು ಮುಂಗೈಗಚ್ಚಿ । ಬೆದೆ ಬೆದೆ ಬೆಂದು ಮನದೊಳು ॥
ಬದಗೂಳಿ ! ನಿನ್ನ ದೈವವ ನೆನಕೋ ಎಂದು । ಮದದಂತಿ ಬಾಣವ ಬಿಟ್ಟು ॥ ೯೨ ॥

ಚರಣದಿಂ ಭೂಮಿಯನೊರಸುತ ಬಾಲವ- । ನಿರದೆತ್ತಿ ನಿಡಿದಾದ ಕರದಿ ॥
ಧರೆಯನಪ್ಪಳಿಸುತ ಬರುವಿಭ ಶರವನು । ನರನಾಥ ಚಂದ್ರಮ ಕಂಡು ॥ ೯೩ ॥

ಶುನಕನಾರ್ಭಟೆಗೆ ಹೆಬ್ಬುಲಿ ತಾನು ಸೆಡೆವುದೇ । ಬಿನಗು ಖೇಚರ ! ನೀನೆಚ್ಚ ॥
ಮೊನೆಯಂಬಿಗೆ ನಾನು ಹೆದರುವನಲ್ಲೆಂದು । ಘನ ಸಿಂಹಬಾಣವ ಬಿಟ್ಟ ॥ ೯೪ ॥

ವದನವನಗಲಿಸಿ ಬಾಲವ ದುಂಡಿಸಿ । ಗದರಿ ಘರ್ಜಿಸಿ ಮೊರೆವುತ್ತ ॥
ಪದಪಿಂದ ಲಂಘಿಸಿ ಮಸ್ತಕವನು ಸೀಳಿ- । ಯೊದೆದು ಭೂಮಿಯೊಳು ನೂಂಕಿದುದು ॥

ಕಿಡಿಕಿಡಿಯಾಗಿ ಕುಲಿಶಗಲನದ ಕಂಡು । ಕಡುನೊಂದು ನುಡಿದನಿಂತೆಂದು ॥
ಮೃಡನಜಹರಿಗಳು ಎನ್ನ ಗದೆಯ ಕಂಡು । ಒಡನೆ ನಡುಗಿ ಭೀತಿಯಿಂದ ॥ ೯೬ ॥

ಗಿರಿ ಪದ್ಮ ರತ್ನಾಕರವನು ಪೊಕ್ಕಾಗ । ಮರೆಸಿಕೊಂಡಿಹರು ದೇಹವನು ॥
ಮರುಳೆ ! ನೀ ಬರಿದೆ ಸಾಯಲು ಬೇಡ ಜೋಳಿಗೆ । ಕರದೊಳು ಪಿಡಿದು ನಾಡೊಳಗೆ ॥

ತಿರಿಕೊಂಡು ಹೋಗಿ ತಾಯ್ತಂದೆಗಳನು ನೀನು । ಪರಿರಕ್ಷಣ್ಯವ ಮಾಡಿ ॥
ಭರದಿ ನಿನ್ನುದರವ ಪೊರೆಯಲ್ಲವೆ ಬಂದು । ಎರಕದಿಂದೆನ್ನಂಘ್ರಿತಳಕೆ ॥ ೯೮ ॥

ಶಿರವ ನೀ ಬಾಗಿ ನಾ ಪೇಳಿದೂಳಿಗವನು । ನೆರೆ ಕಿಂಕರ ಭಾವದೊಳು ॥
ತ್ವರಿತದೊಳಗೆ ಮಾಡು ಕನ್ನೆಯರಾಶೆಯ । ತೊರೆದು ನೀ ಬಿಡು ನಿರ್ಬುದ್ಧಿಯನು ॥ ೯೯ ॥

ದೇವಮಾನವ ನಾಗಯಕ್ಷ ಕಿನ್ನರರೊಳು । ಕಾವರಾರುಂಟೆಲೊ ! ನಿನ್ನ ॥
ಭೂವಳಯವ ನೀನು ಬಗೆದು ಹೊಕ್ಕಿರ್ದರು । ದೇವಾನಾಂಪ್ರಿಯ ಬುದ್ಧಿ ಕೇಳು ॥ ೧೦೦ ॥

ನಿಲ್ಲದೆ ನಾನಲ್ಲಿಗೆಯ್ದಿ ನಿನ್ನನು ತಂದು । ಬಲ್ಲಿತಪ್ಪೊಂದು ಗದೆಯೊಳು ॥
ಕ್ಷುಲ್ಲಕ ನಿನ್ನಂಗವನು ನುಗ್ಗು ಮಾಡಿ- । ದಲ್ಲದೆ ನಾ ಬಿಟ್ಟಪೆನೆ ॥ ೧೦೧ ॥

ಎಂದು ಮೂದಲಿಸಿ ಗದೆಯನು ತಾ ತೂಗುತ । ಹಿಂದುಮುಂದಕೆ ಲಂಘಿಸುತ ॥
ಅಂದು ಭುಜವನಾಸ್ಫಾಲಿಸಿಕೊಳಲು ಜ್ಞಾ- । ನೇಂದು ಕಂಡಿಂತು ನುಡಿದನು ॥ ೧೦೨ ॥

ತಲೆ ತಾ ಹುಳಿತ ನಾಯಂದದಿಂ ಬಲವನು । ಗಳಪ ಬೇಡೆಲವೋ ನೀ ಪಂದಿ ॥
ಹೊಲೆಯರುಗಳಿಗೀ ನುಡಿ ಯೋಗ್ಯವಲ್ಲದೇ । ಕುಲವಂತರಿಗೆ ಯೋಗ್ಯವಲ್ಲ ॥ ೧೦೩ ॥

ಉರಗ ತಾ ಕೋಪದಿಂ ಫೂತ್ಕಾರವ ಮಾಡಿ । ಧರೆಯನು ಹೆಡೆಯಿಂದಪ್ಪಳಿಸೆ ॥
ಗರುಡನದಕೆ ಬೆಚ್ಚಿ ಹಿಂದಕೆ ಚಿಗುವುದೇ । ಭರದಿ ಕೆಡುವ ಸೊಡರಂತೆ ॥ ೧೦೪ ॥

ದುರುಳತನದಿ ಭುಗಿಲೆಂದೆರ್ದೊಡೆ ಏನೋ । ಸರಳೊಂದರಿಂ ನಿನ್ನ ಶಿರವ ॥
ಹರಿಯಲೆಸೆವೆನೆಂದು ಧನುವಿಗೆ ಕಣೆಯನು । ತ್ವರಿತದೊಳಗೆಯಳವಡಿಸಿ ॥ ೧೦೫ ॥

ಮುನಿದು ಕುಲಿಶಗಲ ಗದೆಯಿಂದ ಹೊಡೆಯಲು । ಜನನಾಥ ಮೂರ್ಛಿತನಾಗಿ ॥
ಇನಿಸು ಬೇಗದೊಳು ಪುಷ್ಪಕದೊಳೊರಗಲಾಗ- । ಲನುಮತ್ಯಾದಿ ಕನ್ನೆಯರು ॥ ೧೦೬ ॥

ಕುವರನ ಮೂರ್ಛೆಯ ಕಂಡು ಶೋಕದಿ ತಾವು । ಭುವನದೊಳಗೆ ಬಿದ್ದು ಹೊರಳಿ ॥
ರವಿಸಮತೇಜಸ್ವಿ ! ನೀಚ ಖೇಚರನಿಂದ । ಜವಗೆ ನೀ ತುತ್ತಾದೆಯಲಾ ॥ ೧೦೭ ॥

ಹಾ ಹಾ ಕುರುವಂಶಾಂಬರ ದಿನಮಣಿ ! । ಹಾ ಹಾ ನಮ್ಮ ಪ್ರಾಣದೆರೆಯ ! ॥
ಹಾ ಹಾ ಭೂಪಾಲ ಮಕುಟತಾಟಿತಪಾದ! । ಹಾ ಹಾ ಎಂದು ಮೂರ್ಛೆಯನು ॥ ೧೦೮ ॥

ತಳೆದೊರಗಿದ ನೃಪತಿಯನು ಕನ್ನೆಯರನು । ಘಳಿಲನೆ ಕಂಡಿಳಿತಂದು ॥
ಮಳಯಜ ಮೊದಲಾದ ಶೀತಳ ಕ್ರಿಯೆಯಿಂದ । ಇಳೆಯಾಣ್ಮಗೆ ಹರಿಬಲನು ॥ ೧೦೯ ॥

ತರುಣಿಯರ್ಗೆಸಗಲು ಕಣ್ದೆರೆದೆಚ್ಚ- । ತ್ತರುಹನ ಮನದಲ್ಲಿ ಸ್ಮರಿಸಿ ॥
ಹರುಷದೊಳಗೆ ರಥವೇರಿ ಮುಂದಕೆ ನೂಕಿ । ದುರುಳ ಪಾಪಿಯೆ ನೀಚ ಖಗನೆ! ॥ ೧೧೦ ॥

ಮೋಸದಿಂದಲಿ ಬಂದು ಗದೆಯಿಂದ ಬಡಿದೆ ನೀ । ಸಾಸಿಗರಾರು ಮೆಚ್ಚುವರು ॥
ಓಸರಿಸದೆ ನನಗಿದಿರಾಗಿ ನಿಂದೆಲೋ । ಸಾಸಿಗನಾದೊಡೆ ನೀನು ॥ ೧೧೧ ॥

ಗದೆಯಿಂದ ಬಡಿದೆನ್ನ ಹರಣವ ತೆಗೆದೊಡೆ । ಯದಟ ನೀ ಹೊತ್ತುದೆ ಮೀಸೆ ॥
ಸದೆದು ಬಿಸುಡುವೆ ನಿಮಿಷದೊಳು ನಾನೆಂದ । ಕದನಲಂಪಟನಾಡಿದನು ॥ ೧೧೨ ॥

ಯಕ್ಕಲನಂದದಿಯದ ಕೇಳಿ ಖೇಚರ । ಕೆಕ್ಕಳಗೆಳವಿಪ್ರೂಮಳೆಯ ॥
ಗಕ್ಕನೆ ಕರೆದು ಭೋ ಎಂದಾಲಿಪದಿ ಕಂಠ । ಸೊಕ್ಕಿನಿಂ ಮುಂದೆನಿಂದಿರಲು ॥ ೧೧೩ ॥

ಪ್ರಳಯಕಾಲದ ಭೈರವನಂತೆ ಜ್ಞಾನೇಂ- । ದಳಲಿ ಕಾರ್ಮುಕಕರ್ದ್ಧೇಂದು ॥
ಪೊಳೆವ ರೋಪಣವ ಸಂಧಾನವ ತಾ ಮಾಡಿ । ಘಳಿಲನೆ ಕಿವಿವರೆ ತೆಗೆದು ॥ ೧೧೪ ॥

ಕಡುಬೇಗದಿಂದಲೆಸೆಯಲು ಮಾರ್ಗಣ ತಾ । ಘುಡುಘುಡಿಸುತ ನಡೆತಂದು ॥
ಕೆಡುಕ ಖಗನ ಶಿರವರಿದಂಬರಕಾಗಿ । ಬಿಡದೆತ್ತಿಕೊಂಡು ಪಾರಿದುದು ॥ ೧೧೫ ॥

ಶಶಿಲೇಖೆ ಹಿಮ್ಮೆಟ್ಟಿ ರಾಹುವ ಪಿಡಿವಾ- । ಗಸಕೆ ಪಾರಿದುದೋ ಎಂಬಂತೆ ॥
ಎಸಕದಿಂ ಕುವರನೆಚ್ಚರ್ದ್ಧೇಂದು ಶರವಾ- । ಗಸಕೆ ಶಿರವ ಕೊಂಡುಪೋಯ್ತು ॥ ೧೧೬ ॥

ಶರದೊಳಗಿರ್ದ ಶಿರವುಮೊಪ್ಪಿತೆಂತೆನೆ- । ಯರಮುಗ ಮೆಚ್ಚಿ ವಜ್ರಗಲನ ॥
ಕೊರಲಿಗೆ ಮುತ್ತಿನ ಹತ್ತಕಟ್ಟನು ತಾನು । ಭರದಿ ಕಟ್ಟಿಸಿದನೆಂಬಂತೆ ॥ ೧೧೭ ॥

ಕುಲಿಶಗಲನ ಜಯಲಕ್ಷ್ಮಿ ತಾನಿಕ್ಕಿರ್ದ । ಪಲವು ರತ್ನದ ಕಿರೀಟ ॥
ನೆಲದೊಳು ಬಿರ್ದರುಳಿಪುದೋ ಎಂಬಂದದಿಂ । ತಲೆ ಬಿರ್ದುದಾಗವನಿಯೊಳು ॥ ೧೧೮ ॥

ಸುರಪನ ಖಾಂಡವನವ ಮೇಯಲು ಬಂದ । ಗಿರಿಯನು ವಜ್ರದಿ ಬಡಿಯೆ ॥
ಭರದಿಂದ ಭೂಮಿಲಿ ಬಿರ್ದುದೋ ತಾನೆನೆ । ನೆರೆ ಹಾರಿಬಿರ್ದುದಾಗಟ್ಟಿ ॥ ೧೧೯ ॥

ಸುರಕಾಂತೆಯರೆಲ್ಲಾಗಸದೊಳು ನಿಂದು । ಕುರುವಂಶ ಶೇಖರ ! ನಿನಗೆ ॥
ಧುರದೊಳಗಿದಿರಾಂಪವರಾರು ಭಳಿರೆಂ- । ದರಳಮಳೆಗಳ ಕರೆದರು ॥ ೧೨೦ ॥

ದೇವದುಂದುಭಿಗಳು ಮೊಳಗಿದವಮರರು । ಕೋವಿದ ! ನಿನ್ನ ಕೈಚಳಕ ॥
ದೇವರ್ಕಳಿಗು ಬಾರದು ಎಂದು ಕೊಂಡಾಡಿ । ಪೂವಿನ ಮಳೆಯ ಕರೆವರು ॥ ೧೨೧ ॥

ನರಧರ್ಮ ಕಹಳೆಯನೆತ್ತಿಸಿ ರಣದೊಳು । ಭರದಿಂದಲಭಯ ಘೋಷಣೆಯ ॥
ಹರುಷದೊಳಗೆ ಮಾಡಿಸಿ ದೊರೆ ದೊರೆಗಳ್ಗೆ । ನೆರೆಗಲಿಯುಡುಗೊರೆಯಿತ್ತು ॥ ೧೨೨ ॥

ಹೆದರಬೇಡಾವುದಕು ನೀವೆಂದಾಗ । ಚದುರನ ವರ ಮಸ್ತಕದೊಳು ॥
ಪದುಮಹಸ್ತವನಿಟ್ಟು ರಾವುತರಾಣುವೆ । ಬೆದರಬೇಡೆಂದು ತಾ ನುಡಿದು ॥ ೧೨೩ ॥

ನಂಬಿಗೆಯನು ಇತ್ತು ಬೀಡಿಗೈತಂದು । ಕುಂಭಿನಿಪತಿ ಸ್ನಾನ ಮಾಡಿ ॥
ಶಂಬರಾರಿಯ ಗೆಲ್ದ ಜಿನರಾಜಮಲ್ಲನ । ಬಿಂಬವ ಪೂಜಿಸಿ ಸುಖದಿ ॥ ೧೨೪ ॥

ಹರಿಬಲ ದೊರೆ ದೊರೆಗಳು ಸುತ್ತ ಕುಳ್ಳಿರಲು । ಹರಿವಿಷ್ಟರದೊಳು ಕುವರನು ॥
ಹರಿಹರ ವೈಭವದೊಳು ಓಲಗಗೊಟ್ಟು । ನರನಾಥ ಚಂದ್ರನೊಪ್ಪಿದನು ॥ ೧೨೫ ॥

ಜಿನಮತಾಂಬರಸೂರ್ಯ ಶರನಿಧಿ ಗಾಂಭೀರ್ಯ । ಮನುಜಾಧೀಶರ್ಗೆ ವರ್ಯ ॥
ವನಿತೆರ ಚಿತ್ತಾಪಹಾರ್ಯ ಸುಜ್ಞಾನೇಂದು । ಮನಸಿಜನೊಪ್ಪಿದ ಧೈರ್ಯ ॥ ೧೨೬ ॥

**॥ ಅಂತು ಸಂಧಿ ೫ಕ್ಕಂ ಪದ ೪೨೯ಕ್ಕಂ ಮಂಗಲಂ ॥**

# ಜ್ಞಾನಚಂದ್ರನು ವಿಜಯಾರ್ಧದಲ್ಲಿ ಅಭಿಷೇಕ ಮಾಡಿದುದು.

ಜಿನಚಂದ್ರನಂದನ ವಿಜಯಾರ್ಧಗಿರಿಯಲ್ಲಿ । ಜಿನಗೆ ಸ್ನಪನಗೆಯ್ದುದೊರೆವೆ ॥ ಪ ॥

ಸುತ್ರಾಮಸ್ತೋತ್ರ ಜಗತ್ತ್ರಯಪಾವನ- । ಗಾತ್ರ ! ಭವ್ಯಾಂಬುಜಮಿತ್ರ ! ॥
ಕ್ಷತ್ರಿಯಕುಲಪವಿತ್ರನು **ಶಾಂತೀಶ** । ದಾತ್ರವಾಗೆನ್ನಘಲತೆಗೆ ॥ ೧ ॥

ದೊರೆ ದೊರೆಗಳು ಜ್ಞಾನಚಂದ್ರನ ಸುತ್ತಲು । ಹರುಷದೊಳಗೆ ಕುಳ್ಳಿರಲು ॥
ದೊರೆಕುವರನು ಹರಿಬಲನ ಮೊಗವ ನೋಡಿ । ಒರೆದನು ಎಲೆ ಮಾತುಳನೆ ! ॥ ೨ ॥

ವಿಜಯಾರ್ಧಗಿರಿಯ ಚೈತ್ಯಾಲಯದೊಳಗಿರ್ದ । ವೃಜಿನಾರಿ ಜಿನರಾಜನಿಗೆ ॥
ನಿಜದಿಂದಲಭಿಷೇಕವ ಮಾಡಬೇಕೆಂದು । ಸುಜನೈಕಬಾಂಧವ ಪೇಳೆ ॥ ೩ ॥

ಕುರುಕುಲೇಶನ ನುಡಿಯನು ಕೇಳಿ ಹರಿಬಲ । ಬರಲಿ ಪೂಜಾದ್ರವ್ಯವೆಂದು ॥
ಬರೆಸಿ ಲೇಖನಗಳ ನೂರೂರಿಗಟ್ಟಲು । ದೊರೆಕುವರನು ತಾಸಿತ್ತ ॥ ೪ ॥

ಹರಿಬಲ ಮೊದಲಾದ ಸಕಲ ಖೇಚರರೆಲ್ಲ । ದೊರೆಮಗನೊಂದಾಗಿ ಬರಲು ॥
ಹರುಷದೊಳಗೆ ವಿಜಯಾರ್ಧಪರ್ವತದೊಂದು । ಮೆರೆವ ತುದಿಗೆ ಏರಿದನು ॥ ೫ ॥

ಉಡುತತಿಯೊಡಬರೆ ಸಂಪೂರ್ಣ ಚಂದ್ರ- । ನಡರುವಂದದಿ ಬೆಳ್ಮುಗಿಲ ॥
ಉಡುಪಥಚರರೊಡ ಬರೆ ಜ್ಞಾನಚಂದ್ರನು । ಜಡಗಿನಿಂದೇರಿದ ಗಿರಿಯ ॥ ೬ ॥

ಸುರಗಣಬಳಸಿ ಬರಲು ಪಣೆಗಣ್ಣನು । ಹರಶೈಲವಡರುವಂದದೊಳು ॥
ಹರಿಬಲ ಮೊದಲಾದ ದೊರೆಗಳೊಗ್ಗಿಲಿ ತಾ । ಗಿರಿಯಗ್ರಕೇರಿದ ಕುವರ ॥ ೭ ॥

ಸಾರಸವಕ್ಕಿಗಳೊಡಬರೆಯರಸಂಚೆ । ಕ್ಷೀರಾಬ್ಧಿತೆರೆಯೇರುವಂತೆ ॥
ತಾರಾದ್ರಿಯಗ್ರಕೆ ಖೇಚರರೊಗ್ಗಿಲಿ । ಮಾರಸನ್ನಿಭನೇರಿದನು ॥ ೮ ॥

ಬಿಸಿಗಣ್ಣನ ಶಿರವನು ವಿಪ್ರರೊಡವರೆ । ಎಸಕದಿಂದಜನೇರುವಂತೆ ॥
ಶಶಿಪಥಚರರೊಡ ಬರೆ ರಜತಾದ್ರಿಯ । ಮಿಸುನಿವಣ್ಣನು ಏರಿದನು ॥ ೯ ॥

ಕಡುನಲ್ಮೆಯಿಂದೇರಿ ಬರುವ ಕುವರನಿಗೆ । ಕಡೆಯಾಣಿ ಬಸದಿ ತೋರಿದುದು ॥
ಒಡನೆಯುದಿಪ ಬಾಲಸೂರ್ಯನ ಕಾಂತಿಯ । ಕೆಡಿಸುತ ತನ್ನ ಬೆಳ್ಪಿಂದ ॥ ೧೦ ॥

ಬೆಳುದಾವರೆಯ ಮಧ್ಯದೊಳು ರಾರಾಜಿಸೆ । ಪೊಳೆವ ಕರ್ಣಿಕೆಯೋ ಎಂಬಂತೆ ॥
ಇಳೆಯಾಣ್ಮನ ಕಣ್ಗೆ ಬೆಳ್ಳಿ ಬೆಟ್ಟದ ಮೇಲೆ । ಕಳಧೌತ ವಸತಿ ಕಾಣಿಸಿತು ॥ ೧೧ ॥

ಧವಳವರ್ಣದ ಮೇಘದ ಮೇಲೆ ತೊಳಗುವ । ರವಿಮಂಡಲವೋ ಎಂಬಂತೆ ॥
ಕುವರನ ಕಣ್ಗೆ ತೋರಿತು ರಜತಾದ್ರಿ ವಿ- । ಭವದೂರನ ಚೈತ್ಯವಾಸ ॥ ೧೨ ॥

ಗಿರಿರಾಜನಿಕ್ಕಿದ ವರರತ್ನಮಕುಟವೋ । ಶರದಭ್ರದ ಹರಿಧನುವೋ ॥
ಉರಗರಾಜನ ಪೆಡೆವಣಿಯೋ ತಾನೆಂಬಂತೆ । ದೊರೆಗೆ ತೋರಿತು ಜಿನನಿಳಯ ॥ ೧೩ ॥

ಅರುಹರಿದಾರಿಯ ವಿಸ್ತೀರ್ಣಮನುಳ್ಳ । ಹರಿದಾರಿಯ ನೀಳಮುಳ್ಳ ॥
ಪರಿಕಿಸೆ ಮುಕ್ಕಾಲು ಕ್ರೋಶೋತ್ಸೇಧದ । ವರಸ್ವರ್ಣಕೋಟೆಯು ಬಳಿಗೆ ॥ ೧೪ ॥

ಅರಮಗ ಜಯ ಜಯ ಜಯತೆಂಬ ಶಬ್ದವ- । ನೊರೆವುತ ದೊರೆಗಳೊಗ್ಗಿನೊಳು ॥
ಬರೆ ಬರೆ ಜಿನನಿಳಯವು ಸಮೀಪದಿ । ತೆರೆದರುಶನದಿ ಕಾಣಿಸಿತು ॥ ೧೫ ॥

ಮುಗಿಲನಳ್ಳಿರಿವ ರತ್ನಾಂಕಿತ ಶಿಖರವು । ಸೊಗಸಿತು ಜಿನನಿಳಯದೊಳು ॥
ಮಿಗೆ ರಂಜಿಪ ಹೆಬ್ಬಾಗಿಲುಗಳ ಮೇಲೆ । ಧಗಧಗಿಸುವ ಕಾಂಚನದಿ ॥ ೧೬ ॥

ಹೊಳೆವುತಿರ್ದ ನಾಲ್ಕು ದಿಕ್ಕಿಲಿ ಗೋಪುರ । ವಿಲಸಿತ ಬಿಂಬಗಳ್ವೆರಸು ॥
ಮಿಳಿರ್ವ ಪತಾಕೆ ಕೋಟಾಕೋಟಿಗಳಲ್ಲಿ । ಎಳನೇಸರ ನಗುತಿಹವು ॥ ೧೭ ॥

ನೋಡದೆ ಪೂರ್ವಜನ್ಮದಿ ಜಿನಮುಖವನು । ಬೇಡುವಿರೇಕೆ ಜನರನು ॥
ನೋಡಿ ಪಡೆಯಿರಿ ಸಿರಿಯನೆಂದು ಕರೆದಂತೆ । ಗಾಡಿಯಿಂದುಲಿಪವು ಧ್ವಜವು ॥ ೧೮ ॥

ಬರಿದೆ ಇತ್ತತ್ತಲೇತಕೆ ಸಂಚರಿಸಿರಿ- । ಯರುಹನ ಸಿರಿಮೊಗ ನೋಡಿ ॥
ದುರಿತವ ಸುಡಿರೆಂದು ಸುರರನು ಕರೆವಂತೆ । ವರಧ್ವಜದುಲುಹು ರಾಜಿಪವು ॥ ೧೯ ॥

ಕಡುಕಷ್ಟ ಸ್ತ್ರೀಜನ್ಮ ಎಲೆ ಜಿನರಾಜನೆ ! । ಕೆಡಿಸೆಂದುಯಮರಿಯರ್ನಿಂದು ॥
ಬೆಡಗಿನಿಂ ನಟಿಪರೋ ಎಂಬಂತೆ ಧ್ವಜಗಳು । ಬಿಡದೆ ನಲಿವವು ಶಿಖರದಿ ॥ ೨೦ ॥

ನೋಡುವ ಜಿನವಸತಿಯ ಚೆಲ್ವ ಕುವರನು । ಕೂಡಿಕೊಂಡಾ ಖೇಚರರ ॥
ಮೂಡಣ ನವರತ್ನದ್ವಾರದಿಂದೊಳವೊಕ್ಕು । ಪ್ರೌಢರರಸ ಉಡೆ ಸುತ್ತಿ ॥ ೨೧ ॥

ತಾರಾಳಿಯೊಡಬರೆ ಸುರಗಿರಿಯನು ಸುತ್ತಿ । ಕೈರವಸಖ ಬರ್ಪ್ಪಂತೆ ॥
ತಾರಾಪಥಚರರೊಗ್ಗಿಲಿ ಶ್ರೀ ಜೈನಾ- । ಗಾರವನಾ ರಾಜಹಂಸ ॥ ೨೨ ॥

ಕರಕಮಲಂಗಳ ಮುಗಿದು ಭಕ್ತಿಯೊಳಾ- । ಗರುಹನ ಚಾರುಮಂದಿರವ ॥
ಎರಕದಿಂ ಮೆಲ್ಲಮೆಲ್ಲನೆ ಬಲವರುತಿರೆ । ಮೆರೆದವು ಮಣಿಘಂಟೆ ಕೋಟಿ ॥ ೨೩ ॥

ಜಿನರಾಜಮಲ್ಲಗೆರಗಿದರ ಸಂಸಾರ । ಘನವಾಗಿ ಕೆಡುವುದೆ ಎಂದು ॥
ಮನಮುಟ್ಟಿ ಸಾರ್ವಂತೆ ಎಲ್ಲೆಲ್ಲಿ ಮಣಿಘಂಟೆ- । ಯನುಪಮ ರವ ತುಂಬಿಹುದು ॥ ೨೪ ॥

ಎಲೆ ಜ್ಞಾನಚಂದ್ರನೆ ! ಜಿನರ ಪೂಜಿಸಿದರಿಂ । ಚೆಲುವೆಯರ್ಮುತ್ತೆಂಟು ಮಂದಿ ॥
ಒಲಿವರು ನಿನಗೆಂದು ಪೇಳ್ವಂತೆ ಮಣಿಘಂಟೆ । ಉಲಿವವು ಥಣಥಣರೆಂದು ॥ ೨೫ ॥

ಜ್ಞಾನೇಂದು ಕುವರನ ಮುದ್ದು ನಡೆಯ ಕಂಡು । ನಾನಾರತ್ನಾಂಕಿತ ಬಿಂಬ ॥
ಸಾನಂದದಿಂದಲಿ ನಗುತ ನಿಟ್ಟಿಪವೆನೆ । ಜೈನಾಗಾರದಿ ಕೋಟಿಯಿಹವು ॥ ೨೬ ॥

ದೇವರಾಜನು ಸುರಸಮಿತಿಯೊಡನೆ ಬರೆ । ದೇವನ ಸಮವಸರಣವ ॥
ತೀವಿದ ಭಕ್ತಿಯಿಂ ಬಲವಂದು ಬರುತಿರೆ । ಭಾವಜ್ಞ ಜ್ಞಾನೇಂದು ಕುವರ ॥ ೨೭ ॥

ಹರಿಬಲ ಮೊದಲಾದ ಖೇಚರರೊಗ್ಗಿನಿಂ । ಪರಮ ಭಕ್ತಿಯೊಳು ತಾನಾಗ ॥
ಅರುಹನ ಮಂದಿರವನು ಮೂಮೆ ಬಲವಂದು । ಕರಚರಣಂಗಳ ತೊಳೆದು ॥ ೨೮ ॥

ದ್ವಾರಪಾಲಕರನುಮತದಿಂದ ಜ್ಞಾನೇಂದು । ನೇರಾಣಿಗೆಲಸದೆರಡನೆ ॥
ದ್ವಾರದಿಂದೊಳಹೊಕ್ಕು ಜಿನಮಂದಿರವನು । ಧೀರರರಸ ಮತ್ತೊಮ್ಮೆ ॥ ೨೯ ॥

ಬಲವಂದು ಮೂಮೆ ಚೈತ್ಯಾಲಯದೊಳಪೊ- । ಕ್ಕಲರ್ವಿಲ್ಲ ವೈರಿ ಜಿನಪಗೆ ॥
ಸಲವಿನಿಂ ಸಾಷ್ಟಾಂಗವೆರಗಿ ಸುತಿಸಿ ಬಂದು । ಪೊಳೆವ ಭದ್ರದ ಮಂಟಪದೊಳು ॥ ೩೦ ॥

ಕುಳಿರಲಾಗಷ್ಟರೊಳಗೆ ದಿಕ್ಕು ದಿಕ್ಕಿನಿಂ । ಫಲವಸ್ತು ಹೊರೆಹೊರೆಗಟ್ಟಿ ॥
ಕಳಮೆಯಕ್ಷತೆ ಕಾಕಂಬಿ ಸಕ್ಕರೆ ಘೃತ । ಚಿಲುಪಾಲು ಮೊಸರ ತಂಬಿಗಳು ॥ ೩೧ ॥

ಭರದಿಂದ ಕೋಟಾಕೋಟಿ ಬಂದಿಳಿಹಿದೊ । ಗಿರಿಯಡರ್ದೆರಪಿಲ್ಲವೆನಲು ॥
ಪರಿಮಳಮಯವಾದ ಪಲವು ಜಾತಿಯ ಪುಷ್ಪ- । ದರಳುಗಳ್ಪೊಟ್ಟಣಗಟ್ಟಿ ॥ ೩೨ ॥

ಅಂಬರಗಿರಿಯಷ್ಟದಿಕ್ಕು ಅವನಿಯನು । ತುಂಬುತ ದಿವ್ಯ ಗಂಧವನು ॥
ಸಂಭ್ರಮದಿಂ ದಿಕ್ಕುದಿಕ್ಕಿನಿಂ ತಂದರು । ಕುಂಭಿನಿಪತಿಯ ಬೆಸದೊಳು ॥ ೩೩ ॥

ಜಲ ಇಕ್ಷು ಘೃತ ದುಗ್ಧ ದಧ್ಯಾರ್ಣವದೊಳು । ಜಲ ಇಕ್ಷು ಘೃತ ದುಗ್ಧ ದಧಿಯ ॥
ಅಲಸದೆ ತನ್ನಿಮೆಂದೆನೆ ತಂದು ಕೊಟ್ಟರು । ಸಲೆ ವಿದ್ಯಾದೇವತೆಗಳು ॥ ೩೪ ॥

ಭರದಿಂದ ಕಲ್ಪವೃಕ್ಷದ ವನವನು ಪೊ- । ಕ್ಕರು ನೂರು ಸಾಸಿರ ಕೋಟಿ ॥
ನೆರೆದೊಡ್ಡಿತಾದ ತೆಂಗಿನ ಕಾಯ್ಗಳನು । ಪರಿಮಳವನು ಬೀರುತಿರ್ಪ ॥ ೩೫ ॥

ಹತ್ತು ಸಾಸಿರಲಕ್ಷ ಕೋಟಿ ಸಂಖ್ಯೆಯನುಳ್ಳ । ಉತ್ತಮ ಕದಳೀ ಪಣ್ಣುಗಳ ॥
ಬಿತ್ತರವಾದ ಗೊನೆಗಳ ದೇವತೆ ತಂ- । ದಿತ್ತವು ನೃಪನ ಬೆಸದೊಳು ॥ ೩೬ ॥

ಇವು ಮೊದಲಾದ ಪಲವು ಪೂಜಾದ್ರವ್ಯವು । ತವಕದೊಳಗೆ ಬರುತಿರಲು ॥
ದಿವಿಜರ ದಿವಿಚರರುಗಳ ಜ್ಯೋತಿಷ್ಕರ । ನಿವಹ ಪೂಜೆಗೆ ಬರಲಾಗ ॥ ೩೭ ॥

ಉತ್ತಮ ಶ್ರಾವಕರುಗಳು ಶ್ರಾವಕಿಯರು । ಅರ್ತಿಯಿಂದಲಿ ಪುಷ್ಪಫಲವ ॥
ಬಿತ್ತರದೊಳಗಾಂತು ಜಯಜಯವೆನುತಾಗ । ಪೊತ್ತಿದ ವಿಜಯಾರ್ಧಗಿರಿಯ ॥ ೩೮ ॥

ಕುಸುಮಚಾರಣರಂಬರಚಾರಣರುಗ- । ಳೆಸೆವ ಜಂಘಾಂಬುಚಾರಣರು ॥
ಹಸನಾದ ಚತುರಂಗುಲ ಚಾರಣಾದಿ । ಋಷಿಗಳು ತಂಡತಂಡದೊಳು ॥ ೩೯ ॥

ನಡೆತಂದು ಜಿನರಾಜಮಲ್ಲನ ಕೊಂಡಾಡಿ । ಪೊಡವಟ್ಟುಚಿತ ಸ್ಥಾನದೊಳು ॥
ಗಡಣದಿಂದೋಲಗಗೊಟ್ಟರು ಸಾಕ್ಷಾತ್ । ನಡೆ ಜಿನರೆಂಬ ಮಾಳ್ಕೆಯೊಳು ॥ ೪೦ ॥

ಇತ್ತರದೊಳು ಶ್ರಾವಕರು ದೇವರ್ಕಳು । ಸಿತ್ತರು ಕರಗಳ ಮುಗಿದು ॥
ಬಿತ್ತರದಿಂ ಜ್ಞಾನಚಂದ್ರನು ಜಳಕವ- । ನಿತ್ತಿಯಿಂ ಮಾಡಿ ತಾನಾಗ ॥ ೪೧ ॥

ಬಿಳಿಯ ಪಟ್ಟೆಯ ಧೋತ್ರವನುಟ್ಟು ನಿಡಿಮುಟ್ಟ । ಪೊಳೆವ ಮೌಕ್ತಿಕದ ಸೆರಗಿನ ॥
ವಿಲಸಿತ ಚಂದ್ರಗಾವಿಯ ಬಹಿರ್ವಾಸವ । ಇಳಿಯಾಣ್ಮ ಪೊದೆದ ಮುರುಕದಿ ॥ ೪೨ ॥

ಉರುಟಾದ ಮುತ್ತಿನ ಯಜ್ಞಸೂತ್ರವನಾ- । ಗರಮಾಗ ಕೊರಳೊಳು ಧರಿಸಿ ॥
ಸಿರಿಮುಡಿಗಳವಡಿಸಿದಸು ಮಕುಟವನು । ಕರದಿ ಧರಿಸಿದ ಕಂಕಣವ ॥ ೪೩ ॥

ತೋರಮುತ್ತುಗಳಿಂದ ಥಳಥಳ ಹೊಗರಿನ । ಹಾರವನಿಟ್ಟು ಕಂಠದೊಳು ॥
ಸೇರಿಸಿ ಕುಂಡಲವನು ಕರ್ಣಯುಗದೊಳು । ಈರಿಯಾಪಥ ಶುದ್ಧಿಗೈದು ॥ ೪೪ ॥

ದೊರೆಮಾಗ ಸಂಧ್ಯಾವಂದನೆಯನು ಮಾಡಿ । ಎರಕದಿಂ ಸಕಲೀಕರಣವ ॥
ಭರದಿಂದ ಯಜ್ಞದೀಕ್ಷೆಯ ತಾ ಕೈಕೊಂಡು । ವರಕುಂಕುಮದ ಗಂಧವನು ॥ ೪೫ ॥

ಅಳಕದೊಳಗೆಯೂರ್ಧ್ವ ಪುಂಡ್ರೈಕಾಕಾರದಿಂ- । ದಳವಡಿಸಿಯೆರ್ದೆ ತುಂಬಿ ॥
ಮಳಯಜಗಂಧವ ಲೇಪಿಸಿ ಕೊರಳಿಗೆ । ನಲವಿನಿಂ ತೊಡೆದು ಜ್ಞಾನೇಂದು ॥ ೪೬ ॥

ಮುನಿಜನಂಗಳು ಇರ್ದ ತಾವಿಗೈತಂದು । ಮುನಿಮುಖ್ಯಸಂಘ್ರಿಯುಗಲಕೆ ॥
ಘನಭಕ್ತಿಯಿಂದ ನಮೋಸ್ತೆನೆ ಪರಸಿದ । ಮಿನುಗುವ ಮೋಕ್ಷವಕ್ಕೆಂದು ॥ ೪೭ ॥

ಮತ್ತುಳಿದ ಯಮಿಗಳು ಸದ್ಧರ್ಮವಕ್ಕೆಂದು । ಬಿತ್ತರಿಸಿದರು ನಲ್ಮೆಯೊಳು ॥
ಉತ್ತಮ ನಾಯಕಮಿತಗಳ ವ್ರತಗಳ । ನಿತ್ತಿಯಿಂದಾಗ ಕೈಕೊಂಡು ॥ ೪೮ ॥

ಕರಗಳ ಮುಗಿದಾಗೆಲೆ ಮುನಿರಾಯರಿ ! । ಪರಮನ ಪೂಜೆ ನೋಡುವರೆ ॥
ಹರುಷದಿಂ ನಿಮ್ಮ ಗುಡ್ಡಗಳ ಮೇಗಳದೊಂದು । ಕರುಣದಿಂ ಚಿತ್ತೈಸಿ ಎಂದು ॥ ೪೯ ॥

ಇಳೆಯಾಣ್ಮ ಬಿನ್ನಪವನು ಮಾಡಿ ಜಿನಪನ । ಬಲದ ಭಾಗದಿ ಬಂದು ನಿಂದು ॥
ಜಲವ ಜಿನಾಂಗಕೆರೆಯೆ ಕೋಟಿ ವಾದ್ಯವು । ಮೊಳಗಿದುವಾಗ ಭೋರೆಂದು ॥ ೫೦ ॥

ಕಲಶ ಸಾಸಿರದೆಂಟು ಪೂಜಕ ಜನಗಳು । ನಲವಿನಿಂದರ್ಚನೆಗೆಯ್ದು ॥
ಪಲವು ಮಂತ್ರಗಳಿಂದ ಗದ್ಯ ಪದ್ಯಗಳಿಂದ । ವಿಲಸಿತ ಪೂಜೆಯ ಮಾಡಿ ॥ ೫೧ ॥

ಹರಿಬಲ ಮೊದಲಾದ ಸಕಲ ಖೇಚರರೆಲ್ಲ । ಹರಿಷದೊಳಗೆ ಎಡೆಸುತ್ತಿ ॥
ಕರದ ಕಂಕಣ ಝಣರೆನೆ ಸ್ವರ್ಣಕಲಶವ । ಭರದೊಳಗೊಬ್ಬೊಬ್ಬರಾಗ ॥ ೫೨ ॥

ಕರದಿಂದ ಕರಕೆ ನೀಡುತ ಜಯವೆಂದಾಗ । ಹರುಷದಿಂ ಕುವರಗೆ ನೀಡೆ ॥
ದೊರೆಮಗ ಜಿನರಾಜಗೆ ಅಭಿಷೇಕವ । ಎರಕದಿಂ ಮಾಡಲೊಪ್ಪಿದುದು ॥ ೫೩ ॥

ಸುರಗಿರಿಯೊಳಗಿರ್ದ ಪಾಂಡುಕ ಶಿಲೆಯೊಳು । ಸುರಪ ಜಿನನ ಕುಳ್ಳಿರಿಸಿ ॥
ಕರವ ಸಾಸಿರವ ನಿರ್ಮಿಸಿ ತಾನು ದಕ್ಷಿಣ । ವರಭಾಗದೊಳು ನಿಂದುಕೊಂಡು ॥ ೫೪ ॥

ಸುರರೆಲ್ಲ ನೆರೆದು ಸ್ವರ್ಣದ ಕಲಶಗಳೊಳು । ಭರದಿ ಪಾಲ್ಗಡಲುದಕವನು ॥
ಕರದಿಂದ ಕರಕೆ ಕೊಡಲು ದೇವೇಂದ್ರನು । ಎರೆವಭಿಷವಣದಂತಾಯ್ತು ॥ ೫೫ ॥

ಚೆಂದೆಂಗಿನೆಳನೀರ ಜಿನನ ಮಸ್ತಕದಿ ಜ್ಞಾ- । ನೇಂದು ಸುರಿಯಲೊಪ್ಪಿದುದು ॥
ಚಂದದಿಂ ಗಂಗಾನದಿ ಜಿನ ಶಿರದಿ ಭೋ- । ರೆಂದು ನೀಸುರಿದಂತಾಯ್ತು ॥ ೫೬ ॥

ಉಡುತತಿ ಜಿನ ! ನಿನ್ನಂಗದ ಕಾಂತಿಯು । ಕೊಡು ನಮಗೆಂದು ಸಾಲಾಗಿ ॥
ಕಡುಭಕ್ತಿಯಿಂದಲಿ ನಿಂದಂತೆ ತೆಂಗಿನ । ನಿಡುಮಾಲೆಯಭಿಷೇಕವಿಹುದು ॥ ೫೭ ॥

ಅರಮಗನಷ್ಟವಿಧಾರ್ಚನೆಯನು ಮಾಡಿ । ವರ ಕರ್ಪೂರದಾರತಿಯ ॥
ನಿರದೆತ್ತಿ ಚಂದ್ರಗಾವಿಯ ನಿವಾಳಿಯ । ದೊರೆಮಗನಿಟ್ಟೆಡಬಲಕೆ ॥ ೫೮ ॥

ದೋಷಾಕರರೆಂಬ ಹೆಸರ ಹೊಡೆದು ಜಿ- । ನೇಶ ! ನೀ ರಕ್ಷಿಸೆಂದೆಮ್ಮ ॥
ಆ ಶಶಿಗಳು ಬಂದಡಿಗೆ ಮುಗ್ಗಿದವೆನೆ । ಸೂಸಿದ ಕದಳಿ ಪಣ್ಣಿಹವು ॥ ೫೯ ॥

ದಾಡಿಮುದಭಿಷೇಕವ ಜಿನರಾಜಗೆ । ಮಾಡೆ ಕುವರನೊಪ್ಪಿದುದು ॥
ನೋಡುವರಾಲಿಗೆ ತೋರಿಕು ರನ್ನದಿಂ । ಮಾಡಿದೊಂದಭಿಷೇಕದಂತೆ ॥ ೬೦ ॥

ಕುವರ ಪೂಜೆಯ ಮಾಡಿ ನೀರಾಜನವೆತ್ತಿ । ಸವಿನಯದಿಂ ಶುಭ್ರವಾದ ॥
ಪವಿಯಂತೆ ಥಳಥಳಿಸುವ ಪಟ್ಟೆವಸ್ತ್ರವ । ಕುವರ ನಿವಾಳಿಯನಿಟ್ಟು ॥ ೬೧ ॥

ಜಗದ ಜನವನೆಚ್ಚು ದುರಿತ ಬಂದುದು ಎಂದು । ಮುಗುಳಂಬ ಜಿನಪನ ಮುಂದೆ ॥
ಸೊಗಯಿಪ ಸವಿವಿಲ್ಲಕರದಿ ಚೂರ್ಣಿಪನೆನೆ । ಸುಗುಣಿ ಸರ್ಕರೆಯ ಸೂಸಿದನು ॥ ೬೨ ॥

ತರಣಿಮಂಡಲದಂತೆ ಥಳಥಳಿಸುವ ಸ್ವರ್ಣ । ಪರಿವಾಣದೊಳಗೆತ್ತಾರತಿಯ ॥
ಕರಗೊಳಿಪಿಂದ್ರಪಚ್ಚೆಯ ನಿವಾಳಿಯನಿಡೆ । ದೊರೆಗಳು ಜಯ ಜಯವೆನಲು ॥ ೬೩ ॥

ಚಂಚಲವೃತ್ತಿಯ ಬಿಡಿಸೆಂದು ಜಿನನ ಪ- । ದಾಂಚಿತ ಮೂಲಕೆ ಮಿಂಚು ॥
ವಂಚನೆ ಇಲ್ಲದೆರಗಿತೆನೆ ಘೃತಧಾರೆ । ತಾಂ ಚದುರಿಂದ ರಂಜಿಸಿತು ॥ ೬೪ ॥

ಎಸಗಿ ಪೂಜೆಯನಾರತಿಯೆತ್ತಿ ಕುವರನು । ಹಸುರು ಪಟ್ಟೆಯ ನಿವಾಳಿಯನು ॥
ಕುಶಲದಿಂ ಹಾಕಲು ಜಯ ಜಯವೆಂದಾ- । ಗುಸುರಿದರೆಲ್ಲ ನಿರ್ಜರರು ॥ ೬೫ ॥

ಸಾಸಿರ ತೋಳ ವಿದ್ಯಾಬಲದಿಂದಲಾ । ಸಾಸಿಗ ನಿರ್ಮಿಸಿಕೊಂಡು ॥
ಬೇಸರುಗೊಳದಿಸಿಗಡಲ ಸುಧೆಯ ಜಿ- । ನೇಶನ ಸಿರದೊಳು ಸುರಿದ ॥ ೬೬ ॥

ಸವಿಗಡಲೊಳು ಸುಳಿದಾಡುವ ತೆರೆಗಳ । ಸಿವಹವೋ ಎಂಬಂದದೊಳು ॥
ಭವದೂರನಂಗವೊಳಗೆ ತೆರೆ ತೆರೆಯಾಗಿ । ಕವಿದು ಪಯಸ್ಸಿಳಿತಹುದು ॥ ೬೭ ॥

ಪಳುಕಿನೊಳಗೆ ಮಾಡಿದ ಪ್ರತಿಮೆಯೊ ತಾನು । ಪೊಳೆವ ಬೆಳ್ಳಿಯ ಮೂರುತಿಯೋ ॥
ಬೆಳುದಿಂಗಳಿಂದ ಮಾಡಿದ ಬಿಂಬವೋ ಎನೆ । ಮುಳುಗಿ ಹಾಲೊಳು ಜಿನ ತೋರ್ಪ ॥ ೬೮ ॥

ಗುಡುಗಾಗೆ ದುಂದುಭಿ ನೃಪರುಗಳಿಕ್ಕಿರ್ದ । ತೊಡವೆ ಶಕ್ರನ ಧನುವಾಗೆ ॥
ಕಡೆಗಣ್ಣ ಕಾಂತಿಯೆ ಮಿಂಚಾಗೆ ಜಿನಪನಿ- । ಗೊಡನಾಯ್ತಭಿಷೇಕ ಮಳೆಯು ॥ ೬೯ ॥

ಕಡುಭಕ್ತಿಯಿಂ ರಾಜಕುವರ ಜಿನೇಶಗೆ । ಒಡನೆ ಮಾಡಿದ ಕ್ಷೀರ ಧಾರೆ ॥
ಘುಡುಘುಡಿಸುತಲೈತಂದು ತಾರಾದ್ರಿಯ । ಕಡುಬೇಗದಿಂ ಮುಸುಕಿತ್ತು ॥ ೭೦ ॥

ಘುಡುಘುಡಿಸುತ ಪೀಯೂಷಗುಹೆಯ ಮುಂದೆ । ಒಡನೆ ಬೀಳಲು ಹರಿ ಕೇಳಿ ॥
ಪೊಡವಿಯ ಬಡಿದಾರ್ಭಟಿಸಿತು ಬೇರೊಂದು । ಕಡುದೊಡ್ಡ ಕೇಸರಿ ಎಂದು ॥ ೭೧ ॥

ಅರಮಗನಷ್ಟವಿಧಾರ್ಚನೆಯನು ಮಾಡಿ । ಎರಕದಿಂದಾರತಿ ಎತ್ತಿ ॥
ಮೆರೆವ ಹಳದಿ ತಾ ಸತಿ ನಿವಾಳಿಯನೀಡೆ । ಗುರು ಜನ ಜಯ ಜಯವೆನಲು ॥ ೭೨ ॥

ಪಳುಕಿನ ಹಳುವೋ ಕ್ಷೀರಾಬ್ಧಿಯ ನೊರೆವಿಂಡೋ । ಬೆಳುಮುಗಿಲೊಡ್ಡೊ ಎಂದೆನಲು ॥
ಇಳೆಯಾಣ್ಮ ಜಿನಗೆ ದಧ್ಯಭಿಷೇಕವನು ಮಾಡಿ । ನಲವಿನಿಂ ಮಾಡಿ ಪೂಜೆಯನು ॥ ೭೩ ॥

ಭಾವಶುದ್ಧಿಯೊಳು ಬೆಳ್ಳಿಯ ತಟ್ಟೆಯಲಿ ಜಿನ- । ದೇವಗೆ ಆರತಿಯೆತ್ತಿ ॥
ಶ್ರಾವಕ ಜನರು ಖೇಚರರು ವ್ಯಂತರರೆಲ್ಲ । ತಾವಾಗ ಜಯ ಜಯವೆನಲು ॥ ೭೪ ॥

ಪರಿಮಳ ಮಿಶ್ರಿತವಾದ ಶುದ್ಧಾಂಬುವ । ಕುರುಕುಲಾಂಬರ ದಿನಮಣಿಯು ॥
ಪರಮನ ಮಸ್ತಕದೊಳಗೆರೆಯಲು ವಾದ್ಯ । ಮೊರೆದವು ಭೋಂ ಭೋರೆಂದು ॥ ೭೫ ॥

ರವಿಯನಾಚ್ಛಾದಿಸಿಕೊಂಡು ರಾಜಿಸುತಿರ್ದ । ಧವಲವರ್ಣದ ಮೇಘವನು ॥
ಪವನ ತಾ ಕಳೆವಂತೆ ಜಿನನಂಗ ದಧಿಯನು । ಭುವನ ತಾ ಕಳೆದು ನೂಂಕಿದುದು ॥ ೭೬ ॥

ಲಾಜಿನಿಂದಭಿಷೇಕವ ಜಿನರಾಜನಿ- । ಗಾ ಜಿನೇಂದುವ ಸೂನು ಮಾಡೆ ॥
ರಾಜಿಸಿದವು ನೋಳ್ಪರಕ್ಷಿಗೆ ಮುತ್ತಿನ । ಸೋಜಿಗಮಣಿಗಳೆಂಬಂತೆ ॥ ೭೭ ॥

ಬಲರಿಪುಕಾರ್ಮುಕ ಜಿನನಂಗವ ಸೋಂಕಿ । ಫಲವ ಪಡೆವೆನೆಂದು ಬಂದು ॥
ನಲವಿನಿಂ ಮುಸುಕಿತೋ ಎನೆ ಪಂಚಚೂರ್ಣವ- । ನೊಲವಿಂದ ಜಿನಗೆ ಮಾಡಿದನು ॥

ದಿಕ್ಕು ನಾಲ್ಕರೊಳಿರ್ದ ಸ್ವರ್ಣದ ಘಟವೆತ್ತಿ । ಗಕ್ಕನೆ ಜಿನಪನ ಶಿರದಿ ॥
ಚೊಕ್ಕ ಜಲವನು ಸೂಸಿದನು ನಿಜ ಭಕ್ತಿಯ । ದಿಕ್ಕು ದಿಕ್ಕಿಗೆ ತುಳುಕುತಲಿ ॥ ೭೯ ॥

ಮಘಮಘಿಸುವ ಕರ್ಪೂರಮಿಶ್ರಿತವಾದ । ಅಗರು ಚಂದನ ಕುಂಕುಮದ ॥
ಸೊಗಯಿಪ ಗಂಧಾಭಿಷೇಕವ ಜಿನನಿಗೆ । ಸುಗುಣರರರಸ ತಾ ಮಾಡಿ ॥ ೮೦ ॥

ಪರಿಮಳವನು ಪತ್ತು ದೆಸೆಗೆ ಕೊಡುತಲಿ- । ರ್ದರಳುಗೂಡೆಗಳನೆತ್ತೆತ್ತಿ ॥
ಅರುಹನ ಮಸ್ತಕದೊಳಗಭಿಷೇಕವ । ಕರೆದನು ಮಾಲ್ಯಾಂಗದಂತೆ ॥ ೮೧ ॥

ನಡುತಾವ ಮಡಗಿರ್ದ ಪೂರ್ಣಕುಂಭವನೆತ್ತಿ । ಕಡುವಿಲ್ಲವೈರಿ ಶಿರದೊಳು ॥
ಕಡುಭಕ್ತಿಯಿಂ ಸುರಿಯಲು ಭೇರೀರವ । ಪೊಡವಿ ಮುಸುಕಿತೇನೆಂಬೆ ॥ ೮೨ ॥

ನೂರೆಂಟು ಜಿನಬಿಂಬಗಳಿಗೀ ರೀತಿಯ । ಸಾರಹೃದಯ ಸ್ನಪನವನು ॥
ಸೇರುವೆಯಿಂ ಮಾಡಿ ಮಗುಳೆಯಲ್ಲಿಗೆ ಬಂದು । ಚಾರುಮೌಕ್ತಿಕದ ತೆರೆಯನು ॥ ೮೩ ॥

ಹಾಕಿಸಿ ಪರಿಮಳಮಯ ದುಂಡುದಂಡೆಯ । ಜೋಕೆಯಿಂದಿತ್ತರದೊಳಗೆ ॥
ಲೋಕೇಶ ಜಿನನ ಕೊರಳೊಳಿಕ್ಕಿ ಮಾಲೆಯ । ಬೇಕಾದ ಪೈರಣಿದೊಡಿಸಿ ॥ ೮೪ ॥

ಕತ್ತಲೆಯನು ನೂಂಕುತಲಿರ್ದ ಮಾಣಿಕ್ಯ- । ದುತ್ತಮ ದೀವಿಗೆಗಳನು ॥
ಇತ್ತರದೊಳು ತುಪ್ಪದ ದೀವಿಗೆಗಳ । ಪೊತ್ತಿಸಿದರು ಇಂದ್ರರಾಗ ॥ ೮೫ ॥

ಕನಕವಾಲುಕವೆತ್ತಿ ದಿವ್ಯಾಮೋದದ । ಪನಿನೀರ ಸಂಪಾತವನು ॥
ಜಿನನಂಘ್ರಿಯುಗಳಕೆ ಕಡುಭಕ್ತಿಯೊಳಾ । ಜನಪ ಸೂಸಿದ ಜಾಣ್ಮೆಯಿಂದ ॥ ೮೬ ॥

ಪರಿಮಳಮಯವಾದ ದಿವ್ಯಸುಗಂಧವ । ಪರಮನ ಪಾದಕಮಲಕೆ ॥
ದೊರಕಲಿ ಗಂಧಕುಟಿಯು ನನಗೆಂದಾಗ । ಹರುಷದೊಳಗೆಯರ್ಚಿಸಿದನು ॥ ೮೭ ॥

ಅಕ್ಷತೆಯನು ಮೊಗೆ ಮೊಗೆದು ಜಿನಪಗೆ ಸು- । ಲಕ್ಷಣದಿಂದ ಜ್ಞಾನೇಂದು ॥
ಅಕ್ಷಯ ಸುಖ ನನಗಾಗಲೆಂದರ್ಚಿಸೆ । ಯಕ್ಷರು ಜಯ ಜಯವೆನಲು ॥ ೮೮ ॥

ಕನಕಾಂಗುಲಿಕದಿ ಸಮೆದ ಪುಷ್ಪಗಳಿಂದ । ವನರುಹ ಕಲುಹಾರದಿಂದ ॥
ಜಿನರಾಜನಂಘ್ರಿಗೆ ಅರ್ಚಿಸಿದನು ತನ್ನ । ಘನಕಿಲ್ಬಿಷ ಕೆಡಲೆಂದು ॥ ೮೯ ॥

ಪರಮಾನ್ನಭಕ್ಷ್ಯೋಪದಂಶಶಾಕಂಗಳ । ಹರುಷದೊಳಗೆ ಜ್ಞಾನೇಂದು ॥
ಅರುಹಗೆ ನೈವೇದ್ಯವನು ಸಮರ್ಪಿಸೆ । ಸುರರೆಲ್ಲ ಜಯ ಜಯವೆನಲು ॥ ೯೦ ॥

ತೆರೆ ಜಾರಿತಪ್ಪುರೊಳಗೆ ರಾಜಕುವರನು । ವರನೀರಾಜನವಿಡಿದು ॥
ಅರುಹನ ಮುಂದೆತ್ತಿದ ಜ್ಞಾನಜ್ಯೋತಿಯು । ಕರುಣಿಸೆನಗೆ ಎಂದೆನುತ ॥ ೯೧ ॥

ಖರಕರನುಷ್ಣಕರಕೆ ಬೆರ್ಚಿ ಭಗಣಗ- । ಳರುಹನ ಶಾಂತರಸದೊಳು ॥
ನೆರೆಮುಳುಗಾಡಬೇಕೆಂದು ಬಂದವೋ ಎನೆ । ಹರಿವಾಣದೊಳು ದೀಪವಿಹವು ॥ ೯೨ ॥

ದೀವಿಗೆ ಜಿನನ ಕಾಯದೊಳು ಮಾರ್ಪೊಳೆವ ಸು- । ಭಾವವೊಪ್ಪಿತು ಎಂತೆನಲು ॥
ಪಾವನ ಜ್ಞಾನದೃಷ್ಟಿಗಳನಂಗದೊಳಾಂತ । ದೇವ ಸುಪರಶಿವನಂತೆ ॥ ೯೩ ॥

ಅಗರು ಗುಗ್ಗುಳ ಮೊದಲಾದ ದಶಾಂಗದ । ಸೊಗಯಿಪ ಧೂಪವ ಜಿನಗೆ ॥
ಜಗದೇಕವೀರ ತಾನಿರದೆತ್ತೆ ಧೂಪದ । ಹೊಗೆತುಂಬಿತಾಕಾಶವನು ॥ ೯೪ ॥

ಮಾಕಂದ ದಾಡಿಮ ಪನಸು ಖರ್ಜೂರವ- । ನೇಕ ಸುಹೃದ್ಯ ಫಲಗಳ ॥
ಲೋಕೈಕನಾಥಗರ್ಚನೆಯ ಮಾಡಿದನಾ । ಭೂಕಾಂತನಧಿಕ ಭಕ್ತಿಯೊಳು ॥ ೯೫ ॥

ನವರತ್ನಮಯವಾದ ಬಟ್ಟಲೊಳರ್ಘ್ಯವ । ದಿವಿಜೇಂದ್ರವಂದಿತ ಜಿನಗೆ ॥
ಭುವನೇಶ್ವರನಾನಂದದಿಂದೆತ್ತಿದ । ಪವಣಿಲ್ಲದ ಭಕ್ತಿಗೂಡಿ ॥ ೯೬ ॥

ಶೃಂಗಾರವೊಳಗೆ ತೀವಿದ ದಿವ್ಯ ವಾರಿಯು- । ನಂಗಜ ವೈರಿಯ ಮುಂದೆ ॥
ಪಿಂಗದೆ ಶಾಂತಿಧಾರೆಯ ಮಾಡಿದ ಲೋ- । ಕಂಗಳಘವು ಕೆಡಲೆಂದು ॥ ೯೭ ॥

ಮೊಲ್ಲೆ ಮಲ್ಲಿಗೆ ಜಾಜಿ ಸುರಗಿ ಸೇವಂತಿಯು । ಫುಲ್ಲದಿಂ ನವರತ್ನದಿಂದ ॥
ನಿಲ್ಲದೆ ಕುಸುಮಾಂಜಲಿಯನು ಮಾಡಿದ ಜಿನ- । ಮಲ್ಲನ ಮುಂದೆ ಕೈಯೆತ್ತಿ ॥ ೯೮ ॥

ಕರಕಮಲಂಗಳ ಮುಗಿದು ನೊಸಲೊಳಿಟ್ಟು । ಸ್ಫುರಿತಮಾಗಿರ್ದ ನುಡಿಯೊಳು ॥
ಹರುಷದೊಳಗೆ ಜಿನೇಂದ್ರಚಂದ್ರಮನನ್ನು । ದೊರೆರನ್ನ ನುತಿಸಿದನಿಂತು ॥ ೯೯ ॥

**॥ವಂದನಾಷ್ಟಕ॥** ಜಯ ಜಯ ಘಾತಿಕರ್ಮಾರಣ್ಯದಾವಾಗ್ನಿ । ಜಯ ಜಯ ಕೇವಲಬೋಧ ॥
ಜಯ ಜಯ ಸುರನರಮುಕುಟತಾಟಿತಪಾದ ! । ಜಯ ಜಯ ಪಾಪವಿಲೋಪ ! ॥ ೧೦೦ ॥

ಜಯ ಜಯ ಸಮವಸರಣಲಕ್ಷ್ಮಿಗಧಿನಾಥ ! । ಜಯ ಜಯ ಭವ್ಯಾಬ್ಧಿಚಂದ್ರ ! ॥
ಜಯ ಜಯ ಮದವಾರಣಕಂಠೀರವ ! । ಜಯ ಜಯ ಕಾರುಣ್ಯಸಿಂಧು ! ॥ ೧೦೧ ॥

ಜಯ ಜಯ ಅಷ್ಟಾದಶದೋಷನಾಶಕ ! । ಜಯ ಪಂಚಕಲ್ಯಾಣನಾಥ ! ॥
ಜಯ ಜಯ ಜಾತಿಜರಾಮೃತ್ಯುವರ್ಜಿತ ! । ಜಯ ಜಯ ಫಣಿಪತಿ ಸ್ತೋತ್ರ ! ॥ ೧೦೨ ॥

ಜಯ ಜಯ ನವಕೇವಲಲಬ್ಧಿ ಪಾಲಕ ! । ಜಯ ಜಯ ಮೂಲೋಕವಂದ್ಯ ! ॥
ಜಯ ಜಯ ಪರಮಾನಂದ ಸಚ್ಚಾರಿತ್ರ ! । ಜಯ ಜಯ ಮುನಿಗಣ ಸ್ತೋತ್ರ ! ॥ ೧೦೩ ॥

ಜಯ ಜಯಾನಂತಚತುಷ್ಟಯ ಸ್ವರೂಪ ! । ಜಯ ಜಯ ಗುಣಗಣಾಧಾರ ! ॥
ಜಯ ಪಂಚಸಂಸಾರಾರ್ಣವ ಶೋಷಣ ! । ಜಯ ಜಯನಾಥ ಸ್ವಬಂಧು ! ॥ ೧೦೪ ॥

ಜಯ ಜಯ ಮುಕ್ತಿಕಾಮಿನಿಯ ಕಂಠದ ಹಾರ ! । ಜಯ ಜಯ ದಿವ್ಯ ಶರೀರ ! ॥
ಜಯ ಜಯ ಸದ್ಧರ್ಮಚಕ್ರಾಧಿನಾಯಕ ! । ಜಯ ಜಯ ಗಣಧರ ವರದ ! ॥ ೧೦೫ ॥

ಜಯ ಜಯ ಪ್ರಾತಿಹಾರ್ಯಾಷ್ಟಕ ಶೋಭಿತ ! । ಜಯ ಜಯ ನಿರಘ ನಿರ್ಮಾಯ ! ॥
ಜಯ ಜಯ ಜಗದಾರಾಧ್ಯ ಜಗಜ್ಜ್ಯೋತಿ ! । ಜಯ ಕೋಟಿರವಿಸೋಮಕಿರಣ ! ॥ ೧೦೬ ॥

ಜಯ ಜಯ ಚತುಸ್ತ್ರಿಂಶದತಿಶಯ ನಾಯಕ ! । ಜಯ ಜಯ ಪರಮ ನಿರ್ಗ್ರಂಥ ! ॥
ಜಯ ಜಯ ಸರ್ವಜ್ಞ ! ಮಾಂ ಪಾಹಿ ಚಿನ್ಮಯ ! । ಜಯ ಜಯ ಜಿನರಾಜನೆಂದು ॥ ೧೦೭ ॥

ಮನವಚನಂಗಶುದ್ಧಿಯೊಳು ತಾ ನುತಿಗೆಯ್ದ- । ನನಘಗೆ ಸಾಷ್ಟಾಂಗವೆರಗಿ ॥
ಕನಕದ ಬಟ್ಟಲೊಳಗೆ ಸಿದ್ಧಶೇಷೆಯ । ಮನುಜೇಂದ್ರ ತಾನಾಂತುಕೊಂಡು ॥ ೧೦೮ ॥

ಯತಿನಿಕರಕೆ ಬಂದು ಸಿದ್ಧಶೇಷೆಯನಾ- । ಗತಿಭಕ್ತಿಯಿಂ ಮುಂದೆ ಪಿಡಿಯೆ ॥
ನುತಿಸುತ ಜಿನರ ಗಂಧೋದಕ ಬಟ್ಟಲ । ವ್ರತಿಗಳು ಮುಟ್ಟಿ ಕೈಮುಗಿಯೆ ॥ ೧೦೯ ॥

ಊಳಿಗದವರ ಕೈಯೊಳು ಬಟ್ಟಲುಗೊಟ್ಟು । ಭಾಳದೊಳಗೆ ಕೈಯನಿಟ್ಟು ॥
ಲೀಲೆಯಿಂ ಮುನಿಗಳ್ಗೆ ವಂದನೆಯನು ಮಾಡೆ । ಪಾಲಿಸು ಸಕಲೋರ್ವಿಯನು ॥ ೧೧೦ ॥

ಪರಮಧರ್ಮವ ಪ್ರತಿಪಾಲಿಸು ಕಡೆಯೊಳು । ಪರಮಾತ್ಮಸಿದ್ಧಿರಸ್ತೆಂದು ॥
ಕರುಣ ಹೃದಯದಿ ಶಿರದೊಳು ಕುಂಚವನಿಟ್ಟು । ಪರಸಿದರ್ಪರಮ ಮುನಿಗಳು ॥ ೧೧೧ ॥

ಬಳಲಿಸಿದೆನು ದೇವರ ಶ್ರೀಪಾದವ । ಮಳವಿರಹಿತ ಕಿಂಚಿತ್ತು ॥
ತಳಗೆಯ್ದಿ ಪವಡಿಸಿಯೆಂದು ಬಿನ್ನವಿಸಲು । ಇಳೆಯಾಣ್ಮ ನೀ ಮಾಡಿದೊಂದು ॥ ೧೧೨ ॥

ಜಿನಪೂಜೆಯ ನೋಡಿ ನಮ್ಮಯ ಪಾಪ । ಇನಿಸುಳಿಯದೆ ಪೋದವಾವು ॥
ಮನುಜಲೋಕದೊಳಿನ್ನೆವರಮುಟ್ಟವಿಂತಪ್ಪ । ಜಿನಪೂಜೆಯ ಕಂಡುದಿಲ್ಲ ॥ ೧೧೩ ॥

ಸುರಪತಿ ನಿನಗೆ ಪಾಸಟಿಯೆ ಪೂಜಿಸುವಲ್ಲಿ । ಉರಗಪತಿಯು ಪೊಗಳ್ವಲ್ಲಿ ॥
ಸರಿಸಾಟಿ ಬರ್ಪನೆ ಎಂದು ಮುನೀಶ್ವರ- । ನೆರವಿ ನುತಿಸಿ ಪರಸಿದರು ॥ ೧೧೪ ॥

ಹೆಡ್ಡನಾದರು ಗುಡ್ಡನ ನಡೆನುಡಿಗಳು । ಛಡ್ಡೆಗೊಳ್ಳದೆ ಪ್ರೀತಿಯಿಂದ ॥
ದೊಡ್ಡವನನು ಮಾಡುವಿರ್ಕೆಸೆ ಎಂದಾ । ಗಡ್ಡೆಗೆಡೆದು ಬೀಳ್ಕೊಂಡು ॥ ೧೧೫ ॥

ಹರಿಬಲ ಮುಂತಾದ ದೊರೆ ದೊರೆಗಳಿಗಾ- । ಗೆರಕದಿಂ ಶೇಷೆಯ ಕೊಟ್ಟು ॥
ಅರುಹನ ಬೀಳ್ಕೊಂಡು ಸಿಂಗರವನು ತೊಟ್ಟು । ನೆರಗಲಿ ಖಚರರೊಗ್ಗಿನಲಿ ॥ ೧೧೬ ॥

ರನ್ನದಿ ಸಮೆದಿರ್ದ ಚಿತ್ರಮಂಟಪಕೆ ಗು- । ಣೋನ್ನತ ನಡೆತಂದನಾಗ ॥
ಉನ್ನತಾಸನದೊಳು ಓಲಗಗೊಟ್ಟನು । ಗನ್ನಕಾರನು ಗಾಡಿಯೊಳು ॥ ೧೧೭ ॥

ಹರಿಬಲ ಸಕಲ ಖೇಚರರು ತಾವೈತಂದು । ದೊರೆಕುವರನ ಸುತ್ತು ಕುಳಿರೆ ॥
ಸ್ಮರಸಖನನು ಬಳಸಿರ್ದ ತಾರಾಳಿಯ । ದೊರೆ ಎನಲಿರ್ದರಾ ನೃಪರು ॥ ೧೧೮ ॥

ನೀಡುವೆಲೆಯ ಗಳಿಗೆಗೆ ಕೈಯ ನೀಡುತ । ಪಾಡುವ ಗಾನಕೆ ಕಿವಿಯ ॥
ಪ್ರೌಢಿಯಿಂ ನೋಡುತ ಜ್ಞಾನೇಂದು ಕುವರನು । ಗಾಡಿಕಾರನುಮೊಪ್ಪಿದನು ॥ ೧೧೯ ॥
ಪರಬಲಹರಿಣಶಾರ್ದೂಲವಂದಿತ ನೃಪ- । ಗುರುತರ ಕಲ್ಪಭೂರುಹನು ॥
ಅರುಹನ್ಮತಾರ್ಣವ ಪ್ರಾಚೀನ ತಿಲಕನು । ದೊರೆ ಜ್ಞಾನೇಂದು ಒಪ್ಪಿದನು ॥ ೧೨೦ ॥

**॥ ಅಂತು ಸಂಧಿ ೬ಕ್ಕಂ ಪದ ೯೪೯ಕ್ಕಂ ಮಂಗಲಂ ॥**

## ಅರಗಿಳಿಯ ನುಡಿ.

ಅರಸುಮಗನ ಮುಂಗೈಯೊಳು ಕುಳಿತೊಂ- । ದರಗಿಳಿ ನುಡಿದುದ ಪೇಳ್ವೆ ॥ ಪ ॥
ಬಲರಿಪುಮಕುಟತಾಟಿತ ದಿವ್ಯ ಚರಣಾಬ್ಜ । ಖಳಕರ್ಮಶೈಲದಂಭೋಳಿ ॥
ಅಲರ್ವಿಲ್ಲ ಮದನ ಮರ್ದನ **ಶಾಂತಿಜಿನ**ರಾಜ ! । ಸಲಹೆಮ್ಮ ಮುಕ್ತಿಯನಿತ್ತು ॥ ೧ ॥
ಆ ವೇಳೆಯೊಳಗೊಂದು ರಾಜಕೀರನು ಬಂದು । ಭೂವರ ಪಾಣಿಪೃಷ್ಠದೊಳು ॥
ತೀವಿದ ಹರುಷದೊಳಗೆ ತಾ ಕುಳಿತುದ- । ದೇನೆ ಬಣ್ಣಿಪೆನದರಿರವ ॥ ೨ ॥
ಪವಳದ ಕುಡಿಯಿಂದ ಚತುರ್ಮುಖ ತಾನಂದು । ನವಮೋಹನದ ತುಂಡವನು ॥
ಸವೆದನೋ ಎಂಬಂತಮೃತವಾಚಾಂಕನ । ಕವಿನುತ ಚಂಚು ರಾಜಿಸಿತು ॥ ೩ ॥
ಮಾಣಿಕವರಳೊಳು ವಜ್ರದ ಕುಳಪನು । ಜಾಣಿಂದಲಜ ಸ್ವರ್ಣಕಾರ ॥
ಮಾಣದೆಯುರುಟಾಗಿ ತೆತ್ತಿಸಿ ಬೆಚ್ಚಂತೆ । ಕಾಣಿಸಿತದರ ದೃಷ್ಟಿಗಳು ॥ ೪ ॥
ಕುಂಕುಮವರ್ಣವು ತನಗೆಣೆಯಲ್ಲೆಂದು । ನೂಂಕುತಲತಿ ಸೊಬಗಿಂದ ॥
ಲಿಂಕಿತಪೀತಕೇಸರ ಕೀರಗಳದೊಳ- । ಗಂಕಿತವಾಗಿ ರಾಜಿಪುದು ॥ ೫ ॥
ಮರಕತದಿಂದ ಪಕ್ಷವನಜ ಮನದಂದು । ಎರಕದಿಂ ಮಾಳ್ದನೆಂಬಂತೆ ॥
ವರಕೀರನ ಪಕ್ಷದ್ವಂದ್ವ ತಾ ಹಸುರಾಗಿ । ಕರ ಚೆಲುವಿಂದ ರಾಜಿಪುದು ॥ ೬ ॥
ಮುತ್ತಿಂದ ಶುಕದೂರನು ಬ್ರಹ್ಮ ನಿರ್ಮಿಸಿ । ಮತ್ತೆ ಚರಣದುಗುರುಗಳ ॥
ಉತ್ತಮದಿಂದ್ರನೀಲದೊಳು ಸಮೆದನೆನ- । ಲ್ಪತ್ತಿಯಿಂ ಪದನಖವಿಹವು ॥ ೭ ॥
ಒಮ್ಮೆ ಚರಣದಿಂದ ತುಂಡವನೊರಸುತ- । ಲೊಮ್ಮೊಮ್ಮೆ ಕೊಕ್ಕಿನಿಂ ಗರಿಯ ॥
ಸಮ್ಮಾನದಿಂದ ಕೆದರಿಕೊಳ್ಳುತ ಕೀರ । ಹಮ್ಮಿನೊಳಗೆ ಕುಳಿತಿರಲು ॥ ೮ ॥
ಜಿನಚಂದ್ರಾರ್ಭಕ ತನ್ನ ಮುಂಗೈಯೊಳ- । ಗನುವಾಗಿ ಕುಳಿತುಕೊಂಡಿರ್ದ ॥
ಮಿನುಗುವ ಮೈಯ ಬಣ್ಣದ ರಾಜಕೀರನ । ಮನದಕ್ಕರಿಂ ತಾನು ಕಂಡು ॥ ೯ ॥

ಎಲೆ ಮುದ್ದುನುಡಿಯುಳ್ಳಮೃತವಾಚಾಂಕನೆ ! । ವಿಲಸಿತಾಗಮನವೆಲ್ಲಿಂದ ॥
ನಲವಿನಿಂದಾವಾವ ದೇಶಕೆ ಪೋಗಿರ್ದೆ । ಸಲೆ ಕೌತುಕಗಳನೇನ ॥ ೧೦ ॥

ಕಂಡು ನೀ ಬಂದಿರ್ದೆ ನನ್ನೊಳಗವನೆಲ್ಲ । ಕೊಂಡುಕೊನರು ಸವಿನುಡಿಯಿಂ ॥
ಖಂಡಶರ್ಕರೆವಿಲ್ಲನ ಬಳಗವೆಯೆಂದು । ಮಂಡಳೇಶ್ವರ ಕೇಳಿದೊಡೆ ॥ ೧೧ ॥

ಎಲೆ ಭಾವಾಜಿ ! ಪೇಳುವೆನೇಕ ಚಿತ್ತದಿಂ- । ದೊಲಿದು ಲಾಲಿಪುದು ಚೆನ್ನಾಗಿ ॥
ಚೆಲುವಾದ ಭರತಾರ್ಯಖಂಡದ ಮಧ್ಯದೊಳ್ । ಥಳಥಳಿಸುವ ವಿಜಯಾರ್ಧ ॥ ೧೨ ॥

ಗಿರಿ ರಾಜಿಪುವದರೆರಡನೆ ತಟದೊಳು । ಕರಶೋಭಿಪ ಮೇಘಪುರವು ॥
ಇರುತಿಹುದಾ ಪುರ ಸುರಪನ ಪುರವನು । ಜರೆವುತವಿಹುದದನಾಳ್ವ ॥ ೧೩ ॥

ಸುರಪತಿ ವಿಭವನು ಮನ್ಮಥ ಸಮರೂಪ । ಹರಿವಿಕ್ರಮ ತೇಜಸ್ವಿ ॥
ವರಖೇಚರೇಶ್ವರ ಶಕ್ರಧನುಸ್ಸೆಂ- । ಬರಸು ಸುಖದೊಳೊಪ್ಪಿಹನು ॥ ೧೪ ॥

ಆತನ ಪಟ್ಟದರಸಿ ನಾಗಲತೆಯೆಂಬ । ಶಾತೋದರಿ ಪೀನಕುಚೆಯು ॥
ಭೂತಳವಿಖ್ಯಾತೆ ಪತಿಭಕ್ತೆ ಗುಣಗಣ- । ವ್ರಾತೆಯೊಪ್ಪಿದಳು ಸಂತಸದಿಂ ॥ ೧೫ ॥

ಸಿರಿಯಿಂದ ಸಿರಿಯನು ಸೊಬಗಿಂದಲುಮೆಯನು । ವರರೂಪಿನಿಂದ ರತಿಯನು ॥
ಸರಸ ನುಡಿಗಳಿಂದ ಸರಸ್ವತಿಯನು ತಾನು । ಜರೆವಳಾ ತರುಣೀಮಣಿಯು ॥ ೧೬ ॥

ಅವರೀರ್ವರ ಬಸಿರೊಳಗೆಂಟು ಮಂದಿಯು । ಕುವರಿಯರುದ್ಭವಿಸಿದರು ॥
ಸವಿವಿಲ್ಲನ ಪಟ್ಟದರಸಿಯ ರೂಪಿಂದ । ಅವರು ಹಳಿವರೆಲೆ ಭಾವ ! ॥ ೧೭ ॥

ಕೋಮಲೆಯರುಗಳ ನಾಮೋಚ್ಚರಣೆಯ । ನಾ ಮಾಡುವೆನೆಲೆ ಕುವರ ! ॥
ಪ್ರೇಮದಿಂದಲೆ ಲಾಲಿಪುದೆಂದರಗಿಳಿ । ಸಾಮದಿಂದಿಂತು ನುಡಿದುದು ॥ ೧೮ ॥

ಕುಂದಕುಡ್ಮಲರದನದ ನಳಿತೋಳ್ಗಳ । ಚಂದಿರಮುಖಚಾರುನಿಟಿಲ ॥
ಬಂದುಗೆದುಟಿ ಕುಂಭಕುಚದ ಕುಡಿತೆಗಣ್ಣ । 'ನಂದಸುಮತಿ'ಯೊಪ್ಪಿದಳು ॥ ೧೯ ॥

ತಾವರೆ ಮೊಗದ ತಾಮರೆಯೆಸಳ್ಗಣ್ಣಿನ । ತಾಮರೆ ಮೊಗ್ಗೆ ಮೊಲೆಗಳ ॥
ತಾವರೆ ಗಂಧದ ತಾವರೆ ಕರಗಳ । 'ಹೇಮಸುಮತಿ'ಯೊಪ್ಪಿದಳು ॥ ೨೦ ॥

ಕಂಬುಕಂಧರರದ ಬಿಂಬೋಷ್ಟದ ಸುಲಿಪಲ್ಲ । ಪೊಂಬಾಳೆದೊಡೆ ಕರಿಕರದ ॥
ಚೆಂಬೊನ್ನ ಕಳಶಕುಚದ 'ಚಿತ್ರಲತೆ'ಯೆಂಬ । ಅಂಬುಜಾಕ್ಷಿಯುಮೊಪ್ಪಿದಳು ॥ ೨೧ ॥

ಹರಿಮಧ್ಯದ ಚಕ್ರವಾಕ ಕುಚಂಗಳ । ದ್ವಿರದಶಿರದ ನಿತಂಬಗಳ ॥
ಸರಸೀರುಹದ ಮುಖದ 'ಪದ್ಮಲತೆ'ಯೆಂಬ । ನೆರೆ ಜಾಣೆ ಭಾವ ! ರಾಜಿಪಳು ॥ ೨೨ ॥

ತಿಲನಾಸಿಕದ ಕರ್ವಿಲ್ಲನ ಪುರ್ವಿನ । ಜಲಜಮುಖದ ಬಗುರ್ಮೊಲೆಯ ॥
ಸುಲಿಪಲ್ಲ 'ಚಂದ್ರಸುಮತಿ'ಯೆಂದೆಂಬೋರ್ವೆ । ಲಲನೆಯೊಪ್ಪಿದಳೆಲೆ ಭಾವ ! ॥ ೨೩ ॥

ಕರಡಿಗೆ ಮೊಲೆ ಬಳುಕುವ ಸಣ್ಣ ನಡುವಿನ । ಹೆರೆ ನೊಸಲಿನ ಚೆಂದುಟಿಯ ॥
ಅರವಿಂದವೊಗದ 'ಶ್ರೀಚಂದ್ರೆ'ಯೆಂದೆಂಬೋರ್ವ। ತರುಣಿಯೊಪ್ಪಿದಳು ಭಾವಾಜಿ! ॥ ೨೪ ॥

ಆಲವಣ್ದುಟಿಯ ದಾಡಿಮಸಮದಂತದ । ಕಾಳೋರಗಸಮ ವೇಣಿ ॥
ನೀಲಾಂಬಕಿ ತುಂಬಿಗುರುಳ 'ಕನಕಲತೆ' । ಬಾಲಕಿಯೊಪ್ಪಿದಳರಸ ! ॥ ೨೫ ॥

ಸುಳಿನಾಭಿ ಬಡಬಾಸೆ ಕಳಹಂಸಗಮನದ । ಬೆಳತಿಗೆಗಣ್ಣಬ್ಜಮುಖದ ॥
ನಳಿತೋಳ 'ಮದನಮಂಜೂಷೆ'ಯೆಂದೆಂಬಳು । ಚೆಲುವೆಯೊಪ್ಪಿದಳೆಲೆಯಾಣ್ಮ ! ॥ ೨೬ ॥

ಇಂತೆಸೆವೆಣ್ಬರು ಕನ್ನಿಕೆಯರುಗಳು । ಸಂತಸದಿಂ ದಿಗ್ವಧುಗಳ ॥
ಭ್ರಾಂತಿಗೊಳಿಸುವರು ತಮ್ಮಯ ರೂಪಿಂದ । ಕಂತುವಿನಲಗಿನಂದದೊಳು ॥ ೨೭ ॥

ಒಂದಾನೊಂದು ಪಗಲು ಕನ್ನಿಕೆಯರು । ನಂದೀಶ್ವರದಷ್ಟಮಿಯೊಳು ॥
ಚಂದದಿಂದುಪವಾಸವ ಮಾಡಿ ಪಾರಣೆ- । ಯಂದಿನ ದಿನದಲ್ಲಿ ಜಿನರ ॥ ೨೮ ॥

ಮಂದಿರವನು ಪೊಕ್ಕು ಪಲವು ಸುಸ್ತೋತ್ರಂಗ- । ಳಿಂದ ನುತಿಸಿ ಪೊಡವಟ್ಟು ॥
ಕಂದರ್ಪವಿಜಯಗೆ ಅಭಿಷೇಕವನಾ- । ನಂದದಿಂ ಮಾಡಿಸಿ ಬಳಿಕ ॥ ೨೯ ॥

ಅಷ್ಟವಿಧಾರ್ಚನೆಯನು ಜಿನಪತಿಗೆ ಸಂ- । ತುಷ್ಟಚಿತ್ತೆಯರು ತಾವೆಸಗಿ ॥
ಬಟ್ಟಲೊಳಗೆ ಸಿದ್ಧಶೇಷೆಯನಿರದಾಂತು । ಹೆಟ್ಟುಗೆಯರು ಮುನಿಜನಕೆ ॥ ೩೦ ॥

ಎರಗಿ ಧರ್ಮಾಧರ್ಮದಿರವನು ತಮ್ಮಯ । ಕರಗಳ ಮುಗಿದು ಕಾಂತೆಯರು ॥
ಎರಕದಿಂ ಕೇಳಿ ದಿನವ್ರತಗಳನಾಗ । ಧರಿಸಿ ಮುನಿಗಳ ಬೀಳ್ಕೊಂಡು ॥ ೩೧ ॥

ಅರಮನೆಯತ್ತ ನಡೆದು ಬಂದು ತಮ್ಮಯ । ಹರಿಧನುವಿನ ಬಳಿಗೈದಿ ॥
ಅರುಹನ ಸಿದ್ಧಶೇಷೆಯ ತಾವು ಪಿಡಿಯಲು । ಹರುಷದೊಳಗೆ ಎದ್ದು ನಿಂದು ॥ ೩೨ ॥

ಕರಗಳ ಮುಗಿದು ಗಂಧೋದಕವನು ತನ್ನ । ಶಿರದೊಳು ಸೇಚಿಸಿಕೊಂಡು ॥
ಎರಗಿದ ಸುತೆಯರ ಬಿಗಿಬಿಗಿದಮರ್ದಪ್ಪಿ । ಶಿರವ ತಡವಿ ಗಲ್ಲವಲುಗಿ ॥ ೩೩ ॥

ಎರಕದಿಂ ಮುದ್ದಾಡಿ ಎಲೆ ನಂದನೆಯರಿರೆ ! । ಕೊರಗಿತು ರಾಜೀವವದನ ॥
ನೆರೆ ಬಳಲಿದಿರಿ ಪಾರಣೆಯ ಹೊತ್ತಾಯಿತು । ತೆರಳಿರೌ ಎಂದಾ ಖೇಚರನು ॥ ೩೪ ॥

ಜನಕನ ಬೀಳ್ಕೊಂಡು ತೆರಳಿಪೋಗಲು ಇತ್ತ । ಮನುಜೇಂದ್ರನಿಂದ್ರಕಾರ್ಮುಕನು ॥
ಮನದೊಳು ಚಿಂತಿಸಿ ನುಡಿದನು ಎನ್ನಯ । ತನುಜೆಯರಿಗೆ ಪ್ರಾಯವಾಯ್ತು ॥ ೩೫ ॥

ಇವರ ರೂಪಿಗೆ ತಕ್ಕ ಕುಲಜನು ಶೀಲನು । ನವಕಲಾ ಕುಶಲ ಕೋವಿದನು ॥
ಸವಿವಿಲ್ಲನ ಸಮರೂಪನು ಜಾಣನು । ಕುವರನೆಲ್ಲಿರ್ದಪನೆಂದು ॥ ೩೬ ॥

ಅತಿಚದುರಿಂದ ಪುರಂದರಕಾರ್ಮುಕ । ಮತಿವಂತ ಶಕುನಿಗನೋರ್ವ ॥
ಶತಮನ್ಯುವೆಂಬನ ಕರಸಿಯವನೊಳಿಂ- । ತತಿಶಯದಿಂ ಬೆಸಗೊಂಡ ॥ ೩೭ ॥

ಶತಮನ್ಯು ಕೇಳ್ನನ್ನುದರದೊಳೆಣ್ಬರು । ಅತಿಶಯ ರೂಪವತಿಯರು ॥
ಅತಿಚದುರೆಯರು ಪುಟ್ಟಿದರಾ ಸುತೆಯರ್ಗೆ । ನುತವರನಾವನಾದಪನೋ ॥ ೩೮ ॥

ನನ್ನೊಳು ನೀನರಿಪೆಂದ್ರಿಂದ್ರಕಾರ್ಮುಕ । ಚೆನ್ನಾಗಿಯವನ ಕೇಳಿದೊಡೆ ॥
ಸನ್ನುತ ಜ್ಞಾನಿಯಷ್ಟಾಂಗ ನಿಮಿತ್ತವ । ಮುನ್ನ ತಾ ಬಲ್ಲವನಾಗಿ ॥ ೩೯ ॥

ಹರಿಧನು ! ನೀ ಕೇಳು ಸಂಗೀತಪುರವಾ- । ಳ್ವರಸು ಸುಪವಿದಂತ ಸೂನು ॥
ನೆರೆಗಲಿ ವಜ್ರಕಂಠನ ರಣರಂಗದಿ । ನೆರಪಿದ ಸತ್ವಸಂಯುತನು ॥ ೪೦ ॥

ದೊರೆಗಳ ಮೌಲಿಚಾಳಿತಪಾದಯುಗಳನು । ಸ್ಮರಸನ್ನಿಭ ತೇಜಸ್ವಿ ॥
ಹರಿವಿಕ್ರಮಿಯಾತನೆ ನಿನ್ನ ಮಕ್ಕಳ್ಗೆ । ವರನಾಗುವ ನಿಶ್ಚಯದಿ ॥ ೪೧ ॥

ಈ ವಿಧಮಪ್ಪಷ್ಟಾಂಗ ನಿಮಿತ್ತವ- । ನಾವೆಲ್ಲಿ ಕಲಿತೆಯೆಂಬೆಯಾ ॥
ಕೋವಿದ ಕೇಳಾದಿತೀರ್ಥೇಶನಿಂ ಬಂದು । ಕೇವಲಿ ಶಾಂತಿಜಿನಪನು ॥ ೪೨ ॥

ಪಾವನವಾದ ಗಣಧರ ಮುನಿಗೆ ಪೇಳಿ । ಭಾವಜ್ಞನಾ ಗಣಾಗ್ರಣಿಯು ॥
ತೀವಿದ ಶಿಷ್ಯಪ್ರಶಿಷ್ಯರ್ಗೆ ಪೇಳು- । ತ್ತಾ ವಿಧದೊಳು ಬಂದುದನು ॥ ೪೩ ॥

ಮನಸಿಜಮರ್ದನ ದಮವರನೆಂಬೋರ್ವ । ಮುನಿನಾಥ ನನಗೆ ಪೇಳಿದನು ॥
ಕುನಯವಲ್ಲವು ವಚನವ ನೀ ನಂಬು । ಜಿನನ ನಿರೂಪವೆ ಎಂದು ॥ ೪೪ ॥

ಧರೆಯನಪ್ಪಳಿಸಿದ ಕರತಪ್ಪಿದುದೊಮ್ಮೆ । ಗಿರಿಯನೆಚ್ಚಂಬೊಮ್ಮೆ ತಪ್ಪಿ ॥
ಅರುಹನ ವಚನ ತಪ್ಪುವುದಲ್ಲ ತಾನೆಂದು । ಒರೆದನು ಶತಮನ್ಯು ಭಾವ ॥ ೪೫ ॥

ಅದ ಕೇಳಿ ನಮ್ಮಿಂದ್ರಕಾರ್ಮುಕ ಮನದಲ್ಲಿ । ಒದವಿದ ಸಂತಸವೈದಿ ॥
ಸದಮಲಮಪ್ಪ ದಿವ್ಯಾಭರಣಂಗಳ । ಚದುರಿಂದಲಿತ್ತು ಬೀಳ್ಕೊಟ್ಟ ॥ ೪೬ ॥

ಕರೆಸಿ ತನ್ನಯ ತನುಜೆಯರ್ಗನು ಹರಿಧನು । ಹರಿಸದೊಳಗೆ ನೈಮಿತ್ತಿಕನು ॥
ಒರೆದ ಕಾರ್ಯವನೆಲ್ಲವ ಪೇಳೆ ಕೇಳುತ । ಪರಮಸಂತಸ ತಾವೈದಿ ॥ ೪೭ ॥

ನನ್ನನಾ ವೇಳೆಯದೊಳು ಮುಂಗೈವಿಟ್ಟು । ಚೆನ್ನ ತಡವಿ ಮುತ್ತು ಕೊಟ್ಟು ॥
ಕನ್ನಿಕೆಯರು ಎಲೆ ಅಮೃತವಾಚಾಂಕ ! ಪ್ರ- । ಸನ್ನಮಾನಸ ! ನೀ ಕೇಳು ॥ ೪೮ ॥

ಪವಿಕಂಠನ ರಣರಂಗದೊಳಗೆ ಗೆದ್ದ । ಕುವರ ನಮ್ಮಯ ಧವನೆಂದು ॥
ಸವಿನಯದಿಂದೋರ್ವ ಶಕುನಿಗ ಪೇಳಿದ- । ನವನ ಬರವನೀ ಕಾದಿರ್ದು ॥ ೪೯ ॥

ಸರಸೋಕ್ತಿಗಳಿಂದವನ ಹೃದಯವನು । ನೆರೆ ಸೂರೆಯಾಡಿ ಕಾರ್ಯವನು ॥
ತೆರೆದರುಶನವಾಗಿ ನೀ ಪೇಳಿ ಬೇಗದಿಂ । ಕರೆದಾತನ ತಾರೆಂದು ॥ ೫೦ ॥

ತರುಣಿಯರೆನ್ನ ನಿನ್ನೆಡೆಗೆ ಕಳುಹಿದೊಡೆ । ತ್ವರಿತದಿಂ ಬಂದಿಲ್ಲಿರ್ದು ॥
ನರನಾಥ ! ನೀ ವಜ್ರಕಂಠನ ಕೊಂದೀ । ವರಸಿದ್ಧಕೂಟ ವಸತಿಯ ॥ ೫೧ ॥

ಹರುಷದೊಳಗೆ ಪೊಕ್ಕರುಹಗೆ ಸ್ನಪನವ । ಹರಿವೈಭವದಿಂ ಮಾಡಿದುದ ॥
ಅರಸ ! ನಾನೆಲ್ಲವ ಕಂಡೆ ನನ್ನಯ ಪಾಪ । ಹರಿದೊಡಿತು ನಿಂದಪುದೇ ॥ ೫೨ ॥

ಇಂತಪ್ಪ ಪೂಜೆಯ ಮಾಡಿದ ಕಾರಣ । ಸ್ವಾಂತವ ನಮ್ಮಕ್ಕಾಜಿಯರ ॥
ಭ್ರಾಂತಿಗೊಳಿಸಿದೆ ನೀನಿರ್ದುದುಯಲ್ಲವೆ । ಎಂತಾನು ಪಡೆಯಲಶಕ್ಯ ॥ ೫೩ ॥

ವಾಣಿಯ ಜರೆವರು ತಮ್ಮಯ ನುಡಿಯಿಂ ಗೀ- । ರ್ವಾಣಿಯರನು ವಿಲಾಸದೊಳು ॥
ಜಾಣಿಂದ ಜಾಹ್ನವಿಯನು ಜರೆವರು ಪಂಚ- । ಬಾಣನ ಸತಿಯ ರೂಪಿಂದ ॥ ೫೪ ॥

ಅವರ ಸೊಬಗು ಮತ್ತವರ ಸಚ್ಚಾರಿತ್ರ- । ವವರ ಬೆಡಗು ಬಿನ್ನಾಣ ॥
ಭುವನದೊಳೆಲ್ಲಿ ನೋಡಿದೊಡಿಲ್ಲ ಭಾವಾಜಿ ! । ಯುವತಿರತ್ನಗಳು ಭಾವಿಸಲು ॥ ೫೫ ॥

ನಿನ್ನ ಪುಣ್ಯದ ಒದವನು ಏನ ಪೇಳಲಿ । ಚೆನ್ನೆಯರೊಲಿಸಿದೆ ನೀನು ॥
ಚಿನ್ನದಿ ರನ್ನವಿಟ್ಟಂತಾಯ್ತು ಭಳಿರೆ ಗು- । ಣೋನ್ನತ ಭಾಪುರೆ ! ಎಂದು ॥ ೫೬ ॥

ನುಡಿದರಗಿಳಿಯ ನುಡಿಯ ಕೇಳಿ ಜ್ಞಾನೇಂದು । ಒಡನೆ ಮುಗುಳುನಗೆ ನಗುತ ॥
ಕಡುಜಾಣನಹುದಯ್ಯ ಎಂದು ಮಂಡೆಯ ತಾನು । ತಡಹಿ ಮುತ್ತನು ಪ್ರಿಯದಿತ್ತು ॥ ೫೭ ॥

ರನ್ನದ ಕಾಲಗಗ್ಗರವನಾ ಕೀರನ । ಚೆನ್ನಡಿಗಳಿಗಳವಡಿಸಿ ॥
ಹೊನ್ನ ಗೆಜ್ಜೆಯನು ಸಂಭ್ರಮದಿಂದ ಪಾದಕೆ । ಗನ್ನಕಾರನು ತಾ ಕಟ್ಟಿ ॥ ೫೮ ॥

ಚೊಕ್ಕ ಮುತ್ತಿನ ಕಂಠಮಾಲೆಯನೆಂಟ ನಿ- । ಮ್ಮಕ್ಕಂದಿರಿಗೆ ಕೊಡೆನುತ ॥
ಅಕ್ಕರಿಂ ಕೊಟ್ಟಲ್ಲಿ ಕುಳಿತಿರ್ದ್ದವನೆಂದು । ಗಕ್ಕನೆ ಪೇಳೆಂದು ಕಳುಹೆ ॥ ೫೯ ॥

ಉಕ್ಕುವ ಹರುಷದೊಳಗೆ ಪಾದಕೆ ಬಿರ್ದು । ರೆಕ್ಕೆಯಿಂ ಮೈಯನು ತಡಹಿ ॥
ಸಕ್ಕರೆ ಮುತ್ತ ಭಾವಾಜಿಯ ಬಾಯ್ಗಿತ್ತು । ಚಕ್ಕನಂಬರಕೆ ಹಾರಿದುದು ॥ ೬೦ ॥

ಚರಣದ ಗಗ್ಗರ ಘಲಿರು ಘಲಿರು ಎನೆ । ಗಿರಿಗಿರಿರೆನೆ ಉಲಿಗೆಜ್ಜೆ ॥
ಹರುಷದಿಂದಂಬರ ಪಥದೊಳಾ ಕೀರ । ಮುರಿದು ನಿಟ್ಟುಸುತ ಧರೆಯನು ॥ ೬೧ ॥

ತ್ವರಿತದೊಳಗೆ ಬಂದು ಮೇಘಪುರವ ಪೊಕ್ಕು । ತರುಣಿಯರೆಣ್ಬರ ಪದಕೆ ॥
ಎರಗಿ ಬಾಯೊಳು ಬಾಯಿಟ್ಟು ಚುಂಬನಗೊಟ್ಟು । ಕರಪೃಷ್ಠದೊಳು ನಂದವತಿಯ ॥ ೬೨ ॥

ಕೀರ ಕುಳಿತುಕೊಂಡು ಎಲೆ ಅಕ್ಕಂದಿರ ! । ತೋರ ಮುತ್ತಿನ ಹಾರವನು ॥
ಕಾರುಣ್ಯದಿಂದಿತ್ತ ಭಾವಾಜಿ ನಿಮಗೆಂದು । ಸೇರಿಸಿಕೊಳ್ಳಿ ಕಂಠದೊಳು ॥ ೬೩ ॥

ಒಂದಕ್ಕೆ ಹತ್ತು ಮಡಿಯ ಮುತ್ತುಗಳನಾ- । ನಂದದಿ ಭಾವನ ಮುಖಕು ॥
ಸೌಂದರವಡೆದ ನುಣ್ಗೊರಲಿಗು ಕೊಡಬಹು- । ದೆಂದು ಸರಸವಾತು ನುಡಿದು ॥ ೬೪ ॥

ಏಕದೊಳಗೆ ಎಂಟುಮಂದಿಯಕ್ಕಂದಿರ । ಕೊರಲಿಗೆ ಹಾಕಿ ಹಾರವನು ॥
ಅರಸುಮಗನ ಬೆಳ್ಳುಗುರು ನಿಮ್ಮೆದೆಯೊಳು । ಮೆರೆದಪ್ಪು ಮುಂದಕೆಂದೆನಲು ॥ ೬೫ ॥

ಒರೆದ ಮಾತನು ಕೇಳಿ ಮನದೊಳು ಹಿಗ್ಗುತ । ಶಿರಬಾಗಿ ಮುಗುಳ್ನಗೆಯಿಂದ ॥
ತರುಣಿಯರೆಲ್ಲರು ಬಳಸಿ ಕುಳ್ಳಿರಲಾಗ । ಮುರುಕದೊಳಗೆ ನಂದವತಿಯು ॥ ೬೬ ॥

ಎಲೆ ರಾಜಕೀರ ! ನಿನ್ನಯ ಭಾವಾಜಿಯು । ಚೆಲುವನೋ ಜಾಣನೋ ವಿಟನೋ ॥
ಕಲೆವಂತನೋ ಹೊಂತಕಾರಿಯೋ ಎನ್ನೊಳ- । ಗಲಸದೆ ಪೇಳು ನನ್ನಾಣೆ ॥ ೬೭ ॥

ಎಂದು ತಾ ಕೀರಿ ಕೇಳಲು ಶುಕರಾಜನು । ನಂದವತಿಯೊಳೆಲೆ ಅಕ್ಕಾ ! ॥
ಅಂದಗಾರನು ಸೊಗಸುಗಾರನಹುದವ- । ನಂದವ ಪೇಳುವೆ ಕೇಳು ॥ ೬೮ ॥

ಇಪ್ಪತ್ತು ವತ್ಸರ ಪ್ರಾಯದ ಕುವರನು । ತುಪ್ಪುಳ್ಳ ಮೀಸೆ ರಾಜಿಸಲು ॥
ಕಪ್ಪೇರಿ ಬರುವ ಬವರಿಗಡ್ಡ ರೂಪಿಂ ಕಂ- । ದರ್ಪನ ಜರೆವ ಚೆನ್ನಿಗನು ॥ ೬೯ ॥

ಕಡುವಿಲ್ಲನೆಂಬ ಶಬರನಾಯಕನಾ । ಮಡದಿಯರೆಂಬ ಬೆಳ್ಮಿಗವ ॥
ಒಡನೆ ಸೆಳೆವ ನೀಲ ಕುರುಳ್ಗಳೊ ಎಂದೆನೆ । ಕಡು ಜಾಣನ ಕುರುಳಿಹವು ॥ ೭೦ ॥

ಥಳಥಳಿಸುವ ದಿವ್ಯ ಕಾಂತಿಯಿಂ ಶೋಭಿಪ ! ಎಳೆವರೆಯದ ಗಾಡಿಯನು ॥
ಇಳಿಕೆಯದ್ದ ರಾಜಿಪುದಾ ಜ್ಞಾನೇಂದುವ । ಪೊಳೆವ ನಿಟಿಲ ಏಣನೇತ್ರೆ ! ॥ ೭೧ ॥

ಕುವರನ ಪುರ್ವಿನ ಭಾವವನಜ ಕಂಡು । ಸವಿವಿಲ್ಲ ಪಿಡಿದ ಕಾರ್ಮುಕವ ॥
ಸವೆದನಲ್ಲದೆ ಮಾರನ ಕಬ್ಬುವಿಲ್ಲ । ಕುವರನ ಭ್ರೂಯುಗಕೆಣೆಯೇ ॥ ೭೨ ॥

ನೃಪನ ಲೋಚನದ ಸೊಬಗ ಕಂಡು ಕಡುನಾಣ್ಚಿ । ಚಪಲಗತಿಯ ಹರಿಣಗಳು ॥
ವಿಪಿನವ ಪೊಕ್ಕು ಶೀತಾತಪವನು ತಾಳಿ । ತಪವ ಮಾಡುವವಂದಿಂದ ॥ ೭೩ ॥

ಸುಗುಣರರಸನ ನಾಸಾ ಚಂಪಕ ದರಿ- । ಮುಗುಳಲೋ ತುಂಬಿಯ ಮರಿಗೆ ॥
ಪಗೆಯಾದುದಿಲ್ಲ ಮಹಾನುಭಾವರುಗಳ । ಮಿಗೆ ನಂಬಿದರಿಗುಂಟೆ ವೈರ ॥ ೭೪ ॥

ಸರಸಿಜೋದ್ಭವ ನಾಣ್ಚಿ ಮೌಕ್ತಿಕಗಳ ಚೊಕ್ಕ । ಸರವ ಕುವರನಾಸ್ಯವೆಂಬ ॥
ಕರಡಿಗೆಯೊಳು ಮಡಗಿದನೋ ಎಂಬಂದದಿ । ದೊರೆಯ ರದನವೊಪ್ಪಿದವು ॥ ೭೫ ॥

ಸುಧೆಯನಜನು ನಿರ್ಮಿಸಿ ಜ್ಞಾನೇಂದುವಿ- । ನಧರದೊಳಗೆ ತುಂಬಿ ಮಿಕ್ಕ ॥
ಸುಧೆಯ ದೇವರ್ಕಳಿಗಿತ್ತನೆಂದರೆಯುವ- । ನಧರದ ಸವಿಯಿನ್ನೆಂತೋ ॥ ೭೬ ॥

ಕುಂದಣದೊಳಗಜ ವಿಕಟಾಕಾರನು । ಚಂದದಿಂ ಸಮೆದನೋ ಎನಲು ॥
ಸೌಂದರದಿಂ ರಾಜಿಪುದೆಲೆ ಅಕ್ಕ ! ಜ್ಞಾ- । ನೇಂದು ಕಪೋಲ ಚಿಬುಕವು ॥ ೭೭ ॥

ಸ್ಮರನು ಮೋಹನ ಶಾಸ್ತ್ರವ ಹೊತ್ತಗೆಯೊಳು । ಬರವಾಗಿ ಮೊದಲು ತಾ ಬರೆದ ॥
ಸಿರಿಕಾರವ ಜ್ಞಾನೇಂದು ಕುಮಾರನ । ವರಕರ್ಣಯುಗಳ ಜರೆವವು ॥ ೭೮ ॥

ಸರಸಿಜರುಹ ತನ್ನ ಮೊಗವ ನೋಡುವೆನೆಂದು । ಹರುಷದಿಂ ಸಮೆದಾಬ್ದಕವ ॥
ನರನಾಥ ಚಂದ್ರನ ದರಹಸಿತಾನನ । ಜರೆವುದು ಎಲೆ ಪಿಕವಾಣಿ ! ॥ ೭೯ ॥

ಅಂಗದ ಕಾಂತಿಯೆಂದೆಂಬ ಶರಧಿಯೊಳು । ಪಿಂಗದೆ ನೆಗೆದು ರಾಜಿಸುವ ॥
ಮಂಗಲಮಯವಾದ ಬಲಮುರಿ ಶಂಖವ । ನುಂಗೊರಲೆದ್ದು ರಾಜಿಪುದು ॥ ೮೦ ॥

ಇಂದಿರೆ ನಲಿನಲಿದಾಡುವುದಕೆ ಸ್ವರ್ಣ- । ದಿಂದ ಸಮೆದು ಶೋಭಿಸುವ ॥
ಬಂಧುರವಾದ ಮಂಟಪವೋ ಎಂದೆನಲು ನೃ- । ಪೇಂದ್ರನೆರ್ದೆಯು ರಾಜಿಪುದು ॥ ೮೧ ॥

ಮದನ ಚಕ್ರೇಶ್ವರನೇರುವ ಪಟ್ಟದ । ಮದಕರಿ ಚೆಲುವ ಕರವನು ॥
ಅದಟನ ದುಂಡುದೋಳುಗಳು ಜರಿದು ಎಲೆ । ಸುದತಿ ! ರಾಜಿಪವೇನೆಂಬೆ ॥ ೮೨ ॥

ಅಲರ್ದ ಕೆಂದಾವರೆಯೊಳು ತಾವರೆ ಮೊಗ್ಗೆ । ಚೆಲುವಿಂದಲಿರುವಂತೆಂಗೈಲಿ ॥
ವಿಲಸಿತ ಪದ್ಮದಿಂ ರಾಜಿಪ ಕರಯುಗ । ಚೆಲುವೆ ! ರಾಜಿಸಿದವೇನೆಂಬೆ ॥ ೮೩ ॥

ಪವಳದ ಕುಡಿಯೊಳು ಮಂಜಿನ ಪನಿಗಳು । ತವೆ ಪಲ್ಲವಿಸುವಂದದೊಳು ॥
ಕುವರನ ಪತ್ತು ಬೆರಳೊಳು ರಾಜಿಸಿದವು । ಕುವಲಯ ನೇತ್ರೆ ! ನಖಗಳು ॥ ೮೪ ॥

ರಮೆ ತಾನೆಂದು ಪಿಲಾಸದಿಂ ಪೊಕ್ಕು ಸಂ- । ಭ್ರಮದಿ ಜಲಕ್ರೀಡೆ ಮಾಳ್ಪ ॥
ರಮಣೀಯವಾದ ಕಾಸಾರವೋ ಎಂಬಂತೆ । ಭ್ರಮೆಗೊಳಿಪುದು ನಾಭಿಯವನ ॥ ೮೫ ॥

ಉರುತರ ಹರುಷದೊಳಗೆ ಹರಿದು ಪೋಪ । ಇರುಪೆಯ ಚೊಕ್ಕ ಪಂಕ್ತಿಯನು ॥
ದೊರೆರನ್ನನ ರೋಮರಾಜಿ ಹಳಿದು ತಾ । ಕರ ಚೆಲುವಿಂದ ರಾಜಿಪುದು ॥ ೮೬ ॥

ಹರನೊಡನೆ ಕಾದಬೇಕೆಂದು ರತಿಪತಿ- । ಯುರವಣೆಯಿಂ ತನ್ನ ರಥಕೆ ॥
ಎರಕದೊಳಗೆ ಕಟ್ಟಿದ ಸಿಂಹ ಮಧ್ಯವ । ಜರೆದುದು ಕುವರನ ನಡುವು ॥ ೮೭ ॥

ರತಿ ತನ್ನೊಂದೆ ಓರಗೆಯೊಳು ರಾಜಿಪ । ಸತಿಯರೊಳಾಡುವೆನೆಂದು ॥
ಅತಿಶಯದಿಂ ಪಿಡಿದಿರ್ದ ಕಂದುಕವೆನೆ । ಕ್ಷಿತಿಪನ ಪೊರವಾರಿಹವು ॥ ೮೮ ॥

ಸರಸಿಜೋದ್ಭವ ಮೂಜಗವ ಸೃಜಿಸುವಾಗ । ನೆರೆ ವಿಭಾಗವ ಮಾಳ್ಪೆನೆಂದು ॥
ಬರೆದ ಮೂರೇಖೆಯು ರಾಜಕುಮಾರನ । ವರ ತ್ರಿವಳಿಗಳು ಭಂಗಿಪವು ॥ ೮೯ ॥

ಹರಿಸೂನು ಚಿಕ್ಕಂದು ಗರಡಿಮನೆಯ ಪೊಕ್ಕು । ನೆರೆ ಸಾಧನೆ ಮಾಳ್ಪೆನೆಂದು ॥
ವಿರಚನೆ ಮಾಡಿದ್ದ ಕಟ್ಟುಗಂಬವ ಗೆದ್ದು । ಕರಸೊಗಯಿಪವು ನುಣ್ದೊಡೆಯು ॥ ೯೦ ॥

ಸಿರಿ ಬಿನದದೊಳಾಡುವೆನೆಂದು ತನ್ನಯ । ಕರದೊಳು ಪಿಡಿದು ಶೋಭಿಸುವ ॥
ಕರ ಚೆಲುವಾದೊಂದು ಚಿಗಿ ಹುಲ್ಲೆಯನಾ । ಗರುವನ ಗುಲ್ಫ ಜರೆವವು ॥ ೯೧ ॥

ವರ ಮೋಹಮಲ್ಲನ ಕರದೊಳು ರಾಜಿಪ । ಸುರುಚಿರವಾದ ಗದೆಯನು ॥
ಜರೆದು ರಾಜಿಸುವವು ಕುವರನ ಕಿರುದೊಡೆ । ನೆರೆವೆರೆಮೊಗದ ಸುಜಾಣೆ ! ॥ ೯೨ ॥

ರಮಣೀಯವಾದ ಜ್ಞಾನೇಂದುಕುಮಾರನ । ಕ್ರಮಗಳ ತಾ ಕಂಡು ನಾಣ್ಚಿ ॥
ಕಮಠ ನೀರೊಳು ಪೊಕ್ಕು ಮೈಗರೆದಂದಿಂದ । ರಮಣಿ ! ಅಡಗಿಕೊಂಡಿಹವು ॥ ೯೩ ॥

ಅರುಣಚರಣದೊಳು ಥಳಥಳಿಸುವ ನಖ । ಮೆರೆದವೆಂತೆನೆ ಕೆಮ್ಮುಗಿಲು ॥
ಹೊರೆಯೊಳು ಕಡುಸೊಬಗಿಂದ ರಾಜಿಸುತಿರ್ದ । ವರ ತಾರೆಗಳೆಂಬಂತೆ ॥ ೯೪ ॥

ಹೇಮ ಪುಷ್ಪದ ಕುಸುಮದ ವರ್ಣವನು ಮತ್ತೆ । ಕಾಮಾರನ ದಿವ್ಯಾಂಗವನು ॥
ತಾಮರೆಗಂಧಿ ! ನಾ ಸಮಗಂಡೆನು ಎಂದು । ಪ್ರೇಮದಿ ಕೀರ ನುಡಿದುದು ॥ ೯೫ ॥

ಇಂತಪ್ಪ ಚೆಲುವರದೇವ ನಿಮಗೆ ಪ್ರಾಣ- । ಕಾಂತನಾದನು ನೀವು ಮುನ್ನ ॥
ಎಂತಪ್ಪ ದಿವ್ಯನೋಂಪಿಗಳ ನೋಂತಿರೊ ಮಜ್ಝ ! । ಎಂತಪ್ಪ ದಾನಪೂಜೆಗಳ ॥ ೯೬ ॥

ಎಂತಪ್ಪ ದಿವ್ಯಾಮೋದದ ಕುಸುಮವ । ಕಂತುಮರ್ದನ ಜಿನರಡಿಗೆ ॥
ಸಂತೋಷದಿಂದಲರ್ಚಿಸಿದಿರೊ ಭಾಪುರೆ ! । ಇಂತಪ್ಪ ಪುಣ್ಯವುಳ್ಳವರು ॥ ೯೭ ॥

ನಾ ಕಂಡು ಕೇಳಿದುದಿಲ್ಲ ಜಿನಪರಾಣೆ । ಸಾಕು ನಿಮ್ಮಯ ಪುಣ್ಯದೊದವು ॥
ನಾಕನರೋರಗ ಸ್ತ್ರೀಯರೊಳಗೆ ನೀವೆ । ಬೇಕಾದ ಧನ್ಯರೌ ಎಂದು ॥ ೯೮ ॥

ರಾಜಕೀರನು ಕೊಂಡಾಡಿ ನಲಿದು ಕೂಡೆ । ರಾಜೀವವದನೆಯರೆಲ್ಲ ॥
ಸೋಜಿಗವಟ್ಟು ನಾಸದೊಳು ಬೆರಳನಿ- । ಟ್ಟಾ ಜಾಣೆಯರು ಶಿರವಲಗೆ ॥ ೯೯ ॥

ಅಕಟಕಟ ಇಂತಪ್ಪ ಜಾಣ್ನುಡಿಯನು । ಶುಕನೆಲ್ಲಿ ಕಲಿತೋದಿದುದೋ ॥
ಮಕರಾಂಕನ ಮೋಹ ಬಳಗವಲ್ಲವೆ ಎಂದು । ಸುಕುಮಾರಿಯರು ಕೊಂಡಾಡಿದರು ॥ ೧೦೦ ॥

ತಮತಮಗೆಲ್ಲರು ತೆಗೆದಮರ್ದಪ್ಪಿಯಾ । ಅಮೃತವಾಚಾಂಕನ ಮೊಗದಿ ॥
ರಮಣೀಯವಾದ ತಮ್ಮಯ ಮೊಗವನು ಇಟ್ಟು । ರಮಣೀಯ ಮುತ್ತುಗಳಿತ್ತು ॥ ೧೦೧ ॥

ಹಾಲಕೆನೆಯಲಿ ಬಾಳೆಯಹಣ್ಣ ಕಲಸಿಯಾ । ಬಾಲಕಿಯರು ಮೆಲಲಿತ್ತು ॥
ಲೀಲೆಯಿಂ ಕ್ಷೀರಪಾನವ ಮಾಡಿಸಿ ಮತ್ತೆ । ಲೋಲಾಕ್ಷಿಯರು ಮೈದಡವಿ ॥ ೧೦೨ ॥

ಬಳಲಿದೆಯಮೃತವಾಚಾಂಕ ! ನಿನ್ನಂಬಿಟ್ಟು । ಕೆಳೆಯರಾರುಂಟೆಮಗೆಂದು ॥
ಕಳಕಂಠಸಿನದೆಯರೊಳುನುಡಿಯೊಳು ತಾವು । ಗಿಳಿರಾಜನ ಕೊಂಡಾಡಿ ॥ ೧೦೩ ॥

ಬಳಲಿಕೆ ಯಾವುದು ಅಕ್ಕಾಜಿ ! ನೀವೆಲ್ಲ । ನಳಿನಾಸ್ತನ ಪೂ ಸರಕೆ ॥
ಒಳಗಾಗಿ ಬೆದೆಬೆದೆ ಬೇವುದ ನಾ ಕಂಡು । ತಳವೆಳಗಾಗೆನ್ನ ಮನದಿ ॥ ೧೦೪ ॥

ನಿಮ್ಮ ಮನದೊಳಂಕುರಿಸಿ ಪೊಳೆವುತಿ- । ರ್ದುಮ್ಮಳವನು ನಾನೆಂದು ॥
ಗಮ್ಮನೆ ಕಳೆದು ಪ್ರಾಣೇಶ್ವರನನು ತಂದು । ಸಂಬಂಧವನು ಮಾಡುವೆನು ॥ ೧೦೫ ॥

ಎಂದು ಚಿಂತಿಸುತಿರ್ದೆ ನಿಮ್ಮ ಸುಕೃತದಿಂದ । ಕಂದರ್ಪನ ಸಮರೂಪ ॥
ಇಂದು-ರವಿಗಳಂತೆ ಶಾಂತ ತೇಜಸ್ವಿಯು । ಚಂದ ನಿಮಗೆ ವರನಾಗೆ ॥ ೧೦೬ ॥

ನನ್ನಯ ಬಳಲಿಕೆ ಹೋಯಿತಕ್ಕಾಜಿರ ! । ಉನ್ನತ ಭಾಗ್ಯದಿ ನೀವು ॥
ಚೆನ್ನಿಗನೊಡಗೂಡಿ ಸುಖವೆಂದೆಂಬೊಂದು । ಮುನ್ನೀರೊಳೋಲಾಡಿ ಬದುಕಿ ॥ ೧೦೭ ॥

ಪುತ್ರ ಪೌತ್ರರುಗಳ ನೀವೆಲ್ಲ ಪಡೆದು ಜ- । ಗತ್ರಯದೊಳು ಕೀರ್ತಿವಡೆದು ॥
ಕರ್ತೃಗಳಾಗಿ ಭೂಲೋಕಕೆ ಎಂದು ಪ- । ತತ್ರಿ ಪರಸಿದುದಾಗವರ ॥ ೧೦೮ ॥

ಅಂತೆಯಾಗಲಿ ಎಂದು ಸಂತೋಷವ ತಾಳಿ । ಕಾಂತೆಯರಿಂತು ನುಡಿದರು ॥
ಇಂತೀವೆಲ್ಲವ ಶಕ್ರಧನುವಿನೆಡೆಗೆ ಪೋಗಿ । ನೀಂ ತಿಳುಪದೆ ಹೇಳು ಕೀರ ! ॥ ೧೦೯ ॥

ಎಂದು ಕನ್ನಿಕೆಯರು ಕಳುಹಲಾ ಕೀರನಾ- । ನಂದದಿಂ ಖೇಚರನೆಡೆಗೆ ॥
ಬಂದು ಮುಂಗೈಯೊಳು ಕುಳಿತು ಹರ್ಷದೊಳಿಂ- । ತೆಂದು ತಾ ಮಾತನಾಡಿದುದು ॥ ೧೧೦ ॥

ಹರಿಧನು ! ಕೇಳ್ಕೆ ನಾನೀಗ ರತ್ನಸು- । ಪುರದ ಬಹಿರ್ವನದೊಳಗೆ ॥
ವರಜಿನಗೃಹವಿಹುದದರ ವರ್ತಿಲಿ ನಾ- । ಮರದೊಳು ಕುಳಿತುಕೊಂಡಿರಲು ॥ ೧೧೧ ॥

ಪುರುಷನೋರ್ವನು ವಿದ್ಯವ ಸಾಧಿಪೆನೆಂದು । ತ್ವರಿತದಿಂ ತಾ ಬಂದು ಕುಳಿತು ॥
ಎರಕದಿಂ ಜಪಯಿಸುತಿರಲಲ್ಲಿಗೆಣ್ಬರು । ತರುಣಿಯರುಗಳೈತಂದು ॥ ೧೧೨ ॥

ಪರಿಚಾರಿಕೆಯರ ವೇಷವ ತಾವಾಂತು । ಇರುತಿರಲದ ಕಂಡೋರ್ವ ॥
ದುರುಳ ಖಗನು ಘೋರೋಪಸರ್ಗವನಾ । ದೊರೆಕುವರಗೆ ಮಾಡೆ ಕಂಡು ॥ ೧೧೩ ॥

ನೀಚ ಕುಲಿಶಗಲ ಧ್ಯಾನದೊಳಗೆ ಇ- । ರ್ದಾ ಚದುರನ ಮೇಲೆ ತನ್ನ ॥
ನಾಚಿಕೆಗೆಟ್ಟು ಬೀರವ ತೋರಿದೊಡೆ ಸಚ- । ರಾಚರರುಗಳು ಮೆಚ್ಚುವರೇ ॥ ೧೧೪ ॥

ಎಂದು ಮೂದಲಿಸಿ ಬಿಲ್ಕೋಲ ಕರದೊಳಾಂತು । ಸೌಂದರಿಯರು ವಿಮಾನವನು ॥
ಅಂದು ತಾವಡರಿ ಕುಲಿಶಗಲನಿದಿರಾಗಿ । ನಿಂದು ಕಾದುತಲಿರಲಾಗ ॥ ೧೧೫ ॥

ದೇವತೆಗಳನು ಸಾಧ್ಯವ ಮಾಡಿಕೊಂಡಾ । ಕೋವಿದ ಜ್ಞಾನೇಂದು ಕುವರ ॥
ತೀವಿದ ಕೋಪದಿ ಪುಷ್ಪಕವನು ಏರಿ । ಭಾವಕಿಯರ ಪಿಂತಿಕ್ಕಿ ॥ ೧೧೬ ॥

ಕುಲಿಶಗಲನ ಇದಿರೊಳು ನಿಂದು ಧನುವನು । ಕಲಿತನದಿಂದ ಜೇವಡೆದು ॥
ಪಲವು ರೋಪಣಗಳ ಕರೆದು ಮತ್ತರ್ಧೇಂದು । ಚೆಲುವ ಬಾಣದಿ ವಜ್ರಗಲನ ॥ ೧೧೭ ॥

ಶಿರವ ಪರಿಯಲೆಚ್ಚಭಯ ಘೋಷಣೆ ಹೊಯ್ಸಿ । ಹರುಷದಿ ವಿಜಯಾರ್ಧ ನಗದ ॥
ವರಸಿದ್ಧಕೂಟ ಚೈತ್ಯಾಲಯದೊಳಗಿ- । ರ್ದರುಹಗೆ ಸ್ನಪನವ ಮಾಡಿ ॥ ೧೧೮ ॥

ಹರಿಬಲ ಮೊದಲಾದ ದೊರೆಗಳು ಬಳಸಿರೆ । ಸಿರಿಯು ರತ್ನದ ಮಂಟಪದೊಳು ॥
ನೆರೆಜಾಣ ಜ್ಞಾನೇಂದು ಓಲಗಗೊಟ್ಟನೆಂ- । ದರಗಿಳಿ ನುಡಿಯೆ ಖೇಚರನು ॥ ೧೧೯ ॥

ಹರುಷವ ತಾಳಿಯಾ ಕೀರನ ತನ್ನಯ । ಕರದೊಳು ಮೈಯನು ತಡಹಿ ॥
ಕರಚೆಲುವಾದ ಮುತ್ತಿನ ಪಂಜರವನಾ- । ಗರಗಿಳಿಗಿತ್ತನಾ ದೊರೆಯು ॥ ೧೨೦ ॥

ಸಕಲ ವಿದ್ಯಾಧರ ನೃಪರು ತನ್ನೊಡ ಬರೆ । ಸುಕುಮಾರಿಯರೊಡಗೊಂಡು ॥
ಅಕಲಂಕತೇಜ ಪುಷ್ಪಕವ ತಾನಿರದೇರೆ । ಪ್ರಕಟವಾಯಿತು ವಾದ್ಯರಭಸ ॥ ೧೨೧ ॥

ಹರುಷದೊಳಗೆ ನಡೆತರುತಿರೆ ಹರಿಧನು । ವರಸಿದ್ಧಕೂಟ ವಸತಿಯ ॥
ಕರ ಚೆಲುವನು ಗಗನದೊಳು ತಾ ಕಂಡಾಗ । ಕರಗಳ ಮುಗಿದು ಭಕ್ತಿಯೊಳು ॥ ೧೨೨ ॥

ಘಳಿಲನೆ ಇಳಿತಂದು ಕರಗಳ ತನ್ನೊಂ- । ದಳಿಕಟ್ಟೆಂದ್ರಕಾರ್ಮುಕನು ॥
ಪೊಳೆವ ಜಿನಾಲಯವನು ಮೂಮೆ ಬಲವಂದು । ಒಳಪೊಕ್ಕು ಜಿನಪನ ಕಂಡು ॥ ೧೨೩ ॥

ದರುಶನ ಸ್ತುತಿಗೈದು ಸಾಷ್ಟಾಂಗವೆರಗಿ ತಾ- । ನರುಹನ ಬೀಳ್ಕೊಂಡು ಮುದದಿ ॥
ವರರತ್ನಖಚಿತ ಸೌಂದರಮಂಟಪಕಾಗಿ । ಬರುತಿರೆ ಶಕ್ರಕಾರ್ಮುಕನು ॥ ೧೨೪ ॥

ಹರಿಬಲ ಖೇಚರೇಶ್ವರನು ಜ್ಞಾನೇಂದು ಸ್ವ- । ವರಕುಮಾರನ ತಾವು ಕಂಡು ॥
ತ್ವರಿತದಿಂದಿದಿರ್ವಂದು ಗಾಢಾಲಿಂಗನಗೆಯ್ದು । ಕರಗಳ ಪಿಡಿದು ಲೀಲೆಯೊಳು ॥ ೧೨೫ ॥

ಎರಕದೊಳಗೆ ಬಂದು ಉನ್ನತಾಸನದಲ್ಲಿ । ದೊರೆಮಗ ಕುಳ್ಳಿರೆ ಬೆಡಗಿಂ ॥
ದೊರೆ ದೊರಿಗಳು ಸುತ್ತ ಕುಳಿತರು ತನ್ಮಯ । ವರಭೂಷಣವು ಪಲ್ಲವಿಸೆ ॥ ೧೨೬ ॥

ಸುರಗಣ ಬಳಸಿರೆ ಸುರರಾಜನಿರುವಂತೆ- । ಯುರಗರು ಬಳಸಿರೆ ಫಣಿಪ ॥
ಇರುವಂತೆಯುಡು ಬಳಸಿರೆ ಚಂದ್ರನಿಪ್ಪಂತೆ । ದೊರೆ ಖೇಚರರೊಗ್ಗೆಸೆದು ॥ ೧೨೭ ॥

ಮಾರಾಕಾರನು ಜಗದೇಕವೀರನು- । ದಾರ ಶಾರದೆ ಕಂಠಹಾರ ॥
ಪಾರಾವಾರನಿಭ ಗಂಭೀರ ಶೃಂಗಾರ । ವೀರನೊಪ್ಪಿದ ಜ್ಞಾನೇಂದು ॥ ೧೨೮ ॥

**॥ ಅಂತು ಸಂಧಿ ೭ಕ್ಕಂ ಪದ ೧೦೭೭ಕ್ಕಂ ಮಂಗಲಂ ॥**

# ಜ್ಞಾನಚಂದ್ರನ ಪ್ರಥಮ ವಿವಾಹ.

ಹರಿಬಲ ಶಕ್ರಧನುವಿನ ಕುವರಿಯರ । ವರಿಸಿದ ಜ್ಞಾನೇಂದುವೆಂಬೆ ॥ ಪ ॥

ಶಕ್ರಶತಾನತ ಚಕ್ರಿಸಂಪೂಜಿತ । ಚಕ್ರಿವಿನುತ ದಿವ್ಯ ಸ್ತೋತ್ರ ॥
ಸುಕ್ರಮ ಧರ್ಮಚಕ್ರೇಶ್ವರ **ಶಾಂತೀಶ** । ಚಕ್ರವ ಕೆಡಿಸೆಮ್ಮಘದ ॥ ೧ ॥

ಹರಿ ಇನಿಗಡಲ ತೆರೆಗಳ ಮಧ್ಯದೊಳಾ । ಹರ ಕೈಲಾಸಗಿರಿಯೊಳು ॥
ಸರಸಿಜಭವ ಪುಂಡರೀಕದೊಳಿರುವಂತೆ । ದೊರೆಮಗ ವಿಜಯಾರ್ಧಗಿರಿಯ ॥ ೨ ॥

ಉತ್ತರಶ್ರೇಣಿಯ ಸಿದ್ಧಕೂಟ ಚೈತ್ಯಾಲಯ- । ದುತ್ತಮ ಮಣಿಮಂಟಪದೊಳು ॥
ಸುತ್ತ ಬಳಸಿ ಖೇಚರರಿಗೆ ಬೆಡಗಿಂ ರಾ- । ಜೋತ್ತಮ ಸಿಂಹಪೀಠದೊಳು ॥ ೩ ॥

ಪರಮಾನಂದದೊಳಗೆ ಜಿನರಾಜನ । ಸೆರಿ ಜಾಣ ನಿಟ್ಟಿಸುತಿರಲು ॥
ಸರಸ ಕವಿಗಳು ಪಂಚಮರಾಗವನೆತ್ತಿ- । ಯರುಹನ ಸ್ತುತಿಸುತಲಿರಲು ॥ ೪ ॥

ಬೋಧೇಂದು ಮುಖನಕ್ಷತ್ರ ನೇಮಿಯು ಕಂಡು । ಮೋದವ ತಾಳಿಂದ್ರಧುನುವು ॥
ಆದರದಿಂದಿಂತು ನುಡಿದನೆಲೆ ನೃಪ ! । ಖೇದಮಾನಸ ವಜ್ರಗಲನ ॥ ೫ ॥

ಶಿರವ ಚ್ಛೇದಿಸಿದವ ನನಗವನಳಿಯನು । ವರವಿದ್ಯಾಧರ ರಾಜ ॥
ತ್ವರಿತದೊಳಾಗುವನೆಂಬ ಕಾರಣದಿಂದ । ಗುರುಕುಚೆಯರನೆಣ್ಬರನು ॥ ೬ ॥

ಮದುವೆಯಾಗುವುದೆನ್ನ ಪುತ್ರಿಯರುಗಳೆನೆ- । ಯದಟರ ದೇವ ಜ್ಞಾನೇಂದು ॥
ಹೃದಯದೊಳಾನಂದವನೈದಿ ನಸುನಕ್ಕು । ಮೊದಲ ಮಾವನ ಮೊಗ ನೋಡೆ ॥ ೭ ॥

ಕುವರನ ಮನದಭಿಪ್ರಾಯವ ಹರಿಬಲ । ತವಕದಿಂ ಚೆನ್ನಾಗಿ ತಿಳಿದು ॥
ಸವಿನಯದಿಂ ಶಕ್ರಧನುವಿನೊಳಗೆ ಪೇಳೆ । ದಿವಿಜೇಶಧನು ಹರಿಬಲನ ॥ ೮ ॥

ಅನುಮತದಿಂ ಕಲ್ಪವೃಕ್ಷದ ವನದೊಳ- । ಗನಿಮಿಷಪತಿ ವೈಭವದಿ ॥
ಮನದಕ್ಕರಿಂ ಬೀಡ ಬಿಟ್ಟು ಸುಖದೊಳಿರೆ । ವಿನುಗುವ ಮದುವೆ ಮಂಟಪವ ॥ ೯ ॥

ಹರಿಬಲ ತನ್ನೂರ್ಗೆ ಭೃತ್ಯರ ಕಳುಹಿಸೆ । ವರಶಿಲ್ಪಿಗಳ ಕೈಯಿಂದ ॥
ವಿರಚನೆಯನು ಮಾಡಿಸಿದನದೆಂತೆನೆ । ಒರವೆನು ಬಲ್ಲಲಿತಾನು ॥ ೧೦ ॥

ಹರಿನೀಲಮಣಿಯಿಂ ಸಮೆದ ಕುಟ್ಟಿಮದಿಂದ । ವರವಜ್ರದ ಕಂಬದಿಂದ ॥
ಕರಚೆಲುವಾದ ಮಾಣಿಕದ ಬೋದಿಗೆಯಿಂದ । ಮರಕತ ಲೋವೆಗಳಿಂದ ॥ ೧೧ ॥

ಮುತ್ತಿನ ಚಾರು ಲಂಬಣದಿಂದ ಪವಳದಿ । ತೆತ್ತಿಸಿ ಮೆರೆವ ಲೋವೆಗಳಿಂ ॥
ಭಿತ್ತಿಗಳಿಂದ ಪಳುಕಿನ ರಾರಾಜಿ- । ಪುತ್ತಮ ಪದ್ಮರಾಗದೊಳು ॥ ೧೨ ॥

ವಿರಚನೆ ಮಾಡಿದ ಮುಚ್ಚುವಲಗೆಯಿಂದ । ವರಹೇಮ ಸೋಪಾನದಿಂದ ॥
ಮರಕತ ಗಿಂಡಿ ಬಟ್ಟಲು ತೋರಣದಿಂದ । ನೆರೆ ನಿಡು ಝುಲ್ಲಿಗಳಿಂದ ॥ ೧೩ ॥

ಮೆರೆವ ಮಲ್ಲಿಗೆ ಸರದಿಂದ ಪೂವಲಿಯಿಂದ । ಕರಚೆಲುವಾಗೆ ಮಂಟಪವು ॥
ಹರುಷದೊಳಗೆ ಇತ್ತ ಜ್ಞಾನೇಂದು ಕುವರನು । ಹರಿಬಲ ವಿದ್ಯಾಧರನು ॥ ೧೪ ॥

ಅರುಹನ ಬೀಳ್ಕೊಂಡು ರತ್ನಪುರವ ಪೊಕ್ಕು । ತ್ವರಿತದಿಂದಲೆ ಜೋಯಿಸರ ॥
ಕರೆಯಿಸಿ ಶುಭತಿಥಿಗಳ ಮುಹೂರ್ತವ । ಹರಿಬಲ ನಿಶ್ಚಯ ಮಾಡೆ ॥ ೧೫ ॥

ಆ ವೇಳೆಯೊಳು ಕೋಟಿ ವಾದ್ಯದ ರಭಸವು । ತೀವಿತು ದಿಕ್ತಟಗಳನು ॥
ಭಾವಕಿಯರು ನರ್ತನಗಳನಲ್ಲಲ್ಲಿ । ಸಾವಧಾನದೊಳಾಡುತಿರಲು ॥ ೧೬ ॥

ಹದಿನಾರು ಮುತ್ತಿನ ಮೆಟ್ಟಕ್ಕಿಗೂಡೆಯು । ಚದುರಿಂದ ಪಂಕ್ತಿಯಾಗಿರಿಸೆ ॥
ಮುದದಿಂದ ಮುತ್ತಿನ ಮೆಟ್ಟಕ್ಕಿಗೂಡೆಯು । ಮದವತಿಯರು ಬೇರೊಂದಿರಿಸೆ ॥ ೧೭ ॥

ಇತ್ತಲು ಹದಿನಾರು ಮಂದಿ ಕುವರಿಯರ್ಗೆ । ವೃತ್ತಕುಚೆಯರೆಣ್ಣೆಯನು ॥
ಒತ್ತರದಿಂದೊತ್ತಿ ತಿಗುರಿ ತೀರ್ಥಾಂಬುವಿಂ- । ದುತ್ತಮಾಂಗಕೆ ಸ್ವರ್ಣಘಟದಿ ॥ ೧೮ ॥

ಹರುಷದೊಳಗೆ ಮಜ್ಜನವನು ಮಾಡಿಸಿ । ನೊರೆವಿಂಡುಗಳನಿಳಿಕ್ಕೈವ ॥
ವರ ವಸನವ ಸಿರಿವಿಡಿದುದುಡಿಸಿದರಾ । ತರುಣಿಯೊರ್ಪಿಡಿ ನಡುವಿಂಗೆ ॥ ೧೯ ॥

ಮಿಂಚಿನಂದದಿ ಥಳಥಳಿಪ ಮೋಹನ ದಿವ್ಯ । ಕಂಚುಕಗಳ ಕುವರಿಯರ್ಗೆ ॥
ಯೇಂ ಚದುರಿಂದ ತೊಡಿಸಿದರ್ಕಜ್ಜಳವನು । ಚಂಚಲದೃಷ್ಟಿಗೆಚ್ಚಿದರು ॥ ೨೦ ॥

ಹರಳೋಲೆ ಹಸ್ತಕಡಗ ತೋಳಬಳೆ ತಾತಿ । ಸರಪಣಿ ಬಂದಿ ಚಿಂತಾಕು
ಚರಣದಂದುಗೆ ಪೆಲ್ಲಿ ಮಂಟಿಕೆ ನೇವಳ । ವರಮುದ್ರಿಕೆ ಹತ್ತಕಟ್ಟು ॥ ೨೧ ॥

ಹಾರಹೀರಾವಳಿ ಮುಂತಾದ ತೊಡವಸು । ನಾರಿರತ್ನಗಳಿಗೆ ತೊಡಿಸಿ ॥
ತೋರ ಮುತ್ತಿನ ಮೂಗುತಿಯ ನಾಸಿಕದೊಳು । ಸೇರಿಸಿದರು ಖೇಚರಿಯರು ॥ ೨೨ ॥

ತಿಲಕವ ನೊಸಲೊಳು ತಿದ್ದಿ ಕಪಾಲದಿ । ಸಲೆ ಮಕರಿಕ ಪತ್ರವನು ॥
ಚೆಲುವಿಂದ ಬರೆದು ತುರುಂಬಿಗೆ ದಂಡೆಯ । ಲಲನೆಯರುಗಳು ಕಟ್ಟಿದರು ॥ ೨೩ ॥

ನವರತ್ನ ಕೀಲಿತವಾದ ತೊಂಡಿಲುಗಳ । ನವಯವ್ವನೆಯರ ತುರುಬಿನ ॥
ನವನೂತನವಾದ ದಂಡೆಯುಪರಿಮುದಿ । ಯುವತಿಯರ್ಕಳು ಕಟ್ಟಿದರು ॥ ೨೪ ॥

ಇತ್ತಲು ಜ್ಞಾನೇಂದುಕುವರನ ಶಿರದೊಳು । ಮತ್ತಕಾಸಿನಿಯರು ಮುದದಿ ॥
ಬಿತ್ತರದಿಂ ಕಮ್ಮೆಣ್ಣೆಯನೊತ್ತಿದ- । ರುತ್ತಮ ಶೋಭನ ರವದಿ ॥ ೨೫ ॥

ಪಾವನವೆನಿಪ ಗಂಗಾದಿತೀರ್ಥಾಂಬುವ । ಕೋವಿದ ನೃಪನ ಶಿರದೊಳು ॥
ಭಾವಕಿಯರು ಸ್ವರ್ಣಮಯವಾದ ಕಳಶದಿ । ತೀವಿ ಸ್ನಾನವ ಮಾಡಿಸಿದರು ॥ ೨೬ ॥

ಅತಿಶುಭ್ರವಾದ ದುಕೂಲವ ಕುವರನು । ನುತವೆತ್ತು ಪೊದೆಯಲೊಪ್ಪಿದನು ॥
ಸತತ ಬೆಳ್ಮುಗಿಲೊಳಗಿರುವ ಸೂರ್ಯನದೊಂ- । ದತಿಶಯವನು ನೆರೆಪೊಲ್ತು ॥ ೨೭ ॥

ಮುತ್ತಿನ ಮಣಿಯಿಂದ ಸಮೆದ ಪೈರಣೆಯ ರಾ- । ಜೋತ್ತಮನಂಗಕೆ ತೊಡಿಸಿ ॥
ಮುತ್ತಿನ ಬೆಳ್ದಿಂಗಳ ನಡುವೆಸೆದೊಂ- । ದುತ್ತಮ ಕನಕಾದ್ರಿಯಂತೆ ॥ ೨೮ ॥

ರತ್ನಕಿರೀಟವ ಕುವರನ ಶಿರಕೆ ಪ್ರ- । ಯತ್ನವ ಮಾಡಲೊಪ್ಪಿದುದು ॥
ರತ್ನದ ಕೋಡಂಗಲ್ಲು ಹೇಮಾದ್ರಿಲಿ । ನೂತ್ನದಿಂ ಪೊಳೆವಂತಾಯ್ತು ॥ ೨೯ ॥

ಭಾರಿಮುತ್ತಿನ ಚೌಕುಳಿಯನು ಕರ್ಣಕೆ । ಸೇರಿಸಿ ನೃಪನಾಸ್ಯವಿಹುದು ॥
ತಾರಗೆಗಳು ನಾಲ್ಕೊಂದಾಗಿ ಚಂದ್ರನ । ಸಾರಿ ನಿಂದಪೊ ಎನಲಿಹವು ॥ ೩೦ ॥

ಜ್ಯೋತಿರ್ಮಯವೆನಿಸುವ ಕಂಠಮಾಲೆಯ । ಭೂತಳೇಶನ ಕಂಠಕಿಕ್ಕಿ ॥
ಸಾತಿಶಯದ ರುಂಡಮಾಲೆಯ ಧರಿಸಿದ । ನೂತನ ಶಿವನಂತಿಹನು ॥ ೩೧ ॥

ಕಾಲಪೆಂಡೆಯವ ಚರಣಯುಗಲದೊಳಿಟ್ಟು । ಮೇಲು ರನ್ನದ ಕಂಕಣವ ॥
ಲೀಲೆಯಿಂ ಕರದೊಳಗಿಟ್ಟು ನೇವಳವ ಭೂ- । ಪಾಲನ ಮಧ್ಯದೊಳಿಕ್ಕಿ ॥ ೩೨ ॥

ಇವು ಮೊದಲಾದ ಪಲವು ಭೂಷಣಗಳ । ಸವಿನಯದಿಂದಲಂಕರಿಸಿ ॥
ಕುವರನ ಶಿರಕೆ ಮುತ್ತಿನ ಬಾಸಿಗವನು । ವಿವರಣದಿಂ ಕಟ್ಟಿಸಿದರು ॥ ೩೩ ॥

ಶಿರದೊಳು ಧರಿಸಿ ಮುತ್ತಿನ ಬಾಸಿಗವನು । ಮೆರೆದನೆಂತೆನೆ ಯರಿವರೆಯ ॥
ಶಿರದೊಳು ಧರಿಸಿದ ಚಂದ್ರಮೌಳಿಯದೊಂ- । ದೆರಕವನಾಂತು ರಾಜಿಸಿದ ॥ ೩೪ ॥

ನೊಸಲೊಳು ತಿಲಕವ ತಿದ್ದಿ ಸುವರ್ಣದ । ಎಸಳು ಪಟ್ಟಕವ ಭಾಳದೊಳು ॥
ಶಶಿಮುಖಿಯರು ಶೋಭನವ ಪಾಡುತ ತಾವು । ಕುಶಲದಿ ಕಟ್ಟಿದರಾಗ ॥ ೩೫ ॥

ರನ್ನದ ಕೈಸಂಬನು ಹಸ್ತದೊಳಗಿಟ್ಟು । ಹೊನ್ನೊರೆ ಬಾಕನು ಪಿಡಿದು ॥
ಗನ್ನಕಾರನು ಸಿಂಗರವಾಗಿ ಎಸೆದನು । ಹೊನ್ನಪರ್ವತದ ಮಾಳ್ಕೆಯೊಳು ॥ ೩೬ ॥

ಇತ್ತಲು ಹದಿನಾರು ಮಂದಿ ಕುವರಿಯರು । ಚಿತ್ತರದಿಂದ ಸಿಂಗರಿಸಿ ॥
ಮುತ್ತಿನ ಪಲ್ಲಕ್ಕಿಗಳನೇರಿ ಕೆಳದಿಯ- । ರ್ಸುತ್ತಿ ಬರಲು ನಲ್ಮೆಯಿಂದ ॥ ೩೭ ॥

ಪಲವು ವಾದ್ಯಂಗಳು ಮೊರೆದವು ಭೋರೆಂದು । ಲಲನೆಯರ್ಧವಲ ಶೋಭನವ ॥
ಒಲವಿಂದ ಪಾಡುತ ಧಾರಾಗೃಹಕಾಗಿ । ಚೆಲುವಿಂದ ಬಂದಂದಣವ ॥ ೩೮ ॥

ಹರುಷದಿಂದಿಳಿದು ಮುತ್ತಿನ ಮೆಟ್ಟಕ್ಕಿಯ । ಗುರುಕುಚೆಯರು ತಾವೇರಿ ॥
ಮುರುಕದೊಳೊಂದೆ ಸಾಲಾಗಿ ನಿಂದರು ತಾವು । ಮೆರೆವ ಪುತ್ಥಳಿಗಳೆಂಬಂತೆ ॥ ೩೯ ॥

ಮುತ್ತಿನ ಜವನಿಕೆ ಹಾಕಿತು ಸಾರಿಯ- । ರುತ್ತಮ ಧವಲ ಶೋಭನವ ॥
ಅಳ್ತಿಯಿಂ ಪಾಡುತ್ತಲಿರಲಿತ್ತ ಜ್ಞಾನೇಂದು । ಉತ್ತಮನಾಯಕನಾಗ ॥ ೪೦ ॥

ತ್ರಿಜಗದ್ಭೂಷಣವೆಂದೆಂಬ ಪಟ್ಟದ । ಗಜದ ಮಸ್ತಕವ ಲೀಲೆಯೊಳು ॥
ಸುಜನೈಕ ಬಾಂಧವನೇರಿ ಭೇರೀರವ । ತ್ರಿಜಗವ ಮುಸುಕಿತೇನೆಂಬೆ ॥ ೪೧ ॥

ಪಿಂಡಿಗಂಕಣಝುಣರೆನೆ ಖೇಚರಿಯರು । ದುಂಡುದೋಳೆತ್ತಿ ತಲೆಯೊಳು ॥
ಮಂಡಲಪತಿಗಿಕ್ಕೆಲದೊಳು ನಿಂದು ಪ್ರ- । ಚಂಡೆಯರಿಕ್ಕೆ ಚಾಮರವ ॥ ೪೨ ॥

ಸೋಗೆವಿಂಡುಗಳಂದದಿ ಖೇಚರಿಯರು । ರಾಗದಿಂ ಕೆಳಗೆ ನಟಿಸುತ ॥
ಭೂಗಧಿನಾಥನ ಮನಕೆ ಸಂತಸವನು । ಬೇಗದಿಂ ಮಾಳ್ಪರೇನೆಂಬೆ ॥ ೪೩ ॥

ದ್ವಿರದ ತಾ ಮಂದಗಮನದೊಳು ನಡೆಯಲು । ಕರೆದರಾಕಾಶಬಾಣವನು ॥
ತರತರದೊಳು ಚಂದ್ರಜ್ಯೋತಿಯ ಪೊತ್ತಿಸಿ । ಗರುವರು ಪಿಡಿಯೆ ಸಾಲಾಗಿ ॥ ೪೪ ॥

ಮಲ್ಲಿಗೆಯುರಳಿನ ಬಿರುಸುಚಾಂಪೇಯದ । ಫುಲ್ಲ ಬೀರಿಸುತ ಮರೆಯೊಳು ॥
ನಿಲ್ಲದೆಸಗಿದ ಬಿರುಸು ಚಕ್ರಬಾಣಗ- । ಳಲ್ಲಲ್ಲಿ ಭೋರ್ಮೊರೆದಪವು ॥ ೪೫ ॥

ಇಂತು ಮೆರೆವಣಿಗೆಯಾಗಿ ದಿಬ್ಬಣವಸೋ- । ರಂತೆ ಬಿಟ್ಟರೆ ಹೆಣ್ಣಿನವರು ॥
ತಿಂಥಿಣಿ ನೆರೆದಾಗೈರಣೆಗಳ ಕೊಂಡು । ಸಂತೋಷದೊಳು ಪೋಗಲತ್ತ ॥ ೪೬ ॥

ಕರಿಯ ಮುಂದಕೆ ನಡೆಯಿಸೆ ದಿಬ್ಬಣವನು । ತೆರಳಿಸಿ ಮದುವೆಮಂಟಪಕೆ ॥
ಹರುಷದೊಳಗೆ ಬರುತಿರೆ ಹೆಣ್ಣಿನ ಪೈಕಿ । ತ್ವರಿತದಿಂದಿದಿರಾಗಿ ಬಂದು ॥ ೪೭ ॥

ಮುತ್ತಿನಕ್ಷತೆ ಬೆಳ್ಳಿಚಿನ್ನದ ಪುಷ್ಪದಿಂ- । ದಳ್ತಿಯಿಂದಿಟ್ಟಾಡುತಾಗ ॥
ವೃತ್ತಕುಚೆಯರು ಶೋಭನಧವಲಂಗಳ । ರಕ್ತಕಂಠದಿ ಪೇಳುತಿರಲು ॥ ೪೮ ॥

ಇದಿರ್ಮುಖದೊಳು ಬಂದ ದಿಬ್ಬಣಕೂಡೆ ಮ- । ತ್ತೊಮ್ಮುಖದೊಳು ನಡೆತಂದು ॥
ಸಮ್ಮಾನದಿಂ ಗಜವಿಳಿದು ಹಾವುಗೆ ಮೆಟ್ಟಿ । ಕಮ್ಮಗಣೆಯನಂದದೊಳು ॥ ೪೯ ॥

ಕುವರ ನಡೆದು ಬಂದು ಪೀಠದಿ ಕುಳ್ಳಿರೆ । ದಿವಿಜಧನುವು ಹರಿಬಳನು ॥
ಸವಿನಯದಿಂದಳಿಯನ ಪಾದ ತೊಳೆಯಲು । ಭುವನೇಶ ನಡೆತಂದು ಮುದದಿ ॥ ೫೦ ॥

ಮೆಟ್ಟಕ್ಕಿಗೂಡೆಯ ಕಡುಗಾಡಿಯೊಳು ತಾನು । ಮೆಟ್ಟಿ ನಿಲಲು ವಾದ್ಯ ಕೋಟಿ ॥
ಕುಟ್ಟಿದುವಾಗ ದಾಂದಳಿರೆಂದು ದಿಕ್ಕುಗ- । ಳ್ಮುಟ್ಟುತ ರಭಸದೇಳ್ಗೆಯೊಳು ॥ ೫೧ ॥

ಭೂರಿ ಬ್ರಾಹ್ಮಣರಾಯತವಾಯತಮೆಂದು । ಸೇರುವೆಯಿಂ ನಿಂದುಕೊಂಡು ॥
ಚಾರು ಘೋಷಣೆಗಳೆಯಲುವಾಯತಮೆಂದು । ಬೀರಿದರ್ಮುತ್ತಿನಕ್ಷತೆಯ ॥ ೫೨ ॥

ವರಲಗ್ನವನು ಸಾಧಿಸಿ ಜೋಯಿಸರಾಗ । ತೆರೆಯ ಜಾರಿಸಿಯಾರ್ಯಜನರು ॥
ಹರುಷದಿಂದೊಂದೆ ಲಗ್ಗಲಿ ಜಯಜಯವೆನೆ । ಮೊರೆದವು ಪಲವು ವಾದ್ಯಗಳು ॥ ೫೩ ॥

ಈರಾರು ಸಗ್ಗದ ನಾರಿಯರ್ಕೈತಂದು । ಸೇರುವೆಯಿಂದ ಸಾಲಾಗಿ ॥
ಧೀರನ ವರಿಸುವೆವೆಂದು ನಿಂದಂದದಿ । ವಾರಿಜಾಕ್ಷಿಯರು ರಾಜಿಪರು ॥ ೫೪ ॥

ಹದಿನಾರು ಸಗ್ಗದೊಳಾಗುವ ಸುಖವನು । ಮದುಮಗ ! ನಾವೀಗ ನಿನಗೆ ॥
ಒದವಿಪೆವೆಂಬ ವಿಡಾಯುದಿಂ ಕುವರಗೆ । ಸುದತೀರು ಮಾಲೆ ಸೂಡಿದರು ॥ ೫೫ ॥

ಹರಿಬಲ ಹರಿಧನು ಖೇಚರರೀರ್ವರು । ಹರುಷದಿಂದಲೆ ತಾವೈದಿ ॥
ದೊರೆಗಳ ದೇವನ ಎಡ-ಬಲದಲಿ ನಿಂದು । ಬರಿಸಿ ಮೊದಲು ಅನುಮತಿಯ ॥ ೫೬ ॥

ದೊರೆಯ ಶ್ರೀ ಪಾಣಿಪದ್ಮದ ಮೇಲೆಯನುಮತಿಯ । ಮೆರೆವ ತಳಿರು ಹಸ್ತವನು ॥
ಇರಿಸಿ ಚಿನ್ನದ ಗಿಂಡಿಯನೆತ್ತಿ ಈರ್ವರು । ಎರಕದಿಂ ಧಾರೆಯೆರೆದರು ॥ ೫೭ ॥

ತದನಂತರದೊಳು ನಂದವತ್ಯಾದಿಯ । ಸುದತೀಮಣಿಯೋರ್ವೋರ್ವರನು ॥
ಚದುರರ ದೇವಗೆ ಕೈಧಾರೆಯೆರೆದರು । ಸದೆವ ವಾದ್ಯದ ಗಲಭೆಯೊಳು ॥ ೫೮ ॥

ಪನ್ನೀರ ಧಾರೆಯನೆರೆದು ಹಸೆಗಳೊಳು । ಚೆನ್ನೆಯರನು ಚೆನ್ನಿಗನು ॥
ಸೊನ್ನಾರದಿಂದ ಹವನಕುಂಡವನು ಸಂ- । ಪನ್ನರು ಬಲಗೊಳಿಸಿದರು ॥ ೫೯ ॥

ಹಸೆಯೊಳು ಕುಳಿರಿಸಿ ಖೇಚರಾಂಗನೆಯರು । ಹಸನಾದಾರತಿಗಳನೆತ್ತಿ ॥
ಹೊಸ ಮುತ್ತಿನಕ್ಷತೆ ಸೇಸೆಯನಿಟ್ಟರು । ವಸುಧೆಯನಾಳಿ ನೀವೆಂದು ॥ ೬೦ ॥

ನೆರೆದಿರ್ದ ಖೇಚರನಾಯಕರೆಲ್ಲರು । ಪಿರಿಯುಡುಗೊರೆ ಮುಯ್ಯನಿಕ್ಕಿ ॥
ಮೊರೆದವು ವಾದ್ಯಕೋಟಾಕೋಟಿ ದಿಕ್ತಟ । ಭರಿತವಾಗುವ ನಾಳ್ಕೆಯೊಳು ॥ ೬೧ ॥

ಭೂಸುರರಿಗೆ ಕವಿಗಳಿಗೆ ವಿದ್ವಾಂಸರ್ಗೆ । ರಾಶಿ ರಾಶಿಯ ಹೊನ್ನು ಹಣವ ॥
ಆ ಸಮಯದಿ ಹರಿಬಲ ಶಕ್ರಧನುಗಳ್ವಿ- । ಲಾಸದಿ ಭೂರಿದಾನವನು ॥ ೬೨ ॥

ಬಿತ್ತರದಿಂ ಕೊಟ್ಟು ಕಳುಹಿಸಿ ನೃಪರಿಗೆ । ಉತ್ತಮಯುಡುಗೊರೆಯಿತ್ತು ॥
ಅಕ್ಕರೆಯಿಂದಾತನ ಓಕುಳಿ ನಡೆಸಿ ಮ- । ತ್ತಿತ್ತ ಬಳಗ ಬಂಧುವೆರಸಿ ॥ ೬೩ ॥

ಹರಿಬಲ ಹರಿಧನು ನಾಲ್ಕನೆ ದಿನದೊಳು । ವಿರಚಿಸಿ ನಾಗವಲ್ಲಿಯನು ॥
ಹಾರಿಗೆಯಿಂ ಕಂಬ ಬಲಿಯನು ನಡೆಸಿ ಮ- । ತ್ತಿರುಳೊಳು ಬಿಡಲು ಕಂಕಣವ ॥ ೬೪ ॥

ವರದಂಪತಿಗಳ್ ಸುಖಾರ್ಣವದೊಳು ಮೂಡಿ । ನೆರೆ ಮುಳುಗಾಡುತಲಿಹರು ॥
ಒರೆಯಲದೇನ ಸಕಲಜನ ಬಲ್ಲುದ । ತೆರೆದಿರುಶನವನು ಮಾಡಿ ॥ ೬೫ ॥

ಸುದತಿಯರುಗಳಲೋಚನ ಕೈರವ ಚಂದ್ರ । ಬುಧಜನಕಮಲ ಭಾಸ್ಕರನು ॥
ಮದವದರಾತಿ ದರ್ಪವ ವಿದ್ರಾವಣ । ಚದುರರ ದೇವನೊಪ್ಪಿದನು ॥ ೬೬ ॥

**॥ ಅಂತು ಸಂಧಿ ೮ಕ್ಕಂ ಪದ ೧೧೪೩ಕ್ಕಂ ಮಂಗಲಂ ॥**

## ವಿದ್ಯಾಧರರನ್ನು ಗೆಲಿದುದು.

ಕುವರಗೆ ಸಂಗೀತಪುರದೊಳು ಪಟ್ಟವ । ಬಿವಿಚರರ್ಕಟ್ಟಿದುದೊರವೆ ॥ ಪ ॥

ಅಷ್ಟಾದಶದೋಷವರ್ಜಿತ ಕ್ರೋಧ ಚ- । ತುಷ್ಟಯ ಸುಮನಘರಟ್ಟಾ ॥
ನಷ್ಟಕಿಲ್ವಿಷ ಶ್ರೀ **ಶಾಂತಿಜಿನಾಧೀಶ** । ನಷ್ಟವ ಮಾಡೆನ್ನಘವ ॥ ೧ ॥

ಅನುಮತ್ಯಾದಿ ಕನ್ಯಾರತ್ನದೊಡಗೂಡಿ । ಜನಪ ಸರಸವಿನೋದದೊಳು ॥
ದಿನವನು ಕಳೆವುತ ಸುಖವೆಂಬಾರ್ಣವದೊಳು । ಘನವಾಗಿ ತೇಂಕಾಡುತಿರಲು ॥ ೨ ॥

ಒಂದಾನೊಂದು ಪಗಲು ಸಿಂಹಬಲನು ಜ್ಞಾ- । ನೇಂದುವಿನೊಡನಿಂತು ನುಡಿದ ॥
ಮಂದಭಾಗ್ಯನು ವಜ್ರಕಂಠ ನಿನ್ನೊಳು ಕಾದಿ । ಸಂದನು ಯಮಗೆ ತುತ್ತಾಗಿ ॥ ೩ ॥

ಅವನಿಗೆ ಸಂತಾನವರ್ಜಿತವದರಿಂದ । ಕುವರ ! ತದ್ರಾಜ್ಯಕ್ಕೆ ನೀನೇ ॥
ತವೆ ಕರ್ತೃವೆಂದು ನುಡಿಯಲು ಸುಜ್ಞಾನೇಂದು । ಕುವರ ಮಾವನೊಳಿಂತು ನುಡಿದ ॥ ೪ ॥

ಕುಲಿಶಗಲಗೆ ಸಂತಾನವಿಲ್ಲದೊಡೇನು । ಒಲವಿನ ದಾಯಾದರುಗಳು ॥
ನೆಲದೊಳಗಾರು ಇಲ್ಲವೊ ಎನಲವರಿಗೆ । ನಲವಿನಿಂ ಪಟ್ಟವ ನಾವು ॥ ೫ ॥

ಕಟ್ಟುವೆವೆಂದು ಜ್ಞಾನೇಂದು ನುಡಿಯಲೀ । ಬೆಟ್ಟದ ಮೇಲೆ ಅವನಿಗೆ ॥
ಶಿಷ್ಟದಾಯಾದರಿಲ್ಲದರಿಂದ ನೀನೆ ಆ । ಪಟ್ಟಣಕ್ಕೊಡೆಯನೆಂದೆನಲು ॥ ೬ ॥

ಪ್ರಸ್ಥಾನ ಭೇರಿಯ ಪೊಯಿಸಿ ಜಿನಾಂಘ್ರಿಗೆ । ಮಸ್ತಕವನು ತಾನು ಚಾಚಿ ॥
ವಸ್ತುವಾಹನಗಳ ಭೂರಿದಾನವ ಸ- । ಮಸ್ತರಿಗಿತ್ತು ತಣಿಪಲು ॥ ೭ ॥

ಹರಿಧನು ಹರಿಬಲರೀರ್ವರು ಒಡಬರ- । ಲರಮಗನಧಿಕ ಲೀಲೆಯೊಳು ॥
ತರುಣಿಯರುಗಳು ಸಮನ್ವಿತರಾಗಿ ತಾ । ವರರತ್ನಮಯ ವಿಮಾನವನು ॥ ೮ ॥

ಭರದಿಂದಲಿರದೇರಿಯಂಬರ ಪಥದೊಳು । ಹರುಷದೊಳಗೆ ಪೋಗುವಾಗ ॥
ನೆರೆಗಲಿ ಜ್ಞಾನೇಂದು ರಾಜ್ಯಸಂಪದವನು । ಎರಕದಿ ನೋಡಿದನಿಂತು ॥ ೯ ॥

ನಂದನವನದಲ್ಲಿ ಕಲ್ಪವೃಕ್ಷಂಗಳ । ಬಂಧುರವಾದ ಶಾಖೆಯೊಳು ॥
ವೃಂದಾರಕ ವಧೂವರರುಯ್ಯಲಾಡುವ- । ದಂದ ಕಂಡನು ಜ್ಞಾನೇಂದು ॥ ೧೦ ॥

ಒಂದೆಡೆಯೊಳು ಖೇಚರಮಿಥುನಂಗಳು । ಮಾಂದಳಿರುಗಳನು ಹಾಸಿ ॥
ಕಂದರ್ಪಕೇಳೀಲಿ ತಣಿದೊರಗಿದುದ ಜ್ಞಾ- । ನೇಂದು ಕುವರನು ನೋಡಿದನು ॥ ೧೧ ॥

ಕೆಲವೆಡೆಯೊಳು ದಂಪತಿಗಳು ತಾವರೆ- । ಯಲರುಗೊಳವನೊಳಪೊಕ್ಕು ॥
ನಲವಿನಿಂ ಹೊನ್ನಂಡೆ ಜೀರ್ಕೊಳವೆಯನಾಂತು । ಜಲವ ಸೇಚಿಸುವುದ ಕಂಡ ॥ ೧೨ ॥

ಕಳಭಂಗಳು ತಾಮರೆಗೊಳಗಳ ಪೊಕ್ಕು । ತಿಳಿನೀರು ಕುಡಿವಾಗ ತಮ್ಮ ॥
ನೆಳಲು ಬಿಂಬಿಸಿ ಮರಿಯಾನೆಗಳೆಂದಾಗ । ಘಳಿಲನೆ ಪೊಡೆವುದ ಕಂಡ ॥ ೧೩ ॥

ಒಂದೆಡೆಯೊಳು ತಮ್ಮಯ ಕಣ್ಗಳ ಮುಚ್ಚಿ । ತಂದು ನಾಸಿಕದಿ ದೃಷ್ಟಿಯನು ॥
ನಿಂದು ಧ್ಯಾನಿಸುವ ಯಮಿಗಳ ಭಾವವ ಜ್ಞಾ- । ನೇಂದು ತಾ ಕಂಡು ಕೈಮುಗಿದ ॥ ೧೪ ॥

ಪರಮಾಗಮ ಶಬ್ದ ತರ್ಕ ಜ್ಯೋತಿಷ್ಯಾದಿ । ವರ ಶಾಸ್ತ್ರವ ಶಿಷ್ಯಜನಕೆ ॥
ಒರೆವುತ ತೆಟ್ಟಿತೆಟ್ಟಿಯೊಳೋಲಗಗೊಟ್ಟ । ಗುರುಜನಂಗಳ ಕಂಡನರಸ ॥ ೧೫ ॥

ಒಂದೆಡೆಯೊಳು ಗಜಮಸ್ತಕವನು ಏರಿ । ಹಿಂದಣ ಚರಣದಿಂದೌಂಕಿ ॥
ಮುಂದಣ ಚರಣದಿಂ ಬಡಿದು ಮಿದುಳ ತಿಂಬ- । ದೊಂದು ಕೇಸರಿಯ ತಾ ಕಂಡು ॥ ೧೬ ॥

ದಾಡೆಯೊಡೆದು ನೆತ್ತರು ಸುರಿವುತ ಶಿರ- । ದೋಡು ಚಿಪ್ಪು ಬೇರೆಯಾಗಿ ॥
ಕ್ರೋಡಗಳೆರಡು ಕಾದುವ ಚೆಂದವನಾ । ಗಾಡಿಕಾರನು ಕಂಡನಾಗ ॥ ೧೭ ॥

ದಂತಿದಂತಾವಲಗಳು ಸುಂಡಿಲ ಸುತ್ತಿ । ದಂತದಂತವ ಮೊಗಕಿಟ್ಟು ॥
ಹಿಂತು-ಮುಂತಾಗದೆ ತಿವಿದಾಡುವುದನು । ಕಾಂತೆಯರಿಗೆ ತೋರಿಸಿದ ॥ ೧೮ ॥

ವಸಲಕುಮಿಯ ಗಂಭೀರ ನಾಭಿಗಳಂತೆ । ವನದೊಳು ಪಲವು ಕೂಪಗಳು ॥
ಮಿನುಗುವ ಜಲದಿಂದ ರಾಜಿಸುವುದನಾ । ಜನನಾಥ ಕಂಡು ಸಂತಸದಿ ॥ ೧೯ ॥

ಕಳಭ ಸಮೂಹವು ಬೇಗದೊಳೈತಂದು । ಕಳವೆಯ ಕ್ಷೇತ್ರವ ಪೊಕ್ಕು ॥
ಬಳಬೆಯ ಹಿರಿದು ಕಂತೆಯ ತಲೆಯೊಳು ಪೊತ್ತು । ಘಳಿಲನೋಡುವುದ ತಾ ಕಂಡ ॥ ೨೦ ॥

ಕಳನ ಕಾದಿರ್ದ ಪುರುಷನ ಹಿಂಗಡೆ ಬಂದು । ಕಳಭ ಮೆಲ್ಲನೆ ಕೈಯ ನೀಡಿ ॥
ಚರಣವಿಡಿದು ಕೆಡಹಿ ಹುಲ್ಲು ಕಂತೆಯ । ಭರದಿ ಕೊಂಡೋಡಲು ಕಂಡ ॥ ೨೧ ॥

ಇಂತು ರಾಜಿಸುವ ಕೌತುಕವನು ನೋಡುತ । ಕಂತು ಸದೃಶ ರಾಜೇಂದ್ರ ॥
ತಾಂತಳುವದೆ ಬರುತಿರೆ ವಜ್ರಕಂಠನ । ಮಂತ್ರಿಯಾ ವಾರ್ತೆಯ ಕೇಳಿ ॥ ೨೨ ॥

ನನ್ನೊಡೆಯನಿಗೆಂದಿರ್ದ ಕನ್ನಿಕೆಯರ । ಚೆನ್ನೆಯರನು ತಾನು ವರಿಸಿ ॥
ನನ್ನೊಡೆಯನ ಕೊಂದಾತನ ಪುರವನು । ತಾಂ ನೆರೆಯಾಳುವೆನೆಂದು ॥ ೨೩ ॥

ಬರುತಿರ್ದನು ಗಡ ಮಾನಂದಿರೊಡಗೂಡಿ । ದುರುಳ ಭೂಚರರ ಹುಡುಗನು ॥
ಭರದಿಂದ ವಿಜಯಾರ್ಧಗಿರಿಯಿಂದ ಹೊರಡಿಸಿ । ಬರಬೇಕೆಂದು ನಾಲ್ವೆರದ ॥ ೨೪ ॥

ಬಲಸಮೇತದಿ ಖೇಚರನಾಯಕರನು । ಕಲಹಲಂಪಟಿ ಮೇಘರಥನು ॥
ಬಲು ಕೋಪದಿಂ ಕೂಡಿಕೊಂಡು ವಿಮಾನವ- । ನಲಸದೆ ಏರಿಯಾತುರದಿ ॥ ೨೫ ॥

ಕಡುಬೇಗದಿಂ ಬಂದು ಬೊಬ್ಬಿರಿದಾಲುತ । ಹಿಡಿದು ಜಗಳವ ಹಿಳುಕಿನ ॥
ಗಡಣವ ಸುರಿಯಲು ಹರಿಬಲನೀಕ್ಷಿಸಿ । ಒಡನೆ ಬಲಕೆ ಕೈವೀಸೆ ॥ ೨೬ ॥

ಹರಿಬಲನಾತ್ಮಜ ವಾಯುವೇಗನು ಕೂಡಿ । ಬರುವ ಬಲಕೆ ಇದಿರಾಗಿ ॥
ಭರದಿಂದ ನಡೆತಂದು ಕಣೆಗಳ ಸರಿಯನು । ಸುರಿದನು ಬಲುಹೂಳುವಂತೆ ॥ ೨೭ ॥

ತರಿದರು ಕರಿಹಯ ಶುಂಡಿಲ ಕಾಲ್ಗಳ- । ನಿರಿದರು ಕಾಲಾಳುಗಳ ॥
ಕೊರೆದರು ಖೇಚರರುಗಳ ತಲೆಗಳನು । ಹುರಿದರು ರಥವ ಬಾಣದೊಳು ॥ ೨೮ ॥

ಹತ್ತೆಂಟು ಗಣೆಗಳು ಮೈಯೊಳು ತಾಗಲು । ತತ್ತರದಿಂ ಮೇಘರಥನು ॥
ಅತ್ತಿತ್ತ ನೋಡದೆ ಮುರಿದೋಡಿ ಕೋಂಟೆಯ । ಸತ್ವಹೀನನು ಪೊಕ್ಕನಾಗ ॥ ೨೯ ॥

ಬಾಗಿಲ ಹಾಕಿಸಿ ಬಲುಘಾಯ ಸೊಕ್ಕಿಂದ- । ಲಾಗಲೊರಗೆ ತನ್ನ ಗೃಹದಿ ॥
ಭೂಗಧಿನಾಥನು ಬರುತಿರಲಿತ್ತಲು । ಬೇಗದಿಂದುಭಯ ಶ್ರೇಣಿಯಲಿ ॥ ೩೦ ॥

ಬಲುಹುಯಿಲಿಡೆಗೊಂಡುದು ಖಚರರುಗಳ । ಕಲಕಲಯುಣ್ಮೆತ್ತೆಲ್ಲೆಲ್ಲು ॥
ಹೊಳವುಮೋರಿದವು ಖಡ್ಗಂಗಳ ನಿವಹವು । ಫಲಕಗಳ್ ಝುಲಿಝುಲಿರೆಂದು ॥ ೩೧ ॥

ಜೋಯಿಸಲೋಕವೆ ಗಿರಿಗಿಳಿತಂದುದೊ । ಒಯ್ಯಾರದಿಂ ರಕ್ಕಸರ ॥
ಪಾಯಿದಳವೆ ಬಂದು ನೆರೆದಂತಂಬರದಲ್ಲಿ । ಭೋಂಯೆಂದಾಲುತ ಬಂದು ನಿಲಲು ॥ ೩೨ ॥

ರನ್ನವಿಮಾನದ ಸುತ್ತ ಕೀಲಿಸಲಿರ್ದ । ಹೊನ್ನಗಂಟೆಯ ಬಲು ಧ್ವನಿಯು ॥
ಉನ್ನತವಾಗಿ ಗಗನವನು ವ್ಯಾಪಿಸಿ । ರನ್ನಮುಕುಟಪ್ರಭೆ ಬೆಳಗೆ ॥ ೩೩ ॥

ತೂಗುತ ಖಡ್ಗವ ನೀವುತ ನಾರಿಯ । ಲಾಗಿಸಿ ಹರಿಗೆಯಲುಗುತ ॥
ಬೇಗದಿ ಕಿವಿವರೆ ತೆಗೆವುತ ಕಣೆಗಳ । ತಾಗಿದರ್ಬಂದು ಖೇಚರರು ॥ ೩೪ ॥

ಮಳೆಗಾಲದಂತೆ ಬಲ್ಗಣೆಗಳ ಗಣಗಳ । ತುಳುಕಲು ಪವನಸುಗತಿಯು ॥
ಬಲುಬಲಸೆಡೆಯಲು ವಾಯುವೇಗನು ಕಂಡು । ಶಿಲೀಮುಖವನು ಜೇವಡೆದು ॥ ೩೫ ॥

ಸರಳುಗಳನು ಕಿವಿವರೆ ತೆಗೆವುತ ತಾನು । ಬರುವ ಖಚರ ಸೈನಿಕರ ॥
ತರಿದೊಟ್ಟಲು ಮುನ್ನೂರಕ್ಷೋಹಿಣಿ । ನೆರೆಗಲಿ ಖಚರರೊದಗಲು ॥ ೩೬ ॥

ಅದ ಕಂಡು ಜ್ಞಾನೇಂದು ಸಾಸಿರವೊಗವೆಂ- । ಬೊದವಿದ ವಜ್ರಧನುವಿಗೆ ॥
ಚದುರರ ದೇವ ಹಸ್ತವ ತಂದು ಪಿಡಿಯಲು । ಬೆದರಿತು ಸುರ-ದೈತ್ಯಗಣವು ॥ ೩೭ ॥

ಶರವನು ಮಂತ್ರಿಸಿಡಲು ನೂರು ಸಾಸಿರ । ಕರಿಯೈದು ಲಕ್ಕ ರಥಗಳು ॥
ಹರಿಯೊಂದುವರೆ ಕೋಟಿ ವ್ಯೆಯೊಳು ಸಾಸಿರ । ಸರಳು ತಟ್ಟುರ್ಚೆ ಕೆಡೆಯಲು ॥ ೩೮ ॥

ಉರಿಯ ಬಾಣಗಳ ಬಿಡಲು ಭೋರುಭೋರೆಂದು । ಮೆರೆವುತ ಬರೆ ಖೇಚರರು ॥
ನೆರೆ ಬೆರ್ಚಿ ನೋಡಲಮ್ಮದೆ ದೃಷ್ಟಿಗಳನು । ಕರದೊಳು ಮುಚ್ಚಿದರೆಲ್ಲ ॥ ೩೯ ॥

ಅರೆಬರ ತನ್ನ ವಿಮಾನವಿಕ್ಕಡಿಯಾಗೆ । ಯರಬರ ವಿದ್ಯೆ ಬಿಟ್ಟೋಡೆ ॥
ಅರೆಬರ ಧನು ಕೈದುಗಳು ಕಾಣಿಸದಿರೆ । ನೆರೆ ಬೆರ್ಚಿ ಖೇಚರ ನಿವಹ ॥ ೪೦ ॥

ಇವನೊಳು ಕಾದಿ ಗೆಲುವುದೆಮಗಳವಲ್ಲ । ಇವ ನೋಡೆ ಕಾರಣಪುರುಷ ॥
ಜನನಾದರು ಒಮ್ಮೆ ಮುರಿದೋಡುವನೆನೆ । ನವಗೆ ಸಂಧಾನವೆ ಮುಖ್ಯ ॥ ೪೧ ॥

ಎಂದು ವಿವೇಕಿಗಳೆಲ್ಲರು ನೆರೆದಾಗ- । ಲಂದೋರ್ವ ಮಂತ್ರಿಯು ಕಳುಹೆ ॥
ಬಂದು ಕೈಮುಗಿದು ನಮ್ಮೊಡೆಯರು ನಿಮ್ಮೊಳು । ಸಂಧಾನಕೆ ಬರುತಹರೆ ॥ ೪೨ ॥

ಎನೆಯಷ್ಟರೊಳಗೆ ವಿದ್ಯಾಧರರೆಲ್ಲರು । ಇನಿಸು ಬೇಗದಿ ತಾವು ಬಂದು ॥
ಘನಪಥದೊಳು ನಿಂದು ಬೆಸಗೊಂಡನಿವನಾರು । ಮನುಜಲೋಕದೊಳಾವಲ್ಲಿ ॥ ೪೩ ॥

ಪೆಸರೇನೀತನ ಇವ ಬಂದ ಕಾರಣ- । ದೆಸಕವೇನೆನೆ ಹರಿಬಲನು ॥
ಉಸುರ್ದನು ಕಾಶ್ಮೀರದೇಶದೊಳ್ ರಾಜಿಪ । ಹೊಸ ಹೊನ್ನ ಕೋಂಟೆಯಿಂದೆಸೆವ ॥ ೪೪ ॥

ಕನಕಪುರಾಧೀಶ ಜಿನಚಂದ್ರ ಭೂಪನ । ತನುಜಾತ ಸಿಂಹವಿಕ್ರಮಿಯು ॥
ಇನಸಮ ತೇಜಸ್ವಿ ಜ್ಞಾನೇಂದುವಿನ ನಾಮ । ಮನುಜಮಂದಾರ ಗಂಭೀರ ॥ ೪೫ ॥

ಕುರುವಂಶಾಂಬರ ದಿನಮಣಿ ಶ್ರೀ ಶಾಂತಿ । ಜಿನರ ಪ್ರಪೌತ್ರನುದಾರಿ ॥
ದೊರೆಗಳ ಮಕುಟತಾಟಿತ ದಿವ್ಯಚರಣನು । ಧುರದುಂಬಿ ಕುಲಿಶಗಲನನು ॥ ೪೬ ॥

ನೆಲಕಿಕ್ಕಿ ನೆರಪಿ ನಿಮ್ಮೆಲ್ಲರ ಕೈಯಿಂದ । ಅಲಸದೆ ಪಾದಸೇವೆಯನು ॥
ಚೆಲುವ ಮಾಡಿಸಿಕೋಬೇಕೆಂದು ಬಂದನು ಎಂದು । ನಲವಿನಿಂ ಹರಿಬಲ ಪೇಳೆ ॥ ೪೭ ॥

ಆ ನುಡಿಯನು ಕೇಳಿ ಖೇಚರರೆಲ್ಲರು । ಸಾನಂದದಿಂದ ಪೊಗಳುತ ॥
ಮಾನವೇಶ್ವರನೊತ್ತಿಗೆ ನಡೆತಂದಿಂ- । ತಾನದೆ ನುಡಿದರೊಗ್ಗಿನೊಳು ॥ ೪೮ ॥

ಹುಲಿಯ ಮೀಸೆಯ ಹೆದರದೆ ಕೀಳಬಹುದೊಮ್ಮೆ । ಬಲದಿ ಸಿಂಹನ ಗುಹೆ ಪೊಕ್ಕು ॥
ಅಲಸದೆ ಕೋರದಾಡೆಯ ತರಬಹುದೊಮ್ಮೆ । ಪ್ರಳಯಕಾಲದ ಭೈರವನ ॥ ೪೯ ॥

ಮನೆಯೊಕ್ಕು ಬೆದರಿಸಬಹುದೊಮ್ಮೆ ಮಾರಿಯ । ಕನಲಿಸಬಹುದು ಕೆಣಕಿಯು ॥
ಧನುಜಲೋಕವ ಪೊಕ್ಕು ಬರಬಹುದೊಮ್ಮೆ ಈ । ಘನಶೈಲವ ಪೊಗಬರದು ॥ ೫೦ ॥

ಕಾಳಿಂದಿಮಡುವನು ಹೊಗಬಹುದೊಮ್ಮೆಯಾ- । ಶೂಲಿಯ ಜಡೆಗಳ ಪಿಡಿದು ॥
ಲೀಲೆಯಿಂದುಯ್ಯಾಲನಾಡಬಹುದು ಈ । ಶೈಲವನೇರಲಶಕ್ಯ ॥ ೫೧ ॥

ಸುರವಿಮಾನವು ಜೋಯಿಸರ ವಿಮಾನವ- । ಸುರರ ವಿಮಾನವು ನಮ್ಮ ॥
ಗಿರಿಯ ಮೇಗಡೆಯೊಳು ಹೋಗಲಮ್ಮವು ಎನೆ । ನೆರಿಗಲಿ ಇದಕ್ಕೈದುವಾವ ॥ ೫೨ ॥

ಸುರರ ಪಟ್ಟಣಕೆ ಧಾಳಿಯನಾವಿಡುವೆವು । ತಿರಿ ಕಲ್ಲಾಡುವೆವು ಗಿರಿಗಳ ॥
ಧರೆಯನಾಗಸಕೆ ಕಿತ್ತಿಡುವೆವು ನಾವು ಸಾ- । ಗರದೊಳು ಕಲ್ಲ ತೇಲಿಪೆವು ॥ ೫೩ ॥

ಇನಬಿಂಬವ ಕಾಲೊಳೊದೆದು ನೂಂಕುವೆವಾವು । ವನಧಿಯೊಳುಗುಳುವಂದದೊಳು ॥
ಇನಿಸು ಬೇಗದಿ ಮುಳುಗೇಳುವೆವಾವಿಲ್ಲಿ । ಮನುಜಲೋಕರ ಲೆಕ್ಕಿಪೆವೆ ॥ ೫೪ ॥

ಗಿರಿಗಳ ನಿರುಪೆಯಂದದಿ ಮಾಡಬಲ್ಲೆವು । ಇರುಪೆಗಳನು ಗಿರಿಯಂತೆ ॥
ನೆರೆದೊಡ್ಡಿತ ಮಾಡಬಲ್ಲೆವಂತಿರಲೀ । ಗಿರಿಯನಿನ್ನೆವರಮುಟ್ಟಿ ॥ ೫೫ ॥

ಏರಿದವರುಗಳಾರಿಲ್ಲವು ನಿನ್ನಂತ । ಧೀರರರಸುಗಳ ನಾವು ॥
ಕಾರಣಪುರುಷರ ಕಂಡು ಕೇಳಿದುದಿಲ್ಲ । ಪೂರುಷರತ್ನ ಪುಂವಾಣಿ ॥ ೫೬ ॥

ಶೂರರ ತಲೆಮಣಿ ಧೀರ ಚಿಂತಾಮಣಿ । ನಾರಿಯರಿಗೆ ಚಕ್ರಪಾಣಿ ॥
ಚಾರುಚರಿತ್ರದ ಶ್ರೇಣಿ ಕ್ಷಮೆಯಕ್ಷೋಣಿ । ವಾರಿಜಸಖನಂತೆ ತ್ರಾಣಿ ॥ ೫೭ ॥

ಭಳಿರೆ! ಭಾಪುರೆ! ಭಾಪು! ಜ್ಞಾನೇಂದು ಸುಕುಮಾರ! । ಚೆಲುವ ನಿನ್ನಡಿ ಸೇವೆ ಮಾಳ್ಪ ॥
ಬಲುಭಾಗ್ಯ ನಮಗೆ ದೊರಕಿತೆಂದು ಕೊಂಡಾಡಿ । ನಲವಿನಿಂದೆರಗಿದರಡಿಗೆ ॥ ೫೮ ॥

ವಂದಿಸಿದರಿಗೆ ಕಿಂಚಿತು ಶಿರಬಾಗುತ । ನಿಂದಿರ್ದ ಖಚರ ನಾಯಕರ ॥
ಗೊಂದಣವೆರಸಿ ನಡೆಯೆ ವಜ್ರಕಂಠನ- । ದೊಂದು ಪೊಳಲು ಕಾಣಿಸಿತು ॥ ೫೯ ॥

ಇನಬಿಂಬಗಳನು ಪಲವು ಚತುರ್ಮುಖ । ಮನದಕ್ಕರಿಂ ಕೋಂಟೆ ರೂಪ ॥
ಅನುಗೆಯಿಸಿದನೋ ಎಂಬಂತೆ ಸ್ವರ್ಣದ ಕೋಂಟೆ । ಜನಪನ ಕಣ್ಣೆ ಕಾಣಿಸಿತು ॥ ೬೦ ॥

ವಿಧುಬಿಂಬಗಳು ನಡೆದು ಬಂದು ಸಾಲಾಗಿ । ಪದಪಿ ನಿಂದವೋ ಎಂಬಂತೆ ॥
ವಿಧುಕಾಂತ ಶಿಲೆಗಳ ಕಪಿಶೀರ್ಷಂಗಳ । ಮುದದಿಂದ ಕಂಡನಾ ಕುವರ ॥ ೬೧ ॥

ಕನಕಗೋಪುರದಿಂದ ರಾಜಿಪವೈನೂರು । ಮಿನುಗುವ ಹೆಬ್ಬಾಗಿಲುಗಳ ॥
ಅನುವಾದ ರನ್ನದ ಸಾಸಿರ ಪಡಿಗಳ । ಜನತಾಧೀಶ್ವರ ಕಂಡ ॥ ೬೧ ॥

ನೀರಾನೆಗಳಿಂದ ಪೊಳೆವ ಮತ್ಸ್ಯಗಳಿಂದ । ಭೋರೆಂಬ ತೆರೆಮಾಲೆಯಿಂದ ॥
ವಾರಾಶಿಯೆಂಬಂತೆ ಪೊಳಲನು ಬಳಸಿರ್ದ । ನೀರಗಳನು ಕಂಡ ನೃಪತಿ ॥ ೬೨ ॥

ಈರಾರು ಸಾಸಿರ ಸಾಲು ವೀಥಿಗಳೊಳು । ಮಾರಾರಿ ಜಿನಗೃಹಗಳನು ॥
ಚಾರುರತ್ನಗಳ ಹರ್ಮ್ಯಾವಳಿಗಳನಾಗ । ಧೀರರರಸ ನಿಟ್ಟಿಸಿದನು ॥ ॥ ೬೩ ॥

ಹರಿಬಲ ಮೊದಲಾದ ದೊರೆಗಳು ಜ್ಞಾನೇಂದು । ಹರುಷದಿಂದಿಳಿದು ಪುಷ್ಪಕವ ॥
ಬರುತಿರೆ ಪುರಜನ ಮಂತ್ರಿಗಳೆಲ್ಲರು । ಪುರದ ಹೆಬ್ಬಾಗಿಲ ತೆಗಿಸಿ ॥ ೬೪ ॥

ಇದಿರ್ವಂದು ಜ್ಞಾನೇಂದು ಕುವರಗೆ ಕೈಗಳ । ಬೆದರ್ವ ಮನಸಿನೊಳು ಮುಗಿಯೆ ॥
ಪದರ್ವೇಡವೆಂದು ನಂಬಿಗೆಗೊಟ್ಟು ಪುರವನು । ಮಧುವಿಲ್ಲ ಪೊಕ್ಕ ಲೀಲೆಯೊಳು ॥ ೬೫ ॥

ಕರುಮಾಡವ ಗೋಪುರ ಸಜ್ಜೆವನೆಗಳ । ಮುರಿದು ನಿಟ್ಟಿಸುತ ಜ್ಞಾನೇಂದು ॥
ಪುರದ ವೀಥಿಯೊಳು ನಡೆದು ಬರುತಿರಲಾಗ । ಎರಕದಿಂ ಗಗನೇಚರಿಯರು ॥ ೬೬ ॥

ಹೊನ್ನುಪ್ಪರಿಗೆಯ ಮಾಳಿಗೆ ಮಾಡಿಲುಗಳನು । ರನ್ನದ ಕರುಮಾಡವನು ॥
ಚೆನ್ನೆಯರಿರದೇರಿ ಯಾತುರದಿಂದಾ । ಚೆನ್ನಿಗನನು ನೋಡಿದರು. ॥ ೬೭ ॥

ಸುರಲೋಕದ ಸುದತಿಯರು ಕುಮಾರನ । ವರರೂಪ ನೋಡುವೆನೆಂದು ॥
ಕರುಮಾಡವನೇರಿ ನಿಟ್ಟಿಪರೋ ಎನೆ । ಗುರುಕುಚೆಯರು ಕಂಡರವನ ॥ ೬೮ ॥

ಕಿನ್ನರ ವಧುಗಳು ಸಂಭ್ರಮದಿಂ ಬಂದು । ಹೊನ್ನುಪ್ಪರಿಗೆಯ ತಾವೇರಿ ॥
ಗನ್ನಕಾರನ ರೂಪ ನಿಟ್ಟಿಪರೋ ಎನೆ । ಕನ್ನಿಕೆಯರು ಕಂಡರವನ ॥ ೬೯ ॥

ಭೋಗಿಲೋಕದ ನಾರಿಯರು ತಾವೈತಂದು । ಬೇಗದಿಂ ಮಡಿಲುಗಳೇರಿ ॥
ರಾಗದಿಂ ಕುವರನ ನಿಟ್ಟಿಪರೋ ಎನೆ- । ಲಾ ಗರುವೆಯರು ನೋಡಿದರು ॥ ೭೦ ॥

ಕನಕಪುರವನಾಳ್ವ ಜಿನಚಂದ್ರರಾಜನ । ತನುಜನು ಗಡ ವನದೊಳಗೆ ॥
ಘನವಾದ ಕರಿಯ ಶಿರವನೇರಿದವ ಗಡ । ಇನಿಸು ಬೇಗದಿ ನಮ್ಮರಸ ॥ ೭೧ ॥

ಧುರದೊಳು ನೆಲಕ್ಕಿಕ್ಕಿ ನೆರಪಿದವನು ಗಡ । ಭರದೇಳು ಲಕ್ಷ ವಿದ್ಯೆಯನು ॥
ಹರುಷದೊಳಗೆ ಸಾಧಿಸಿದವನಿವ ಗಡ । ಘನಪುಣ್ಯವಂತನು ನಿಜದಿ ॥ ೭೨ ॥

ಸಂಗೀತಪುರಕೆ ರಾಜನು ಈತನು ಗಡ । ತುಂಗ ಪರಾಕ್ರಮಿಯಂತೆ ॥
ಸಂಗೀತ ಸಾಹಿತ್ಯದೊಳು ಚದುರನು ಗಡ । ಕಂಗಳ ಸಿರಿಯ ನೋಡೆಂದು ॥ ೭೩ ॥

ಗಗನೇಚರಿಯರೆಲ್ಲರು ತಮ್ಮೊಳು ತಾವು । ಸೊಗಸಿಂದ ನುಡಿದಾಡುವುದ ॥
ಪಗಲೆರೆಯನ ಸಮ ತೇಜಸ್ವಿ ಕೇಳುತ । ನಗುತ ಮುಂದಕೆ ನಡೆತಂದು ॥ ೭೪ ॥

ಹರಿಬಲ ಹರಿಧನುಗಳು ಮುಂತಾಗಿರ್ದ । ದೊರೆಗಳು ಸಹ ಜ್ಞಾನಚಂದ್ರ ॥
ಹರುಷದೊಳಗೆ ಪವಿಗಲಖೇಚರೇಶನ । ವರ ಮಂದಿರವನು ಪೊಕ್ಕು ॥ ೭೬ ॥

ಚಿನ್ನದಿಂದಲಿ ರಚಿಸಿದ ಬೋದಿಗೆಯಿಂದ । ರನ್ನದ ಕಂಬಗಳಿಂದ ॥
ಸನ್ನುತ ನವರತ್ನ ಕರ್ನವಿಕರ್ನದಿ । ಉನ್ನತ ಸ್ಫಟಿಕ ಭಿತ್ತಿಗಳಿಂ ॥ ೭೭ ॥

ಮರಕತದಿಂದ ರಚಿತ ಲೋವೆಗಳಿಂದ । ವರ ಮುತ್ತಿನ ಕುಚ್ಚಿನಿಂದ ॥
ಹರಿನೀಲಮಣಿಮಯವಾದ ಕುಟ್ಟಿಮದಿಂದ । ಸರಸಿಜರಾಗ ರತುನದಿ ॥ ೭೮ ॥

ವಿರಚನೆ ಮಾಡಿದ ಮತ್ತವಾರಣದಿಂದ । ಮೆರೆವ ಚಿತ್ರದ ಚಾವಡಿಯೊಳು ॥
ಪರರಾಯ ಮಸ್ತಕ ಶೂಲ ಪುಣ್ಯವಿಶಾಲ । ದೂರೆರನ್ನ ಜ್ಞಾನೇಂದು ಕುವರ ॥ ೭೯ ॥

ಹರುಷಾರ್ಣವದಿಂದೊಡ್ಡೋಲಗಗೊ- । ಟ್ಟಿರುವ ಪ್ರಸ್ತಾನದೊಳಾಗ ॥
ಭರದಿಂದ ವಿಜಯಾರ್ಧ ದಕ್ಷಿಣೋತ್ತರಗಳ । ವರ ದೇಶೋತ್ತರ ಪುರವರದ ॥ ೮೦ ॥

ನೆರಗಲಿ ಖೇಚರರಾಜರೆಲ್ಲರು ಕೂಡಿ । ಎರಕದಿಂ ಸಂಗೀತಪುರಕೆ ॥
ತ್ವರಿತದಿಂದಲಿ ಬಂದು ಜ್ಞಾನೇಂದು ಕುವರಗೆ । ಕರಗಳ ಮುಗಿದು ನಿಂದಿರಲು ॥ ೮೧ ॥

ಹರಿಬಲ ಹರಿಧನುವೀರ್ವರು ತಾವಾಗ । ಭರದಿಂದಲಾ ಕುಮಾರಕನ ॥
ಮೆರೆವ ಮಿಸುನಿಹಸೆವಣೆಯೊಳು ಕುಳ್ಳಿರಿಸಿ । ತರಿಸಿಯುತ್ತಮ ನದಿ ಜಲವ ॥ ೮೨ ॥

ಕನಕದ ಕಲಶದೊಳಗೆ ತೀರ್ಥಾಂಬುವ । ಇನಿಸು ಬೇಗದಿ ತುಂಬಿ ತಾವು ॥
ಮನುಜೇಂದ್ರ ಮಕುಟಘಟಿತ ದಿವ್ಯ ಚರಣನ । ಮಿನುಗುವ ಮಸ್ತಕಕೆರೆದು ॥ ೮೩ ॥

ಸೊರೆವಿಂಡಿಸಂದದಂಬರವನು ಪೊಡಯಿಸಿ । ನವರತ್ನ ಸಿಂಹಾಸನದೊಳು ॥
ದೊರೆಮಗನನು ಕುಳ್ಳಿರಿಸಲೊಪ್ಪಿದನು ತಾ । ಮನಸಿಜ ವಿಷ್ಟರನಂತೆ ॥ ೮೪ ॥

ಇಳೆಯಾಣ್ಮನಿಗೆ ಷೋಡಶಾಭರಣವನಿಕ್ಕಿ । ಚೆಲುವ ಜ್ಯೋತಿರ್ಮಾಲೆಯೆಂಬ ॥
ಥಳಥಳಿಸುವ ದಿವ್ಯ ಕಂಠಮಾಲೆಯನಾಗ- । ಳಳವಡಿಸಿದರು ಕಂಠದೊಳು ॥ ೮೫ ॥

ತೋರಮುತ್ತಿನ ದಿವ್ಯ ತಾರಾಹಾರವ- । ನೇರಿಸಿ ಕಂಬುಕಂಠದೊಳು ॥
ಹೀರಕಮಯವಾದ ಪಿಂಡಿಗಂಕಣವನು । ಶೂರನ ಹಸ್ತದೊಳಿಟ್ಟು ॥ ೮೬ ॥

ಜಗದಾನಂದವೆಂದೆಂಬಾಣಿಮುತ್ತಿನ । ಸೊಗಯಿಪ ಕಾಲಪೆಂಡೆಯನು ॥
ಸುಗುಣರ ದೇವನ ಚಾರು ಚರಣದಲ್ಲಿ । ಗಗನೇಶ್ವರರಳವಡಿಸಿ ॥ ೮೭ ॥

ಚೆನ್ನಿಗರರಸನರ್ಧೇಂದು ನಿಟಿಲದೊಳು । ಹೊನ್ನಿಂದ ಸವೆದ ಪದಕವ ॥
ಗನ್ನಕಾರರು ಕಟ್ಟಿಯುತ್ತಮಾಂಗದೊಳು । ರನ್ನದ ಮಕುಟವನಿಕ್ಕಿ ॥ ೮೮ ॥

ಮರಕತ ಗೋಮೇಧ ಮಾಣಿಕ್ಯ ಹರಿನೀಲ । ಕರ ಚೆಲುವಾದ ವೈಢೂರ್ಯ ॥
ವರ ಪದ್ಮರಾಗ ಹವಳ ಪುಷ್ಯ ವಜ್ರವೆಂ- । ಬುರುತರ ನವರತ್ನಗಳ ॥ ೮೯ ॥

ಪಟ್ಟಾಭಿಷೇಕನ ಜ್ಞಾನೇಂದು ಕುವರಗೆ। ಶಿಷ್ಟರು ಮಾಡೆ ವಾದ್ಯಗಳು ॥
ತೊಟ್ಟನೆ ಭೋರ್ಭೋರೆಯಲು ರಭಸಂಗಳು। ಮುಟ್ಟಿದವೆಂಟು ದಿಕ್ಕುಗಳ ॥ ೯೦ ॥

ಕನಕದಂಡವ ಚಾಮರಗಳ ಹದಿನಾರು। ವನಿತೆಯರಿಕ್ಕೆ ಕಂಕಣದ ॥
ಘನರವ ಝಂಣಝಂಣರೆನೆ ಕಳ ಕಂಠದ। ನಿನದವೋ ಎಂಬಂದದೊಳು ॥ ೯೧ ॥

ಸುತ್ರಾಮಲೋಕದಿಂದಿಳಿದು ಬಂದಮರೀರ। ಯಾತ್ರೆಯೋ ಎಂಬಂದದೊಳು ॥
ನೇತ್ರದ ಕೊನೆಯಿಂದ ವಿಟರ ಸೋಲಿಸುತಾಗ। ಪಾತ್ರವಾಡಿತು ಖೇಚರಿಯರ ॥ ೯೨ ॥

ಆ ವೇಳೆಯೊಳಗಂಬರಚರರೆಲ್ಲರು। ತೀವಿದ ಸಂತೋಷದಿಂದ ॥
ಕೋವಿದ ಜ್ಞಾನಚಂದ್ರಗೆ ತಾವು ತಂದಿರ್ದ। ಪಾವನತೊಡರಿತ್ತರಿಂತು ॥ ೯೩ ॥

ಅಂಬರತಿಲಕದ ಖೇಚರೇಶ್ವರನಾ। ಕುಂಭಿನೀಪತಿಗೆ ಲೀಲೆಯೊಳು ॥
ಚೆಂಬೊನ್ನಿನಿಂದ ಸಮೆದ ಚಾಮರವೆಂಟ। ಸಂಭ್ರಮದಿಂದ ತಾನಿತ್ತ ॥ ೯೪ ॥

ಗಗನತಿಲಕವೆಂಬ ಪಟ್ಟಣದೊಡೆಯನು। ಧಗಧಗಿಸುವ ಮೌಕ್ತಿಕದ ॥
ಸೊಗಯಿಪ ಸುಶ್ವೇತ ಛತ್ರಯುಗಲವನಾ-। ಗಗಣಿತ ಪುಣ್ಯನಿಗಿತ್ತ ॥ ೯೫ ॥

ಸಿಂಹಪುರಕೆಯಧಿನಾಯಕನೆನಿಸಿದ। ಸಿಂಹಧ್ವಜ ಖೇಚರನು ॥
ಸಿಂಹ ಪರಾಕ್ರಮಿ ಕುವರಗೆ ನವರತ್ನ। ಸಿಂಹಾಸನವ ತಾನಿತ್ತ ॥ ೯೬ ॥

ರಥನೂಪುರದಧೀಶ್ವರ ವಜ್ರಮಯವಾದ। ಶತಮುಖವೆಂಬ ರಥವನು ॥
ಪೃಥುವೀಪಾಲಕ ಜ್ಞಾನೇಂದು ಕುಮಾರಗೆ। ಪ್ರಥಿತದಿ ತಾನಂದು ಕೊಟ್ಟ ॥ ೯೭ ॥

ವಿನಯಚರಿಯನಾಳುವ ಖೇಚರೇಶ್ವರ। ಮಿನುಗುವಭೇದ್ಯವೆಂದೆಂಬ ॥
ಘನವಾದ ವಜ್ರಕವಚವ ಕುಮಾರಗೆ। ಅನುಸರಿಸೊಲವಿಂದಲಿತ್ತ ॥ ೯೮ ॥

ಶ್ವೇತಪುರವನಾಳುವ ಖೇಚರೇಶ್ವರ। ಭೂತಳಪತಿ ಜ್ಞಾನೇಂದುವಿಗೆ ॥
ನೂತನ ರಾಕ್ಷಸಮುಖವೆಂಬ ಹರಿಗೆಯ। ತಾ ತಳುವದೆ ಕೊಟ್ಟನಾಗ ॥ ೯೯ ॥

ಕಾಮಪುರೇಶ್ವರ ನವರತ್ನ ಕೀಲಿತ। ಕಾಮ ವಿಮಾನವನಾಗ ॥
ಭೂಮಿಪಾಲಕ ಜ್ಞಾನಚಂದ್ರ ಕುಮಾರಗೆ। ಪ್ರೇಮದಿಂದಿತ್ತು ಕೈಮುಗಿದ ॥ ೧೦೦ ॥

ಗರುಡಧ್ವಜವೆಂದೆಂಬ ಪುರವನಾಳ್ವ। ಗರುಡಧ್ವಜ ಖೇಚರನು ॥
ಪುರುಷಸಿಂಹಗೆ ದಕ್ಷಿಣಾವರ್ತಶಂಖವ-। ನುರು ಮುದದಿಂದೊಲಿದಿತ್ತ ॥ ೧೦೧ ॥

ವಿಜಯಪುರವನಾಳ್ವ ಖೇಚರೇಶ್ವರನಾಗ। ವಿಜಿಗೀಷು ಜ್ಞಾನಚಂದ್ರನಿಗೆ ॥
ವಿಜಯಾರ್ಧಪರ್ವತವೆಂದೆಂಬ ಪಟ್ಟದ। ಗಜವ ತಂದಿತ್ತು ಕೈಮುಗಿದ ॥ ೧೦೨ ॥

ಚಂದ್ರಪುರವನಿಂದ್ರವಿಭವದೊಳಾಳುವ। ಚಂದ್ರಾಭನೆಂಬ ಖೇಚರನು ॥
ಚಂದ್ರಹಾಸವೆಂದೆಂಬ ಖಡ್ಗವ ರಾ-। ಜೇಂದ್ರನಿಗಿತ್ತು ಕೈಮುಗಿದ ॥ ೧೦೩ ॥

ಶಿವಮಂದಿರವೆಂದೆಂಬ ಪುರವನಾಳ್ವ । ಪವನವೇಗನು ಎಂಬ ಖಚರ ॥
ಭುವನೇಶಗೆ ಶತ್ರುಚ್ಛೇದನವೆಂದೆಂಬ । ಪವಿಯ ಕಾರ್ಮುಕವ ತಾನಿತ್ತ ॥೧೦೪ ॥

ಕೆಲಬರು ಪವನನಿಂದಧಿಕ ವೇಗವನಾಂತ । ಪಲವು ತೇಜಿಗಳನು ತಂದು ॥
ಚೆಲುವ ದೊರೆಗೆ ಕಾಣಿಕೆಗೊಟ್ಟು ನಿಂದರು । ಸಲೆ ಪಾದಾಕ್ರಾಂತರಾಗಿ ॥ ೧೦೫ ॥

ವೀರಮುದ್ರಿಕೆಯ ಕೆಲರು ಖಗರಿತ್ತರು । ತಾರಾಹಾರವ ಕೆಲರು ॥
ಮಾರಸನ್ನಿಭ ಜ್ಞಾನಚಂದ್ರ ನೃಪಗೆ ಕೊಟ್ಟು । ವಾರಿಜಕರವ ಮುಗಿದರು ॥ ೧೦೬ ॥

ರಂಭೆಯೂರ್ವಶಿಯರ ಜರೆವ ಸೌಂದರ್ಯದ । ಕುಂಭಕುಚದ ಕೋಮಲೆಯರ ॥
ಅಂಬರಚರರು ತಂತಮ್ಮ ನಂದನೆಯರ । ಸಂಭ್ರಮದಿಂದ ಕುವರಗೆ ॥ ೧೦೭ ॥

ಮದುವೆಗಳನು ಮಾಡಿ ಬಳುವಳಿಗಳ ಕೊಟ್ಟು । ಒದವಿದ ಸಂತೋಷದಿಂದ ॥
ಚದುರರ ದೇವನ ಕೂಡಿಂತು ನುಡಿದರು । ಉದಯಾರ್ಕ ಸನ್ನಿಭತೇಜ ! ॥ ೧೦೮ ॥

ನಿನ್ನಯ ಭಕ್ತಿಯ ಕ್ಷೇತ್ರದೊಳಗೆ ಗು- । ಣೋನ್ನತ ! ನಾವು ಇರ್ದಪೆವು ॥
ಚೆನ್ನಾಗಿ ಪಾಲಿಪುದೆಮ್ಮ ನೀನೆಂದಾಗ । ಗನ್ನಕಾರನೊಳು ವಿನಯವ ॥ ೧೦೯ ॥

ನುಡಿದು ನಿನ್ನಯದೊಂದು ಲೇಖನಪತ್ರವು । ಪೊಡವಿಪ ! ಬಂದೊಡೆ ನಾವು ॥
ಕಡುಬೇಗದಿಂ ಬಂದು ನಿನ್ನಡಿಯ ಸೇವೆಯ- । ನೊಡನೆ ಮಾಳ್ಪೆವು ಎಲೆ ರಾಯ ! ॥ ೧೧೦ ॥

ಎಂದು ನುಡಿದ ವಿದ್ಯಾಧರರಿಗೆ ಜ್ಞಾ- । ನೇಂದು ನುಡಿದನಿಂತೆಂದು ॥
ಬಂಧುಗಳಿಂತಪ್ಪ ವಚನವ ನುಡಿವುದು । ಚಂದವೆ ಜಿನ ಜಿನ ! ಎನುತ ॥ ೧೧೧ ॥

ಭೋಜನಗಳ ಮಾಡಿಸಿ ತಾಂಬೂಲವ । ಭೂಜಾಯಾವಲ್ಲಭರ್ಗಳ್ಗೆ ॥
ಓಜೆಯಿಂದಿತ್ತುಡುಗೊರೆಗಳಿಂ ಮನ್ನಿಸಿ- । ಯಾ ಜಿನೇಂದುವ ಸುಕುಮಾರ ॥ ೧೧೨ ॥

ಪದಕವ ಕೆಲಬರ್ಗೆ ಹಾರವ ಕೆಲರಿಗೆ । ಸದಮಲ ಕರ್ಣ ಭೂಷಣವ ॥
ಮುದದಿಂದ ಕೆಲರಿಗೆ ಬಾಹುಪುರಿಗಳನ್ನು । ಚದುರರ ದೇವನು ಕೊಟ್ಟು ॥ ೧೧೩ ॥

ಹೊನ್ನುಡಿದಾರವ ಕೆಲರಿಗೆ, ಕೆಲಬರ್ಗೆ । ರನ್ನದೊಡವನು ಕೆಲರಿಗೆ ॥
ಉನ್ನತ ಭುಜಕೀರ್ತಿಗಳಿತ್ತು ತಣಿಸಿದ । ಚನ್ನಿಗರರಸ ಜ್ಞಾನೇಂದು ॥ ೧೧೪ ॥

ಅವರಿತ್ತ ಪಾಗುಡಕ್ಕಿಂತ ನಾಲ್ಮಡಿಯನು । ಕುವರ ತಾನಿತ್ತು ಸಂತಸದಿ ॥
ಅವರೊಡನಿಂತು ನುಡಿದನೆಲೆ ಖೇಚರ- । ನಿವಹವೇ ! ಕೇಳಿರೈ ಎಂದ ॥ ೧೧೫ ॥

ಕಿಂಚಿತ್ತಾದರು ಎನ್ನೊಳಗೆ ನಿಮಗೆ ಪ್ರ- । ಪಂಚ ಬೇಡ ಎನ್ನಾಣೆ ॥
ವಂಚನೆ ಮಾತಲ್ಲವೀ ಪುರ ನಿಮ್ಮದು । ಪಂಚ ಶ್ರೀ ಪರಮೇಷ್ಠಿಯಾಣೆ ॥ ೧೧೫ ॥

ಎರವು ಗಾಣಿಸದಾವಾಗ ಬರುತ ಬನ್ನಿ । ಕರೆಯಿಸಿಕೊಳ್ಳಿ ನೀವೆಮ್ಮ ॥
ಪರಮ ಬಂಧುಗಳೊಳು ಭೇದವೆಳ್ಳನಿತಿಲ್ಲ । ಸಿರಿಯಾರೀ ಪುರವಾರಾವಾರು ॥ ೧೧೬ ॥

ನಿಮ್ಮ ತನುಜೆಯರೆನ್ನಯ ಪ್ರಾಣದೊಡಗೂಡಿ । ಸಂಬಂಧವಾಗಿರ್ದ ಬಳಿಕ ॥
ನಿಮ್ಮವನೆಂದೆನ್ನನು ಕಂಡು ಭಾವಿಸಿ । ಹೆಮ್ಮೆಯ ಮಾತಲ್ಲವೆಂದು ॥ ೧೧೮ ॥

ಇವು ಮೊದಲಾದ ವಿನಯವಚನಗಳೆಂಬ । ಸವಿಗಡಲೊಳು ಮುಳುಗಿಸಿಯು ॥
ಸವಿನಯದಿಂ ಬೀಳ್ಕೊಡೆ ವಿದ್ಯಾಧರ । ನಿವಹವೆಲ್ಲವು ತೆರಳಿದುದು ॥ ೧೧೯ ॥

ಹರಿಬಲ ಹರಿಧನುವೀರ್ವರು ತಂತಮ್ಮ । ವರನಂದನೆಯರ ಕರೆದು ॥
ಶಿರವ ತಡವಿ ಗಲ್ಲವ ಪಿಡಿದಲುಗುತ । ಹರುಷದಿ ಬಿಗಿಬಿಗಿಯಪ್ಪಿ ॥ ೧೨೦ ॥

ವಿನಯವಚನದಿಂದ ಕುವರಿಯರೊಡನಿಂತು । ಮನದಕ್ಕರಿಂದ ಪೇಳಿದರು ॥
ಜನಕ-ಜನನಿಯರ ದೂರಿಗೆ ತಾರದೆ । ಮನದೆರೆಯನೆ ದೇವನೆಂದು ॥ ೧೨೧ ॥

ಎರಕದಿ ತ್ರಿವಿಧ ಸಂಜೆಯೊಳು ಪಾದಕೆ ಬಿರ್ದು । ಪರಕೆಯನಾಂತು ಹರುಷದಿ ॥
ಒರೆದ ಮಾತನು ಎಳ್ಳನಿತನು ಮೀರದೆ । ಶಿರದಲ್ಲಿ ಧರಿಯಿಸಿಕೊಂಡು ॥ ೧೨೨ ॥

ಸಡಗರದಿಂದಲೆ ಮಾಡಿ ವಿನಯವನು । ಬಿಡದೆ ಪುರುಷ ಭಕ್ತಿಯೊಳು ॥
ನಡೆದು ಸಕಲ ವೈಯ್ಯಾವೃತ್ಯಗಳನು । ಒಡನೆ ದೇಹದ ಧಾತನರಿತು ॥ ೧೨೩ ॥

ಕಡುಬೇಗದಿಂದ ಮಾಡುತ ಧರ್ಮಕೆ ತಾ- । ನೊಡಲಾಗಿದಿರುತ್ತರವ ॥
ಕೊಡಲಾಗದು ಪತಿ ಕೋಪಿಸಿ ನುಡಿದರು । ಬಿಡಲಾಗದು ತನ್ನ ಗುಣವ ॥ ೧೨೪ ॥

ಪುರುಷ ಮನೆಯ ಬಾಗಿಲಿಗೆ ಬರಲು ಕಂಡು । ಹರುಷದಿಂದಿದಿರೆದ್ದು ನಿಂದು ॥
ದರಹಸಿತಾನನದಿಂದ ನುಡಿಸಬೇಕು । ವರ ವಧೂಗಳ ಮಾರ್ಗವಿದು ॥ ೧೨೫ ॥

ಸವತಿಯರೊಡನೆ ಹೊರೆಯುಗಾಣಿಸದಂತೆ । ಸವಿನಯದಿಂದಿರಬೇಕು ॥
ತವರುಮನೆಗಳಾಗಿರಬೇಕು ನಂಟರ್ಗೆ । ಭುವಿಯಂತೆ ಕ್ಷಮೆಯಾಗಬೇಕು ॥ ೧೨೬ ॥

ಅತಿಲೋಭವಿರಬಾರದು ಭಾವಿಸೆ ಮು- । ತ್ತತಿತ್ಯಾಗ ತಾನದು ಸಲ್ಲ ॥
ಸತತ ಮುನಿಗಳಿಗಾಹಾರದಾನಂಗಳ- । ನತಿಶಯದಿಂ ಕೊಡಬೇಕು ॥ ೧೨೭ ॥

ಶೀಲದೊಳಗೆ ಇರಬೇಕು ಧರ್ಮಂಗಳ । ಪಾಲಿಸಬೇಕು ಸತ್ಕಥೆಯ ॥
ಲಾಲಿಸುತಿರಬೇಕು ನೋಂಪಿಪೂಜೆಗಳ ವಿ- । ಶಾಲದಿಂದಲೆ ಮಾಡಬೇಕು ॥ ೧೨೮ ॥

ಮದಮಾತ್ಸರ್ಯವ ಬಿಡಬೇಕು ಪಾಪಕೆ । ಬೆದರುತಲಿರಬೇಕು ನಿಚ್ಚ ॥
ಮುದದಿಂದ ಸರ್ವಜೀವಗಳೊಳು ಕೃಪೆಯನು । ಒದಗಿಸುತಿರಬೇಕಾವಾಗ ॥ ೧೨೯ ॥

ಅತ್ತೆಮಾವಂದಿರೊಡನೆ ಭಯಭಕ್ತಿಯು । ಸತ್ಕಾರ ವಿನಯವು ಬೇಕು ॥
ಅತ್ತಿಗೆ ನಾದಿನಿಯೊಳು ಸ್ನೇಹವಿರಬೇಕು । ಉತ್ತಮ ಗುಣವು ತಾ ಬೇಕು ॥ ೧೩೦ ॥

ಎಂದಿವು ಮೊದಲಾದ ಪಲ ಬುದ್ಧಿಯ ಪೇಳಿ । ನಂದನೆಯರ ಬಿಗಿಯಪ್ಪಿ ॥
ಚಂದದಿಂ ಸಕಲ ವಸ್ತುವ ಬಳುವಳಿಗೊಟ್ಟು । ಬಂದು ನೃಪತಿಯ ಕಂಡವರು ॥ ೧೩೧ ॥

ನಂದನೆಯರ ಕೈಲಿಡೆಗೊಟ್ಟು ನುಡಿದರಿಂ- । ತೆಂದೆಲೆ ಬೋಧೇಂದು ಕುವರ ! ॥
ಚೆಂದದಿ ಧರ್ಮದಿಂ ರಕ್ಷಣೆಯನು ಮಾಡು । ಒಂದನು ಅರಿತವರಲ್ಲ ॥ ೧೩೨ ॥

ಮೇಲುತಾಗೆಂಬುದ ಬಲ್ಲವರುಗಳಲ್ಲ । ಬಾಲಕಿಯರು ಆ ಮೇಲೆ ॥
ಲೀಲೆಯಿಂದಾಡಿಕೊಂಡಿರ್ದರು ಮುಗ್ಧೇರು । ಪಾಲಿಸಿಕೊಳಬೇಕು ನೀನು ॥ ೧೩೩ ॥

ತರಳ ಬುದ್ಧಿಗಳಲ್ಲದೆ ಇಂದುಪರಮುಟ್ಟಿ । ನೆರೆ ತಿಳಿದವರುಗಳಲ್ಲ ॥
ಹೊರಳೆಯ ಮಾತನಾಡುವುದಕೆ ಬಾರದು । ಅರಿಯರು ತಾ ಲೌಕಿಕವನು ॥ ೧೩೪ ॥

ಅದರಿಂದ ನಮ್ಮ ಗುಣವ ನೋಡಿ ಇವರೊಳು । ಒದವಿದ ತಪ್ಪುಂಟಾದೊಡೆಯು ॥
ಸದಯಾಲು ಮರೆವುದುತ್ತಮಗುಣವನು ನೀನು । ಚದುರಿಂದ ಕಲಿಸುವುದಿವರ್ಗೆ ॥ ೧೩೫ ॥

ಸ್ತ್ರೀಜನ್ಮದೊಳು ತಪ್ಪನರಸುವೆನೆಂದರೆ । ಮಾಜದೆ ಮದ ಮಾತ್ಸರ್ಯ ॥
ಫೌಜಾಗಿನಿಂದು ರಾಜಿಪುದದ ನೋಡದೆ । ರಾಜ ! ನೀ ಪಾಲಿಸಬೇಕು ॥ ೧೩೬ ॥

ತವುರೂರ ಮೇಲಣ ಹಂಬಲಿಲ್ಲದ ಹಾಗೆ । ಕುವರ ! ನೀನತಿ ಹರುಷವನು ॥
ಸವಿನಯದಿಂದ ಪುಟ್ಟಿಸುವುದು ನಮಗಿನ್ನು । ಕುವರಿಯರೊಡನೇಕಾಸೆ ॥ ೧೩೭ ॥

ಪರರ ಮನೆಗೆ ಎಂದು ಹೆಣ್ಣ ಹೆತ್ತೆವು ಮೇಲೆ । ತೊರೆಯದಿರ್ದೊಡೆ ಯಾರಿಚ್ಛೆ ॥
ಸರಸಿಜಭವ ತಾನು ಬರೆದ ಬರಹವನು । ಪರಿಹರಿಸುವರಾರುಂಟು ॥ ೧೩೮ ॥

ಎಂದು ಕಣ್ಬನಿಗಳನೊರೆಸುತ ತಾವೆದ್ದು । ನಿಂದು ತಮ್ಮಯ ಸೆರಗೊಡ್ಡಿ ॥
ನಂದನೆಯರುಗಳ ಪ್ರತಿಪಾಲಿಪುದು ನೀ- । ನೆಂದೀರ್ವರು ಬೇಡಿಕೊಳಲು ॥ ೧೩೯ ॥

ನರನಾಥ ಚಂದ್ರಮ ಜ್ಞಾನೇಂದು ಕುವರನು । ತ್ವರಿತದಿಂ ಸಿಂಹಪೀಠವನು ॥
ಎರಕದಿಂದಿಳಿತಂದು ಮಾವಾಜಿಯರಿಂದಿರ । ಕರಗಳ ಪಿಡಿದಿಂತು ನುಡಿದ ॥ ೧೪೦ ॥

ಎಲೆ ಮಾವಂದಿರ ! ನಿಮಗೇಕೆಯುಮ್ಮಳ । ಪಲವು ತೆರದಿ ನಿಮ್ಮ ಮನಕೆ ॥
ಗೆಲುವ ಪುಟ್ಟಿಸದೊಡೆ ಜಾಮಾತನೆ ಎಂ- । ದಲಘು ಪ್ರೀತಿಯ ಮಾತ ನುಡಿದ ॥ ೧೪೧ ॥

ಹರಿಹರ ಬಿದಿಗಳು ತಮ್ಮ ಮಡದಿಯರ- । ನುರು ಶಿರಲಪನದೊಳಾಂತು ॥
ಮೆರೆವುದಿಲ್ಲವೇಯವರೀಕ ಪ್ರಾಣಗಳೆಂದು । ನೆರೆ ನಂಬಿದ ನೀರೆಯರ ॥ ೧೪೨ ॥

ಪರಿರಕ್ಷಣವನು ಮಾಡುವೆನೆಂದಾ- । ಗರಸು ಸರಸವಾತ ನುಡಿದ ॥
ಹರುಷವ ಪುಟ್ಟಿಸಿ ಚೀನಿ ಚೀನಾಂಬರ । ವರವಸ್ತ್ರದುಡುಗೊರೆಗಳನು ॥ ೧೪೩ ॥

ಮಾತುಳರೀರ್ವರ್ಗೆ ತನ್ನ ಕೈಮುಟ್ಟಿ ಸಂ- । ಪ್ರೀತಿಯಿಂದುಗುಲವ ಪೊದಿಸಿ ॥
ಜ್ಯೋತಿಪ್ರಭೆ ತಾರಾಹಾರಗಳೆಂದೆಂಬ । ನೂತನ ಕಂಠಸರಗಳ ॥ ೧೪೪ ॥

ರನ್ನಕಂಕಣ ಬಾಹುಪುಲಿ ಭುಜಕೀರ್ತಿಯ । ಚೆನ್ನಿಗರರಸನಿತ್ತವರ್ಗೆ ॥
ಮನ್ನಿಸೆ ರಾವುತ ರಾಣುವೆಯರ ಗು- । ಣೋನ್ನತನುಡುಗೊರೆಯಿತ್ತು ॥ ೧೪೫ ॥

ಕೆಲರಿಗೆ ಹಾರವ ಕೆಲರಿಗೆ ಪದಕವ । ಕೆಲರಿಗೆ ರನ್ನಗಂಕಣವ ॥
ಕೆಲರಿಗೆ ಕರ್ಣಭೂಷಣಗಳನಿರದಿತ್ತು । ಚೆಲುವರ ಗಂಡ ಮನ್ನಿಸಿದ ॥ ೧೪೬ ॥

ಪಡೆದರಿಂತಪ್ಪ ಜಾಮಾತೃವ ಜನಗಳು । ಪಡೆಯುಬೇಡವೆ ಜಗದೊಳಗೆ ॥
ಪೊಡವಿಯೊಳಗೆ ಇಂತಪ್ಪ ಗಾಂಭೀರ್ಯದ । ಕಡುಜಾಣರ ಕಂಡುದಿಲ್ಲ ॥ ೧೪೭ ॥

ಸುರಭೂಜ ಕೈಬಿಟ್ಟಿತೋ ಭಾವಿಸಿ ನೋಡೆ । ಸುರಧೇನುವೆ ಹಯನಾಯ್ತೋ ॥
ವರಚಿಂತಾಮಣಿ ಫಲಿಸಿತೋ ಎಂಬಂತೆ । ನರನಾಥ ಚಂದ್ರನು ಕೊಟ್ಟ ॥ ೧೪೮ ॥

ಎಂದೆಲ್ಲರಿರದೆ ಕೊನರಿ ಕೊಂಡಾಡೆ ಬೋ- । ಧೇಂದು ಮಾತುಳರೀರ್ವರನು ॥
ಸಂದ ಪ್ರೀತಿಯೊಳು ಕೆಲವು ದೂರ ನಡೆತಂದಾ- । ನಂದದಿ ಬಿಗಿಬಿಗಿಯಪ್ಪಿ ॥ ೧೪೯ ॥

ಹರುಷದಿಂದಲಿ ಬೀಳ್ಕೊಟ್ಟು ಖೇಚರರಸು । ಧುರಗಲಿಯಧಿಕ ಲೀಲೆಯೊಳು ॥
ಅರಮನೆಯೊಳು ಪೊಗೆ ವರ ಪಿತೃಯೋಗದಿ । ಪರಮ ಬಂಧುಗಳಕ್ಕಿಯೊಳು ॥ ೧೫೦ ॥

ಕೊರಗಿಯುಮ್ಮಳಿಸುವ ಕೋಮಲೆಯರ ಕಂಡು । ಸರಸಸಲ್ಲಾಪ ಚುಂಬನದಿ ॥
ಪರಿರಂಭಣ ಮುದ್ದು ಮುಂತಾದುದರಿಂದ । ತರುಣೀಮಣಿಗಳುಮ್ಮಳವ ॥ ೧೫೧ ॥

ಕಳೆದು ವಿಲಾಸದಿ ಸುಖವೆಂಬಮೃತವ । ಜಲನಿಧಿಯೊಳು ತಾನವರ ॥
ಮುಳುಗಿಸಿಯನುದಿನ ದಾನಪೂಜೆಗಳನು । ಇಳಿಯಾಣ್ಮನೆಸಗುತ ಮುದದಿ ॥ ೧೫೨ ॥

ಜಿನರ ಕತೆಯನು ಸಭೆಗೆ ತಾನು ಪೇಳುತ । ಜಿನಮುನಿಗಳಿಗೆ ವಂದಿಸುತ ॥
ಜಿನಧರ್ಮವನು ಪರ್ವಿಸುತ ಧರೆಯೊಳು ತಾ- । ನನುದಿನ ಸುಖದೊಳೊಪ್ಪಿಹನು ॥

ಮನುಜಮಂದಾರ ಸೊಕ್ಕಿದ ವೈರಿ ನೃಪರೆಂಬ । ವನಕೆ ಕುಠಾರನುದಾರ ॥
ನನೆವಿಲ್ಲ ಸಮರೂಪ ಜ್ಞಾನೇಂದುವೊಪ್ಪಿದ । ಇನನ ಸಮಾನ ತೇಜಸ್ವಿ ॥ ೧೫೪ ॥

**॥ ಅಂತು ಸಂಧಿ ೯ಕ್ಕಂ ಪದ ೧೫೯೭ಕ್ಕಂ ಮಂಗಲಂ ॥**

# ವನ ವರ್ಣನೆ.

ಜಪಿಸುವ ಕುವರಿ ಕುಂತಳವೆಣ್ಣೊಳು ಸಿಕ್ಕಿ । ನೃಪ ಬಿಡಿಸಿದುದ ಪೇಳುವೆನು ॥ ಪ ॥

ಮದವೆಂಟ ಗೆಲಿದು ಮೂರಾಂತ ಘಾತಿಯ ಫೌಜ । ಸದೆದು ಸಮವಸರಣದೊಳು ॥
ಪದುಮವ ಸೋಂಕದೆಸೆವ **ಶಾಂತಿಜಿನ**ರಾಜ । ಒದವಿಸೆಮಗೆ ಮೋಕ್ಷಪದವ ॥ ೧ ॥

ಒಂದಾನೊಂದು ಪಗಲು ಜಿನಚಂದ್ರನ । ನಂದನ ಶೃಂಗಾರವಾಗಿ ॥
ಬಂದು ಹಜಾರದ ಚಾಪಡಿಯೊಳಗಾ- । ನಂದದಿಂದೋಲಗಗೊಟ್ಟು ॥ ೨ ॥

ಭೇರಿ ತಮ್ಮಟ ನಿಸ್ಸಾಳ ಧಗಮುರುಂಜೆ । ಭೋರೆಂಬ ಶಂಖ ದೌಡೆಗಳು ॥
ಈರವರೆಯು ಚಿನ್ನಗಾಳೆ ವಿರಣದೊಳು । ಬೂರುಹಚೆಂಬಕವರೆಯು ॥ ೩ ॥

ಇವು ಮೊದಲಾದ ಕೋಟಾಕೋಟಿ ವಾದ್ಯದ । ನಿವಹ ಘೂರ್ಣಿಸಲಾ ವೇಳೆಯೊಳು ॥
ಭುವನಾಕಾಶವೆಣ್ದೆಸೆಗಳೊಳೆಲ್ಲಿಯು । ರವಪರಿಪೂರ್ಣವಾಗಿಹುದು ॥ ೪ ॥

ದೊರೆದೊರೆಗಳು ವೀರಭಟರು ಸಾಮಂತರು । ಕರುಣಿಕರುಗಳು ಮಂತ್ರಿಗಳು ॥
ಸರಸಕಲಾಕೋವಿದರು ಸತ್ಕವಿಗಳು । ನೆರೆದು ಬಂದರು ಆ ವೇಳೆಯೊಳು ॥ ೫ ॥

ಕರಕಂಕಣ ಝುಣರೆನೆ ಇಕ್ಕೆಲದೊಳು । ತರುಣಿ ವೆಣ್ಣುಗಳು ಮುರುಕದಿ ॥
ಸೊರಿವಿಂಡುಗಳನು ಜರಿವ ಚಾಮರಗಳ । ಹರುಷದಿಂದಲೆ ಢಾಳಿಪರು ॥ ೬ ॥

ಸುರತರುಣಿಯರಿಂದ ಸಾಲ್ಮಡಿ ರೂಪಿನ । ಗುರುಸಿತಂಬದ ನರ್ತಕಿಯರು ॥
ವರ ಬಹುಚಾಳಿತಿರುಪು ಲಾಗು ಮುಂತಾದ । ಕರಣವ ತೋರಿ ನಟಿಪರು ॥ ೭ ॥

ಆಡುವ ನೃತ್ಯವ ನೋಡುತ ರಾಯನು । ಪಾಡುವ ಗಾನಕೆ ಕಿವಿಯ ॥
ಗಾಡಿಯಿಂ ಕೊಡುತ ತರುಣಿಯರು ಸೊಗಸಿಂದ । ನೀಡುವ ಎಲೆಯ ಗಳಿಗೆಗೆ ॥ ೮ ॥

ಹರುಷದಿಂದಲಿ ರಾಯ ಹಸ್ತವ ನೀಡುತ । ನೆರೆಗಲಿಯುತಿ ಠೀವಿಯೊಳು ॥
ಕುರುಕುಲಪತಿಯೋಲಗಗೊಟ್ಟು ಕುಳಿತಿರೆ । ಸುರಶೈಲಕೆ ದೇವಸಮಿತಿ ॥ ೯ ॥

ಗಗನಾಂಗಣದೊಳು ಪೋಗುತಿರುವುದನು । ಸುಗುಣರ ದೇವನು ಕಂಡು ॥
ಸೊಗಯಿಪ ಮಂದರ ಗಿರಿಯೊಳು ರಾಜಿಪ । ಜಗದಾರಾಧ್ಯ ಜಿನರನು ॥ ೧೦ ॥

ಪದಿನಾರು ಜಿನಚೈತ್ಯಾಲಯವನು ತಾನು । ಮುದದಿಂದ ನೋಳ್ಪಂದದರ್ತಿ ॥
ಹೃದಯದೊಳಗೆ ಸಂಜನಿಸಲು ಜ್ಞಾನೇಂದು । ಚದುರರರಸನಾತುರದಿ ॥ ೧೧ ॥

ಸವರತ್ನಮಯವಾದ ಪುಷ್ಪಕವನು ಏರಿ । ಸುರವರ್ತ್ಮರಾಗಿ ತಾನಡರಿ ॥
ಹರುಷದಿಂದಲಿ ಬರುತಿರಲು ಕಟ್ಟಿದಿರೊಳು । ವರಭೀಕರ ಭೀಮಾರಣ್ಯ ॥ ೧೨ ॥

ಅರಸನ ಕಣ್ಣಿಗೆ ತೋರಿತದೆಂತೆನೆ । ಪರನೃಪರುಗಳಲಿ ಜಸವು ॥
ನೆರೆದು ಬಂದಿಲ್ಲಿ ಫೌಜಾಗಿ ನಿಂದುದೊ ಎನೆ । ವರಭಯಂಕರ ಕಕ್ಷವಿಹುದು ॥ ೧೩ ॥

ತರಣಿ ಕಿರಣಕಳ್ಕಿ ಕೃಷ್ಣಾಂಧಕಾರವು । ಭರದಿಂದಲ್ಲೈತಂದಿಲ್ಲಿ ॥
ಕರಚೆಲುವಾಗಿಯೊರ್ಬುಳಿಯೊಳು ನಿಂದಂತೆ । ಮೆರೆದುದು ಗುರ್ವಿಪ ವಿಪಿನ ॥ ೧೪ ॥

ಧರೆಯೊಳ್ವರ್ತಿಪ ಕ್ರೂರ ಹಿಂಸಕ ಜನಗಳ । ಮೆರೆವ ದೇಹದಿ ಪಾಪವನು ॥
ಎರಕದಿಂದಲೆ ತುಂಬಿ ಮಿಕ್ಕಿದ ತಂದಿಲ್ಲಿ । ಇರಿಸಿದನೆನೆ ಕಾಡಿಹುದು ॥ ೧೫ ॥

ಮಾರಿಯ ಮನೆಯೋ, ಭೈರವನಾಡುಂಬೊಲವೋ, । ಕ್ರೂರ ದಂಡಿಯ ಪಟ್ಟಣವೋ ॥
ಘೋರಾಂಧಕಾರದ ತಾಣವೋ, ತಾನೆನೆ । ತೋರಿತು ಬಲ್ಗಾಡು ನೃಪಗೆ ॥ ೧೬ ॥

ಕಡುಭಯಂಕರವಾದಿಂತಪ್ಪ ವಿಪಿನವ । ಪೊಡವಿಪ ಕಂಡಿದರೊಳಗೆ ॥
ಕಡು ಧೈರ್ಯವಾದ ಕೌತುಕವುಂಟೆಂದಾಗ । ಒಡನೆ ಪುಷ್ಪಕವ ತಾನಿಳಿದು ॥ ೧೭ ॥

ದೊರೆರನ್ನನಡವಿಯನೊಳಪೊಕ್ಕು ಬರುತಿರೆ । ತರಣಿ ಮಂಡಲವನು ತಿವಿವ ॥
ತರುಗಳ ಬಗೆಬಗೆ ಜಾತಿಯ ಕಂಡನಾ- । ನೊರೆವೆನು ನನ್ನ ಬಲ್ಲಿನಿತ ॥ ೧೮ ॥

ಅರಳಿಯಳಿಲೆ ತಾರೆ ನ್ಯಗ್ರೋಧ ಶ್ರೀಫಲ । ಕುರವಕ ಬೇಲ ರುಟಾಳ ॥
ಸಿರಿಸ ರಂಜಿಯು ಗೋಳಿಲೊದ್ದಸೆಲುಕವಾದಿ । ಮೆರೆವ ಕವ್ಮರವನು ಕಂಡ ॥ ೧೯ ॥

ಪನಸೈರಾವತ ಜಂಬೀರ ಮಾಕಂದ । ವನಸಂಪಿಗೆ ಜಂಬುಕಡವ ॥
ಮಿನುಗುವ ಕದ್ವಾಳ ಯುಗಪತ್ರ ಶಿಂಶಪ । ಘನವಾದ ತೇಗವ ಕಂಡ ॥ ೨೦ ॥

ಯಲವದ ಮರನಾದಿ ಇಬಸುರಿ ಬನ್ನಿ । ನೆಳಲ ಮರನನುದುಂಬರವ ॥
ಚೆಲುವಾದ ನಾಗಸಂಪಿಗೆ ಬೆಟ್ಟದಾವರೆ । ವಿಲಸಿತ ಸಂಪಗೆ ಕಂಡ ॥ ೨೧ ॥

ಮೆರೆವ ಖರ್ಜೂರ ತಾಳಿಹಿತಾಳಿಯರೆನೆಲ್ಲಿ । ಕರಸೊಗಯಿಪ ರಾಜವೃಕ್ಷ ॥
ಗಿರಿಜ ಮಂದಾರ ಗುಗ್ಗುಳ ಚಂದನ ವೃಕ್ಷ । ವರಕಪಿಚೂತವ ಕಂಡ ॥ ೨೨ ॥

ಚಿತ್ತ್ರ ಕೆಂಜಿಗೆ ಸೀಗೆ ಗಜುಗ ಬಿದಿರುಮುಳ್ಳ । ಮುತ್ತುಗ ಬಾಡ ಬಾಕುಗಳು ॥
ಕತ್ತರಿ ತೊಟ್ಟೆ ಬಿಂಡುಗ ಬೊಬ್ಬುಲಿ ಕಾರೆ । ಸುತ್ತಿದ ಹುಣಿ ಸೊಡಲಿಗಳ ॥ ೨೩ ॥

ಬಲುಬಂಜವ ಸುತ್ತಿ ರಾಜಿಪ ಸಸುಗುನ್ನಿ । ಸಲೆಹುಂಬುದುರುಚಾನೆಮೆಟ್ಟು ॥
ಪಲವು ಬಗೆಯ ಬಳ್ಳಿಗಳು ಕಾನನವನು । ನಲವಿನಿಂ ಸುತ್ತಿ ಕಾರ್ಗಾಲ ॥ ೨೪ ॥

ಬನದೊಳು ಬೀರುತ ಸೂರ್ಯನ ಕಿರಣವ- । ನಿನಿಸಾದರು ಪೋಗಗೊಡದೆ ॥
ಅನಿಲ ಸಂಚರಿಪುದಕಾಸ್ಪದಕೊಡದಾ । ಘನವಾದ ಮುಳ್ಳಿನ ಹೊದರು ॥ ೨೫ ॥

ಪರಿಪೂರ್ಣವಾಗಿ ತುಂಬಿರಲದರೊಳು ರಾಯ । ಚರಣವ ಮೆಲ್ಲನೆ ಇಡುತ ॥
ಬರುತಿರಲಾಗಲ್ಲಿ ಮುತ್ತುಗ ಪೂವಾಗಿ । ಕರ ಸೊಗಯಿಸಿದವೆಂತೆನಲು ॥ ೨೬ ॥

ವನಲಕ್ಷ್ಮಿಯುಮಧರ್ಮರಾಯಗೆ ಮನದಂದು । ಮಿನುಗುವ ನೆಲೆನೆಲೆ ಸೊಡರ ॥
ಅನುವಾಗಿ ಪಿಡಿದೆತ್ತಿಸಿದಳೋ ಎಂಬಂತೆ । ಮಿನುಗಿತು ಪೂವು ಮುತ್ತುಗದ ॥ ೨೭ ॥

ಜಡೆಗಳು ಕಕ್ಕೆಯ ಕಾಯಾಗೆ, ಭುಜಪತ್ರ । ಒಡನೆ ಕೃಷ್ಣಾಜಿನವಾಗೆ ॥
ಪಿಡಿದ ಕಮಂಡಲ ತಾಳಿಯ ಫಲವಾಗೆ । ತೊಡೆದ ಭಸ್ಮವೆ ಬೊಬ್ಬುಲಿಯ ॥ ೨೮ ॥

ಫಲಗಳ ಮೇಲಣ ಧವಲರಜಗಳಾಗೆ । ವಿಲಸಿತ ಸನ್ಯಾಸತ್ವವನು ॥
ಚೆಲುವರ ದೇವ ಜ್ಞಾನೇಂದುವಿಗಾ ವನ । ಸಲವಿನಿಂ ಕಾಣಿಸಿತಾಗ ॥ ೨೯ ॥

ಮುಂದಕೆ ಬರುವಾಗ ಮಾರಿಯ ಪುರದಲ್ಲಿ । ಚಂದದಿಂ ತೆಟ್ಟೆತೆಟ್ಟೆಯೊಳು ॥
ಅಂದು ಪೊತ್ತಿಸಿದ ದೀವಿಗೆಯಂತೆ ಸಂಪಿಗೆ । ಬಂಧುರ ಮೊಗ್ಗೆ ರಾಜಿಪವು ॥ ೩೦ ॥

ಗುರುಗುಂಜಿಯಂತೆಡೆಗಳೆ ದೃಷ್ಟಿಗಳಾಗೆ। ತುರುಬಾಗೆ ಕದ್ದಾಳ ಮಡಲು ॥
ಕರಗಳು ಸ್ತನಗಳು ಮೆರೆವ ಪರಂಗಿಯ। ಕರಶೋಭಿಪೌಡಲದೆಲೆಯು ॥ ೩೧ ॥

ಕರಿದಾದ ಫಲಗಳಾಗಲು ಜೀವರಕ್ಷೆಯು। ಮೆರೆವ ತಳಿರು ಜಿಹ್ವೆಯಾಗೆ ॥
ಪರಿಕಿಸೆ ವಿಟಪ ರಾಕ್ಷಸಿಯರ ರೂಪಿನಿಂ। ದೊರೆಯ ಕಣ್ಣಿಗೆ ಕಾಣಿಸಿತು ॥ ೩೨ ॥

ಕಡುಭೀಕರವಾದರಣ್ಯ ಕತ್ತಲೆಯೊಳು। ಬಡಿಯೆ ಶೂಕರ ಗೋರಿಕಲ್ಲ ॥
ಕಿಡಿಹಾರಲದರ ಬೆಳಕಿನೊಳಗರಮಗ-। ನಡಿಯಿಟ್ಟು ಬರೆ ಬರೆ ಮುಂದೆ ॥ ೩೩ ॥

ಅರಸಿನ ಕಣ್ಣಿಗೆ ಕಾಣಿಸಿತಾ ವನ। ಒರವೆಸದೆಂತೆನೆ ತಾನು ॥
ಹರಿಮಯವಾಗಿ ಮಾಧವನು ತಾನಲ್ಲದೆ। ಹರಿಯೊಡಗೂಡಿಯಾ ವನವು ॥ ೩೪ ॥

ಧರಣೇಂದ್ರನಲ್ತು ಲಾಂಗಲಯುಕ್ತನಾಗಿಯು। ಹರಿಯಗ್ರಜಾತ ತಾನಲ್ತು ॥
ಗಿರಿಪತಿ ತಾನಲ್ತು ಶಿವಮಯವಾಗಿಯು। ವರಶಾರದೆಯೊಡಗೂಡಿ ॥ ೩೫ ॥

ಸರಸಿಜಭವನಲ್ತು ರೋಹಿಣಿಯೊಳು ಕೂಡಿ। ಸ್ಮರಸಖನಲ್ತಾ ವನವು ॥
ವರರುಕ್ಷಮಯವಾಗಿ ಗಗನಾಂಗಣಮಲ್ತು। ಹರಿಗೂಡಿರೆ ಕೋಣನಲ್ತು ॥ ೩೬ ॥

ಗರುವೆ ಸೀತೆಯು ಲಕ್ಷ್ಮಣಯುಕ್ತಳಾಗಿಯು। ನೆರೆಗಲಿ ರಾಮ ತಾನಲ್ತು ॥
ಹರಿಮಯವಾಗಿ ಮಹಿಷವಾಹನನಲ್ತು। ವರ ಭೀಮಾರ್ಜುನಯುಕ್ತವಾಗಿ ॥ ೩೭ ॥

ಪರಿಕಿಸೆ ಧರ್ಮರಾಯನು ಅಲ್ಲ, ರಾಜಿಪ। ವರ ಪುಂಡರೀಕದಿ ಕೂಡಿ ॥
ಧರಣೀಶ ತಾನಲ್ತ್ವಿಭೀಷಣ ಕುಂಭಸು। ವರ ಕರ್ಣರೊಳು ತಾನು ಕೂಡಿ ॥ ೩೮ ॥

ದಶಕಂಧರನಲ್ತು ದ್ವಿಜ ಸಮನ್ವಿತವಾಗಿ। ಹೊಸ ಯೋಗ ಮಂಟಪವಲ್ಲ ॥
ಎಸೆವ ಕದಳಿಯಲ್ಲ ಕರಿ-ವಾಜಿಯೊಳು ಕೂಡಿ। ಹಸನಾದ ರಣರಂಗವಲ್ತು ॥ ೩೯ ॥

ಮೆರೆವ ಮಹಿಷ ಖಡ್ಗಿಗಳೊಳು ಕೂಡಿಯು। ವರರಾಜ ಮಂದಿರವಲ್ಲ ॥
ಪರಿಕಿಸೆ ಗೃಹಲಕ್ಷ್ಮಿಲತೆಪ್ರವಾಳಗ-। ಳಿರುತಿರೆ ಕೂಪಾರವಲ್ತು ॥ ೪೦ ॥

ಗೋಮಯವಾಗಿ ನಿರ್ಜರಲೋಕ ತಾನಲ್ತು। ರಾಮಣೀಯಕ ವಜ್ರಗೂಡಿ ॥
ಹೇಮಾಚಲವಲ್ಲ ಇವು ಮೊದಲಾಗಿರ್ದ। ನಾಮಗಳಿಂದ ರಾಜಿಸುತ ॥ ೪೧ ॥

ದೊರೆರನ್ನನ ಕಣ್ಗೆ ಪಲವು ವಿಕಲ್ಪದ। ತೆರನನು ತೋರಿಸುತಿರ್ದ ॥
ವರಭೀಕರವಾದರಣ್ಯ ಮಧ್ಯದೊಳಾ। ನರನಾಥ ಬರುತಿರಲಾಗ ॥ ೪೨ ॥

ಭರದಿಂದ ಬಂದೊಂದು ಕುಕ್ಕುಟ ಸರ್ಪನು। ನರನಾಥನ ಮೈಯ ನೂರಿ ॥
ವರವಜ್ರಗಿರಿಯ ತಾಗಿದ ಕಲ್ಲು ಒಡೆವಂತೆ। ಉರಗನ ಹಲ್ಲು ಮುರಿದುದು ॥ ೪೩ ॥

ಗಬ್ಬಿತನದೊಳೊಂದು ಬಾಯನು ತೆರೆವುತ। ಹೆಬ್ಬಾವು ನುಂಗುವೆನೆಂದು ॥
ಅಬ್ಬರಿಸುತ ನೃಪನೆಡೆ ತಾ ಬರುತಿರೆ। ಗಬ್ಬಿಗಳರಸ ಜ್ಞಾನೇಂದು ॥ ೪೪ ॥

ಎರಡು ತುಟಿಗಳನು ಕರದೊಳು ಪಿಡಿದೊತ್ತಿ । ಭರದಿಂದ ಬಾಲವ ಪಿಡಿದು ॥
ತಿರುಪುತ ತಿರ್‍ರನಾಕಾಶಕೆ ತಾನಿಟ್ಟು । ಧರಣೀಶ ನಡೆವಾಗ ಮುಂದೆ ॥ ೪೫ ॥
ಪರಿಕಿಸೆ ಮೂರು ಹೆಡೆಯನಾಂತ ದುರ್ಮುಖ । ಖರರೋಮವೈದೆಡೆಯುಳ್ಳ ॥
ವರಸಪ್ತದರ್ವಿಯನುಳ್ಳ ಮಹಾನಿಲ । ಕರಶೋಭಿಪ ನವಫಣದ ॥ ೪೬ ॥
ವರಮಹಾಕಂಠ ಸಹಸ್ರ ಫಣವನುಳ್ಳ । ಉರಗವಿಂಡುಗಳು ಧರೆಯನು ॥
ಮೊರೆವುತ ಹೆಡೆಯಿಂದಪ್ಪಳಿಸುತ ತಾವು । ಗರಳವನುಗುಳುತ ಭರದಿ ॥ ೪೭ ॥
ಚುರು ಚುರು ಚುಮು ಚುಮೆಂನುತ ನಾಲಿಗೆಗಳ । ಉರುಕೋಪದಿಂದ ನೀಡುತ್ತ ॥
ಅರಸಿನ ಬಳಿಗೆಯೊದಗಿ ಬಂದು ತೊಡೆ ತೋಳ । ಚರಣಕೊರಳು ಉಡಿಗಳನು ॥ ೪೮ ॥
ಸುತ್ತಿ ಮೂವಳಸಾಗಿ ಬಿಗಿಯಲು ಜ್ಞಾನೇಂದು । ಉತ್ತಮ ಸತ್ವ ಸಂಯುತನು ॥
ಅಳ್ತಿಯಿಂ ನಿಗುರಿ ತ್ರೈಕಾಲ ಚಿಮ್ಮಿಸಲಾಗ । ಕತ್ತರಿಸಹಿಗಳ್ತುಂಡಾಗಿ ॥ ೪೯ ॥
ಧರೆಯೊಳು ಬೀಳೆ ಮುಂದಕೆ ತಾನು ನಡೆವಾಗ । ಹರಿ ತಾನು ಗಜರಿ ಗರ್ಜಿಸುತ ॥
ಭರದಿಂ ಮೇಲ್ವಾಯ್ದುವು ರಾಜಕುಮಾರನು । ಕೊರಲ ತಾ ತಬ್ಬಿ ಭೂಮಿಯೊಳು ॥ ೫೦ ॥
ಕೆಡಹಿ ಚರಣವನು ಕೈಯೊಳು ಪಿಡಿದಾಗ । ತಿರುಪಿ ಬರುವ ಸಿಂಹವಿಂಡ ॥
ಅರಮಗನಿಡೆ ಕಡು ಭಯದಿಂದಲರ್ಚುತ । ಬಿರುತೋಡಿದವು ದಿಗ್ದೆಶೆಗೆ ॥ ೫೧ ॥
ಎರಡು ರೆಕ್ಕೆಗಳನು ಪಸರಿಸಿ ಬಾಯನು । ತೆರೆದುಗುರುಗಳನಾಡಿಸುತ ॥
ಮೊರೆದು ಭೋರೆಂದರಮಗನ ಪಿಡಿವೆನೆಂ- । ದರಗುಲಿ ಗಂಡಭೇರುಂಡ ॥ ೫೨ ॥
ಎರಡು ತಲೆಗಳ ಭೂಪಾಲ ಕರದೊಳಾಂತು । ಹರುಷದಿಂ ತೂಗಿಯಾಡಿಸುತ ॥
ಸೆರೆಗಲಿ ಗಗನಕ್ಕೆ ಇಡಲದು ಮಂದರ । ಗಿರಿ ತಾನು ನೆಲಕೆ ಬೀಳ್ವಂತೆ ॥ ೫೩ ॥
ಕೆಡೆಯಲು ನಸುನಕ್ಕು ಜ್ಞಾನೇಂದು ಕುವರನು । ನಡೆವುತಿರಲು ಮುಂದಕಾಗಿ ॥
ಸಿಡಿಲಂತೆ ಗಜರಿ ಗರ್ಜಿಸಿ ಮುಂದಕೆ ತಾ- । ನಡಿಯಿಡಲಮ್ಮದೆ ಬೆರ್ಚ್ಚಿ ॥ ೫೪ ॥
ಹರಿಘೋರವ್ಯಾಘ್ರತರಕ್ಷು ಕಿರಿಕೀಟಿ । ನರಿ ಭಲ್ಲೂಕ ಲುಲಾಯ ॥
ಮೆರೆವ ಖಡ್ಗಿಯಮೃಗ ಯೆಯ್ಯಂದಿ ಕಾಳ್ನಾಯಿ । ಮೊರೆವ ಶರಭರಾಮ ಕಡವ ॥ ೫೫ ॥
ಇವು ಮೊದಲಾದ ಮೃಗಾವಳಿಯನು ಕಂಡು । ಕುವರ ಮುಗುಳುನಗೆ ನಗುತ ॥
ತವಕದಿಂ ಮುಂದಡಿಯಿಡುತಿರಲಾಗೊಂದು । ಸವರುತ ವನವ ಗರ್ಜಿಸುತ ॥ ೫೬ ॥
ಕಡುಬೇಗದಿಂದ ಲಂಘಿಸುತ ಬಾಲವನು ತಾ- । ನೊಡನೆ ದುಂಡಿಸುತ ಬಾಯ್ದೆರೆದು ॥
ಪೊಡವಿಪನೆಡೆಗೈತರುತಿರೆ ಜ್ಞಾನೇಂದು । ಹಿಡಿದೊಂದು ಸಿಂಹನ ಕಾಲ ॥ ೫೭ ॥
ಇಡಲಾ ಹುಲಿಯನು ಸಿಂಹನದನು ಕರ್ಚಿ- । ದೊಡನೆತ್ತಿ ಕೊಂಡೋಡಿದುದು ॥
ತೊಡೆಯನು ತಟ್ಟಿಕೊಳುತ ಜ್ಞಾನಚಂದ್ರನು । ನಡೆವುತಿರಲು ಮುಂದಕಾಗಿ ॥ ೫೮ ॥

ಹರಿಯೊಂದು ಬಂದಾಗ ಕರಿಶಿರವನು ಪೊಯ್ಯೆ। ಶರಭನಾ ಸಿಂಹನ ಕರ್ಚೆ ॥
ಭರದಿಂದ ಗಂಡಭೇರುಂಡನಷ್ಟಾಪದ। ಶಿರಗರ್ಚಿ ಪಾರೆಯುಂಬರಕೆ ॥ ೫೯ ॥

ಶಿರಗರ್ಚಿವೊಂದೊಂದರ ಜೋತಾಡುವ। ವರಭಾವವೊಪ್ಪಿತೆಂತೆನಲು ॥
ಪರಕಿಸಿ ಮಾರಿಯುಂಬರನೆಲವಿನೊಳಿಟ್ಟ। ನೆರೆಬೋನಗುಡಿಕೆ ಸಾಲಂತೆ ॥ ೬೦ ॥

ಅರಸುಕುಮಾರನಿಂತಪ್ಪ ಕೌತುಕವನು। ದರಹಸಿತಾನನದಿಂದ ॥
ಹರುಷೋತ್ಕರನಾಗಿ ನೋಡುತ ಮುಂದಕೆ। ತೆರಳುತಿರಲು ವನದೊಳಗೆ ॥ ೬೧ ॥

ಕೊಂಡು ಮುಸುವ ಸೇಂಗಳಿಕ ವಾನರಗಳ। ಹಿಂಡುಹಿಂಡುಗಳೇರಿ ಮರವ ॥
ಕಂಡು ನೃಪನ ಕಿರಿಕಿರಿಯೆಂದರಚುತ। ಲಂಡತನದಿ ಕೊಂಬೆಗಳನು ॥ ೬೨ ॥

ಕರದೊಳು ಪಿಡಿದಲುಗಿಸುತ ಥರ್‍ರೆಂದಾಗ। ಕಿರಿವುತ ಪಲ್ಗಳೇಡಿಸುತ ॥
ಮರದಿಂ ಮರಕೆ ಲಂಘಿಸಿ ಲಾಗುದೋರುತ। ಚರಣದಿ ಕೊನೆಗಳ ತಬ್ಬಿ ॥ ೬೩ ॥

ತಲೆಕೆಳಕಾಗಿ ಜೋತಾಡುತ ಕರಗಳ। ನಲವಿಂತಪ್ಪಳಿಗುಟ್ಟುತಾಗ ॥
ಗಲಗಲ ಗಿಲಿಗಿಲಿರೆಂದು ಮರದ ಕೊಂಬ-। ನಲುಗಿಸಿ ಕುಣಿಕುಣಿದಾಡೆ ॥ ೬೪ ॥

ಒಂದರ ಕೊರಳನೊಂದೊಂದಾಲಿಂಗಿಸಿ। ಚಂದದಿಂ ಕೆಡೆವಾಡುತಾಗ ॥
ಒಂದು ಪೆರ್ಮರದಿಂದೊಂದು ಮರಕೆ ತಾ-। ನೊಂದು ಲಂಘಿಸುತ ಭೂಪತಿಯ ॥ ೬೫ ॥

ನಗಿಸುತ ಬಲಿಮುಖಗಳು ಇರುತಿರಲೊಂದು। ಪ್ಲವಗ ತನ್ನಯ ಮರಿಗಳನು ॥
ಸೊಗಸಿಂದ ಹೊಟ್ಟೆಯೊಳಗೆಯೌಂಚಿಕೊಂಡಾಗ। ನೆಗೆವುದ ಕಂಡನಾ ರಾಯ ॥ ೬೬ ॥

ಮರದೊರಗಿರ್ದುರಗನ ಕಪಿಯಾಗೊಂದು। ಕರದಿಂದ ಪಿಡಿಯೆ ಭುಸ್ಸೆಂದು ॥
ಮೊರೆದು ಹೆಡೆಯನೆತ್ತೆ ಕಪಿ ನೋಡಲಮ್ಮದೆ। ತಿರುಗಿ ಮುಖವನಡ್ಡಲಾಗಿ ॥ ೬೭ ॥

ಬಿಡಲಮ್ಮದೆ ಸರ್ಪನ ಹಲ್ಲ ಕಿರಿವುತ। ಗಡಗಡ ನಡುಗುವ ಕಪಿಯು ॥
ಪೊಡವೀಶ್ವರ ಕಂಡು ಮುಗುಳ್ನಗೆಯಿಡುತಾ-। ಗಡಿಯಿಟ್ಟು ಬರುತಿರೆ ಮುಂದೆ ॥ ೬೮ ॥

ನೆಗೆದು ಬಂದಾಗ ನವಿಲು ಸರ್ಪಂಗಳ-। ನಗಿಯಲವರ ಹೆಡೆವಣಿಯು ॥
ಒಗೆಯಲಾ ಮಣಿಗಳ ಧಗಧಗಿಸುವ ಕಾಂತಿ। ಮಿಗೆ ಸೂಸೆಯದರ ಬೆಳಗಲಿ ॥ ೬೯ ॥

ಅರಮಗ ನಡೆದು ಬರುತಲಿರೆ ಗಮಕದಿ। ಪರಭೃತ ಶುಕ ಪಾರಿವಾಳ ॥
ಕರಿಯ ಹಕ್ಕಿಯು ಗುಂಮುಲಾವುಗೆ ಕೇಂಬೋತ। ಮರಕುಟುಕನು ಮಣಿಸೋರೆ ॥ ೭೦ ॥

ಗೊಡಸುವ ಗೊರವನರಸುವಕ್ಕಿ ಜಾತಕ। ನುಡಿದಾಡುವ ಹಾಲುವಕ್ಕಿ ॥
ಒಡನೆ ಪಾರುವ ಪದ್ದು ಹಸುಬ ಸಾಳುವನಾದಿ। ಕಡುಬೇಗದಿಂ ಮರನೇರಿ ॥ ೭೧ ॥

ಚಿಲಿಪಿಲಿ ಚಿಯೊ ಪಿಯೊ ಗುಡು ಗುರುಂಮ್ಮುಗಳೆಂದು। ಉಲಿವ ಪಕ್ಕಿಯ ರವಗಳನು ॥
ನಲವಿನಿಂದರಮಗ ಕೇಳುತ ಬರುತಿರೆ। ಗಿಳಿವಿಂಡು ಇಂತಾಡಿದುದು ॥ ೭೨ ॥

ಇವನಾವನೋ ಕಡು ಬೆಡಗಿಂ ನಡೆದು ಬರ್ಪ । ಕುವರ ನಮ್ಮಯ ಬನದೊಳಗೆ ॥
ತವಕದಿಂ ಹಿಡಿಯಿರೊ, ಹಿಡಿ ಭೋ ಎಂದಾಗ । ಕುವರನ ನಗಿಸಿತೇನೆಂಬೆ ॥ ೭೩ ॥

ಸಿಕ್ಕಿದೆ, ಎಲೆ ಅಣ್ಣ ! ಜಾಣ ಇನ್ನು ಹೇಗೆ । ಗಕ್ಕನೆ ಹೇಳು ನಮ್ಮೊಡನೆ ॥
ಫಕ್ಕನೆ ನಿನ್ನ ಬಿಡಿಸಿಕೊಂಬವರಾರು । ಚೆಕ್ಕನೆ ಕಟ್ಟಿಹಾಕಿದರಿ ॥ ೭೪ ॥

ದಮ್ಮಯ್ಯ ದಕ್ಕಯ್ಯ ಎನ್ನಲು ಬಿಟ್ಟೇವು । ಸುಮ್ಮನೆ ಬಿಡುವವರಲ್ಲ ॥
ಹೆಮ್ಮೆಯಿಂದಲಿ ನಕ್ಕೆಯ ಹೆ ಹೇ ಎಂದು । ಗಮ್ಮನಾಡಿದುದೊಂದು ಪಕ್ಕಿ ॥ ೭೫ ॥

ವಾರಿಯ ಹೊಳಲಂತುಗುರ್ವಿಪಾರಣ್ಯಕೆ । ಆರು ಸಂಗಡವಿಲ್ಲ ನೀನು ॥
ಮಾರಾಕಾರನೆ ! ಒಬ್ಬನೆ ಬರುವರೆ । ಕ್ರೂರಮೃಗವು ಕಾಣೆ ನಿನ್ನ ॥ ೭೬ ॥

ಬಿಡುವುದಿಲ್ಲವು ಸುಮ್ಮನೆ ಸಾಯಬೇಡೆಲೆ । ಪೊಡವಿಪ ! ಹಿಂದಕೆ ತಿರುಗು ॥
ಒಡನೆ ನಾ ಬಂದು ಕಳುಹಲೇನಲ್ಲವೊ ಎಂದು । ನುಡಿದುದು ಆ ರಾಜಕೀರ ॥ ೭೭ ॥

ಅರವುಗನದರ ನುಡಿಯ ಕೇಳಿ ನಸುನಕ್ಕು । ಚರಣವಿಡಲು ಮುಂದಕಾಗ ॥
ಒರೆದುದು ಮಾರ್ಕೊಂಡು ಮತ್ತೊಂದು ಪಕ್ಕಿಯು । ನೆರೆಗಲಿ ಸಾಮಾನ್ಯನಲ್ಲ ॥ ೭೮ ॥

ಧರೆಯ ಕಿತ್ತಾಕಾಶಕೆ ಹಾಕುವ ಶಕ್ತಿ । ಗಿರಿಗಳ ಕರದೆ ಚೂರ್ಣಿಸುವ ॥
ವರ ಶಕ್ತಿಯುಂಟೆ ಬಿನುಗುವಿುಗಂಗಳ । ನೆರವಿಯ ಲೆಕ್ಕಿಪನಲ್ಲ ॥ ೭೯ ॥

ಧನುಜಾಮರರೆಲ್ಲ ಕಿಂಕರರುಗಳಾಗಿ । ಮಿನುಗುವೀತನ ಪಾದವನು ॥
ಘನಭಕ್ತಿಯಿಂ ಸೇವೆಯನೆಸಗುವರೆನೆ । ಮನದೊಳು ಭಯವುಂಟೆ ಇವಗೆ ॥ ೮೦ ॥

ನೀರಿಗೆ ಹಾಕಲಿವನ ದೇಹ ಕೊಳೆಯದು । ಚೂರಿಯಿಂದಿರಿಯೆ ಭೇದಿಸದು ॥
ಘೋರೆಂದುರಿವಗ್ನಿಯೊಳೆ ಹಾಕೆ ಬೇಯದು । ಕಾರಣಪುರುಷನು ಇವನು ॥ ೮೧ ॥

ಮುಂದಕ್ಕೆ ಹೋದಲ್ಲೀ ಸುಕುಮಾರಗೆ । ಒಂದು ಮನೋಹರ ವಸ್ತು ॥
ಸಂದೇಹವಿಲ್ಲ ಕೈಸಾರ್ಗೆಂದು ನುಡಿದುದಾ- । ಗೊಂದು ಪತತ್ರಿ ಲೀಲೆಯೊಳು ॥ ೮೨ ॥

ಈ ವಿಹಂಗವು ತಾನೇನ ಬಲ್ಲುದೊ ಎಂದು । ಭಾವಜ್ಞ ನಸುನಗುತಾಗ ॥
ತೀವಿದ ಸಂತಸದಿಂ ಮುಂದಕ್ಕೈದುವ । ಆ ವೇಳೆಯೊಳು ಸಾರಗೊಂದು ॥ ೮೩ ॥

ನವಹೆಡೆಗಳನಾಂತ ಸರ್ಪನ ತಾನಾಗ । ತವಕದಿಂ ಹುಲ್ಲಸರವಿಯ ॥
ಸವಿಮಾಡಿಕೊಂಡು ಜಗಿವ ಕೋಣನಂದದಿ । ಲವಲವಿಕೆಯಿಂ ತಿನ್ನುತಿರಲು ॥ ೮೪ ॥

ಹುಲಿ ಬಂದು ಸಾರಗವನು ಹಿಡಿದಗಿವಾಗ । ಘಳಿಲನೆಯಜಗರವೊಂದು ॥
ಹುಲಿ ಸಾರಂಗ ಸರ್ಪಗಳನೊಂದೇ ಬಾರಿ । ನಲವಿಂದ ನುಂಗಿ ಹೆಮ್ಮರನ ॥ ೮೫ ॥

ಸುತ್ತಿ ಮೂವಳಸಾಗಿ ಬಿಗಿಯಲೊಳಗೆ ನುಂಗಿ । ಸತ್ತ ಜೀವಗಳಸ್ಥಿಗಳ ॥
ಮೊತ್ತವು ಸಿರಿ ಸಿರಿ ಸಿರಿಕೆಂದು ಮುರಿವುದ । ಚಿತ್ತಜಸಿಭ ಕೇಳಿದನು ॥ ೮೬ ॥

ಕರಿಯ ಭೃಂಹಿತಗಳು ಎಲ್ಲಿಯು ನೋಡಲು । ಹರಿಯ ಘರ್ಜನೆಯಾವಲ್ಲಿ ॥
ಶರಭನ ಹೂಂಕೃತಿ ದಿಕ್ಕು ದಿಕ್ಕುಗಳಲ್ಲಿ । ನರಿಗಳ ಕೂಗಾಟವೆಲ್ಲೆಲ್ಲಿ ॥ ೮೭ ॥

ಹುಲಿಯ ಮೊರಹು ಫಣಿಗಳ ಫೂತ್ಕಾರವು । ವಿಲಸಿತ ನವಿಲ ಕ್ರೇಂಕಾರ ॥
ಹಲವು ಭೇರುಂಡವಕ್ಕಿ ಖರಕಲವಲ್ಲಿ । ನೆಲಸಿದವಾವಟಾವಿನೊಳು ॥ ೮೮ ॥

ಇಂತಪ್ಪ ಭೀಕರಾರಣ್ಯವ ನೋಡುತ । ಕಂತು ಸಮಾನ ಜ್ಞಾನೇಂದು ॥
ಅಂತಕನಾಡುಂಬೊಲದಂತೆ ರಾಜಿಪ । ಮುಂದಿರ್ಪ ಪಕ್ಕಣಾಲಯಕೆ ॥ ೮೯ ॥

ನಡೆತರುತ್ತಿರಲಲ್ಲಿ ಎಳೆಯ ಶಬರಿಯರು । ಉಡಿಗುಟ್ಟು ಭುಜಪತ್ರವನು ॥
ಸಡಗರವಿಗೆ ಪೀಲಿಯಿಂ ಪೆಣೆದ ಬೆ- । ಳ್ಳುಡೆ ನೂಲನು ಸುತ್ತಿ ಮುಡಿಗೆ ॥ ೯೦ ॥

ಕಡೆದ ಬೊಗರಿ ಮೊಲೆಗಳ ಕುಣಿಸಾಡುತ । ಕಡಲ ನೀಲದ ಬೊಂಬೆಯಂತೆ ॥
ಅಡಿಯಿಡುತ್ತಿರ್ದು ಬರುವ ಬೇಡತಿಯರ । ಬೆಡಗನು ಕಂಡನು ಪೆಂಪಿಂ ॥ ೯೧ ॥

ಪೀಲಿಯನಿರಿ ಪಸರಿಸೆ ಕಳ್ಳ ಸೊಕ್ಕಿಂದ । ಮೇಲಿಟ್ಟು ಸ್ತನದ ವಲ್ಲಕಿಯ ॥
ಓಲಾಡುತ ನವಿಲಂತೆ ನರ್ತಿಸುತ್ತಿರ್ಪ । ಬಾಲಶಬರಿ ಕಂಡನರಸ ॥ ೯೨ ॥

ಹುಲ್ಲೆಯ ಮಣಿಸರಗಳನಿಟ್ಟು ಕಾಡ- । ಮೊಲ್ಲೆಯಲರ ಮುಡಿಗಿಟ್ಟು ॥
ಹುಲ್ಲೆಗಂಗಳ ಪಸರಿಸುತ ನಡೆದು ಬರ್ಪ । ತಳ್ಳೋದರಿಯರ ಕಂಡ ॥ ೯೩ ॥

ಗುರುಗುಂಜಿಸರ ತೋರಮೊಲೆಯ ಮೇಲೊಲೆದಾಡೆ । ಹರಿಣಿಯ ಚರ್ಮವನುಟ್ಟು ॥
ಸ್ವರದೋರಿ ಕೋಗಿಲೆಯಂತೆ ನಡೆದು ಬರ್ಪ । ಮರಿ ಬೇಡತಿಯ ನಿಟ್ಟಿಸಿದ ॥ ೯೪ ॥

ಹೆರೆಯಂದದ ವಿಭೂತಿಯ ರೇಖೆ ನೊಸಲೊಳು । ಧರಿಸಿದ ಬೇಡತಿಯಿಹಳು ॥
ಅರೆವೆರೆಯೊಡಗೂಡಿ ರಾರಾಜಿಸುತ್ತಿರ್ಪ । ಕರಿಯ ಮೇಘವೋ ಎಂಬಂತೆ ॥ ೯೫ ॥

ತಳಿರುಡುಗೆಯನುಟ್ಟು ಸಣ್ಣನಾಮದ ರೇಖೆ । ಪೊಳೆಯೆ ನಾಸಿಕದ ಮೂಲದೊಳು ॥
ನಳಿನಾಸ್ತ್ರನ ಕೈಯ್ಯಲಗಿನಂದದೊಳು ತಾ । ಬಳುಕುತ್ತೈದುವಳನು ಕಂಡ ॥ ೯೬ ॥

ಹರಿಣಿವಿಂಡುಗಳು ಬಳಸಿಕೊಂಡು ಇರಲಾಗ । ಸ್ವರದೋರುತ ವೇಣುಗಚ್ಚಿ ॥
ಚರಣದ ಮೇಲೆ ಚರಣವಿಟ್ಟು ನಿಂದಿರ್ದ । ಮರಿ ಬೇಡತಿಯನು ಕಂಡ ॥ ೯೭ ॥

ಈ ವನಕೆಂದೆಂದೂ ರವಿಕಾಂತಿ ಬಾರದು । ಭಾವೆ ! ನೋಡಾ ಕಾಂತಿಗೂಡಿ ॥
ಈ ವನಕಿನ್ನೈತಂದನಚ್ಚರಿಯೆಂದು । ಭೂವರನನು ತೋರಿದಳು ॥ ೯೮ ॥

ಸಮ್ಮಾರಾಮುದಲಂಪ ನೋಡುವೆನೆಂದು । ಸುಮ್ಮಾನದಿಂದಾ ರಾಮು ॥
ಗಮ್ಮನೈದಿದನಲ್ಲದೆ ಬೇರಲ್ಲೆಂದು । ಕಮ್ಮಗೋಲನ ನೋಡಿದರು ॥ ೯೯ ॥

ಇಂತು ಕವ್ವರಿಗೊಂಡು ನೋಡುವ ಶಬರೀರ । ತಿಂಥಿಣಿಯನು ನೋಡುತರಸ ॥
ಮುಂತಕೆ ತಾನೈದುವಾಗಲೊಂದೆಡೆಯೊಳು । ದಂತಿದಂತಗಳೊನಕೆಯನು ॥ ೧೦೦ ॥

ಕರದೊಳಗಾಂತು ಚಂದನದ ಒರಳಿನಲ್ಲಿ । ಸುರಿದಾಗ ಬಿದಿರಕ್ಕಿಗಳನು ॥
ಸ್ವರವೆತ್ತಿ ಸುವ್ವಿ ಸುವ್ವಿ ಸುವ್ವಾಲೆಂ- । ದುರೆ ನಳಿತೋಳ್ಗಳನೆತ್ತಿ ॥ ೧೦೧ ॥

ಎರಕದೊಳಗೆ ಕುಟ್ಟುವ ಬೇಡತಿಯರ । ಗುರುಕುಚ ಕುಣಿ ಕುಣಿದಾಡೆ ॥
ತುರುಬು ಸಡಲಿ ಪುಷ್ಪವೊಗುತಿರೆ ಜ್ಞಾನೇಂದು । ಮುರುಕದಿಂದರಸ ಕಂಡವರ ॥ ೧೦೨ ॥

ಸ್ತನತಟದೊಳು ಅಲೆದಾಡುವ ಹುಲ್ಲೆಯ । ಮಿನುಗುವ ಸರಮೊಪ್ಪಿದವು ॥
ಘನದಂಜನಗಿರಿಯೆರಡರ ನಡುವಣ । ತೊನೆದಾಡುವ ಮಿಂಚಿನಂತೆ ॥ ೧೦೩ ॥

ಉಗುಳನಂಗೈಗೆ ಉಗುಳಿ ತೇವಗೊಳಿಸುವ । ಸೊಗಸಿಂದಲೊನಕೆಯ ಪಿಡಿದು ॥
ಮುಗುಳಂಬನಂಕಮಾಲೆಯ ಪಾಡಿ ಕುಟ್ಟುವ । ಮುಗುಧೆ ವೆಣ್ಣುಗಳನು ಕಂಡ ॥ ೧೦೪ ॥

ಸುದತಿಯರೇರಿಕ್ಕುವೇಳೆಯೊಳುಸ್ಸೆಂದು । ಒದವಿ ಸುಯ್ಲಿನ ಸುಗಂಧಕ್ಕೆ ॥
ಮಧುಪಗಳ್ಪೇರೊಂದು ನೀಲದೊನಕೆಯಂತೆ । ಮುದದಿ ನಿಂದಿರುವುದ ಕಂಡ ॥ ೧೦೫ ॥

ವನಚರಿಯರು ಕುಟ್ಟಲು ಮೈ ಬೆಮರ್ತಾಗ । ಪನಿಯೊಗುವಂದ ಕಾಣಿಸಿತು ॥
ಮಿನುಗುವ ಕಾರ್ಗಾಲ ಮೇಘದಿಂದೊಗೆತಪ್ಪ । ವನಗಳ ಪನಿಗಳೆಂಬಂತೆ ॥ ೧೦೬ ॥

ನರನಾಥ ಬೇಡಾಂಗನೆಯರ ಬೆಡಗನು । ಎರಕದಿಂ ನೋಡುತಲಾಗ ॥
ಹರುಷದಿಂದಲೆ ನಡೆತರುತಿರೆ ಮುಂದೊಂದು । ತರಣಿಯಂದದಿ ಥಳಥಳಿಪ ॥ ೧೦೭ ॥

ದೊರೆ ಕುವರನ ಕಣ್ಗೆ ಕಾಣಿಸಿತೇನೆಂಬೆ । ಸರಸಿಜಭವ ಸುರರ್ಗಳ್ಕಿ ॥
ಸುರಗಿರಿಯನು ತಂದೀ ವನದೊಳು ತಾನು । ಮರೆ ಮಾಡಿ ಬೈಚಿಟ್ಟಂತಿಹುದು ॥ ೧೦೮ ॥

ಸುರಚಾಪಗಳೊಬ್ಬುಳಿಗೊಂಡು ತಾವೆಲ್ಲ । ಗಿರಿಯ ರೂಪುಗಳಾದಂತೆ ॥
ಸುರುಚಿರ ಕಾಂತಿಯ ದಿಕ್ಕುವಿದಿಕ್ಕಿಗೆ । ಸುರಿವ ಗಿರಿಯ ಕಂಡನರಸ ॥ ೧೦೯ ॥

ಕುಂಭಜನಂಬೋಧಿಯನೀಂಟೆಯುದರೊಳು । ತುಂಬಿ ರಾಜಿಪ ರತ್ನಗಳ ॥
ಅಂಬುಜಭವನಿಲ್ಲಿ ರಾಶಿಗೈದನೊ ಎನೆ । ಕುಂಭಿನೀಧರ ಕಾಣಿಸಿತು ॥ ೧೧೦ ॥

ಸರಸ್ವತಿಯೊಳು ಬೊಮ್ಮನೇಕಾಂತ ತಾಪಿನೊ- । ಳಿರಬೇಕು ಎಂದು ರಚಿಸಿದ ॥
ಕರುಮಾಡವೊ ಎಂದೆನೆ ತೋರಿತರಸಗೆ । ಮೆರೆದಿತ್ತು ಶೂಕರಶೈಲ ॥ ೧೧೧ ॥

ದೊರೆ ದೊರೆಗಳ ಧನಿಕರ ಭಂಡಾರವ । ಕರಿಕ ಬೇಡರು ಕನ್ನಗೊರೆದು ॥
ಮರೆ ಮಾಡಿ ಸುರಿದ ಹೊನ್ನಿನ ರಾಶಿಯೆಂಬಂತೆ । ಗಿರಿ ಕಾಣಿಸಿತು ಕುವರಗೆ ॥ ೧೧೨ ॥

ಥಳಥಳಿಸುವ ಶೂಕರಾದ್ರಿಯ ನೋಡುತ । ಇಳೆಯಾಣ್ಮನದರ ತಪ್ಪಲಿಗೆ ॥
ನಲವಿನಿಂ ನಡೆತಂದು ಮೇಲಕೆ ನೋಡಲು । ಹೊಳೆವುದು ಶಿಲೆಗಳೆಂತೆನಲು ॥ ೧೧೩ ॥

ಸರಸಿಜಭವ ಚಂದ್ರಸೂರ್ಯನಕ್ಷತ್ರವ । ಎರಕದಿ ನಿರ್ಮಿಸಿ ಮಿಕ್ಕ ॥
ಮೆರೆವ ಕುಳುಪುಗಳೀ ಗಿರಿಯೊಳೊಟ್ಟಿದನೆನೆ । ತರಣೀಂದುಕಾಂತವಲ್ಲಿಹುದು ॥ ೧೧೪ ॥

ಹಸುರು ಪಚ್ಚೆಯ ಕೋಡುಗಲ್ಲಿನ ಕಾಂತಿಯು । ಶಶಿಕಾಂತ ಶಿಲೆಯೊಳು ಪೊಳೆಯೆ ॥
ಹಸುರಾದ ಹುಲ್ಲೆಂದು ತುಡುಕಿ ಹರಿಣಗಳು । ದೆಸೆಗೆಟ್ಟು ಹರಿವವು ಸಾಣ್ಮೆ ॥ ೧೧೫ ॥

ಹುಲಿ ಬಾಯಿದೆರೆದು ಬರ್ಪಾಗ ನೆಳಲು ತನ್ನ । ಪಳುಕಿನ ಶಿಲೆಯೊಳ್ಬಿಂಬಿಸಲು ॥
ಘಳಿಲನೆ ಬೇರೊಂದು ಹುಲಿಯೆಂದು ಲಂಘಿಸಿ । ತಲೆಯ ತಾಟಿಸಿಕೊಂಡಿಹುದು ॥ ೧೧೬ ॥

ಬಲಿಮುಖಕಿತ್ತು ಳಿಹಣ್ಣೆಂದು ದೂರದಿ । ಪೊಳೆಯಲು ಶಶಿಕಾಂತದೊಳು ॥
ಘಳಿಲನೆ ಕೈಯಿಟ್ಟು ತೆಗೆವುದು, ಬರದೊಡೆ । ಸುಳಿದು ಬಾಯಿಂದ ಕರ್ಚುವುದು ॥ ೧೧೭ ॥

ರದನವು ಕಟುಕೆಂದು ಶಿಲೆಯೊಳು ತಾಗಲು । ಬೆದರಿ ಮುಖವ ತಾನು ತೆಗೆದು ॥
ಅದ ನೋಡಿ ಹಲ್ಲನು ಕಿರಿವುತ ಕಿರ್ರೆಂದು । ಒದೆದಿಕ್ಕುವುದೊಮ್ಮೆ ಕೈಯ ॥ ೧೧೮ ॥

ಅರಮುಗನಿಟ್ಟಿಸಿ ನಸುನಗೆನಗುತಾಗ । ಗಿರಿಯನೊಂದಿಸಿತೇರುವಾಗ ॥
ಪರಿದಾಡುತ ಝುಲ್ಲಿಗಳನು ಕೆದರುತ್ತ । ಗಿರಿಯನಿಳಿದು ಬರುವಾಗ ॥ ೧೧೯ ॥

ಚಮರೀಮೃಗಂಗಳ ಹಿಂಡು ಹಿಂಡುಗಳ ಭೂ- । ರಮಣನೀಕ್ಷಿಸಿ ಕಡು ಬೆದರಿ ॥
ಗಮನವ ಹಿಂದೆ ಮಾಡುತ ಬಿರುಗಾಳಿಯ । ತಮತಮಗೆಲ್ಲ ಓಡಿದವು ॥ ೧೨೦ ॥

ಉರದೊಳು ನಾಲ್ಕು ಬೆನ್ನೊಳು ನಾಲ್ಕು ಚರಣದಿಂ- । ದುರುಳಿ ಮರಳಿ ಶಿರವೆರಡ ॥
ತಿರುಗಿಸುತಾಗಲಷ್ಟಾಪದಂಗಳು । ಗಿರಿಯೊಳು ಹಿಂಡು ಹಿಂಡಾಗಿ ॥ ೧೨೧ ॥

ಹರಿಗಳ ಹಿಡಿದು ನುಂಗುತಲೋಡಿಯಾಡುವು- । ದರನುಗ ಕಾಣುವ ಮುದದಿ ॥
ಸ್ವರದೋರಿ ಬೆರ್ಚಿ ಬೆದರಿ ದಿಕ್ಕು ದಿಕ್ಕಿಗೆ । ಹರಿದವವನ ಸತ್ವವೆಂತೋ ॥ ೧೨೨ ॥

ಶಿಲೆಯೊಳೆಲ್ಲಿಲ್ಲಿಯು ಪುಣುಗು ಜವಾದಿಯ । ನಲವಿನಿಂ ಪುಣುಗು ಜವಾದಿ ॥
ಚೆಲುವ ಬೆಕ್ಕುಗಳೊರಸಿರಲಾ ಗಂಧವು । ಪಲವು ದಿಕ್ಕಿಗೆ ತುಂಬಿರಲು ॥ ೧೨೩ ॥

ಪರಿಮಳವನು ನಾಸದೊಳೀಂಟುತ ರಾಯ । ಬರುತಿರೆ ಶಶಿಕಾಂತದೊಳು ॥
ಸುರಸತಿ ಪುಂಭಾವದೊಳಗೋರ್ವ ಸುರನೊಳ- । ಗಿರುವಂದ ಕಂತ ಲೀಲೆಯೊಳು ॥

ಚೆನ್ನೆಯೋರ್ವಳು ಮುನಿಸಿಂ ಮೈಯಗೊಡದಿರೆ । ಕಿನ್ನರನವಳಡಿವಿಡಿದು ॥
ನನ್ನಾಣೆ ಮುನಿಸು ಬೇಡೆಂದು ನಿರವುದನು । ಮನ್ನೆಯರಾಯ ತಾ ಕಂಡು ॥ ೧೨೫ ॥

ತಾರಾಸತಿ ನಲ್ಲನೊಳು ಮುನಿದೋರ್ವಳು । ನೀರನೊದೆಯೆ ಕಾಂಚಿಯದ ॥
ಭಾರಿಯ ಘಂಟೆ ಕೀಲುರ್ಚಿ ಥಣರು ಎನೆ । ನಾರಿ ಪಿಡಿವುದನು ಕಂಡು ॥ ೧೨೬ ॥

ಗಗನೇಚರ ತನ್ನ ನಲ್ಲಳ ಮುದ್ದಿಸಿ । ಬಿಗಿದುಟ್ಟ ನಿರಿಯು ಕಳೆಯಲು ॥
ತೆಗೆದು ಕುವರಿ ನೂಂಕಿ ಲಜ್ಜೆಯಿಂ ಗುಂಡಿನ । ಮಿಗೆಯೋಡಿ ಮರೆಗೊಳ್ಳೆ ಕಂಡ ॥

ಗುಂಡಿಂದೊಂದು ಗುಂಡಿಗೆ ಲಂಘಿಸಿ ಕಾಲ- । ಪೆಂಡೆಯು ಘಲಘಲಲೆನಲು ॥
ಪಿಂಡಿ ಕಂಕಣ ಝುಣಝುಣರೆನಲು ಭೂ- । ಮಂಡಳೇಶಡರ್ದನು ಗಿರಿಯ ॥ ೧೨೮ ॥

ಇರದೇರಿ ನೋಡುತಿರಲು ಪೆಣ್ಣುಸಿಂಹನೊಂ- । ದೊರಲುತ ಪೊಸ ಹೆರಿಗೆಯಲಿ ॥
ಹೆರಲಾ ಮರಿ ಹೋಗಿ ಕರಿಯ ಶಿರವ ತಾ- । ನಿರದೆ ಸೀಳುವುದ ಕಂಡರಸ ॥ ೧೨೯ ॥

ನಡೆದು ನಡೆದು ಮುಂದಕೆ ರಾಯನೈದಲು । ಪೊಡವಿಯೆಲ್ಲವ ನುಂಗಲೆಂದು ॥
ಒಡನೆ ಭೂಧರವೆಂಬ ರಕ್ಕಸಿ ಬಾಯನು । ಬಿಡದೆ ತೆರೆದಳೆಂಬಂತೆ ॥ ೧೩೦ ॥

ಅತಿ ಭೀಕರವಾದ ಗುಹೆಯನು ತಾ ಕಂಡು । ಕ್ಷಿತಿಪನದರ ಮುಂದೆ ಬರಲು ॥
ಸತಿಯೋರ್ವಳು ಜಪಸರವ ಕರದೊಳಾಂತು । ಮತಿವಂತೆ ಜಪಿಸುತಲಿರಲು ॥ ೧೩೧ ॥

ರವಿರಶ್ಮಿಯನು ತಿರಸ್ಕಾರವ ಮಾಳ್ಪ । ಕುವರಿಯ ದೇಹಕಾಂತಿಯನು ॥
ಕವಿಜನನುತ ಜ್ಞಾನಚಂದ್ರಕುಮಾರನು । ಎವೆ ಹಳಚದೆ ನೋಡಿದನು ॥ ೧೩೨ ॥

ಆರೀ ಕುವರಿ ಫಣಿಪನ ಸತಿಯೋ, ಮೇಣು । ಮಾರನ ರಾಣಿಯೋ, ಹರಿಯ ॥
ನಾರಿಯೋ, ಬಿದಿಯ ಸತಿಯೋ, ಶಶಿಯರಸಿಯೋ । ವಾರಿಜಾಕ್ಷನ ಪ್ರಿಯತಮೆಯೋ ॥

ಹರನರ್ಧಾಂಗಿಯೋ, ಕಿನ್ನರ ಸತಿಯೋ, ತಾ । ತರಣಿಯ ಪಟ್ಟದ ವಧುವೋ ॥
ಸುರಸತಿಯರೊಳೋರ್ವಳೋ, ಯಕ್ಷಕುಲಜೆಯೋ । ವರ ವನದೇವಿಯೋ ತಾನು ॥

ಗಿರಿಶನ ಮಸ್ತಕವೇರಿದ ಕನ್ನೆಯೋ । ಗರುವೆ ಯಾರಿವಳು ಭಾವಿಸಲು ॥
ಪರಿಕಿಪೆ ತಾನೆಂದು ಜ್ಞಾನೇಂದು ಕುವರನು । ತುರಿಹದಿಂದಲ್ಲಿಗೆ ಬರಲು ॥ ೧೩೫ ॥

ಮುಗಿದಕ್ಷಿಮಿಡುಕುವ ಬಾಯಿಯಂಗುಲಿಯೊಳು । ಸೊಗಸು ಜಪದ ಸರ ಮೆರೆಯೆ ॥
ಮುಗುಧೆ ಪಲ್ಯಂಕಾಸನದೊಳು ಮಂಡಿಸಿ । ನಗಧೈರ್ಯದಿಂದಿರೆ ಕಂಡ ॥ ೧೩೬ ॥

ಮಿರಿ ಮಿರಿ ಮಿಂಚುವ ನೀಲವರ್ಣವನಾಂತ । ಮರಿದುಂಬಿಗಳ ಬಳಗವನು ॥
ಜರೆವ ನೀಳಾಳಕಗಳು ವಾಯುವಶದಿಂದ । ತ್ವರಿತದಿ ಕೆದರಿ ವೇಣುಗಳ ॥ ೧೩೭ ॥

ಕೊನೆಗಳೊಳಗೆ ಸುತ್ತಿಕೊಳಲಾ ಕೊನೆಗಳು । ತೊನೆದಾಡಲು ಇತ್ತಲತ್ತ ॥
ವನಿತೆಯ ಶಿರ ನಾಲ್ಕುಂ ದೆಸೆಯೊಳು ತಾನು । ಘನವಾಗಿ ತಿರುಗುತಲಿರಲು ॥ ೧೩೮ ॥

ತರುಣಿಯಿಂತಪ್ಪ ಬಾಧೆಗೆ ತಾನಳುಕದೆ । ಪಿಡಿದು ಜಪವ ಮಾಡುತಿರಲು ॥
ನರನಾಥ ಚಂದ್ರಮನಾಕೆಯ ಧೈರ್ಯಕೆ । ನೆರೆ ಮೆಚ್ಚುತ ಮನದೊಳಗೆ ॥ ೧೩೯ ॥

ಕಡು ದೊಡ್ಡಿತಪ್ಪ ಬಾಧೆಯ ಕಂಡು ಕೃಪೆಯಿಂದ । ಪೊಡವಿಪನಾ ಕುಂತಳದ ॥
ತೊಡಕಿನ ಸಿಕ್ಕನತ್ಯಂತ ಜಿನ್ನಾಣದಿ । ಬಿಡಿಸಿ ಕಳೆದ ನೋಯದಂತೆ ॥ ೧೪೦ ॥

ಆಗ ಮೂವತ್ತೈದು ಲಕ್ಷಂಗಳು ಮತ್ತೆ । ಮಿಗೆ ತೊಂಭತ್ತೇಳು ಸಾವಿರವು ॥
ಆಗಿ ಸಂದುದು ಒಂದು ಕೋಟಿ ಜಪಂಗಳೊ- । ಳಾಗ ವಿದ್ಯಾದೇವತೆಗಳು ॥ ೧೪೧ ॥

ಹರಿವಿಷ್ಟರ ಗಡಗಡನೆ ಕಂಪಿಸೆ ನೋಡಿ । ವರ ಬೋಧದಿಂ ತಾವು ತಿಳಿದು ॥
ಭರದಿಂದಲೈತಂದು ಕೋಮಲೆಯನು ಕಂಡು । ಕರಗಳ ಮುಗಿದು ಭಕ್ತಿಯೊಳು ॥

ಹರುಷದಿಂದಲಿ ಮೂವೆ ಬಲವಂದು ಜಯವೆಂದು । ತರುಣಿಯ ಎದುರಲಿ ನಿಂದು ॥
ವರ ವಿದ್ಯಾಧರ ದೇವತೆಗಳಿಂತೆಂದಾ- । ಗೊರೆದರು ತರುಣಿಯ ಕೂಡೆ ॥ ೧೪೩ ॥

ಅರವಿಂದಾನನೆ ! ನಮ್ಮ ನಿನ್ನಯದೊಂದು । ಪರಮ ತಪದ ಬಲ್ಮೆಯಿಂದ ॥
ನೆರೆ ಮಾರುಗೊಂಡ ನಿನ್ನಯ ಸಾಮರ್ಥ್ಯಕೆ । ಸರಿಯಾರೀ ಧರೆಯಲ್ಲಿ ॥ ೧೪೪ ॥

ನಿನ್ನ ಮನೆಯ ದಾಸಿಯರಾದೆವು ನಾವು । ಚೆನ್ನೆ ! ನಮ್ಮಯ ಕೈಯಿಂದ ॥
ಚೆನ್ನಾಗಿ ಸೇವೆಯ ಮಾಡಿಸಿಕೊಂಬುದು । ನಿನ್ನ ಪಾದವೆ ಗತಿ ಎಮಗೆ ॥ ೧೪೫ ॥

ಎಂದು ಬಿನ್ನವಿಸಿ ಸುತ್ತಲು ನಿಂದುಕೊಂಡಿರ್ದ । ವೃಂದಾರಕಿಯರ ನುಡಿಯ ॥
ಅಂದು ತಾ ಕೇಳಿ ಕಣ್ದೆರೆದು ನೋಡಲು ಮುಂದೆ । ನಿಂದಿರ್ದ ದೇವಿಯರ್ಕಳನು ॥ ೧೪೬ ॥

ನರನಾಥ ಚಂದ್ರಮನನು ಕಂಡು ವಿದ್ಯಾ- । ತರುಣಿಯರ್ಗಿಂತು ನುಡಿದಳು ॥
ಕರೆದಾಗ ಬಂದು ನಮ್ಮಯ ಸೇವೆಯ ನೀವು । ಮರೆಯದೆ ಮಾಡಿ ತಾಯೆಂದು ॥ ೧೪೭ ॥

ವಿನಯದಿಂದವರನು ಬೀಳ್ಕೊಟ್ಟು ಕುವರನ । ಕೊನೆಗಣ್ಣಿನಿಂದ ತಾ ನೋಡೆ ॥
ಮನದೊಳು ಸಾತ್ವಿಕಭಾವಮಂಕುರಿಸಲು । ವನಿತೆ ಹ್ರೀಯಿಂ ತಲೆವಾಗಿ ॥ ೧೪೮ ॥

ಜಿನಮಂದಿರಕಾಗಿ ನಡೆಯಲು ಜ್ಞಾನೇಂದು । ಘನತರ ಹರ್ಷದಿಂ ಗಿರಿಯ ॥
ನೆರೆ ಚೆಲ್ವ ನೋಡುತಲಡಿಯಿಟ್ಟು ಮೆಲ್ಲನೆ । ದೊರೆಮಗ ನಡೆದು ಬಪ್ಪಾಗ ॥ ೧೪೯ ॥

ನೀಲಕಂಠಗಳಾಗ ತೆಟ್ಟೆ ತೆಟ್ಟೆಯೊಳ್ನಿಂದು । ಸಾಲಾಗಿ ಪಕ್ಕವ ಕೆದರಿ ॥
ಲೀಲೆಯಿಂ ತಾಂಡವಗಳನಾಡುವುದ ಭೂ- । ಪಾಲ ಕಂಡನು ನಲವಿಂದ ॥ ೧೫೦ ॥

ಏಳೆಲೆವಾಳೆಯೊಳಿರ್ದ ಕರ್ಪೂರವು । ಗಾಳಿಯಿಂ ಕೆದರಿಯಂಬರವ ॥
ಲೀಲೆಯಿಂ ಮುಸುಕಿರೆ ಬೆಳ್ಮುಗಿಲೊಡ್ಡೆಂದು । ಸಾಲಾಗಿ ಚಾತಕ ನಿಂದು ॥ ೧೫೧ ॥

ಎರಕದಿ ಮೆಲ್ಲನೆ ಬಾಯ ತೆರೆದುಕೊಂ- । ಡಿರುವುದ ಜ್ಞಾನೇಂದು ಕುವರ ॥
ಹರುಷದಿ ನಡೆ ನೋಡುತ ಬರುತಿರಲಾ । ಗಿರಿಯ ತುದಿಗೆ ಹತ್ತಿ ನೋಡೆ ॥ ೧೫೨ ॥

ರಸದ ವಾಪಿಗಳಿಂದ ರತ್ನ ಕೂಪಗಳಿಂದ । ಮಿಸುನಿಯ ಒಡ್ಡುಗಲ್ಲಿಂದ ॥
ಹೆಸನಾದ ರನ್ನದ ಕೋಡುಗಲ್ಲುಗಳಿಂದ । ಎಸೆದುದು ಶೂಕರ ಶೈಲ ॥ ೧೫೩ ॥

ಇಂತು ರಾಜಿಸುವ ಗಿರಿಯ ನೋಡುತ ಭೂ- । ಕಾಂತನು ಬರುತಿರೆ ಮುಂದೆ ॥
ತಾಂ ತಳುವದೆ ಹೊಳೆದುದು ಸುರಕಾರ್ಮುಕ । ತಿಂಥಿಣಿ ನಡೆತಂದಿಲ್ಲಿ ॥ ೧೫೪ ॥

ಮೂವಳಸಾಗಿ ಸುತ್ತಿರ್ದುದೋ ಎಂಬಂತೆ । ಶ್ರೀವಿದ ನವರತ್ನ ಕೋಂಟೆ ॥
ದೇವನಾಲಯುವ ಬಳಸಿಕೊಂಡಿರುವುದ । ಕೋವಿದ ಜ್ಞಾನೇಂದು ಕಂಡ ॥ ೧೫೫ ॥

ಗಿರಿರಾಜನ ಚಾರುಮಸ್ತಕದೊಳಗಿಟ್ಟ । ಸುರುಚಿರ ನವರತ್ನ ಮಕುಟ ॥
ಭರದಿಂದ ಪೊಳೆದುದೋ ಎಂಬಂತೆ ಜಿನವಾಸ । ದೊರೆಯ ಕಣ್ಣಿಗೆ ಕಾಣಿಸಿತು ॥ ೧೫೬ ॥

ನವರತ್ನಖಚಿತ ಕೂಟಗಳಿಂದ ಸೌಧದಿಂ- । ದವರ ಮೇಲ್ಭಾಗದಿಂ ಪೊಳೆವ ॥
ರವಿಬಿಂಬವನು ಜರೆವ ಸ್ವರ್ಣಕಲಶವ । ಭುವನೇಶ್ವರ ಕಂಡನಂದು ॥ ೧೫೭ ॥

ಮಿಳಿರ್ವ ನಾನಾವರ್ಣದ ಕೆಕ್ಕೆಯುಗಳು । ಚಲಿಸುವ ಭಾವಮೊಪ್ಪಿದುದು ॥
ಕಲಿಲಹರನ ದರ್ಶನವ ನೀ ಮಾಡೆಂದು । ನಲವಿನಿಂ ಕರೆವಂತಿಹವು ॥ ೧೫೮ ॥

ಕಡುಚೆಲುವಾದ ಜಿನನ ಗೃಹವನು ಕಂಡು । ಪೊಡವಿಪ ನುಡಿ ಸುತ್ತಿ ಕರವ ॥
ಮುಡಗಿ ಲಲಾಟದೊಳಗೆ ಕೋಟೆಯೊಳ ಪೊಕ್ಕು । ಸಡಗರದಿಂದ ಬಸದಿಯ ॥ ೧೫೯ ॥

ಮೂಮೆ ತಾ ಬಲಬರುತಿರಲು ನೀರಿಲ್ಲದ । ತಾಮರೆಗೊಳ ಸ್ವಚ್ಛೋದಕದಿಂ ॥
ರಾಮಣೀಯಕಮಾಗಿ ತುಂಬಲು ಗೊಳದಲ್ಲಿ । ತಾಮರೆಯಲರ್ದು ಗಂಧವನು ॥ ೧೬೦ ॥

ದೆಸೆದೆಸೆಗಳಿಗೆ ಬೀರುತಲಿರೆ ತುಂಬಿಗ- । ಳಸವಸದಿಂ ತಾವು ಬಂದು ॥
ಹೊಸ ಹೂವಿಗೆ ಝೇಂಕರಿಸುತೆರಗುತಿರೆ । ವಸುಧೇಶ ನಡೆತಂದ ಕೊಳಕೆ ॥ ೧೬೧ ॥

ಹರುಷದಿಂ ಮಿಂದು ತಾ ಸಾಸಿರದೆಸಳಾಂತ । ಸರಸೀರುಹವ ಕೊಯ್ದೆತ್ತಿ ॥
ಅರುಹನ ಗೃಹದೊಳಗೆ ನಲ್ಮೆಯಿಂ ಪೋಗಿ । ವರರತ್ನದಿಂ ಥಳಥಳಿಪ ॥ ೧೬೨ ॥

ಜಿನರಾಜನ ಕಂಡು ವನರುಹ ಕುಸುಮವ । ಮಿನುಗುವ ಪಾದಕರ್ಚನೆಯ ॥
ಜಿನಚಂದ್ರ ಸೂನು ತಾ ಮಾಡಿ ಸಾಷ್ಟಾಂಗವ । ಘನತರ ಭಕ್ತಿಯಿಂದೆರಗಿ ॥ ೧೬೩ ॥

ಕರಗಳ ನೊಸಲಿಗೆ ತಂದು ಜ್ಞಾನೇಂದು- । ವರುಹನ ಸನ್ಮುಖದೊಳಗೆ ॥
ಎರಕದಿಂದಲಿ ನಿಂದು ದರ್ಶನ ಸ್ತೋತ್ರವ- । ನೊರೆದನು ಗಂಭೀರೋಕ್ತಿಯೊಳು ॥ ೧೬೪ ॥

**॥ದರ್ಶನಸ್ತೋತ್ರ॥** ಸುರರಾಜಮುಕುಟತಾಟಿತದಿವ್ಯ ಶ್ರೀಪಾದ। ಪರಮಾರ್ಹಂತ್ಯಲಕ್ಷ್ಮೀಶ॥
ಕರುಣಾರ್ಣವಚಂದ್ರ ಮುಕ್ತಿದಾಯಕ ಬಂ- । ಧುರಬಂಧು ! ಜಯ ಜಯ ಜಯತು ॥

ಇನ ಶಶಿ ಗ್ರಹ ನಕ್ಷತ್ರ ತಾರಕಿಗಳ । ಮಿನುಗುವ ಮಕುಟರತ್ನಗಳ ॥
ಅನುಪಮಕಾಂತಿ ಸುಪ್ರೋತ ನಖವನುಳ್ಳ । ಜಿನನಾಥ ! ಜಯ ಜಯ ಜಯತು ॥ ೧೬೬ ॥

ಬಲಕೇಶವಚಕ್ರಿ ಮಂಡಳೇಶ್ವರ ರಾಜ । ವಿಲಸದರ್ಚಿತ ಪಾದಪದ್ಮ ! ॥
ಕಲಿಲಾರಣ್ಯ ದಾವಾಗ್ನಿ ಪರಂಜ್ಯೋತಿ । ಕುಲಿಶಾಂಗ ! ಜಯ ಜಯ ಜಯತು ॥ ೧೬೭ ॥

ಗರುಡ ಗಂಧರ್ವಾದ್ಯಷ್ಟಕುಲೋದ್ಭವ । ವರ ವ್ಯಂತರವಂದಿತಾಂಘ್ರಿ ! ॥
ನಿರುಪಮ ಗುಣಗಣಭೂಷಿತನಿರ್ಲೇಪ। ಪರಮಗುರುವೆ! ಜಯ ಜಯ ಜಯತು ॥ ೧೬೮ ॥

ಉರಗಾಧೀಶ ಸಹಸ್ರರಸನ ಕೃತ । ವರ ಸ್ತೋತ್ರಾಭೇದ್ಯ ಚರಿತ ! ॥
ಜರೆ ಮೃತ್ಯುಜನ್ಮವಿದೂರ ಕೇವಲಬೋಧ । ಪರಶಿವ ! ಜಯ ಜಯ ಜಯತು ॥ ೧೬೯ ॥

ಎಂದು ನುತಿಸಿ ಸಾಷ್ಟಾಂಗವೆರಗಿ ಜಿನ- । ಚಂದಿರ ಸೂನು ಜಿನಪನ ॥
ಅಂದು ಬೀಳ್ಕೊಂಡು ಮುಂದಣ ರತ್ನಕೀಲಿತ । ಚಂದಿರ ಶಾಲೆ ಭಿತ್ತಿಯೊಳು ॥ ೧೭೦ ॥

ಕುರುವಂಶಾಂಬುಧಿ ಚಂದ್ರನು ಜಿನಚಂದ್ರ । ಧರಣೀಶಾರ್ಭಕ ನೆರೆಗಲಿಯು ॥
ತರುಣಿಯು ಕುರುಳ ವೇಣಿಂದ ಬಿಡಿಸಿ ಜಿನ- । ಚರಣವ ಕಂಡು ಜ್ಞಾನೇಂದು ॥ ೧೭೧ ॥

ಬರೆದಲ್ಲಿ ವಿಧುಕಾಂತಶಿಲೆಯುಪರಿಮದೊಳು । ದೊರೆಮಗನಧಿಕ ಲೀಲೆಯೊಳು ॥
ಇರುತ ದಿಗವಲೋಕನವನು ಮಾಡುತ । ಕುರುಕುಲೇಶ್ವರನೊಪ್ಪಿದನು ॥ ೧೭೨ ॥

ಜಿನಪದಕಮಲ ದ್ವಿರೇಫನು ಜೈನೀಯ । ಮುನಿಪದ ಭಕ್ತನು ಧೈರ್ಯ ॥
ಮನುಜಮಂದಾರ ಮನ್ಮಥ ರೂಪ ಜ್ಞಾನೇಂದು । ಘನಪುಣ್ಯವಂತನೊಪ್ಪಿದನು ॥ ೧೭೩ ॥

**॥ ಅಂತು ಸಂಧಿ ೧ಂಕ್ಕಂ ಪದ ೧೪೭ಂಕ್ಕಂ ಮಂಗಲಂ ॥**

## ಕನಕಲತೆಯ ವಿವಾಹ.

ಮದವತಿ ಕನಕಲತೆಯ ಜ್ಞಾನಚಂದ್ರನು । ಮದುವೆಯಾದುದನು ಸೊಲ್ಲಿಪೆನು ॥ ಪ ॥

ಅಷ್ಟಕರ್ಮಂಗಳ ನಷ್ಟರದಿಂದ ವಿ- । ಶಿಷ್ಟಾಷ್ಟಮ ಪೃಥ್ವಿಗೈದಿ ॥
ಅಷ್ಟಗುಣವ ತಾಳಿದ **ಶ್ರೀ ಶಾಂತೀಶ** । ಸುಟ್ಟುರುಹೆನ್ನ ಸಂಸೃತಿಯ ॥ ೧ ॥

ಕುರುವಂಶಾಂಬರ ದಿನಮಣಿ ರತ್ನದ । ವರಮಂಟಪದೊಳು ಕುಳಿತು ॥
ಇರುತಿರಲತ್ತ ಕೋಮಲೆ ಜಿನರಾಜಗೆ । ಕರಗಳ ಮುಗಿದು ಭಕ್ತಿಯೊಳು ॥ ೨ ॥

ವಂದಿಸಿ ನುತಿಗೈದು ದೇವನ ಬೀಳ್ಕೊಂಡು । ಇಂದು ಶಾಲೆಯೊಳಿರುತಿರ್ದ ॥
ಸೌಂದರನಾಗಿಹ ಜ್ಞಾನಚಂದ್ರನ ಕಂಡು । ಮಂದಸ್ಮಿತದೊಡಗೂಡಿ ॥ ೩ ॥

ಕಡೆಗಣ್ಣ ಕೊನೆಯಿಂದ ಕುವರನ ನೋಡುತ । ಮುದದಿ ವಿನಯವಚನವನು ॥
ನುಡಿದು ತಲೆಯ ಬಾಗಿ ನಿಂದುಕೊಂಡಿರಲಾಗ । ಪೊಡವಿಪ ಕೇಳಿದನಿಂತು ॥ ೪ ॥

ಬಿಸರುಹಾನನೆ ಬಿಂಬಾಧರೆ ! ನಿನ್ನಯ । ಹೆಸರೇನು ನೀನೀಗಿಲ್ಲಿ ॥
ಅಸವಸದಿಂದ ತಪವ ಮಾಡುತಿರ್ದುದ । ಬೆಸಸೆನ್ನೊಳಗೆಂದು ನುಡಿದ ॥ ೫ ॥

ಆ ನುಡಿಯನು ಕೇಳಿ ನೊಸಲಿಗೆ ಕರಗಳ । ಮಾನಿನಿ ತಂದಿಂತೊರೆದಳು ॥
ಭೂನಾಥ ! ನೀ ಕೇಳು ವಿಜಯಾರ್ಧಗಿರಿಯೊಳು । ಭಾನು ಸಮಾನ ಕಾಂತಿಯಲಿ ॥ ೬ ॥

ಥಳಥಳಿಸುವ ಕಾಂಚನಮಯ ಕೋಂಟೆಯಿಂ । ಜಳಧಿಯಂದದ ನೀರಗಳಿಂ ॥
ವಿಳಸಿತ ರಥನೂಪುರವೆಂಬ ಪಟ್ಟಣ । ಇಳೆಯಾಣ್ಮ ! ರಾಜಿಸುತಿಹುದು ॥ ೭ ॥

ಅದನಾಳ್ವನುದಿತ ಪರಾಕ್ರಮಿ ಸತ್ವನು । ಮದನ ಸಮಾನ ಚೆನ್ನಿಗನು ॥
ಸದಮಲಕೀರ್ತಿಸಂಪನ್ನನುದಾರನು । ಉದಯಾರ್ಕ ಸಮ ತೇಜಸ್ವಿ ॥ ೮ ॥

ಕುಸುಮಚೂಲನು ಇಹನಾ ಖೇಚರನಿಗೆ । ಬಿಸರುಹಾನನೆ ಪದ್ಮಗಂಧಿ ॥
ಪುಸಿನಡುವಿನ ನಂದವತಿ ಸತಿಯಾದಳು । ಪೊಸ ಜವ್ವನೆಯು ಸುಜಾಣೆ ॥ ೯ ॥

ಅವರೀರ್ವರ ಗರ್ಭನಿ ಪುಟ್ಟಿದನೋರ್ವ । ಸವಿವಿಲ್ಲಗೆ ಸಮರೂಪ ॥
ನವಕಲೆವಂತ ಗರುಡವೇಗನೆಂದೆಂಬ । ಕುವರ ಕೋವಿದನು ಯಶಸ್ವಿ ॥ ೧೦ ॥

ಆ ಕುವರನ ಬೆಂಗಡೆಯೊಳುದಿಸಿ ನಾನು । ನಾಕನಾರಿಯರ ಚೆಲುವನು ॥
ನೂಕಿ ಕಳೆದು ಹೊಂಜೆಳೆಯಂತೆ ಎಳೆವೆ- । ನ್ನಾಕಾರವ ಕಂಡು ಸನಗೆ ॥ ೧೧ ॥

ಕನಕಲತೆಯೆಂದು ಕವಿ ವಿದ್ವಾಂಸರು । ಮನದಕ್ಕರಿಂ ಪೆಸರಿಡಲು ॥
ಜನಪ ! ಕೇಳಾನು ಸಕಲ ಶಾಸ್ತ್ರಂಗಳ । ಜಿನಮುನಿಯಲ್ಲೋದುತಿರಲು ॥ ೧೨ ॥

ಒಂದು ದಿವಸ ನಮ್ಮಣ್ಣ ಗರುಡವೇಗ । ಮಂದರಗಿರಿಗೆ ತಾನೈದಿ ॥
ಸೌಂದರವಾದ ಜಿನಾವಾಸವ ಪೊಕ್ಕು । ಚಂದದಿಂ ಜಿನರನು ನುತಿಸಿ ॥ ೧೩ ॥

ನಂದನವನಕ್ಕೈದಿ ಪೂರ್ವದಿಗ್ಗತವಾದ । ಬಂಧುರ ಮಣಿಮಂಡಪವ ॥
ಬಂದು ಪೊಗಲು ಚಾರಣಯುಗಗಂಡಾ- । ನಂದದಿಂದವರಿಗೆ ನಮಿಸಿ ॥ ೧೪ ॥

ವರಧರ್ಮಾಧರ್ಮಾದಿರವನು ತಾ ಕೇಳಿ । ದರುಶನ ಶುದ್ಧಿಯ ಪಡೆದು ॥
ಪರಮ ಶ್ರಾವಕವ್ರತವನು ಕೈಕೊಂಡು ಸ- । ದ್ಗುರುರಾಯರಿಗೆ ತಾ ನಮಿಸಿ ॥ ೧೫ ॥

ಕರಗಳ ಸೊಸಲಿಗೆ ಮತ್ತೊಮ್ಮೆ ತಂದೆಲೆ । ಕರುಣಾರ್ಣವಸಿಂಧುಗಳಿರಾ ! ॥
ನೆರೆವರೆ ಮೊಗದ ನನ್ನಯ ತಂಗಿ ಎನಿಸಿದ । ತರಳೆ ಶ್ರೀಕನಕ ಸುಲತೆಗೆ ॥ ೧೬ ॥

ವರನಾವನಾದಪನದಕೆ ವಿನ್ನಾಣವ । ತೆರೆದರುಶನವಾಗಿ ನೀವು ॥
ಒರೆಯಬೇಕೆಂದು ಬಿನ್ನವಿಸೆ ಹಿರಿಯಮುನಿ । ಕರುಣದಿಂ ಬಾಯನು ತೆರೆದು ॥ ೧೭ ॥

ರದನದ ಕಾಂತಿ ದಿಕ್ತಟವನು ಮುಸುಕಲು । ಸದಮಲ ಬೋಧಸಂಯುತನು ॥
ಮುದದೂರನಿಂತೆಂದು ನುಡಿದವನೊಡನೆಲೆ । ಚದುರ ಗರುಡವೇಗ ! ಕೇಳು ॥ ೧೮ ॥

ನವರತ್ನಮಯವಾದ ಶೂಕರ ಶೈಲದ । ಗವಿಯ ಬಾಗಿಲ ಮುಂದೆ ಕುಳಿತು ॥
ಸವಿನಯದಿಂ ನಿನ್ನ ಭಗಿನಿಯು ಜಪವನು । ದಿವಿಜೆಯರ್ಮೆಚ್ಚುವಂದದೊಳು ॥ ೧೯ ॥

ಲೀಲೆಯಿಂ ಜಪಿಸುತ್ತಿರೆ ವಂಶಕಂಟಕ । ಬಾಲಕಿ ಸರ್ವಾಂಗವನು ॥
ನೀಳಾಳಕವನು ಕೊನೆಗಳಿರದೆ ಸುತ್ತಿ । ಕೀಳುತಲಿರಲಾಗೋರ್ವ ॥ ೨೦ ॥

ಕೆಂಬಲ್ಲ ಚೆನ್ನಿಗನಲ್ಲಿಗೆ ತಾ ಬಂದು । ಬಿಂಬಾಧರೆಯ ಬಾಧೆಯನು ॥
ಸಂಭ್ರಮದಿಂದ ಬಿಡಿಸಿದ ಕುಮಾರಕ- । ನಂಬುಜಾಕ್ಷಿಗೆ ವರನಹನು ॥ ೨೧ ॥

ಭೂಮಿಯೊಳಗೆ ಮಹಾಮಂಡಳೇಶ್ವರನಾಗಿ । ಕಾಮಿನಿಯರು ಹಲಬರನು ॥
ಪ್ರೇಮದಿಂದಾಳ್ದು ಕೈವಲ್ಯ ಲಕ್ಷ್ಮಿಗೆ । ಸ್ವಾಮಿಯಾಗುವನು ಕಡೆಯಲಿ ॥ ೨೨ ॥

ಇದನಂಬು ಖೇಚರೇಶ್ವರ ! ನೀನೆಂದಾಗ । ಸದಮಲ ಬೋಧನು ನುಡಿಯೆ ॥
ಅದ ಕೇಳಿ ಸಂತಸವನು ತಾಳಿ ನಮ್ಮಣ್ಣ । ಮದನಾರಿ ಜಿನರಿಗೆ ನಮಿಸಿ ॥ ೨೩ ॥

ಚಾರಣಪರಮೇಷ್ಠಿಗಳ ಶ್ರೀ ದಿವ್ಯ । ಚಾರುಚರಣಕೆ ತಾ ಮುಗ್ಗಿ ॥
ಧೀರ ಮುನಿಗಳ ಸಂತೋಷದಿಂ ಬೀಳ್ಕೊಂಡು । ಚಾರುವಿಮಾನವನಡರಿ ॥ ೨೪ ॥

ಎರಡುವರೆಯ ದ್ವೀಪದೊಳು ವರ್ತಿಸುತಿ- । ರ್ದರುಹಾವಾಸವ ಪೊಕ್ಕು ॥
ಪರಮ ಭಕ್ತಿಯೊಳು ನಮಿಸಿ ಬೀಳ್ಕೊಂಡಾ- । ದರದಿಂದ ಪುರಕೆ ತಾ ಬಂದು ॥ ೨೫ ॥

ನನ್ನನ್ನು ಕರೆಸಿ ಚಾರಣರು ಪೇಳಿದುದ ಸಂ- । ಪನ್ನ ಸಂತೋಷದಿ ಪೇಳೆ ॥
ಸನ್ನುತ ಮಂತ್ರವನುಪದೇಶವ ಮಾಡಿ । ಚೆನ್ನಿಗ ಕಳುಹಿದನೆನ್ನ ॥ ೨೬ ॥

ಹರುಷದಿಂದಲಿ ಬಂದೀ ಶೂಕರಾದ್ರಿಯ । ದರಿಯ ಬಾಗಿಲ ಮುಂದೆ ಕುಳಿತು ॥
ಪರಮ ತಪವನರು ನೂರೇಳು ದಿನದಿಂದ । ನರನಾಥ ಚಂದ್ರ ! ನಾ ಮಾಳ್ಪೆ ॥ ೨೭ ॥

ಇನಿತು ಕಾಲಪರಿಯಂತರ ಜಪವನು । ಮನದಕ್ಕರಿಂ ನಾ ಮಾಡಿದರು ॥
ಮಿನುಗುವ ದೇವತೆ ಕೈಸಾರಿದುದಿಲ್ಲ । ಘನಪುಣ್ಯವಂತ ನೀ ಬರಲು ॥ ೨೮ ॥

ಒಂದು ಸಾವಿರ ವಿದ್ಯಾದೇವತೆಗಳು । ಬಂದೀಗೆನ್ನ ಸಾರಿದವು ॥
ಕಂದರ್ಪ ಸಮರೂಪ ! ನಿನ್ನ ಸಮದ ನೃ- । ಪೇಂದ್ರರಿಲ್ಲೀ ಧರೆಯೊಳಗೆ ॥ ೨೯ ॥

ಎಂದು ಕೈಮುಗಿದು ವಿನಯ ವಚನಗಳಿಂದ । ಬಂದುಗೆದುಟಿಯು ಭಾವಕಿಯು ॥
ಚಂದದಿಂ ವಚಿಸುವ ಪ್ರಸ್ತಾವದೊಳಗಾ- । ನಂದದಿಂ ಗರುಡಾದಿವೇಗ ॥ ೩೦ ॥

ತನ್ನ ತಂಗಿಯ ನೋಡುವೆನೆಂಬ ಮಮತೆಯಿಂ । ರನ್ನವಿಮಾನವನೇರಿ ॥
ಚೆನ್ನಿಗನಂಬರಮಾರ್ಗದಿಂದಲಿ ಬಂದು । ಉನ್ನತ ಶೂಕರಾದ್ರಿಯೊಳು ॥ ೩೧ ॥

ಚಾರುವಿಮಾನವನಿಳಿದು ಗುಹೆಯದೊಂದು । ದ್ವಾರಕೆ ತಾ ನಡೆತಂದು ॥
ವಾರಿಜಮುಖಿ ತನ್ನಯ ಅನುಜಾತೆಯು- । ನಾರೈದು ಕಾಣದೆ ಗಿರಿಯ ॥ ೩೨ ॥

ತುದಿಗೇರಿ ಬರುತಿರೆ ಜಿನರಾಜ ಸದನದ । ವಿಧು ಶಾಲೆಯೊಳು ನಿಂದುಕೊಂಡು ॥
ಸುದತಿಯೋರ್ವನ ಮುಂದೆ ಮಾತಾಡುತಲಿರೆ । ಚದುರ ದೂರದಿ ಕಂಡನವನ ॥ ೩೩ ॥

ಸುರನಲ್ಲದೆ ಬೇರೊಬ್ಬನಲ್ಲವು ಎಂದು । ಪರಿಕಿಸಿ ಮತ್ತೆ ತಾ ತಿಳಿದು ॥
ಕರುಣಾರ್ಣವರು ಚಾರಣರು ನನ್ನೊಳು ಪೇಳ್ದ । ನೆರೆಗಲಿಯಾಗಬೇಕೆಂದು ॥ ೩೪ ॥

ಕಡುಬೇಗದಿಂ ಜಿನಗೃಹವನು ಬಲವಂದು । ಒಡನೊಳಪೊಕ್ಕು ಜಿನಪಗೆ ॥
ಪೊಡಮಟ್ಟು ಜಿನರಾಜಮಲ್ಲನ ಬೀಳ್ಕೊಂಡು । ನಡೆತಂದು ಕುವರನಿರ್ದೆಡೆಗೆ ॥ ೩೫ ॥

ದರಹಸಿತಾನನದಿಂದ ಗರುಡವೇಗ । ಕರಗಳ ಮುಗಿದಮರ್ದಪ್ಪಿ ॥
ವರ ಕ್ಷೇಮ ಮುಂತಾದ ವಾರ್ತೆಯ ತಾ ಕೇಳಿ । ಮರಳಿ ಮರಳಿಯಮರ್ದಪ್ಪಿ ॥ ೩೬ ॥

ಕುರುವಂಶಾಂಬರ ದಿನಮಣಿ ! ನೀ ಕೇಳು । ತರುಣೀಮಣಿಯೆನ್ನ ತಂಗಿ ॥
ನೆರೆ ಜಾಣೆಯೀಕೆಯು ಕೈಯಿಂದ ನಿನ್ನಯ । ಚರಣಸೇವೆಯ ಮಾಡಿಸಿಕೊ ॥ ೩೭ ॥

ಎಂದು ಪ್ರಾರ್ಥಿಸಿ ಬಹುಬಗೆಯಿಂದ ನುಡಿಯೆ ಜ್ಞಾ- । ನೇಂದು ಮುಗುಳುನಗೆಯಿಂದ ॥
ಅಂದವ ತಿಳಿದು ಕುಸುಮಚೂಲನಿರ್ದಲ್ಲಿ- । ಗಂದು ಭೃತ್ಯರನಟ್ಟಿದನು ॥ ೩೮ ॥

ಇತ್ತ ಗರುಡವೇಗ ಸಂತಸದಿಂದಲಾ- । ಗುತ್ತಮ ರಾಯಕುವರನ ॥
ಅಳ್ತಿಯಿಂದಲಿ ವಿಮಾನವನೇರಿಸಿ । ಚಿತ್ತಜ ವೈಭವದಿಂದ ॥ ೩೯ ॥

ತೆರಳಿ ಪಟ್ಟಣಕಾಗಿ ಬರುತಿರಲತ್ತಲು । ತ್ವರಿತದಿ ಮನುಜರು ಪೋಗಿ ॥
ನೆರೆಗಲಿ ಪುಷ್ಪಚೂಲಗೆ ತಾ ಪೇಳಲು । ಪರಮ ಸಂತಸವನು ತಾಳಿ ॥ ೪೦ ॥

ಒಸಗೆವೇಳಿದ ಚೇಟಕನಿಗೆ ಖೇಚರ । ಹಸನಾದ ರನ್ನದೊಡವನು ॥
ವಸನಗಳನು ಮನದಣಿವಂದದಿಂದಿತ್ತು । ಹಸನ ಮಾಡಿಸಿ ಪಟ್ಟಣವ ॥ ೪೧ ॥

ಮಕರತೋರಣದಿಂದ ಗಿಂಡಿದೋರಣದಿಂದ । ಚಕಚಕಿಸುವ ತಳಿರುಗಳ ॥
ಸಿಕರ ತೋರಣದಿಂದ ಮೆರೆದುದಾ ಪಟ್ಟಣ । ಮಕರಾಂಕನ ಪೊಳಲಂತೆ ॥ ೪೨ ॥

ಬುರುಜುಗಳಲ್ಲಲ್ಲಿ ನಿಂದವು ಮಂದರ- । ಗಿರಿ ಬಂದು ಒಳಗೆ ನಿಂದಂತೆ ॥
ವರಸಮೆಕಟ್ಟಿನ ನಿಡು ಝಲ್ಲಿಗಳಿಂದ । ಕರ ಚೆಲುವಾಯಿತಾ ನಗರಿ ॥ ೪೩ ॥

ಕತ್ತುರಿ ಸಾರಣೆಯಿಂದ ಕುಂಕುಮದ ಚೆ- । ಲ್ವೆತ್ತುದು ಕಾರಣೆಯಿಂದ ॥
ಮುತ್ತಿನ ರಂಗವಲ್ಲಿಗಳಿಂದ ಸೊಂಪು ಪೆಂ- । ಪೆತ್ತಿಹುದಾ ರಾಜಧಾನಿ ॥ ೪೪ ॥

ಇಂತು ಸಿಂಗರವನು ಮಾಡಿಸಿ ಪುರವನು । ತಾಂ ತಳುವದೆ ಖೇಚರೇಂದ್ರ ॥
ಅಂತವಿಲ್ಲದ ವಿದ್ಯಾಧರ ಜನಗಳ । ತಿಂಥಿಣಿ ಬರೆ ತನ್ನೊಡನೆ ॥ ೪೫ ॥

ಇದಿರ್ವಂದು ಜ್ಞಾನೇಂದು ರಾಜಕುಮಾರನ । ಮುದದಿಂದ ಕಂಡಮರ್ದಪ್ಪಿ ॥
ಉದಿತಮಾನಸನಾಗಿಯೊಡಗೊಂಡು ನಗರಿಯ । ಚದುರಿಂದ ತಾ ಬಂದು ಪೊಕ್ಕ ॥ ೪೬ ॥

ಕೇರಿಕೇರಿಗಳೊಳು ಗಗನೇಚರಿಯರು । ಚಾರುಮೌಕ್ತಿಕ ರನ್ನಗಳ ॥
ಆರತಿಗಳನೆತ್ತಿ ಪರಸುವ ರವವಾ । ಊರೊಳಗೆಲ್ಲ ತುಂಬಿಹುದು ॥ ೪೭ ॥

ಅರಮನೆಯನು ಪೊಕ್ಕು ಸ್ನಾನಭೋಜನಗಳ । ಹರುಷದಿಂದಲಿ ಕುವರನಿಗೆ ॥
ಕರಚೆಲುವಿಂದ ಮಾಡಿಸುತ ಲೀಲೆಯುಮಿಗೆ । ಇರುತಿರ್ದ ಖೇಚರೇಶ್ವರನು ॥ ೪೮ ॥

ಕರೆಯಿಸಿ ಜೋಯಿಸರುಗಳ ಮುಹೂರ್ತವ । ಉರತರ ಕುಸುಮಾದಿ ಚೂಲ ॥
ಎರಕದಿಂ ನಿಶ್ಚಯ ಮಾಡಿಯೆ ಮದುವೆಯ । ಮೆರೆವ ಮಂಡಪವ ಕುಶಲದಿ ॥ ೪೯ ॥

ಹದಿನಾರು ಚಿನ್ನದ ಕಂಭವ ರಚಿಯಿಸಿ । ಚದುರಿಂದ ಹಸುರು ಪಟ್ಟೆಯನು ॥
ಹದಗೊಳಿಸಾ ಕಂಭಗಳಿಗೆ ನೀಲದ । ಮೃದುವಾದ ನೆಲಕಟ್ಟು ರಚಿಸಿ ॥ ೫೦ ॥

ಕಡುರಂಗುವಡೆದಿಂದ್ರಗೋಪದ ಪಟ್ಟೆಯ- । ನೊಡನೆ ರಚಿಸಿ ಕರ್ಣದೊಳು ॥
ಗಡಣದಿಂ ಕರಿಯು ಸೂರಿಯು ಪಟಗಳನಾಗ । ಬಿಡದೆ ರಚಿಸಿ ಕರ್ಣದೊಳು ॥ ೫೧ ॥

ಮೆರೆವ ಹಸುರು ಬುರುಸಾಲಲೋವೆಗೆ ಮುಚ್ಚಿ । ಕರಚೆಲುವಾದ ತಾಪತಿಯ ॥
ಭರದಿಂದ ಮುಚ್ಚಿಸಿ ತೊಲೆಗೆ ಸುವರ್ಣದ । ಸರಿಯುದ ಮೇಲ್ಕಟ್ಟ ಕಟ್ಟಿ ॥ ೫೨ ॥

ನಿಡುರ್ಝುಲ್ಲಿಗಳ ಸಾಲಾಗಿಳಿಯುವಿಟ್ಟು । ಒಡನೆ ಚಿನ್ನದ ಬೆಳ್ಳಿಗಳ ॥
ಕಡು ಚೆಲುವಾದ ತಾವರೆ ಮೊಗ್ಗೆ ಸರಗಳ । ಬಿಡದೆ ಕಟ್ಟಿದರಲ್ಲಲ್ಲಿ ॥ ೫೩ ॥

ಪಾರಿಜಾತದ ಪುಷ್ಪದಾಕಾರಗಳೊಳು । ಸೇರಿಸಿ ಬೆಳ್ಳಿ ಪವಳವ ॥
ತೋರ ಕುಚ್ಚುಗಳನು ರಚಿಸಿದರಲ್ಲಲ್ಲಿ । ಭೂರಿ ವೈಭವದಿ ಸಾಲಾಗಿ ॥ ೫೪ ॥

ಅದರ ಮಧ್ಯದೊಳು ಕಾಂಚನವೇದಿಕೆಯನು । ಪದಪಿ ರಚಿಸಿದರು ಮುಂದೆ ॥
ಚದುರಿಂದ ಬೆಳ್ಳಿಯ ಹವನ ಕುಂಡವು ಸಂ- । ಮುದದೋರಿದನೇನೆಂಬೆ ॥ ೫೫ ॥

ಅಗರು ಗುಗ್ಗುಳ ಮೊದಲಾದ ದಶಾಂಗದ । ಹೊಗೆ ಪಟ್ಟಣವಂಬರವ ॥
ಮಿಗೆ ವ್ಯಾಪಿಸೆ ತುಂಬಿಗಳ ಝೋಂಕಾರವು । ಸೊಗಸಿಂದ ತುಂಬಿತೇನೆಂಬೆ ॥ ೫೬ ॥

ಇತ್ತ ಮೊರೆವವು ಪಲವು ವಾದ್ಯಂಗಳು । ವೃತ್ತಕುಚೆಯರು ನಟಿಪರು ॥
ಅಲ್ಲಿಯಿಂದಲೆ ಹೆಣ್ಣುಗಳು ಶೋಭನಗಳ । ಬಿತ್ತರದಿಂ ಪಾಡುತಿರಲು ॥ ೫೭ ॥

ಜಿನಚಂದ್ರಕುವರಗೆ ಮಂತ್ರಿಮನೆಯಲತ್ತ । ವನಿತೆಯರೊತ್ತಿ ಎಣ್ಣೆಯನು ॥
ಮನವಕ್ಕರಿಂ ತೀರ್ಥಾಂಬು ಮಜ್ಜನವನು । ಮಿಸುಗುವಂಗಕೆ ತಾವೆಸಗಿ ॥ ೫೮ ॥

ಶರದಭ್ರಕೆ ಸಮನಾದ ದುಕೂಲವ । ಮೆರೆವ ಮುತ್ತಿನ ಪೈರಣೆಯ ॥
ಅರಸುಮಗನ ದಿವ್ಯಾಂಗಕೆ ಪೊದೆಯಿಸೆ । ಶಿರದೊಳು ಮುಕುಟವನಿಕ್ಕೆ ॥ ೫೯ ॥

ಷೋಡಶಾಭರಣವ ತತ್ತತ್‌ಸ್ಥಾನಕೆ । ಗಾಡಿಯಿಂದಲೆಯಳವಡಿಸೆ ॥
ಪ್ರೌಢಿಯಿಂ ಭಾಳದೊಳಗೆ ತಿಲಕವ ತಿದ್ದಿ । ಸೂಡಿದರಾಗ ಬಾಸಿಗವ ॥ ೬೦ ॥

ಇತ್ತಲು ಕನಕಲತೆಗೆ ನೆಯ್ಯನೇರಿಸಿ । ಅಲ್ಲಿಯಿಂ ಒರಳಕ್ಕಿಯಿಕ್ಕಿ ॥
ಬಿತ್ತರದಿಂದ ಗೋಧಿಯಕಲ್ಲ ತಿರುಗಿಸಿ । ದತ್ತಾವಧಾನದೊಳಾಗ ॥ ೬೧ ॥

ಅರಸಿನ ಎಣ್ಣೆಯ ಪೊಂಬಟ್ಟಲೊಳು ತೀವಿ । ತರುಣಿಯು ಹಸೆವಣೆಯಲ್ಲಿ ॥
ಹರುಷದಿಂ ಕುಳ್ಳಿರಿಸಿ ಶೋಭನಗಳ । ತರುಣಿಯರ್ಗಳು ಪಾಡುತಿರಲು ॥ ೬೨ ॥

ವೃತ್ತಕುಚೆಯರು ಗಮಕದಿ ಕನಕಲತೆ- । ಯುತ್ತಮಾಂಗಕೆ ಕಮ್ಮೆಣ್ಣೆಯನು ॥
ಒತ್ತಿ ತೀರ್ಥಾಂಬುವಿಂ ಮಜ್ಜನಂಬುಗಿಸಿ ಚೆ- । ಲ್ವೆತ್ತ ಚೆಂದಿರಗಾವಿಯುಡಿಸಿ ॥ ೬೩ ॥

ಅರುಣಾಂಬುರುಹದ ತೋರ ಮೊಗ್ಗೆಗಳನು । ಮರಸಿದ ತತ್‌ಪತ್ರದಂತೆ ॥
ಗುರುಕುಚಕಳವಡಿಸಿದ ಪಚ್ಚೆಯ ಪಟ್ಟೆ । ವರಕಂಚುಕ ರಾಜಿಸಿತು ॥ ೬೪ ॥

ತುರುಬನು ಕಟ್ಟಿ ಮಲ್ಲಿಗೆ ದಂಡೆಗಳನು । ವಿರಚಿಸಲೊಪ್ಪಿತೆಂತೆನಲು ॥
ವರಮುಖ ವಿಧುವ ನುಂಗಲು ಬಂದುರಗನ । ಕೊರಳ ಬೆಳ್ಪಿನ ರೇಖೆಯಂತೆ ॥ ೬೫ ॥

ಮುತ್ತಿನ ತೊಂಡಲ ತುರುಬಿನೊಳಿಡಲಾ । ವೃತ್ತ ತೊಂಡಿಲುಗಳೊಪ್ಪಿದವು ॥
ಬಿತ್ತರದಿಂ ಬೊಮ್ಮ ಚೆಲುವಿನ ಪೆಣ್ಣಂ- । ದೊತ್ತಿದ ಚಿಪ್ಪದಂತಹುದು ॥ ೬೬ ॥

ತಿಲಕವ ತಿದ್ದಲು ನೊಸಲಿಗೆ ಮೆರೆದುದಾ- । ಗಲರ್ದ ಹೊಂದಾವರೆ ನಡುವೆ ॥
ನಲವಿಂದ ಕುಳಿತು ರಾಜಿಪ ಮರಿದುಂಬಿಯು- । ನಿಳಿಕೆಯೊಪ್ಪಿತು ತಿಲಕ ॥ ೬೭ ॥

ಗರುವೆಯ ಮೊಗಚಂದಿರನ ನುಂಗಲು ಬಂದ । ತುರುಬೆಂಬುರಗನ ಭ್ರೂಧನುಗೆ ॥
ಸ್ಮರ ಬೆಳ್ದಾವರೆ ಕಣೆದೊಟ್ಟಿಚ್ಚನೊ ಎನೆ । ಮೆರೆದುದು ಮುತ್ತಿನ ಬೊಟ್ಟು ॥ ೬೮ ॥

ಮುತ್ತಿನ ಬೊಟ್ಟಿನ ಎಡಬಲದೊಳು ಬಂದು । ನೆತ್ತಿಯೊಳೆಸೆವರ್ಧೇಂದು ॥
ವೃತ್ತ ಸೂರಿದ ಬೊಟ್ಟೆಸದುವುರಗನ । ಮುತ್ತಿದ ಹೆರೆ ಸೂರ್ಯನಂತೆ ॥ ೬೯ ॥

ಗರುವೆಯ ಕಣ್ಣಿಗೆ ಕಾಡಿಗೆಯಚ್ಚಲು । ಮೆರೆದುದೆಂತೆನೆ ಬೆಳ್ದಾವರೆಯ ॥
ಕರ ಶೋಭಿಪೆಸೆಳನು ಚಂದ್ರನ ಕರೆ ಬಂದು । ಪರಿವೇಷ್ಟಿಸಿತೆನಲಿಹುದು ॥ ೭೦ ॥

ಸ್ಮರನು ಲೋಕದ ಜನಗಳ ವಶಮಾಳ್ಪರೆ । ತರುಣಿಯ ಕದಪೆಂಬೆಲೆಯೊಳು ॥
ಬರೆದ ಮೋಹನಯಂತ್ರವೆನಲು ಕಪೋಲದಿ । ಮೆರೆದುದು ಮಕರಿಕಾ ಪತ್ರ ॥ ೭೧ ॥

ಹರಳೋಲೆಗಳ ಕರ್ಣದೊಳಿಡೆ ಸೊಗಸಿತು । ಸಿರಿದೇವಿ ಪೂಜಿಸಬ್ಜಕವ ॥
ಹರುಷದಿಂದೆಡಬಲದೊಳು ರತ್ನದೀಪವ- । ನಿರಿಸಿದಳೆನೆ ರಾಜಿಪವು ॥ ೭೨ ॥

ಮುತ್ತಿನ ಕುಚ್ಚು ಕರ್ಣದೊಳಿಡೆ ಮೆರೆದವು । ಚಿತ್ತಜ ಸಿಂಗಾಡಿ ತುದಿಗೆ ॥
ಬಿತ್ತರವಾದ ಕರ್ಪೂರದಿಂ ಸಮೆದ ಚೆ- । ಲ್ವೆತ್ತ ಗೊಂಚಲೋ ಎನಲಿಹುದು ॥ ೭೩ ॥

ತರುಣಿಯ ರೂಪಿಗೆ ಸರಿಯಿಲ್ಲವೆಂದಜ- । ನೆರಡು ಸತ್ತಿಗೆ ಭುಜಯುಗಕೆ ॥
ಎರಕದಿಂ ಪಿಡಿದೆತ್ತಿಸಿದನೋ ಎಂಬಂತೆ । ಮೆರೆದವು ಕುಚ್ಚು ಕರ್ಣದೊಳು ॥ ೭೪ ॥

ಹೊನ್ನ ಹೂವನು ಕರ್ಣದೊಳಿಡಲೆಸೆದುದು । ಹೊನ್ನ ಕೇಂಕೆಯು ಸ್ಮರ ತನ್ನ ॥
ಬಿನ್ನಾಣದಿಂದ ಕರ್ವಿಲ್ಲಿನ ಮಧ್ಯದೊ- । ಳ್ಚೆನ್ನಾಗಿ ರಚಿಸಿದಂತಿಹುದು ॥ ೭೫ ॥

ತೋರಮುತ್ತಿನ ಮೂಗುತಿ ನಾಸಿಕದೊಳು । ತೋರಿತು ವಿಟಪಕ್ಷಿಗಳು ॥
ಮಾರನೂದಿಡೆ ಹೊನ್ನ ಪೆಟಲತುದಿಗೆ ಬಂದು । ಸೇರಿದ ಮಿಂಚೆಯಂತಿಹುದು ॥ ೭೬ ॥

ಆಣಿಮುತ್ತಿನ ಹತ್ತಕಟ್ಟ ಕೊರಳೊಳಿಡೆ । ಜಾಣೆಯ ಮೊಗ ರಾಜಿಸಿತು ॥
ಏಣಾಂಕನು ಪರಿವೇಷದೊಡನೆ ಕೂಡಿ । ಕಾಣಿಸುವಂತೀ ಜಗಕೆ ॥ ೭೭ ॥

ಗರುವೆಯ ಸ್ತನಮಧ್ಯದೊಳೊಲೆದಾಡುವ । ವರ ಜ್ಯೋತಿರ್ಮಾಲೆ ರಾಜಿಸಿತು ॥
ಗಿರಿಯೆರಡರ ನಟ್ಟನಡುವೆ ತೋರುತಲಿರ್ಪ । ಸುರಧನುವಿನ ಮಾಳ್ಕೆಯೊಳು ॥ ೭೮ ॥

ಕೊರಳೊಳು ಬಂದಿಝುನಿಡೆ ತಾಳಿ ಸ್ತನದೊಳು । ಮೆರೆದುದು ಪೂರ್ವಾದ್ರಿಯೊಳು ॥
ಇರದೆ ತೊಳಗಿ ಬೆಳಗಿ ರಾಜಿಸುತಿರ್ದ । ತರಣಿಮಂಡಲವೊ ಎಂಬಂತೆ ॥ ೭೯ ॥

ನಳಿತೋಳೊಳಿಟ್ಟ ರಾಜಿಪ ತೋಳವಳೆ ತಾ । ಪೊಳೆದುದೆಂತೆನೆ ಬಳ್ಳಿ ಮಿಂಚು ॥
ಎಳೆಯ ಚಂದನದ ಶಾಖೆಯು ಮೂವಳಸಾಗಿ । ಬಳಸಿ ತೋರ್ಪಂತೆ ರಾಜಿಸಿತು ॥ ೮೦ ॥

ತರುಣೀಮಣಿಯ ತೋಳೊಳು ತಾತಿಯನಿಕ್ಕೆ । ಮೆರೆದುದು ಪೌರರ ದೃಷ್ಟಿ ॥
ವರಪಾತವಾಗಬಾರದು ಎಂದು ಕಮಲಜ । ವರರಕ್ಷೆಗಟ್ಟಿದಂತಿಹುದು ॥ ೮೧ ॥

ಝುಲಿಭುಲಿರಿಂದೆನ್ನುತ ತೋಳಬಳೆಯೊಳು । ಉಲಿವ ಚಿನ್ನದ ಹತ್ತಿಕಾಯಿ ॥
ಚೆಲುವ ನಮ್ಮಕ್ಕಗೆ ಇಂದು ದೊರೆತನೆಂದು । ನಲಿದು ತೋರ್ಪುಲುಹಿನಂತಿಹುದು ॥ ೮೨ ॥

ಅಷ್ಟದಳಂಗಳ ಕುವರಿಯ ಕರದೊಳು । ಕಟ್ಟಲೊಪ್ಪಿದುದುಮೇಶ ॥
ತೊಟ್ಟನೆ ಪಂಚಫಣೋರಗ ಕಂಠದೊ- । ಳಿಟ್ಟ ಗರಳಮಣಿಯಂತೆ ॥ ೮೩ ॥

ಕರದೊಳು ಪಚ್ಚೆಯ ಹಸ್ತಕಡಗಗಳ- । ನಿರಿಸಲೊಪ್ಪಿದುದು ತಾವರೆಯ ॥
ಎರಡು ನಾಳಗಳನು ಸುತ್ತಿದ ಹಸುರಿನ । ಮೆರೆವ ಲತೆಗಳೋ ಎಂಬಂತೆ ॥ ೮೪ ॥

ಎಳೆವೆಣ್ಣಿನ ಕರದೊಳು ಗೌಳಸರಗಳು । ಪೊಳೆದವೆಂತೆನೆ ಗೋಧೂಮ ॥
ವಿಲಸಿತ ವರ್ಣಾಹಿಯು ಬಂದು ಮುತ್ತಿದ । ಎಳನೇಸರ ಕಾಂತಿಯಂತೆ ॥ ೮೫ ॥

ಮುತ್ತೈವೆತನಕೆ ಗಾಜಿಂ ಮಾಡಿ ರಾಜಿಪ । ಹತ್ತತ್ತು ಕರಿಯ ಬಳೆಗಳು ॥
ಉತ್ತಮ ಹಸ್ತಯುಗದೊಳೆಸದುವು ಚೆ- । ಲ್ವಿತ್ತ ತುಂಬಿಯ ಹಿಂಡಿನಂತೆ ॥ ೮೬ ॥

ಕರಿಯ ಬಳೆಯ ಹಿಂದೆ ಹೊನ್ನ ಬಳೆಗಳಾಗ । ಮೆರೆದವೆಂತೆನೆ ಕತ್ತಲೆಯ ॥
ಮುರಿದು ನುಂಗಲು ಬಂದುರುಟಾಗಿ ಸುತ್ತಿದ । ವರವಿದ್ಯುಲ್ಲತೆಯಂತೆ ॥ ೮೭ ॥

ಬೆರಳುಗಳೆಂಬ ಕೇತಕಿದಳಗಳೊಳುಂ- । ಗುರವೆಂಬ ಮರಿವಾವು ಸುತ್ತಿ ॥
ಭರದಿಯುವರ ಹೆಡವಣಿಗಳು ಪೊಳೆವಂತೆ । ಮೆರೆದವು ರತ್ನದುಂಗುರವು ॥ ೮೮ ॥

ವರರತ್ನಮಯವಾದ ಕಾಂಚಿಯನಿಡಲಾ । ಕುವರಿಯ ನಡು ರಾಜಿಸಿತು ॥
ದಿವಿಜೇಶ ಕಾರ್ಮುಕ ಬಳಸಿದ ಸುರಪನ । ನವ ವಜ್ರಾಯುಧದಂತೆ ॥ ೮೯ ॥

ಕಿರುಘಂಟೆ ಕಿಣಿಕಿಣಿರೆನೆ ಹೊರವಾರೊಳು । ಮರಿಗೆಜ್ಜೆ ಘಿಲಿಘಿಲಿರೆನಲು ॥
ಪೊರೆವಾರು ಮೆರೆದುದು ಕಾಮವಿಮಾನವ । ಜರೆವುತ ನಿಜಗಾಡಿಯಿಂದ ॥ ೯೦ ॥

ಚರಣದೊಳಗೆ ನೂಪುರವಿಡಲೆಸೆದುದು । ಹರವೈರಿಕರದ ತಾಡಿಯೊಳು ॥
ಇರಿಸಿ ಮೆರೆವ ಹೊನ್ನ ಗಗ್ಗರವನು ಗೆದ್ದು । ಮೆರೆದವು ಘಲಘಲರೆನುತ ॥ ೯೧ ॥

ಹೊನ್ನ ಕಾಲುಂಗರವನು ಬೆರಳಲ್ಲಿಡೆ । ಚೆನ್ನೆಯ ಬೆರಳು ರಾಜಿಪವು ॥
ಸ್ವರ್ಣಲತೆಯು ಬಂದು ಸುತ್ತಿದ ಪವಳದ । ಸನ್ನುತ ಕುಡಿಗಳೆಂಬಂತೆ ॥ ೯೨ ॥

ಪೆಲ್ಲಿ ಮುಂಟಿಕೆ ಕಾಲಸರ ತಾರಾಹಾರ । ನಲ್ಲರಿವಾಲುಳಿಸರವು ॥
ಪಲ್ಲವಿಸುವ ಚಾಟುಕಾರ್ರೈರದಾಲಿಯು । ಹುಲ್ಲೆಗಣ್ಣಳಿಗೆ ಮೆರೆದವು ॥ ೯೩ ॥

ಬಿರಿಮುಗುಳನು ಪೊತ್ತ ಮಲ್ಲಿಗೆ ಲತೆಯೋ, ತಾ- । ನರುಣ ಸೇವಂತಿಗೆ ಲತೆಯೋ ॥
ವರ ಭೂಷಣಾಂಗದ ಕಲ್ಪತರುವ್ರೋ ಎನೆ । ತರುಣಿ ಭೂಷಣವಿಟ್ಟೊಪ್ಪಿದಳು ॥ ೯೪ ॥

ಇಂತು ಸಿಂಗರಿಸಿ ಕನ್ನಡಿಯ ಪಿಡಿಯಲು ಸೀ- । ಮಂತಿನಿ ಪೊಳೆದಳದರೊಳು ॥
ಎಂತೆನೆ ತಾವರೆಗೊಳದೊಳು ಬಿಂಬಿಪ । ಕಂತುವಿನಮ್ಮನಂದದೊಳು ॥ ೯೫ ॥

ಮೊಳಗಿದವಾಗ ಪಲವು ವಾದ್ಯಂಗಳು । ಎಳೆವೆಣ್ಣುಗಳು ಶೋಭನವ ॥
ನಲವಿಂದ ಸ್ವರವೆತ್ತಿ ಪಾಡುತಿರಲು ರಾಜ- । ನಿಲಯದೊಳತಿ ಸಂಭ್ರಮದಿ ॥ ೯೬ ॥

ಮದುವಣಿಗ ಶಾಸ್ತ್ರವ ಹೆಣ್ಣುಗಂಡುಗಳು । ಸದನದೊಳೆಲ್ಲವನೆಸಗಿ ॥
ಚದುರಿಂದುಭಯ ಗೃಹದಿ ಯೆಯ್ರಣೆಗಳ । ಮುದದಿ ಮುತ್ತೈದೆಯರ್ ತಂದು ॥ ೯೭ ॥

ಮನೆಯೊಳೊಂದಿಕ್ಕೆ ಪೂಜಿಸಿ ಕಲಶಗಳನು । ಮಿನುಗುವ ದೀಪವನಿರಿಸಿ ॥
ಘನಕುಚೆಯರು ಶಾಲಿ ಗೋಧೂಮ ಕಡಲೆಯ । ಮನದಕ್ಕರಿಂದುದ್ದು ಹೆಸರು ॥ ೯೮ ॥

ಅಲಸಂಡೆ ಹುರುಳಿ ತೊಗರಿಯವರೆಗಳನು । ನಲವಿಂದ ಹಾಲೊಳು ತೊಳೆದು ॥
ಘಳಿಲನೆಯಂಕುರಗಳ ಬಿತ್ತಿದರಾ- । ಗುಲಿವ ಶೋಭನದಿಂಚರದಿ ॥ ೯೯ ॥

ಮೊಳೆತವಾಗಂಕುರ ದಂಪತಿಗಳಿಗೀಗ । ಮೊಳೆವ ರಾಗಾಂಕುರಗಳನು ॥
ತಲೆಯೆತ್ತಿ ತೋರುತಿರ್ದವೊ ಎನೆ ಜನಗಳ್ಗೆ । ವಿಲಸಿತ ಹಸುರುಗಳಾಂತು ॥ ೧೦೦ ॥

ಮದುವರ್ಕಳೀರ್ವರ ತಂತಮ್ಮ ಮನೆಯೊಳು । ಚದುರಿಂದ ಹವನದ ಮುಂದೆ ॥
ಬೆದರ್ಹುಲ್ಲೆಗಣ್ಣೆಯರ್ ಕುಳ್ಳಿರಿಸಿ ಮೌಕ್ತಿಕ । ಸದಮಲಾಕ್ಷತೆಯ ತಳಿದರು ॥ ೧೦೧ ॥

ಅನಿತರೊಳಸ್ತಂಗತವಾಗೆ ಜೋಯಿಸ- । ರ್ಮಿನುಗುವ ಘಳಿಗೆ ಬಟ್ಟಲನು ॥
ಜಿನನಾಥನಪ್ಪಣೆಯಿಂದಿಕ್ಕೆ ಲಗ್ನವ । ಮನದಕ್ಕರಿಂ ಹಾಕುತಿರಲು ॥ ೧೦೨ ॥

ದಶವಿಧ ಭೋಗದೊಳಗೆ ದಂಪತಿಗಳು । ಕುಶಲರಾಗುವರೆಂದರಿದು ॥
ದಶಘಟಿಕೆಯನವಧಿಯ ಮಾಡೆ ಧಾರೆಗೆ । ಕುಸುಮಚೂಲನು ಹೊತ್ತನರಿದು ॥ ೧೦೩ ॥

ನವರತ್ನಮಯವಾದ ಪಲ್ಲಕಿಯೊಳು ತನ್ನ । ಕುವರಿಯ ಕುಳ್ಳಿರಿಸಿಯದಕೆ ॥
ರವಿಯಂತೆ ಬೆಳಗುವ ಪನ್ನಂಗವನಿಕ್ಕೆ । ಧವಲಶಂಖದ ನಾದವಾಯ್ತು ॥ ೧೦೪ ॥

ಎಳೆವೆಣ್ಣುಗಳು ಧವಲ ಶೋಭನಗಳ । ನಲವಿಂದ ಪಾಡುತ್ತ ಸುತ್ತ ॥
ಬಳಸಿ ಬರುತಲಿರೆ ಪಲ್ಲಕ್ಕಿಯ ಮುಂದೆ । ಚೆಲುವೆಯರ್ ನಟಿಸುತಲಿರಲು ॥ ೧೦೫ ॥

ಪಲವು ವಾದ್ಯಂಗಳು ಧಿಮ್ಮೆಂದುಲಿವುತಿರೆ । ಪಲವು ಚಂದ್ರಜ್ಯೋತಿ ಪಿಡಿಯೆ ॥
ವಿಲಸಿತ ಸಂಭ್ರಮದಿಂ ಬಂದು ಮದುವೆಯ । ಚೆಲುಮಂಟಪದೊತ್ತಿನೊಳು ॥ ೧೦೬ ॥

ಕುವರಿ ಪಲ್ಲಕ್ಕಿಯನಿಳಿವಾಗಲೋರ್ವಳು । ಪವಳಪಾವುಗೆಗಳನಿರಿಸಿ ॥
ದಿವಿಜೆಯರುಗಳ ರೂಪಿಂದಲಿ ಹಳಿವುತ । ಕುವಲಯಗಂಧಿ ಲೀಲೆಯೊಳು ॥ ೧೦೭ ॥

ತರುಣಿ ತನ್ನಯ ಕೆಂಬಜ್ಜೆಗಾ ಪಾವುಗೆ । ಸರಿಯೇ ತಾನೆಂದು ಕೋಪದೊಳು ॥
ಚರಣದಿಂ ತುಳಿವಂತೆ ಪವಳಪಾವುಗೆ ಮೆಟ್ಟಿ । ಮುರುಕದಿಂ ನೇಹದ ಕೆಳದಿ ॥ ೧೦೮ ॥

ಕುಡಿತೆಗಣ್ಣಳಿಗೆ ಕೈಲಾಘವ ಕೊಡಲಾ- । ಗಡಿಯಿಡುವಂತೆ ಮರಾಳಿ ॥
ಮುಡಿ ಮೊಲೆ ಪೊರವಾರ ಭಾರಕೆ ಮೆಲ್ಲನೆ । ನಡೆವಳು ಕಡು ಗಾಡಿಯಿಂದ ॥ ೧೦೯ ॥

ಕುಸುಮದ ತೊಂಗಲ ಭಾರಕೆ ಬಳುಕುತ । ಹೊಸ ಹೊನ್ನಲತೆಯಂದದೊಳು ॥
ಪಸದನಗಳ ಭಾರಕೆ ಮೆಲ್ಲ ಮೆಲ್ಲನಾ- । ಗಸಿಯಳು ನಡೆದಳೇನೆಂಬೆ ॥ ೧೧೦ ॥

ಹೊನ್ನತಾವರೆಯ ಗಮಕದಿಂದೇರುವ । ಸನ್ನುತ ಮಂಗಲೆಯಂತೆ ॥
ರನ್ನ ಚಿನ್ನದಿ ಮಾಡಿರ್ದ ವೇದಿಕೆಯನಾ । ಚೆನ್ನೆಯೇರಿದಳು ನಲ್ಮೆಯೊಳು ॥ ೧೧೧ ॥

ಬೆಡಗಿಂದ ಹಸೆಯ ಜಗಲಿಯೊಳು ಕುಳಿತಿರ್ದ । ಮಡದಿರನ್ನಳ ರೂಪಿಹುದು ॥
ಕಡುವಿಲ್ಲನಾರಾಧಿಸುವ ಮೋಹನದೇವಿ । ಗಡಣದಿಂ ಕುಳಿತಳೆಂಬಂತೆ ॥ ೧೧೨ ॥

ಮುತ್ತೈ ಗಂಡಿನ ಮನೆಯಿಂ ವಸ್ತು ನಿಕರವ । ವೃತ್ತಕುಚೆಯರು ತಾವಾಂತು ॥
ಬಿತ್ತರದಿಂದ ಶೋಭನಗಳ ಪಾಡುತ । ಎತ್ತಿದ ತಳಿಯ ನೆಳಲೊಳು ॥ ೧೧೩ ॥

ಭೋರೆಂಬ ವಾದ್ಯಂಗಳು ಮೊಳಗುತಲಿರೆ । ಕೇರಿಯೊಳಗೆ ಬಿನ್ನಣದಿಂ ॥
ಚಾರು ವೈಭವದಿಂದ ನಡೆದು ನಡೆದು ಬಂದು । ಧಾರಾಗೃಹದೊಳಪೊಕ್ಕು ॥ ೧೧೪ ॥

ಜ್ಯೋತಿರ್ಲೋಕವೆ ಧರೆಗಿಳಿತಂದಂತೆ । ಶಾತೋದರಿಯಿಗಿರೊಳಗೆ ॥
ನೂತನ ನವರತ್ನ ಪರಿಯಾಣಗಳೊಳು । ಸಾತಿಶಯದ ವಸ್ತುನಿಕರ ॥ ೧೧೫ ॥

ಇರಿಸಿದರೆಂತೆನೆ ಬಂದಿ ನೂಪುರ ಹಾರ । ಹರಳೋಲೆ ರನ್ನಗಡಗವ ॥
ಸರಪಳಿ ಹೀರಾವಳಿ ಮುಂತಾಗಿರ್ದ । ವರ ಷೋಡಶಾಭರಣಗಳ ॥ ೧೧೬ ॥

ಬಾರುಸಾಲ ದೇವಾಂಗ ಪಟ್ಟೆ ಚಂದಿರಗಾವಿ । ಕರಿಯ ಉದಯರಾಗಾದಿ ॥
ವರ ವಸ್ತ್ರಗಳ ರನ್ನದ ತಟ್ಟೆಗಳೊಳು । ಹರಹಿದರ್ಕುವರಿಯ ಮುಂದು ॥ ೧೧೭ ॥

ಶರಧಿಯ ಕುಂಭಜನೀಂಟಲದರೊಳಿರ್ಪ । ವರರನ್ನ ಮಾರ್ಪೊಳೆವಂತೆ ॥
ತರುಣಿಯ ಮುಂಗಡೆಯೊಳು ರಾರಾಜಿಪಾ- । ಭರಣಂಗಳು ಥಳಥಳಿಸೆ ॥ ೧೧೮ ॥

ಅರಸನ ದೃಷ್ಟಿಪಾಳಿನವು ನಿನ್ನಯ । ವರದೇಹ ಲಾವಣ್ಯಾಬ್ಧಿಯೊಳು ॥
ಸೆರೆಯಾಗಿರಲೆಂದರಸಿನ ಎಣ್ಣೆಯ- । ನರಸಿಯ ಮೇಗಾಲಿಗೊರಸಿ ॥ ೧೧೯ ॥

ಒರಸಿ ಮತ್ತಾಕ್ಷಣ ಜ್ಞಾನೇಂದು ಚಿತ್ತವ । ನೆರೆ ಸೂರೆಯಾಡು ನೀನೆಂದು ॥
ಹರಸಿ ನೈವಿಳುಹಿ ಸೇಸೆಯನಿಟ್ಟು ಶಿರದೊಳು । ಹರುಷದಿಂದುಂಗುರುಡಿಕೆಯ ॥ ೧೨೦ ॥

ವರ ಕ್ರಿಯೆಗಳ ನಾಡಿ ಕುಂದಣದಿಂ ಗೈದ । ಮೆರೆವ ಬಂದಿಯ ಮುತ್ತೈದೆಯರು ॥
ಕರದಿಂದಾಂತು ಶೋಭನಗಳ ಪಾಡುತ । ಮೊರವ ವಾದ್ಯಾರ್ಭಟೆಯಿಂದ ॥ ೧೨೧ ॥

ಪರಿವೇಷವ ತಂದು ಸಂಪೂರ್ಣ ಚಂದ್ರಗೆ । ಪರಿವೇಷ್ಟಿಪಂತಂಗನೆಯರು ॥
ಅರಸಿಯ ಕೊರಲಿಗಿಕ್ಕಿದರು ಜ್ಞಾನೇಂದುವಿ- । ಗರಸಿಯಾಗೆಂದು ಬಂದಿಯನು ॥ ೧೨೨ ॥

ಪೊಳೆವ ರಜತಗಿರಿಯನು ಪಾರ್ವತಿ ಬಂದು । ಒಲಿದೇರುವಂತೆ ಮೌಕ್ತಿಕದ ॥
ಚೆಲುವ ಮೆಟ್ಟಕ್ಕಿ ಗೂಡೆಯ ಬಂದುತ್ಸವದಿಂ- । ದೆಳೆವೆಣ್ಣು ನಿಂದಳು ಮೆಟ್ಟಿ ॥ ೧೨೩ ॥

ಬೆಳುದಾವರೆಯೇರಿ ನಿಂದುಕೊಂಡದರೊಳು । ಕಳಹಂಸನ ಬರವಾರ್ಪ ॥
ಕರ ಶೋಭಿಪ ಪೆಣ್ಣಂಚೆಯೊ ತಾನೆನೆ । ನೆರೆವೆರೆ ಮೊಗದಳೊಪ್ಪಿದಳು ॥ ೧೨೪ ॥

ಪರಿಪೂರ್ಣ ಚಂದ್ರಮಂಡಲವನು ಮುಸುಕಿತಾ । ಮೆರೆವ ಕೆಮ್ಮುಗಿಲಂದದೊಳು ॥
ಗರುವೆಯ ಮುದ್ದು ಮೊಗಕೆ ಚಂದ್ರಗಾವಿಯ । ತೆರೆಯ ಪಿಡಿದರಡ್ಡಲಾಗಿ ॥ ೧೨೫ ॥

ತೆರೆಯ ಮರೆಯೊಳು ನಿಂದಿರ್ದ ಕುಮಾರಿಯ । ಮುರುಕಮೊಪ್ಪಿದುದೆಂತೆನಲು ॥
ವರ ನಿಷದಾದ್ರಿಯೊಳಗೆ ಪ್ರತಿಬಿಂಬಿಪ । ಕರ ಸೊಗಯಿಪ ಮಿಂಚಿನಂತೆ ॥ ೧೨೬ ॥

ಇತ್ತಲು ವಿಜಯಾರ್ಧಗಿರಿಯೆಂದೆಂಬೊಂ- । ದುತ್ತಮ ಗಜವಾಹಕರು ॥
ಅಳ್ತಿಯಿಂದಲಿ ಸಿಂಗರಿಸಿದರೆಂತೆನೆ । ಬಿತ್ತರಿಸುವೆ ಲಾಲಿಪುದು ॥ ೧೨೭ ॥

ಚರಣ ನಾಲ್ಕಕ್ಕೆ ಚಿನ್ನದ ಗಗ್ಗರವನು । ಇರಿಸಿ ಕನಕದ ಘಂಟೆಯನು ॥
ಎರಕದಿಂ ಹೊಕ್ಕುಳಡಿಗೆ ಕಟ್ಟಿ ಮಾಣಿಕ । ಹೊರಜೆಯನೆಳೆದು ಬೆನ್ನೊಳಗೆ ॥ ೧೨೮ ॥

ಕನಕರಜತ ಗಂಟೆಗಳನಿತ್ತರದಲ್ಲಿ । ಇನಿಸು ಬೇಗದಿಂದ ಕಟ್ಟಿ ॥
ಮಿನುಗುವ ಹವಳದ ಕುಚ್ಚುಗಳಲ್ಲಲ್ಲಿ । ಮನದಕ್ಕರಿಂದಿಳಿಯ ಬಿಟ್ಟು ॥ ೧೨೯ ॥

ತೋಳೊಳು ಮುತ್ತಿನ ಹೊರಜೆ ಮೂವಳಸಾಗಿ । ಕರ ಚೆಲುವಿಂದಳವಡಿಸಿ ॥
ಸರಸಿಜರಾಗ ರತ್ನದ ತೋರಗಂಟೆಯ । ಕರಿಪನ ಕೊರಳೊಳು ಕಟ್ಟಿ ॥ ೧೩೦ ॥

ತೋರಮುತ್ತಿನ ಕುಚ್ಚನು ಕರ್ಣಯುಗದೊಳು । ಸೇರಿಸಿ ಪಣೆ ಕರ ತುಂಬಿ ॥
ರಾರಾಜಿಪ ನವರತ್ನದ ಮೊಗರಂಬ । ಚಾರು ವೈಭವದಿಂದ ಕಟ್ಟಿ ॥ ೧೩೧ ॥

ರನ್ನ ಚಿನ್ನದ ಕಟ್ಟುಗಳ ರದನದಲ್ಲಿ । ಬಿನ್ನಾಣದಿಂದಳವಡಿಸಿ ॥
ಚೆನ್ನುವಡೆದ ಸುರಗಿಯ ಕಟ್ಟೆಯದರೊಳು । ಚಿನ್ನದ ಪೂಗಳಸಿಟ್ಟು ॥ ೧೩೨ ॥

ಕರಿಯ ಪೃಷ್ಠದ ಮೇಲ್ಭಾಗದಿ ಬೆಳ್ಳಿಯ । ಕರ ಚೆಲುವಾದ ತಾವರೆಯ ॥
ಅರಳಿದ ಪುಷ್ಪದೊಡನೆ ಕೂಡಿ ರಾಜಿಪ । ವರ ರತ್ನ ಕಂಕಣವಿಕ್ಕಿ ॥ ೧೩೩ ॥

ಕರಿಪನ ಪಣೆಯೊಳು ತೋರಮುತ್ತಿನದೊಂ- । ದರಳೆಲೆಯಿಡಲು ರಾಜಿಸಿತು ॥
ಸುರುಚಿರ ಪೂರ್ವಾಚಲ ಮಸ್ತಕನೇರಿ । ಮೆರೆವ ಚಂದಿರಬಿಂಬದಂತೆ ॥ ೧೩೪ ॥

ತರಣಿ ಕಿರಣವನು ಹಿಂದುಮುಂದಕೆ ಮಾಳ್ಪ। ಸುರುಚಿರ ರತ್ನಗಂಬಳವ ॥
ಹರಹಿಯಾ ನಾಗನ ಬೆನ್ನೊಳು ಬೆಡಗಿಂದ। ಕರಿಪನ ತಂದರಮನೆಯ ॥ ೧೩೫ ॥

ಇದಿರೊಳು ನಿಲ್ಲಿಸಿಕೊಂಡಿರಲಾಗದ। ಮದನನು ಕಡು ಬೆಡಗಿಂದ ॥
ಮದನಾರಿ ಜಿನಪನ ನೆನೆವುತ ಹಸ್ತಿಯ। ಚದುರಿಂದಲಡರಿ ಸ್ಕಂಧದೊಳು ॥ ೧೩೬ ॥

ಅರಮಗ ಕುಳಿತು ಹೊನ್ನಂಕುಶವನು ತನ್ನ। ಕರದೊಳು ಪಿಡಿಯಲೊಪ್ಪಿದನು ॥
ಮೆರೆವೈರಾವತ ಸ್ಕಂಧವನಡರಿರ್ದ। ಸುರಪತಿಯೋ ಎಂಬಂತೆ ॥ ೧೩೭ ॥

ಉಭಯ ಶ್ರೇಣಿಯೊಳುಳ್ಳ ಖೇಚರೇಶ್ವರರೆಲ್ಲ। ಪ್ರಭುಕುಲದೀಪನ ಬಳಸಿ ॥
ಶುಭ ಜಯ ಮಂಗಲವೆನುತಿರೆ ವಾದ್ಯದ। ರಭಸವು ತುಂಬೆ ದಿಕ್ತಟವ ॥ ೧೩೮ ॥

ತಳಿಯ ನೆಳಲೊಳು ಕನ್ನಡಿಕಲಶವನಾಂತು। ಎಳೆವೆಣ್ಣುಗಳು ಬರುತಿರಲು ॥
ಎಳೆಮಿಂಚುಗಳಂತೆ ನರ್ತಕಿ ಜನಗಳು। ಬಳುಕುತ ನಟಿಸುತಲಿರಲು ॥ ೧೩೯ ॥

ಪಲವು ಜಗಜ್ಜ್ಯೋತಿಗಳೆತ್ತಿ ಪಿಡಿಯಲು। ಒಲವಿಂದ ಪಗಲುಬತ್ತಿಗಳ ॥
ಪಲವು ತಾರೆಗಳು ದಿಬ್ಬಣಕೆ ಬಂದಂದದಿ। ಬೆಳಗಿದವಾ ಪಟ್ಟಣದೊಳು ॥ ೧೪೦ ॥

ಕೇರಿ ಕೇರಿಗಳೊಳು ಮೆರವಣಿಗೆಯು ಬಂದು। ಧಾರಾಗೃಹದತ್ತ ಬರಲು ॥
ಭೂರಿಸಂಭ್ರಮದಿಂದ ಕುಸುಮಚೂಳನು ಫುಲ್ಲ। ವಾರಿಜಾಕ್ಷಿಯ ಕೈಯಿಂದ ॥ ೧೪೧ ॥

ಕಳಶಗನ್ನಡಿಗಳ ಮುಂದೆ ಪಿಡಿಸಿಕೊಂಡು। ಒಲವಿನಿಂದಿದಿರ್ಗೊಂಡು ಬಂದು ॥
ಎಳೆವೆಣ್ಣುಗಳ ಕೈಯಿಂದಾರತಿಯನು। ಇಳೆಯಾಣ್ಮಗೆ ಬೆಳಗಿಸಿದ ॥ ೧೪೨ ॥

ನಳಿತೋಳುಗಳೆತ್ತಿ ಕೋಮಲಾಂಗಿಯರಾಗ। ಕಳಮೆಯಕ್ಷತೆಗಳನೊಲವಿಂ ॥
ಇಳೆಯಾಣ್ಮನ ಮೇಲಿಸೆದರು ತಮ್ಮಯ। ಬೆಳತಿಗೆಗಣ್ಣ ಬೀರುತಲಿ ॥ ೧೪೩ ॥

ಕಡು ಶುಭ್ರಾಕ್ಷತೆ ದಿಬ್ಬಣಿಗರ ಮೇಲೆ। ನಡೆವಂದಮೊಪ್ಪಿತು ಮದನ ॥
ಬೆಡಗಿಂದಲಿಟ್ಟ ಕುಸುಮಬಾಣಂಗಳ। ಕಿಡಿಗಳೋ ಎಂಬಂತಿಹವು ॥ ೧೪೪ ॥

ಸರಸಿಜಕೋಶವ ಹೊನ್ನ ತುಂಬಿಯು ತಾನು। ಹರುಷದಿಂದೊಳಪೊಗುವಂತೆ ॥
ಕರಿಶಿರದಿಂದಿಳಿದು ಧಾರಾಗೃಹವನು। ದೊರೆಮಗ ಪೊಕ್ಕನುತ್ಸಹದಿ ॥ ೧೪೫ ॥

ಕುಸುಮಚೂಲನು ಹರಿವಿಷ್ಟರದೊಳಗಾಗ। ವಸುಧೇಶ್ವರನ ಕುಳ್ಳಿರಿಸಿ ॥
ಶಶಿಮುಖಿ ನಂದವತಿಯು ಹೊನ್ನಗಿಂಡಿಯ। ಕುಶಲದಿಂದೆತ್ತಿ ನೀರೆರೆಯೆ ॥ ೧೪೬ ॥

ಅಳಿಯನ ಪಾದವ ತೊಳೆದು ಕುಸುಮಚೂಲ। ಘಳಿಲನೆ ಹದಿನಾರು ತೆರದ ॥
ವಿಲಸಿತವಾದುಪಚಾರವಂ ತಾ ಮಾಡಿ। ಪೊಳೆವಾರತಿಯನೆತ್ತಿಸಿದ ॥ ೧೪೭ ॥

ತಂಪಿನ ಸೂರಿಯ ಪೂರ್ವಾಚಲವನು। ಪೆಂಪಿಂದಲೇರುವಂದದೊಳು ॥
ಇಂಪುಗಾರಿಕೆಯಿಂದ ಹಸೆಯ ಜಗಲಿಯ ನಿ-। ಳಿಂಪ ವೈಭವದಿಂದೇರಿದನು ॥ ೧೪೮ ॥

ಬೆಳುಮುಗಿಲೊಡ್ಡನು ಥಳಥಳಿಸುವ ಚಂದ್ರ । ನಲವಿಂದೇರುವಂದದೊಳು ॥
ಪೊಳೆವ ಕೆನ್ನೀರ ಮುತ್ತಿನ ಮೆಟ್ಟಕ್ಕಿಯು- । ನಿಳೆಯಾಣ್ಮ ಬಂದೇರಿದನು ॥ ೧೪೯ ॥

ಭೂರಿಬ್ರಾಹ್ಮಣರೆಲ್ಲ ಮಂಗಲಾಷ್ಟಕವನು । ಸೇರುವೆಯಿಂದಲೋದುತ್ತ ॥
ಚಾರು ಮಂಗಲ ಮಂಗಲ ಶುಭ ಜಯವೆಂದು । ಬೀರಿದರ್ಮಂಗಲಾಕ್ಷತೆಯ ॥ ೧೫೦ ॥

ಸರಸಿಜಮುಖಿಯರು ಧವಳ ಶೋಭನಗಳ । ಸ್ವರವೆತ್ತಿ ಪಾಡುತಲಿರಲು ॥
ಮೊರೆದವು ಕೋಟಾಕೋಟಿ ವಾದ್ಯಂಗಳು । ಧರೆ ಗಡಗಂಪಿಸುವಂತೆ ॥ ೧೫೧ ॥

ಆಯುತವಾಯುತವೆಂದಾಗ ಲಗ್ನದ । ಜೋಯಿಸರು ಪಾಡುತಿರಲು ॥
ಒಯ್ಯಾರದಿಂದ ಘೋಷಿಸೆ ಕೆಲವರುಗ- । ಳಾಯುತ ಆಯುತವೆನಲು ॥ ೧೫೨ ॥

ತೆರೆಯನು ಸರಿಸುವ ಜಯಘಂಟೆ ಭೋರೆಂದು । ಮೊರೆದವಾ ವೇಳೆಯದಲ್ಲಿ ॥
ಪರಸುತಿರಲು ಬ್ರಾಹ್ಮಣರಾಗ ಸ್ವರವೆತ್ತಿ । ದೊರೆ ದೊರೆಗಳು ಸಂದಣಿಸಿ ॥ ೧೫೩ ॥

ಕುಸುಮದ ತುಂಬೆಗೆ ಹೊನ್ನೆಳೆದುಂಬಿಗೆ । ಹೊಸ ತಳಿರ್ತಾಮರೆಗೊಳಲು ॥
ಎಸಕದಿಂ ವಾಯು ಕಳೆದು ತೋರಿಕೊಡುವಂತೆ । ಶಶಿಗಾವಿ ತೆರೆ ಜಾರಿತಾಗ ॥ ೧೫೪ ॥

ವಿಧು ಕುಮುದಿನಿ, ಕುಮುದಿನಿ ವಿಧುಬಿಂಬವ । ಉದಯಾರ್ಕ ನಳಿನಿಯ ನಳಿನಿ ॥
ಉದಯಾರ್ಕನ ನೋಡುವಂತೆ ಪರಸ್ಪರ । ವಧೂವರರುಗಳು ನೋಡಿದರು ॥ ೧೫೫ ॥

ಜಲಚರಯುಗಲವು ಯುವೆ ಹಳಚದೆ ತಾವು । ನಲಿದು ನೋಳ್ಪಂತೆ ಕಾರತದಿ ॥
ಚೆಲುವೆ ಚೆಲುವನಾ ಚೆಲುವನು ಚೆಲುವೆಯ । ನಲವಿನಿಂ ನೋಡಿದರಾಗ ॥ ೧೫೬ ॥

ಭ್ರಮುಮಾತಂಗವಭ್ರಮುವಿನ ಶಿರದೊಳ- । ಭ್ರಮು ದೇವಗಜದ ಮಸ್ತಕಕೆ ॥
ಕಮಲವ ಸುರಿವಂತೆ ಶಿರಕೆ ದಂಪತಿಗಳು । ಮಮತೆಯಿಂ ಸೂಸೆ ಕುಸುಮವ ॥ ೧೫೭ ॥

ತಳಿರೊಳಗಲರ್ದ ಕೆಂದಾವರೆಯಿಡುವಂತೆ । ಇಳೆಯಾಣ್ಮನ ಹಸ್ತದೊಳಗೆ ॥
ಬೆಳತಿಗೆಗಣ್ಣಳ ಹಸ್ತವನಿರಿಸಿದ । ನಲವಿಂದ ಕುಸುಮಚೂಲಯ್ಯ ॥ ೧೫೮ ॥

ಕರ ಸೋಂಕಲರಸನ ಕುವರಿಯ ದೇಹವು । ಕಿರು ಬೆಮರಿತು ಎಂತೆನಲು ॥
ಸ್ಮರಸುಖಕರ ಸೋಂಕಿದ ಶಶಿಗಲ್ಲು ತಾ- । ಗಿರದೊಸರುವ ಮಾಳ್ಕೆಯೊಳು ॥ ೧೫೯ ॥

ವರವಧುಗಳ ಕಾಮಾಗ್ನಿ ಪೆರ್ಚಲಿಯೆಂದು । ಎರೆವಂತೆ ತಿಳಿದುಪ್ಪವನು ॥
ತರುಜಚೂಲನು ರನ್ನದ ಗಿಂಡಿಯನೆತ್ತಿ । ಎರೆದನು ಕೈಧಾರೆಯನು ॥ ೧೬೦ ॥

ಕರಗಳ ಮೇಲೆ ಬಿರ್ದೋಗುವ ಪನ್ನೀರಿನ । ವರ ಧಾರೆಯೆಸೆದುದೆಂತೆನಲು ॥
ವರ ದಂಪತಿಗಳ ಮೋಹನ ರಸವೇ ತಾ । ಸುರಿವುತಿರ್ದುದೋ ಎಂಬಂತೆ ॥ ೧೬೧ ॥

ವಧೂವರರುಗಳ ಬಳಸಿದ ಮುನ್ನೂಲನು । ಚದುರಿಂದ ತೆಗೆದು ಜೋಯಿಸರು ॥
ಮದುವರ್ಕಳೀರ್ವರ ಕರದ ಕಂಕಣವನು । ಹದಗೊಳಿಸಿದರು ಬಿನ್ನಣದಿಂ ॥ ೧೬೨ ॥

ಭೂರಿವೈಭವದಿಂದ ಚಂದಿರ ಸೂರಿಯು । ತಾರೆಗಳಿರುವನ್ನ ನೀವು ॥
ಸಾರಸುಖಿಗಳಾಗಿ ಬದುಕಿರೆನುತ ಧ್ರುವ- । ತಾರೆಯು ತೋರಿದರವರ್ಗೆ ॥ ೧೬೩ ॥

ಕನಕಪುರೇಶನು ತನ್ನೆಡಗೈಯಿಂದ । ಕನಕಲತೆಯ ಬಲಗೈಯ ॥
ಮಿನುಗುವ ಕಿರುವೆರಲನು ಪಿಡಿಯಲು ಕಾಂತೆ । ಮನದಕ್ಕರಿಂ ವಾಮಕರದಿ ॥ ೧೬೪ ॥

ನೆರೆವಿಡಿದಾನಂದದಿಂ ಬರುತಿರಲವ- । ಳ್ಕರದ ಬೆಳ್ಳುಗುರು ಮೆರೆದವು ॥
ಅರುಣಮೇಘದ ಮೇಲ್ಭಾಗದಿ ರಾಜಿಪ । ಮಿನುಗುವ ಮಿಂಚುಗಳಂತೆ ॥ ೧೬೫ ॥

ತರುಣಿ ರೋಹಿಣಿಗೂಡಿ ಸುರಗಿರಿಯನು ಚಂದ್ರ । ಎರಕದಿಂ ಸುತ್ತಿ ಬರ್ಪಂತೆ ॥
ಅರಮಗ ಗರುವೆ ಕನಕಲತೆ ಸಹವಾಗಿ । ಎರಡು ಸೂಳು ಬಲವಂದು ॥ ೧೬೬ ॥

ಮೂರನೆ ವೇಳೆಯದೊಳಗಗ್ನಿಕುಂಡವ । ಚಾರು ದಕ್ಷಿಣ ಭಾಗದೊಳು ॥
ಸೇರುವೆಯಿಂ ಮಡಗಿರ್ದೇಳು ಮುತ್ತಿನ । ತೋರ ಪುಂಜಗಳೆಡೆಗೈದಿ ॥ ೧೬೭ ॥

ಪೊಡವಿಪ ! ಲಲನಾಮಣಿಯುಂಗುಟವನು । ಹಿಡಿ ಹಿಡಿ ಹಿಡಿಯೆನೆನ್ನುವೆಯಾ ॥
ಕಡುವಿಲ್ಲ ನಾಳೆಯವಳ ಪಾದಕೆರಗಿಸಿ । ಹಿಡಿಯಿಪ ನಿನ್ನಿಂದುಂಗುಟವ ॥ ೧೬೮ ॥

ಎಳೆವೆಣ್ಣುಗಳಾಗ ಹಾಸ್ಯಲಾಸ್ಯವನುರೆ । ಘಳಿಲನೆ ಸಭೆಗೆ ಪುಟ್ಟಿಸುತ ॥
ಇಳೆಯಾಣ್ಮನ ಕೈಯಿಂದುಂಗುಟವನು । ನಲವಿಂದ ಪಿಡಿಸಿದರಾಗ ॥ ೧೬೯ ॥

ಉತ್ತಮ ಜಾತಿ ಉತ್ತಮ ಕುಲ ಸುತಪ ದೇ- । ವೋತ್ತಮಗತಿ ಸಾಮ್ರಾಜ್ಯ ॥
ಮತ್ತಾರ್ಹಂತ್ಯನಿರ್ವಾಣ ಸತ್ಪದವಿಗೆ । ಉತ್ತಮೆ ! ಸಹಕಾರಿಯಾನು ॥ ೧೭೦ ॥

ಒಂದೊಂದಾಗೇಳು ಪುಂಜಗಳನು ಜ್ಞಾ- । ನೇಂದು ತಾ ಮುಟ್ಟಿಸಿ ಬಂದು ॥
ನಿಂದಗ್ನಿಕುಂಡದ ಬಲದ ಭಾಗದೊಳು ತಾ । ಚಂದದಿಂ ಶ್ರುವೆಯನು ಪಿಡಿದು ॥ ೧೭೧ ॥

ಕನಕಲತೆಯು ಘೃತವನು ಪಿಡಿ ಕೊಡುತಿರೆ । ಮನುಜೇಶ ಪೂರ್ಣಾಹುತಿಯ ॥
ಮನದಕ್ಕರಿಂ ಕೊಟ್ಟು ಗುರುಪೂಜೆ ಜಿನಪೂಜೆ- । ಯನುಪಮಗುಣಿ ತಾನು ಮಾಡಿ ॥

ಮಳಲಗುಪ್ಪೆಯ ಪೆಣ್ಣಂಚೆಯ ಸಹ ಬರೆ । ಕಳಹಂಸನೇರುವಂದದೊಳು ॥
ನಳಿನಾಕ್ಷಿ ಸಹ ವೇದಿಕೆಯನು ಜ್ಞಾನೇಂದು । ಘಳಿಲನೆ ಏರಿ ಹಸೆಯೊಳು ॥ ೧೭೩ ॥

ಅರಸನು ಕುಳಿತನವನ ಬಲಭಾಗದಿ । ತರುಣಿಯು ಕುಳಿತಂದಮಿಹುದು ॥
ಸ್ಮರನ ದಕ್ಷಿಣಭಾಗದಿ ರತಿದೇವಿಯು । ಎರಕದಿಂ ಕುಳಿತಳೋ ಎನಲು ॥ ೧೭೪ ॥

ನನಗಿನ್ನು ಮುಂದಕೆಯವಕಾಶವಿಲ್ಲೆಂದು । ಮನಸಿಜ ಮಲ್ಲಿಗೆಯಂಬ ॥
ಇನಿಸು ಬೇಗದಿ ತೆಗೆದೆಚ್ಚನೋ ಎಂಬಂತೆ । ವನಿತೆಯರಿಕ್ಕೆ ಸೇಸೆಯನು ॥ ೧೭೫ ॥

ಇಲ್ಲಿ ರೋಹಿಣಿ ಚಂದ್ರರಿರುತಿರೆಯುಡುತತಿ- । ಯಲ್ಲೇನು ಎಂದು ಬಂದಾಗ ॥
ನಿಲ್ಲದೆ ನಿಂದಂತೆ ಕುವರಿಯೆರೆತ್ತಿದ । ಚೆಲ್ವಿನಾರತಿ ಸೊಡರಿಹವು ॥ ೧೭೬ ॥

ದೊರೆ ದೊರೆಗಳು ವಧೂವರರಿಗೆ ಮುಯ್ಯಿಕ್ಕೆ । ಕರೆದು ಯಾಚಕ ವಿಪ್ರಬುಧರ್ಗೆ ॥
ಹರುಷದಿಂ ಜಾಳಿಗೆ ಜಾಳಿಗೆಯನು ಕೊಟ್ಟು । ತರುಜಚೂಲನು ಕಳುಹಿದನು ॥ ೧೭೭ ॥

ಭೂರಿಬ್ರಾಹ್ಮಣರು ಪರಸುತಿರಲು ಮತ್ತೆ । ನಾರಿಯರ್ಪಾಡೆ ಶೋಭನವ ॥
ಆ ರಾಯ ನಲ್ಲಳು ಸಹ ವೈರಣೆಯಿರ್ದ । ಚಾರುಮಂದಿರವನು ಪೊಕ್ಕ ॥ ೧೭೮ ॥

ಬೆಡಗಿಂದ್ವೈರಣೆಗಳ ಮುಂದೆ ಕುಳಿತಿರೆ । ಮಡದಿಯರುಗಳೈತಂದು ॥
ಸಡಗರದಿಂದ ಕೆಲದೊಳು ರಾಜಿಸುತಿರ್ದ । ಕಡೆಯಾಣಿ ಬೊಂಬೆಯನಾಗ ॥ ೧೭೯ ॥

ತಲೆಬಾಗಿ ಕುಳಿತಿರ್ದ ಕನಕಲತೆಯ ಕೂಡೆ । ಎಲೆ ಕನ್ಯೆ ! ಕೆಲದೊಳಗಿರ್ದ ॥
ಚೆಲುವ ಬೊಂಬೆಯ ತೆಗೆದರಸಗೆ ನೀಡೆಂದು । ಸಲೆ ಪೀಡಿಸೆ ಮದುವಳಿಗೆ ॥ ೧೮೦ ॥

ಕರಕರೆಗಾರದೆ ಕೇಲೊಳು ಕೈಯಿಕ್ಕಿ । ಎರಕದಿಂ ಗೊಂಬೆಯ ತೆಗೆದು ॥
ಕರದೊಳು ಪಿಡಿದಿರೆ ಕೊಡು ನಿನ್ನ ಗಂಡಗೆಂ- । ದೊರೆಯಲು ಗಗನೇಚರಿಯರು ॥

ನಸುಬಾಗಿ ತಲೆಯನು ನಗುತೋರೆಗಣ್ಣಿಂದ । ವಸುಧೇಶನ ನಿಟ್ಟಿಸುತ ॥
ಉಸುರುವುದಕೆ ನಾಣ್ಚಿ ಸುಮ್ಮನೆ ಕುಳಿತಿರೆ । ಉಸುರುಸುರೆನೆ ಖಚರಿಯರು ॥ ೧೮೨ ॥

ಏನಿತ್ತ ನೋಡಿರಿ ಮಾವಾಜಿ ಬಂದರು । ನಾನೆಡೆ ಮಾಡಲು ಬೇಕು ॥
ಮೌನವೇತಕೆ ಕೂಸ ಹಿಡಿಯಿರೆಂದಾಡುತ । ಜ್ಞಾನಚಂದ್ರನ ತೊಡೆಯೊಳಗೆ ॥ ೧೮೩ ॥

ಇರಿಸಲು ಗೊಳ್ಳೆಂದು ನಕ್ಕು ಖೇಚರಿಯರು । ಪರಿಹಾಸವ ಮಾಡುತಲಿ ॥
ಶಿರಬಾಗಿ ಏನನೀನರಿಯದವಳ ಹಾಗೆ । ಮರುಳಿಯರಂದದೊಳಿರ್ದು ॥ ೧೮೪ ॥

ಕರೆವ ಚಂದವ ನೋಡಿ ಎನಿ ಎನಿಯೆಂದು । ಎರಕದಿಂ ಕೂಸ ತೊಡೆಯೊಳು ॥
ಇರಿಸುವಂದವ ನೋಡಿ ಮಾಯವನೀಕೆ ತಾ । ಪರಿಕಿಸಲೆಲ್ಲಿ ಕಲಿತಳೋ ॥ ೧೮೫ ॥

ಹೆರಲಿಲ್ಲ ಹಿಂಗಲಿಲ್ಲೀಗಲಾಗಲೆ ಈಕೆ । ಹರೆಯದೊಳಗೆ ಕೌಟಿಲ್ಯವನು ॥
ಎರಕದೊಳಗೆ ಕಲಿತಾ ಮೇಲೆ ಗಂಡನ । ಮರುಳು ಮಾಡದೆ ಬಿಡಳಿವಳು ॥ ೧೮೬ ॥

ಎನಿತೆಲ್ಲ ನುಡಿದಾ ಕುವರಿಯ ನಾಣ್ಚಿಸಿ । ಮನುಜೇಶ ! ನೀ ಕೊಡೆಂದೆನುತ ॥
ವನಿತೆಯರುಗಳು ಸನ್ಮಾನಿಸೆ ಜ್ಞಾನೇಂದು । ಮಿನುಗುವ ಮುಗುಳ್ನಗೆಯಿಂದ ॥ ೧೮೭ ॥

ಎಲಗೆ ಹಜಾರಕೆ ದೊರೆ ದೊರೆಗಳು ಬಂದು । ನಲವಿಂದ ನಿಂತಿರ್ದರಂತೆ ॥
ಘಳಿಲನೆ ನಾ ಹೋಗಬೇಕೆಂದು ಕೂಸಿದು । ಅಳುತಿದೆ ಹಿಡಿ ಹಿಡಿ ಎಂದು ॥ ೧೮೮ ॥

ತೊಡೆಯ ಮೇಲಿರಿಸಲು ಖವಖವಿಸೆಲ್ಲರು । ಹುಡಿ ಹಾರುವಂತೆ ತಾಂಬೂಲ ॥
ಮಡದಿಯರುಗಳು ನಗುತ ಚಪಳೆಗೆ ತಕ್ಕ । ಪೊಡವಿಪ ದೊರಕಿದನಕಟ ! ॥ ೧೮೯ ॥

ಎಂದು ನುಡಿದು ಹಾಲು ಹಣ್ಣನು ಚಿನ್ನದ । ಒಂದು ರಾಜಿಪ ಪರಿಯಣದಿ ॥
ಅಂದು ಕನಕಲತೆ ಕೈಯಿಂದಲಿಕ್ಕಿಸಿ । ಚಂದದಿಂದವಳ ಕುಳ್ಳಿರಿಸಿ ॥ ೧೯೦ ॥

ಕಡೆಗಣ್ಣ ಸನ್ನೆಯ ಕನಕಲತೆಗೆ ಮಾಡಿ । ಪೊಡವಿಗೊಡೆಯನ ಬಾಯ್ಗವಳು ॥
ಕಡು ಪ್ರಿಯದಿಂ ಕಲಸಿದ ಹಣ್ಣು ತೊಡೆಯಲು । ಮಡದಿಯರ್ನಕ್ಕರಾಗೆಲ್ಲ ॥ ೧೯೧ ॥

ತಲೆಯ ತೊಡೆಯ ಸಂಧಿಯೊಳಿಟ್ಟು ಕರದಿಂದ । ಲಲನೆ ಬಾಯನು ಮುಚ್ಚಿಕೊಂಡು ॥
ಗಲಗಲನೊಳಗೆ ನಗುತಲಿರೆ ಜ್ಞಾನೇಂದು । ತಲೆಯ ಪಿಡಿದು ಮೇಲಕೆತ್ತಿ ॥ ॥ ೧೯೨ ॥

ಕಲಸಿ ಕಜ್ಜಾಯ ಬಾಳೆಯಹಣ್ಣು ತುಪ್ಪವ । ನಲವಿಂದ ಬಾಯಿಗೆ ಗಿಡಿಯೆ ॥
ನಿಳಯದೊಳಿರ್ದವರೆಲ್ಲರು ಭೋ ಎಂದು । ಘಳಿಲನೆ ನಕ್ಕರೇನೆಂಬೆ ॥ ೧೯೩ ॥

ಮನೆಮುಂಬಿಸಿ ವಧೂವರರ ವಿನೋದದಿಂ । ಮನವೊಲಿದೌಪಾಸನವ ॥
ಘನವಾಗಿ ನಡೆಯಿಸಿ ನಾಲ್ಕನೆ ದಿವಸದ । ವಿನುಗುವ ರಾತ್ರಿಯಂದಿನೊಳು ॥ ೧೯೪ ॥

ಪರಮ ವೈಭವದಿಂದ ನಾಗವಲ್ಲಿಯನಾಗ । ಎರಕದಿಂ ಮಾಡಿ ಕಂಕಣವ ॥
ಮೊರೆವ ವಾದ್ಯದ ಆರ್ಭಟಿಯೊಳೋರ್ವೋರ್ವರು । ಕರದಿಂದ ಬಿಡಿಸಿದರಾಗ ॥ ೧೯೫ ॥

ಕನಕಲತೆಯ ತಾಯಿ ನಂದವತಿಯು ತಾನು । ವಿನುಗುವ ಹೊನ್ನ ತಟ್ಟೆಯೊಳು ॥
ಘನರತ್ನದ ದಂಡೆ ತೋಂಡಿಲ ಹರಳೋಲೆ । ಕನಕದ ಓಲೆ ತೊಡುಗಳ ॥ ೧೯೬ ॥

ಈರಾರು ಸಾಸಿರ ಮುತ್ತೈದೆಯರಿಗೆ । ನೇರಾಣಿಂಗೆಲಸದೊಂದೊಂದು ॥
ಬೀರುವ ಕಾಂತಿಯು ತೊಡಿಗೆವೆರಸು ಮುದ್ದು । ನಾರಿ ಬಾಗಿನಗಳ ಕೊಟ್ಟು ॥ ೧೯೭ ॥

ಬುರುಸಾಲ ಪಟ್ಟೆ ಚೀನಾಂಬರ ಮುಂತಾದ । ವರ ವಸ್ತ್ರಗಳನುಡುಗೊಟ್ಟು ॥
ಎರಕದಿಂದಿತ್ತು ತಾಂಬೂಲವನವರಿಗೆ । ಹರುಷದಿಂ ಬೀಳ್ಕೊಟ್ಟಳಾಗ ॥ ೧೯೮ ॥

ಕುಸುಮ ಚೂಳನು ದೊರೆ ದೊರೆಗಳಿಗೆಲ್ಲರಿ- । ಗೆಸಕದಿ ಮಾಡಿಸೌತಣವ ॥
ವಸನಾಭರಣ ವಾರಣ ವಾಜಿ ಮುಂತಾದ । ಹೆಸರಾದ ಉಡುಗೊರೆಯಿತ್ತು ॥ ೧೯೯ ॥

ಕಳುಹಿಸಲಿತ್ತ ವಧೂವರರುಗಳನು । ಪೊಳೆವೈರಣೆಗಳ ಮುಂದೆ ॥
ಕುಳ್ಳಿರಿಸಿ ಸಜ್ಜಾಗೃಹಕೆ ಜ್ಞಾನೇಂದುವ । ನಲವಿಂದ ನಡೆಸಿದರಾಗ ॥ ೨೦೦ ॥

ನವರತ್ನದಿಂದ ಸಮೆದು ರಾಜಿಸುತಿರ್ದ । ಭವನದೊಳಗೆ ಮಣಿದೀಪ ॥
ರವಿಯಂತೆ ಥಳಥಳಿಸುತಲಿರೆ ಗಮಕದಿಂ । ಕುವರ ಪೊಕ್ಕನು ಬಂದಾಗ ॥ ೨೦೧ ॥

ಶರದಭ್ರವನೇರುವ ಶಶಧರನಂತೆ । ಮರಿಯಂತೆ ಕೊರಳ ತುಪ್ಪುಳದಿ ॥
ಮೆರೆವ ಶಕುನಿ ಚಪ್ಪರಮಂಚವನಾ । ದೊರೆಯೇರಿದನುತ್ಸಹದಿ ॥ ೨೦೨ ॥

ಸ್ಮರಕೇಳಿಗೆ ತಕ್ಕ ಭೋಗವಸ್ತುಗಳನು । ಪರಿಮಳಮಯ ಗಂಧಹುಡಿಯ ॥
ಅರಗೊಡೆದಂತೆಸೆವಡಕೆ ಬೆಳ್ಳೆಲೆಯನು । ಭರದಿಯಾಳಿಯರು ತಂದಿರಿಸೆ ॥ ೨೦೩ ॥

ಪನಿನೀರು ಪುಣುಗು ಜವಾದಿ ಕುಂಕುಮ ಹುಡಿ । ಘನಸಾರ ಮಿಶ್ರಿತವಾದ ॥
ಅನುಪಮ ಬಾವನ್ನ ಚಂದನ ಗಂಧವ । ವನಿತೆಯರಿರಿಸಿ ಜಾರಿದರು ॥ ೨೦೪ ॥

ಮರುಗ ಮಲ್ಲಿಗೆ ಜಾಜಿ ಸುರಹೊನ್ನೆ ಸಂಪಿಗೆ। ಇರುವಂತಿಯ ಮಾಲೆಗಳ ॥
ಅರಸನೇರಿದ ಮಂಚದ ಸಾನಿಧ್ಯದೊ-। ಳಿರಿಸಿದರಾಳಿಯರಾಗ ॥ ೨೦೫ ॥

ಬೇಡಿದ ವಸ್ತುವ ವರವಧೂಗಳಿಗೆ ಕೈ-। ನೀಡಿ ಕೊಡುವ ಪುತ್ಥಳಿಗಳ ॥
ಮಾಡಿಸಿ ಸೂತ್ರಾಧಾರದೊಳಗೆಯಿಟ್ಟು। ಗಾಡಿಕಾತಿಯರೆಯ್ದಿದರು ॥ ೨೦೬ ॥

ಅರಳ ಬಿಜಣಿಗೆಯ ಪನಿನೀರ ಗಿಂಡಿಯ। ಮೆರೆವ ಕನ್ನಡಿ ಚಾಮರವ ॥
ಕರದೊಳಗಾಂತು ರಾಜಿಪ ಸೂತ್ರಂಗಳ। ವರ ಶಾಲಭಂಜಿಗಳಿಹವು ॥ ೨೦೭ ॥

ತದನಂತರದೊಳು ನಂದವತಿಯದೊಂದು। ಒದವಿದ ಬೆಸದಿಯಾಳಿಯರು ॥
ಸುದತಿರನ್ನಳ ಬಳಿಗೈತಂದು ಕೈಗಳ। ಚದುರಿಂದ ಮುಗಿದಿಂತೊರೆದರು ॥ ೨೦೮ ॥

ಪ್ರಾಣನಾಥನ ಚಿತ್ತಾಂಬೋರಾಶಿಯ। ಏಣಾಂಕ ಚಾರು ಲಪನದಿ ॥
ಜಾಣೆ ! ನೀ ಪೆರ್ಚಿಸುವುದ ಕೇಳೆಂದೆನೆ। ನಾಣಿಂದ ತಲೆಗುಸಿದಿರಲು ॥ ೨೦೯ ॥

ಅರಸ ಮಂಚದೊಳು ಕುಳಿತುಕೊಂಡಿರಲಾಗ। ಮರುಕ ಸಲ್ಲದು ಏಳೆಂದೆನುತ ॥
ಕರವ ಪಿಡಿದು ಎಬ್ಬಿಸಲು ಮೆಲ್ಲನೆ। ನೆರಿಯನು ಪಸರಿಸುತೇಳೆ ॥ ೨೧೦ ॥

ತೋರಮುತ್ತಿನ ಪಾವುಗೆಯ ತಂದಿರಿಸಲು। ನಾರಿರನ್ನಳು ತಾ ಮೆಟ್ಟಿ ॥
ಬೀರಿ ಕಳೆವುತ ಕಣ್ಬೆಳಗಿಂದ ತಮವನಾ-। ಗಾ ರಾಜಹಂಸನಿರ್ದೆಡೆಗೆ ॥ ೨೧೧ ॥

ಕಡುಗಾಡಿಯಿಂದ ನಡೆದು ಬರುವಳು ನಾಣ್ಚಿ। ಒಡನೆ ಹಿಂದಕೆ ಸಾರುವಳು ॥
ನಡೆ ನಡೆಯೆಂದರೆ ಮುಂದಕೆ ನಡೆವಳು। ಬೆಡಗ ಬೀರುತ ಬಿನ್ನಾಣದೊಳು ॥ ೨೧೨ ॥

ಬಳಿಕಲವಳ ನೇಹದ ಸಖಿ ಶಶಿಕಾಂತೆ। ಘಳಿಲನೆ ಹಸ್ತವ ಪಿಡಿದು ॥
ಬೆಳತಿಗೆಗಣ್ಣಳ ಕರದೊಯ್ದು ನೃಪನಿರ್ದ। ನಿಳಯವ ಪೊಗಿಸಿ ಬಾಗಿಲನು ॥ ೨೧೩ ॥

ಇಕ್ಕಿ ಮೆಲ್ಲನೆ ಜಾರಲು ಮಣಿಗಂಬವ। ಕಕ್ಕಸಕುಚೆಯತ್ತ ಸಾರಿ ॥
ಚೊಕ್ಕ ಚಿನ್ನದ ಪುತ್ಥಳಿಯೋ ಬೇರೊಂದೆನೆ-। ಯಕ್ಕರಿಂ ಕಡೆಗಣ್ಣಿನಿಂದ ॥ ೨೧೪ ॥

ಅರಮಗನನು ನೋಡುತ ಸಂತಸವೆಂಬ। ಶರಧಿಯೊಳ್ಮುಳುಗಾಡುತಿರಲು ॥
ಸರಸೋಕ್ತಿಯಿಂ ಮೆಲ್ಲಮೆಲ್ಲನೆ ಕುವರನು। ಒರೆದನು ಕಡುಗಾಡಿಯಿಂದ ॥ ೨೧೫ ॥

ಎಲೆ ಕಾಂಚನದ ಪುತ್ಥಳಿಯೆ ! ನಿಮ್ಮಕ್ಕಾಜಿ। ಬಲುಗಂಬವೇಕೆ ನೆಮ್ಮಿದಳು ॥
ಕಲಹವೇನುಂಟೋ ನಮ್ಮೊಳು ಕೇಳು ಕೇಳೆಂದು। ಇಳೆಯಾಣ್ಮ ಸರಸದೋರಿದನು ॥

ಕರೆದು ನಿಮ್ಮಕ್ಕನ ತನ್ನಿಮೆಂದೆನುತಾಗ। ನರನಾಥ ಸೂತ್ರವ ಮಿಡಿಯೆ ॥
ಚರ ಚರನವು ಪೋಗಿ ಕೋಪ ಬೇಡಕ್ಕಾಜಿ !। ನೆರೆಯನೊಳೆಂದು ಚರಣಕೆ ॥ ೨೧೬ ॥

ಎರಗಿ ಕೈವಿಡಿದು ಮೆಲ್ಲನೆಯೆತ್ತಿಕೊಂಡವು। ದೊರೆಯೊತ್ತಿಲಿ ಕುಳ್ಳಿರಿಸೆ ॥
ಶಿರಬಾಗಿ ಎಡದ ತೋಳನು ಸ್ತನದೊಳಗಿಟ್ಟು। ಮುರುಕದಿ ಬಲದ ಕೈಯಿಂದ ॥ ೨೧೭ ॥

ಸಿರಿಮೊಗವನು ಮುಚ್ಚಿ ಬೆರಳುಗಳೆಡೆಯಿಂ- । ದರಸಿಯರಸನ ನೋಡುತ್ತ ॥
ಇರುತಿರಲೀಗ ಕಂಬವ ನೆಮ್ಮಿಕೊಂಡಿರ್ದ । ಕರತಂದರಾರೆಲೆ ! ನಿನ್ನ ॥ ೨೧೯ ॥

ಎನೆ ಕಿಲಿಕಿಲಿರೆಂದು ನಗುತಿರೆ ಜ್ಞಾನೇಂದು । ವನಿತೆಯ ತೊಡೆ ಸೋಂಕಿ ಕುಳಿರೆ ॥
ಇನಿಸು ನಾಣ್ಚಿದಳಾಗಿ ಹಿಂದಕೆ ಜಗಿವಳು । ಜನಪನೊತ್ತುವ ಸಡುದೊಡೆಯ ॥ ೨೨೦ ॥

ಮಿಡಿ ಮಿಡಿ ಮಿಡುಕಿ ಬೈವಳು ತನ್ನ ಕೈಯಿಂದ । ಪೊಡವಿಪತಿಯ ಕೈಯ ಪಿಡಿದು ॥
ಬೆಡಗಿಂದ ನೂಂಕಿ ಕಳೆವಳದು ರಾಯಗೆ । ಕೊಡುವುದು ಸ್ವರ್ಗಸುಖವನು ॥ ೨೨೧ ॥

ಅನುಪಮ ಚೌಷಷ್ಟಿ ಕಲೆಯುಳ್ಳ ಜ್ಞಾನೇಂದು । ವನಜಲೋಚನೆ ! ನಿನ್ನ ಕೈಯ ॥
ಮಿನುಗುವ ಅಪ್ಪದಳದ ಮಾಟ ಹಸನಾಯ್ತು । ನಿನಗಿತ್ತನೆ ನಿಮ್ಮಯ್ಯ ॥ ೨೨೨ ॥

ನೋಡು ನೋಡುವೆನೆಂದು ಮುಟ್ಟಲು ಗಕ್ಕನೆ । ಗಾಡಿಕಾತಿಯ ಕೈಯ ತೆರೆದು ॥
ನೋಡುತ್ತಲೋರೆಗಣ್ಣಿಂದ ಸುಮ್ಮನೆಯಿರೆ । ನಾಡಿಗೊಡೆಯ ನಲ್ಮೆಯಿಂದ ॥ ೨೨೩ ॥

ಬೆರಳ ಮುದ್ರಿಕೆಯನು ನೋಡುವ ನೆವದಿಂದ । ಕರವ ಪಿಡಿದು ಚಿಟುಕೊತ್ತೆ ॥
ನೆರೆ ಬೆಚ್ಚಿದಂತೆ ಮೆಲ್ಲನೆ ಹಿಂದೆ ಜಗಿವುತ । ಶಿರವಸ್ತವಿಕ್ಕಿ ನಗುವಳು ॥ ೨೨೪ ॥

ಕೋಪವೇತಕೆ ನನ್ನೊಳಗೆಲೆ ಪುಷ್ಪ- । ಚಾಪನ ಕೈಯರಗಿಳಿಯೆ ! ॥
ಚಾಪಲಾಕ್ಷಿಯೆಯೆಂದು ಶಿರವಿಡಿದೆತ್ತುವ- । ನಾ ವೇಣ್ಣ ತಲೆವಾಗಿಹಳು ॥ ೨೨೫ ॥

ಮುಸುಕ ಮೆಲ್ಲನೆ ಜಾರಿಸಿ ಕೊರಳೊಳಗಿರ್ದ । ಹೊಸ ಮೌಕ್ತಿಕದ ಸರವನು ॥
ಹಸನಾಯಿತು ಎಂದು ನೋಡುವ ನೆವದಿಂದ । ಕುಶಲೆಯ ಸ್ತನವ ಪಿಡಿಯಲು ॥ ೨೨೬ ॥

ಮಿಡುಕಿ ಮಿಡುಕಿ ಬೈಯುತಲೊಳಗುಮ್ಮುತ । ಕಡು ಹಸನಾಯ್ತು ಸಾಕೆನುತ ॥
ಹಿಡಿದು ಕೈ ನೂಂಕಿ ಕಳೆದು ತನ್ನಯದೊಂದು । ನಿಡುದೋಳಿಂ ಸ್ತನವನು ಮರಸೆ ॥

ಅರಸಿಯ ಮುರುಕವ ನೋಡುತ ಜ್ಞಾನೇಂದು । ಸಿರದೂಗಿಂತು ಜಾಣ್ಮೆಯನು ॥
ನೆರೆವರೆಯದೊಳು ಕಲಿತಳೀಕೆ ಖೇಚರ- ।. ತರುಣಿಯಲ್ಲವೆ ಎಂದು ನೆನೆದ ॥ ೨೨೮ ॥

ಕುರುಳ ತಿದ್ದುವ ನೆವದೊಳು ಚೆಂದುಟಿಗಚ್ಚಿ । ಸರಸದಂಬುಲವ ಬಾಯೊಳಗೆ ॥
ಇರಿಸಲು ಥೂ ಥೂ ಎಂದು ತಾನುಗುಳುತ । ಕರದಿಂದ ಚೆಂದುಟಿವಿಡಿದು ॥ ೨೨೯ ॥

ನೀನಾರು ನಾನಾರು ನಿನ್ನಯೆಂಜಲ ನ- । ನ್ನಾನನದೊಳಗಿಡುವುದಕೆ ॥
ಮಾನವೇಶ್ವರನೆಂಬ ಹೆಮ್ಮೆಯೆ ಎಂದು । ಮಾನಿನಿಯೋಕರಿಪುದನು ॥ ೨೩೦ ॥

ನರನಾಥ ಕಂಡು ಹಿಗ್ಗುತಲೆಲೆ ಸುಜಾಣೆ ! । ಕರ ಚೆಲುವಾಯಿತೀ ರವಕೆ ॥
ಪರಿಕಿಪೆನೆಂದು ಮೆಲ್ಲನೆ ಗಂಟನೆ ಉರ್ಚಿ । ಎರಕದಿಂದಮರ್ದಪ್ಪಿಕೊಂಡ ॥ ೨೩೧ ॥

ಬಿಡು ಬಿಡು ಪರರ ಮಕ್ಕಳನೆಲ್ಲಿ ಹೋದರು । ಕರ ಬೆಚ್ಚಂತಪ್ಪುವರೆ ॥
ಕರೆದರು ನಿನಗೆ ಸುಮ್ಮನೆ ಜ್ಞಾನೇಂದುವೆಂ- । ಬುರು ನಾಮದಿ ಬುಧಜನರು ॥ ೨೩೨ ॥

ಕಡು ನಾಣ್ಚಿ ಮಾಣಿಕದೀವಿಗೆಯುಫ಼್ಫೆಂದು । ಒಡನುರುಹುವಳುರಿಹಿದೊಡೆ ॥
ಕೆಡದಿರೆ ಲಜ್ಜೆಯಿಂದರಸನ ಬೈವಳು । ಕಡು ಪೆಚ್ಚುರ್ವನು ರಾಯನದಕೆ ॥ ೨೩೩ ॥

ಸರಸ ಚುಂಬನ ನಲ್ಲೆ ನೋಟ ಮುನಿಸು ಮುದ್ದು । ಪರಿರಂಭಣದಿಂದರಸ ॥
ಅರಸಿಯ ಲಜ್ಜೆಯ ಮೆಲ್ಲನೆ ತೊಲಗಿಸಿ । ಪರಿಮಳ ಯಕ್ಷಕರ್ದಮವ ॥ ೨೩೪ ॥

ಗುರುಕುಚಗಳಿಗೆ ಲೇಪಿಸುವನಪ್ಪುವನೊಮ್ಮೆ । ಗರುವೆ ! ಎಲೆಯ ಗಳಿಗೆಗಳ ॥
ಭರದಿ ನೀಡೆನಲು ನೀಡುವಳಾ ಗಳಿಗೆಯ- । ನರಸ ಕಚ್ಚುರ್ಧಗಳಿಗೆಯ ॥ ೨೩೫ ॥

ಅರಸಿಯ ಬಾಯೊಳಗಿರಿಸಿ ಚೆಂದುಟಿಗಚ್ಚಿ । ದೊರೆ ಪೀರುವನಮೃತವನು ॥
ಗುರುಕುಚಗಳಿಗೊಮ್ಮೆ ನಖರೇಖೆದೋರಲು । ಅರಸಿ ಕೊಸರಿ ಬೈವುತಲಿ ॥ ೨೩೬ ॥

ಅರಸನ ಮುಂಗೈಯೊಳು ನಖರೇಖೆಯ- । ನಿರಿಸಿಯೆರ್ದೆಯ ತಾನು ಬೇಗ ॥
ಮರೆಸಲು ದೊರೆರನ್ನ ತರುಣಿಯ ತೊಡೆಯೊಳ- । ಗರೆವರೆಗಳನಂಕಿಸುವ ॥ ೨೩೭ ॥

ನಿಧಿಯ ಕಾದಿರ್ದ ಸರ್ಪನ ಮಂತ್ರವಾದಿಯು । ಬೆದರಿಸಿ ಕಳೆವಂದದೊಳು ॥
ಸುದತಿಯ ನೆರಿಯ ಮೇಗಳ ನೇವಳವನು । ಚದುರಿಂದ ಕಳೆಯಲಂಬರವು ॥ ೨೩೮ ॥

ಗಿರಿಯ ಮೇಗಣ ಕೆಮ್ಮುಗಿಲು ತಾ ಪರೆವಂತೆ । ನೆರಿಗಳೆದವನಿಗೆ ಬೀಳೆ ॥
ನೆರೆ ಬೆಚ್ಚುರ್ದಂದದಿ ಪ್ರಾಣೇಶ್ವರನಾ । ಅರಸಿಯಪ್ಪಿದಪ್ಪುಗಿ ಬಿಗಿದು ॥ ೨೩೯ ॥

ಆಯುಕನತಿ ಜಾಣೆ ನಾಯಕ ಬಹು ಜಾಣ । ಪ್ರಾಯವದರ ಮೇಲೀರ್ವರಿಗು ॥
ಬಾಯ್ಬಿಟ್ಟು ಪೇಳಲೇನವರ ಕಾತರವನು । ಕಾಯಜನೊಬ್ಬನೆ ಬಲ್ಲ ॥ ೨೪೦ ॥

ಆದರಿಂದ ಮೊದಲಾದ ಕಲೆಯ ನೆಲೆಗಳನು । ಚದುರರರಿತುಕೊಂಬುವುದು ॥
ಉದಯದೋರಿದ ಸೂರ್ಯನನಿತರೊಳಗೆ ರಾಯ । ಮುದದಿಂದ ಸ್ನಾನವ ಮಾಡಿ ॥ ೨೪೧ ॥

ಜಿನರಾಜನ ಪೂಜಿಸಿ ಜಿನಮುನಿಗಳ । ವನಜ ಪಾದಕೆ ಬಗ್ಗಿ ಮುಗ್ಗಿ ॥
ಜಿನರ ಪುರಾಣವ ಕೇಳುತ ಸುಖವೆಂಬ । ವನಧಿಯೊಳೋಲಾಡುತಿಹನು ॥ ೨೪೨ ॥

ವರ ಬಂಧುಗಳೊಳು ಸಂಪ್ರೀತಿಯ ಮಾಡುತ । ಸರಸ ಸಂಗೀತಗೋಷ್ಠಿಯೊಳು ॥
ನೆರೆ ಜಾಣರ ದೇವ ಹೊತ್ತನು ಕಳೆವುತ- । ಲಿರುತಿಹನತಿ ಸಂಭ್ರಮದಿ ॥ ೨೪೩ ॥

ಭರತ ಸಂಗೀತ ಸಾಹಿತ್ಯಾಂಬುಧಿಚಂದ್ರ । ಸರಸ ಕಲಾಕೋವಿದನು ॥
ಅರುಹನ ಪಾದಾಂಬುಜಮತ್ತಮಧುಪನು । ಗರುವ ಜ್ಞಾನೇಂದೊಪ್ಪಿದನು ॥ ೨೪೪ ॥

**॥ ಅಂತು ಸಂಧಿ ೧೧ಕ್ಕಂ ಪದ ೧೭೧೪ಕ್ಕಂ ಮಂಗಲಂ ॥**

# ಹರಿಪುರದ ಮುತ್ತಿಗೆ.

ಸಾಸಿರಕೂಟ ವಸತಿಯ ಬಾಗಿಲ ನೃ- । ಪೇಶ ತೆಗೆದುದ ಸೊಲ್ಲಿಪೆನು ॥ ಪ ॥

ಶ್ರೀಮದುರಗರಾಜಮುಕುಟತಾಟಿತಪಾದ । ಕಾಮಾಭಿಮಾನಸಂಹರಣ ! ॥
ನಾಮ ಸಾಸಿರದೆಂಟ ತಾಳಿದ **ಶಾಂತೀಶ** ! । ಕಾಮಿತ ಫಲವ ಕೊಡೆಮಗೆ ॥ ೧ ॥

ಪರಮ ಲೀಲೆಯಿಂ ದಂಪತಿಗಳು ಸುಖವೆಂಬ । ಶರಧಿಯೊಳಗೆಯೋಲಾಡಿ ॥
ಹರಿ ಇಂದ್ರಾಣಿಯೊಡನೆ ಸುಖದಿರುವಂತೆ । ಸ್ಮರನು ರತಿದೇವಿಯೊಡನೆ ॥ ೨ ॥

ಇರುವಂತೆ ಜ್ಞಾನೇಂದು ಸರಸ ವಿನೋದದಿ । ತರುಣಿಯೊಡನೆ ಸುಖಿಸುತ್ತ ॥
ಗುರುಗಳಿಗಾಹಾರ, ಜಿನಪೂಜೆಯೆಸಗುತ- । ಲಿರುವನುತ್ಸಾಹ ಸಂತಸದಿ ॥ ೩ ॥

ಜಿನಚಂದ್ರನಂದನನಿರುತೊಂದಾನೊಂದು । ದಿನದೊಳು ತನ್ನ ಮಾತೆಯನು ॥
ಜನಕನ ನೆನೆದುಮ್ಮಳಗೊಂಡು ಮನದೊಳು । ಕನಕಪುರಕೆ ಪೋಪೆನೆಂದು ॥ ೪ ॥

ಗರುಡವೇಗನ ಕರೆಯಿಸಿಕೊಂಡು ರಾಜೇಂದ್ರ- । ನೊರೆದು ಸಕಲ ಕಾರ್ಯವನು ॥
ತೆರಳಿ ಪೋಪೆನು ನಮ್ಮೂರಿಗೆ ನಿನ್ನಯ । ವರ ಭಗಿನಿಯ ಸ್ವರ್ಣಲತೆಯ ॥ ೫ ॥

ಕರೆಸಿದಾಕ್ಷಣವೆ ಸಂತೋಷದಿಂದಲಿ ನೀನು । ಕರಕೊಂಡು ಬರುವುದು ಎಂದು ॥
ಎರಕದಿಂ ಶ್ಯಾಲನ ಬಿಗಿಬಿಗಿದಮರ್ದಪ್ಪಿ । ಒರೆದು ವಿನಯವಚನವನು ॥ ೬ ॥

ಮಾಮ ಮಾಮಿಗಳ ಕೈಯಲಿ ಕಳುಹಿಸಿಕೊಂಡು । ಮೋದದಿಂದ ಬಂಧುಜನಕೆ ॥
ಪ್ರೇಮದಿಂದುಡುಗೊರೆಗಳನಿತ್ತು ಬೀಳ್ಕೊಂಡು । ಹೇಮಲತೆಯ ಗೃಹಕೈದಿ ॥ ೭ ॥

ಚರಣಕೆರಗಿದ ಕೋಮಲೆಯನು ಬಿಗಿದಪ್ಪಿ । ಸರಸದಂಬುಲವಿತ್ತು ಬಾಯ್ಗೆ ॥
ಹರುಷದಿಂ ಚುಂಬಿಸಿ ಲಲ್ಲೆವಾತುಗಳಿಂದ । ಒರೆದು ತನ್ನಯ ಕಜ್ಜವನು ॥ ೮ ॥

ತೆರಳಿ ತಾ ಬಂದು ಜಿನೇಶನ ಗೃಹಪೊಕ್ಕು । ಕರಗಳ ನೊಸಲಿಗೆ ತಂದು ॥
ವರ ವಸ್ತುತತಿಗಳಿಂ ಜಿನನ ಪೂಜೆಯ ಮಾಡಿ । ಪರಮನ ಗುಣವನು ನುತಿಸಿ ॥ ೯ ॥

ಮರಳಿ ಮರಳಿ ಸಾಷ್ಟಾಂಗವೆರಗಿ ಕೂಡೆ- । ಯರುಹನ ಬೀಳ್ಕೊಂಡು ಬಂದು ॥
ವರ ರತ್ನದಿಂ ಥಳಥಳಿಪ ವಿಮಾನವ- । ನರಮುಗನೇರಿ ಲೀಲೆಯೊಳು ॥ ೧೦ ॥

ಕುಲಿಶಗಲನ ಪಟ್ಟಣವನು ಇರದೈದಿ । ಲಲನೆಯರಿಗೆ ಗಮನವನು ॥
ಗೆಲವಿಂದ ಸೂಚಿಸಿ ದಕ್ಷಿಣ ಮುಖವಾಗಿ- । ಯಲಘು ಪರಾಕ್ರಮಿ ನಡೆದ ॥ ೧೧ ॥

ಬರುತ ಬರುತಲಾಕಾಶಮಂಡಲದೊಳು । ತರಣಿ ಸಮಾನ ವಿಮಾನ ॥
ತುರಿಹದಿ ಕೀಲಿಸಿ ನಿಲಲು ಕುಮಾರನು । ನೆರೆ ವೆರಗಾಗಿ ಮನದೊಳು ॥ ೧೨ ॥

ಈ ರತ್ನಮಯ ಪುಷ್ಪಕವನು ನಿಲಿಸಿದ। ಧೀರ ಮುನಿಪನೋ, ಬಾಲಕನೋ ॥
ವಾರಿಜಾಕ್ಷಿಯೋ, ನಿರ್ಜರನೋ, ವೈರಿಯೋ, ಮೇಣು । ಚಾರುಜಿನೇಂದ್ರ ಮಂದಿರವೋ ॥
ಇದಕೆ ಕಾರಣ ತಾನಾವನೆಂದೆನುತಾಗ। ಚದುರರ ದೇವ ಭೂತಲವ ॥
ಪದಪಿಂದ ಶಿರಬಾಗಿ ನೋಡಲು ಕೆಳಗೊಂದು । ಉದಯಾರ್ಕ ದೀಪ್ತಿಯ ಜರಿವ ॥ ೧೪ ॥
ಥಳಥಳಿಸುವ ದಿವ್ಯ ರತ್ನಕೀಲಿತವಾದ। ಮಲರಹಿತರುಹನಾಲಯವ ॥
ಇಳೆಯಾಣ್ಮನು ಕಂಡು ಜಯ ಜಯ ಜಿನ ! ಎಂದು । ಘಳಿಲನೆ ಪುಷ್ಪಕವಿಳಿದು ॥ ೧೫ ॥
ಬರುವ ವೇಳೆಯೊಳೆಂದೆಂದು ನೀರಿಲ್ಲದ । ಸರಸಿಯೊಳುದಕವ ತುಂಬಿ ॥
ಪರಿಮಳವನು ದೆಸೆದೆಸೆಗೆ ಬೀರುವ ಸ್ವರ್ಣ- । ದರವಿಂದದಿಂದ ರಾಜಿಸುವ ॥ ೧೬ ॥
ಸರಸಿಜಾಕಾರವನೊಳಪೊಕ್ಕು ಸ್ನಾನವ । ದೊರೆಮಗ ಮಾಡಿ ಲೀಲೆಯೊಳು ॥
ಅರುಣಕುಶೇಶಯವಸನ ಪೊಟ್ಟಣಗಟ್ಟಿ । ಎರಕದೊಳಾಂತು ವಸ್ತ್ರವನು ॥ ೧೭ ॥
ಉಡೆ ಸುತ್ತಿ ಕರಗಳ ಭಾಳದೊಳಗೆ ಇಟ್ಟು । ಕಡು ಭಕ್ತಿಯಿಂದ ಸ್ತುತಿಸುತ ॥
ಕೊಡನ ಶಿರದಿ ಪೊತ್ತು ನವಮಾಸ ಗರ್ಭಿಣಿ। ನಡೆದು ಮೆಲ್ಲನೆ ಬರುವಂತೆ ॥ ೧೮ ॥
ಜಿನಗೃಹವನು ಮೂಮೆ ಬಲವಂದು ಜ್ಞಾನೇಂದು । ಮನದಕ್ಕರಿಂ ಮುಂದೆ ನಿಂದು ॥
ಮಿನುಗುವ ದಕ್ಷಿಣ ಕರವ ಮಳ್ವಡಿಯೊಳು । ಜನನಾಥ ಚಂದ್ರಮನಿಡಲು ॥ ೧೯ ॥
ವರವಜ್ರಮಯವಾದ ಲಾಳ ಮುಂಡಿಗೆ ಬೀಗ। ಭರದಿಂದಲುರ್ಚಿ ಕಳೆಯಲು ॥
ಸ್ವರವೋರೆ ಕಿರ್‍ರೆಂದು ವಜ್ರದ ಪಡಿಗಳು । ತೆರೆದವವನಿಯ ಕಂಪಿಸುತ ॥ ೨೦ ॥
ಅರಮಗ ! ನೀ ಬಾಗಿಲ ತೆಗೆವುದರಿಂದ। ದೊರೆಕೊಂಬುದು ಒಂದು ವಸ್ತು ॥
ನೆರೆ ನಂಬು ಎಂದಾ ಗೃಹಲಕ್ಷ್ಮಿ ಪೇಳ್ವಂತೆ । ಸ್ವರದೋರಿತಾ ವಜ್ರಪಡಿಯು ॥ ೨೧ ॥
ಧರೆಯನಾಳಿದ ಕಟ್ಟಕಡೆಯೊಳು ಕರ್ಮವ- । ನುರುಹಿ ಮೇಲಕೆ ಪೋಪಾಗ ॥
ತೆರೆವಳಮೃತ ಹೆಣ್ಣು ಮೋಕ್ಷದ್ವಾರವನೆಂದು । ಒರೆವಂತೆ ಕೂಗಿದುವಾಗ ॥ ೨೨ ॥
ಇನ-ಶಶಿಕೋಟಿ ಕಾಂತಿಯ ಜರಿವುತಲಿರ್ದ । ಘನರತ್ನದಿಂ ಥಳಥಳಿಪ ॥
ಮಿನುಗುವ ಹರಿವಿಷ್ಟರದೊಳು ರಾಜಿಪ । ಜಿನಬಿಂಬ ನೂರೆಂಟ ಕಂಡು • ॥ ೨೩ ॥
ಅರಮಗನೊಳಪೊಕ್ಕು ಸಾಷ್ಟಾಂಗವೆರಗಿ ತಾ । ಕರವನು ನಿಟಿಳಕೆ ತಂದು ॥
ಎರಕದಿಂದಲೆ ನುತಿಸಿದನದೆಂತೆನೆ । ಒರೆವೆನು ಲಾಲಿಸಿ ಬುಧರು ॥ ೨೪ ॥
**॥ದರ್ಶನಸ್ತೋತ್ರ॥** ಜಯಜಯ ಘಾತಿಕರ್ಮಾರಣ್ಯ ಪಾವಕ। ಜಯಜಯ ಕೇವಲಬೋಧ॥
ಜಯ ಜಯ ನಿರ್ಜರಾಧಿಪಕೃತಕಲ್ಯಾಣ !। ಜಯ ಜಯ ಸಮವಶೃತೀಶ ! ॥ ೨೫ ॥
ಜರೆಮೃತ್ಯು ಜನ್ಮವೆಂದೆಂಬ ವಿಪಿನದೊಳು । ನೆರೆ ಜಾತ್ಯಂಧಕನಾಗಿ ॥
ತಿರುಗಿದೆ ನಾ ನಿನ್ನೆವರ ಸನ್ಮಾರ್ಗವ। ಕರುಣಿಸೋ ಕಾರುಣ್ಯಸಿಂಧು ! ॥ ೨೬ ॥

ಭವರೋಗವೈದ್ಯ ನೀನೆಂಬುದನರಿಯದೆ । ಕವಿದ ಸಂಸಾರ ರೋಗದೊಳು ॥
ತವೆ ನೊಂದು ನಾನಿನ್ನ ಮರೆಹೊಕ್ಕ ಬಳಿಕೆನ್ನ । ಭವರೋಗವ ಕೆಡಿಸರುಹ ! ॥ ೨೭ ॥

ಜಿನರಾಜ ! ನಿನ್ನ ಒಳ್ನುಡಿಯನು ಕೇಳದೆ । ಮನಕೆ ಬಂದಂತಾನು ನಡೆದು ॥
ಘನ ಚೌರಾಶೀತಿಲಕ್ಷ ಯೋನಿಯೊಳು ಬಂದೆ- । ನನಘ ! ನೀ ಸರಿಪಡಿಸದನು ॥ ೨೮ ॥

ಖಳ ಕರ್ಮವೆಂದೆಂಬ ಘೋರ ಕೂಪಾರದ । ಸುಳಿಯೊಳು ಸಿಲುಕಿರ್ದೆನ್ನ ॥
ಘಳಿಲನೆ ತೆಗೆದು ಧರ್ಮಾಮೃತವನು ಕೊಟ್ಟು । ಇಳೆಯದ ತುದಿಗಟ್ಟಿರುಹ ! ॥ ೨೯ ॥

ಇಂತು ನುತಿಸಿ ಪೂಜಿಸಿ ಸಾಷ್ಟಾಂಗವ । ಕಂತುಮದಾಪಹರಣಗೆ ॥
ತಾಂತಳುವದೆ ರಾಯನೆರಗಿ ಬೀಳ್ಕೊಂಡಾಗ । ಸಂತೋಷದಿಂ ಪೊರಮಟ್ಟು ॥ ೩೦ ॥

ಸುರಸರೋರಗರಿಗೆ ತೆರೆಯದ ಪಡಿಗಳ । ಕುರುವಂಶಾಂಬರ ಸೂರ್ಯ ॥
ತೆರೆದು ಜಿನೇಶನ ಜ್ಞಾನೇಂದು ಕಂಡುದ । ವರಭಿತ್ತಿಯೊಳು ಬರೆದನು ॥ ೩೧ ॥

ಸುರುಚಿರ ರತ್ನಮಂಟಪದೊಳು ಕುಳ್ಳಿರಲು । ಸುರರೆಲ್ಲ ಜಯ ಜಯವೆಂದು ॥
ಅರಳು ಮಳೆಯನಾಗ ಕರೆದು ಬಂದರುಹನ । ವರಭಕ್ತಿಯಿಂ ನುತಿಸಿದರು ॥ ೩೨ ॥

ಕಿನ್ನರ ಕುಲಜರು ಜ್ಯೋತಿಷ್ಕ ನಿಕರರು । ಪನ್ನಗ ವರ ಪೇಟಕವು ॥
ಚೆನ್ನೆಯರೊಡಬರೆ ಬಂದು ಜಿನೇಶಗೆ । ಉನ್ನತ ಭಕ್ತಿಯಿಂದೆರಗಿ ॥ ೩೩ ॥

ನವರತ್ನಮಯವಾದ ಮಂಟಪದೊಳಗಿರ್ದ । ಕುವರನ ಕಂಡು ಸಂತಸದಿ ॥
ಭುವನೇಶ ! ನಿನ್ನಂತ ವರಪುಣ್ಯವನಾಂತ । ಕುವರರ ಕಂಡುದಿಲ್ಲಾವು ॥ ೩೪ ॥

ದೇವಾಸುರರಿಗೆ ತೆಗೆಯಲಶಕ್ಯದ । ಈ ವಿಧ ವಜ್ರಪಡಿಯನು ॥
ಕೋವಿದ ! ನಿನ್ನಯ ಕರಕಾಂತಿ ಸೋಂಕಲು । ತಾವರೆ ರವಿಗಂಡಂತೆ ॥ ೩೫ ॥

ಬಿರಿದು ನೀನೇ ಲೋಕಕೆ ದೇವನಲ್ಲದೆ । ಪರಿಕಿಸೆ ದೇವತೆಯಾದೆ ॥
ವರಮೋಕ್ಷಲಕ್ಷ್ಮಿಯ ಕುಚಮಂಡಲದೊಳು । ಮೆರೆವ ಮುತ್ತಿನ ಹಾರ ನೀನೆ ! ॥ ೩೬ ॥

ವರದಿವ್ಯಾಂಬರ ದಿನಮಣಿಯು ನೀನೆ । ಕರುಣಾರ್ಣವಚಂದ್ರ ನೀನೆ ॥
ದೊರೆಗಳ ಮುಕುಟತಾಟಿತ ಚರಣನು ನೀನೆ । ಸುರಭೂಜಸಮದಾನಿ ನೀನೆ ! ॥ ೩೭ ॥

ಎಂದಿಂತು ಪಲವು ತೆರದಿ ಕೊಂಡು ಕೊನರುತ । ವೃಂದಾರಕಗಣವಾಗ ॥
ಕಂದರ್ಪನಿಭನಿಗೆ ಪಲವು ಭೂಷಣವಿ- । ತ್ತಂದು ಪೋಗಲು ಮತ್ತಿತ್ತ ॥ ೩೮ ॥

ಆಗಲಾ ಜಿನಪನ ಭವನವ ಕಾದಿರ್ದ । ನಾಗದತ್ತನು ಎಂಬೋರ್ವ ॥
ಬೇಗದಿಂದಲೆ ಬಂದು ರಾಜಕುಮಾರಗೆ । ರಾಗದಿಂ ಕೈಗಳ ಮುಗಿದು ॥ ೩೯ ॥

ಎಲೆ ರಾಜಕುವರರ ತಲೆವಣಿ ! ನೀ ಕೇಳು । ಕಲಿಲಹರನ ಜಿನಗೃಹವ ॥
ಪಲಕಾಲ ಕಾದಿರ್ದೆನ್ನಯ ಪುಣ್ಯದಿ । ಚೆಲುವರ ದೇವ ! ನೀ ಬಂದು ॥ ೪೦ ॥

ಎಂದೆಂದು ಕೀಲಿಸಿದ್ದಿರ್ದ ವಜ್ರಪಡಿಯನು । ಚಂದದಿಂ ತೆಗೆದು ಪೂಜಿಸಿದೆ ॥
ಕಂದರ್ಪ ಸಮರೂಪ ! ನಮ್ಮರಸಿನ ಮುದ್ದು । ನಂದನೆಗರಸು ನೀನಾದೈ ॥ ೪೧ ॥

ಎನೆ ಕೇಳಿ ನಸುನಕ್ಕು ಅದರ ವಿವರವನು । ಮನದಕ್ಕರಿಂ ಪೇಳೆಂದು ॥
ಮನುಜೇಶ್ವರ ಕೇಳಲು ನಾಗದತ್ತನು । ವಿನಯದೊಳಿಂತು ನುಡಿದನು ॥ ೪೨ ॥

ಭರತಾರ್ಯಾಖಂಡದೊಳಗೆ ರಾಜಿಸುತಿ- । ರ್ಪುರು ಭಗ್ನಾರಿದೇಶದೊಳು ॥
ಹರಿಪುರ ಶೋಭಿಸುತಿರ್ದುದಾ ಪುರನಾಳ್ವ । ನೆರೆಗಲಿ ಕೀರ್ತಿಸಂಪನ್ನ ॥ ೪೩ ॥

ದೊರೆರನ್ನ ವಿಮಲವಾಹನನಿಹನಾತನಿ- । ಗರಸಿ ಸುಶೀಲಸಂಪನ್ನೆ ॥
ಸುರಸತಿ ಸಮರೂಪೆ ಗರುವೆ ಮೃಗಾವತಿ । ಸರಸಿಜನೇತ್ರೆಯೊಪ್ಪಿದಳು ॥ ೪೪ ॥

ಅವರೀರ್ವರ ಗರ್ಭದೊಳು ಪುಟ್ಟಿದಳೋರ್ವ । ಕುವರಿಯು ಕುಂಕುಮಗಂಧಿ ॥
ನವಪಲ್ಲವಾಧರೆ 'ಕಾಮಲತೆ'ಯುಮೆಂಬ । ಕವಿನುತ ಪೆಸರಾಂತ ಮಗಳು ॥ ೪೫ ॥

ಅವಳ ವಿಲಾಸ ಮತ್ತವಳ ಚಾತುರ್ಯವು । ದಿವಿಜಾಂಗನೆಯರೊಳಿಲ್ಲ ॥
ನವಭಾರತಿಯೆನ್ನದೆಯಾಯಕನನು । ಕುವರಿಯೆಂಬರುಯೆಗ್ಗರಲ್ತೆ ॥ ೪೬ ॥

ಸ್ಮರನರ್ಧಾಂಗಿಯು ತನ್ನ ಸುರೂಪಿಗೆ । ಸರಿಯಿಲ್ಲವೆಂದಾ ಕುವರಿ ॥
ಬೆರಳು ಮಿಡಿವಳೆನೆಯವಳ ರೂಪಿನದೊಂದು । ಗರಗರಿಯನೇನೆಂಬೆ ॥ ೪೭ ॥

ಇನಿಗಡಲಣುಗಿಯು ತನ್ನೈಸಿರಿಯಿಂದ । ವನರುಹಾಂಬಕಿ ಪಿಕವಾಣಿ ॥
ಘನಕುಂಭಕುಚೆ ಜರಿವಳು ಎಂದೆನಲಾನು । ವನಿತೆಯ ಸಿರಿಯನೇನೆಂಬೆ ॥ ೪೮ ॥

ಹಾವವಿಲಾಸ ವಿಭ್ರಮ ಭಾವಯುತೆಯನು । ಕಾವನ ಕೈಯುರಗಿಣಿಯ ॥
ಭೂವರ ವಿಮಲವಾಹನ ತನುಜೆಯ ಕಂಡು । ತೀವಿತು ಜವ್ವನವೆಂದು ॥ ೪೯ ॥

ಪಿಡಿನಡುವಿನ ಕೈರವದಳನೇತ್ರೆಗೆ । ಕಡುಜಾಣೆಯಹ ಕಾಮಲತೆಗೆ ॥
ಬಿಡುಗಣ್ಣನಾದೊಡೆಯನವೊಲು ಚೆನ್ನಿಗ । ತಡೆಯದೆ ವರನಾವನೆಂದು ॥ ೫೦ ॥

ಮನದೊಳು ಚಿಂತಿಸುತಿರಲಪ್ಪರೊಳಗೋರ್ವ । ವನಪಾಲಕನುಡೆ ಸುತ್ತಿ ॥
ಮಿನುಗುವ ನಗೆಯಿಂದ ಪುಷ್ಪಫಲಂಗಳ । ಜನನಾಥಗೆ ಕಾಣಿಕೆಯ ॥ ೫೧ ॥

ಕಡುಭಕ್ತಿಯಿಂದ ಕೊಟ್ಟು ಸಾಷ್ಟಾಂಗದಿ । ಪೊಡವಿಯೊಳಗೆ ಬಿದ್ದೆದ್ದು ॥
ನುಡಿದನಿಂತೆಂದೆಲೆ ನರನಾಥ ! ನೀ ಕೇಳು । ಮೃಡನ ವೈರಿಗೆ ವೈರಿಯಾದ ॥ ೫೨ ॥

ಯತಿರಾಯ ಕುಂಜರ ಜೈನಯೋಗೀಶ್ವರ । ಮತಿಶ್ರುತಾವಧಿ ಸಂಪನ್ನ ॥
ನುತ ಧ್ಯಾನಾರೂಢನಾದನಾ ಮುನಿಪನೊಂ- । ದತಿಶಯದಿಂ ವನವೆಲ್ಲ ॥ ೫೩ ॥

ತರುಜಗಳಿಂದ ಫಲಗಳಿಂದ ತಳಿರಿಂದ । ಸರಸ ಚೂತದ ಪಣ್ಗಳಿಂದ ॥
ಸರಸಿರುಹಗಳಿಂದ ಸ್ವಚ್ಛ ಜಲಗಳಿಂದ । ಸುರಭಿ ಕಲ್ಹಾರಗಳಿಂದ ॥ ೫೪ ॥

ಸುರಭಿ ಸಮೀರಣದಿಂದಾರಾಮವು । ಪರಿಮಳಮಯವಾಗಿಹುದು ॥
ಹರಿ–ಕರಿ, ಪಶು–ಪುಲಿ, ಮುಂತಾದ ಮಿಗಗಳು । ತೊರೆದು ತಮ್ಮಯ ವೈರವನು ॥ ೫೫ ॥

ಪರಮ ಮುನಿಯ ಶಾಂತರಸದೊಳೋಲಾಡುತ । ಶಿರದೊಳು ಶಿರವಿಟ್ಟುಕೊಂಡು ॥
ವರ ಸಂತಸದಿಂದ ನಲಿನಲಿದಾಡುತ- । ಲಿರುತಿಹವೆಲೆ ನರನಾಥ ! ॥ ೫೬ ॥

ಎಂದು ಬಿನ್ನವಿಸೆ ವಿಮಲವಾಹನ ನೃಪ । ತಂದು ಭಾಳದೊಳು ಹಸ್ತವನು ॥
ನಿಂದಾ ದಮವರ ಮುನಿಯಿರ್ದ ದೆಸೆಗಾ- । ನಂದದಿಂದೇಳಡಿ ನಡೆದು ॥ ೫೭ ॥

ವರಸಪ್ತಪರಮಸ್ಥಾನಗುಣಂಗಳು । ದೊರೆಕೊಳಲೆನಗೆಂದೆನುತ ॥
ಹರುಷದಿಂದಲಿ ಸಾಷ್ಟಾಂಗವೆರಗಿದನು । ನರನಾಥ ಚಂದ್ರಮ ! ಕೇಳು ॥ ೫೮ ॥

ಒಸಗೆ ಪೇಳಿದ ಪುರುಷನಿಗಂಗಚಿತ್ರವ । ಹಸನಾಗಿ ಕೊಟ್ಟೆಮ್ಮರಸ ॥
ನಸುನಗೆ ಮಿಸುಗುತಾನಂದ ಭೇರಿಯನಾಗ । ಅಸವಸದಿಂ ಪೊಯ್ಸಿದನು ॥ ೫೯ ॥

ಪುರಜನ ಪರಿಜನ ಭೇರೀರವ ಕೇಳಿ । ಕರ ಚೆಲುವಿಂದ ಸಿಂಗರಿಸಿ ॥
ಕರದೊಳು ಪುಷ್ಪಫಲಾಕ್ಷತೆಗಳನಾಂತು । ಹರುಷದಿಂದೊಡಬರೆ ಭರದಿ ॥ ೬೦ ॥

ವಿಮಲವಾಹನನಂತಃಪುರ ಸಹವಾ- । ಗಮಿತ ಬಲವ ಕೂಡಿಕೊಂಡು ॥
ಭ್ರಮರ ಕುಂತಳೆಯರು ಚಮರವನಿಕ್ಕೆ ಸಂ- । ಭ್ರಮದಿಂದ ಕರಿಯನು ಅಡರಿ ॥ ೬೧ ॥

ಭೇರಿಯ ರವ ದಿಕ್ತಟವನು ಮುಸುಕಲು । ಭೂರಮಣನು ಲೀಲೆಯಿಂದ ॥
ಆರಾಮದ ಸಮೀಪಕೆ ನಡೆತಂದು । ವಾರಣವನು ಸಂತಸದಿ ॥ ೬೨ ॥

ಇಳಿದು ವಿನೋದದಿ ವನದೈಸಿರಿಯನು । ಇಳಿಯಾಣ್ಮ ನೋಡುತ ಬರುತ ॥
ಪೊಳೆವಿಂದುಕಾಂತದ ಶಿಲೆಯುಪರಿಮದೊಳು । ಮಳದೂರ ಯಮಿರಾಯನಿರಲು ॥ ೬೩ ॥

ದೊರೆರನ್ನ ವಿಮಲವಾಹನ ಕಂಡು ಮುದದಿಂದ । ಕರಗಳ ಮುಗಿದು ಭಕ್ತಿಯೊಳು ॥
ಪರಮ ಮುನಿಯ ಮೂಮೆ ಬಲವಂದು ಸಾಷ್ಟಾಂಗ- । ವೆರಗಿ ಚರಣಪೂಜೆಯನು ॥ ೬೪ ॥

ಎರಕದಿಂದಲಿ ಮಾಡಿ ನುತಿಗೆಯ್ದು ವಿನಮಿಸೆ । ಕರುಣಾರ್ಣವಸಿಂಧು ಪರಸಿ ॥
ನರನಾಥ ! ಕೇಳು ಪೂರ್ವಾರ್ಜಿತ ಪುಣ್ಯದಿ । ಧರಣೀಶ್ವರ ನೀನಾದೆ ॥ ೬೫ ॥

ದರುಶನ ಜ್ಞಾನ ಚಾರಿತ್ರವ ನೀನಾಂತು । ಪರಮ ಧರ್ಮವ ನೀನಾಚರಿಸು ॥
ಪರಮಾತ್ಮ ಭಾವನೆಯೊಳು ತತ್ಪರನಾಗು । ಗುರು ಪಂಚಪರಮೇಷ್ಠಿಗಳ ॥ ೬೬ ॥

ರಸನಾಗ್ರದೊಳಿಟ್ಟು ಸಪ್ತತತ್ವಂಗಳೊ- । ಳ್ವಿಸನಿಯಾಗರುಹನ ಮತವ ॥
ಹಸನಾಗಿ ರಕ್ಷಿಸು ಜಿನಪೂಜೆಗಳ ನೀ- । ನಸವಸದಿಂ ಮಾಡಾವಾಗ ॥ ೬೭ ॥

ಎಂದಿವು ಮೊದಲಾದ ಧರ್ಮಾಧರ್ಮವ- । ನಂದು ನಿರೂಪಿಸಿ ಮುನಿಯು ॥
ಸಿಂಧುವಿನಂತೆ ಗಂಭೀರದೊಳಿರೆ ರಾ- । ಜೇಂದ್ರ ಮರಳಿ ಕೈಮುಗಿದು ॥ ೬೮ ॥

ಮುನಿನಾಥ ಚಂದ್ರಮ ! ನೀ ಕೇಳು ನನ್ನಯ । ತನುಜಾತೆಯಹ ಕಾಮಲತೆಗೆ ॥
ಘನಪುಣ್ಯವಂತನುತ್ತಮಕುಲ ಸಂಜಾತ । ಮನಸಿಜನಿಂದ ಚೆನ್ನಿಗನು ॥ ೬೯ ॥

ವರನಾವನಾಗುವನೆಂದೆಲೆ ಮುನಿನಾಥ ! । ನಿರವಿಸೆಂದಾ ನೃಪ ಕೇಳೆ ॥
ಪರಹಸಿತಾನನದಿಂದಿಂತು ನುಡಿದನು । ದೊರೆರನ್ನ ! ಕೇಳೆನ್ನ ನುಡಿಯ ॥ ೭೦ ॥

ಮಿನುಗುವ ದಶಶತಕೂಟ ಜಿನಾಲಯ- । ದನುಪಮ ವಜ್ರಪಡಿಗಳ ॥
ಮನದಕ್ಕರಿಂದಾವಾತ ತೆಗೆದು ತಾ । ಜಿನರ ಪೂಜಿಸಿದವ ನಿನ್ನ ॥ ೭೧ ॥

ತನುಜೆಗೆ ವರನಾಗುವನೆಂದು ದಮವರ । ಮುನಿಮುಖ್ಯ ನುಡಿಯಲು ಕೇಳಿ ॥
ಜನನಾಥನತ್ಯಂತ ಸಂತೋಷವ ತಾಳಿ । ಮುನಿನಾಥನಡಿದಳಕೆರಗಿ ॥ ೭೨ ॥

ವಿನಯದಿಂದಲಿ ಬೀಳ್ಕೊಂಡು ವಾಹನವನು । ಮನದನುರಾಗದಿಂದೇರಿ ॥
ದನುಜಾರಿಗೆ ಸಮನಾದ ವೈಭವದಿಂದ । ಮನುಜೇಶ್ವರ ನಡೆತಂದು ॥ ೭೩ ॥

ಪುರವನಿರದೆ ಪೊಕ್ಕು ಪುರದೈಸಿರಿಯನು । ನರನಾಥ ನೋಡುತ ಬಂದು ॥
ಅರಮನೆಯನು ಪೊಕ್ಕು ಪರಮ ಸಂತೋಷದಿಂ- । ದಿರುತೊಂದಾನೊಂದು ದಿವಸ ॥ ೭೪ ॥

ಕರೆಯಿಸಿ ಎನ್ನನು ವಿಮಲವಾಹನ ನೃಪ । ಒರೆದು ವಿನಯ ವಚನವನು ॥
ತುರಿಹದಿಂದೆನ್ನನಿಲ್ಲಿರಿಸಿ ತನ್ನೂರೊಳ- । ಗಿರುತಿರಲೊಂದು ದಿನದೊಳು ॥ ೭೫ ॥

ಪುರುಷನೋರ್ವನು ಬಂದು ವಿಮಲವಾಹನನಿಗೆ । ಕರವನು ಮುಗಿದಿಂತೆಂದ ॥
ದೊರೆರನ್ನ ! ನೀ ಕೇಳು ಮಣಿಚಂದ್ರ ನಾಡೊಳು । ಮೆರೆವುತಿಹುದು ಚಕ್ರಪುರವು ॥ ೭೬ ॥

ಅದನಾಳುತಿಹನಧಿಕ ಪರಾಕ್ರಮಿ ತಾ । ಕದನಲಂಪಟ ಮಂದರಗೆ ॥
ಸುದತಿಯಾದಳು ಮೇನಕೆಯೆಂಬ ಹೆಸರಿನ । ಸದಮಲಗುಣಗಣಾಭರಣೆ ॥ ೭೭ ॥

ಅವರೀರ್ವರ ಗರ್ಭದೊಳು ಪುಟ್ಟಿದನೋರ್ವ । ಸವಿವಿಲ್ಲನ ಸಮರೂಪ ॥
ಭುವನ ವಿಖ್ಯಾತನು ಸಕಲ ಕಲಾಧರ । ಕವಿಜನನುತ ರತ್ನಮಾಲಿ ॥ ೭೮ ॥

ವಿತರಣಗುಣಶೀಲನು ರತ್ನಮಾಲಿಗೆ । ಕ್ಷಿತಿಪ ! ನಿನ್ನಯ ತನುಜಾತೆ ॥
ಶತಪತ್ರಾನನೆ ಕಾಮಲತೆಯು ಎಂಬ । ಅತಿಶಯ ರೂಪವತಿಯನು ॥ ೭೯ ॥

ಕೊಡಹೇಳಿ ನಮ್ಮ ಭೂಪಾಲ ನಿಮ್ಮಲ್ಲಿಗೆ । ಸಡಗರದಿಂದಟ್ಟಿದೆನ್ನ ॥
ಪೊಡವಿಪನದು ಕಾರಣ ಬಂದೆ ನಾನೆಂದು । ನುಡಿದ ಚರನ ನುಡಿಗೇಳಿ ॥ ೮೦ ॥

ಜನಪತಿಯುವನೊಳು ಮತ್ತಿಂತೆಂದನು । ಧನುಜಕೀಲಿತನಾಗಿರ್ದ ॥
ಜಿನಭವನದ ವರವಜ್ರಕವಾಟವ- । ನನುನಯದಿಂ ತೆಗೆದಾತ ॥ ೮೧ ॥

ತನುಜೆಯ ವರನಾಗುವನೆಂದೆನಗೋರ್ವ । ಮುನಿರಾಜಕುಂಜರ ಪೇಳ್ದ ॥
ಮನುಜ ! ಕೇಳದರಿಂದಾ ದೇಶಪುರುಷಗೆ । ತನುಜೆಯ ಕೊಡುವೆನನ್ಯರ್ಗೆ ॥ ೮೨ ॥

ಕೊಡುವುದಿಲ್ಲೆಂಬ ನುಡಿಯ ಕೇಳಿಯನುಚರ। ಬಿಡುನುಡಿಗಳನಿಂತು ನುಡಿದ ॥
ಪೊಡವಿಯ ಸುಖದೊಳಗಾಳಬೇಕಾದರೆ। ಕೊಡು ನಿನ್ನಯ ತನುಜೆಯನು ॥ ೮೩ ॥

ಕೊಡದಿದ್ದೊಡೆ ನೀನು ನಿನ್ನೀ ರಾಜ್ಯವ। ಒಡನೆ ಧೂಳೀಪಟಮಾಡಿ ॥
ಕಡುಬೇಗ ಬಂದೀ ಹರಿಪುರವನು ಮುತ್ತಿ। ನುಡಿಸಿ ನಿನಗೆ ತಕ್ಕುದನು ॥ ೮೪ ॥

ಮಾಡಿದ ಮೇಲೆ ಕುವರಿಯನು ಕೊಡುವುದು। ಪ್ರೌಢಿಯಲ್ಲದರಿಂದಲೀಗ ॥
ಕೇಡಿಗೆಯೊಳಗಾಗದ ಮುನ್ನ ಕೊಡುವುದು। ಪಾಡುಗಾರಿಕೆಯೆಂದು ನುಡಿಯೆ ॥ ೮೫ ॥

ಅತಿ ನಿಷ್ಠುರವಾದ ಖಳನ ನುಡಿಯ ಕೇಳಿ। ಕ್ಷಿತಿಪಾಲಕನಿಂತು ನುಡಿದ ॥
ಮತಿಹೀನ ! ನಿನ್ನಾಳ್ದ ನುಡಿದಂದದೊಳೆಲೆ। ಶತಮೂರ್ಖ ನುಡಿಯಲು ಬೇಡ ॥ ೮೬ ॥

ಕ್ಷಿತಿಪಾಲರು ರತ್ನಮಾಲಿಗೆ ತಮ್ಮಯ। ಸುತೆಯರ ಕೊಡಬರೆಯವಕೆ ॥
ಗತಿಯ ಕಾಣದೆ ನನ್ನಲ್ಲಿಗೆ ಬಂದೆನ್ನ। ಸುತೆಯ ಕೇಳುವುದೊಳ್ಳಿತಾಯ್ತು ॥ ೮೭ ॥

ವಿನಯವ ನಾ ನುಡಿಯಲು ನೀನದ ಕೇಳಿ-। ಯನುಗುಣ ಬಿಟ್ಟು ತೆರಳದೆ ॥
ಶುನಕನಂದದಿ ಬಾಯ್ಗೆ ಬಂದಂತೆ ಗಳವುತ। ಕನಲಿ ನುಡಿವುದೊಳ್ಳಿತಾಯ್ತು ॥ ೮೮ ॥

ಕೊಡುವುದಿಲ್ಲೆಂದರೆ ಹೋಗುವುದದು ಮತ। ಬಿಡುನುಡಿಗಳನಾಡುವುದು ॥
ಕಡು ಹಸನಾಯಿತು ನಡೆ ನಡೆ ನೀಚನೆಂ-। ದೊಡನೆ ನುಡಿದು ಕಳುಹಿದನು ॥ ೮೯ ॥

ತ್ವರಿತದಿಂದಲಿ ಪೋಗಿ ಚಕ್ರಪುರವ ಪೊಕ್ಕು। ಚರನು ಮಂದರಗೆ ಕೈಮುಗಿದು ॥
ಹರಿಪುರದರಸು ನುಡಿದ ಕಾರ್ಯವನೆಲ್ಲ-। ನೊರೆದ ಸಾಸಿರವನು ಮಾಡಿ ॥ ೯೦ ॥

ಚರನ ವಚನವನು ಮಂದರ ನೃಪ ಕೇಳಿ। ಕರದಿಂದ ಗದ್ದುಗೆ ಹೊಯ್ದು ॥
ಹರಿಯಂತೆ ಗರ್ಜಿಸಿ ಕೋಪಾಟೋಪದಿ। ಧುರಗಲಿ ಮೀಸೆಯ ಕುಣಿಸಿ ॥ ೯೧ ॥

ಕಡೆಗಣ್ಣ ಕೊನೆಗೆ ಕೆಂಪನು ತಂದು ತುಟಿಗಳು। ಮಿಡಿ ಮಿಡಿ ಮಿಡುಕೆ ಕೋಪದೊಳು ॥
ಒಡನೆ ಭ್ರೂಯುಗವು ಗಂಟಿಕ್ಕಿ ಮೈಯೊಳು ತಾನು। ಪಿಡಿದು ರೋಮಾಂಚ ಕಂಚುಕವ ॥

ಗಡಗಡಗಂಪಿಸುತಿರೆ ಸರ್ವಾಂಗವು। ಕದನಲಂಪಟನತಿ ಮೂರ್ಖ ॥
ಬೆದಬೆದ ಬೇವುತ ಮನದಲ್ಲಿ ಮಂದರ-। ನೊದರಿ ನುಡಿದನಿಂತೆಂದು ॥ ೯೩ ॥

ನನ್ನ ವಚನಕೆ ಭಂಗವ ತಂದಾತನ। ಭಿನ್ನಹೃದಯನನು ಮಾಡಿ ॥
ಕನ್ನಿಕೆಯನು ತಾರದೆ ಮಾಣೆನೆಂದಾಗ। ಗನ್ನಕಾರನು ಭೇರಿಯನು ॥ ೯೪ ॥

ತಾಡನವನು ಮಾಡಿಸಿ ತನ್ನ ಬಲವನು। ಕೂಡಿಕೊಂಡಾ ಮಂದರನು ॥
ನಾಡು-ಬೀಡುಗಳನೆಲ್ಲವ ಹಾಳುಮಾಡುತ। ಗಾಡಿಯಿಂ ಗಡಿಯ ಕೋಂಟೆಯನು ॥ ೯೫ ॥

ಸುರಿತಾಳ ಲಗ್ಗೆಮಾಡುತ ಸೆರೆಹಿಡಿಯುತ। ಭರದಿಂದ ಸುಡುತೂರುಗಳ ॥
ಎರಗಿದವರನು ಪಾಲಿಸುತ ಮಾರ್ಮಲೆತರ। ತರಿದೊಟ್ಟಿ ಬಂದಾ ಇರುಳು ॥ ೯೬ ॥

ಪರಿಪುರವನು ಮೂವಳಸಾಗಿ ತಾ ಮುತ್ತಿ । ದೊರೆ ಮಂದರ ತನ್ನ ದೂಸ ॥
ತೊರೆಯೊತ್ತಿಲಿ ಹೊಪ್ಸ್ನ ದೊರೆ ದೊರೆಗಳ ದೂಸು । ಇರದೆ ಸುತ್ತಲು ಹೊಯ್ದ್ವಾಗ ॥

ಪಡುವ ದಿಕ್ಕಿಲಿ ದಳವಾಯಿಯಕಂಪನ । ಕಡು ದೊಡ್ಡ ದೂಸು ತಾನೆತ್ತು ॥
ಬಿಡದಾ ದೂಸ ಬಳಸಿ ಗುರಿಕಾರರ । ಗಡಣಗುಮ್ಮಟಿಗಳಿದ್ದಾವು ॥ ೯೮ ॥

ಬಡಗ ದಿಕ್ಕಿಲಿ ಹರಿವರ್ಮ ಭೈರವರೆಂಬ । ಗಡಿಯ ಮನ್ನೆಯರ ದೂಸುಗಳು ॥
ಸಡಗರದಿಂ ಲಕ್ಷ ಭಟ ಕೋಟಿ ಭಟರ್ಗಳ । ಬೆಡಗಿನ ಗುಮ್ಮಟಿಯಿಹವು ॥ ೯೯ ॥

ಉತ್ತರ ದಿಕ್ಕಿಲಿ ದಳವಾಯಿ ಮೈದುನ- । ರುತ್ತಮ ದೂಸುಗಳಿದ್ದು ॥
ಮತ್ತದ ಸುತ್ತಿ ಸಾಸಿರ ಭಟ ಶತ ಭಟ- । ವೊರ್ತ್ತದ ಗುಮ್ಮಟಿಯಿದ್ದಾವು ॥ ೧೦೦ ॥

ಬಲು ಭಟರುಗಳ ಓಲಿಯಕಾರರುಗಳ । ಪಲವು ಗುಡಾರ ಗುಡಿಸಲು ॥
ಬಳಸೆಯುತ್ತಿದವಾಗುಳಿದ ಮನ್ನೆಯರ್ಗಳ । ಒಳಸಾರಿಯಗಳೊತ್ತುಗೊಂಡು ॥ ೧೦೧ ॥

ಉಳಿದರು ನಾಲ್ಕು ದಿಕ್ಕಿಲಿ ಮೇಲಿದ್ದವು । ತಳಿಗಳು ನಡೆದವು ಸುತ್ತ ॥
ಬಲು ಸುರಂಗಗಳು ನಡೆದವು ಕೊತ್ತಳಕಾಗಿ । ಗಳಗೆಯ ಸಾಲಿದ್ದವಲ್ಲಿ ॥ ೧೦೨ ॥

ನಡೆ ಚಪ್ಪರಗಳು ನಡೆದವನೇಕವು । ತಡಿಕೆಗಳಿಂದವಲ್ಲಲ್ಲಿ ॥
ಪಿಡಿದೆತ್ತಿ ನಡೆದವನೇಕ ನಿಚ್ಚಣಿಗೆಯು । ಒಡನೆಯುಗಳೊಳಿರ್ಪ ನೀರು ॥ ೧೦೩ ॥

ಜಲಯಂತ್ರದಿಂದ ಹೊರಡು ಹೊಯ್ದು ಸೊಪ್ಪಿನ । ಬಲು ಹೊರೆ ಹುಲ್ಲುಗುಂಪಗಳಿಂ ॥
ನೆಲಸಮನನು ಮಾಡಲಪ್ಪರೊಳಗೆಯೋರ್ವ । ಹುಲಿಮುಖದೊಳಗಿರ್ದುಕೊಂಡು ॥

ಅತಿ ವೇಗದೊಳು ಹೋಗಿ ಹೊರಚಾವಡಿಯೊಳಿಹ । ಜಿತಶತ್ರುವೆಂದೆಂಬರಸಿಗೆ ॥
ನತನಾಗಿ ಎಲೆ ಸ್ವಾಮಿ ! ಮಂದರ ಭೂಪತಿ । ಶತ ಕೋಟಿ ಬಲುಬಲಗೂಡಿ ॥ ೧೦೫ ॥

ಬಲುಗೋಟೆಯು ಮೂವಳಸಾಗಿ ಮುತ್ತಿದ । ತಳಿಗಳಿರ್ದವು ಎಂದೆನಲು ॥
ಮುಳಿದು ಪಾರುಪತ್ಯಗಾರನು ಜಿತಶತ್ರು । ಬಲು ಬಂಟರ ಕರೆಯಿಸಿದ ॥ ೧೦೬ ॥

ಕಲ ಕಲವುಣ್ಮಿತೂರೊಳಪಾಯ ಗಂಟೆ । ಪುಲುಹಾದುದಾಳ್ವೇರಿಯೊಳು ॥
ಎಲೆ ಅಣ್ಣಂದಿರ ! ಎಲೆ ಅಪ್ಪಂದಿರ ! । ಬಲು ಎಚ್ಚರಿಕೆ ಎಂದೆನುತ ॥ ೧೦೭ ॥

ತಿರುಗುತಲಿಹರಾಳ್ವೇರಿಯೊಳಲ್ಲಲ್ಲಿ । ಗೊರವೆಯು ಕಟ್ಟಿ ಸೂಟಿಗಳು ॥
ಉರುವುತಿಹವು ಕೋಟಾಕೋಟಿಯಿರದೆತ್ತಿ । ಬುರುಜುಗಳೊಳು ತಿಂಥಿಣಿಗಳು ॥ ೧೦೮ ॥

ನಿಲಿಸಿದವಲ್ಲಲ್ಲಿ ಗುಂಡು ಮದ್ದುಗಳಿಂದ । ಬಲು ಖರ್ಪರಗಳು ತೀವಿ ॥
ಎಲುವಿನ ಕಟ್ಟಿಗೆಣ್ಣೆಯ ಹಾಕಿ ಪತ್ತಿಸೆ । ಪೊಳೆದವಲ್ಲಲ್ಲಿ ತೆನೆಯೊಳು ॥ ೧೦೯ ॥

ಕಿತ್ತ ಕತ್ತಿಗಳ ಬೆಳಗು ಪಲ್ಲವಿಸಲು । ಹತ್ತಿಯಾಳ್ವೇರಿಯ ಭಟರು ॥
ಕೊತ್ತಳ ಬುರುಜಿನ ತೆನೆ ತೆನೆದಪ್ಪದೆ । ನಿಂತರು ಬಾಳ ಜಡಿವುತ ॥ ೧೧೦ ॥

ಕಲಕಲ ರವ ಊರೊಳು ತುಂಬಿರೆ ಕೇಳಿ । ದಳವಾಯಿಯಾಗ ಖಡ್ಗವನು ॥
ಝಳಪಿಸುತಿರೆ ಏನೇನು ಗಲಭೆಯೆಂದು । ಘಳಿಲನೆ ಚಾವಡಿಗೈದಿ ॥ ೧೧೧ ॥

ಸಾಸಿರ ಭಟ ಶತ ಭಟರ್ಗುರಿಕಾರರು । ಆ ಸಮಯದಿ ಹತ್ತೆಂಟು ॥
ಸಾಸಿರಕಿತ್ತ ಬಾಳುಗಳುವೆರಸಿ ಬಂದು । ಸಾಸಿಗ ಸಿಂಹರಥನಿಗೆ ॥ ೧೧೨ ॥

ಕರಗಳ ಮುಗಿದು ಸುತ್ತಲು ನಿಲ್ಲೆ ಜಿತಶತ್ರು । ಪರಿ ತಂದು ವಿನಮಿತರಾಗಿ ॥
ದುರುಳ ಮಂದರ ಬಂದು ಎಲೆ ದೇವ ! ಕೋಂಟೆಯ । ಪರಿವೇಷ್ಟಿಸಿ ಬಿಟ್ಟನೆನಲು ॥

ಕೋಪದಿ ಮೀಸೆಯ ಕುಣಿಸುತಲಿಂತೆಂದ । ಭೂಪರೊಳಗೆ ಶಿಖಂಡಿ ॥
ಪಾಪಿಷ್ಠ ಬಂದು ಮುತ್ತಿದನೇ ಎಂದೆನುತಾಗ । ಚಾಪಕ್ಕೆ ತಾ ಕೈಯ ನೀಡಿ ॥ ೧೧೪ ॥

ಮೊರೆದೇಳುವಷ್ಟರೊಳಗೆಯತ್ತಲರಮನೆ- । ಗರಿಕೆಯಾಗಲು ಆ ವಾರ್ತೆ ॥
ಅರಸಿಯರುಗಳು ತಮ್ಮೊಳು ಗುಜುಗುಟ್ಟುತ- । ಲಿರಲದ ಕೇಳಿ ಭೂಭುಜನು ॥ ೧೧೫ ॥

ಏನೇನೆಂದು ಧಿಗಿಲನೆದ್ದು ಖಡ್ಗವ । ಮಾನವೇಶ್ವರ ಕೈಯೊಳಾಂತು ॥
ಪೀನಘನಸ್ವನವನು ಕೇಳ್ದ ಹರಿಯಂತೆ । ತಾ ನೆರೆ ಗಜರಿ ಘರ್ಜಿಸುತ ॥ ೧೧೬ ॥

ಮಲಗುವ ಮನೆಯಿಂದಲ್ಲೈತರೆ ಪಟ್ಟದ । ಲಲನೆ ತಾ ತತ್ಪ್ರಪಂಚವನು ॥
ಅಳುಕುತ ಪೇಳಲು ವಿಮಲವಾಹನ ಕೇಳಿ । ಪೊಳೆವ ಹಾವುಗೆಯನು ಮೆಟ್ಟಿ ॥ ೧೧೭ ॥

ಪಿಡಿಯೆ ಚಿಕ್ಕೊಳಿಗದವರು ದೀವಟಿಗೆಯ । ಪೊಡವೀಶ ಪೊರಟರಮನೆಯ ॥
ನಡೆತಂದು ಓಲಗಸಾಲೆಗೆ ಮುತ್ತಿನ । ಕಡು ದೊಡ್ಡ ಸಿಂಹವಿಷ್ಟರದಿ ॥ ೧೧೮ ॥

ಕುಳ್ಳಿರಲಾ ವೇಳೆಯದೊಳು ದೊರೆಗಳು । ದಳವಾಯಿ ಮುಂತಾದವರು ॥
ಇಳೆಯಾಣ್ಮಗೆ ಕೈ ಮುಗಿದು ಇತ್ತರದಲ್ಲಿ । ಕಲಿಗಳು ನಿಂತಿರೆ ದೊರೆಯು ॥ ೧೧೯ ॥

ಎಲೆ ಸಿಂಹರಥ ! ಮಂದರನೀ ಪೊತ್ತಿಲಿ । ಬಲಗೂಡಿ ಬಂದು ಕೋಂಟೆಯನು ॥
ಬಲಿದು ಮುತ್ತಿದನೆನೆ ಬಿನ್ನಹ ಎಲೆ ಜೀಯ ! । ಕಳೆದುದಾಗೆರಡನೆ ಜಾವ ॥ ೧೨೦ ॥

ಎನಲಿದೇ ವೇಳೆಯು ಕಗ್ಗೊಲೆಯ ಬಿದ್ದು । ಘನ ಫೌಜ ಒಕ್ಕಲಿಕ್ಕುವರೆ ॥
ಎನುತ ಖಡ್ಗವನಾಂತು ಏಳುವಷ್ಟರೊಳಾಗ । ಜನಪಗೆ ದಳವಾಯಿ ಕರವ ॥ ೧೨೧ ॥

ಮುಗಿದೀ ಕಾರ್ಯಕೆ ದೇವರೇಳುವುದೇಕೆ ? । ಸೊಗಸಿಂದ ನನಗೆ ಬೆಸಸಲು ॥
ಪಗೆವನ ಬಲವನು ಹಿಂದುಮುಂದನು ಮಾಡಿ । ತೆಗೆಸುವೆ ಮುತ್ತಿಗೆ ಎಂದ ॥ ೧೨೨ ॥

ಆ ಸಮಯಕೆ ಜಿತಶತ್ರು ನಡೆದು ಬಂದು । ಭೂಸುದತೀಶಗೆ ಕರವ ॥
ಸೂಸುವ ಕಲಿತನದಿಂ ಮುಗಿದೆಲೆ ಜೀಯ ! । ಲೇಸಪ್ಪೀ ಬೆಸನನು ನನಗೆ ॥ ೧೨೩ ॥

ಇತ್ತರೆ ನಾ ಹೋಗಿ ವೈರಿ ಭೂಪಾಲರ । ತತ್ತರದಿರಿದು ನಿಮಿಷದಿ ॥
ಮುತ್ತಿಗೆ ತೆಗೆಸುವೆನಿದಕೇಕೆ ದಳವಾಯಿ । ಚಿತ್ತೈಸೆನ್ನಯ ಬೀರವೆಂದ ॥ ೧೨೪ ॥

ಲೇಸನಾಡಿದ ಸ್ವಾಮಿ ಬೆಸನ ಪಾಲಿಸಬೇಕು । ಸಾಸಿಗನಹುದಿವನೆಂದು ॥
ಆ ಸಭೆಯಾವೇಳೆಯೊಳು ಬಿನ್ನವಿಸಲು । ತೋಷದೊಳಿತ್ತ ಭೂಷಣವ ॥ ೧೨೫ ॥

ಎರಗಿ ಭೂಭುಜನಿಗೆ ದಂಡನಾಯಕನಿಗೆ । ಕರಗಳ ಮುಗಿದು ಬೀಳ್ಕೊಂಡು ॥
ಹೊರಚಾವಡಿಯೊಳು ಬಂದಾ ಜಿತಶತ್ರು । ಎರಕದಿಂದಲಿ ಕುಳಿತಾಗ ॥ ೧೨೬ ॥

ಎಂದು ಶ್ರೀ ನಾಗದತ್ತನು ಬಿನ್ನವಿಸೆ ಜ್ಞಾ- । ನೇಂದು ಮುಗುಳುನಗೆ ನಗುತ ॥
ಮಂದರನಗಧೈರ್ಯ ಸಾಗರಗಾಂಭೀರ್ಯ- । ನಂದು ಓಲಗಗೊಟ್ಟಿಹನು ॥ ೧೨೭ ॥

ಧುರದೊಳಗತಿ ಶೂರ, ತರುಣಿಯರಿಗೆ ಮಾರ । ಎರಗಿದರಿಗೆ ಮಂದಾರ ॥
ಅರುಹಮತಾಂಬರ ಸೂರ್ಯ ಜ್ಞಾನೇಂದುವು । ಸಿರಿವಂತನೊಪ್ಪಿದ ಧೀರ ॥ ೧೨೮ ॥

**॥ ಅಂತು ಸಂಧಿ ೧೨ಕ್ಕಂ ಪದ ೧೮೪೨ಕ್ಕಂ ಮಂಗಲಂ ॥**

# ಕಗ್ಗೊಲೆ.

ವೀರವಿಕ್ರಮಿಗಳು ಕಗ್ಗೊಲೆಯ ಬಿದ್ದ ಸಂ- । ಹಾರವಾದುದ ಪೇಳ್ವೆ ಕೇಳಿ ॥ ಪ ॥

ಪಳುಕಿನ ಕೊಡದೊಳು ಬೆಳಗುವ ಸೊಡರಂತೆ । ಇಳೆಯದೊಳಗೆ ಸುಜ್ಞಾನವನು ॥
ತುಳಿಕಿಪ **ಶಾಂತೀಶ** ! ಎನ್ನಂತರಂಗವ । ಬೆಳಗುತಿರಾವಾಗ ನೀನು ॥ ೧ ॥

ಚೆಲುವರ ಚೆನ್ನಿಗ ! ನೀ, ಕೇಳು ಜಿತಶತ್ರು । ನಲವಿಂದ ಕುಳಿತು ಚಾವಡಿಯೊಳ್ ॥
ಬಲು ಬಂಟರುಗಳ ಕರೆಯಿಸಲವನಾಗ । ಪೊಳೆವ ಖಡ್ಗವ ಝಳಪಿಸುತ ॥ ೨ ॥

ಸಡಗರದಿಂ ಬಂದು ಒಂಟೆರಿಗಾರರು । ಒಡನೆ ಕೈ ಮುಗಿದು ನಿಂದಿರಲು ॥
ನುಡಿದನವರೊಳು ಕಗ್ಗೊಲೆಯ ಬೀಳುವ । ಕಡು ಬೀರರಾರುಂಟವರು ॥ ೩ ॥

ಹಿಡಿಯಿರಿ ಗುರುತಿನ ತೇಜದಾಭರಣವ । ನಡೆಯಿರಿ ನನ್ನೊಂದಾಗಿ ॥
ತಡೆ ಬೇಡ ಬೇಡವೆಂದಾ ಜಿತಶತ್ರುವು । ನುಡಿದ ವಚನವೆಲ್ಲ ಕೇಳಿ ॥ ೪ ॥

ಪಾಲಿಸುವುದು ಸ್ವಾಮಿ ! ಹೊಕ್ಕಳು ಘಂಟೆಯ । ಮೇಲೆತ್ತಿ ಬಂದ ಬಲವನು ॥
ಸೀಳುವೆನೆಂದಂಗಡಿಕಾರ 'ಹನುಮ'ನು । ಬಾಳ ಜಡಿವುತೆದ್ದು ನಿಂದು ॥ ೫ ॥

ಹಿರಿ ಸಾರುಯೆಲೊಮೇಣಿ ಮುರುಕ ವಕ್ಕಲಿಗನೆ । ಭರದಿ ಸೀಳುಕ್ಕೆಯುತುತ್ತು ॥
ನೆರೆ ಪಾಠವದನೆ ನುಡಿದ ಜೀಯ ! ಇವನಿಗೆ । ಧುರದ ಗೊಡವೆ ಇಲ್ಲವೆಂದ ॥ ೬ ॥

ಅವನ ಪೆರಗೆಯಿಕ್ಕಿ ಕೈಮುಗಿದಿಂತೆಂದ । ತವಕದಿ ಪೊಕ್ಕರಿ ಬಲವ ॥
ಸವರಿ ಹಿಂಡುವೆ ನಾಗಫಣಿಯ ಪಾಲಿಸು ಎಂದು । ವಿವರಿಸಲಗಸರ 'ಚಿಕ್ಕ' ॥ ೭ ॥

ಎಲೆ ಕೋಚಿ ಭಟ್ಟ ! ನೀ ಸಾರತ್ತ ಜನಗಳ । ಹೊಲೆಯ ಸೀರೆಯ ಹಿಂಡಿ ಹಿಂಡಿ ॥
ಕಲಿತಾಡಬೇಡವೆಂದವನ ಹಿಂದಕೆಯಿಕ್ಕೆ । ಗೆಲುವಿಂದ ನಮಿಸಿಂತು ನುಡಿದ ॥ ೮ ॥

ಎತ್ತಿ ಬಂದರಿಯ ಬಲವನೋರ್ವನೆ ಪೊಕ್ಕು । ಕತ್ತರಿಸುವೆನು ಶಿರಗಳ ॥
ಇತ್ತು ಪಾಲಿಸು ತಾಲಿಯನೆಂದು ರಣಿಗರ । ಮುತ್ತ'ನಂಜನು' ಬಿನ್ನವಿಸೆ ॥ ೯ ॥

ಬೇರ ಬಲ್ಲವರಿಗೆ ಎಲೆಯ ತೋರಿಸಬೇ- । ಡೂರವರುಗಳ ಚಿನ್ನವನು ॥
ಸೇರಿ ಕತ್ತರಿಸಿ ಕತ್ತರಿಸಿ ಹಿತ್ತಾಳೆಯ- । ನಾರರಿಯದವೊಲು ಬೆಸೆವ ॥ ೧೦ ॥

ಅಕ್ಕಸಾಲಿಗೆ ಏಕೆ ತೇಜವೆಂದೆನುತಾಗ । ಗಕ್ಕನೆಯವನ ಪಿಂತಿಕ್ಕಿ ॥
ಹೊಕ್ಕು ಗುಡಾರ ಗುಡಾರವ ಕಲಿಗಳ । ಸೊಕ್ಕು ಮುರಿದು ಮೂಗುಗಳ ॥ ೧೧ ॥

ಕೊರೆದು ಕೊರೆದು ಹಾಕಿ ಹುಣ್ಣೇಳಿಸುವೆ ಜೀಯ ! । ಕೊರಳ ದಾರವ ಪಾಲಿಸೆಂದು ॥
ಕರದ ಖಂಡೆಯವನು ಜವಿವುತನಾಪಿತ । 'ಮರಿಯ' ನುಡಿಯಲಾ ವೇಳೆಯೊಳು ॥ ೧೨ ॥

ಬಡ್ಡುಗತ್ತಿಯಲಿ ಹುಡುಗರ ತಲೆಯ ನೀ- । ನಡ್ಡಾದಿಡ್ಡಿಯಲಿ ಕೆರೆವ ॥
ಹೆಡ್ಡ ಮಾತನು ಬಿಟ್ಟು ಸಾರೆಂದು ಮುಂದೊತ್ತಿ । ಗಡ್ಡವ ಕೆದರುತ್ತ ಬಂದು ॥ ೧೩ ॥

ಕಡಿದರಿ ಭೂಪಾಲರ ಹಿಂದು ಮಾಡುವೆ । ಕೊಡು ಜೀಯ ! ಕುಂಡಲವೆಂದು ॥
ಜವಿವುತ ಬಾಳ ಮರಾಠಿ 'ಎಲ್ಲುಗ'ನಾಗ । ನುಡಿದ ನುಡಿಯ ಕೇಳುತವೆ ॥ ೧೪ ॥

ಕಡಿವಲ್ಲಿ ಕುಮರಿಯ ಜಾಣ ನೀನಹುದಯ್ಯ । ನುಡಿದೀಗ ಜಾತಿ ಒಕ್ಕಣೆಯ ॥
ಕಡೆ ಸಾರಾ ತೇಜವ ಪಾಲಿಸೆನಗೆಂದು । ನುಡಿದನು ಕುರುಬರ 'ಬೀರ' ॥ ೧೫ ॥

ಮಾತಿನ ಕಡೆಯಲಿ ಕುರುಬರೆಂಬರು ಅನ್ಯರ್ । ಆತಗೇತಕೆ ತೇಜ ಸ್ವಾಮಿ ! ॥
ನೀ ತಳುವದೆ ಕೊಡಿಸೆಂದಾಗ ಹೊಲೆಯರ । 'ಪೋತ' ನುಡಿದ ಕೈಯ ಮುಗಿದು ॥ ೧೬ ॥

ಚಾವಡಿ ಕೆಳಗೆಯುಗಿದ ತಂಬುಲವನು । ಗಾವಿಲತನದಿ ತೆಗೆವಗೆ ॥
ಆ ಊಳಿಗವಲ್ಲದೆ ತೇಜವವಗೇಕೆ । ದೇವ ! ಪಾಲಿಸು ನನಗೆಂದು ॥ ೧೭ ॥

ಕರವ ಮುಗಿದು ನಿಲ್ಲೆ ಮಾದಿಗ'ರಿಡವನು' । ಗುರಿಯಾದ ಭಟನಾಗಿರ್ದಂತೆ ॥
ಹರುಕು ಚಕ್ಕಳವ ಹೊಲಿದು ಮಾರುವವಗೇಕೆ । ದೊರೆ ! ಪಾಲಿಸಾ ತೇಜವನು ॥ ೧೮ ॥

ಎಂದು ಕುಂಬರ 'ಲಕ್ಕ' ನಿಲೆ, ಎಲೆ ! ಚಿ ಚೀ । ಹಂದೆ ಕೆಸುವ ನಿನಗೇಕೆ ॥
ಇಂದು ತಾ ಮಡಕೆಯ ತಿಕ ತಟ್ಟು ನಡೆ, ನಡೆ । ಎಂದು ಈಡಿಗ'ರೋಬ' ನುಡಿದ ॥ ೧೯ ॥

ಎನಗೆ ನೀ ಪಾಲಿಸಾ ತೇಜವನೆಂದೆನೆ । ಬಿನುಗೆ ಬಾಣಗಳ ರಭಸಕೆ ॥
ಮನೆ ಮೂಲೆ ಹೊಗುವರೆ ನಿನಗೇಕೆ ತೇಜವು । ನನಗೆ ಪಾಲಿಸಬೇಕು ಸ್ವಾಮಿ ! ॥ ೨೦ ॥

ನಿರುತದಿಂದೆನುತ ಜೇಡರ 'ತಿಮ್ಮ'ನಾಡಲು । 'ತುರುಕರ ಕುದುರೆ ಹೆದ್ದೊರೆಯ ॥
ಇರದೆ ದಾಟಿತು' ಎನೆ ಮಗ್ಗದ ಕುಳಿಯಲಿ- । ದರ ಬೆರ್ಚಿ ಕೆಡಿಸುವಗೇಕೆ ॥ ೨೧ ॥

ಒಲಿದಿತ್ತು ಪಾಲಿಸಾ ತೇಜವ ನನಗೆಂದು । ತೆಲುಗ ಬಣಜಿಗರ 'ಚೆನ್ನ' ॥
ಉಲಿಯಲು ಸತ್ತೆಲೆಗಳ ಮೂಗನರಿವಗೆ । ಸಲೆ ಕೋಚ ಬಣಜಿಗಗೇಕೆ ॥ ೨೨ ॥

ಬೊಪ್ಪ ! ನನಗೆ ಪಾಲಿಸು ಎಂದು ಬೇಡರ । 'ತಿಪ್ಪ' ನುಡಿದ ನುಡಿಗೇಳಿ ॥
ಕಪ್ಪೆಯೆಂದರೆಯಂಜಿಕೆಡೆ ಬಿದೋರ್ಡುವ । ಬೆಪ್ಪ ಬೇಡನಿಗೇಕೆ ತೇಜ ॥ ೨೩ ॥

ಎನುತಲಿ ಹಳ್ಳಿಕಾರರ 'ಎಲ್ಲ' ಮುಂತಾದ । ಮೊನೆಗಾರರು ತಮತಮಗೆ ॥
ಇನಿಸು ಬೇಗದಿ ಪದಿನೈದು ಸಾಸಿರ ಬಂದು । ಮಿನುಗುವ ತೇಜವಿಡಿದರು ॥ ೨೪ ॥

ಗೆಲುವಾಂತು ಜಿತಶತ್ರುವಿಂತೆಂದು ನುಡಿದನು । ತಲೆಯ ತಂದವರಿಗೆ ನೂರು ॥
ಕಲಿಗಳ ಮಿಾಸೆವೆರಸಿ ಮೂಗ ತಂದಗೆ । ಒಲಿದೀವೆ ಮುನ್ನೂರು ಹೊನ್ನ ॥ ೨೫ ॥

ಎಂದೆಲ್ಲರಿಗೆ ವೀಳೆಯ ಗಂಧ ಉಡೆಗಳ- । ನಂದು ತಿದ್ದಿಸಿ ಬೀಳ್ಕೊಡಲು ॥
ಮುಂದೇತರ ಹರುಷದಿ ತಮ್ಮೊಳಗೆ ಗೋ- । ವಿಂದನೆಂಬೊಳ್ಪಿಸರಾಂತು ॥ ೨೬ ॥

ಚೋರದಿಡ್ಡಿಗಳೊಳು ಕೋಂಟೆಯ ಹೊರವಂಟು । ಕಾರಿರುಳೊಳು ಹಳ್ಳಗೊಂಡು ॥
ಸೇರಿ ತಳಿಯನಲ್ಲಿರ್ದರನಿರದಾಂಕಿ । ಮೇರುವಗಳ ಮೇಲಕೇರಿ ॥ ೨೭ ॥

ಉಲುಹನು ಪಾಳೆಯವರು ಕೇಳದಂದದಿ । ಕೆಲಸ ಮುಗಿಸಲಲ್ಲಿರ್ದವರ ॥
ಬೆಳಗುಂ ಜಾವವಾಯಿತು ಪಾಳೆಯದವರು । ಮಲಗಿದ ವೇಳೆಯೆಂದರಿದು ॥ ೨೮ ॥

ಕಲಿಗಳು ಪಾರಿ ತಿರುಗುವುದ ತಪ್ಪಿಸಿ । ಬಲಿದ ಗೆರೆಯ ಬೇಲಿಯನು ॥
ಘಳಿಲನೆ ಒಂದೆಸೆಯೊಳು ಕಿತ್ತು ಪಾಳೆಯ- । ದೊಳಪೊಕ್ಕು ಬಲು ಬಂಟರುಗಳ ॥ ೨೯ ॥

ಇರಿದು ಕೆಡಹಿದರು ಗುಮ್ಮಿತಿಯೊಳು ಪೊಕ್ಕು । ಕೊರೆದರು ಮೂಗನು ಭಟರ ॥
ತರಿದರು ಗಜಗಳ ಕರವ ದೂಷನು ಪೊಕ್ಕು । ದೊರೆ ದೊರೆಗಳ ಮೂಗರಿವರು ॥ ೩೦ ॥

ಕಲಕಲ ರವ ಪುಟ್ಟಿತು ಪಾಳಯದಲ್ಲಿ । ತಲೆಬಾಲಗೆಟ್ಟು ನಾಯಕರು ॥
ಘಳಿಲನೆ ನಿದ್ರೆಗಣ್ಣಿಂದೆದ್ದು ತಾವಿರ್ದ । ಹೊಲಬುಗಾಣದೆ ಕೈದುಗಳ ॥ ೩೧ ॥

ತಡವರಿಸುತ ತಲೆಗಳನು ಕೆದರಿಕೊಂಡು । ಎಡಹುತ ಗಡಿಯ ಗೂಟಗಳ ॥
ಪಿಡಿದು ಈಟಿಗಳೆಂದು ಗುಮ್ಮಿತಿ ಕಂಬವ । ಕೆಡುಹುವರವಸರಗೊಂಡು ॥ ೩೨ ॥

ಕಡಿವಾಣಗಳ ಬಾಲಕೆ ಇಕ್ಕಿ ಕುದುರೆಯ- । ನಡರ್ವರು ಹಿಂದುಮುಂದಾಗಿ ॥
ಹಿಡಿದು ಕುದುರೆಯೆಂದು ಕೆಲಬರು ಕತ್ತೆಗೆ । ಕಡಿವಾಣವನಿಕ್ಕಿರುವರು ॥ ೩೩ ॥

ಮಲಗಿದ ತುರುಕ ರಾವುತರ ಕುದುರೆಯೆಂದು । ಘಳಿಲನೆ ಬಂದು ಹಂದೆಯರು ॥
ಉಲಿವುತೆದೆಯ ಮೇಲೆ ಕುಳಿತು ಗಡ್ಡಗಳನು । ಬಲಗೈಲಿ ಜುಟ್ಟೆಂದು ಪಿಡಿದು ॥ ೩೪ ॥

ಎಡದ ಕೈಯಲಿ 'ಸಂಭಾಳು ವಾಜಿಯೆ' ಎಂದು । ಹೊಡೆವರು ಕೆನ್ನೆಯ ತಟ್ಟಿ ॥
ಬಡೆವರು ಬಾಸುಂಡೆ ಬರುವಂತೆ ಚಬುಕಿಂದ। ಮುದದಿಂದಳ್ಳೆಯ ಮೇಲೊದೆವರು ॥ ೩೫ ॥

ಹರಿಗೆಯೆಂದವಸರದಿಂದ ಕೆಲಂಬರು । ಕರಿಕರ್ಣವಿಡಿದು ತೂಗುವರು ॥
ಶರವೆಂದು ಜೋಳದ ಕಣಿಕ ಧನುವಿಗಿಟ್ಟು । ಇರದೆಸೆವರು ತತ್ತರದಿ ॥ ೩೬ ॥

ಅವಸರದಿಂ ರಥವೆಂದು ಗಾಣವನೇರಿ । ತವತವಗಾಗ ರಥಿಕರು ॥
ಲವಲವಗುಟ್ಟಿ ಬೊಬ್ಬೆಯನಿಟ್ಟು ಹೊಡೆವರು । ರವ ಬಾರದಿರೆ ಕೋಪಿಪರು ॥ ೩೭ ॥

ಕೋವಿಯೆನುತ ಮಲಗಿದರ ಬಾಯೊಳು ಮದ್ದ । ತೀವಿ ಗುಂಡುಗಳಿಟ್ಟಾಸನದಿ ॥
ಓವದೆ ರಂಜಕ ಬತ್ತಿಗಳನು ಇಟ್ಟು । ಜಾವಿಗೆ ಏರಿಪರ್ಭರದಿ ॥ ೩೮ ॥

ಮಡಗಿರ್ದ ಸತ್ತಿಗೆಯಾಲಿವಟ್ಟಲುಗಳ । ಪಿಡಿದು ನೇಜೆಯವೆಂದೆನುತ ॥
'ಕಡಿ ತಿವಿ ಇರಿ' ಎಂದು ಬೆತ್ತಲೆ ಬೆತ್ತಲೆ । ಪಡೆಯೊಳಾಗೋಡಿಯಾಡುವರು ॥ ೩೯ ॥

ಹಿಂದುಮುಂದಾಗಿ ಕೋವಿಯನಾಂತು ಕೆಲಬರು । ತಂದು ಎದೆಗೆ ಜಾವುಗೆಯ ॥
ಅಂದು ಪತ್ತಿಸುವರು ಪೊತ್ತದಿರ್ದೊಡೆ ಛೀಃ । ಯೆಂದು ಬೈಕೊಂಬರು ತಮ್ಮ ॥ ೪೦ ॥

ತ್ವರಿತದಿ ನಡೆತಂದು ತಿಗುಳರ ಕಿವಿಯೊಳು । ಹರಿಗೆ ನಾಡಿಗಳೆಂದು ತಮ್ಮ ॥
ಕರಗಳ ನೀಡಿ ಕಿವಿಯ ಹಾಳೆ ಹರಿವಂತೆ । ನೆರೆಗಲಿಗಳು ಝೂಡಿಪರು ॥ ೪೧ ॥

ಕಗ್ಗೊಲಿಯೊಳು ಸಿಕ್ಕಿದೆನೆಂದು ಭೇರಿಯ । ನುಗ್ಗುಗುಟ್ಟುವರು ಕೋಪದೊಳು ॥
ಬೊಗ್ಗನೆ ತಮ್ಮ ಗುಮ್ಮತಿಗಳ ಗಜವೆಂದು । ನುಗ್ಗಿಸುವರು ನೇಜೆಯುವ ॥ ೪೨ ॥

ಸಿಕ್ಕಿದ ಭಟನೆಂದು ತಮ್ಮೊಳು ತಾವಾಗ । ಗಕ್ಕನೆ ಮುಂದಲೆವಿಡಿದು ॥
ಕೆಕ್ಕೆ ಕೆಕ್ಕೆಯ ಮೇಲೆ ಜಡಿವರು ಕಡಿವರು । ಸೊಕ್ಕಿಂದ ಕೆಡೆವಾಡುವರು ॥ ೪೩ ॥

ಗುಮ್ಮತಿಗಳ ಪೊಕ್ಕರು ಭಟರುಗಳೆಂದು । ಗುಮ್ಮನೆಯೊಳಪೊಕ್ಕು ತಾವು ॥
ಹೆಮ್ಮಕ್ಕಳ ಮೂಗ ಕೊರೆಯಲವರು ಅಳೆ । ದಮ್ಮಯ್ಯ ಮೋಸವೆನ್ನುವರು ॥ ೪೪ ॥

ಗುಡಿ ಗುಡಾರಗಳನು ಪೊಕ್ಕು ದೊರೆಗಳ । ಕೆಡಹಿ ಮೂಗನು ಕುಯ್ಯುವಾಗ ॥
ಬಿಡು ನಮ್ಮ ಪಡೆದೊಡವೆಗಳ ಕೊಳ್ಳೆನುತಾ- । ಗಡಿಗೆರಗುವರು ದೊದ್ದೆಗರು ॥ ೪೫ ॥

ಗೆರಿಯ ಬೇಲಿಯ ಸಾರಿ ನಾಲ್ದೆಸೆಯಿಂದಲಿ । ಶೂರರು ಹಾಕಲಾ ಕಿಚ್ಚು ॥
ಆರಭಟಿಸುತಂಬರವನು ಮುಸುಕಲು । ವಾರಣಗಳು ನೆಗಳುಗಳ ॥ ೪೬ ॥

ಹರಿದು ಕಂಬಂಗಳ ಮುರಿದು ಭಟರ್ಗಳ- । ನಿರಿದು ಕಿತ್ತಿಡುತ ದೂಸುಗಳ ॥
ಇರಿದು ಜನಂಗಳ ರಂಬಾರೂಟಿಯ । ಹರಿದಾಡುತ ಕೊಲ್ಲುವರು ॥ ೪೭ ॥

ಗೂಟಗಳನು ಕಿತ್ತು ಹರಿದು ಹಗ್ಗಂಗಳ । ಘೋಟಕಂಗಳು ಮಂದಿಯನು ॥
ಪಾಟಿಗೆಡಿಸಿ ಕಚ್ಚಿಯೊದೆದು ಹಮ್ಮಳಿಸುತ । ಲೂಟಿ ಮಾಳ್ಪವು ಪಾಳೆಯದೊಳು ॥ ೪೮ ॥

ಕೋಳಾಹಳವನು ಮಂದರ ತಾ ಕೇಳಿ । ಬಾಳ ಜಡಿವುತ ದೂಸಿಂದ ॥
ಕಾಳಭೈರವನಂತಿದೇನೇನೆನುತಲಾಗ । ತೂಳುಗೊಂಡವರಂತೆ ಹೊರಡೆ ॥ ೪೯ ॥

ದಳವಾಯಿ ವೀರಭಟರು ದೊರೆ ದೊರೆಗಳು । ತಳುವದೊದಗಿದರು ಬಂದು ॥
ತಳೆದವಲ್ಲಲ್ಲಿ ಪಂಜುಗಳು ಕೋಟಾಕೋಟಿ । ಮೊಳಗಿದವಾಗ ಭೇರಿಗಳು ॥ ೫೦ ॥

ಹರಿಗೆಕಾರರು ರಾವುತರು ವಾರಣಗಳು । ತರತರಗೊಂಡೈತರಲು ॥
ಹೊರಗೆ ಹೊರಟರಾಗ ಕಗ್ಗೊಲೆ ವೀರರು । ಇರದೆ ಪಲ್ಲವಿಸಲು ಬೆಳಕು ॥ ೫೧ ॥

ಹೊರಟರದೇಕೋ ಕಗ್ಗೊಲೆಯ ಬೀರರು । 'ತರಿ ಇರಿ ಕೊರಿ ಬಡಿ ಚುಚ್ಚು' ॥
ಅರಿ ಯಿಡು ತಿವಿ ಕೊಚ್ಚು ಕೊಚ್ಚೆಂದು ಒದಗಿತು । ಬಿರುದಿನ ಭಟರ ಬೆಂಕೊಂಡು ॥ ೫೨ ॥

ಎಸೆವುತ ಸಿಕ್ಕಿದ ಬಲು ಬಂಟರುಗಳ । ಕುಸುರಿದರಿವುತಟ್ಟಿಕೊಂಡು ॥
ಅಸವಸದಿಂ ಹೆಬ್ಬಾಗಿಲಿಗೈತರೆ । ಎಸಕದಿಂ ಕೋಂಟೆಯಾಳುಗಳು ॥ ೫೩ ॥

ತಿರುಗಣೆ ಕೋವಿಯಿಂ ಮುಂದಕೆ ಬರದಂತೆ । ಅರಿಗಳ ಕೆಡಹುವರೆಸೆದು ॥
ಶರಗಳನಂಬುಗಳಿಂದಲಿ ಬಿಡುವರು । ಶಿರ ಹಾರುವಂತೆ ಕಲಿಗಳ ॥ ೫೪ ॥

ಕಗ್ಗೊಲೆ ವೀರರು ಮಗುಳೊಮ್ಮೆ ಪಗೆಗಳ । ನುಗ್ಗುಗುಟ್ಟುತ ಪಾಳೆಯಕೆ ॥
ಬೊಗ್ಗನೆ ಕೂಡಿ ಕುದುರೆಯಾನೆ ರಥಗಳ । ಕಗ್ಗಲಿಗಳು ತಾವು ಪಿಡಿದು ॥ ೫೫ ॥

ಹರಿಪುರವನು ಪೊಕ್ಕು ಜಿತಶತ್ರುವ ಕಾಣೆ । ಹರುಷದಿಂ ದಳವಾಯಿಯೆಡೆಗೆ ॥
ಕರೆತಂದು ಕಾಣಿಸಿ ದಳವಾಯಿ ನಡೆತಂದು । ದೊರೆಗೆ ಕೈ ಮುಗಿದು ಕಾಣಿಸಿದ ॥ ೫೬ ॥

ಹತ್ತು ಸಾಸಿರ ತಲೆ ಇಪ್ಪತ್ತು ಸಾವಿರ । ಕೆತ್ತಿದ ಮೂಗಿನ ಸರವು ॥
ಸತ್ತಿಗೆ ಚಮರ ಮತ್ತುಳಿದ ಬಿರುದುಗಳ । ಇತ್ತು ಕೈ ಮುಗಿದರು ನೃಪಗೆ ॥ ೫೭ ॥

ಕರಿಹಯದಾಳು ದಮಾಮಿ ಸಿಂಹಾಸನ । ಮೆರೆವ ಕಿರೀಟ ಮುಂತಾದ ॥
ಬಿರುದುಗಳನು ತಂದೊಡೆಯನಿಗೊಪ್ಪಿಸಿ । ಎರಗಿದರ್ಸಾಷ್ಟಾಂಗದಿಂದ ॥ ೫೮ ॥

ಬಳಲಿದಿರ್ರೈ ಏಳಿ ಎಂದು ಭೂಪಾಲನು । ದಳಪತಿಯಿಂದುಡುಗೊರೆಯ ॥
ಪಲವು ದೊಡವು ಪಟ್ಟೆಯ ವೀಳೆಯಗೂಡಿ । ನಲವಿಂದ ಕೊಡಿಸಿದ ಭಟರ್ಗೆ ॥ ೫೯ ॥

ಹತ್ತು ಸಾವಿರ ಗಜ ನಾಲ್ವತ್ತು ಸಾಸಿರ- । ದುತ್ತಮ ಹಯರಥವನಿತೆ ॥
ಹತ್ತಿಪ್ಪತ್ತಕ್ಷೋಹಿಣಿ ಬಲಗೂಡಿ । ಮುತ್ತಿದರ್ಮತ್ತೆ ಕೋಂಟೆಯನು ॥ ೬೦ ॥

ತಳಿಗಳ ಮುರಿಗೊಂಡು ನಾಲ್ಕು ದಿಕ್ಕುಗಳಿಂದ । ಪೊಳಲವರ್ತಲೆ ಎತ್ತದಂತೆ ॥
ಗಳೆಗಳ ಮುರಿದು ಬಾಣಗಳಿಡೆಯೊದೆವುತ । ಘಳಿಲನೆಯೂರ ತುಂಬಿದವು ॥ ೬೧ ॥

ದೊರೆಗಳು ಸಹಲಿತ್ತ ದಳವಾಯಾಳ್ವೇರಿಯ । ಭರದಿಂದಲೇರಿ ಕೈವೀಸೆ ॥
ತರಿದರು ಕೋಂಟೆಯೇರುವ ಬಲು ಬಂಟರ । ಶಿರಗಳ, ಕರವ ಕಡಿದರು ॥ ೬೨ ॥

ಇಡುವರು ಕವಣೆಕಲ್ಲಿಂ ಬಲು ಕೊಲೆಗಳ । ಕೆಡಹುವರಾಳುಗಳ್ಮೇಲೆ ॥
ಕಡು ಕಾಯ್ದು ಲೋಹದ ರಸವ ಮಸ್ತಕದೊಳು । ಒಡನೆ ಸುರಿವರಾಳ ಮೇಲೆ ॥ ೬೩ ॥

ಪೆಟಲು ಕೋಟಾಕೋಟಿ ಕೋಟೆಯ ಮೇಲಿರ್ದ । ಭಟರಾದೆಯಂಬುಗಂಡಿಗಳಿಂ ॥
ಛಟಿಫಟಿ ಘುಮ್ಮುಘುಮೆನ್ನುತ ಹೊರಗಿರ್ದ । ಪಟು ಭಟರನು ಕೊಂದವಾಗ ॥ ೬೪ ॥

ಕಡು ದೊಡ್ಡ ಜಭರ ಜಂಗಿಗಳ ಕೊತ್ತಳದಿಂ- । ದಿಡೆ ಘುಡುಘುಡಿಸುತ ಹೋಗಿ ॥
ಕೆಡೆ ನೂಂಕಿ ತಳಿಗಳ ತೇರಾನೆಕುದುರೆಯ । ಒಡಲೊಳು ಪೊಕ್ಕು ದಾಂಟುವವು ॥ ೬೫ ॥

ಗುಂಡಗತ್ತರಿಯಿಂ ಕೋಟೆಯನೇರುವಾಳ್ಗಳ । ಮುಂಡೆಯನರಿದು ಹಾಕುವರು ॥
ಗುಂಡುಗಳನು ಎತ್ತಿ ಹಾಕುವರೇಣಿಗ- । ಳ್ತುಂಡ ತುಂಡಾಗುವಂದದೊಳು ॥ ೬೬ ॥

ಬುರುಜಿನೊಳಿರ್ದ ಫಿರಂಗಿಯ ಹಾರಿಸಿ । ಭರದಿ ಘುಡುಮ್ಮೆಂದೆನುತ ॥
ಹೊರಸೂಸುತ ಕಿಡಿಗಳನಾನೆ ಕುದುರೆಯ । ಕರಿಕು ಮಾಡಿದವು ನಿಮಿಷದಿ ॥ ೬೭ ॥

ಡೆಂಕಣಿಗಳ ನೂರಿನ್ನೂರೊಂದೇ ಬಾರಿ । ಭೋಂಕನೆ ಹತ್ತಿಸುವಾಗ ॥
ನೂಂಕಿ ಬರುವ ಸೇನೆ ಗುಮ್ಮೆತ್ತಿದೂಸುವ । ಸೋಂಕಿನಿಂ ಸುಟ್ಟುರುಹಿದವು ॥ ೬೮ ॥

ಅರೆನಿಮಿಷದೊಳೆಲ್ಲ ಬಲವನು ಹುರಿದರು । ಮುರಳಿಯಡಕೆ ನೂರುಮಣಿಯು ॥
ಭರದಿಂದ ಸೇನೆ ಕೋಟೆಯ ಬಂದು ಮುತ್ತಿತು । ಒರಗಿದ ಹೆಣಗಳ ಮೆಟ್ಟಿ ॥ ೬೯ ॥

ಹೊರದಿಕ್ಕುಗಳಿಂದ ಬುರುಜಿಗೆ ಬಂದಿರ್ದ । ಮೊರೆವ ಸುರಂಗಕೆ ಮರ್ದ ॥
ಸುರುಹಿ ಪತ್ತಿಸಲಂಬರಕೆ ಕೊತ್ತಳಗಳು । ಗರಿ ಮೂಡಿದಂತೆ ಹಾರಿದವು ॥ ೭೦ ॥

ಹತ್ತಿತೊಂದೇ ಲಗ್ಗೆಯಿಂದ ಕಾಲಾಳ್ಗಳು । ತತ್ತರದಿರಿವುತ ಭಟರ ॥
ಮುತ್ತೊಳಕೋಟೆಯೊತ್ತಿಲಿ ಮಂದರ ಬಂದು । ನಿತ್ತನು ಹರಿಗೆ ಮರೆಯೊಳು ॥ ೭೧ ॥

ಒಳಕೋಟೆಯೊಳಪೊಕ್ಕು ಸಿಂಹಧನು ಎಂಬ । ದಳವಾಯಿ ಹಾಕಿಸಿ ಕದವ ॥
ಬಲು ಬಲವೆರಸಿಯಾಳ್ವೇರಿಯೊಳಗೆ ನಿಂದು । ತಲೆಯೆತ್ತದಂತೆ ಹೇರಾಳ ॥ ೭೨ ॥

ಅಂಬುಗಂಡಿಗಳಿಂದ ಪೆಟಲೊಳಗಿಡಿಸುತ । ಮುಂಬರಿವೇರುವಾಳುಗಳ ॥
ಕಂಬುಕಂಧರಗಳ ಕವಲಂಬುಗಳಿಂಸೀ- । ರುಂಬಾಳುವಂತಿಡುತಿಹರು ॥ ೭೩ ॥

ಮುಂದರ ಕಡುಕೋಪದಿಂ ಕಡೆಗಣ್ಣಿಗೆ । ತಂದು ಕೆಂಪನು ತನ್ನ ಬಲಕೆ ॥
ಇಂದು ಕೋಟೆಯ ಕೊಳ್ಳದಿರ್ದೊಡೆ ನಾ ಹೊತ್ತ- । ದೊಂದು ವಿಸಾಸೆಯೆ! ಎಂದು ಬಲಕೆ
ನೊರೆವುತ ಕರವ ಬೀಸಲು ಜೇನುಹುಳಗಳು । ಇರದೆ ಮುತ್ತುವವೊಲು ಪುರವ ॥
ನೆರೆಗಲಿಗಳು 'ಭೋ ಕಾಲಿಲಿಕು ಬಿಬಿಯೆಂದು । ತ್ವರಿತದಿಂ ಬಂದು ಮುತ್ತಿದರು ॥ ೭೪

ಇಂತಪ್ಪ ಬಲು ಜಗಳವನೊಳಕೋಟೆಯೊ- । ಳಂತರಿಸದೆ ಮಾಡುತಿರಲು ॥
ಚಿಂತೆಯೊಳಾ ವಿಮಲವಾಹನ ನೃಪ- । ನಿಂತೆಂದು ಮನದೊಳೆಣಿಸಿದ ॥ ೭೫

ಪರಿಕಿಸಿ ನೋಡಲು ಇದು ಕಾರ್ಯದಲ್ಲೀ । ದುರುಳನೊಡನೆ ನಾ ಸೆಣಸಿ ॥
ಪರಾಭವಕೊಳಗಾಗಬಾರದು ಎಂದಾಗ । ತುರಿತದಿ ಚೋರದಿಡ್ಡಿಯೊಳು ॥ ೭೬

ಹರಿಪುರಪತಿ ತನ್ನ ಸ್ವಕುಟುಂಬಂಗಳು । ವೆರಸಿಯೂರನು ಹೊರಹೊರಟು ॥
ಪಿರಿದು ಗುರ್ವಿಪ ಭೀಮಾಟವಿಯೊಳು ತಾನು । ಕರ ಶೋಭಿಪ ಶಂಖಗಿರಿಯ ॥ ೭೮ ॥

ಎಸೆವ ಮೇಲ್ಭಾಗದೊಳು ರಾಜಿಸುತಿರ್ದ । ಕುಸುಮಪುರಕೆ ಬರುತಿರಲು ॥
ಉಸುರಲು ಭೃತ್ಯರು ಹರಿಪುರೇಶನದೊಂದು । ಹೊಸತಾದ ಗಮನವ ಪೋಗಿ ॥ ೭೯ ॥

ಕೇಳಿ ಸುದರ್ಶನ ಭೂಭುಜ ಬಲವನು । ಮೇಳೈಸಿಯಿದಿರಾಗಿ ಬಂದು ॥
ಸೂಳೈಸೆ ಪಲವು ವಾದ್ಯಗಳು ಭಾವಾಜಿಯ- । ನಾಲಿಂಗಿಸಿ ಮುದದಿಂದ ॥ ೮೦ ॥

ವಿನಯೋಪಚಾರವ ನುಡಿದು ತನ್ನೂರಿಗೆ । ಮನದಕ್ಕರಿಂ ಕರೆತಂದು ॥
ಮನುಜೇಶನು ತನ್ನರಮನೆಯನು ಪೊಕ್ಕು । ವನಿತೆಯರಿಂದಾರತಿಯ ॥ ೮೧ ॥

ಇರದೆತ್ತಿಸಿ ದಿವ್ಯ ಸ್ನಾನ ಭೋಜನಗಳ । ಹರಿಪುರೇಶಗೆ ಸುದರುಶನ ॥
ಎರಕದಿಂ ಮಾಡಿಸಿ ತನ್ನ ಭಗಿನಿಯನು । ಗುರುಪಯೋಧರೆ ಕಾಮಲತೆಯ ॥ ೮೨ ॥

ಸಂತೈಸಿ ಕುಸುಮಪುರೇಶ ಭಾವಾಜಿಯೊ- । ಳಿಂತು ನುಡಿದ ನಿನ್ನ ಮನದ ॥
ಚಿಂತೆಯ ಬಿಡು ಮಂದರನೆಸಗಿದುದನು । ಸ್ವಾಂತದೊಳಗೆ ತರಬೇಡ ॥ ೮೩ ॥

ಎಂದು ಪಲವು ತೆರದಿಂದ ಸಂತೈಸಿ ನೃ- । ಪೇಂದ್ರ ವಿಮಲವಾಹನನ ॥
ಸಿಂಧುರವೈರಿವಿಷ್ಟರದೊಳು ಕುಳ್ಳಿರಿಸಿ । ದುಂದುಭಿ ಚಾರು ಘೋಷದೊಳು ॥ ೮೪ ॥

ಸುರುಚಿರ ರನ್ನಮಕುಟ ಶಿರದೊಳಗಿಕ್ಕಿ । ಹರುಷದಿಂದಲಿ ಪುಷ್ಪಪುರವ ॥
ಹರಿಪುರೇಶಗೆ ಕೊಟ್ಟು ಸುಖದಿಂದಿರುತಿರೆ । ದುರುಳನಿತ್ತಲು ಮಂದರನು ॥ ೮೫ ॥

ಹರಿಪುರವನು ಬಿಟ್ಟು ಚೋರಗಂಡಿಗಳೊಳ- । ಗರಸು ವಿಮಲವಾಹನನು ॥
ಭರದಿಂದಲೋಡಿಹೋದನು ಎಂಬ ಸುದ್ದಿಯ । ಚರರುಗಳಿಂದ ತಾ ಕೇಳಿ ॥ ೮೬ ॥

ಬಿಡಿಸಿ ಮುತ್ತಿಗೆಯನು ಪ್ರಜೆ ಪರಿವಾರಕ್ಕೆ । ಕೊಡಿಸಿ ನಂಬುಗೆ ಭಾಷೆಯನು ॥
ಕಡುಬೇಗದಿಂದ ಮಂತ್ರಿಗಳನು ಕರೆಯಿಸಿ । ಬಿಡದಿತ್ತನಭಯವನವರ್ಗೆ ॥ ೮೭ ॥

ಸುರಪುರದೊಳಗೆ ತಾನರಸು ಗೈಯುತಲಿರೆ । ದುರುಳ ಮಂದರನಿರುತಿಹನು ॥
ಪರಪುರುಷಾರ್ಥ ಚಿಂತಾಮಣಿಯೆ ! ಎಂ- । ದೊರೆದನು ಶ್ರೀನಾಗದತ್ತ ॥ ೮೮ ॥

ಆ ನಾಗದತ್ತನು ನುಡಿದ ನುಡಿಗಳನು । ಭೂನಾಥಚಂದ್ರ ಕೇಳುತಲಿ ॥
ಮೀನಕೇತನನ ಬೆಡಗನು ಜರಿವುತ ಶ್ರೀ । ಜ್ಞಾನಚಂದ್ರಮನೊಪ್ಪಿದನು ॥ ೮೯ ॥

ಶೂರರ ತಲೆವಣಿ ವೀರಶಿಖಾಮಣಿ । ವೈರಿಭೂಭೃದ್ವಜ್ರಪಾಣಿ ॥
ಸಾರಿದ ಜನಕೆ ಚಿಂತಾಮಣಿ ಜ್ಞಾನೇಂದು । ಧೀರನೊಪ್ಪಿದ ಪುಣ್ಯಶ್ರೇಣಿ ॥ ೯೦ ॥

**॥ ಅಂತು ಸಂಧಿ ೧೩ಕ್ಕಂ ಪದ ೧೯೩೨ಕ್ಕಂ ಮಂಗಲಂ ॥**

# ಕಾಮಲತೆಯ ವಿವಾಹ.

ಸಿಂಧೂರಾಕಾರದಿ ಜ್ಞಾನೇಂದು ಕುವರನು । ಮಂದರನನು ತಂದುದುಸುರ್ವೆ ॥ ಪ ॥

ನೆನಹು ವನಿತೆಯರೊಳಿನಿಸಿಲ್ಲದ ದೇವ । ಘನಕರ್ಮವನ ಧನಂಜಯನೆ ! ॥
ದಿನದಿನ ಬೆಳಗೆನ್ನ ಹೃದಯುವ **ಶಾಂತೀಶ** ! । ಜನಭಕ್ತಜನವನಜೇನನೆ ॥ ೧ ॥

ಎಲೆ ನಾಗದತ್ತನೆ ! ಇದಕೇತಕೆ ಚಿಂತೆ । ಬಲು ಭಂಗವನು ಮಂದರಗೆ ॥
ಅಲಸದೆಸಗುವೆ ನೀ ಪೋಗಿ ನಿವ್ವೊಡೆಯಗೆ । ಕಲಿಲಹರನ ದ್ವಾರದೆಗೆದು ॥ ೨ ॥

ಪಲವರ್ಚನೆಗಳಿಂ ಜಿನರಾಜಮಲ್ಲನ । ಚೆಲುವಡಿಗಳ ಪೂಜಿಸುತ ॥
ನಲವಿಂದಾ ದೇಶಪುರುಷನಿರ್ದಪನೆಂಬ । ಬಲು ವಾರ್ತೆಯ ಪೇಳು ನೀನು ॥ ೩ ॥

ಎಂದು ನುಡಿದು ಬೀಳ್ಕೊಡಲು ತನ್ನಯ ಕೈಯ । ತಂದು ನೊಸಲಿಗಾ ಚರನು ॥
ಮಂದೇತರ ಹರುಷದಿ ಫುಲ್ಲಪುರಕೈದಿ । ಬಂದು ಚಾವಡಿಯನು ಪೊಕ್ಕು ॥ ೪ ॥

ಹರಿಪುರೇಶನ ಕಂಡು ನಾಗದತ್ತನು ತಾ । ಕರಗಳ ಮುಗಿದಿಂತು ನುಡಿದ ॥
ನೆರೆಗಲಿ ಜ್ಞಾನೇಂದು ಬಸದಿಯ ಬಾಗಿಲ । ತೆರೆದ ವಿವರವನು ಪೇಳೆ ॥ ೫ ॥

ಭಾವನನೊಡಗೊಂಡು ವಿಮಲವಾಹನ ನೃಪ । ತೀವಿದ ಸಂತೋಷದಿಂದ ॥
ದೇವನ ಗೃಹಕಾಗಿ ಬರುತಿರಲತ್ತಲು । ಭಾವಜ್ಞ ಮಂದರ ನೃಪತಿ ॥ ೬ ॥

ಓಲಗಶಾಲೆಯನೊಳಪೊಕ್ಕು ದೊರೆಗಳ । ಜಾಲಮಧ್ಯದೊಳು ತಾನಾಗ ॥
ಲೀಲೆಯಿಂ ಕುಂಜರಯುದ್ಧವ ನೋಡುತ- । ಲೋಲಗಗೊಟ್ಟಿರುತಿರಲು ॥ ೭ ॥

ತುರಿಹದಿಂದಿತ್ತಲು ಜ್ಞಾನೇಂದು ಕುವರನು । ಸುರವಾರಣರೂಪಾಂತು ॥
ಹರಿಪುರಕೈತಂದು ಬೃಂಹಿಸುತಿರಲಲ್ಲಿ । ಕರಿಗಳ ನಡುವೆ ನಿಂದಿರಲು ॥ ೮ ॥

ಯಿಂದ್ರನೀಲದ ಗಿರಿಗಳ ಮಧ್ಯದೊಳ್ತೋರ್ಪ । ಚಂದ್ರಗಿರಿಯೋ ಎಂಬಂತೆ ॥
ಮಂದ್ರಗಂಭೀರದಿ ಕರಿಗಳ ನಡುವೆ ನೃ- । ಪೇಂದ್ರಗೆ ತೋರಿ ತಾನಾಗ ॥ ೯ ॥

ಮಂದರ ಭೂಪನಾ ಸಿಂಧುರವನು ನೋಡಿ । ತಂದು ನಾಸದೊಳು ತರ್ಜನಿಯ ॥
ಎಂದೆಂದು ಇಂತಪ್ಪ ಕರಿಯ ಕಂಡುದುದಿಲ್ಲ- । ವೆಂದು ಮಂಡೆಯನಲುಗಿದನು ॥ ೧೦ ॥

ಅತಿದೀರ್ಘತೆಯಿಂದ ನವಕೋತ್ಸೇಧದಿಂ- । ದತಿಶಯುವಾದೇಳು ವೊಳದಿ ॥
ನುತ ಸುದರುಶನ ಹಸ್ತದಿಂ ಬಳಸಿದ । ಸತತ ದುಂದುಭಿಸ್ವರದಿಂದ ॥ ೧೧ ॥

ಕರ ಚೆಲುವಿನ ವೃತ್ತ ಕುಂಭಸ್ಥಳಗಳಿಂ- । ದರುಣವರ್ಣದ ಕಪೋಲಗಳಿಂ ॥
ಮೆರೆವ ಚತುರ್ದಂತಗಳಿಂದ ನಿಡಿದಾದ । ಚರಣ ಸೋಂಕುವ ಬಾಲದಿಂದ ॥ ೧೨ ॥

ಶ್ವೇತವರ್ಣದ ಕಾಯ ಸುಪ್ರತಿಷ್ಠಾಂಘ್ರಿಯು । ನೂತನ ಲಕ್ಷಣುಂಟಿದಕೆ ॥
ಸಾತಿಶಯದ ಗಜ ಸುರವಾರಣವೆಂದು । ತಾ ತರಿಸಿದ ಪರಿಕರವ ॥ ೧೩ ॥

ಅದಕೆ ಚೆಲ್ವಾಗಿ ಸಿಂಗರವನು ಮಾಡಿಸಿ । ಮುದದಿಂದಲೇರುವೆನೆಂದು ॥
ತ್ರಿದಶವಾರಣದ ಸಮೀಪಕೆ ಬರುವಾಗ । ಇದಿರ್ವಂದು ಬಹುಶ್ರುತ ಮಂತ್ರಿ ॥ ೧೪ ॥

ಕರಗಳ ಮುಗಿದೆಲೆ ಸ್ವಾಮಿ ! ಬಿನ್ನಹವೀ । ಕರಿಪತಿಯನು ಪರಿಕಿಸಲು ॥
ಧರೆಯೊಳು ಕೌತುಕವಾಗಿದೆ ಮಾಯದ । ಕರಿಯೊಂದಲ್ಲದೆ ಬೇರಿಲ್ಲ ॥ ೧೫ ॥

ಬಂದಿರುವುದು ನಾವು ಪಗೆಯೂರದರ ಮೇಲೆ- । ಯಂದವ ತಪ್ಪಿಸಿಕೊಂಡು ॥
ಮುಂದುವರಿದು ಹೋದರೆ ತಂತ್ರದಿಂ ಬಂದ । ಸಿಂಧುರವೇನೋ ನಾನರಿಯೆ ॥ ೧೬ ॥

ಹೆಚ್ಚಿದನೀ ನೃಪ ನಮ್ಮ ರಾಜ್ಯಗಳನು । ಎಚ್ಚತ್ತುಳಿಯಗೊಡನೆಮ್ಮ ॥
ಮಚ್ಚರದಿಂದಾನೆಯ ರೂಪನು ಪೊತ್ತು । ತುಚ್ಛ ನೃಪರು ಬಂದರೇನೋ ॥ ೧೭ ॥

ಹಿಂದಕೆ ಶ್ರೀಪಾಲಚಕ್ರಿಯ ಚೆಲುವಾದ । ಸೈಂಧವನೇರಲು ತಾನೆ ॥
ಅಂದೆತ್ತಿಕೊಂಡದ್ರಿಯೊಳು ಹಾಕಿ ಹೋದೊಂ- । ದಂದವ ತಿಳಿದುದಿಲ್ಲವೆ ॥ ೧೮ ॥

ಸಗರಚಕ್ರಿಯನು ಕುದುರೆಯಾಗಿ ಪೂರ್ವದ । ಪಗೆಯೆತ್ತಿ ಕೊಂಡುಪೋದುದನು ॥
ಮಿಗೆ ಬಲ್ಲವನಾಗಿಯೀ ದಂತಿಯ ನೀನು । ಹೆಗಲೇರುವರೆ ಪರಿಕಿಸದೇ ॥ ೧೯ ॥

ಹತ್ತೆಂಟುದಿನ ಮಾವಟಿಗರ ವಶಮಾಡಿ । ಚಿತ್ತವ ತಿಳಿದೀ ಕರಿಯ ॥
ಮತ್ತೇರುವುದೊಳ್ಳಿತು ರಾಯ ! ಇದು ರಾ- । ಜೋತ್ತಮರುಗಳ ಸುನೀತಿ ॥ ೨೦ ॥

ಎಂದು ನುಡಿದ ಮಂತ್ರಿಯ ಮಾತನು ಕೇಳಿ । ಮಂದಸ್ಮಿತನಾಗಿ ನೃಪತಿ ॥
ಎಂದನೆಲೆ ಮಂತ್ರಿ ! ನೀ ಹೇಳಿದುದು ಸತ್ಯ । ಮಂದರನೇಸು ಬಡವನೆ ॥ ೨೧ ॥

‘ಸತ್ತಕುದುರೆಯೆನೇನೋ ಮಾಡಿತು’ ಎಂ- । ಬುತ್ತಮ ಗಾದೆಯಂದದೊಳು ॥
ಶಕ್ತಿಯುಂಟಾದರೆ ತನ್ನ ಪುರವ ಬಂದು । ಮುತ್ತಿದಾಗಲೆ ಕೇಡು ಬಿದ್ದು ॥ ೨೨ ॥

ಚೋರಗಂಡಿಯೊಳೋಡಿ ಪೋಗುವನೆ ಅವ । ವಾರತೆಯಂತಿರಲುಳಿದ ॥
ಧಾರುಣೀಶ್ವರರಿದಿರಾಗೆ ತದ್ವಂಶವ । ಬೇರುವೆರಸಿ ಕೀಳದಿಹನೇ ॥ ೨೩ ॥

ಉಳಿದಾನೆಗಳಿಗೆ ಇಂತಪ್ಪ ಚೆಲುವಿಕೆ- । ಯಿಳೆಯದೊಳಗೆ ತಾನು ಬಹುದೇ ॥
ತಳೆದುದಲ್ಲಿದು ಮಾಯವ ಸಹಜದಿಂದ । ಪೊಳೆವ ಶ್ವೇತಾಂಗದ ಗಜವು ॥ ೨೪ ॥

ನಾ ಮಾಡಿದ ಪುಣ್ಯೋದಯದಿಂದಲಿ । ಸಾಮಜ ತಾ ಬಂದುದಿಲ್ಲಿ ॥
ಪ್ರೇಮದಿಂದಿದನೇರಿ ವಶಮಾಡದಿರ್ದೊಡೆ । ಸೀಮೆಯನಾಳುವುದೇಕೆ ॥ ೨೫ ॥

ಬತ್ತೀಸ ತೆರದ ಬಿನ್ನಾಣಗಳಿಂದಲೀ । ಮತ್ತ ಗಜವನು ಬಳಲಿಸಿ ॥
ಹತ್ತುವೆ ಮಸ್ತಕವನು ನನ್ನ ಚಾತುರ್ಯ- । ದುತ್ತಮಿಕೆಯ ನೋಡೆನಲು ॥ ೨೬ ॥

'ತಲೆ ಹೋಗುವರೆ ಕಾಲು ಹೊಣೆಕಾರನೆಂ'ದೆಂ- । ಬಲಘು ವಾಕ್ಯವು ತಪ್ಪುಗುಮೇ ? ॥
ಫಲವ ನೀನೇ ಉಂಡೆ ಎಂದು ಮಂತ್ರೀಶನು । ಸುಳಿವುತೊಂದಿಕ್ಕಿಲಿ ನಿಂದ ॥ ೨೭ ॥

ಹರಿವಿಷ್ಟರವನಿಳಿದು ಬಂದು ಮಂದರ । ದ್ವಿರದನ ಕರವ ತಾ ತಡಹಿ ॥
ಭರದಿ ನಿವಾಳಿಯುಸಿಡಿಸಿಯಾರತಿಯನು । ಇರದೆತ್ತಿ ಧವಳ ಶಂಖಗಳು ॥ ೨೮ ॥

ಸ್ವರದೋರಲದರ ರಭಸವನು ತಾ ಕೇಳಿ । ಕರಿರಾಜ ಕೋಪಿಸಿಕೊಂಡು ॥
ತುರಿಹದಿ ಮಂದರ ನೃಪತಿ ತನ್ನಯದೊಂದು । ಕರದಿಂದ ಪಿಡಿದೆತ್ತಿಕೊಂಡು ॥ ೨೯ ॥

ನಡುಬೀದಿಯೊಳು ಬರುತಿರೆ ಪತ್ತು ಸಾಸಿರ । ಗಡೆಯಕಾರರು ಇದಿರಾಗೆ ॥
ಹಿಡಿದಪ್ಪಳಿಸಿ ಬಿಗಿದು ಹಾಕಿ ಗದೆಗಳ । ಪುಡಿ ಪುಡಿಯನು ಮಾಡಿದುದು ॥ ೩೦ ॥

ಅರಸನ ಕರಿ ಪಿಡಿಯಿತು ಎಂಬುದ ಕೇಳಿ । ದೊರೆದೊರೆಗಳು ಲಕ್ಷಭಟರು ॥
ಗುರಿಕಾರರು ಕೋಟಿ ಭಟರುಗಳೆಯ್ತಂದು । ಕರಿಯ ಸುತ್ತಲು ಮುತ್ತಿದರು ॥ ೩೧ ॥

ಕಲಕಲ ರವವೂರೊಳೆಲ್ಲೆಲ್ಲಿ ತುಂಬಿತು । ಪೊಳಲ ಜನ ಕೆಟ್ಟೆವೆನುತ ॥
ಅಳುತ ಬಾಯ್ಬಾಯ ಬಿಡುತ ನೆಟ್ಟೆಮುರಿವುತ । ನಿಳಯವ ಪೊಕ್ಕಡಗಿದರು ॥ ೩೨ ॥

ಸೀಳಿ ಕೆಲಂಬರ ತಿವಿದು ಕೆಲಂಬರ । ಕಾಲೊಳೊರಸಿ ಕೆಲಂಬರನು ॥
ಮೇಲಕ್ಕೆ ತೆಗೆದಿಟ್ಟು ಕೆಲಬರನಾ ಕರಿ । ಗೋಳಿಡಿಸಿತು ನಿಮಿಷದೊಳು ॥ ೩೩ ॥

ಸಾಸಿರ ವಾಜಿಯನೊಡಗೊಂಡು ಮಂತ್ರೀಶ- । ನಾ ಸಮಯಕೆ ಬಂದು ಗಜವ ॥
ಓಸರಿಸದೆ ಭೋ ಎಂದಾಲುತ ಮುತ್ತೆ- । ಯಿಾಶನಂದದಿ ಕರಿ ಕೆರಳಿ ॥ ೩೪ ॥

ತುರಗದ ಬಾಲವನೊದಗಿ ಪಿಡಿದು ಬೀಸಿ । ಮರುತಮಾರ್ಗಕೆ ಕೆಲವಿಡುತ ॥
ತುರಗದ ಮೇಲಿರ್ದ ರಾವುತರುಗಳನ್ನು । ಭರದಿ ತೆಗೆದುಯಪ್ಪಳಿಸಲು ॥ ೩೫ ॥

ಬಿರುತೋಡಿದ್ದವು ಹಯ ದಿಕ್ಕುದಿಕ್ಕುಗಳಿಗೆ । ಗರಿ ಮೂಡಿದವೋ ಎಂಬಂತೆ ॥
ಕರಿಪತಿ ಮಂತ್ರಿಯು ಬೆಂಕೊಳೆ ಕಂಗೆಟ್ಟು । ಹರುಕಣಿಯೊಳು ಸಾಗಿದನು ॥ ೩೬ ॥

ರಂಭಾರೂಢಿಯು ಗಜ ಮಾಡುತಿರಲಾ- । ಳಂಬಿ ಕಂಡನು ಕಾಗೆಯಂತೆ ॥
ಹಂಬಲಿಸುತ ದೂರದೂರದೊಳಗೆ ನಿಂದು । ಬಂಬಲು ಬಾಡಿ ನೋಡಿದರು ॥ ೩೭ ॥

ಆನೆ ಮಾಡುವ ಕೋಳಾಹಳವನು ಕೇಳಿ । ಯೇನೇನೆನುತ ಬಾಗಿಲಿಗೆ ॥
ಮಾನವೇಶ್ವರಸುತ ರತ್ನಮಾಲಿಯು ಬಂದು । ತಾ ನಿಲಲಾಗೋರ್ವ ಚರನು ॥ ೩೮ ॥

ಕರಗಳ ಮುಗಿದೊಂದು ಕಾಡಾನೆಯು ಬಂದು । ದೊರೆಯ ಸನ್ನಿಧಿಯೊಳು ನಿಲಲು ॥
ಅರಸನದೇರಬೇಕೆಂದು ತನ್ನಿಕಟಕ್ಕೆ । ಬರಲು ಕರದಿ ಪಿಡಿದರಸ ! ॥ ೩೯ ॥

ಎತ್ತಿಕೊಂಡೊಯ್ವಾಗ ದೊರೆದೊರೆಗಳು ಬಂದು । ಹತ್ತಿರ ಸಾರಲಾ ಗಜವು ॥
ಕುತ್ತಿ ಕೆಡಹಿ ಕಾಲೊಳೊರಸಿ ಕೊಲ್ಲುತಲಿದೆ । ಚಿತ್ತೈಸು ಜೀಯ ! ಎಂದೆನಲು ॥ ೪೦ ॥

ಸಿಡಿಲ ಧ್ವನಿಯ ಕೇಳ್ದ ಸಿಂಹನ ಮರಿಯಂತೆ । ಖಡುಗವನೊರೆಯಿಂದಲುರ್ಚಿ ॥
ಘುಡುಘುಡಿಸುತ ಹತ್ತು ಸಾಸಿರ ಕರಿಗೂಡಿ । ನಡೆದು ಬಂದನು ನಾಗನೆಡೆಗೆ ॥ ೪೧ ॥

ಹೆಣ್ಣಾನೆಗಳನು ಕರಿಪತಿಯ ಸುತ್ತಲು । ಪಣ್ಣಿಪಣ್ಣೆಯೊಳು ತಾ ನಿಲಿಸಿ ॥
ಹಣ್ಣಿಸಿದನು ನಾಲ್ಕು ಕಾಲಿಗೆ ನಿಗಳವ । ತಣ್ಣಗಾಯಿತು ಕೋಪವೆಂದು ॥ ೪೨ ॥

ಕರಿಪತಿ ಸುಮ್ಮನಿದ್ದಾ ನಿಗಳಗಳನು । ಹರಿದು ಬೃಂಹಿಸಲಾನೆವಿಂಡು ॥
ಹರಿಯ ಧ್ವನಿಯೊ ಎಂದು ದಿಕ್ಕು ದಿಕ್ಕಿನೊಳಾಗ । ಬಿರುತೋಡಿತದನೇನೆಂಬೆ ॥ ೪೩ ॥

ಅದ ಕಂಡು ಕುವರನು ಮೂವತ್ತು ಸಾಸಿರ । ಮದದಂತಿಯನಿದಿರ್ಮಾಡಿ ॥
ತ್ರಿದಶ ಗಜದ ಮೇಲೆ ಬರುತಿರೆ ಕರಿ ಕಂಡು । ಪದಿಮೂರು ಮೊಗವನು ತಾಳಿ ॥ ೪೪ ॥

ದಂತದೆಡೆಯೊಳು ಮಂದರನನು ಸಿಲುಕಿಸಿ । ದಂತೀಂದ್ರ ಕಡು ಕೋಪದಿಂದ ॥
ಮುಂತಿರ್ದ ಗಜವನು ತಿವಿತಿವಿದವನಿಲಿ- । ಯಂತಕನಂತೆ ಕೆಡಹಿತು ॥ ೪೫ ॥

ಶುಂಡಿಲಿಂದೆ ಕರಿಗಳ ಕಾಲಪಿಡಿದು ಮಾ- । ರ್ತಂಡ ಪಥಕೆ ತೆಗೆತೆಗೆದು ॥
ಗುಂಡುಗಳನು ಭಾರಣೆಗಾರನಿಡುವೊಲ್ವೇ- । ತಂಡ ಚೆಂಡಾಡಿದುದಾಗ ॥ ೪೬ ॥

ಸುರಪ ಕಾಂಡವವನವನು ಮೇಯಲು ಬಂದ । ಗಿರಿಯ ರಟ್ಟೆಗಳ ಹೊಡೆಯಲು ॥
ಭರದಿ ಭೋರಿಡುತ ಬೀಳ್ವಂತೆ ಹರಣಹಾರಿ । ಧರೆಗೆ ಬಿದ್ದವು ಥಬ್ಬೆನುತ ॥ ೪೭ ॥

ಮೇಲಿಕ್ಕಿ ಬರುವಾನೆ ಮೊಗದೊಳು ತಿವಿಯಲು । ಜಾಳಾಂಧರ ತೆರದಂತೆ ॥
ಭಾಳದೊಳನಿತು ವೆಜ್ಜಗಳು ತುಂಬಿದವಲ್ಲಿ । ಸಾಲುರಕ್ತದ ಕೋಡಿ ಹರಿಯೆ ॥ ೪೮ ॥

ಒದಗಿಂದ ಪೋಗಿ ಕುಂಜರಗಳ ಪೃಷ್ಠವ । ರದನದಿಂ ತಿವಿಯೆ ಮುಗ್ಗುರಿಸಿ ॥
ರದನವನೂರಿ ಕರಣಗೊಂಬಂದದಿ । ಮದದಂತಿಗಳುರುಳಿದವು ॥ ೪೯ ॥

ಬೆನ್ನಟ್ಟಿ ಗಜಗಳ ತಿವಿಯಲವರುಗಳ । ಬೆನ್ನೊಳಗೈವತ್ತಸಾಲ್ಕು ॥
ಉನ್ನತ ರದನ ಮೂಡಲು ಬಲ್ಗಾಬರಿಯಾಗಿ । ತಾಂ ನೆರೆ ಕೆಡೆದವಿಳೆಯೊಳು ॥ ೫೦ ॥

ಬಲುಹಿಂದ ಬೃಂಹಿಸೆ ಕರಿಪತಿ ಗಜಗಳು । ಹುಲಿಯ ಧ್ವನಿಯ ಕೇಳ್ದ ಪಶುವು ॥
ತಲೆಬಾಲಗೆಟ್ಟು ಝಲ್ಲನೆ ಬೆದರ್ವಂದದಿ । ಪಲವು ದಿಕ್ಕಿಗೆಯಾಗ ಬೆದರಿ ॥ ೫೧ ॥

ಮನೆಯೆನ್ನದೆ ಇದು ಮಾಳಿಗೆಯೆನ್ನದೆ । ಮಿನುಗುವ ಗುಡಿಗಳೆಂದೆನದೆ ॥
ಘನವಾಗಿ ತಿವಿದು ಕೆಡಹಿಕೊಂಡರಚುತ । ಮನಕಂದಿ ಮುಂದೆ ಸಾಗಿದವು ॥ ೫೨ ॥

ಜಲವೆಲ್ಲ ಬತ್ತಿಪೋಗಲು ಒಳಗಿರುತಿರ್ದ । ಜಲಚರ ಮಿಡುಕುವಂದದೊಳು ॥
ಪಲವಾನೆಗಳೋಡಲು ರತ್ನಮಾಲಿಯು । ಪಲಬುತ ಬಂಬಲು ಬಾಡಿ ॥ ೫೩ ॥

ಬೆಮರೇರಿ ಮೈಯೊಳು ಗಡಗುಟ್ಟಿ ನಡುಗುತ । ಅಮರ ಗಜವ ಕಂಡು ತಾನು ॥
ತೆಮಳುತ ಕಾಲು ಬಾರದೆಯಿರುತಿರೆ ಕಂಡು । ಭ್ರಮೆಗೊಂಡು ಪುರಜನವೆಲ್ಲ ॥ ೫೪ ॥

ಅಯ್ಯೊಯ್ಯೋ ! ಸಿಕ್ಕಿದ ಸಿಕ್ಕಿದ ಕುವರನು । ದೈವವೇ ! ಬಿಡಿಸುವರಿಲ್ಲ ॥
ಕೈಯ್ಯಾರೆ ಕೊಟ್ಟಂತಾಯಿತಕಟವೆಂದು । ಹುಯ್ಯಲಿಡುತ ಬಾಯ ಬಿಡುತ ॥ ೫೫ ॥

ವನಗಜ ಬಂದು ನಿಲುವುದೆತ್ತ ರಾಜನು । ಕೊನೆಗಣ್ಣಿನಿಂ ನೋಡಲೆತ್ತ ॥
ಮನವೇರುವೆನೆಂಬುದೆತ್ತಲೀ ಗಜವು ತಾ । ಮನುಜೇಶನನೆತ್ತಿಕೊಂಡು ॥ ೫೬ ॥

ಶಂಕೆಯಿಲ್ಲದೆ ಪುರವನು ಗೋಳಿಡಿಸುತ । ಮುಂಕೊಂಡು ಬಂದ ಭಟರನು ॥
ಭೋಂಕನೆ ತಿವಿದು ಕೆಡಹುತಲಿದೀ ಗಜ । ಏಂ ಕಡು ಪಾಪಿಯೋ ಅಕಟ ! ॥ ೫೭ ॥

ಅರಸಿನ ಪೂರ್ವಜನ್ಮದ ವೈರಿಯೊ ತಾನು । ಕರಿಯಾಕಾರದಿ ಬಂದು ॥
ಭರದಿ ಪಿಡಿದು ಕೊಂಡೊಯ್ವುದಲ್ಲದೊಡೀ । ಕರಿಗಿಷ್ಟು ಸಾಮರ್ಥ್ಯಮುಂಟೆ ? ॥ ೫೮ ॥

ಇಂದಿಂತು ಪುರಜನ ಮರುಗುತಿರಲು ಕೆಲ- । ರೆಂದರು ಹೆಣ್ಣ ಕೊಡದಿರೆ ॥
ದಂಡತ್ಯ ಮಾಡುತ ನಾಡು-ಬೀಡುಗಳನು । ಬಂದೀ ಪುರದ ಭೂಭುಜನ ॥ ೫೯ ॥

ತಗುಳಿದ ಪಾಪದಿಂದೀ ಭೂನಾಥಗೆ । ಮಿಗೆ ಇದು ಒದ್ದಿತೆ ಏನು ॥
ಪಗೆವರಾಕ್ರಮಿಸಿ ದೇಶವನೆಲ್ಲ ಕೊಂಬರು । ಜಗ ಬಾಯಿದೆರೆದು ನುಂಗುವುದು ॥ ೬೦ ॥

‘ಪರರ ಕೆಡಿಸುವ ದುಷ್ಟನು ತಾ ಕೆಡುವನೆಂಬ । ಹಿರಿಯರ ವಾಕ್ಯ ತಪ್ಪುಗುಮೇ ? ॥
‘ನಿರುತದಿ ಬಡವನ ಬಲ್ಲಿದ ಕೆಡಿಸಲು । ಮುರಿದು ನುಂಗದೆ ದೈವವವನ’ ॥ ೬೧ ॥

ಎನುತೆಲ್ಲ ಬಲ್ಲ ವಿವೇಕಿಗಳಾಡುತ । ಮನದೊಳಗಳಲುತಲಿರಲು ॥
ವನಗಜ ಘರ್ಜಿಸಿ ಮುಂದಕ್ಕೈತರುತಿರೆ । ಮಾನಹೀನನು ರತ್ನಮಾಲಿ ॥ ೬೨ ॥

ಬರ್ಪ ಗಜವ ಕಂಡು ಬಾಯನು ಬಿಡುತಾಗ । ಮುಪ್ಪಾದಂತೆ ತೆವಳುತ ॥
ತಿಪ್ಪೆಯ ಹಳ್ಳದ ಸೇರೊಳು ಕೆಡದವ । ಸೊಪ್ಪುಸದೆಯ ಕಾಚಿಕೊಂಡು ॥ ೬೩ ॥

ಕರಿರಾಜ ಕಂಡು ಗಕ್ಕನೆ ಹಿಮ್ಮೆಟ್ಟಿ ತಾ । ಬರುತಿರೆ ರಾಜವೀಥಿಯೊಳು ॥
ಮೊರೆಯಿಟ್ಟು ಕೆಟ್ಟೆವೆನುತ ಬಸಿರ್ಪೊಸೆವುತ । ಮರುಗುತ ಕಣ್ಣನು ಬಿಡುತ ॥ ೬೪ ॥

ಬೀಳುತಲೇಳುತ ತೆವಳುತ ಕೊರಚುತ । ಗೋಳಿಟ್ಟು ಬೊಬ್ಬೆಹೊಡೆವುತ ॥
ತೂಳುವೆದ್ದವರಂತೆ ಚಾರಿವರಿವುತಾಗ । ಸೀಳಿಹೋದವು ವಸ್ತ್ರವರಿಯೆ ॥ ೬೫ ॥

ತಲೆಯ ಕೆದರಿಕೊಂಡು ಮರುಳುಗಳಂದದಿ । ಪಲಬುತ ಕೇರಿಕೇರಿಯೊಳು ॥
ಹೊಲಬುಗೆಟ್ಟಾಗೋಡಿಯಾಡುವ ಜನಗಳ । ಕಲಕಲರವ ಪೊಣ್ಮಿಹುದು ॥ ೬೬ ॥

ಇದೆ ಬಂತದೆ ಬಂತು ! ಇದಕೊ ಅದಕೊ ಬಂತು ! । ಅದೆ ನೋಡಿದೆ ನೋಡೆಂದು ॥
ಬೆದರಿ ಭೋ ಭೋ ! ಎಂದುಲಿವಾರ್ಭಟೆಯು ತಾ । ಪದಪಿಂದೂರೊಳು ತುಂಬಿಹುದು ॥

ಸೊಕ್ಕಿದಾನೆಯು ಕೊಲ್ಲುತ ಬರುತಿದೆ ಚಿಕ್ಕ- । ಮಕ್ಕಳ ತೆಗೆತೆಗೆ ಬೇಗ ॥
ಇಕ್ಕಿ ಬಾಗಿಲುಗಳ ಓಡಿಹೋಗಿರೊ ಎಂಬ । ವೊಕ್ಕಳ ರವ ತುಂಬಿಹುದು ॥ ೬೮ ॥

ಹಡಪವನೀಡಾಡಿ ಚಿನ್ನರಡರೆತವ್ಮ್ರ। ಮಡಿಲೊಳಗಿಹ ಹೊನ್ನು ಹಣವ ॥
ನಡು ಬೀದಿಯೊಳು ಚೆಲ್ಲಿಯಾಡುತ ಭಯದಿಂದ। ಅಡಿಯಿಟ್ಟರು ದಿಕ್ಕುದೆಸೆಗೆ ॥ ೬೯ ॥

ಮಡಗಿರ್ದ ಪಸರವ ನೋಡದೆಯಂಗಡಿ । ತಡಿಕೆಗಳಿಕ್ಕದೆ ಭಯದಿ ॥
ಪಡೆದೊಡವೆಯನೀಡಾಡುತಂಗಡಿಕಾರ- । ರಡಿಯಿಟ್ಟರು ಬೇಗ ಬೇಗ ॥ ೭೦ ॥

ಪಟ್ಟೆಯ ಸುರುಳನು ತೆಗೆತೆಗೆದುದ್ದಕ್ಕೆ । ಇಟ್ಟಾಡಲಾ ಕರಿವರನು ॥
ಕಟ್ಟಿತೋ ಪಲವಣ್ಣ ಮೇಘ ಬಾನದೊಳೆನೆ । ತೆಟ್ಟೆ ತೆಟ್ಟೆಯೊಳು ತೋರಿದುದು ॥ ೭೧ ॥

ಸಾಮಜ ಒದಗಿ ಬರಲು ಡೊಳ್ಳುಹೊಟ್ಟೆಯ । ಕೋಮಟಿಗನು ಓಡುವುದಕೆ ॥
ಪಾಮರಿಯಾಗಿ ಹಲ್ಲನು ಕಪಿಯಂದದಿ । ಸಾಮಜಕಿದಿರು ಕಿರಿವುತ ॥ ೭೨ ॥

ಕಂಕುಳೊಳಾಂಕಿದ ಕಡಿತ ಕಳೆದು ನೆಲ- । ಸೋಂಕಿಯು ಕೆದರಿಕೊಂಡಿರಲು ॥
ಝುಂಕಿಸುತಾನೆಯಟ್ಟಲು ಧೋತ್ರದೊಳು ತಾ । ಭೋಂಕನುಚ್ಚಿದನು ಚಿರ್ರೆಂದು ॥ ೭೩ ॥

ತೊಡೆಯೊಳಿಳಿದು ಬರುವ ಪಡಿಕೆಗೆ ಕೈಯ । ಕಡುಲೋಭದಿಂದಿಕ್ಕಿಕ್ಕಿ ॥
ಬಿಡದೆ ಮೂಸುವ ಕೋಮಟಿಗನ ಕಂಡಾನೆ- । ಯಡಿಯಿಡದತ್ತಿತ್ತ ತಿರುಗಿ ॥ ೭೪ ॥

ಘುಟ್ಟಿವಾಳರ ಕೇರಿಗೈತಂದರು ಪಸ- । ರ್ವಿಟ್ಟಿರ್ದ ಗಂಧಪುಡಿಗಳ ॥
ಪೆಟ್ಟಿಗೆ ಪೆಟ್ಟಿಗೆಗಳನೆಲ್ಲ ತೆಗೆದಾ- । ಗಿಟ್ಟಾಡಿತಾಗಸಕಾಗಿ ॥ ೭೫ ॥

ದಶದಿಕ್ಕುಗಳನು ಗಂಧವುಡಿಯದೊಂದು । ಹೊಸ ಪರಿಮಳವನು ಎಲರು ॥
ಹಸನಾಗಿ ತುಂಬಲು 'ಗಂಧವಹಾ' ಎಂಬ । ಪೆಸರಾಯ್ತು ಗಾಳಿಗಂದಿಂದ ॥ ೭೬ ॥

ಮಾಲೆಗಾರರದೊಂದು ಕೇರಿಗಾಗಾನೆಯು । ಲೀಲೆಯಿಂ ಬರುತಿರೆ ಕಂಡು ॥
ಮೇಲು ಸೆರಗು ಜಾರಿದುದವರರಿಯದೆ । ಮಾಲೆಗಾತಿಯರೋಡಿದರು ॥ ೭೭ ॥

ಪರಿಮಳಮಯವಾದ ಪೂಸರಗಳನಾಗ । ಕರದಿತ್ತತ್ತ ಕೆದರುತ ॥
ತರಣಿಪಥಕೆ ಪೊಟ್ಟಣ ಪೊಟ್ಟಣವೆತ್ತಿ । ಕರಿವರನೀಡಾಡಿದುದು ॥ ೭೮ ॥

ಅಂಬುಜ ನೈದಿಲು ಪರಿಮಳದರಳುಗ- । ಳಂಬರದೊಳು ಕೆದರಿಹವು ॥
ಇಂಬಿನಿಂ ಪಗಲೊಳು ರವಿ-ಶಶಿ ತಾರಗೆ । ಕುಂಭಿನಿಯೊಳು ತೋರುವಂತೆ ॥ ೭೯ ॥

ಸುರರು ತಮ್ಮಯ ಸ್ವಗೃಹದಿ ಜಿಸನ ಮುಂದೆ । ಪರಿಮಳದರಳನು ಸೂಸಿ ॥
ಧರೆಗಿಳಿತರುತಿರ್ದವೋ ಎಂಬಂದದಿಂ- । ದರಳು ಪಟ್ಟಣವ ತುಂಬಿದವು ॥ ೮೦ ॥

ಸೂಳೆಯರ್ಕೇರಿಯತ್ತಲು ನಾಗ ಮುಖಸಾಗಿ । ಲೀಲೆಯಿಂ ಬರುತಿರೆ ಕಂಡು ॥
ಜಾಲವರಿಯುತಲಿ ಮುದಿಪಾಮರಿಯರಾಗ । ಏಳಿ ಬಂದಿತು ನಾಗನೆಂದು ॥ ೮೧ ॥

ಮಡಿಲ ಬಡಿವುತಿರೆ ಬಿರ್ದ ಮೊಲೆಗಳಾಗ । ಎಡಹುತ ಮೊಲೆ ರವಕೆಯಲಿ ॥
ಗಿಡಿವುತ ತೆಗೆ ತೆಗೆದೆಡದ ಕೈಯೊಳು ಬೇಗ । ಅಡಿಯಿಡುತಿಹರು ಸೂಳೆಯರು ॥ ೮೨ ॥

ವೊಲೆ ಬಿರ್ದು ಹಂಜಿಯಂದದಿ ತಲೆ ನೆರೆತಿನ್ನು । ಸುಲಿವುದ ಬಿಡರಿವರೆಂದು ॥
ಬಲುಹಿಂದ ಗಡಿಯ ದಾಂಟಿಸುವಂತೆ ಸೂಳೆರ । ಘಳಿಲನೆ ತಗುಳಿದುದಾನೆ ॥ ೮೩ ॥

ಇದಿರ ಮನೆಯ ತಿವಿಯಲು ಸೂಳೆಯೋರ್ವಳು । ಬೆದರಿಯೋಡಲು ಕಂಕುಳೊಳಗೆ ॥
ಮುದಿ ಮಿಂಡ ಹರಕು ಚಾಪೆಯನೌಂಚಿ ಸುರತಕೆ । ಸುದತಿಯ ಪಿಂತೆಯೋಡಿದರು ॥ ೮೪ ॥

ಬೇಕಾದಷ್ಟು ಹಣವ ಸುಲಿಕೊಂಡಿನ್ನು । ಬಾಕುಳಿಯಿರಗೊಡಳೆಂದು ॥
ಪಾಕುಳಗುಂಡಿಲಿ ಮುದಿ ಸೂಳೆಯರನು । ಹಾಕಿದರಾಗ ಬೋಜಗರು ॥ ೮೫ ॥

ಏನೇನ ತಂದರು ಸಾಲದೆ ಮಗಳೊಳು । ಪೀನಾಸಿಯಿರಗೊಡಳೆಂದು ॥
ಆನೆಯ ಮುಂದಕೆ ಮುದಿ ಸೂಳೆಯನೆತ್ತಿ । ತಾನಿತ್ತ ಸುಖದೊಳಗಿಹನು ॥ ೮೬ ॥

ವೊತ್ತೆ ಹೋದೀತೆಂಬ ಸಂಕಟಕಾಗೋರ್ವ । ಸುತ್ತಿರ್ದ ಚಾಪೆಯ ಹರಹಿ ॥
ಇತ್ತಿತ್ತ ಬಾರೆಂದು ಸುರತೋದ್ಯೋಗಕೆ । ಹತ್ತಿರಕವಳ ಕರೆವನು ॥ ೮೭ ॥

'ಊರಿಗುಕ್ಕೆಯ ಚಿಂತೆ ಪೋರಿಗೆ ಮದುವೆಯ । ತೋರಚಿಂತೆಯು' ಎಂಬಂತೆ ॥
ಸಾರತ್ತ ನಮಗೆ ಹರಣ ಮೇಗಣ ಚಿಂತೆ । ಗಾರಾಗಬೇಡೆಂದೊರೆವಳು ॥ ೮೮ ॥

ಸೂಳೆಗೇರಿಯ ಬಿಟ್ಟು ಕಂಚುಗಾರರದೊಂದು । ಪಾಳೆಯದತ್ತಲಾ ವ್ಯಾಲ ॥
ಲೀಲೆಯಿಂ ಬರುತಿರೆ ಕಂಚುಗಾರರದೊಂದು । ಜಾಲವ್ಯೋಡಿತು ದಿಕ್ಕುದೆಸೆಗೆ ॥ ೮೯ ॥

ಹರಹಿರ್ದ ತಳಿಗೆ ಬಟ್ಟಲು ಗಿಂಡಿ ಚೆಂಬನು । ಹರಿವಾಣ ಕನ್ನಡಿಗಳನು ॥
ಕರಿಪ ತೆಗೆದು ತೆಗೆದಾಕಾಶಕೆ ತನ್ನ । ಕರದಿಂದಲೀಡಾಡಿದುದು ॥ ೯೦ ॥

ಪೊಳೆದವಂಬರದಿ ತಳಿಗೆ ಗಿಂಡಿ ಹರಿವಾಣ । ಥಳಥಳಗುಟ್ಟಿತೆಂತೆನಲು ॥
ಜಳಜಸಖೇಂದು ತಾರಗೆ ಪುಷ್ಕರಾರ್ಧದಿಂ- । ತಿಳಿದು ಲೋಕದಿ ತೋರುವಂತೆ ॥ ೯೧ ॥

ಒಡನೆ ಶುಂಡಿಲನೆತ್ತಿ ಕರಿರಾಜ ಕೂಗುತ । ಅಡೆ ತಡೆಯಿಲ್ಲದೂರೊಳಗೆ ॥
ಅಡಿಯಿಡುತಲಿ ಮೂಡಣ ಬಾಗಿಲ ಸಾರೆ । ಪಡಿಗಳ ಹೊಜ್ಜಿರೆ ಕಂಡು ॥ ೯೨ ॥

ದಂತೀಂದ್ರ ಹೆಚ್ಚಿದ ಕೋಪದಿಂ ಪಡಿಗಳ । ದಂತಗಳಿಂದ ತಾ ತಿವಿಯೆ ॥
ತಾಂ ತಳುವದೆ ಕೊಂಡಿಗಳು ಮುರಿದುಹೋಗಿ । ಮುಂತರು ಮೂರು ಕೆಡೆದವು ॥ ೯೩ ॥

ತಳ್ಳಂಕಗೊಂಡಾ ಪುರವರಮೆಲ್ಲವು । ಡಿಳ್ಳೈಸೆ ಜಂಬೂದ್ವೀಪಗಳು ॥
ಬೆಳ್ಳಿ ಬೆಟ್ಟವು ಪೊರಮಡುವಂತೆ ಶೂರ- । ನಳ್ಳಿರಿವುತ ಪೊರಮಟ್ಟು ॥ ೯೪ ॥

ವರ ಪುಷ್ಪಪುರಕಾಗಿ ಬರುತಿರೆ ಪಥದೊಳು । ಹರಿಪುರೇಶನು ತಾನು ಕಂಡು ॥
ಕರಿಕರ ಸುರುಳಿನೊಳಿರುವ ಮಂದರನದೊಂ- । ದಿರವನು ಭಾವಿಸಿ ನೋಡಿ ॥ ೯೫ ॥

ಮುಗುಳುನಗೆಗಳಿಂದ ಭಾವನ ಕೈಹುಯ್ದು । ನಗುತಲಿಂತೆಂದು ನುಡಿದನು ॥
ಸುಗುಣಿ ಸುದರುಶನ! ನೋಡೆನ್ನಯದೊಂ- । ದಗಣಿತ ಪುಣ್ಯದುದಯವ ॥ ೯೬ ॥

ದಾನವಾರಿಯ ವಾರಣ ರೂಪ ತಾನಾಂತು । ಜ್ಞಾನಚಂದಿರ ಕುಮಾರಕನು ॥
ಶ್ರೀನಿವಾಸನು ತನ್ನ ವೈರಿ ಮಂದರನನು । ಮಾನಭಂಗವನೀಗ ಮಾಡಿ ॥ ೯೭ ॥

ಸುರುಳಿ ತನ್ನಯ ಶುಂಡಿಲನದರೊಳಗಿಟ್ಟು । ಬರುವುದ ಸಕಲ ಜನರಿಗು ॥
ಎರಕದಿಂ ತೋರಿ ತನ್ನಯ ಭಾವನು ತಾನು । ಕೊರಳುಗಳನು ತಬ್ಬಿ ನಗುತ ॥ ೯೮ ॥

ಹರುಷದಿಂದಲಿ ಬರುತಿರಲಿತ್ತ ಜ್ಞಾನೇಂದು । ಸುರದಂತಿಯ ರೂಪ ಬಿಸುಟು ॥
ನೆರೆಗಲಿ ನಿಂದುಕೊಂಡಿರಲು ಸಮಸ್ತ ಭೂ- । ವರರುಗಳೆಲ್ಲರು ಬಂದು ॥ ೯೯ ॥

ಕರಗಳ ಜೋಡಿಸಿ ಭಯದಿಂದ ಕುವರಗೆ । ಶಿರವನು ಬಾಗಿ ನಿಂದಿರಲು ॥
ಹರಿಪುರದರಸು ಸುದರುಶನರೀರ್ವರು । ಹರುಷದಿಂದಲೆ ಬಂದು ನೃಪಗೆ ॥ ೧೦೦ ॥

ಕರಗಳ ಮುಗಿದು ವಿನಯವಚನಗಳಿಂ- । ದರಸನ ತಾವು ಕೊಂಡಾಡಿ ॥
ಇರುತಿರೆ ಬಳಿಕ ಮಂದರನೊಳು ಜ್ಞಾನೇಂದು । ಒರೆದನಿಂತೆಂದು ವಿನಯುವ ॥ ೧೦೧ ॥

ಮುನಿಸನುಳಿವುದೆಲೆ ಮಂದರ ಭೂಪತಿ ! । ತಳೆವುದು ನಿನ್ನ ರಾಜ್ಯವನು ॥
ಒಳಗಾಗಿ ವಿಮಲವಾಹನನೊಳು ನಡೆವುದೆಂ- । ದಿಳೆಯಾಣ್ಮ ನುಡಿದ ನುಡಿಯನು ॥ ೧೦೨ ॥

ಮಂದರ ನೃಪ ಕೇಳಿ ಮಧುರೋಕ್ತಿಗಳಿಂ- । ತೆಂದನೆಲೆ ಸುಕುಮಾರ ! ।
ಎಂದೆಂದು ಬಿಡದೆಯಂಡಲೆವ ಕರ್ಮವ ಗೆಲ್ವ । ಬಂಧುರವಾದ ತಪವನು ॥ ೧೦೩ ॥

ಎರಕದಿಂದುರೆ ತಾಳಿ ದಿವ್ಯ ಸುಖಂಗಳ । ಹರುಷದಿಂ ಪಡೆವೆ ನಾನೆಂದು ॥
ಅರಸನ ಬಿಗಿಬಿಗಿಯಮರ್ದಪ್ಪಿ ತನ್ನಯ । ವರ ಸೂನು ಕೈಲಿಡೆಗೊಟ್ಟು ॥ ೧೦೪ ॥

ದುರುಳತನದಿ ನಾ ಮಾಡಿದ ತಪ್ಪುಂಟು । ಹರಿಪುರೇಶ್ವರ ! ನೀ ಮರೆವುದು ॥
ಮರುಕವಿರಲಿಯಾವಾಗ ನನ್ನೊಳು ಎಂದು । ಒರೆದು ಮಂದರ ಬೀಳ್ಕೊಂಡು ॥ ೧೦೫ ॥

ಸುಮತಿ ಜಿನೇಂದ್ರನ ಪಾದಸನ್ನಿಧಿಯೊಳು । ರಮಣೀಯವಾದ ಜೈನೀಯ ॥
ಅಮಲದೀಕ್ಷೆಯನಾಂತಿರಲಿತ್ತಲತ್ತಲು । ಕುಮುದ ಪಾಂಡುರಕೀರ್ತಿಯುತನು ॥ ೧೦೬ ॥

ಮಾನವೇಶ್ವರ ವಂದಿತಪಾದಪದ್ಮನು । ಮೀನಕೇತನರೂಪನಾಂತ ॥
ಜ್ಞಾನಚಂದ್ರನ ತನ್ನಯ ಪುರವರಕೆ ಸು- । ಮ್ಮಾನದಿಂ ವಿಮಲವಾಹನನು ॥ ೧೦೭ ॥

ತೆರಳಿಸಿ ಕೊಂಡುಪೋಗುತಲಿತ್ತಲತ್ತಲು । ಹರಿಪುರದೊಳು ಮಂತ್ರಿವರ್ಗ ॥
ದೊರೆ ಜ್ಞಾನಚಂದ್ರನ ಕಾರುಣ್ಯದಿಂ ನ- । ಮ್ಮರಸು ಮರಳಿ ನಮ್ಮ ಪುರಕೆ ॥ ೧೦೮ ॥

ಬರುತಿರ್ದನು ಗಡ ಎಂದು ಪಟ್ಟಣವನು । ಕರ ಚೆಲುವಾಗಿ ಸಿಂಗರಿಸಿ ॥
ಪರಿವಾರ ಪುರಜನ ಮಂತ್ರಿಗಳೆಲ್ಲರು । ಹರುಷದಿಂದಲಿ ಇದಿರ್ವರಲು ॥ ೧೦೯ ॥

ಮೊಳಗೆ ಕೋಟಾಕೋಟಿ ವಾದ್ಯದ ರವವಲ್ಲಿ । ಇಳೆಯಾಣ್ಮರು ಪುರವೊಕ್ಕು ॥
ಥಳಥಳಿಸುವ ಸೌಧಗೃಹಗಳ ನೋಡುತ । ಪುಳಕಾಂಕಿತ ಕಾಯರಾಗಿ ॥ ೧೧೦ ॥

ಎರಕದಿಂದಲೆ ಬಂದರನುನೆಯನು ಪೊಕ್ಕು । ಇರುತಿರೆ ವಿಮಲವಾಹನನು ॥
ಕರೆಯಿಸಿ ಜೋಯಿಸರನು ಮುಹೂರ್ತವ । ಭರದಿಂದ ತಾನು ನಿಶ್ಚೈಸಿ ॥ ೧೧೧ ॥

ಒಸಗೆ ವರೆಗಳು ಮೊಳಗಿದುವಾಗಲ್ಲಲ್ಲಿ । ಶಶಿಮುಖಿಯರು ಶೋಭನಗಳ ॥
ಹಸನಾಗಿ ಪಾಡುತಿರಲು ಸಿಂಹಪುರಪತಿ । ಬಿಸರುಹಾನನೆ ಕಾಮುಲತೆಯ ॥ ೧೧೨ ॥

ಅನಿಮಿಷಲೋಚನೆಯನು ವಹ್ನಿಸಾಕ್ಷಿಯಿಂ । ಕನಕಪುರಾಧಿನಾಯಕಗೆ ॥
ಮನದಕ್ಕರಿಂದ ಕೈಧಾರೆಯನೆರೆದನು । ಕನಕವಾಲುಕವ ತಾನಿತ್ತಿ ॥ ೧೧೩ ॥

ಇಂತು ಕೈಧಾರೆಯನೆರೆಯಿಸಿಕೊಂಡಾಗ । ಕಂತು ಸದೃಶ ಜ್ಞಾನಚಂದ್ರ ॥
ಸಂತೋಷದಿಂ ಕಾಮುಲತೆಯೊಡಗೂಡಿ ನಿ- । ಶ್ಚಿಂತೆಯಿಂ ಸುಖವಾಗಿಹನು ॥ ೧೧೪ ॥

ಧರಣೀಶ್ವರರ ಮುಕುಟತಟಿತಪಾದ- । ನರುಹನ ಪದಪದ್ಮ ಭೃಂಗ ॥
ಚೆರಿತು ಮೆರೆವ ವೈರಿ ರಾಯರಿಗೆದೆಕೊಂತ । ನೆರೆಗಲಿ ಜ್ಞಾನೇಂದೊಪ್ಪಿದನು ॥ ೧೧೫ ॥

**॥ ಅಂತು ಸಂಧಿ ೧೪ಕ್ಕಂ ಪದ ೨೦೪೭ಕ್ಕಂ ಮಂಗಲಂ ॥**

## ಸಿಂಧೂದೇವಿಯ ರೂಪಾತಿಶಯ.

ಸಿಂಧೂದೇವಿಯ ಚೆಲುವಿಕೆಯ ಪಾಠಕ ನೃ- । ಪೇಂದುವಿಗೊರೆದುದ ಪೇಳ್ವೆ ॥ ಪ ॥

ಸಕಲವಿಮಲಕೇವಲಬೋಧದಿಂದ ತಾ । ಸಕಲ ಲೋಕದ ಭವ್ಯ ಜನಕೆ ॥
ಪ್ರಕಟಿಸಿ ಜೀವತತ್ತ್ವವ ಪೇಳ್ದ **ಶಾಂತೀಶ** ! । ಮುಕುತಿಪಥವ ತೋರಿಸೆನಗೆ ॥ ೧ ॥

ಜಿನಚಂದ್ರತನುಜಾತ ವಿಮಲವಾಹನನಾಗ । ಕನಕಪೀಠದೊಳು ಕುಳ್ಳಿರಿಸಿ ॥
ಮಿನುಗುವ ಮಕುಟವ ಮಸ್ತಕದೊಳಗಿಟ್ಟು । ಮನದಕ್ಕರಿಂ ಹರಿಪುರದ ॥ ೨ ॥

ಅರಸುತನವ ಸಮಸ್ತ ಭೂಪಾಲರ ಮುಂದೆ । ನರನಾಥ ಚಂದ್ರಮುಗಿತ್ತು ॥
ಕರೆಯಿಸಿ ರತ್ನಮಾಲೆಯ ಚಕ್ರಪುರವಿತ್ತು । ಹರುಷದಿಂದಲಿ ಬೀಳ್ಕೊಟ್ಟು ॥ ೩ ॥

ಸಕಲ ಭೂಪಾಲರಿಗುಡುಗೊರೆಗಳನಿ- । ತ್ತಕಲಂಕತೇಜ ಜ್ಞಾನೇಂದು ॥
ವಿಕಸಿತ ವದನನು ವಿನಯದಿಂ ಕಳುಹಿಸಿ । ಸುಖದೊಳೋಲಾಡುತಲಿರ್ದು ॥ ೪ ॥

ಒಂದಾನೊಂದು ಪಗಲು ಧರಣೀಶ್ವರ- । ವೃಂದ ಬಳಸಿಕೊಂಡಿರಲು ॥
ಸೌಂದರಾಂಗನು ಹರಿವಿಷ್ಟರದೊಳು ಜ್ಞಾ- । ನೇಂದು ಓಲಗಗೊಟ್ಟಿರಲು ॥ ೫ ॥

ಆ ವೇಳೆಯೊಳು ಓರ್ವ ಪಾಠಕನೈತಂದು । ಭೂವರಗಿದಿರಾಗಿ ನಿಂತು ॥
ಶೀವಿದ ಹರ್ಷದಿಂದಲೆ ಕೈಯ ಮುಗಿದಾಗ । ಭಾವಜ್ಞನ ಕೊಂಡಾಡಿದನು ॥ ೬ ॥

ಅರಿರಾಯ ಗಜ ಕಂಠೀರವನೇರಿದ । ದೊರೆ ರಾಯ ಕಮಲಮಾರ್ತಾಂಡ ॥
ಧುರದೊಳಗಿದಿರಾದ ರಾಯ ಮಸ್ತಕ ಶೂಲ ! । ಸುರಭೂರುಹನರ್ತಿ ಜನಕೆ ॥ ೭ ॥

ಜಿನಮತ ವಾರ್ಧಿವರ್ಧನ ಸುಧಾಸೂತಿ- । ಯನುಪಮ ಗುಣಗಣಾಭರಣ ! ॥
ಮನಸಿಜ ಸಮರೂಪ ಸರ್ವ ಕಲಾಧರ ! । ಕನಕಾದ್ರಿ ಸನ್ನಿಭ ಧೈರ್ಯ ! ॥ ೮ ॥

ಭರತ ಸಂಗೀತ ಸಾಹಿತ್ಯದ ನೆರೆ ಜಾಣ, । ಶರಧಿಗಧಿಕಗಾಂಭೀರ್ಯ ॥
ಪರಪುರುಷಾರ್ಥ ಚಿಂತಾಮಣಿ ! ನಿನಗಿನ್ನು । ಧರೆಯೊಳಗೆಣೆ ಯಾರುಂಟು ॥ ೯ ॥

ಎಂದಿವು ಮೊದಲಾದ ಪಲವು ನುತಿಗಳಾ- । ನಂದದಿಂ ಬಲಗೈಯನೆತ್ತಿ ॥
ಚಂದ ಚಂದದಿ ಕೊಂಡಾಡುತಲಿರೆ ಬೋ- । ಧೇಂದುವಿನೊಡನಿಂತು ನುಡಿದ ॥ ೧೦ ॥

ಎಲೆ ಮಾನಧನ ! ಕೇಳಾವಾವ ದೇಶವ । ನಲವಿಂದ ನೀ ಪೊಕ್ಕು ಬಂದೆ ॥
ಅಲಸದೆ ಪೇಳಲ್ಲಿರ್ದ ಕೌತುಕವನು । ಇಳೆಯಾಣ್ಮ ಕೇಳೆ ಪಾಠಕನು ॥ ೧೧ ॥

ನರನಾಥ ! ಕೇಳಂಗದೇಶದಿ ರಾಜಿಪ । ವರ ದೇವಕೂಟದಿ ಮೆರೆವ ॥
ಸುರಪುರಕೆಣೆಯೆನಿಸುವ ಶ್ರೀಪುರವೆಂ- । ಬುರುತರ ಪಟ್ಟಣವುಂಟು ॥ ೧೨ ॥

ಅದನಾಳ್ವ ಸಕಲಗುಣಾಭರಣಾಂಕಿತ । ಮದನ ಸಮಾನ ಚೆನ್ನಿಗನು ॥
ಉದಿತ ಪರಾಕ್ರಮಿ ಜಯಸೇನನೆಂಬೋರ್ವ- । ನದಟನೊಪ್ಪಿದನಾ ನೃಪನೆ ॥ ॥ ೧೩ ॥

ಸುರುಚಿರ ಶೃಂಗಾರೆ, ಸುರಸತಿ ಸಮರೂಪೆ । ನೆರೆ ಪುಣ್ಯವಂತೆ ಸುಶೀಲೆ ॥
ಗರುವೆ ಪುರುಷಭಕ್ತೆ ಮದನಮಂಜೂಷೆಯೆಂ- । ಬರಸಿಯೊಪ್ಪಿಹಳು ಲೀಲೆಯೊಳು ॥
ಅವರೀರ್ವರ ಗರ್ಭದೊಳು ಪುಟ್ಟಿದಳೋರ್ವ । ನವಕುವಲಯ ಸುಗಂಧಿ ॥
ಭುವನವಿಖ್ಯಾತೆ ತನ್ನಯದೊಂದು ರೂಪಿಂದ । ದಿವಿಜ ಕನ್ನೆಯರ ಜರೆವಳು ॥ ೧೪ ॥

ಅವಳಿಗೆ ನಾಮವ ಸಿಂಧುದೇವಿಯುಮೆಂದು । ಕವಿಜನವಿಟ್ಟು ಕರೆವುದು ॥
ಅವಳು ವೀಣಾವಾದ್ಯವಾದನಕೋವಿದೆ । ನವ ಯೌವನೆಯು ಸುಜಾಣೆ ॥ ೧೫ ॥

ವೀಣೆಯನವಳ ಕೈಯಿಂದಲುವಾಗಲಾ । ವಾಣಿ ಕಲಿವಳೆಂದೆನಲು ॥
ಜಾಣೆಯೆಂಬುದನಾನೇನ ಪೇಳಲಿ ರಾಯ । ಜಾಣೆಯರೊಳಗತಿ ಜಾಣೆ ॥ ೧೬ ॥

ಸ್ವರವೆತ್ತಿಯಾಳಾಪವ ಮಾಡಿದಳಾಕೆ । ಪರಪುಟ್ಟ ನಾಣ್ಚಿ ಮಾನವನು ॥
ಧರಿಸಿಕೊಂಡಿರುವುದವಳ ನುಡಿಯನು ಕೇಳಿ- । ಯರಗಿಳಿ ಕೊರಗಿಕೊಂಡಿಹವು ॥ ೧೭ ॥

ತರುಣಿಯ ಪಾದದಿ ಕೇಶಪರ್ಯಂತರ- । ವೊರವೆನು ನನ್ನ ಬಲ್ಲನಿತ ॥
ದೊರೆಗಳ ದೇವ ! ನೀ ಲಾಲಿಸೆಂದವನಾಗ । ಎರಕದಿಂದುಸುರ್ದನಿಂತೆಂದು ॥ ೧೮ ॥

ಕಡು ರಂಗುವಡೆದಶೋಕೆಯ ತಳಿರುಗಳೊಳು । ಬಿಡದೆ ರಾಜಿಪ ಕೆಂಪು ಮೃದುವ ॥
ಮಡದಿಯ ಪದತಳದರುಣ ಮೃದುತ್ವವು । ಪೊಡವಿಪ ! ಜರೆದು ರಾಜಿಪವು ॥ ೨೦ ॥

ಮಡದಿ ನಿನ್ನಯ ಕಡೆಗಣ್ಗಳ ಕಾಂತಿಯು । ಕೊಡು ನಮಗೆಂದುಡುತತಿಯು ॥
ಅಡಿಗೆರಗಿದವೆಂದೆನೆ ಸಾಲುಗೊಂಡಾ । ಮಡದಿಯ ಕಾಲುಗುರಿಹವು ॥ ೨೧ ॥

ಗರುವೆಯ ಮೇಗಾಲುನ್ನತಿಯನು ಕಂಡು । ನೆರೆ ನಾಣ್ಚಿ ಕಮಠ ತಾನಾಗ ॥
ಕೊರಗಿ ಬೆನ್ನೊಡಲನು ಮಾಡಿಕೊಂಡದರೊಳು । ಶಿರವ ಮರೆಸಿಕೊಂಡಿಹುದು ॥ ೨೨ ॥

ಕಡು ಸಂಯಮಿಗಳೆಂಬ ಪಕ್ಷಿಯ ತಲೆಯನು । ಒಡೆಯಲೆಸೆಯಲೆಂದು ಮದನ ॥
ಪಿಡಿದಿರ್ದ ಸ್ವರ್ಣದ ಮೀಂಟೆಗಳನು ಗೆದ್ದ । ಮಡದಿಯ ಹರಡು ರಾಜಿಪವು ॥ ೨೩ ॥

ಕ್ಷೋಣಿಯ ಜನಗಳ ಕಟ್ಟುರ್ಚಿಸೆಯಲೆಂದು । ಬಾಣಪಂಚಕನೈಸರಲ ॥
ಜಾಣಿಂದ ತುಂಬುವ ತೂಣೀರವನು ಗೆದ್ದು । ಜಾಣೆಯ ಕಿರುದೊಡೆಯಿಹವು ॥ ೨೪ ॥

ಸ್ಮರರತಿ ಈರ್ವರು ಮಧುಪಾನವ ತುಂಬಿ । ಹರುಷದಿಂದೀಟುವೆನೆಂದು ॥
ಕರವೊಳು ಪಿಡಿದು ಸುವರ್ಣದ ಬಟ್ಟಲ । ಜರಿದವಂಗನೆಯ ಗುಲ್ಫಗಳು ॥ ೨೫ ॥

ಕದಳಿಗಂಬಗಳನು ಸ್ಮರ ಜಗಜಟ್ಟಿಯು । ಒದವಿದ ಮಲ್ಲಗಂಬವನು ॥
ಸುದತಿಯ ಕಡು ಉರುಟಾದ ನುಣ್ದೊಡೆಗಳು । ಮೊದೆವು ಸೂಂಕುವುವು ಚೆಲ್ವಿಂದ ॥ ೨೬ ॥

ಸರಸಿಜ ಸಂಭವನವಳಂಗದೊಳಿರ್ದ । ಸುರಭಿಗೆ ವಿಟಸರ್ಪಗಳು ॥
ಬರಬಾರದೆಂದು ಮಂತ್ರಿಸಿ ಮೂರೇಖೆಯ । ಒರೆದಂತೆ ತ್ರಿವಳಿ ರಾಜಿಪವು ॥ ೨೭ ॥

ಮಳಲಗುಪ್ಪೆಗಳೋ, ಮನ್ಮಥನ ಪೂದೇರಿನ । ಪೊಳೆದು ರಾಜಿಪ ಚಕ್ರಯುಗವೋ ॥
ನಳಿನಾಸ್ತ್ರನೇರುವ ಗಜಕುಂಭಯುಗಳವೋ । ನಳಿನ ನೇತ್ರೆಯ ನಿತಂಬಗಳೋ ॥ ೨೮ ॥

ಮಡದಿಯುರುಗಳಾಸೆ ನಮಗಿಲ್ಲವೆಂದೆಂಬ । ಕಡು ಸಂಯಮಿಗಳೆಂಬ ಗಜವ ॥
ಬಿಡದೆ ಸೀಳುವ ಮೃಗೇಂದ್ರ ಮಧ್ಯವನಾ । ಮಡದಿಯ ನಡು ನಗುತಿಹುದು ॥ ೨೯ ॥

ಸರಸಿಜಭವ ನರರೂಪ ತಿದ್ದುವೆನೆಂದು । ವರ ಲಾವಣ್ಯ ರಸವನು ॥
ಎರಕದಿಂದಲೆ ತೀವಿದ ವೃತ್ತಕೂಪವ । ತರುಣಿಯ ನಾಭಿ ಜರಿವುದು ॥ ೩೦ ॥

ಸುಳಿನಾಭಿ ಎಂಬ ಕಾಸಾರದೊಳಗೆ ಇರ್ದ । ನಳಿನಕೆರಗಿ ಮೇಲಕೇಳ್ವ ॥
ಅಳಿವಿಂಡುಗಳ ಶ್ರೇಣಿಯೋ ತಾನೆಂಬಂತೆ । ಪೊಳೆವುದವಳ ರೋಮರಾಜಿ ॥ ೩೧ ॥

ಹರಿಸೂನು ಬಿನದಕೆ ಹರಿಸಾಡುವ ಹೊನ್ನ । ಕರ ಚೆಲುವಾದ ಬುಗರಿಯ ॥
ಅರುಣ ಸಹಸ್ರಪತ್ರದ ತೋರಮೊಗ್ಗೆಯ । ಜರಿದವು ಕುಚ ಕೋಮಲೆಯ ॥ ೩೨ ॥

ಹರುಷದಿಂದಲೆ ಸಿರಿದೇವಿ ತಾನಾಡುವ । ಕರ ಚೆಲುವಾದ ಕನಕದ ॥
ವರ ವೆತ್ತವಲಗೆಯೋ ಎಂಬಂತೆ ತರುಣಿಯ । ಸುರುಚಿರ ಹಿಂಭಾಗವಿಹುದು ॥ ೩೩ ॥

ಅಂಗಜ ತನಗಿದಿರಾದ ವಿರಕ್ತರ । ಪಿಂಗದೆ ಕಟ್ಟಿ ಕೆಡಹುವ ॥
ರಂಗುಧಾಳಿಪ ಮೋಹನ ಪಾಶವ ಗೆ- । ಲ್ದಂಗನೆ ದುಂಡುದೋಳಿಹವು ॥ ೩೪ ॥

ಅರುಣತಾವರೆಗಳೆಸಳ ತುದಿಗಳೊಳು ತಾ । ಮೆರೆವ ಮಂಜಿನ ಪನಿಯಂತೆ ॥
ಗರುವೆಯ ಚಾರುಹಸ್ತದೊಳು ರಾರಾಜಿಪ । ವರ ನಖ ಥಳಥಳಿಸುವವು ॥ ೩೫ ॥

ತರುಣಿರನ್ನಳ ನುಣ್ಗೊರಳ ಭಾವವ ಕಂಡು । ನೆರೆ ನಾಣ್ಚಿ ಬಲಮುರಿ ಶಂಖ ॥
ಶರನಿಧಿಯನು ಪೊಕ್ಕು ಗುಳ್ಳೆಗೆ ಸಮನಾಗಿ । ಮರಸಿಕೊಂಡಿಹುದು ಕರ್ದಮದಿ ॥ ೩೬ ॥

ಸಿರಿ ಪರಿಮಳವ ತುಂಬುವ ಕರಡಿಗೆಯೋ ತಾ । ಸರಸತಿ ನರ್ತಿಪದೊಂದು ॥
ಕರ ಚೆಲುವಾದ ಮನೆಯೋ ತಾನೆನಲಾ । ತರುಣಿಯ ಬಾಯ್ದೆರೆಯಿಹುದು ॥ ೩೭ ॥

ಧರೆಯೊಳು ಚರಿಪ ವಿರಕ್ತರೆರ್ದೆಗಳನು । ಸ್ಮರನು ಕೊರೆಯಲೆಂದು ಪಿಡಿದ ॥
ವರ ವಜ್ರಕ್ರಕಚವೋ ಮೊಲ್ಲೆ ಮೊಗ್ಗೆಯ ಸಾಲೋ । ತರುಣಿಯ ದಂತಪಂಕ್ತಿಗಳೋ ॥

ಬಂದುಗೆಯರಳನು ವಟ ಪಕ್ವಫಲವನು । ಚೆಂದಳಿರನು ತೊಂಡೆವಣ್ಣ ॥
ಚಂದಿರವೆರೆಯನು ಜರೆದು ರಾಜಿಪುದಾ । ಚಂದಿರವದನೆ ಚೆಂದುಟಿಯು ॥ ೩೯ ॥

ತಿಲಕುಸುಮವೊ ಕೆಂಡಸಂಪಗೆ ಮುಗುಳೊ ತಾ- । ನಲರ್ವಿಲ್ಲ ಪಿಡಿದ ಕನಕದ ॥
ಚೆಲುವಾದ ಪೆಟಲೋ ಎಂದೆನಲೊಪ್ಪಿದುದಾ । ಲಲನೆಯ ಮುದ್ದು ನಾಸಿಕವು ॥ ೪೦ ॥

ಸ್ಮರನಾಡಿಂದವು ಮೋಹನ ಮಂತ್ರವ । ಬರೆಯಬೇಕೆಂದು ತಾ ಸಮೆದ ॥
ಕರ ಚೆಲುವಾದ ಚಿನ್ನದ ತಗಡೋ ಎನೆ । ತರುಣಿಯ ಕೆನ್ನೆ ಪೊಳೆದವು ॥ ೪೧ ॥

ಮದನರಾಯನು ಹರಿಹರಬಿದಿಗಳ ಕೂಡೆ । ಕದನಕೆ ತಾನೈದುವಾಗ ॥
ಮೊದಲೆಯರ್ಚನೆಗೈದ ಸಿಂಗಾಡಿಯ ಗೆಲ್ದು ! ಸುದತಿಯ ಶ್ರುತಿ ರಾಜಿಪವು ॥ ೪೨ ॥

ಎಲೆ ಹುಲ್ಲೆಗಣ್ಣನು ಮರಿಮೀನ ಜಠರವ । ನಳನಳಿಸುವ ನೈದಿಲೆಸಳ ॥
ಇಳಿಕೈದು ರಾಜಿಸಿದವು ಕೋಮಲಾಂಗಿಯ । ಪೊಳೆವ ಬೊಗಸೆಕಣ್ಗಳರಸ ! ॥ ೪೩ ॥

ಸ್ಮರ ತನ್ನೊಳು ಮಾರ್ಮಲೆತ ವಿರಕ್ತರ । ತರುಣಿಯ ಪುರ್ವೆಂಬ ಧನುಗೆ ॥
ತರಳೆಯ ಮಿರುಗುವಾಯತ ನೇತ್ರ ಶರವಿಟ್ಟು । ಧರೆಯೊಳು ಜೀಳ್ವಂತೆಸೆವನು ॥ ೪೪ ॥

ತರುಣಿಯ ಮೊಗದಾವರೆಯನಿರದೆ ಕಟ್ಟಿ । ಕುರುಳೆಂಬ ಮೇಘಕ್ಕೆ ನೆಗೆವ ॥
ಅರಿವೆರೆಯೋ ತಾನೆನೆ ಥಳಥಳಿಸುವ । ಗರುವೆಯ ನಿಟಿಲ ರಾಜಿಸಿತು ॥ ೪೫ ॥

ಸ್ಮರರಾಜನ ಮುಂದೆ ನಲಿದು ನರ್ತಿಪ ಚೆಲ್ವ । ಬರುಹಿಯ ನೀಲ ಬರುಹವೋ ॥
ಪರಿಮಳದಾವರೆಗೆರಗಿದ ಭ್ರಮರವೋ । ತರುಣಿಯ ನೀಳಾಳಕವೋ ॥ ೪೬ ॥

ಸಿರಿದೇವಿ ತನುಜಾತ ವಿಟಪಾಠೀನವ । ಭರದಿ ಸೆಳೆಯಲೆಂದು ತನ್ನ ॥
ಕರದೊಳು ಪಿಡಿದ ಹೊಂಬಾಳೆ ತಾನೆಂಬಂತೆ । ತರಳೆಯ ದಿವ್ಯಾಂಗಮಿಹುದು ॥ ೪೭ ॥

ವಿಧಿ ತಾನು ಜಗದ ಕುರೂಪಿಗಳನು ತಿದ್ದಿ । ಒದಗಿದ ದೋಷ ಕಳೆಯಲು ॥
ಚದುರಿಂದ ವರ ರೂಪನು ತಿದ್ದಿದಲ್ಲದಾ । ಸುದತಿಗೆ ಚೆಲುವೇಕೆ ಬಹುದು ॥ ೪೮ ॥

ಮದನನೇರುವ ಮದಕರಿಯ ಗಮನವೋ । ಬಿದಿಯೇರುವ ಹಂಸ ನಡೆಯೋ ॥
ಮಿದುವಿನ ಮಂದಯಾನವೊ ಎಂಬಂತೆಯಾ- । ಮದವತಿ ಗಮನ ರಾಜಿಪುದು ॥ ೪೯ ॥

ಕಡೆಗಣ್ಣಿಂದಾಯಕ ನೋಡಿದೊಡೊಮ್ಮೆ । ಕಡು ಸಂಯಮಿಗಳಿದೆ ಧೈರ್ಯ ॥
ಅಡಗಿ ಪೋಪುವುದೆನೆಯಾ ಸುಕುಮಾರಿಯ । ಕಡೆಗಣ್ಣ ಥಾಳವೇನೆಂಬೆ ॥ ೫೦ ॥

ಅವಳ ಕಟಾಕ್ಷದೊಳಗೆ ವಿಲಾಸ ಮ- । ತ್ತವಳ ಭ್ರೂಯುಗದ ವಿಭ್ರಮವು ॥
ಅವಳ ಮೊಗವೊಳಲ್ಲದೆ ಹಾವ-ಭಾವವು । ಯುವತಿಯರೊಳಗಿಲ್ಲ ನೋಡೆ ॥ ೫೧ ॥

ಸುರಸತಿ ನರಸತಿ ಫಣಿಸತಿಯರು ತನ್ನ । ಕಿರುವೆರಳನು ಹೋಲರೆಂದು ॥
ಬೆರಳವಿಡಿದು ತಾನು ಜರಿವಳೆಂದೊಡೆ ಭೂ- । ರಮಣಿಯ ನಟನೆಯಿನ್ನೆಂತೋ ॥ ೫೨ ॥

ಸಿರಿ ಸರಸತಿ ಶಚಿ ರೋಹಿಣಿ ಜಾಹ್ನವಿ । ಗರುವೆಯ ಬಳಿಗೈತಂದು ॥
ಸಿರಿ ಜಾಣ್ಮೆ ಜಿನಭಕ್ತಿ ಸಿಂಗರ ಗಾಡಿಯ । ತರುಣಿ ! ಕೊಡೆಂದು ಭಜಿಪರು ॥ ೫೩ ॥

ಇಂತು ರಾರಾಜಿಪ ಹೆಂಗಳ ರನ್ನೆಯು । ಸಂತೋಷದಿಂದೊಂದು ಪಗಲು ॥
ಕಂತುವಿನರಸಿಗೆ ಸಮರೂಪಿನ ಸೀ- । ಮಂತಿನಿಯರ ಕೂಡಿಕೊಂಡು ॥ ೫೪ ॥

ಮುತ್ತಿನ ಮಣಿಯಿಂ ಸಮೆದ ಕಂದುಕವನಾ । ವೃತ್ತಪಯೋಧರೆ ಪಿಡಿದು ॥
ಅಳ್ತಿಯಿಂದಾಡುತಲಿರಲದನಾಗ ಭೂ- । ಪೋತ್ತಂಸ ಜಯಸೇನ ಕಂಡು ॥ ೫೫ ॥

ಒಡನೆ ಕುಮಾರಿಯ ಕರೆಯಿಸಿ ತೆನ್ನೆಡ- । ದೊಡೆಯೊಳು ಕುಳ್ಳಿರಿಸಿಕೊಂಡು ॥
ಕಡು ನೇಹವಿಂ ಬೆನ್ನದಡಹುತ ಗಲ್ಲವ । ಪಿಡಿದಲುಹಿಸಿ ಮುದ್ದು ಮಾಡಿ ॥ ೫೬ ॥

ರಸದಂಬುಲವ ಬಾಯೊಳಗಿಟ್ಟುಮರ್ದಪ್ಪಿ । ಬಿಸರುಹಾನನೆ ! ಸಿನ್ನ ಮೊಗವು ॥
ಬಿಸಿಲಿಂದ ಕಂದಿತು ಎಂದು ದುಗುಲದಿಂದ । ವಸುಧೇಶ ಬೆಮರನು ತೊಡೆದು ॥ ೫೭ ॥

ಪುಂಡರೀಕಾಯತಲೋಚನೆ ! ಕೇಳಾ । ಮಂಡಳೇಶ್ವರರೊಳು ನಿನಗೆ ॥
ಗಂಡನಾವನು ನಿನಗೆ ಪೇಳೆನ್ನೊಳು । ಶುಂಡಾಲಾಲಸ ಸಮಯಾನೆ ! ॥ ೫೮ ॥

ಸುರುಚಿರ ಕಾಶ್ಮೀರದೇಶದರಸು ಬೇಕೊ । ಹರಿಪುರದರಸಗೊಪ್ಪಿದೆಯೋ ॥
ಕರಿಪುರದರಸಗೆ ಮದುವೆಯ ಮಾಳ್ಪೆನೊ । ವರ ವಿದ್ಯಾಧರರೊಳಗೆ ॥ ೫೯ ॥

ವರನಾವನಾದಪ ನಿನಗೆಂದು ಬೆಸಗೊಳೆ । ತರುಣಿ ತಾತನ ನುಡಿಗೇಳಿ ॥
ಕರಗಳ ಮುಗಿದೆಲೆ ಜನಕ ! ನೀ ಕೇಳ್ಳೈ । ವರ ವೀಣಾವಾದದಿಂದೆನ್ನ ॥ ೬೦ ॥

ಮನವ ಸೋಲಿಸಿ ಸೊಗಸಿಂದ ಸೂರೆಯ ಮಾಳ್ಪ । ಮನುಜೇಂದ್ರ ಸುತರಲ್ಲದುಳಿದ ॥
ಬಿನುಗು ನೃಪರ ನಾ ಕನಸಿಲಿ ನೆನೆದೊಡೆ । ತನುಜೆಯೆ ನಿನಗೆ ನಾನೆಂದು ॥ ೬೧ ॥

ನುಡಿದ ನುಡಿಯ ಕೇಳಿ ಮಗಳನು ಬೀಳ್ಕೊಟ್ಟು । ಕಡು ಬೇಗದಲಿ ಮಂತ್ರಿಗಳ ॥
ಪೊಡವಿಪ ಕರೆಯಿಸಿಕೊಂಡವರೊಳಗಿಂತು । ನುಡಿದನು ಕಾರ್ಯದ ಹದನ ॥ ೬೨ ॥

ಸುರಶಿಲ್ಪಿಯ ತಮ್ಮ ಕರಕೌಶಲದಿಂದ । ಜರಿವ ಶಿಲ್ಪಿಗಳನು ಕರೆಸಿ ॥
ಕರ ಚೆಲುವಿಂದ ಸ್ವಯಂವರ ಗೃಹವನು । ವಿರಚನೆಯನು ಮಾಡಿರೆಂದು ॥ ೧೩ ॥

ಪಿರಿದುಡುಗೊರೆಗೊಟ್ಟವರನು ಬೀಳ್ಕೊಂಡು । ತುರಿಹದಿ ಬಂದು ಭೂಮಿಪನು ॥
ವರಶೋಧನೆ ಮಾಡಿ ಮಂಟಪವನು ತಾವು । ವಿರಚಿಸಿದರು ಎಂತೆನಲು ॥ ೧೪ ॥

ಹರಿನೀಲಮಯವಾದ ನೆಲಗಟ್ಟನು ಮಾಡಿ- । ಯುರುಮಾಣಿಕ್ಯಗಂಬಗಳ ॥
ವಿರಚಿಸಿಯದರುಪರಿಮದೊಳು ಪಳುಕಿನ । ಕರ ಚೆಲುವೆನಿಪ ಗಡಿಗೆಯ ॥ ೧೫ ॥

ಇರಿಸಿ ಸ್ವರ್ಣದ ಪಾನಿವಟ್ಟಲದರ ಮೇಲೆ । ಭರದಿ ಸೇರಿಸಿ ಮರಕತದ ॥
ಕರ ಚೆಲುವಾದ ಬೋದಿಗೆಗಳನಿಟ್ಟಾಗ । ವರ ಮೌಕ್ತಿಕದ ತೊಲೆಗಳ ॥ ೧೬ ॥

ತ್ವರಿತದಿಂದೆಳೆದುರೆ ನವರತ್ನಮಯವಾದ । ಸುರುಚಿರ ಕರ್ನವ ರಚಿಸಿ ॥
ಕರ ಶೋಭಿಪ ವಿಕರ್ನಗಳನು ಮುಚ್ಚಿಸಿ । ಖರಕಿರಣನ ಕಿರಣವನು ॥ ೧೭ ॥

ಜರಿವತಿ ಪದ್ಮರಾಗದ ವಾರಿಜಗಲ್ಲ । ಮರೆ ಮಾಡಿ ಮೇಲಕೆ ಮುಚ್ಚಿ ॥
ಮರಕತ ರತ್ನಗಳಿಂದ ಲೋವೆಯ ಮಾಡಿ । ವರ ಮೌಕ್ತಿಕ ಲಂಬಣವ ॥ ೧೮ ॥

ಇತ್ತರದೊಳಗಿಳಿಯನು ಬಿಟ್ಟು ಮರಕತ- । ದುತ್ತಮ ಮದನಕೈಗಳನು ॥
ತೆತ್ತಿಸಿಯಲ್ಲಲ್ಲಿ ಕಂಬಗಳೊಳು ಚೆ- । ಲ್ವೆತ್ತ ರಚನೆಯನು ಮಾಡಿ ॥ ೧೯ ॥

ಕನಕದಿಂದಲೆ ಪಂಚಾಂಗವ ನಿರ್ಮಿಸಿ । ಮಿನುಗುವ ಸ್ಫಟಿಕ ಜಗಲಿಯ ॥
ಮನದಕ್ಕರಿಂದ ರಚಿಸಿ ಗೋಮೇಧಿಯ । ಘನವಾದ ಮತ್ತವಾರಣವ ॥ ೨೦ ॥

ಕಡು ಜಾಣಿಂದ ರಚನೆಗೈದಲ್ಲಲ್ಲಿ । ಒಡನೆ ರನ್ನದ ಸಿಂಹಗಳನು ॥
ಬಿಡದೆ ಕೆತ್ತಿಸಿ ಮೌಕ್ತಿಕದ ಸೋಪಾನವ । ಕಡುಕುಶಲದೊಳಾಗ ರಚಿಸಿ ॥ ೨೧ ॥

ಮೂಡ ಪಡುವ ತೆಂಕ ಬಡಗ ಮುಖಗಳಾಗಿ । ಮಾಡಿದ ರನ್ನ ದ್ವಾರಗಳ ॥
ಪಾಡುಗಾರಿಕೆಯಿಂದ ರಜತದ ದಳಿಗಳ । ಹೂಳಿಸಿದರು ಸುತ್ತ ಬಳಸಿ ॥ ೨೨ ॥

ಕುಲಿಶದ ಮಳ್ವಡಿಗಳ ಮಾಡಿಯದರೊಳು । ವಿಲಸಿತ ಹೊನ್ನುಗುಬ್ಬಿಗಳ ॥
ನಲವಿಂದ ರಚನೆಯ ಮಾಡಿಂದ್ರನೀಲದ । ಚೆಲುವಾನೆಗಲ್ಲನು ರಚಿಸಿ ॥ ೨೩ ॥

ಒಳಭಾಗದೊಳಾಗ ಹೇಮನಿರ್ಮಿತವಾದ । ಹೊಳವಳಿಗೆಗಳನು ಕಟ್ಟಿ ॥
ಥಳಥಳಿಸುವ ಮುತ್ತಿನ ಕುಚ್ಚುಗಳಾಗ । ಬಳಸಿ ಕಟ್ಟಿದರರ್ತಿಯೊಳು ॥ ೨೪ ॥

ಚೆಂದಿರಬೀಜದ ಚೆಂಡಿನ ಸರಗಳಾ- । ನಂದಗಾರಿಕೆಯೊಳಲ್ಲಲ್ಲಿ ॥
ಚಂದ ಚಂದದ ನಿಡು ಝುಲ್ಲಿಗಳಲ್ಲಲ್ಲಿ । ಬಂಧುರವೆನೆ ಕಟ್ಟಿದರು ॥ ೨೫ ॥

ಚಿನ್ನ ಬೆಳ್ಳಿಯ ಪೂವಿನ ದುಂಡು ದಂಡೆಯ । ಹೊನ್ನ ಸಂಪಗೆಯ ಸರಗಳ ॥
ಸನ್ನುತ ಬೆಳ್ಳಿಯ ಮಲ್ಲಿಗೆ ಸರಗಳ । ಪುನ್ನಾಗಸರವ ಕಟ್ಟಿದರು ॥ ೨೬ ॥

ಕನಕಾರ್ಜುನ ನೀಲ ಪಚ್ಚೆ ಮಾಣಿಕಗಳ । ಘನರತ್ನ ಕೀಲಿತದಿಂದ ॥
ಮಿನುಗುವ ಪಂಚಾಂಗ ರಾಯನ ಬಳಿಸಿತಾ- । ವನುವಾಗಿ ಕಟ್ಟಿ ಲೀಲೆಯೊಳು ॥ ೭೭ ॥

ಧಗಧಗಿಸುವ ರತ್ನ ಸಿಂಹವಿಷ್ಟರವನು । ಸೊಗಸಿಂದಲಿರಿಸಿ ಸಾಲಾಗಿ ॥
ಮಿಗೆ ರಂಜಿಪ ರತ್ನಗಂಬಳಿಯನು ತಂದು । ಜಗಲಿಯೊಳಗೆ ಹಾಸಿದರು ॥ ೭೮ ॥

ಪದಿಮೂರು ನೆಲೆಯ ಕುರುಜನು ಪಟ್ಟೆಗಳಿಂದ । ಉದಯದೊರೆತು ಮೇಲೆ ಗೃಹದ ॥
ತುದಿಯೊಳು ಸ್ವರ್ಣದ ಕಳಶವೈದನು ಇಕ್ಕಿ । ಮುದದಿ ಪಂಚಾಂಗ ರಾಯನನು ॥ ೭೯ ॥

ನಲವಿಂದ ನೆಲೆಗಳ ಮೂಲಾಗ್ರದಿ ಕಟ್ಟಿ । ಪಲವು ಕೇತನ ವಿಮಾನ ಠಿಕ್ಕೆ ॥
ಚೆಲುವಾದ ಧ್ವಜ ವೈಜಯಂತಿ ಪತಾಕೆಯ । ಸಲೆ ಜಾಣರು ಕಟ್ಟಿಪರು ॥ ೮೦ ॥

ಇಂತಪ್ಪ ರಚನೆಯ ಮಾಡಿ ಸಕಲ ಭೂ- । ಕಾಂತರೆಲ್ಲರನು ತಾ ಬರಿಸಿ ॥
ಕಾಂತೆಯು ವೀಣೆಯೊಳಗೆ ಸೋಲಿಸಿಮೆಂದು । ತಾಂ ತಳುವದೆ ಪೇಳೆ ಕೇಳಿ ॥ ೮೧ ॥

ಅವಳ ಮನವ ಮೆಚ್ಚಿಸಲಾರದೆಯಾ । ಕುವರರೆಲ್ಲರು ಲಜ್ಜೆಯಿಂದ ॥
ತವಕದಿಂ ತಂತಮ್ಮ ದೇಶಕೆ ಪೋಗಲು । ಭುವನೇಶ್ವರ ನನ್ನ ಕರೆಸಿ ॥ ೮೨ ॥

ನುಡಿದನೆಲೆ ಮಾಗಧ ! ನೀನು ಹೋಗೀಗ । ಪೊಡವಿಯೊಳುಳ್ಳ ನೃಪರೊಳು ॥
ಕಡು ಜಾಣ ಕಲೆವಂತ ರೂಪಸಂಪನ್ನನೀ । ಮಡದಿಯ ವೀಣಾವಾದದೊಳು ॥ ೮೩ ॥

ಗೆಲುವ ಸಮರ್ಥನ ಕರೆದು ತಂದೊಡೆಯಾನು । ಪಲವು ಸೀಮೆಗಳನು ನಿನಗೆ ॥
ಪಲವು ಭೂಷಣಗಳ ಕೊಟ್ಟಪೆನೆಂದೆನ್ನ । ಕಳುಹಿಸಿದೊಡೆ ನಾ ಬಂದು ॥ ೮೪ ॥

ಎರಕದಿಂದಲಿ ಸಮಸ್ತ ದೇಶಕೆ ಪೊಕ್ಕು । ದೊರೆಕುವರರ ಪ್ರಾಪ್ತಿಮೆಯನು ॥
ಪರಿಕಿಸಿ ಬರುತಿರೆ ನಂದ್ಯಾವರ್ತವೆಂ- । ಬುರುತರ ಶೈಲವ ಕಂಡು ॥ ೮೫ ॥

ಅದರಗ್ರಕೇರಲು ವಿಧುಕಾಂತ ಶಿಲೆಯೊಳು । ಮದನಮದಾಪಹರಣನು ॥
ಸದುಮಲ ಸುಜ್ಞಾನಿ ಶ್ರೀ ಜೈನಯೋಗೀಂದ್ರ । ಮದದೂರ **ಸುವ್ರತ**ರೆಂಬ ॥ ೮೬ ॥

ಮುನಿರಾಯನ ಕಂಡು ಪೊಡಮಟ್ಟು ನನ್ನಯ । ಮನದಕ್ಕರಿಂ ಕೇಳ್ದೆನಿಂತು ॥
ವನಿತಾಮಣಿ ಸಿಂಧುದೇವಿಯ ವೀಣೆಯೊ- । ಳನುವಾಗಿ ಗೆಲ್ದು ವರಿಸುವ ॥ ೮೭ ॥

ಕುವರನೆಲ್ಲಿರ್ದಪನೆಂದಾನು ಬೆಸಗೊಳೆ । ದಿವಿಜವಂದಿತನಿಂತೆಂದ ॥
ಸುವಿವೇಕಿ ವೈತಾಳಿಕ ! ನೀ ಕೇಳ್ಳೆ । ಕವಿಜನಕಲ್ಪಭೂರುಹನು ॥ ೮೮ ॥

ಕನಕಪುರವನಾಳ್ವ ಜಿನಚಂದ್ರಸೂನು । ವಿನಯ ನಿದಾನ ಜ್ಞಾನೇಂದು ॥
ಮನುಜೇಶಮಕುಟತಾಟಿತ ದಿವ್ಯಚರಣನು । ವಿನುತ ವಿದ್ಯಾಧರೇಶ್ವರನು ॥ ೮೯ ॥

ಹರಿಪುರದರಸು ವಿಮಲವಾಹನನ । ವರಸುತೆ ಕಾಮಲತೆಯನು ॥
ವರಿಸಿದಾತನು ಸ್ವಯಂವರವನು ಪೊಕ್ಕು ತಾ । ನೆರೆದ ಭೂಪಾಲರ ಮುಂದೆ ॥ ೯೦ ॥

ವರ ಘೋಷವತಿಯೆಂಬ ವೀಣೆಯ ಭಾಜಿಸಿ । ತರಳೆಯ ಮನಕೆ ಸಂತಸವ ॥
ನೆರೆ ಜಾಣ ಪುಟ್ಟಿಸಿ ವರಿಸುವನೆಂದಾ- । ಗೊರೆದು ಮತ್ತವಳ ಭವವನು ॥ ೯೧ ॥

ನಿರವಿಸಿದರು ಇಂತು ಜಂಬೂದ್ವೀಪದ । ಭರತದೊಳಗೆ ಶೋಭಿಸುವ ॥
ಹರಿವರ್ಷಾಖ್ಯದೊಳಗೆ ಕುಂಡಪುರವೆಂ- । ಬುರುತರ ಪಟ್ಟಣದಲ್ಲಿ ॥ ೯೨ ॥

ಪೆಸರಲ್ಲಿ ಕಾಕಜಂಘನು ಎಂದೆಂಬೋರ್ವ । ನೃಪಲನು ರಾಜಿಸುತಿಹನು ॥
ಅಸಿಯ ನಡುವಿನ ಶಂಕರಿ ಮಗಳಾದಳು । ಪೊಸ ಜವ್ವನೆಯಾ ಕುಡಿಯುಗೆ ॥ ೯೩ ॥

ಅರುಹನಂಗಣದ ಕಸವನಾ ಶಂಕರಿ । ಹರುಷದಿಂದಾವಾಗ ತಾನು ॥
ಒರಸಿ ನೂಂಕುತ ರಂಗಮಂಟಪದೊಳಗಾಗ । ಕರ ಕುಶಲದಿ ಚೆಲ್ವಿಂದ ॥ ೯೪ ॥

ಹರಿತ ಪೀತಾರುಣ ಶ್ವೇತ ಕೃಷ್ಣಗಳೆಂ- । ಬುರುತರ ಪಂಚವರ್ಣಗಳಿಂ ॥
ನೆರೆ ಜಾಣೆ ರಂಗವಲಿಯನಿಕ್ಕಿ ಚೌವ್ವೀಸ । ವರ ಜಿನರಡಿಗೆ ಕೈ ಮುಗಿದು ॥ ೯೫ ॥

॥ **ಸ್ತೋತ್ರ** ॥ ಪರಿಪಡಿಸೆನ್ನಘವನು **ಪುರುಜಿನನಾಥ** ! । ಪರಿರಕ್ಷಿಸ**ಜಿತ** ಜಿನೇಂದ್ರ ! ॥
ನೆರೆ ನಂಬಿದೆ **ಶಂಭವ** ಜಿನ ! ನಿಮ್ಮನು । ಶರಣಾ**ಗಭಿನಂದನೇಶ** ! ॥ ೯೬ ॥

ಸುಮತಿಯು ಕೊಡು ನನಗೆಲೆ **ಸುಮತೀಶನೆ** ! । ನಮೋ ಎಂಬೆ **ಪದ್ಮಪ್ರಭ**ರಿಗೆ ! ॥
ಕುಮತವ ಕೆಡಿಸು **ಸುಪಾರಿಶ್ವ** ಜಿನಪತಿ ! । ಕ್ಷಮತೆಯ ಕೊಡು **ಚಂದ್ರನಾಥ** ! ॥ ೯೭ ॥

ಜರೆ ಮೃತ್ಯು ಜನ್ಮವ ಕಳೆ **ಪುಷ್ಪದಂತೇಶ** ! । ವರ ಮುಕ್ತಿ ಕುಡು **ಶೀತಳೇಶ** ! ॥
ದೊರಕಿಸು ಬೋಧವ ನನಗೆ **ಶ್ರೇಯೋಜಿನ** ! । ಸುರ ಸುಖಗೊಡು **ವಾಸುಪೂಜ್ಯ** ! ॥

ಅಮಲ ಮಾರ್ಗವ ತೋರು **ವಿಮಲ ಜಿನೇಶ್ವರ** ! । ಭ್ರಮೆಯ ಕೆಡಿಸು **ಶ್ರೀ ಅನಂತ**!॥
ನಮಗೆ ಚಾರಿತ್ರವ ಕೊಡು **ಧರ್ಮ ತೀರ್ಥೇಶ** ! । ನಮಿಸಿ ನುತಿಪೆ **ಶಾಂತಿ** ಜಿನಪ ! ॥

ಭವವಿಪಿನವ ಛೇದಿಸು **ಕುಂಥು** ಜಿನರಾಜ ! । ಶಿವಸುಖವೀ**ಯರ** ಜಿನಪ ! ॥
ಕವಿದಜ್ಞಾನವ ಕಳೆ **ಮಲ್ಲಿ** ಜಿನದೇವ ! । ತವಿಸು ಕರ್ಮವ **ಸುವ್ರತೇಶ** ! ॥ ೧೦೦ ॥

ಕಾಮಿತ ಫಲವನು ಕೊಡು **ನಮಿ** ಜಿನರಾಜ ! । **ನೇಮೀಶ** ಕೊಡು ಸುಗತಿಯನು ॥
ಪ್ರೇಮದಿಂದೆರಗುವೆ ನಿನಗೆ **ಪಾರಿಶ್ವೇಶ** ! । ಸ್ವಾಮಿ ಜಯತು **ವೀರ** ಜಿನಪ ! ॥ ೧೦೧ ॥

ಇಂತು ನುತಿಸುತ ಸಂಧ್ಯಾಕಾಲತ್ರಯದೊಳು । ಕಾಂತೆ ಚೌವ್ವೀಸ ಜಿನರನು ॥
ಸಂತೋಷದಿಂದಿರುತಿರೆ ಸಿಡಿಲ್ಪೊಡೆದಾ- । ಗಂತಕನಿಗೆ ತುತ್ತಾಗಿ ॥ ೧೦೨ ॥

ಕಿನ್ನರವಂಶದೊಳಗೆ ಸಂಜನಿಸಿ ತಾ । ಕಿನ್ನರೇಂದ್ರಗೆ ರಾಜಿಸುವ ॥
ಸನ್ನುತ ಪಟ್ಟದರಸಿಯಾಗಿ ಸುಖವನು । ಚೆನ್ನೆಯುಣುತಲಿರುತಿರ್ದು ॥ ೧೦೩ ॥

ಪರಮಾಯುಷ್ಯವು ಪರಿಪೂರ್ಣವಾಗಲು । ತರುಣೀ ತಾನ್ಯೆತಂದೀಗ ॥
ಅರವಿಂದಮುಖಿ ಸಿಂಧುದೇವಿಯಾದಳು ಎಂ- । ದೊರೆದನು ಜತಿರಾಯ ಭವವ ॥ ೧೦೪ ॥

ಅದ ಕೇಳಿ ನಲಿದಾ ಮುನಿಯ ಶ್ರೀ ಪಾದಕ್ಕೆ । ಮುದದಿಂದೆರಗಿ ಬೀಳ್ಕೊಂಡು ॥
ಒದವಿದ ಸಂತಸದಿಂದಿಲ್ಲಿಗೈತಂದು । ಚದುರರರಸ ! ಕಂಡೆ ನಿನ್ನ ॥ ೧೦೫ ॥

ಎಂದು ನುಡಿದ ಬೋಧಕನ ನುಡಿಯು ಕೇಳಿ । ಮಂದಸ್ಮಿತನಾಗಿ ಕುವರ ॥
ಮಂದ್ರೋಕ್ತಿಗಳಿಂದ ಸಭೆ ಕೇಳುವಂತೆ ಬೋ- । ಧೇಂದು ನುಡಿದನಿಂತೆಂದು ॥ ೧೦೬ ॥

ಎಲೆ ಪಾಠಕ ! ಕೇಳು ವೀಣಾವಾದನದಿಂದ । ಲಲನೆಯು ಮದವನುಡುಗಿಸಿ ॥
ಪಲವು ಮಾತೇನು ಭೂಪಾಲರ ಶಿರವನಾ- । ಗೊಲೆದಾಡಿಸದೆ ಬಿಡುವೆನೇ ? ॥ ೧೦೭ ॥

ಎಂದು ಭಾಷೆಯ ತಾನು ಮಾಡಿಕೊಂಡಾಗ ಜ್ಞಾ- । ನೇಂದು ಕುವರ ಮಗಧನಿಗೆ ॥
ಚಂದ್ರಜ್ಯೋತಿಯುಮೆಂದೆಂಬ ಪೆಸರನುಳ್ಳ । ಚಂದದ ಕಂಠಮಾಲೆಯನು ॥ ೧೦೮ ॥

ನಿಳಿವಾಳಿ ತುಂಬಿಯ ತಾಳಿ ಹೊನ್ನುಡಿದಾರ । ಹೊಳೆವ ಮುಂಗೈಯ ಸರವನು ॥
ಗಳಕೆ ಮುತ್ತಿನ ಸರ ಕಾಲದೊಡವನಾ- । ಗಳೆಯಾಣ್ಮ ಕೊಟ್ಟ ಲೀಲೆಯೊಳು ॥ ೧೦೯ ॥

ಹತ್ತೆಂಟು ಹೊನ್ನ ಜಾಳಿಗೆಯು ತರಿಸಿ ಕೊಟ್ಟು । ಮತ್ತೆ ಕೆಲವು ಭೂಷಣವ ॥
ಉತ್ತಮ ವಸ್ತ್ರಂಗಳ ಹೊರೆ ಹೊರೆಗಳ । ಹತ್ತೆಂಟನಿತ್ತನಾ ರಾಯ ॥ ೧೧೦ ॥

ವಿನಯೋಕ್ತಿಗಳಿಂದ ವೈತಾಳಿಕನನು । ಮನುಜೇಶ್ವರ ಬೀಳ್ಕೊಟ್ಟ ॥
ಘನಪುಣ್ಯವಂತ ಸುಖದೊಳೋಲಾಡುತ । ವನಿತಾಮಣಿಯೊಡನಿಹನು ॥ ೧೧೧ ॥

ಜಿನಮುನಿಗಳ ಪಾದಕಮಲದ್ವಿರೇಫನು । ಜಿನಮತಾಂಬುಧಿ ಖಿಲಕನು ॥
ಘನಕರ್ಮಾರಣ್ಯಪಾವಕ ಜ್ಞಾನೇಂದು । ಮನಸಿಜರೂಪನೊಪ್ಪಿದನು ॥ ೧೧೨ ॥

**॥ ಅಂತು ಸಂಧಿ ೧೫ಕ್ಕಂ ಪದ ೨೧೪೫ಕ್ಕಂ ಮಂಗಲಂ ॥**

## ಕಾಳರಾಕ್ಷಸ ವಿಜಯ.

ಮುನಿಗುಪಸರ್ಗವ ರಾಕ್ಷಸ ಮಾಡಲು । ಜನಪ ಬಿಡಿಸಿಮುದ ಪೇಳ್ವೆ ॥ ಪ ॥

ಖಳಕರ್ಮಮೇಘ ಝುಂಝಾನಿಲಮದವೆಂಬ । ಜಲಧಿಯ ಪೀರುವ ಬಡಬ ॥
ನಳಿನಾಸ್ತ್ರನಾಗ ಕಂಠೀರವ **ಶಾಂತೀಶ** ! । ಘಳಿಲನೆ ಕೊಡು ನಿರ್ವಾಣವನು ॥ ೧ ॥

ಜಿನಚಂದ್ರಾರ್ಭಕನೊಂದು ದಿವಸ ತನ್ನ । ಜನನಿಯು ಕಾಣ್ಬಕ್ಕರಿಂದ ॥
ವನಿತೆಯೊಡನೆ ಕಾರ್ಯವ ಪೇಳಿ ಮಾವನೊ- । ಳ್ವಿನಯವ ನುಡಿದು ಬೀಳ್ಕೊಂಡು ॥ ೨ ॥

ಅರುಹನಾಲಯವೊಕ್ಕರುಹಗೆ ಪೊಡವಟ್ಟು । ತ್ವರಿತದಿಂ ರನ್ನ ಪುಷ್ಪಕವ ॥
ಪರಿಜನವೆರಸಿರೆ ಗಗನಮಾರ್ಗದೊಳು ತಾ । ಬರುತ ಕೆಳಗೆ ನೋಡಿದನು ॥ ೩ ॥

ನಳನಳಿಸುತ ಹರಿತಪ್ಪೂರ್ಪಿರ್ಣ ವಾಲಿನಿ । ಪೊಳೆಯು ತಡಿಯುಲಾಗೊಂದು ॥
ಹಳೆಯ ಗಜವು ಬಿಸಿಲೊಳು ಬೆಂದು ತೃಷೆಯಾಗಿ । ಜಳವ ಸೇವಿಸಲೆಂದು ಬಂದು ॥ ೪ ॥

ಕೆಸರೊಳು ಮುಳುಗಿ ಚರಣವೆತ್ತಬಾರದೆ । ಬಸವಳಿದೇಳು ದಿವಸದಿಂ ॥
ಅಶನವಿಲ್ಲದೆ ಕಂಠಗತ ಪ್ರಾಣನಾಗಿರೆ । ವಸುಧೇಶ್ವರ ತಾನು ಕಂಡು ॥ ೫ ॥

ಕರುಣ ಹೃದಯನಾಗಿ ಧರಣಿಗೆ ಇಳಿತಂದು । ತ್ವರಿತದಿಂ ವಿದ್ಯೆಗಳಿಂದ ॥
ಕರಿಯ ತಾ ತರಿಸಿ ನೀರೊಳು ಮೈಯ ತೊಳೆಯಿಸಿ । ದೊರೆ ತೊಡೆಯಿಸೆ ವಸ್ತ್ರದಿಂದ ॥ ೬ ॥

ತಳಿರ ಹಾಸಿಕೆಯೊಳು ಮಲಗಿಸಿ ಜ್ಞಾನೇಂದು । ತಲೆದೆಸೆಯೊಳು ತಾ ಕುಳಿತು ॥
ಚೆಲುವ ಸ್ವಹಸ್ತವ ಕರಿಶಿರದೊಳಗಿಟ್ಟು । ಎಲೆ ! ಕೇಳೀ ಜೀವಾತ್ಮ ॥ ೭ ॥

ಕಲಿಲವಶದಿ ಇದು ದೇವರಿದಾಗಮ । ಸಲೆ ಧರ್ಮವು ಗುರುವೆಂದು ॥
ನಲವಿಂದ ನೆನೆಯದೆ ಮನಕೆ ಬಂದಂದದಿ । ಘಳಿಲನೆ ಸ್ವೇಚ್ಛೆಯಿಂ ತಿರುಗಿ ॥ ೮ ॥

ದುರಿತವ ನೆರಪಿ ಪಲವು ಯೋನಿಗಳೊಳು । ತಿರಿಯಂಚನಾಗಿ ಕಾನನದಿ ॥
ಭರದಿಂದ ಶೀತಾತಪಕೆ ನೀ ಒಡಲಿತ್ತು । ನೆರೆ ದುಃಖವನುಂಡೆಯಕಟಾ ॥ ೯ ॥

ಇನ್ನಾದರು ಬಿಟ್ಟು ಹದಿನೆಂಟು ದೋಷವ । ಚೆನ್ನಾಗಿ ಗೆಲ್ದ ಜಿನಪನ ॥
ನಿನ್ನ ಹೃದಯದೊಳಗಿಂಬಿಟ್ಟು ನೆನೆ ಜೀವ ! । ಸನ್ನುತ ಪದವಿಯ ಪಡೆವೆ ॥ ೧೦ ॥

ದಶ ಚತುರ್ದಶ ವಿಧಮಪ್ಪ ಪರಿಗ್ರಹ । ಪೊಸೆದು ಹಾಕಿದವಿನ್ನೆವರ ॥
ಕುಸುರಿದರಿದು ಹಾಕು ಸಕಲ ಸನ್ಯಸನವ । ಒಸೆದು ಧರಿಸು ಎಲೆ ಜೀವ ! ॥ ೧೧ ॥

ವರಪಂಚಪದವ ಲಾಲಿಸು ನಾ ಪೇಳುವೆ । ಪರಮ ನಿರ್ವಾಣವನೀವ ॥
ಕರಿಪತಿ ಎನೆ ಮನದೊಳು ಹೇಯುವ ತಾಳಿ । ಶಿರವನಲುಗಿ ತನ್ನ ಕರವ ॥ ೧೨ ॥

ಅರಸನ ಹೆಗಲೊಳಗಿಟ್ಟು ಲಾಲಿಸುತಿರೆ । ದೊರೆ ಗಂಭೀರವಾಕ್ಯದೊಳು ॥
ಕರಿಪನ ಕಿವಿಯೊಳಗುಚ್ಚರಿಸುತಲಿರೆ । ಭರದಿ ಮುಳುಗಿತು ಧ್ಯಾನದೊಳು ॥ ೧೩ ॥

ಹರುಷದಿಂದಲೆ ಪ್ರಾಣವ ಬಿಟ್ಟಾಗಜ । ವರಸುಖವೀವೈದನೆಯ ॥
ಉರುತರ ಬ್ರಹ್ಮಕಲ್ಪದಿ ದೇವನಾಗಿ ತಾ- । ನಿರುತಿರಲಿತ್ತ ಜ್ಞಾನೇಂದು ॥ ೧೪ ॥

ಇಂದು ನನಗೆ ಭೋಜನ ಸಲ್ಲದೆನುತಾಗ । ಚಂದ್ರಕಾಂತದ ಶಿಲೆಯಲ್ಲಿ ॥
ಅಂದು ತಾ ಪೀಠ ಬಿಡಿಸಿಯುಪವಾಸವ । ಚಂದದಿಂದಲೆ ಕೈಕೊಂಡು ॥ ೧೫ ॥

ಅರುಹಗೆ ಪೂಜೆಯನೇಕ ಚಿತ್ತದಿಯಾ । ದೊರೆ ಮಾಡುತಿರಲಿತ್ತಲತ್ತ ॥
ಕರ ಚೆಲುವಿಂದಮುಳ್ಳಾಸಿನೊಳೊಗೆದನು । ನೆರೆದಂತರ್ಮುಹೂರ್ತದೊಳು ॥ ೧೬ ॥

ಷಡ್ಪರ್ಯಾಪ್ತಿಯನೈದಿ ತಾನೀರೆಂಟು । ಜಿಡದೆ ರಾಜಿಪ ವತ್ಸರವ ॥
ಕಡುಚೆನ್ನಿಗನಂತೆ ಷೋಡಶಾಭರಣದಿ । ಒಡನೆ ಭೂಷಿತದೇಹನಾಗಿ ॥ ೧೭ ॥

ಒಂದಮುಳ್ವಾಸೆ ಗದ್ದುಗೆಯಾಗೆ ಬೇ- । ರೊಂದಮುಳ್ವಾಸೊರಗಾಗೆ ॥
ಸೌಂದರಾಂಗನು ತಾ ಕುಳಿತುಕೊಂಡಿರೆ ದೇವ- । ವೃಂದ ಬಳಸಿಕೊಂಡಿರಲು ॥ ೧೮ ॥

ಸರಸಿಜದಳದಾಯತನೇತ್ರೆಯರಾಗ । ಮುರುಕದಿ ಚಮರವ ಬೀಸೆ ॥
ಗುರುಕುಚೆಯರು ಬಿಜಣಿಗೆಯನಿರದಾಂತು । ಹರುಷದಿಂದಲೆ ನಿಂದಿರಲು ॥ ೧೯ ॥

ಕರಗಳ ಮುಗಿದು ಜಯತು ಜಯವೆಂದಾಗ । ಸುರರು ಕೊಂಡಾಡುತಲಿರಲು ॥
ವರಪಟ್ಟಮಹಿಷಿದೇವಿಯರು ಸಾಲುಗಳಾಗಿ । ಕರವ ಜೋಡಿಸಿ ನಿಂದಿರಲು ॥ ೨೦ ॥

ಸುರಭೇರಿ ಧಾಂಧಳರೆಸಲಾ ದೇವನು । ಪರಿಕಿಸಿ ನೋಡಿಂತು ನುಡಿದ ॥
ತರುಣಿಯರಿವರಾರೀ ಲೋಕವಾವುದು । ನೆರೆದ ಜನಗಳಿವರ್ಯಾರು ? ॥ ೨೧ ॥

ಸುರುಚಿರ ರತ್ನವಿಮಾನವಿದಾವುದು । ಕರಜೋಡಿಸಿ ನಿಂದವರಾರು ? ॥
ಸುರಸಂಗೀತ ನೃತ್ಯವನಾಡುತಲಿರ್ದ । ತರಲನೇತ್ರೆಯರಿವರ್ಯಾರು ? ॥ ೨೨ ॥

ವರಬೋಧದಿಂ ತಿಳಿದು ಇದು ಸುರಲೋಕ । ಸುರಸತಿಯರು ನರ್ತಿಪರು ॥
ಕರವ ನಿಟಿಲದೊಳಟ್ಟಿರ್ದರಿವರೆನ್ನ । ವರಪಟ್ಟದ ರಾಣಿಯರು ॥ ೨೩ ॥

ಪರಿಕಿಸಲಿವರೆನ್ನೊಳಗದಮರರು । ಸುರಲೋಕವಿದು ಬ್ರಹ್ಮಕಲ್ಪ ॥
ಮಿರುಗುವ ರತ್ನವಿಮಾನವಿದೆನ್ನದು । ಸುರಭೇರಿಯಿದು ಮೊಳಗುವುದು ॥ ೨೪ ॥

ದೊರಕೊಂಡಿತಾವ ಪುಣ್ಯದ ಫಲದಿಂದೀಗ । ವರಭಾಗ್ಯವೆಂದೆನುತಾಗ ॥
ನೆರೆ ಕಳಿದಾಜವಂಜವವ ತಿಳಿದು ದೇವ । ಸುರುಚಿರ ಪಂಚಪದವನು ॥ ೨೫ ॥

ದೊರೆದನ್ನ ಜ್ಞಾನೇಂದು ಪೇಳಿದ ಫಲದಿಂದ । ದೊರಕಿತಿಂತಪ್ಪೈಸಿರಿಯು ॥
ಮರೆಯಬಾರದು ಶ್ರೀ ಗುರುದೇವನೆಂದಾ ದೇವ । ತುರಿಹದಿ ಪುಷ್ಪಕವೇರಿ ॥ ೨೬ ॥

ತರುಣಾರ್ಕಸದೃಶ ದಿವ್ಯಾಂಗದ ಕಾಂತಿಯಿಂ । ಧರೆಯ ತೆಕ್ಕನೆ ತೀವುತಲಿ ॥
ಉರುತರ ಪರಿಮಳವನು ಬೀರುತಾ ದೇವ । ದೊರೆಯಿರ್ದ ಪಕ್ಕಣಕೈದಿ ॥ ೨೭ ॥

ಜಿನಚಂದ್ರದಾರಕನನು ಕಂಡು ಕೈಗಳ । ಘನಭಕ್ತಿಯಿಂದ ತಾ ಮುಗಿದು ॥
ಅನುರಾಗದಿಂ ಮೂಮೆ ಬಲವಂದ ಜಯ ಜಯ- । ವೆನುತ ತುಳಿಲುಗೈದು ನಿಂದು ॥ ೨೮ ॥

ಸ್ವಾಮಿ ! ನಿನ್ನಯದೊಂದು ಪರಮಕಾರುಣ್ಯದಿಂ- । ದೀ ಮಹಿಮೆಯನಾಂತು ದಿವಕೆ ॥
ಸ್ವಾಮಿಯಾದೆನು ನನಗಮಿತತೇಜನು ಎಂಬ । ನಾಮವುಂಟಾಯ್ತಾದರಿಂದ ॥ ೨೯ ॥

ನರಕಕ್ಕೆ ಬೀಳುವ ಪಾಪಿ ಜೀವವ ಕಂಡು । ಮರುಕದಿಂ ಪಂಚಪದವನು ॥
ಒರೆದು ಸುರೇಂದ್ರಸಂಪದವಿತ್ತೆ ನಿನ್ನಂತ । ಪರಮದಯಾಳುಗಳಾರು ? ॥ ೩೦ ॥

ಮನುಮುನಿಗಳು ನಿನಗೆ ಪಾಟಿಯಲ್ಲದೆ ನರ- । ಮನುಜರು ಪಾಟಿಯೆ ನಿನಗೆ ? ॥
ನನೆವಿಲ್ಲಸಮರೂಪ ಭಳಿರೆ ! ಭಾಪುರೆ ! ಎಂ- । ದನಿಮಿಷನಿರದೆ ಕೊಂಡಾಡಿ ॥ ೩೧ ॥

ದೇವ ! ನಿನಗೆ ಭೂಲೋಕದೊಳಗೆಯು- । ಳ್ಳಾವ ಕಾರ್ಯದೊಳಾದೊಡೆನ್ನ ॥
ಭಾವದಿ ನೀನು ಸ್ಮರಣೆಯನು ಮಾಡಲು । ತೀವಿದ ಪ್ರೀತಿಯಿಂ ಬಂದು ॥ ೩೨ ॥

ದೊರೆದೊರೆಗಳ ಕಿರೀಟತಾಟಿತದಿವ್ಯ । ಚರಣಸೇವೆಯ ಭಕ್ತಿಯಿಂದ ॥
ನೆರೆ ಕಿಂಕರನಾಗಿ ಮಾಡುವೆ ನನ್ನ ನೀ । ಮರೆಯದಿರೆಲೆ ಭವ್ಯಬಂಧು ! ॥ ೩೩ ॥

ಎಂದು ನುಡಿದ ನುಡಿಯನು ಕೇಳುತ ಬೋ- । ಧೇಂದು ಮಗುಳಿಯಿಂತು ನುಡಿದ ॥
ವೃಂದಾರಕ ! ಕೇಳಮೃತಸುಖವನೀವ- । ದೊಂದು ಸಾಮರ್ಥ್ಯವನುಳ್ಳ ॥ ೩೪ ॥

ವರಪಂಚಗುರುಗಳ ನಾಮೋಚ್ಚರಣೆಯಿಂ । ಸುರಗತಿ ತಾನೇನಗ್ಗಳವೇ ? ॥
ನೆರೆನಂಬಿ ಜಿನರ ಶ್ರೀಪಾದಪದ್ಮಂಗಳ । ಮರೆಯದಿರ್ಪಂಚಪದಗಳ ॥ ೩೫ ॥

ಜಿನನಿರೂಪಿತವಾದೇಳು ತತ್ವಗಳೊಳು । ಮನವಿರಲಾವಾಗ ನಿನಗೆ ॥
ಕುನಯುವ ಬಿಡು ಕುಮತದೊಳು ನಂಬುಗೆ ಬೇಡ । ಜಿನರ ಪೂಜಿಸು ನಿಚ್ಚ ನಿಚ್ಚ ॥ ೩೬ ॥

ಅಧಿಗಮ ಸಮ್ಯಕ್ತ್ವದೊಳಾಚರಿಸೆಂದು । ಮುದದಿ ನುಡಿಯೆ ಜ್ಞಾನೇಂದು ॥
ಆದ ಕೇಳಿ ನಾಕಿಗ ಮೆಚ್ಚಿ ತಾ ಕೊಂಡಾಡೆ । ವಿಧುಕಾಂತಿಯಿಂ ಮಿಗಿಲಾದ ॥ ೩೭ ॥

ತೋರಮೌಕ್ತಿಕದ ನಕ್ಷತ್ರಮಾಲೆಯೆಂಬ । ಹಾರವ ಜನವಶ್ಯವೆಂಬ ॥
ರಾರಾಜಿಪ ವಜ್ರ ನೊಸಲ ತಿಲಕವನು । ಸೂರಿಯಪ್ರಭೆಯೆಂದೆಂಬ ॥ ೩೮ ॥

ಧಗಧಗಿಸುವ ಕಂಠಮಾಲೆಯ ಸರವನು । ಜಗದಾನಂದ ಪೆಸರಿನ ॥
ಸೊಗಯಿಪ ನವರತ್ನಖಚಿತ ಕಿರೀಟವ । ಸುಗುಣರರಸಗಿತ್ತ ದೇವ ॥ ೩೯ ॥

ವೈರಿದಲ್ಲಣವೆಂಬ ಕಾಲಪೆಂಡೆಯುವನು । ಭೈರವನೆಂದೆಂಬ ಗದೆಯ ॥
ನೈರುತ್ಯವೆಸರಿನ ನಾಗಪಾಶವನಾ । ಕೈರವನೇತ್ರಗೆ ಕೊಟ್ಟ ॥ ೪೦ ॥

ಶತ್ರುಸಂಹಾರವೆಂದಿನಿಸುವ ಖಡ್ಗವ । ನೇತ್ರಾನಂದದ ಬಾಕು ॥
ಛತ್ರವ ಕೊಟ್ಟನು ಚಂದ್ರಮಂಡಲವೆಂಬ । ಸುತ್ರಾಮಸಮ ವೈಭವಗೆ ॥ ೪೧ ॥

ಕನಕದಂಡೆಯ ಚಾಮರಗಳ ನಾಲ್ಕನು । ಮಿನುಗುವ ಸಿಂಹವಿಷ್ಟರವ ॥
ಜನಪಗೆ ಚಿತ್ತಾಪಹಾರಿವೆಸರನುಳ್ಳ । ಘನವಾದ ವೀಣೆಯ ಕೊಟ್ಟು ॥ ೪೨ ॥

ಹರುಷದಿಂದಲೆ ಬೀಳ್ಕೊಂಡು ವಿಮಾನವ । ಸುರನೇರಿ ಪೋದತ್ತಲಿತ್ತ ॥
ಪರಪುರುಷಾರ್ಥ ಚಿಂತಾಮಣಿ ಜ್ಞಾನೇಂದು । ಹರುಷೋತ್ಕರ್ಷಚಿತ್ತನಾಗಿ ॥ ೪೩ ॥

ಜಿನಧರ್ಮಕೆ ಸರಿಯಾದ ನಿರ್ಮಲಮಾರ್ಗ । ಜಿನಧರ್ಮಕೆಣೆಯಾದ ಧರ್ಮ ॥
ಜಿನದೇವರಿಗೆ ಸಾಟಿಯಾದ ದೇವರುಗಳು । ಮನುಜಲೋಕದೊಳುಂಟೆ ನೋಡೆ ॥ ೪೪ ॥

ಗುರುವೆಂದರೆ ಜಿನಯೋಗೀಶರಿಂದಿಲ್ಲ । ಸುರಗತಿ ಮುಕ್ತಿಯ ಕೊಡುವ ॥
ಗುರುಪಂಚಮಂತ್ರದಿಂದಧಿಕ ಮಂತ್ರಗಳಿಲ್ಲ । ಗುರುಗಳೈವರ ನೆನೆದವರ ॥ ೪೫ ॥

ದುರಿತ ಪೊರ್ದುವುದೆ ಹರಿಯು ಕಂಡ ಕರಿಗಳು । ಇರದೋಡುವಂತೋಡುವುದು ॥
ಸರಿಯುಂಟಿಯವರೇ ಲೋಕಕೆ ಧನ್ಯರೆನುತಾ- । ಗರವುಗ ಮೆಚ್ಚಿ ಪೊಗಳುತ ॥ ೪೬ ॥

ಜಳಕವ ಮಾಡಿ ಧೋತ್ರವ ನಿಡಿವರವುಟ್ಟ । ಖಳಕರ್ಮವಿಜಯ ಜಿನಪನ ॥
ಚೆಲುವಡಿಗಳ ಪೂಜೆಯ ಮಾಡಿ ನುತಿಗೈದು । ತಲೆಯೊಳು ಶೇಷೆಯ ಮುಡಿದು ॥ ೪೭ ॥

ಇಂದು ಎನಗೆ ಪಾರಣೆ ಪುಣ್ಯದಿಂದೆತ್ತ- । ಳಿಂದಾದರು ಮುನಿವೃಂದ ॥
ಬಂದರೇಕಾಂತ ಭಿಕ್ಷೆಯ ಮಾಡಿಪೆನೆಂದಾ- । ನಂದಚಿತ್ತದಿ ಜ್ಞಾನೇಂದು ॥ ೪೮ ॥

ಪಿಡಿದುದಕ ತುಂಬಿದ ಹೊಂಗಿಂಡಿಯನ- । ಲ್ಲಿಡೆಯಾಡುವ ಮಾರ್ಗಕಾಗಿ ॥
ನಡೆತಂದು ನಾಲ್ಕು ಬಟ್ಟೆಯು ಕೂಡಿರ್ದಲ್ಲಿ । ಪೊಡವಿಯಾಣ್ಮನು ನಿಂತುಕೊಂಡು ॥ ೪೯ ॥

ಮುನಿಪರಮನಸಾವಾಗ ಕಾಣ್ಬೆನೊ ಎಂದು । ನೆನೆವುತ ನಿಂದಿರುವಂತೆ ॥
ಮುನಿಗಳ ಬರವ ಹಾರುತ ಜ್ಞಾನಚಂದ್ರನು । ಕನಕಾಚಲದಂತಿಹನು ॥ ೫೦ ॥

ಬಡಗ ನೋಡುವನೊಮ್ಮೆ ಪಡು ನೋಡುವನೊಮ್ಮೆ । ಒಡನೆ ತೆಂಕಲು ಮೂಡಲಾಗಿ ॥
ಕುಡುತೆಗಂಗಳ ಪಸರಿಸಿ ಎಂಟು ದೆಸೆಗಳ । ನಡುಪಥದತ್ತೊಮ್ಮೆ ನೋಳ್ಪ ॥ ೫೧ ॥

ಅಲ್ಲಿಂದ ಬಿಟ್ಟೊಂದು ಮಾರ್ಗದೊಳಗೆ ಬಂದು । ನಿಲ್ಲುವ ದೆಸೆಯ ನೋಡುತಲಿ ॥
ಅಲ್ಲಿಯು ಮುನಿಗಳ ಬರವ ಕಾಣದೆ ರಾಯ । ತಲ್ಲಣಿಸುವ ಮನದೊಳಗೆ ॥ ೫೨ ॥

ಅನ್ನವ ಮುನಿಗಳ್ಗೆ ಇತ್ತವರ ಶೇ- । ಷಾನ್ನವನುಣುವಂತ ಪುಣ್ಯ ॥
ಧನ್ಯರಿಗಲ್ಲದೆ ನನಗೇಕೆ ಬಹುದೆಂದು । ತನ್ನ ತಾ ನಿಂದಿಸಿಕೊಂಬ ॥ ೫೩ ॥

ನಡೆತಂದಲ್ಲಿಂದ ಚಂದ್ರಕಾಂತದೊಂದು । ಕೋಡುಗಲ್ಲ ನೆಮ್ಮಿ ನಿಲಲು ॥
ತಡೆಯದೆ ಮುನಿಬಂದೊಸಗೆಯ ಪೇಳ್ವಂತೆ । ಒಡನೆ ತೀಡಿತು ತಂಗಾಳಿ ॥ ೫೪ ॥

ತಳಿತವು ಫಲಜಾತಿ ಮರಗಳು ಲತೆಗಳು । ತಳೆದವು ಕುಡಿಯಿಟ್ಟು ಪೂವ ॥
ಹೊಳೆದುದು ಬೆಳಗು ಇನನ ತೀವ್ರಕಿರಣವ । ತಳೆದು ತಂಪಿಂ ಬಾನೊಳಗೆ ॥ ೫೫ ॥

ಬೆಳಗುಗಂಡಾತ್ಮನ ಮುನಿಗಳು ನಲಿವಂತೆ । ಹೊಳವು ಕಂಡಾ ರಾಯಕುವರ ॥
ನಲಿದನು ಮುನಿಗಳ ಬರವೆಂದು, ನಲಿಯರೆ । ಖಳಕರ್ಮದೂರರಾದವರು ॥ ೫೬ ॥

ಸುರಕುಜವೆರಡು ಧರೆಗೆ ಬರುತಿರ್ದವೋ । ತರುಣಾರ್ಕಪೂರ್ಣಚಂದ್ರಮರು ॥
ತರಣಿಪಥದಿ ಭೂಮಿಗಿಳಿದು ಬರ್ಪಂದದಿ । ಬರುತಿರೆ ಚಾರಣಯುಗಲ ॥ ೫೭ ॥

ಕೆನೆವಾಲ ಕಂಡಂಚೆಯಂತೆ ನಲ್ಗಂಪಿನ । ನನೆಗಂಡ ಮರಿದುಂಬಿಯಂತೆ ॥
ಘನದೊಡ್ಡಣವ ಕಂಡ ನವಿಲು ನರ್ತಿಸುವಂತೆ । ಮುನಿಗಳರಸ ಕಂಡು ನಲಿದ ॥ ೫೮ ॥

ಇಳಿತಂದ ಮುನಿಗಳ ಬಲವಂದು ಮೂಸೂಳು । ನಿಲಿಸಿ 'ತಿಷ್ಠ ತಿಷ್ಠ' ಎಂದು ॥
ಜಲಶುದ್ಧಿಯನಿತ್ತು ಹಸ್ತಲಾಗುವಿನಿಂ- । ದಿಳೆಯಾಣ್ಮನೊಡಗೊಂಡು ಬಂದು ॥ ೫೯ ॥

ಚರಣದೊಳೆದು ನೀರ ಶಿರಕೆ ತಳಿದುಕೊಂಡು । ಚರಣಪೂಜೆಯ ಮಾಡಿ ಬಳಿಕ ॥
ಸಿರವದ್ಯಮಪ್ಪ ದಿವ್ಯಾಹಾರಂಗಳ । ಪರಿವಾಣದೊಳು ಶೋಧಿಸಿಟ್ಟು ॥ ೬೦ ॥

ನವವಿಧ ಪುಣ್ಯವು ಸಪ್ತಗುಣದಿ ಕೂಡಿ- । ಯವರ ಇಚ್ಛೆಗೆ ತಕ್ಕಂತೆ ॥
ಸವಿಸವಿಯಪ್ಪ ಭಕ್ಷ್ಯಾನ್ನ ಪಾನಗಳನು । ಭುವನೇಶ ಕೊಡಲುಂಡು ದಣಿದು ॥ ೬೧ ॥

ಪರಸಿಯಕ್ಷಯದಾನಫಲನಿಮಗಕ್ಕೆಂದು । ತೆರಳಿ ಪೋಗುತಲೊಂದು ಚೂತ ॥
ವರವೃಕ್ಷದಡಿಯೊಳಿರುವ ಚಂದ್ರಕಾಂತ- । ದುರುಚೆಲುವಿನ ಪಾಸರೆಯೊಳು ॥ ೬೨ ॥

ಪರಮ ಶುಕ್ಲಧ್ಯಾನದೊಳಿರುತಿರಲಿತ್ತ । ದೊರೆರನ್ನನ ಭಕ್ತಿಗುಣಕೆ ॥
ಸುರರೆಲ್ಲರು ಮೆಚ್ಚಿ ನವರತ್ನಂಗಳ । ಶಿರಸ್ಸಿನಿಂದಲೆ ಪೊತ್ತು ತಂದು ॥ ೬೩ ॥

ಸುರವರ್ತ್ಮದೊಳು ನಿಂದು ಜಯಜಯವೆನುತಾಗ । ಕರೆವರು ಹೂಮಳೆಗೂಡಿ ॥
ತರಣಿಪಥದೊಳು ದುಂದುಭಿ ಮೊಳಗಿದುವಾಗ । ಮರುತ ತಣ್ಣನೆ ತೀಡಿದುದು ॥ ೬೪ ॥

ಧರೆಯಾಕಾಶದಿಕ್ತಟದೊಳು ರತ್ನದ । ವರಕಾಂತಿ ತುಂಬಿರೆ ಕಂಡು ॥
ಅರಸ ತನ್ನಯ ಮನದೊಳು ಸಂತಸತಾಳಿ । ಕರೆಸಿ ಯಾಚಕ–ಪಾಠಕರ ॥ ೬೫ ॥

ಜನಪತಿಯವರ್ಗೆ ರತ್ನದ ರಾಶಿಗಳನು । ಮನದನುರಾಗದಿಗೊಟ್ಟು ॥
ಇನಿಸು ವೇಳೆಯವು ಕಳೆಯಲಾಗ ಮುನಿಯುಂಡ । ಕನಕಪಾತ್ರದ ಶೇಷಾನ್ನವನು ॥ ೬೬ ॥

ಕಡು ಸಂತೋಷದಿ ಪಾರಣೆಯನು ಮಾಡಿ । ಒಡನೆ ಚಾರಣಚರಿತವನು ॥
ನುಡಿವುತಂದಿನ ದಿನದೊಳಗಿರುತಿರಲಿತ್ತ । ಸಡಗರದಿಂದೋರ್ವ ದನುಜ ॥ ೬೭ ॥

ನವರತ್ನ ಖಚಿತ ವಿಮಾನವ ತಾನೇರಿ । ರವಿಪಥದೊಳು ಪೋಗುತಿರಲು ॥
ತವಕದಿಂ ಕಲ್ಲತಾಗಿದ ಹೆಂಟೆಯಂತಾ- । ಗವನ ವಿಮಾನವು ಬೇಗ ॥ ೬೮ ॥

ಹಿಂದಕ್ಕೆ ಚಿಗಿಯಲು ವಿಸ್ಮಯವನು ತಾಳಿ । ತಂದು ಮನಕೆ ಮುನಿಸನ್ನು ॥
ದಂದಶೂಕನು ಫೂತ್ಕರಿಸುವಂತಸುರನು । ನಿಂದು ಪಲ್ಗಳನು ಕಡಿವುತ ॥ ೬೯ ॥

ಕೆಳಭಾಗವ ನೋಡಲು ವೃಕ್ಷದಡಿಯೊಳು । ಪೊಳೆವ ಮುನಿಗಳನು ಕಂಡು ॥
ಕಳೆದ ಭವಗಳ ವಿಭಂಗಜ್ಞಾನದೊಳಾಗ । ತಿಳಿದು ವೈರಿಗಳೆಂದು ಮುನಿದು ॥ ೭೦ ॥

ತೊಲಗಿಸಿ ಧ್ಯಾನದಿಂದೀ ಬಿಸುಗುಗಳನು । ತಲೆಯ ಶಿಲೆಯೊಳಪ್ಪಳಿಸಿ ॥
ಕೊಲುವೆನಲ್ಲದೆ ಬಿಡೆನೆಂದು ಘರ್ಜಿಸುತಾ- । ಗಲಘು ಪರಾಕ್ರಮದಿಂದ ॥ ೭೧ ॥

ಕಪಟಮಾನಸನು ವಿದ್ಯೆಗಳನು ಕರೆದಾಗ । ಚಪಲನೇತ್ರೆಯರು ನೀವಾಗಿ ॥
ಕ್ಷಪಣರ ತಪಕೆ ವಿಘ್ನವ ಮಾಡಿರೆಂದು ತಾ- । ಲಪಿಸಿ ಕಳುಹಿ ಭರದಿಂದ ॥ ೭೨ ॥

ವನಿತೆರ ರೂಪಗಳನು ತಾಳಿ ಬಂದಾಗ । ಮುನಿಪತಿಗಳ ಮುಂದೆ ನಿಂದು ॥
ಇನಿತು ವತ್ಸರ ನೀವು ಕೋಟಿ ಜಪಗಳನು । ಮನಮುಟ್ಟಿ ಜಪಿಸುತ್ತಲಿದ್ದ ॥ ೭೩ ॥

ಫಲದಿಂದ ಸೋತೆವು ನಿಮುಗಾವೆನುತಲಾ । ಲಲನೆಯರ್ಕಡು ಬೆಡಗಿಂದ ॥
ಪಲವು ಚುಂಬನಗಳಾ ಮುನಿಗಳಾನನದೊಳು । ಸಲೆ ಮೊಗದೊಳು ಮೊಗವಿಟ್ಟು ॥ ೭೪ ॥

ಉರದ ಮೇಗಣ ಸೆರಗನು ತೆಗೆದು ತಮ್ಮ । ಗುರುಕುಚಯುಗಲಗಳಿಂದ ॥
ಇರಿದು ಮುಂದಾಡಿ ಮುದ್ದಿಸಿಯಾಲಿಂಗಿಸಿ । ಭರದಿ ಬೆಳ್ಳುಗುರಿಂದಲೌಂಕಿ ॥ ೭೫ ॥

ಸರಸಾಳಾಪವ ನುಡಿದೊಡೆ ಮುನಿಗಳು । ಪರಮಾಪ್ತ ಭಾವನೆಯಿಂದ ॥
ಚರಿಸದೆ ಸುರಗಿರಿಯೊಲು ಮಹಾಧೈರ್ಯದೊ- । ಳಿರುತಿರೆ ದನುಜನು ಕಂಡು ॥ ೭೬ ॥

ನುಡಿದನೆಲವೊ ಬಣಗುಗಳಿರ ! ನೀವೀಗ । ಕಡು ದೊಡ್ಡ ತಪಸಿಗಳೆಂದು ॥
ಪೊಡವಿಪತಿಯು ಮನೆಯೊಳು ತಿಂದು ಬಂದೀ- । ಗೊಡನೆ ಶಿಲೆಯ ಮೇಲೆ ನಿಂದು ॥ ೭೭ ॥

ಮನದೊಳು ಕಪಟವನಿರಿಸಿ ಠಕ್ಕುಗಳಿಂದ । ನೆನೆವೆವು ಪರಮನನೆಂದು ॥
ಜನಜನಿತವ ಮಾಡಿ ಜೈನಮತದೊಳಿರ್ಪ । ಘನ ದಾನಪೂಜೆಯ ಬಯಸಿ ॥ ೭೮ ॥

ದನದಂದದಿ ಬೆತ್ತಲೆ ನಿಂದು ಸ್ನಾನವ । ಕನಸುಗಳಲ್ಲಿ ನೆನೆಯದೆ ॥
ಮನುಜರ ಚಾಳೈಸಿ ಸವಿ ಸವಿಯೂಟವ । ಮನಕೆ ಬಂದಂದದಿ ತಿನುತ ॥ ೭೯ ॥

ಪೀನ ಕುಂಚವ ಕೈಯೊಳು ತಾ ಪಿಡಿಕೊಂಡು । ಮೀನಿಗಾಧಿಪ ಬಕನಂತೆ ॥
ಜ್ಞಾನ ಧ್ಯಾನಗಳಿಂದು ಹೊಟ್ಟೆಯು ಹೊರೆವುತ । ಕಾನನಾಶ್ರಿತ ಕಪಿಯಂತೆ ॥ ೮೦ ॥

ಏನ ಹೇಳುವೆ ಮಾಯದ ತಪದಂಡವ । ಮೌನಗಳನು ಮಾಡಿಕೊಂಡು ॥
ಶ್ವಾನನಂದದಿ ಮನೆ ಮನೆಗಳ್ಗೆ ಪೋಗುತ । ಹೀನಮಾನಸರು ಪಾಪಿಗಳು ॥ ೮೧ ॥

ಎಂದಿವು ಮೊದಲಾದ ಪಲವು ನುಡಿಗಳಿಂದ । ನಿಂದಿಸಿ ಕೊರಚಿ ಬೊಬ್ಬಿರಿದು ॥
ತಂದು ಮನಕೆ ಮುನಿಸನು ತನ್ನ ಕಿಂಕರ- । ಗೆಂದರೆಲೆ ಮರುಳ್ತಂಡ ! ॥ ೮೨ ॥

ಕೊರಳನರಿದು ಮೂಗ ಕೊಯ್ದು ಶರೀರವ । ಸುರಗಿಯಿಂ ತಿವಿ ತಿವಿ ತಿವಿದು ॥
ಕರುಳುಗಳುಚ್ಚಿ ಬಗ್ಗುರಿಯೆಲುಗಳ ನೀ । ಮುರಿದು ಬೆರಳುಗಳ ಕೊರೆದು ॥ ೮೩ ॥

ಚರಣಗಳನು ಛಿನ್ನ-ಭಿನ್ನಗಳನು ಮಾಡಿ । ಮರುಳುತಂಡಗಳಿಗೌತಣವ ॥
ಭರದಿ ಮಾಡಿಸಿ ಬನ್ನಿರೆಂದಾ ಕ್ರೂರನು । ಒರೆದ ನುಡಿಗಳನು ಕೇಳಿ ॥ ೮೪ ॥

ಕಡು ಬೇಗದಿಂದ ದಾನವ ಸಮೂಹವು । ಘುಡುಘುಡಿಸುತ ಕೋಪದಿಂದ ॥
ನಡು ನಡುಗುತ ಕಡೆ ಕಾಲದಿ ಬರ್ಪ । ಸಿಡಿಲಂತೆ ಭಟಿಭಟಿರೆನುತ ॥ ೮೫ ॥

ಬಂಡುನುಡಿಗಳಿಂದ ಬೈವುತಲೈತಂದು । ಕೆಂಡದ ಮಳೆಗಳ ಕರೆದು ॥
ಗುಂಡಿನ ಪನಿಗಳ ಸುರಿವುತ ಫಣಿಗಳ । ಹಿಂಡು ಹಿಂಡುಗಳಿಂದ ಮುನಿಯು ॥ ೮೬ ॥

ಅವರವಯವಂಗಳ ಸುತ್ತಿಸಿ ವೃಶ್ಚಿಕ । ನಿವಹದಿಂದೂರಿಸುತಾಗ ॥
ತವಕದಿಂದುರಿ ಸಿಂಗಿಗಳಿಂದ ಕಡಿಸುತ । ತಿವಿದು ಹಾಕೆಂದು ನುಡಿವುತ ॥ ೮೭ ॥

ಹರಿಗಳಿಂ ಗಜರಿ ಘರ್ಜಿಸುತ ತರಕ್ಷುವಿಂ- । ದೊದರಿಸುತಾಗ ಶ್ವಾನಗಳಿಂ ॥
ಕೆದರಿಸುತೂಳಿಸುತವರು ಭೋಯೆಂದಾಲಿ । ಮೊರೆದು ಬೊಬ್ಬಿರಿದು ಕುಣಿವುತ ॥ ೮೮ ॥

ಮೆಟ್ಟಿ ಕೆಡಹಿ ಪಿಸುಣರುಗಳ ಹಿಂಗಟ್ಟು । ಕಟ್ಟಿ ಕಾಸಿದ ಶಲಾಕೆಗಳಿಂ ॥
ಪೆಟ್ಟಿರೊ ಕೈಕಾಲುಗಳಿಗೆ ಕ್ರಕಚದಿ । ಹೊಟ್ಟೆಗಳನು ಸೀಳಿ ದೂಳ ॥ ೮೯ ॥

ಕಡು ಬೇಗದಿಂದ ತುಂಬಿರೊ ಠಾಣೆಗಳಿಂದ । ಹೊಡೆಯಿರೊ ತಲೆಯೊಡೆವಂತೆ ॥
ಕಡಿಯಿರೊ ಪರಶುಗಳಿಂದ ಬಾಹುಗಳನು । ಯಿಡಿಯಿರೊ ಮುಸಲಗಳಿಂದ ॥ ೯೦ ॥

ಕೊಚ್ಚಿರೊ ಯವಧಾರಣದಿ ಸರ್ವಾಂಗವ । ಚುಚ್ಚಿರೊ ಸಬಳಗಳಿಂದ ॥
ಉಚ್ಚಿರೊ ನಾಲಿಗೆಗಳನು ಬಾಯಿಗಳಿಂದ । ಎಚ್ಚು ಕೆಡಹಿರೊ ಬಾಣಗಳಿಂ ॥ ೯೧ ॥

ಇವು ಮೊದಲಾದುಪಸರ್ಗವ ದನುಜರ । ನಿವಹ ಮಾಡುತ ಭೋಯೆಂದು ॥
ತವಕದಿಂದಾಲಿ ಬೊಬ್ಬಿರಿದು ನಗುತಲಿರೆ । ಕುವರನಾಗರ್ಧ ರಾತ್ರೆಯೊಳು ॥ ೯೨ ॥

ಕಲ ಕಲ ರವವನು ತಾ ಕೇಳಿ ಎಚ್ಚತ್ತು । ಚೆಲುವರ ದೇವ ಶೀಘ್ರದೊಳು ॥
ಫಲಕ ಖಂಡೆಯವನು ಕರದೊಳು ತಾನಾಂತು । ನಲವಿಂದ ಮುನಿಗಳಿರ್ದೆಡೆಗೆ ॥ ೯೩ ॥

ಬರುತಿರಲಿತ್ತ ಯಮಿಗಳು ಸ್ವಾಂತದೊಳಾಗ । ಚರಿಸದೆಯನುಪ್ರೇಕ್ಷೆಗಳ ॥
ಭರದಿಂದ ಷೋಡಶ ಶುಭಭಾವನೆಗಳ । ಸುರುಚಿರ ದಶಧರ್ಮವನು ॥ ೯೪ ॥

ನೆನೆವುತ ಮನವ ಪೂರ್ವಿನ ಕೊನೆಯೊಳಗಿ- । ಟ್ಟನುಪಮ ಶುಕ್ಲಧ್ಯಾನವನು ॥
ಮುನಿಯುಗಲವು ಮಾಡುತಲುಪಸರ್ಗವ- । ನಿನಿತು ಲೆಕ್ಕಿಸದೆ ಧೈರ್ಯದೊಳು ॥ ೯೫ ॥

ಸುರಶೈಲದಂತಚಲಿತಧ್ಯಾನದೊಳಿರ್ದ । ಪರಮ ಮುನಿಗಳನು ಕಂಡು ॥
ನೆರೆಗಲಿ ಜ್ಞಾನೇಂದು ರಾಜಕುಮಾರನು । ಎರಗಿ ಯೋಗಿಗಳಡಿಗಳಿಗೆ ॥ ೯೬ ॥

ಕಡು ಶಾಂತಿಗೆ ಮೆಚ್ಚಿ ವಿಸ್ಮಯವನು ಬಟ್ಟು । ಪೊಡವಿಪ ಮುನಿಗಳಿಗಾಗ ॥
ಬಿಡದೆ ವಜ್ರದ ಕೋಂಟೆಯ ಸುತ್ತ ನಿರ್ಮಿಸಿ । ಕಡು ದೊಡ್ಡ ಕುಲಿಶ ಖರ್ಪರವ ॥ ೯೭ ॥

ಹರುಷದಿಂ ಕೌಚಿ ವಿದ್ಯಾದೇವತೆಗಳ- । ನಿರಿಸಿ ಕಾವಲಿಗಾಗಲ್ಲಿ ॥
ದೊರೆರನ್ನ ಜ್ಞಾನೇಂದು ದನುಜೇಂದ್ರನೊಳಗಿಂತು । ಒರೆದನೆಲೆ ಪಾಪಕರ್ಮ ! ॥ ೯೮ ॥

ದುರುಳ ಚಾಂಡಾಳ ದಾನವ ! ಮುನಿಗಳ ಮೇಲೆ । ಕರುಣವಿಲ್ಲದೆ ಕಲ್ಲಮಳೆಯ ॥
ತರಿಗೆಂಡದ ಮಳೆಗಳನು ಕರೆದು ಮು- । ತ್ತುರಗಗಳಿಂದ ಕರ್ಚಿಸಿದೆ ॥ ೯೯ ॥

ಅಳುರ್ವಂತೆ ಹುರಿದ ಮಳಲುಗಳ ಸುರಿದೆ ನೀ । ಹುಳುಕ ನೆನೆದು ಮುನ್ನೆಸಗಿದ ॥
ಪಳಿಗಂಜದೆ ಪಾತಕಕೆ ಕೊಕ್ಕರಿಸದೆ- । ಯಳಿ ಮನದಿಂದೆಲೆ ನೀಚ ! ॥ ೧೦೦ ॥

ನರಕಾಯುಷ್ಯವ ಕಟ್ಟಿಸಿಕೊಂಡೆ ಎಂ- । ದರಮಗ ನುಡಿದುದ ಕೇಳಿ ॥
ಕರದ ಗದೆಯ ತೂಗುತ ದಾನವನಿಂ- । ತೊರೆದನೆಲೆ ಹುಲು ಮನುಜ ! ॥ ೧೦೧ ॥

ನರಕೀಟಕ ಖೂಳ ! ಖೇಚರೇಶ್ವರ ನೀ- । ನೆರೆ ಬೆದರಿಸಿದ ಹೆಮ್ಮೆಯೊಳು ॥
ದುರುದುಂಬಿತನದಿಂದ ನನಗಿದಿರಾದೆ ಹಾ । ಅರಿರೆ ಮನುಜರೊಳಗಧಮು ! ॥ ೧೦೨ ॥

ಕರಗಳ ಬಿದಿರ ಕಳಿಲೆಯನು ಮುರಿವಂತೆ । ಮುರಿದು ಹಾಕುವೆ ನಿನ್ನಂಗವನು ॥
ಭರದಿಂದ ಹುಂಜಿಯ ಹೊಸೆವಂತೆ ಹೊಸೆದು ನಾ- । ನುರುಹುವೆನೆಂದೆನುತವನು ॥ ೧೦೩ ॥

ನಿಶಿತವೊನೆಯನುಳ್ಳ ಶೂಲದಿ ತಿವಿಯಲು । ವಸುಧೇಶ್ವರ ಕಂಡು ಹೊಳೆದು ॥
ಪಿಶಿತ ಭಕ್ಷಕ ಮಾತಂಗ ವ್ಯಂತರ ! ನಿ- । ನ್ನಸುರಿಗುಬ್ಬಸವನೆಸಗದೆ ॥ ೧೦೪ ॥

ಬಿಡುವನಲ್ಲೆಂದು ಗದೆಯನೆತ್ತಿ ಜ್ಞಾನೇಂದು । ಹೊಡೆಯಲು ಹಣೆಗೆನ್ನೆಯನು ॥
ದಡ ದಡ ದಡಿಸುತ ಮೂರ್ಛೆಯ ತಾನಾಂತು । ಕೆಡೆದನು ದೈತ್ಯ ಧರೆಯೊಳು ॥ ೧೦೫ ॥

ತ್ವರಿತದಿಂದಲೆ ಚೇತರಿಸಿಕೊಂಡೆಲವೊ । ನೆರೆಗಲಿಯೆಂದು ನೀನೆನ್ನ ॥
ಮರೆಸಿ ಗದೆಯಲಿ ಬಡಿದೆ ನಿನ್ನ ಜಿಹ್ವೆಯ । ಹೊರತಾರದಿರ್ದೊಡೆ ನಾನು ॥ ೧೦೬ ॥

ಸರಳ ಮೊನೆಗಳಿಂದ ಶಿರವ ಪರಿಯದೊಡೆ । ವರ ಪಟ್ಟವೇಕೆ ದಾನವರ ॥
ಸ್ಮರಿಸಿಕೊ ನಿನ್ನ ದೈವವನೆಂದಾ ದುಷ್ಟ । ಧರೆಯನಾಕಾಶ ದಿಕ್ಕುಗಳ ॥ ೧೦೭ ॥

ಪರಿಪೂರ್ಣವಾಗುವಂದದಿ ವಿಷವೃಷ್ಟಿಯ । ಕರೆಯಲು ಜ್ಞಾನೇಂದು ಕಂಡು ॥
ವರ ದಿವ್ಯ ಶರದಿಂದ ಖಂಡಿಸಿ ಬಿಸುಟಾಗ । ನೆರೆಗಲಿಯಿಂತೆಂದು ನುಡಿದ ॥ ೧೦೮ ॥

ಬರಿಗೂಳು ತಿಂದು ನೀಚರ ಹೆದರಿಸಿಕೊಂಡು । ಕುರಿ ಕೋಳಿ ಮುಂತಾದುವನು ॥
ಕರಿತನದಿಂ ತಿಂಬೊಡಲ ಸೀಳುವೆನೆಂದು । ಕಲಿಗಳ ದೇವ ಮೂದಲಿಸಿ ॥ ೧೦೯ ॥

ಚರಣವ ಪಿಡಿದು ತಿರ್ರನೆ ತಿರುಗಿಸುತ । ತ್ವರಿತದಿಂ ಪಾಸರೆಯಲ್ಲಿ ॥
ಧುರಗಲಿ ಬೀಸಿ ದಾನವನಪ್ಪಳಿಸಲು । ಧರೆಯದುರಿತು ನಭದಿಂದ ॥ ೧೧೦ ॥

ಉಡುತತಿಯುದುರಿತಾಶಾನಾಗಂಗಳು । ಕೊಡಹಿಕೊಂಡವು ಕಂಧರವ ॥
ಬಿಡವೆ ದೇವಾಸುರರೆಲ್ಲ ಬೆರ್ಚಿದರಾ । ಕಡುಗಲಿ ಬಡಿದಾರ್ಭಟಿಗೆ ॥ ೧೧೧ ॥

ದನುಜೇಶನಪವರ್ತಿಜೀವಿಯಾದುದರಿಂದ । ತನು ಪಾದರಸದಂದದೊಳು ॥
ಇನಿಸು ಬೇಗದಿ ಬಂದು ಕೂಡಿಕೊಳಲು ದೈತ್ಯ । ಘನ ಕುಪಿತದೊಳಿಂತು ನುಡಿದ ॥ ೧೧೨ ॥

ಕರುಹೈದ ! ಕೇಳೆಲೊ ನಿನ್ನಯ ಸೊಕ್ಕಿನ । ದುರುಳತನದ ಬುದ್ಧಿಯುಳಿದು ॥
ಚರಣಕೆರಗಿ ಎನ್ನಯ ಸೇವೆಯ ಮಾಡಿ । ಇರು ನೀನು ನಿಶ್ಚಿಂತೆಯಿಂದ ॥ ೧೧೩ ॥

ಅಲ್ಲದಿರ್ದೊಡೆ ಎಲೆ ನರಪಶು ! ನನ್ನೊಂದು । ಬಲ್ಲಿತಪ್ಪೀ ಗದೆಯಿಂದ ॥
ಕೊಲ್ಲದೆ ಬಿಡೆನೆಂದು ನುಡಿದ ಪಿಶಾಚನ । ಸೊಲ್ಲ ಕೇಳುತ ಜ್ಞಾನೇಂದು ॥ ೧೧೪ ॥

ಕರುಣವಿಲ್ಲದೆ ಎಲೋ ದಾನವ ! ಮುನಿಗಳ್ಗೆ । ಪರಮ ಘೋರೋಪಸರ್ಗವನು ॥
ದುರುಳ ! ನೀ ಮಾಡಿದೆ ಹಲವು ಮಾತುಗಳೇಕೆ । ಬರ ನಿಷ್ಠುರವಾದೆನ್ನ ॥ ೧೧೫ ॥

ಸರಳ ಮೊನೆಗಳಿಂದ ನಿನ್ನ ಭಾಗದೊಳಿರ್ದ । ನೆರೆ ಡೊಂಕಿದಕ್ಕರಗಳನು ॥
ಒರಸುವೆನೆಂಬ ನುಡಿಯ ಕೇಳಿ ಗುಹ್ಯಕ । ಮೊರೆದು ಪಲ್ಲುಗಳನು ತಿನುತ ॥ ೧೧೬ ॥

ಕಡು ಕೋಪದಿಂದ ಮಿಸೆಗಳನು ತಿರುವುತ । ಕಡೆಗಂಗಳೊಳು ತಂದು ಕಿಡಿಯ ॥
ಒಡನೆ ಭ್ರೂಯುಗವ ಗಂಟಿಕ್ಕಿಕೊಂಡಸುರನು । ನುಡಿದನೆಲವೊ ದುರ್ಗಂಧಿ ! ॥ ೧೧೭ ॥

ವರ ದಿವ್ಯ ದೇಹಿಗಳೊಡನೆ ಕಾಳಗ ಸಲ್ಲ । ಮರುಳೆ ! ನೀ ಸಾಯದಿರೆಂದು ॥
ಧುರದೊಳು ಶಕ್ತಿಯಿಂದಿಡಲಾರ್ಭಟಿಸುತ । ಭರದಿ ಭೀಕರ ಶಕ್ತಿ ಬಂದು ॥ ೧೧೮ ॥

ದೊರೆ ಕುವರನ ದಿವ್ಯ ದೇಹವ ತಾಗಲು । ಸೊರಗಿ ಮೈಮರೆದು ಬೆಂಡಾಗಿ ॥
ಇರುತಿರಲಿಂತು ಕಿಂಚಿತ್ತು ಪೊತ್ತಿನ ಮೇಲೆ । ಚರಮಗಾತ್ರವನು ಭೇದಿಪೊಡೆ ॥ ೧೧೯ ॥

ವರ ಶಕ್ತಿ ಸಾಲದೆ ಎರ್ದೆಯಿಂದಲಾ ಶಕ್ತಿ । ಉರುಚಿ ಪೋಗಲು ಜ್ಞಾನೇಂದು ॥
ತುರಿಹದಿಂದೆಚ್ಚತ್ತು ಜಿನರನು ನೆನೆವುತ- । ಲರಿಮಥನ ನಾಮವಾಂತ ॥ ೧೨೦ ॥

ರಥವನಡರಿ ಕಾರ್ಮುಕವ ಕೈಯೊಳಗಾಂತು । ಪೃಥುವಿಪ ದನುಜನನಾಗ ॥
ಹತಿಸುವೆನೆಂದು ರಥವ ಮುಂದಕೆ ನೂಂಕ- । ಲತಿ ರೌದ್ರಮೂರ್ತಿ ರಕ್ಕಸನ ॥ ೧೨೧ ॥

ಬರವನು ಕಂಡೀತನ ಶಿರವನು ನಾನು । ಧುರದೊಳಗರಿದೆನ್ನ ಜನಕೆ ॥
ಅರುಣರುಧಿರವನು ಕುಡಿಸುವೆನೆಂದಾಗ । ಕರದೊಳು ತಿರುಪಿ ಚಕ್ರವನು ॥ ೧೨೨ ॥

ಪಿಡಿದಿರುವಷ್ಟರೊಳಗೆ ಗಜಚರದೇವ । ಕಡುವೇಗದಿಂದಿಳಿ ತಂದು ॥
ಪೊಡವಿಪತಿಯ ಮುಂದೆ ನಿಂದು ತಾ ಬೆಸನನು । ಕೊಡು ಕೊಡೆನ್ನೊಡೆಯನೆಂದೆನುತ ॥

ಚರಣಕೆರಗಿ ಬೆಸನನು ಪಡೆದಾ ದೇವ । ಕರದಿ ಕುಲಿಶ ಗದೆ ಪಿಡಿದು ॥
ದುರುಳ ದೈತೇಯ ! ನೀ ತೊಲಗು ತೊಲಗು ಎಲೋ ! । ಪರಮ ಮುನಿಗಳಿಗೆ ಮುನಿದು ॥

ಕರುಣವಿಲ್ಲದೆಯುಪಸರ್ಗವನೆಸಗಿದೆ । ಕರಿಮುಸುಡಿನ ಪಾಪಿಷ್ಠ ! ॥
ನರಕಗಾಮಿಯು ನೀ ತೊಲಗದಿರ್ದೊಡೆ ನಿನ್ನ । ಶಿರವ ಚೆಂಡಾಡುವೆನೆಂದು ॥ ೧೨೫ ॥

ಗದರಿ ಘರ್ಜಿಸಿ ನುಡಿಯುತಲಿರಲತ್ತಲು । ಸದಮಲಚರಿತ ಚಾರಣರು ॥
ಮುದದಿಂದ ಪರಮ ಶುಕ್ಲಧ್ಯಾನವೆಂದೆಂಬ । ಗದೆಯಿಂದ ಕರ್ಮ ವೈರಿಯನು ॥ ೧೨೬ ॥

ಭರದಿಂದ ನುಗ್ಗೇಳ ಬಡಿದಾ ಮುನಿಗಳು । ಧರೆಯಿಂದ ಮೇಲೆ ಗಗನಕೆ ॥
ವರ ದೇಹವೈದುಸಾಸಿರ ಬಿಲ್ಲನುದ್ದದಿ । ತುರಿಹದಿಂ ಪುಟನೆಗೆದಾಗ ॥ ೧೨೭ ॥

ಸಕಲವಿಮಲಕೇವಲಬೋಧ ಪುಟ್ಟೆ ಮ- । ತ್ತಕಲಂಕ ಚರಿತರ್ಗೆ ಸುರರು ॥
ಪ್ರಕಟದೊಳಗೆ ಗಂಧಕುಟಿಯ ನಿರ್ಮಾಪಿಸಿ । ಸಕಲಾಮರರೆಲ್ಲ ನೆರೆದು ॥ ೧೨೮ ॥

ಕರಗಳ ಜೋಡಿಸಿ ಜಯ ಜಯವೆನುತಾಗ । ಸುರಿದರು ತರುಜಮಳೆಯನು ॥
ಮೊರೆದವಾಕಾಶದೊಳಗೆ ಧಿಂಧಿಮಿಯೆಂದು । ಸುರದುಂದುಭಿ ಕೋಟಿಗಳು ॥ ೧೨೯ ॥

ಅಷ್ಟಮಹಾಪ್ರಾತಿಹಾರ್ಯಶೋಭಿತಪರಿ- । ವೇಷ್ಟಿತ ದ್ವಾದಶಗಣವು ॥
ಅಷ್ಟಾದಶ ದೋಷ ದೂರರನಂತಚ- । ತುಷ್ಟಯಾತ್ಮಕರಾಗಿ ಜಿನರು ॥ ೧೩೦ ॥

ಪರಮ ತತ್ತ್ವಂಗಳ ಭವ್ಯರ್ಗೆ ಪೇಳುತ- । ಲಿರುತಿರಲತ್ತಲಾ ದೇವ ॥
ಸುರಗಿಯಿಂದಸುರನ ತಿವಿದು ಕೆಡಹುತಲಿ । ಕೊರೆವುತ ಗರಗಸದಿಂದ ॥ ೧೩೧ ॥

ಪರಶುವಿನಿಂದ ಪೊಳಚುತ ಕಕ್ಕಡಿಯಿಂದ । ತರಿವುತ ಶಕ್ತಿಯಿಂದಿಡುತ ॥
ಪರಿವೇಷ್ಟಿಸಿಕೊಂಡುಸುರಿಗುಬ್ಬಸವನು । ಸುರ ಮಾಡುತಿರೆ ದೈತ್ಯ ಕಂಡು ॥ ೧೩೨ ॥

ತರಹರಿಸುವುದಕೆ ಶಕ್ಯವಲ್ಲದೆ ತಾನು । ಕೊರಚಿ ಕೂಗುತ ಧೈರ್ಯಗೆಟ್ಟು ॥
ಭರದಿಂದಲೋಡಿ ಪೋಗುವ ದನುಜನ ಕಂಡು । ದೊರೆ ಕುವರನು ನಿರ್ಜರನ ॥ ೧೩೩ ॥

ಕಡಿ ಕಡಿಯೆಂದು ಬೆನ್ನಟ್ಟಿ ಮೂದಲಿಸುತ । ಹಿಡಿ ಹಿಡಿ ಹೊಡೆ ಹೊಡೆ ಎನುತ ॥
ತುಡುಗುಣಿ ತುಂಟ ಬಂಟನನೆಂದು ಬೆದರಿಸೆ । ಗಡಗುಟ್ಟಿ ನಡುಗಿ ಗುಹ್ಯಕನು ॥ ೧೩೪ ॥

ಆವೆಡೆಯೊಳು ಪೊಕ್ಕರು ಎನ್ನ ಬಿಡರೆಂದು । ಪಾವನ ಗಂಧಕುಟಿಯನು ॥
ಓವದೆ ಪೊಕ್ಕು ದೇವರ ಮುಂದೆ ಪೋಗಲಾಗ । ಕೋವಿದರಿಗೆ ಕೋಪ ತಿಳಿದು ॥ ೧೩೫ ॥

ಹರುಷದಿಂದಲಿ ಗಂಧಕುಟಿಯ ಪೊಕ್ಕಿವರು । ಕರವ ಮುಗಿದು ಮೂರು ಸೂಳು ॥
ಪರಮಾರ್ಹನ ಬಲವಂದು ಸಾಷ್ಟಾಂಗದಿಂ- । ದುರುತರ ಭಕ್ತಿಯಿಂದೆರಗಿ ॥ ೧೩೬ ॥

ಪಲವು ತೆರದಿ ಪೂಜಿಸಿ ನುತಿಗೈದಾಗ । ಚೆಲುವರರಸ ಧರ್ಮದಿರವ ॥
ನಲವಿನಿಂ ಕೇಳಿ ಮನುಜ ಕೋಷ್ಠದೊಳು ನೃಪ । ಕುಳಿತನು ಭಾವಶುದ್ಧಿಯಲಿ ॥ ೧೩೭ ॥

ಪರದಾರಾಸಹಜಾತ ಪರಮಸಂಪ್ರಿಪ್ರೀತ । ಧುರಧರೆಯೊಳಗೆ ವಿಖ್ಯಾತ ॥
ತರುಣಿಯರಿಗೆ ಮನೋಜಾತ ಗುಣವ್ರಾತ । ದೊರೆ ಜ್ಞಾನಚಂದ್ರನೊಪ್ಪಿದನು ॥ ೧೩೮ ॥

**॥ ಅಂತು ಸಂಧಿ ೧೬ಕ್ಕಂ ಪದ ೨೨೯೬ಕ್ಕಂ ಮಂಗಲಂ ॥**

## ಜಯ-ವಿಜಯರ ಭವಾವಳಿ.

ಜನಪತಿ ತಮ್ಮ ಭವಗಳನು ಬೆಸಗೊಳೆ । ಮುನಿಯುಸುರಿದನದ ಪೇಳ್ವೆ ॥ ಪ ॥

ಭಾವನೆಗಳ ಪದಿನಾರನು ಭಾವಿಸಿ । ತೀವಿದ ಘಾತಿಯ ಸುಟ್ಟು ॥
ಕೇವಲಜ್ಯೋತಿಯ ಪಡೆದ **ಶ್ರೀ ಶಾಂತೀಶ** । ದೇವ ! ಕೊಡೆಮಗೆ ನಿರ್ವೃತಿಯ ॥ ೧ ॥

ಕೆಲವೊತ್ತು ಜಿನನ ದಿವ್ಯಾಂಗವ ನೋಡುತ । ನಲವಿನಿಂದಿರ್ದು ಜ್ಞಾನೇಂದು ॥
ಕಲಿಲವಿದೂರ ಕೇವಲಿ ಜಿನರುಗಳಿಗೆ । ಚೆಲುವರ ದೇವನು ನಮಿಸಿ ॥ ೨ ॥

ಸುರನರಫಣಿಪತಿನತದಿವ್ಯ ಚರಣನೆ ! । ತರಳ ದಾನವ ನಿಮಗೇಕೆ ॥
ಕರುಣವಿಲ್ಲದೆಯುಪಸರ್ಗವ ಮಾಡಿದ । ತೆರನ ನನ್ನೊಡನುಸುರಯ್ಯ ! ॥ ೩ ॥

ಎಂದು ಬಿನ್ನವಿಸಲು ಜಿನಮುಖ ಕಮಲದಿ । ಸಿಂಧು ಘೋಷಣೆಯಂದದೊಳು ॥
ಮಂದ್ರಮಧುರಮೃದು ಹಿತಮಿತವಹ ದಿವ್ಯ । ಬಂಧುರ ವಾಕ್ಯ ಉಣ್ಮಿದುದು ॥ ೪ ॥

ಎಲೆ ಭವ್ಯ ! ನೀ ಕೇಳು ನಮ್ಮಾ ಮೂವರ । ಕಳೆದ ಭವಗಳ ಪೇಳುವೆನು ॥
ಕಲಿಲವಶದನಂತ ಸಂಸಾರದೊಳುರೆ । ತೊಳಲಿ ತೊಳಲಿ ಬಂದಾವು ॥ ೫ ॥

ಮಲಯಾಚಲಮುಂಟದರ ಮೇಲ್ಭಾಗದೊ- । ಳ್ಗಳಿಲನೆ ಭೋರ್ವೊರೆವುತ್ತ ॥
ನಳ ನಳಿಸುತ ಪರಿತರ್ಪೊಂದಾನೊಂದು । ಹೊಳೆಯಾವರ್ತದೊಳ್ಸಿಕ್ಕಿ ॥ ೬ ॥

ಮುಳುಗಿ ಮುಳುಗಿ ಹೊನಲೊಳು ಪರಿತಂದೊಂದು । ಮಳಲ ತಿಟ್ಟಿಯೊಳು ನಿಂದಾಗ ॥
ಎಳೆಯ ಚಂದನತರುಯುಗಲವು ನಾವಾಗಿ । ಕಳೆದ ಭವದೊಳು ನಿಂದಿರಲು ॥ ೭ ॥

ತರುವಿನ ಮೂಲದೊಳೋರ್ವ ಮುನೀಂದ್ರನು । ಇರುತಿರಲಾಗೋರ್ವ ಶಿಷ್ಯ ॥
ಪರಮ ಮುನಿಗಳ ಸ್ವಗುರುಗಳ ಬೆಸಗೊಂಡ । ಸುರುಚಿರ ಬೋಧಸಂಯುತನೆ ! ॥ ೮ ॥

ಉದಕದೊಳಗೆ ಇರ್ದ್ದೀ ವೃಕ್ಷಯುಗಳವು । ತುದಿಯಿಂದಲೊಣಗಿ ಬರ್ಪುದಕೆ ॥
ಇದಕೆ ಕಾರಣವಾವುದು ಎಂದು ಬೆಸಗೊಳೆ । ಸದಮಲಚರಿತನಿಂತೆಂದ ॥ ೯ ॥

ಎಲೆ ಶಿಷ್ಯ ! ಕೇಳಿವು ದುರಿತಕೋಟಲೆಯಿಂದ । ಪಲ ಭವದೊಳು ತಾವು ತಿರುಗಿ ॥
ಮಲಯಾಚಲದೊಳು ಕುಡಿಯಲರುಗಳಾಗಿ । ಪಲವು ಪಗಲು ಇರುತಿರ್ದು ॥ ೧೦ ॥

ಕಡಿದ ಕುಮ್ಮರಿಯಲ್ಲಿ ಬರುತಿರಲಾಗೋರ್ವ । ಗಿಡಿ ಗಿಡಿ ಜಂತ್ರ ತಾ ಪ್ರೋಗಿ ॥
ಒಡಲು ಬೆನ್ನನು ಪತ್ತಿದ ಮುನಿಯನು ಕಂಡು । ಜಡರಿಂತೆಂದು ನುಡಿದರು ॥ ೧೧ ॥

ಅಶನವಸನಗಳ ಕಾಣದೆ ಕಾಡೊಳು । ಪಶುವಿನಂದದಿ ದಿಗಂಬರವ ॥
ಅಸವಸದಿಂ ಮಾಡಿ ಕೊಂಡಿಂತು ಸುಮ್ಮನೆ । ಹಸು ತೃಷೆಯಿಂ ಸಾಯಬೇಡ ॥ ೧೨ ॥

ಎಲೆಯಾಶಾಂಬರ ನಮ್ಮ ಮನೆಗೆ ಬಂದು । ಎಳೆಹುಲ್ಲೆದೊಡೆಯ ಮಾಂಸವನು ॥
ಜಲಚರ ಜೀವಗಳನು ತಿಂದು ಕಳ್ಳನು । ಗಳಪರಿಯಂತರ ಕುಡಿವೆ ॥ ೧೩

ಹುಲಿಚರ್ಮವ ಪೊದೆವುದಕೆ ನಾವೀವೆವು । ಲಲನೆ ಬೇಕಾದೊಡೆ ನಿನಗೆ ॥
ಅಲಸದೆ ಮದುವೆಯ ಮಾಡಿಕೊಟ್ಟೆವು ನಾವು । ಕೆಲಸವ ಮಾಡಿಕೊಂಡೆಮ್ಮ ॥ ೧೪ ॥

ಮನೆಯೊಳಗಿರುವುದುಚಿತ ಬಾರೆಂದಾಗ । ಮನದಕ್ಕರಿಂದ ಕರೆಯಲು ॥
ಮುನಿಕುಲತಿಲಕನಿವರು ಮುಂದಕೆ ತಾವು । ಫಲವ ಪಡೆವರೆಂದರಿದು ॥ ೧೫ ॥

ಕರುಣ ಹೃದಯನಾಗಿಯವರೊಳಗಿಂತೆಂ- । ದೊರೆದನೆಲೆ ಕುಡಿಯರಿರ !
ದುರಿತದಟ್ಟುಳಿಯಿಂದ ಪಲವು ಯೋನಿಗಳೊಳು । ತಿರುಗಿ ತಿರ್ರನೆ ಬಂದೀಗ ॥ ೧೬ ॥

ಘನಕಾಂತಾರದೊಳಗೆ ಕೃಷೀವಲರಾಗಿ । ಬಿನುಗು ಕುಲದಿ ಪುಟ್ಟಿದಿರಿ ॥
ಜನನ-ಮರಣಗಳ ಕೆಡಿಸಬೇಕಾದರೆ । ಜಿನಪತಿ ಚರಣ ಸೇವೆಯನು ॥ ೧೭ ॥

ದಿನಚರಿಯವು ಮಾಡಿ ಬರಿದೆ ಸಾಯಲು ಬೇಡ- । ವೆನುತ ಕಾರುಣ್ಯ ಬುದ್ಧಿಯೊಳು ॥
ಮುನಿನಾಥನವರಿಗೆ ನಿರವಿಸಿದನು ಇಂತು । ಜಿನಮತದೊಳಗಣ ವ್ರತವ ॥ ೧೮ ॥

ಕೊಲೆ ಹುಸಿ ಕಳವು ಪಾದರನತಿ ಕಾಂಕ್ಷೆಯು । ಫಲಗಳ ಪಂಚ ಪಾಲ್ಮರದ ॥
ನಲವಿಂ ತೊರೆವುದು ಮಧು ಮದ್ಯ ಮಾಂಸವ- । ನಲಸದೆ ಬಿಡಿ ನೀವು ಜಲವ ॥ ೧೯ ॥

ವರ ವಸ್ತ್ರದಿಂ ಶೋಧಿಸಿ ನೀವು ಬಳಸುವು- । ದಿರುಳೂಟವ ತೊರೆಯುವುದು ॥
ಮರೆವುದು ಸಪ್ತವ್ಯಸನದ ಗೊಡವೆಯನು । ತೊರೆವುದು ಬೆಳುಗುಂಬಳವ ॥ ೨೦ ॥

ಬಿಡುವುದು ಕಂದಮೂಲಗಳ ಕಳಿಲೆಯನು । ಬಿಡುವುದು ಗಣ್ಣ ಇಂಗುಗಳ ॥
ಪಡಲದ ಫಲಗಳಾಶೆಯ ನೀವು ತೊರೆವುದು । ಬಿಡುವುದು ಅಫಿಮ ಭಂಗಿಗಳ ॥ ೨೧ ॥

ತೊರೆವುದು ಕಳ್ಳನ ಸತ್ತಿಗೆಯನು ನೀವು । ತೊರೆವುದು ಮೂರು ಮೂಢವನು ॥
ಕೊರೆವನಾಯತನ ಸೇವೆಯನಾರ ಬಿಡುವುದು । ತೊರೆವುದು ಬದರಿ ಪಣ್ಗಳನು ॥ ೨೨ ॥

ಜಿನನೆ ದೇವನು, ಜಿನಮುನಿಯೆ ಮುನಿ । ಜಿನರೊಳುನುಡಿ ತತ್ತ್ವವೆಂದು ॥
ಜಿನಧರ್ಮವೆ ಧರ್ಮವೆಂದು ನಂಬಿ ನೀವು । ಕುನಯವ ನಂಬಲು ಬೇಡ ॥ ೨೩ ॥

ವರ ಪಂಚ ಗುರುಗಳ ದಿವ್ಯ ಪಾದಂಗಳ । ಸ್ಮರಿಸುವುದಾವಾಗಲೆಂದು ॥
ಒರೆದ ನುಡಿಯ ಕೇಳಿ ಕಡು ನಂಬಿ ಕುಡಿಯರು । ಚರಣ ಮೂಲಕೆ ಮುಗ್ಗಿ ಮುನಿಯ ॥

ಎರಗಿದ ಕುಡಿಯರ್ಗೆ ಪರಸಿ ಮುನೀಂದ್ರನು । ಶಿರದೊಳು ಕುಂಚವ ಮಡಗಿ ॥
ತುರಿಹದಿ ಪೊಗುವ ಜತಿಯು ಬೆಂಗಡೆಯೊಳು । ಕಿರಿದು ದೂರವು ತಾವು ಪೋಗಿ ॥ ೨೪ ॥

ಮರಳಿ ಮರಳಿ ಪಾದಕೆ ಬಿರ್ದು ಕುಡಿಯರು । ಹರುಷದಿ ಗುರುವ ಬೀಳ್ಕೊಂಡು ॥
ಪರಮ ಮುನಿಗಳ ಪಾದವ ತಾವು ನೆನೆವುತ । ಸ್ಮರಿಸುತ ಜಿನರ ಚಿತ್ತದೊಳು ॥ ೨೫ ॥

ಮುನಿಕೊಟ್ಟ ವ್ರತಕತಿಚಾರವ ತಾರದೆ । ಘನವಾಗಿ ಧರಿಸಿ ನಡೆವುತ ॥
ವನದೊಳು ತಾವೀರ್ವರು ಮಲಗಿರಲಾ- । ಗಿನಿಸು ಬೇಗದೊಳೊಂದು ಗುಂಡು ॥ ೨೬ ॥

ವರುಷದ ಪೊನಲೊಳು ಜರಿದಾರ್ಭಟಿಸುತ । ಭರದಿಂದ ಬಂದೊರಗಿದರ ॥
ಶಿರದುಪರಿಮದೊಳು ಕೆಡೆಯಲವರು ಸತ್ತು । ಉರು ಕಿನ್ನರ ಕುಲದಲ್ಲಿ ॥ ೨೭ ॥

ಥಳಥಳಿಸುವ ದಿವ್ಯ ದೇಹವ ತಾವಾಂತು । ಘಳಿಲನೆ ಕಿನ್ನರರಾಗಿ ॥
ಕಳೆದ ಭವದೊಳಾವು ಜಿನಮುನಿ ಕೃಪೆಯಿಂದ । ಫಲವ ಪಡೆದೆವಿಂತಪ್ಪ ॥ ೨೮ ॥

ಎಂದು ಚಿಂತಿಸುತ ಸುಖದೊಳೋಲಾಡುತ । ಅಂದಿರ್ದು ಜೀವಿತಾಂತ್ಯದೊಳು ॥
ಸೌಂದರಾಂಗವ ಬಿಟ್ಟು ಮಾಂಸಾಸ್ಥಿಚರ್ಮಕೀ- । ವಿಂದ ಮಿದುಳು ಮಜ್ಜದಿಂದ ॥ ೨೯ ॥

ಮಲ-ಮೂತ್ರ ರಕ್ತಸಿಂಬಳು ಕಿಳ್ಳಿಗಳಿಂದ । ಪಲವು ಲಾಲಸ ಗುಗ್ಗೆಗಳಿಂ ॥
ಹೊಲಸು ನಾರುವ ನರಕೀಟಕ ಮೈಯೊಳು । ಅಲಸದೆ ಎಂತು ಪುಟ್ಟುವೆವು ॥ ೩೧ ॥

ಎನುತ ಮನದೊಳು ಕೊಕ್ಕರಿಸಿ ವಾಕರಿಸುತ । ಘನದಾಯುಷ್ಯವು ತೀರೆ ॥
ಇನಿಸು ಬೇಗದಿ ಬಂದು ಮಲಯ ಕುತ್ಕೀಲದ । ಮಿನುಗುವ ಹೊಳೆಯ ಮಳಲೊಳು ॥

ಚಂದನಕುಜಗಳಾದವು ಈ ತರುಗಳಿ- । ಗೊಂದೇ ತಿಂಗಳಾಯುಷ್ಯ ॥
ಮುಂದನುಕ್ರಮದಿಂದ ಮನುಜ ಜನ್ಮವನಾಂತು । ಬಂಧುರತನುವನು ತಾಳಿ ॥ ೩೩ ॥

ದುರಿತವ ಕೆಡಿಸಿ ಕೇವಲಿಗಳು ತಾವಾಗಿ । ವರ ಗಂಧಕುಟಿಯನು ತಾಳಿ ॥
ಸರಸಾವ್ರುದಡಿಯೊಳು ನಮ್ಮಿಂದ ವಂದ್ಯರು । ಸಿರುತದಿಂದಾಗುವರೆಂದು ॥ ೩೪ ॥

ವರ ಮುನಿ ತನ್ನ ಶಿಷ್ಯಗೆ ಪೇಳ್ದಂದದಿಂ । ತರು ಪರ್ಯಾಯವನುಳಿದು ॥
ತ್ವರಿತದಿಂದಲೆ ಬಂದು ವಿಂಧ್ಯಗಿರಿಯೊಳ್ನಾವು । ಉರೆ ಕಾಡುವಂದಿಗಳಾಗಿ ॥ ೩೫ ॥

ಕಾಡೊಳು ತಿರುಗುತ ಬಂದು ನಮ್ಮನು ಕಂಡು । ಬೇಡರು ಹತಿಸಿದೊಡಾವು ॥
ಗಾಢದೊಳಗೆ ಸತ್ತು ಗಿಳಿಯ ಮರಿಗಳಾಗಿ । ಗೂಡೊಳು ಬೆಳೆಯುತ್ತಿರಲು ॥ ೩೬ ॥

ತೊಳಲುತ ಬಂದು ಶಬರನಾಯಕನೋರ್ವ । ಘಳಿಲನೆ ಮಾಮರನೇರಿ ॥
ಗಿಳಿಯ ಮರಿಗಳೆರಡನು ಕೊಂಡು ತಾ ಪೋಗಿ । ನಳಿನಾಕ್ಷಿ ತನ್ನ ಶಬರಿಗೆ ॥ ೩೭ ॥

ಕೊಡಲಾ ಶಬರಿ ಶುಕದ ಪೋತಗಳಿಗೆ । ಕುಟುಕುಗಳಿತ್ತು ತಾ ಸಲಹಿ ॥
ಕಡು ಬೇಗದಿಂ ಕೊಂಡುಜ್ಜೈನಿಪುರವ ಪೊಕ್ಕು । ಒಡನೆ ವೃಷಭದತ್ತನೆಂಬ ॥ ೩೮ ॥

ಪರದನ ಮನೆಗೈದಿಯಾತನ ಪೆಂಡತಿ । ಹರಿಣಲೋಚನೆ ಜಿನಮತಿಗೆ ॥
ಭರದಿಂದ ಗಿಳಿಯ ಮರಿಗಳನಾ ವನಚರಿ । ಪರದತಿಗಿತ್ತು ದ್ರವ್ಯವನು ॥ ೩೯ ॥

ಘನವಾಗಿ ತೆಗೆದುಕೊಂಡತ್ತ ಕಬ್ಬೇಡತಿ । ವನದತ್ತ ಪೋಗಲಾಗಿತ್ತ ॥
ಜಿನಮತಿ ಕೀರಪೋತಗಳೆರಡಕೆ ತಾನು । ಜಿನರಂಕಮಾಲೆಯ ಕಲಿಸಿ ॥ ೪೦ ॥

ಮಿನುಗುವ ಧವಳ ಶೋಭನಗಳು ಮುಂತಾದು- । ವನು ಕಲಿಯಿಸಿಯಕ್ಕರಿಂದ ॥
ಅನುದಿನ ಜಿನರಂಕಮಾಲೆಯ ನುಡಿಸುತ । ಮನೆ ಮಕ್ಕಳಿಗೆ ಮುದ್ದಾಗಿ ॥ ೪೧ ॥

ಕನಕ ಪಂಜರದೊಳಗಿರುತಿರಲಾಗೋರ್ವ । ಮುನಿನಾಥನು ಪಾರಣೆಯ ॥
ದಿನದೊಳು ವೃಷಭದತ್ತನ ರಮ್ಯ ಹರ್ಮ್ಯದ । ಮನೆಗಾಗಿ ಬಾವಲಿಯಿಟ್ಟು ॥ ೪೨ ॥

ಘನಪಥವನು ಶೋಧಿಸಿಕೊಂಡು ಬರುತಿರ್ದ । ಮುನಿಪತಿ ಚರಣವ ಕಂಡು ॥
ಮನದೊಳಗಾನಂದವ ತಾಳಿ ಗಿಳಿಗಳು । ವಿನಯದೊಳಿಂತು ನುಡಿದವು ॥ ೪೩ ॥

ಅಕ್ಕಾಜಿ ! ನಮ್ಮಯ ಮನೆಗೆ ಬಾವಲಿಯಿಟ್ಟು । ಚಿಕ್ಕ ಪ್ರಾಯದ ಮುನಿಯೋರ್ವ ॥
ದಿಕ್ಕು ಶೋಧಿಸಿಕೊಂಡು ಬರುತಿರ್ದನವನಡಿ- । ಯಕ್ಕರಿಂ ಜಲದಿಂದ ತೊಳೆದು ॥ ೪೪ ॥

ಉನ್ನತಾಸನದಲ್ಲಿ ಕುಳ್ಳಿರಿಸಿ ಮುನಿಯ ಸಂ- । ಪನ್ನ ! ಚರಣ ಪೂಜೆಯನು ॥
ಸನ್ನುತ ಭಕ್ತಿಯಿಂ ಮಾಡಿ 'ನಮೋಸ್ತು'ವ । ಚೆನ್ನಡಿಗಳಿಗೆ ನೀ ಮಾಡು ॥ ೪೫ ॥

ನಿರವದ್ಯಮಪ್ಪ ದಿವ್ಯಾಹಾರವ ಕೊಡು । ಗುರುಕುಚೆ ! ಎಂದು ಕೀರಗಳು ॥
ಒರೆಯಲು ಜಿನಮತಿ ಕೇಳಿಯಾ ಗಿಳಿಗಳ । ಕರದೊಳಗಿಟ್ಟು ಮುದ್ದಾಡಿ ॥ ೪೬ ॥

ವದನದೊಳಗೆ ಕೆನ್ನೆಯನಿಟ್ಟು ಮುದ್ದಾಡಿ । ಸುದತಿಯೆಂದಳು ಎಲೆ ರಾಮ ! ॥
ಚದುರ ರಾಮಪ್ರೌಢೆಯರೆ ನಿಮಗೆಣೆಯುಂಟೆ । ಸದಮಲ ಮುನಿ ಬಂದೊಸಗೆಯ ॥ ೪೭ ॥

ಪೇಳಿದಿರೆಲೆ ಮುದ್ದು ರಾಮ ! ನಿಮ್ಮಂ ಬಿಟ್ಟು । ಮೇಲುಂಟೆ ನಮಗೆ ಹಿತವರು ॥
ಸಾಲು ಪುಣ್ಯವ ತಂದು ಕೊಟ್ಟಿರಿ ಎಂದಾ । ಬಾಲಾಮಣಿ ಕೊಂಡಾಡಿ ॥ ೪೮ ॥

ಕನಕದ ಪಂಜರದೊಳಗಿಟ್ಟಾ ಜಿನಮತಿ- । ಯನುರಾಗದಿಂ ಜಲವಾಂತು ॥
ಮುನಿಪತಿಯನು ಮೂರು ಬಲವಂದು ನಿಲ್ಲಿಸಿ । ಮನಶುದ್ಧಿಯ ಜತಿಗಿತ್ತು ॥ ೪೯ ॥

ಚರಣವ ತೊಳೆದೊಳಕೆ ಬಿಜಮಾಡಿಸಿ । ವರ ವಿಷ್ಟರದೊಳು ಕುಳ್ಳಿರಿಸಿ ॥
ಚರಣ ಪೂಜೆಯ ಮಾಡೇಳು ಗುಣವು ಕೂಡಿ । ಗರುವೆ ತ್ರಿಕರಣ ಶುದ್ಧಿಯೊಳು ॥ ೫೦ ॥

ನಿರವದ್ಯಮಪ್ಪ ದಿವ್ಯಾಹಾರವನು ಕೊಡೆ । ಗುರುರಾಯ ಕೊಂಡು ಕೈ ತೊಳೆದು ॥
ಅರುಹನ ಮನದಲ್ಲಿ ನೆನೆಯಲು ಜಿನಮತಿ । ಎರಗಲು ಪಂಚಮುಷ್ಟಿಯಲಿ ॥ ೫೧ ॥

ಪರಸಿ ಕುಳ್ಳಿರಲು ಗಿಳಿಗಳು ಮುನಿಗೆ ಇತ್ತ । ವರದಾನಾನುಮೋದದೊಳು ॥
ಸುರನರವಂದಿತಪಾದನೆ ! ಜಯ ಜಯ । ಕರುಣವಾರಿಧಿ ಚಂದ್ರ ! ಜಯತು ॥ ೫೨ ॥

ಪರಮ ಬಾಂಧವನೆ ! ನಮಗೆ ನೀ ಜಯ ಜಯ । ವರ ಮುಕ್ತಿಕಾಂತನೆ ! ಜಯತು ॥
ವರ ಭವ್ಯ ಕಮಲ ಪ್ರತ್ಯೂಷದಂಬರ ! ಜಯ । ಪರಮ ಗುರುವೆ ! ಸ್ವಾಮಿ ! ಜಯತು ।

ಎಂದು ಮುನೀಂದ್ರನ ಪಲವು ಸ್ತೋತ್ರಗಳಿಂದ । ಅಂದು ಕೊಂಡಾಡಿ ಗಿಳಿಗಳು ॥
ಕಂದರ್ಪವೈರಿಯ ಪಾದಕಮಲಕಾ- । ನಂದದಿಂ ಬಂದು ಮುಗ್ಗಿದವು ॥ ೫೪ ॥

ಎರಗಿ ಚರಣಗಳ ರೆಕ್ಕೆಯಿಂದೊರಸುತ । ಭರದಿ ಶಿರವನಿಟ್ಟು ಪದಕೆ ॥
ಸ್ವರದೋರಿ ಜಯವೆಂದು ಜಾತಿಸ್ಮರಣೆಯಿಂದ- । ಲರಿತು ಮುನ್ನಿನ ನಮ್ಮ ಭವವ ॥ ೫೫ ॥

ನೆರೆದ ಜನರಿಗೆಲ್ಲ ಹರುಷದಿಂದಲೆ ಪೇಳಿ । ಪರಮ ಶ್ರಾವಕ ವ್ರತಗಳನು ॥
ಗುರುವಿನ ಪಾದೋಪಾಂತ್ಯದೊಳ್ ಕೈಕೊಂಡು । ಸ್ಮರಿಸುತ ಜಿನನಂಘ್ರಿಯನು ॥ ೫೬ ॥

ಇರುತಿರೆ ರಾಜಕೀರಗಳಾಗಿ ನಾವಿಲ್ಲಿ । ಸ್ಮರರೂಪ ವೃಷಭದತ್ತನನು ॥
ದುರುಳ ಭಾಗಿನೇಯ ಧನದೇವನೆಂಬೋರ್ವ । ಪರಮ ಚಾಂಡಾಲ ಪಾಪಿಷ್ಠ ॥ ೫೭ ॥

ನರಕಗಾಮಿನಿ ತನ್ನ ತಂಗಿಗೆ ತಾ ಸೋತು । ನೆರೆವುತ ನಾಗವತಿಯೊಳು ॥
ಇರುತಿರೆ ಪಂಜರದೊಳಗಿರ್ದ ಗಿಳಿಗಳು । ದುರುಳನ ಕಂಡಿಂತೊರೆದವು ॥ ೫೮ ॥

ಹುಚ್ಚ ನೀ ಕೇಳೆಲೊ ಪಶು ಚಾರಿತ್ರನೆ ! । ಸಿಚ್ಚ ನಿನ್ನಯ ಭಗಿನಿಯೊಳು ॥
ಮೆಚ್ಚಿ ಸುರತಸುಖ ಮಗ್ನ ನೀನಾಗದೆ । ಎಚ್ಚಳ್ತು ಪಾಪಕ್ಕಳ್ಕಿ ॥ ೫೯ ॥

ದುರುಳ ! ನೀ ಪಂಚೇಂದ್ರಿಯ ವಿಷಯಕೆ ಸಿಕ್ಕಿ । ಕುರಿ ಸಾವ ಸತ್ತು ರೌರವದಿ ॥
ದುರಿತ ವಶದಿ ಪುಟ್ಟಿ ಗರಗಸದಿಂ ಮೈಯ । ಕೊರಯಿಸಿಕೊಳದಿರು ನೀನು ॥ ೬೦ ॥

ಕಡು ರಕ್ಷಣ್ಯವ ಮಾಡು ಚಾರಿತ್ರವ । ನಡೆ ಧರ್ಮಪಥದೊಳು ಬಿಡದೆ ॥
ಬಿಡು ಸಪ್ತವ್ಯಸನಂಗಳ ನೀನೆಂದಾಗ । ನುಡಿದವು ಗಿಳಿಗಳು ಎರಡು ॥ ೬೧ ॥

ಆ ನುಡಿಯನು ಕೇಳಿ ಮನದೊಳು ಕಡು ನೊಂದು । ಹೀನಮಾನಸ ಧನದೇವ ॥
ಮಾನಭಂಗವ ಮಾಳ್ದ ಪಲವು ಜನಕೆ ಪೇಳಿ । ನಾನೀಗಿವಕೆ ಶಿಕ್ಷಿಪನು ॥ ೬೨ ॥

ತ್ವರಿತದಿಂ ಮಾಡಬೇಕೆಂದಾ ಹೊಲೆಯನು । ಕೊರಳ ಮುರಿದು ಹಾಕಿದನು ॥
ಮರಣಕಾಲದೊಳಾ ಗಿಳಿಗಳಾಗಿರ್ದಾವು । ವರ ಪಂಚಗುರುಗಳ ಪದವ ॥ ೬೩ ॥

ಸ್ಮರಿಸುತ ಸಪ್ತತತ್ತ್ವಂಗಳ ನೆನೆವುತ । ಅರುಹನೆ ಶರಣೆಂದೆನುತ ॥
ವರ ಶುಭಭಾವನೆಯಿಂದಲಳಿದು ನಾವು । ಸುರರಾಗಿ 'ಲಾಂತವ'ದಲ್ಲಿ ॥ ೬೪ ॥

ಪದಿಮೂರು ಸಾಗರಾಯುಷ್ಯ ತೀರುವನ್ನ । ಒದವಿದ ದಿವ್ಯ ಸುಖವನು ॥
ಮುದದಿಂದಲುಣುತ ಜಿನೇಶನ ಪೂಜೆಯ । ಪದುಳದಿಂ ಮಾಡುತಲಾವು ॥ ೬೫ ॥

ಜಿನರ ಕಥೆಗಳನು ಸುರರಿಗೆ ಪೇಳುತ । ಮನದಕ್ಕರಿಂ ತತ್ತ್ವಗಳ ॥
ನೆನೆವುತ ನಂದೀಶ್ವರ ಮೊದಲಾಗಿರ್ದ । ಜಿನಭವನಕೆ ನಾವು ಪೋಗಿ ॥ ೬೬ ॥

ಅತಿ ಹರುಷದಿ ವಿನಮಿಸುತ ಕೊಂಡಾಡುತ । ಸತತ ಸುಖದೊಳಿರುತಿರಲು ॥
ಮಿತವಾದಾಯುಷ್ಯ ತೀರಲು ನಾವಾಗ- । ಲತಿಶಯ ಪಂಚಪದಗಳ ॥ ೬೭ ॥

ಸ್ಮರಿಸುತಂಗವ ಬಿಟ್ಟು ಜಂಬೂದ್ವೀಪದ । ಭರತದೊಳಗೆ ರಾಜಿಸುವ ॥
ಕರ ಚೆಲುವಿನ ಅವಂತೀ ವಿಷಯದೊಳು । ಮೆರೆವ ಉಜ್ಜೈನಿ ಪಟ್ಟಣದ ॥ ೬೮ ॥

ಅರಸು ಕನಕರಥನವನರ್ಧಾಂಗಿಯು । ಧರಣೀದೇವಿಯವರಿಗೆ ॥
ಸುರಲೋಕದಿ ಬಂದಮಳುಗಳಾಗಿ ನಾ- । ವರಸ ! ಪುಟ್ಟಿದೆವು ಕೇಳಲ್ಲಿ ॥ ೬೯ ॥

ನಯಪರಾಕ್ರಮಗಳು ಜಗದೊಳಗಿರುವಂತೆ । ಜಯನು ಹಿರಿಯ ಮಗನಾಗಿ ॥
ಜಯಗಿಂತ ಕಿರಿಯನು ವಿಜಯನು ಎಂದೆಂಬ । ಜಯಜಾಯಾವಲ್ಲಭರಿಹರು ॥ ೭೦ ॥

ಇರುತಿರ್ದೊಂದಾನೊಂದು ಪಗಲು ನಾವು । ಹರುಷದಿಂ ವನವನು ಪೊಕ್ಕು ॥
ಸ್ಮರಮರ್ದನ ಚಾರಣ ಸುಧರ್ಮರೆಂಬ । ವರ ಮುನಿಗಳ ಕೃಪೆಯಿಂದ ॥ ೭೧ ॥

ದುರಿತದಲ್ಲಣವಾದ ಸದ್ಧರ್ಮವ ಕೇಳಿ । ತೊರೆದಾವು ಉಭಯ ಗ್ರಂಥಗಳ ॥
ಪರಮ ಭಕ್ತಿಯನೀವ ಜೈನೇಶ್ವರಿಯದೊಂ- । ದುರುತರ ತಪವನು ತಾಳಿ ॥ ೭೨ ॥

ಮಾಸೋಪವಾಸದ ಪಾರಣೆಯೊಳು ನಾವು । ಭಾಸುರ ಗಗನಮಾರ್ಗದೊಳು ॥
ಸೂಸುತ ಪ್ರಭೆಯನಿಳಿದು ಬರುತಿರಲು ಭೂ- । ಪೇಶ ! ನೀ ನಿಲಿಸಿ ಭಕ್ತಿಯೊಳು ॥ ೭೩ ॥

ವಿಧಿಪೂರ್ವಕವಾಗಿ ದಿವ್ಯಾಹಾರವ । ಚತುರರಸ ! ನೀ ಕೊಡಲು ॥
ಮುದದಿಂದ ಉಂಡಾವು ಪರಸಿಯಕ್ಷಯಮೆಂದು । ಸದಯಾಲು ನಡೆದಸ್ತಂಗತದ ॥ ೭೪ ॥

ಈರಸಾಲದ ಮೂಲದೊಳು ನಾವಿರ್ವರು । ಚಾರು ಚಿನ್ಮಯನ ಚಿಂತಿಸುತ ॥
ಘೋರತಪದೊಳಿರುತಿರಲತ್ತಲಾವಾಗ । ಕ್ರೂರ ತನ್ನಯ ಭಗಿನಿಯೊಳು ॥ ೭೫ ॥

ನೆರೆದಪನೆಂಬ ದುರ್ಜನ ಊರೊಳಗೆಲ್ಲ । ಪರಿಪೂರ್ಣವಾಗಿ ತುಂಬಿರಲು ॥
ಪರಿಹಾಸಕವ ಮಾಡುವರು ಕಂಡವರೆಲ್ಲ । ನೆರೆ ನಾಣ್ಚಿಯುದಕೆ ಪಾತಕನು ॥ ೭೬ ॥

ಕೇರಗಳಿರದರ ದೆಸೆಯಿಂದ ನಾನೀಗ । ದೂರಾದೆನು ಪಟ್ಟಣದೊಳು ॥
ಗಾಡಾಯಿತು ತನ್ನ ರತಿಸುಖವೆಂದಾಗ । ಕ್ರೂರ ನಮ್ಮೊಳಗೆ ವೈರವನು ॥ ೭೭ ॥

ಮನದೊಳು ತಾ ತಾಳಿರುತಿರೆ ಪಾಪದಿಂ । ತನುವಿನೊಳಗೆ ಘನವಾಗಿ ॥
ಜನಿಸಿತ್ತೌದುಂಬರಕೋಷ್ಠವು ಅದರಿಂದ । ಪನಿವುದು ಕೀವು ರಸಿಕೆಯು ॥ ೭೮ ॥

ಪುಳು ಪುಟ್ಟಿ ದುರ್ಗಂಧ ನಾರುತಿರಲು ಕಾಯ- । ಕೆಳಸಿ ನೊಣಂಗಳು ಮುತ್ತೆ ॥
ಪಳಿವುತಿರಲು ನಾತಕೆ ಜನವೆಲ್ಲವು । ಕೊಳೆ ಸಾವ ಧನದೇವ ಸತ್ತು ॥ ೭೯ ॥

ಶೂಕರ ಗರ್ದಭ ಶ್ವಾನ ಮುಂತಾಗಿರ್ದ- । ನೇಕ ಭವದೊಳು ತಾ ತೊಳಲಿ ॥
ಕಾಕುಮಾನಸ ದಂಡಕವೆಂಬ ಪೆಸರಿನ । ಭೀಕರಾರಣ್ಯದೊಳಿರ್ಪ ॥ ೮೦ ॥

ಮೃಗಶೃಂಗನೆಂಬ ತಾಪಸನಾತನ ಭಾರ್ಯೆ । ಮೃಗನೇತ್ರೆಯೆಂಬಳವಳಿಗೆ ॥
ಮಗನಾಗಿಯನಿಲಜಟಿಯು ಎಂಬ ಪೆಸರಾಂತು । ಸೊಗಯಿಪ ಬಾಲಕಾಲದೊಳು ॥ ೮೧ ॥

ಮುಳಲ ರಾಶಿಯ ಮಾಡಿಯದರೊಳು ತನ್ನಯ । ತಲೆಯಿಟ್ಟು ಕಾಲುಮೇಲಾಗಿ ॥
ಅಳುರ್ವಗ್ನಿಯ ನಾಲ್ಕು ದಿಕ್ಕಿನೊಳಿರದೊಟ್ಟಿ । ಪೊಳೆವ ಸೂರ್ಯಾತಪದೊಳಗೆ ॥ ೮೨ ॥

ಕಪಟಮಾನಸ ಪಂಚಾಗ್ನಿ ತಪದೊಳಿಂತು । ತಪಿಸುತಲಿರಲಾ ವೇಳೆಯೊಳು ॥
ವಪುವಿನ ಕಾಂತಿ ಬೆಳಗುತಿರಲಾಗೋರ್ವ । ಚಪಳಮಾನಸ ಕಾಳನೆಂಬ ॥ ೮೩ ॥

ದನುಜನು ನವರತ್ನಕೀಲಿತವಾಗಿರ್ದ । ಮಿನುಗುವ ಪುಷ್ಪಕವೇರಿ ॥
ಅನಿಲಪಥದೊಳು ಪೋಗುತಿರಲಾ ತಾಪಸಿ- । ಯಿನಿಸು ಬೇಗದೊಳು ತಾ ಕಂಡು ॥ ೮೪ ॥

ನನ್ನ ತಪದ ಫಲದಿಂ ನನಗಿಂತಪ್ಪ । ಸನ್ನುತ ಭಾಗ್ಯದೇಳಿಗೆಯು ॥
ಚೆನ್ನಾಗಿ ದೊರಕಿತಾದೊಡೆ ಸಾಕೆನುತಾ- । ಗುನ್ನಿಸಿಕೊಂಡು ಮನದೊಳು ॥ ೮೫ ॥

ಅಳಿದು ವ್ಯಂತರ ಕುಲದೊಳು ಕಾಳನೆಂದೆಂಬ । ಮಲಿನಾಂಗ ರಾಕ್ಷಸನಾಗಿ ॥
ಪೊಳೆವ ವಿಮಾನವನೇರಿಯಾಗಸದೊಳು । ಘೇಳಿಲನೆ ಬರುತಿರೆ ನಮ್ಮ ॥ ೮೬ ॥

ಂಬರಿಮದೊಳು ಪುಷ್ಪಕ ಕೀಲಿಸಿ ನಿಲೆ। ಕುಪಿತಮಾನಸ ನೋಡಿ ಕೆಳಗೆ ॥
ಪದೊಳಗಿರ್ದ ನಮ್ಮನು ಕಂಡು ವೈರದಿಂ-। ದುಪಸರ್ಗವ ಬಹು ತೆರದಿ ॥ ೮೭ ॥
ಡು ಬೇಗದಿಂ ಮಾಡೆ ನೀ ಬಿಡಿಸಲು ನಾವು। ಕಡಿದು ಕರ್ಮದ ಹಿಂಡುಗಳ ॥
ಡೆದೆವು ಕೇವಲಬೋಧವ ನಾವೆಂದು। ಕ್ರೂಡಪತಿಗೆ ಜಿನ ಪೇಳೆ ॥ ೮೮ ॥
ದ ಕೇಳಿ ಕಾಳರಕ್ಕಸ ವೈರವ ಬಿಟ್ಟು। ಪದಯುಗಳಕೆ ಜಿನರುಗಳ ॥
ದವನುಳಿದು ಸಮ್ಯಕ್ತ್ವವ ಕೈಕೊಂಡು। ಚದುರನಾ ಜ್ಞಾನಚಂದ್ರನಿಗೆ ॥ ೮೯ ॥
ನಯವಚನಗಳ ನುಡಿದೆಲೆ ಕುವರನೆ !। ನಿನಗನುಪತ್ಯ ಬಂದಾಗ ॥
ನದೊಳು ನೆನೆದರೆ ನಾ ಬಂದು ಕಾರ್ಯವ-। ನಿನಿಸು ಬೇಗದೊಳು ತೀರಿಸುವೆ ॥ ೯೦ ॥
ಎನುತ ಬೀಳ್ಕೊಂಡು ತನ್ನಯ ಲೋಕಕೆ ಆ। ದನುಜ ಪೋಗಲು ಇತ್ತ ಕುವರ ॥
ನಭಕ್ತಿಯಿಂದ ನೊಸಲಿಗೆ ಕೈಗಳ ತಂದು। ಜಿನಯುಗಳವ ಕೊಂಡಾಡಿ ॥ ೯೧ ॥
ನದುರಿತಾರಣ್ಯಪಾವಕರಿರ ! ನಿಮ್ಮ। ವಿನುಗುವ ಚರಣದ ಸೇವೆ ॥
ನುದಿನ ನನಗೆ ದೊರಕಲೆಂದೆನುತಾಗ। ಜಿನಚಂದ್ರಾತ್ಮಜ ನಮಿಸಿ ॥ ೯೨ ॥
ನಗೆ ಪುನರ್ದರ್ಶನವಾಗಲಿ ಎಂದು। ಜಿನಯುಗಳಗಳ ಬೀಳ್ಕೊಂಡು ॥
ನಾಥ ಬೀಡಿಗೈತಂದು ಕೇವಲಿಗಳ। ಮನದೊಳು ನೆನೆವುತೊಪ್ಪಿದನು ॥ ೯೩ ॥
ರ್ಜಿತವೈರಿಪರ್ವತ ಸುಪರ್ವಾಣೀಶ। ಕರ್ಬಿಲ್ಲನ ಸಮರೂಪ ॥
ರ್ಮಲಕಾಲಿ ಜ್ಞಾನೇಂದುಮೊಪ್ಪಿದನಾ। ಉರ್ವೀಶನತಪಾದಯುಗಲ ॥ ೯೪ ॥

॥ ಅಂತು ಸಂಧಿ ೧೭ಕ್ಕಂ ಪದ ೨೩೯೧ಕ್ಕಂ ಮಂಗಲಂ ॥

# ಸಿಂಧೂದೇವಿಯು ಸ್ವಯಂವರ.

ಸಿಂಧೂದೇವಿಯು ಸ್ವಯಂವರಕ್ಕೈದುವ। ಬಂಧುರ ಬೆಡಗ ಸೊಲ್ಲಿಪೆನು ॥ ಪ ॥
ಭವ್ಯಾಬ್ಜಚಂದಿರ ಭವರೋಗ ವೈದ್ಯನೆ !। ನವ್ಯ ಮಧುರ ಮೃದು ವಾಕ್ಯ ! ॥
ವ್ಯಯ ಸುಖದಾಯಿ ಶ್ರೀ ಶಾಂತಿಜಿನ ! ನಿನ್ನ। ದಿವ್ಯ ಚರಣ ಶರಣೆನಗೆ ॥ ೧ ॥
ಹರುಷದಿಂ ಜ್ಞಾನಚಂದ್ರಮ ಬೀಡಿನೊಳಿರ್ದು। ಮರುದಿನಾರಣ್ಯವ ಪೊರಟು ॥
ಸೊಗಯಿಪ ವಂಗದೇಶವ ತಾ ಪೊಕ್ಕು। ಸುರುಚಿರ ದೇವಕೂಟದೊಳು ॥ ೨ ॥
ಸಗುವ ಶ್ರೀ ಪುರದೊತ್ತಿಲಿ ರಾಜಿಪ। ವನದೊಳು ಕಡು ಸೊಗಸಿಂದ ॥
ನಸಿಜನಾಸ್ಥಾನಮಂಟಪವೆಂದೆನಿ। ಮನಕೆ ಸಂತಸವ ಪುಟ್ಟಿಸುವ ॥ ೩ ॥

ಕಡು ಚೆಲುವಾದ ಸ್ವಯಂವರ ಗೃಹವನು । ಪೊಡವಿಗೆರೆಯ ನೋಡುತಾಗ ॥
ಸಡಗರದಿಂ ಬಂದು ರನ್ನವಿಷ್ಟರದೊಳು । ಬೆಡಗ ಬೀರುತ ಕುಳಿತನು ॥ ೪ ॥

ಪೊಡವಿಯಾಗಸವೆಂಟು ದಿಕ್ಕುಗಳೆಲ್ಲವು । ಗಡ ಗಡ ಗುಟ್ಟುವಂದದೊಳು ॥
ಪೊಡವಿಯೊಡೆಯ ಭೃತ್ಯರ ಕೈಯ ಭೇರಿಯ । ಒಡನೆ ತಾಡನವ ಮಾಡಿಸಿದ ॥ ೫ ॥

ಆ ವೇಳೆಯೊಳು ಛಪ್ಪನ್ನದೇಶದೊಳಿರ್ದ । ಭೂವರರೆಲ್ಲ ಸಿಂಗರಿಸಿ ॥
ಠೀವಿಯಿಂದಲೆ ಸ್ವಯಂವರ ಗೃಹವನು । ತೀವಿದ ಸಂತಸದಿಂದ ॥ ೬ ॥

ಒಳಪೊಕ್ಕು ನೋಡುತ ಬರುತಿರಲಿದಿರೊಳು । ಪೊಳೆವ ಕಂಠೀರವಾಸನದಿ ॥
ಕುಳಿತಿರ್ದ ರಾಜಕುಮಾರನ ಕಂಡೆಲ್ಲ । ಇಳೆಯಾಣ್ಮರು ಚಿಂತಿಸಿದರು ॥ ೭ ॥

ಸುರಪತಿ ನರರೂಪ ಕೈಕೊಂಡು ಪೆಣ್ಣಿಗೆ । ನೆರೆ ಸೋತು ಬಂದನೋ ಮೇಣು ॥
ಸರಸಿಜಭವನಂದಿನ ಪದ್ಮೆ ತಾನೆಂದು । ಮರುಳ್ಗೊಂಡು ಬಂದನೋ ಮೇಣು ॥ ೮ ॥

ಸತಿಯಗ್ನಿಕುಂಡಕೆ ಬಿದ್ದಲ್ಲಿ ಪುಟ್ಟಿ ತಾ । ನುತವೆತ್ತು ಬಂದಳು ಎಂದು ॥
ಮತಿಯಿತ್ತು ಭ್ರಮೆಗೊಂಡೈತಂದನೋ ಈಶನು । ರತಿದೇವಿಗೆ ಸವತಿಯನು ॥ ೯ ॥

ಮಾಡಬೇಕೀ ಕುವರಿಯ ವರಿಸೆನುತೀಗ । ಗಾಡಿಯಿಂದ ತನು ತನುವನು ॥
ಪ್ರೌಢಿಯಿಂದಿರದಾಂತಿಲ್ಲಿಗೆ ಬಂದನೋ । ರೂಢಿಯಿಂದವೆ ಸಿಂಧುದೇವಿ ॥ ೧೦ ॥

ಎಂದು ಜನಗಳು ಕೆರೆಯುತಿರಲು ಭ್ರಾಂತಿ- । ಯಿಂದಲಿಂದಿರೆಯೆಂದೆನುತ ॥
ಇಂದಿಲ್ಲಿಗೆ ಬಂದು ಕುಳಿತುಕೊಂಡಿರ್ದ ಗೋ- । ವಿಂದನೋ ಎಂದು ಕೌತುಕದಿ ॥ ೧೧ ॥

ದೊರೆ ಕುವರರು ನೋಡಿಂತಪ್ಪ ಚೆನ್ನಿಗ- । ನಿರಲಿಲ್ಲಿ ನಮಗಾ ಕುವರಿ ॥
ನೆರೆ ಸೋತು ಮಾಲೆಯನಿಕ್ಕುವುದುದು ಪುಸಿ । ಬರಿದೆ ನಾವಿಲ್ಲಿಗೈದಿದೆವು ॥ ೧೨ ॥

ಎನುತೆಲ್ಲರು ಚಿಂತಿಸುತ ಸ್ವಾಂತದೊಳಾಗ । ಮಿನುಗುವ ಸಿಂಹಪೀಠದೊಳು ॥
ಅನುನಯದಿಂದ ಕುಳಿತರು ಸ್ವರ್ಗಿಕರೆಂಬ । ತೊನೆದಾಡುವ ಗಾಡಿಯಿಂದ ॥ ೧೩ ॥

ದೊರೆ ದೊರೆಗಳು ಬಂದರೆಂಬ ಸುದ್ದಿಯ ಕೇಳಿ । ಹರುಷದಿ ಜಯಸೇನ ಬಂದು ॥
ನೆರೆದ ಧರಾಧಿನಾಯಕರಿಗೆ ವಿನಯವ । ಎರಕದಿಂದಲಿ ತಾ ನುಡಿದು ॥ ೧೪ ॥

ಪಡಿ ಬಿಡಾರುಲುಪೆಗಳನು ಮಾಡಿಸಿ ಕೊಟ್ಟು । ಉಡುಗೊರೆಗಳನವರ್ಗಿತ್ತು ॥
ಕಡು ಬೇಗದಿಂದ ಪೊಳಲ ಪೊಕ್ಕು ಜಯಸೇನ । ಬಿಡದೆಯಷ್ಟಾಹ್ನಿಕದೆಂಟು ॥ ೧೫ ॥

ದಿನ ಪರಿಯಂತರ ಮಹಾಮಹಿಮೆಯೆಂಬ । ಘನಪೂಜೆಯನು ತಾನೆಸಗಿ ॥
ತನುಜೆಗೆ ಕೈಗೈಸೆಂದು ನಿರವಿಸಲು । ವನಿತೆ ಮದನಮಂಜೂಷೆ ॥ ೧೬ ॥

ಧಗಧಗಿಸುವ ರನ್ನಪಟ್ಟಕದೊಳು ತನ್ನ । ಮಗಳು ಶ್ರೀ ಸಿಂಧುದೇವಿಯನು ॥
ಸೊಗಸಿಂದ ಕುಳ್ಳಿರಿಸಿ ಕೆಳದಿಯ ಕೈಯಿಂದ । ಹೊಗರಿನ ಕಮ್ಮೆಣ್ಣೆಯನು ॥ ೧೭ ॥

ಕುರುಳ್ಗಳೊಳಿಯಬಿಟ್ಟು ತೊಯಿಸಲೊಪ್ಪಿದುದಾ। ಮರಿದುಂಬಿವಿಂಡನು ಮದನ ॥
ಪರಿಮಳವೆರಸಿದ ಕತ್ತುರಿ ಜಲವನು। ಎರೆದು ತೊಳೆದ ರೀತಿಯನು ॥ ೧೮ ॥

ಹರುಷದಿಂತಿಗುರುವಾಳಿಯರ ಬೆಳ್ಳುಗುರ್ಗಳು। ಮೆರೆದವು ನೀಳಾಳಕದೊಳು ॥
ಕರಿಯ ಬಲಾಹಕದೊಳು ಹರಿದಾಡುವ। ಕರ ಸೊಗಯಿಪ ಮಿಂಚಿನಂತೆ ॥ ೧೯ ॥

ಪರಿಮಳ ತಿಲ ಜವನೊತ್ತುವ ಕುವರಿಯ। ಕರದ ಕಂಕಣದುಲುಗಿಹುದು ॥
ಸ್ಮರರಾಜ ವಿಟ ದ್ವಿಜಗಳ ಸೆರೆಗೈವ। ಸ್ವರದೋರಿದುಲುಹೋ ತಾನೆನಲು ॥ ೨೦ ॥

ಸತಿ ತಾನು ಎಣ್ಣೆಯ ತಿಗುರುವ ಹಸ್ತದ। ಗತಿಗಳೊಪ್ಪಿದವೆಂತೆನಲು ॥
ಅತನು ಧಾನುಷ್ಕ ವಿರಕ್ತರನೆಸೆವಾಗ। ನುತವೆತ್ತು ನರ್ತಿಪಂತಾಯ್ತು ॥ ೨೧ ॥

ಆ ವೇಳೆಯೊಳು ಕನಕದ ಕಟಾಹದಿ। ತೀವಿ ಪರಿಮಳ ಜಲವನು ॥
ಭಾವಕಿಯರು ಕರದೊಯ್ದು ಸಳ್ವಣೆಯೊಳು। ದೇವಿಯನಾಗ ಕುಳ್ಳಿರಿಸಿ ॥ ೨೨ ॥

ವರ ಪದ್ಮರಾಗದ ಎಸಳ್ವಣೆಯೊಳಗಿರ್ದ। ಗರುವೆಯ ಭಾವವೊಪ್ಪಿದುದು ॥
ಸರಸೀರುಹದ ಮಧ್ಯದೊಳು ರಾಜಿಸುತಿರ್ಪ। ಸಿರಿದೇವಿಯೋ ಎಂಬಂತೆ ॥ ೨೩ ॥

ನಳಿತೋಳನೆತ್ತಿ ಸುವರ್ಣದ ಕಳಶದಿ। ಜಳವ ಕುವರಿಗೆಟ್ಟಲಿಹುದು ॥
ಕಳಭ ಶುಂಡಿಲನೆತ್ತಿಂದಿರೆ ಶಿರದೊಳು। ಜಳವ ಸುರಿದ ರೀತಿಯಾಯ್ತು ॥ ೨೪ ॥

ಇನಿಗಡಲನು ಕಡೆಯಲು ಸುರರಾಗಲ್ಲಿ। ಜನಿಸಿ 'ಶ್ರೀ' ಪೊರಮಡಲಾಗ ॥
ಪನಿಯಂಗದೊಳು ಪತ್ತೆಯಮರಿಯರ್ತೊಡೆವಂತೆ। ವನಿತೆಗಿಕ್ಕಿದರಂಗದಟ್ಟ ॥ ೨೫ ॥

ಗರುವೆಯಂಗದ ಲಾವಣ್ಯವಾರ್ಧಿಯೊಳಿರ್ದ। ಗಿರಿಗಳ ತೆರೆ ಮುತ್ತಿದಂತೆ ॥
ತರುಣಿಯ ಕಟಿಗಾಳಿಯರುಡಿಸಿದ ಸೀರೆ। ಪರಿವೇಷ್ಟಿಸಿ ರಾಜಿಸಿತು ॥ ೨೬ ॥

ಅಲೆದಾಡುವ ನೆರೆದೊಂಗಲೊಪ್ಪಿದುದಾ-। ಗಲರ್ವಿಲ್ಲ ಧೀವರ ಹರಿಯು ॥
ಚೆಲುವ ಮಧ್ಯಕೆ ಬೀಸಿ ಸೆಳೆದ ಬೆಳ್ವಾರದ। ವಿಲಸಿತ ಸುಕ್ಕೆಂಬಂತೆ ॥ ೨೭ ॥

ಮಿನುಗುವ ವೀಣೆಗೆ ಸ್ಮರ ಗೌಸಣಿಗೆಯ-। ನನುಗೊಳಿಪಂತೋರ್ವ ಕೆಳದಿ ॥
ವನಿತಾಮಣಿಗೆ ಕರಂಗಿ ಕಂಚುಕವನು। ಮನದಕ್ಕರಿಂ ತೊಡಿಸಿದಳು ॥ ೨೮ ॥

ಕಡು ವಿನ್ನಾಣದಿ ಜಡೆಯ ಪೆಣೆದು ಮತ್ತೆ। ಬಿಡದೆ ಸುತ್ತಿದರ್ಮೊಲ್ಲೆ ಸರವ ॥
ಉಡುತತಿ ಬಂದು ಕೃಷ್ಣೋರಗವನು ಮುತ್ತಿ। ಪೊಡವಿಗೆ ತೋರುವಂತಿಹುದು ॥ ೨೯ ॥

ಕಾಡಿಗೆಯನು ಹಚ್ಚಿ ಕಡೆಗಣ್ಣ ಸೋಗೆಯ। ಗಾಡಿಯಿಂ ತೆಗೆಯಲೊಪ್ಪಿದುದು ॥
ಪ್ರೌಢೆಯ ರೂಪ ನೋಡಲು ಬಂದ ದೃಗ್ವೆಣ್ಣು। ಸೂಡಿದ ಸೊಮ್ಮುಡಿಯಂತೆ ॥ ೩೦ ॥

ವನಿತೆಯರ್ಧೇಂದು ನಿಟಲದಿ ಕಬ್ಬಿನ ಬಿಲ್ಲು। ಮಿನುಗುತೊಪ್ಪಿದುದು ಚೆಲ್ವಿನೊಳು ॥
ಮನಸಿಜಸಖನ ನಡುವೆ ರಾಜಿಸುತಿರ್ದ। ಘನ ಕೃಷ್ಣಾಂಗವೆಂಬಂತೆ ॥ ೩೧ ॥

ಪೊಳೆವ ಮಕರಿಕಾಪತ್ರವ ಕದಪುಗಳೊಳು । ಕೆಳದಿ ಬರೆಯಲೊಪ್ಪಿದುದು ॥
ನಳಿನಾಸ್ತ್ರ ಮಂಗಳಬ್ಧಕದೊಳು ಸ್ವಸ್ತಿಕ- । ವೆರಸಿ ಬರೆದನೋ ಎಂಬಂತೆ ॥ ೩೨ ॥

ನಾರಿಯು ಕಿವಿಯೊಳು ಪರಿಮಳದರಲಂಬು । ರಾರಾಜಿಸಿತು ಮಿನುಗುತ ॥
ಕೈರವ ಯುಗಲವು ಶಶಿಯೆಡಬಲದೊಳು । ಸೇರಿ ನಿಂದವೋ ಎಂಬಂತೆ ॥ ೩೩ ॥

ವೃತ್ತಕುಚೆಯ ಕರ್ಣಯುಗದೊಳು ಬೆಳಗುವ । ಮುತ್ತಿನೆಂಚೆಯವು ರಾಜಿಸಿತು ॥
ವೃತ್ತಾನನ ವಿಧುವೆಂದುಡುತತಿ ಬಂದು । ಹತ್ತಿರ ಸೇರಿದಂತಾಯ್ತು ॥ ೩೪ ॥

ಸುದತಿಯ ಮುಖವಿಧುವನು ನುಂಗುವೆನೆಂದು । ಪದವಿದ ಜಡೆಯೆಂಬರಾಹು ॥
ಒದವಿ ನೀಡಿದ ನಾಲಗೆ ಎನೆ ನೊಸಲೊಳು । ಸದಮಲರ್ಧೇಂದು ಬೊಟ್ಟಿಹುದು ॥ ೩೫ ॥

ಇಂದ್ರನೀಲದ ಸರಿಗೆಯನೊಪ್ಪವಿಟ್ಟಜ । ಚಂದ್ರಾದಿತ್ಯರೆಂದೆಂಬ ॥
ಸಾಂದ್ರಶಿಖಿಯನೊತ್ತಿದಂತೆ ಮುಂದಲೆಯೊಳ- । ರ್ಧೇಂದು ಸುರಿದ ಬೊಟ್ಟಿಹುದು ॥ ೩೬ ॥

ಕನಕಚಾಂಪೇಯದ ಗಂಧಸುಪಲಿಯೊಳು । ಪನಿ ಸೇರಿದಂತೆ ತುಹಿನದ ॥
ವನಿತಾಮಣಿಯು ನಾಸದೊಳು ನಾಸಾಮಣಿ । ಮಿನುಗಿತು ಕಡು ಸೊಬಗಿಂದ ॥ ೩೭ ॥

ಶರಧಿಯೊಳಗೆ ಪುಟ್ಟಿ ನೀನಗಲ್ದಂದಿಂದ । ದರುಶನ ನಮಗಿಲ್ಲಮೆಂದು ॥
ಹರುಷದಿಂ ಮೌಕ್ತಿಕ ಶಂಖವಪ್ಪಿದವೊಲು । ಕೊರಳೊಳೊಪ್ಪಿತು ಹತ್ತಕಟ್ಟು ॥ ೩೮ ॥

ಕೊರಲೊಳು ಕಡು ಸೊಗಯಿಪ ರತಿಯನು ಚೆಲ್ವ । ತರುಣಿಯರಿಕ್ಕೆ ರಾಜಿಸಿತು ॥
ಸಿರಿದೇವಿಯನು ಜನ ಬಳಸಿ ರಾರಾಜಿಪ । ಸುರಧನುವೆಂಬ ಮಾಳ್ಕೆಯೊಳು ॥ ೩೯ ॥

ತೋರಮುತ್ತಿನ ಕಂಠಮಾಲೆಯ ಸರವೊಂದು । ತೋರವೊಲೆಯ ಮೇಲೊಪ್ಪಿದುದು ॥
ಸೂರ್ಯಕಿರಣಕಳ್ಕಿ ತಾವರೆ ಮೊಗ್ಗೆಯ । ತಾರಾಳಿ ಸೇರಿದಂತಾಯ್ತು ॥ ೪೦ ॥

ತರುಣಿಯ ನಡುವಿನೊಳಳಿಝುಂಕೃತಿಯನು । ಎರಕದಿ ಸೇರಿಸಲಿಹುದು ॥
ಸುರಧನು ಬಳಸಿದಾಕಾಶಮಂಡಲದುರೆ । ಕರ ಚೆಲುವನು ತಾ ನಗುತ ॥ ೪೧ ॥

ಗರುವೆಯ ಸಿರಿಯ ಮೇಗಣ ಹೊನ್ನಗೋಂಡೆಯು । ಮಿರಿ ಮಿರಿ ಮಿರಿಗುತೊಪ್ಪಿದುದು ॥
ಶರದಭ್ರದೊಳು ಥಳಥಳಿಸಿ ರಾಜಿಸಿತಾ । ಮೆರೆವ ಮಿಂಚಿನ ಗೊಂಚಲಂತೆ ॥ ೪೨ ॥

ಥಳಥಳಿಸುವ ಹೊನ್ನ ತೋಳಬಳೆಯನಾಗ । ನಳಿತೋಳೊಳಿಡೆ ರಾಜಿಸಿತು ॥
ಎಳೆಯ ಚಂದನಶಾಖೆಯ ಮೂವಳೆಸಾಗಿ । ಹೊಳೆವಹಿ ಸುತ್ತಿದಂದದೊಳು ॥ ೪೩ ॥

ಗುರುಕುಚೆ ಕಡದೊಳು ಪಚ್ಚೆಯ ಮಜನವ । ತ್ವರಿತದಿಂದಿಕ್ಕೆ ರಾಜಿಸಿತು ॥
ಸ್ಮರನೇರುವ ಕರಿರದನದೊಳೊಪ್ಪುವ । ಮರಕತ ಕಟ್ಟೆಂಬವೊಲು ॥ ೪೪ ॥

ನಳಿನಾಸ್ತ್ರ ತಸ್ನಯ ಸರಳಿಗೆ ರನ್ನದ । ಪೊಳೆವ ಕಟ್ಟುಗಳನಿಟ್ಟಂತೆ ॥
ನಳಿನನೇತ್ರೆಯ ನಿಡುಬೆರಳುಗಳೊಳಗಾಗ । ಪೊಳೆವವು ರನ್ನದುಂಗುರವು ॥ ೪೫ ॥

ಕ್ರಮಯುಗದೊಳು ಕೋಕಿಲ ನಿನದಗಳ ಸಂ- । ಭ್ರಮದಿಂದಿಡಲು ರಾಜಿಪವು ॥
ಸುಮನ ಬಾಣನ ಕೈಯ ಗದೆಗಳವಡಿಸಿದ । ಕಮನೀಯ ಗಗ್ಗರದಂತೆ ॥ ೪೬ ॥

ತರುಣಿಯ ದೇಹದ ಲಾವಣ್ಯ ರಸವೆ ತಾ । ಹೊರಹೊಮ್ಮಿ ಮಿರುಗುವಂದದೊಳು ॥
ಚರಣತಳಕೆಯೂಡಿದ ಕುಂಕುಮದ ರಸ । ಕಡು ಸೊಬಗಿಂದ ರಾಜಿಸಿತು ॥ ೪೭ ॥

ಹೊನ್ನಿನ ಭುಜಕೀರ್ತಿ ಬಂದಿ ರಾರಾಜಿಪ । ಚಿನ್ನದ ಕಾಲುಂಗುರದಿ ॥
ರನ್ನದ ಪಿಲ್ಲಿಮುಂಟಿಕೆ ಮುಂತಾದುವ । ಚೆನ್ನೆಗಾಳಿಯರು ಸಿಂಗರಿಸಿ ॥ ೪೮ ॥

ನಾರಿಯ ಮುಖಕೀಯಬ್ದ ಸರಿಯೆ ಎಂದು । ತೋರಿಸುವಂತೋರ್ವ ಕೆಳದಿ ॥
ನೀರೆಯ ಲಪಸದ ಮುಂದೆ ಕನ್ನಡಿಯನು । ತೋರಿಸಿದಳು ಬೆಡಗಿಂದ ॥ ೪೯ ॥

ಇಂತು ಕೈಗೈಸಿ ರಾಜಿಸುತಿರ್ದ ಕುವರಿಯು । ಕಂತು ಸದೃಶ ಜಯಸೇನ ॥
ಮಂತ್ರಿಗಳೊಳು ಕರತನ್ನಿಮೆಂದೆನಲವ- । ರ್ತಾಂತಳುವದೆ ಇಂತೆಂದು ॥ ೫೦ ॥

ದೊರೆದೊರೆಗಳು ಸ್ವಯಂವರದೊಳು ಬಂದು । ನೆರೆದಿಹರವರೊಳು ನಿನಗೆ ॥
ವರನನು ನೋಡೆಲೆ ಕಳಕಂಠ ಸುಸ್ವರೆ! । ಗುರುಕುಚೆ ಎಂದುರೆ ಪೇಳಿ ॥ ೫೧ ॥

ನವರತ್ನಮಯವಾದ ಪಲ್ಲಕಿಯನು ತಂದು । ಕುವರಿಯ ಮುಂದೆ ತೋರಿದೊಡೆ ॥
ಸವಿಬಿಲ್ಲಮರ್ದನ ಜಿನರ ನೆನೆವುತಲಾ । ಯುವತಿಯೇರಿದಳಂದಣವ ॥ ೫೨ ॥

ಅಂದಣದೊಳು ಕುಳಿತಿರ್ದ ಕುಮಾರಿಯು- । ದಂದವೊಪ್ಪಿತು ಮನ್ಮಥನ ॥
ವೃಂದಾರಕರು ಎಸೆಯಲೆಂದು ಧನುವಿಗೆ । ತಂದ ಪೂಸರವೊ ಎಂಬಂತೆ ॥ ೫೩ ॥

ಯುವತಿಯರುಗಳು ಚಾಮರವ ಧಾಳಿಸಲಾ । ಪವನ ತೀಡಲು ಕುರುಳಾಳಿ ॥
ಕುವರಿಯ ಮುಖದೊಳು ಚರಿಸೆ ಕಂಜಕೆ ಬಂದ । ನವ ಷಟ್ಪದಗಳಂತಿಪವು ॥ ೫೪ ॥

ಸರಸಿಜಭವ ಮುಖಚಂದ್ರನ ತಿದ್ದಲು । ಸರಸತಿಯಮೃತವಳುಕನು ॥
ಕರವೆತ್ತಿ ತುಂಬುವಂದದೊಳು ಬೆಳ್ಳಿಲೆಯನು । ತರುಣಿಗೆ ಮಡಿಸಿತ್ತಳಾಳಿ ॥ ೫೫ ॥

ಹಡಪ ಡವಕೆ ಕುಂಚ ಕಾಳಂಚಿ ಕರಗದ । ಪಡಿದ ಬಿಜಣಿಗೆ ಕನ್ನಡಿಯ ॥
ಪಿಡಿದಂದಣವ ಬಳಸಿಕೊಂಡಂಗನೆಯರು । ನಡೆದರು ಕಡುಗಾಡಿಯಿಂದ ॥ ೫೬ ॥

ಮುಡಿಯುಟ್ಟು ಮುತ್ತಿನ ಸರವ ಕೊರಳೊಳಿಟ್ಟು । ಅಡಿಗಳ ತೆಗೆಯಣ್ಪಿಟ್ಟು ॥
ಕುಡುತೆಗಂಗಳಿಗೆ ಕಜ್ಜಳವಿಟ್ಟು ತಾವಾಗ । ನಡೆದರಾಳಿಯರಳವಟ್ಟು ॥ ೫೭ ॥

ಚಂದ್ರಗಾವಿಯು ಗುಳ್ಳಗಾವಿಯು ಬರಹದ । ಮಾಂದಳಿಯುದಯರಾಗಗಳ ॥
ಇಂದ್ರಾಣಿಯ ಚೌಪುಲ್ಲಿ--ಸೀರೆಯನುಟ್ಟು । ಚಂದದಿಂ ನಡೆದರಾಳಿಯರು ॥ ೫೮ ॥

ಹಳದಿಯ ಪಟ್ಟೆ ಹಸುರು ಪಟ್ಟೆ ರಂಜಿಪ । ಬಿಳಿಯ ಪಟ್ಟೆಯ ಪೀತಾಂಬರದ ॥
ಕಳಕಳಿಸುವ ಬಾಣಗೆರೆಯ ಪಟ್ಟೆಯನುಟ್ಟು । ಕೆಳದಿಯರಡಿಯಿಟ್ಟರಾಗ ॥ ೫೯ ॥

ಸೂರಿಯ ಪುಟದೆ ಕರಂಗಿಯ ಮಾಸದ । ಭಾರಿಗೆಲಸದ ಕಂಚುಕವ ॥
ನಾರಿಯರಾ ವೇಳೆಯೊಳು ತೊಟ್ಟು ನಡೆದರು । ಮಾರನ ಬಳಗವೆಂಬಂತೆ ॥ ೬೦ ॥

ಕಡಗ ಕಂಕಣ ತೋಳಬಳೆ ತಾತಿಲುಳಿಸರ । ಕಡು ದೊಡ್ಡ ಬಂದಿ ಚಿಂತಾಕು ॥
ಉಡಿದಾರ ಸರಪಣಿ ಪಿಲ್ಲಿಮುಂಟಿಕೆಯಿಟ್ಟು । ನಡೆದರಾಳಿಯರಳವಟ್ಟು ॥ ೬೧ ॥

ಕುಲಿಶೋಲೆ ವಿರಿಂಚೋಲೆ ಸಣ್ಣಂಚಿನೋಲೆಯ । ಹೊಳೆವ ಕುಂದಣ ಮಾಟದೋಲೆ ॥
ಥಳಥಳಿಸುವ ಜಾಲಿಯೋಲೆಯನಿಟ್ಟಾಗ । ಕೆಳದಿವೆಣ್ಣುಗಳೈದಿದವು ॥ ೬೨ ॥

ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ । ಕಲ್ಹಾರಂಬುಜ ಮಾಧವಿಗಳ ॥
ಮೊಲ್ಲೆ ಮಂದಾರೊಡ ಪಚ್ಚೆಯ ಮುಡಿಗಿಟ್ಟು । ಚಲ್ಲಗಾತಿಯರೈದಿದರು ॥ ೬೩ ॥

ಕುಂದಕುಡ್ಮಲ ರದನೆಯರು ಶೋಭಿಸುವರ- । ವಿಂದ ಮುಖದ ನೀರೆಯರು ॥
ಬಂದುಗೆದುಟಿಯ ಭಾವಕಿಯರು ನಡದರು । ಸೌಂದರಾಂಗಿಯ ಬಳಸಿನೊಳು ॥ ೬೪ ॥

ಕಳಶಕುಚೆಯರು ನಳಿನವದನೆಯರು । ನಳಿತೋಳ ನಲ್ಮೆಗಾತಿಯರು ॥
ಎಳೆವಾಳೆದೊಡೆಯ ಸೋರ್ಮುಡಿಯ ಕೋಮಲೆಯರು। ಇಳಿವೆಣ್ಣಿನೊಡನೈದಿದರು ॥ ೬೫ ॥

ಪದ್ಮಗಂಧಿಯರು ಪದ್ಮದ ಮೊಗ್ಗೆ ಕುಚೆಯರು । ಪದ್ಮಾಂಘ್ರಿ ಪದ್ಮಹಾಸೆಯರು ॥
ಪದ್ಮಾನನೆಯ ಬಳಸಿ ನಡೆತಂದರು । ಪದ್ಮಲೋಚನೆಯ ಕಾಂತೆಯರು ॥ ೬೬ ॥

ಗುರುದಮ್ಮಿಲ್ಲಿರು ಗುರುಕುಚಯುಗಲಿರು । ಗುರುನಿತಂಬದ ಗರುವೆಯರು ॥
ಸರಸಿಜದಳನೇತ್ರೆಯ ಸುತ್ತಿ ಬಂದರು । ಸುರಸತಿಯರೊ ಎಂಬಂತೆ ॥ ೬೭ ॥

ಕಂಬುಕಂಠೆಯರು ಕಾಳೋರಗವೇಣಿಯ- । ರ್ಬಿಂಬಾಧರದ ಬಾಲೆಯರು ॥
ಅಂಬುಜಮೊಗ್ಗೆವೊಲೆಯಳ ಬಳಸಿಕೊಂಡು । ಸಂಭ್ರಮದಿಂದಲೈದಿದರು ॥ ೬೮ ॥

ಬಡನಡುವಿನ ಬಲ್ಮೊಲೆಯ ಮಾನಿನಿಯರು । ಕುಡುತೆಗಂಗಳ ಚೆಲುವೆಯರು ॥
ಪಿಡಿನಡುವಿನ ಪೀಲಿದುರುಬಿನ ಚೆನ್ನೆಯ- । ರ್ಕಡು ಜಾಣೆಯೊಡನೈದಿದರು ॥ ೬೯ ॥

ಸುಳಿನಾಭಿ ಸುಳಿಪಲ್ಲಿನ ಮುದ್ದುವೆಂಗಳು । ಕಳಭಮಸ್ತಕ ನಿತಂಬೆಯರು ॥
ತಳಿರ್ವಜ್ಜೆ ತಾರಾಳಿನಖದ ಸೌಂದರಿಯರು । ನಳಿನಾಕ್ಷಿಯೊಡನೈದಿದರು ॥ ೭೦ ॥

ಕಳಹಂಸಯಾನೆಯರ್ಕಳಕಂಠಗಾನೆಯ- । ರ್ಕಳಭೋಪಮ ನಡೆಯವರು ॥
ಕಳಶೋಪಮಕುಚೆಯರು ಘಟಸ್ತನೆಯರು। ನಳಿನ ಕುಡ್ಮಳದ ಕುಚೆಯರು ॥ ೭೧ ॥

ಕರಡಿಗೆ ಮೊಲೆಯರು ಎಣೆವಕ್ಕಿ ಮೊಲೆಯರು । ವರನಾಳಿಕೇರ ಮೊಲೆಯರು ॥
ವರಜೀವರಕ್ಷೆಯ ಫಲನಿಭ ಮೊಲೆಯರು। ಗರುವೆಯೊಡನೆ ತಾನೈದಿದರು ॥ ೭೨ ॥

ತಿಲಕುಸುಮದ ನಾಸಿಕ ಸಂಪಗೆ ನನೆ। ಪೊಳೆವ ಮೊಗ್ಗೆಯ ನಾಸಿಕದ ॥
ಕಳಧೌತ ಪೆಟಲ ನಾಸಿಕದ ಕೋಮಲೆಯರು। ಎಳೆವೆಣ್ಣಿನೊಡನೈದಿದರು ॥ ೭೩ ॥

ವಿಧುವದನದ ಸನ್ಮುಖಸಮವದನದ। ಪದುಮವದನ ಮುದ್ದುಮೊಗದ ॥
ಒದವಿದಸಿಯ ಮೊಗದ ಬಟ್ಟಲಪನದ। ಸುದತಿಯರ್ಕೈದಿದರೊಡನೆ ॥ ೭೪ ॥

ಚಂದಿರದುಟಿಯಾಲವಣ್ಣದುಟಿಯ ರನ್ನ-। ಬಂದುಗೆದುಟಿಯ ಚೆಂದುಟಿಯ ॥
ಚೆಂದಳಿರ್ದುಟಿ ತೊಂಡೆವಣ್ಣದುಟಿಯರಾಗ। ಸೌಂದರಿಯೊಡನೈದಿದರು ॥ ೭೫ ॥

ಕುಲಿಶದಂತದ ಕುಂದಕುಡ್ಮಲ ರದನದ। ಬೆಳೆದ ದಾಡಿಮದ ದಶನದ ॥
ಸುಲಿಪಲ್ಲ ನೀರೆಯರ್ಸುಗುಣವೆಣ್ಣಿನ ಕೂಡೆ। ನಲವಿಂದ ನಡೆದರೊಗ್ಗಿನೊಳು ॥ ೭೬ ॥

ಬೊಗಸೆಗಣ್ಣೆಳೆವಾಳೆಗಣ್ಣ ತಾವರೆಗಣ್ಣ। ನಗೆಗಣ್ಣಾನನೆಯಂಬುಗಣ್ಣ ॥
ಮಿಗಗಣ್ಣ ಪಾಠೀನಜಠರದ ಕಣ್ಣಿನ। ಸೊಗಸುಗಾತಿಯರ್ಕೈದಿದರು ॥ ೭೭ ॥

ಕಡೆಗಣ್ಣ ನೋಟದಿಂ ಕಾಮುಕರಿಸೆವುತ। ನಡೆಯಿಂದಂಚೆಯನು ಹಳಿವುತ ॥
ಕಡು ಬೇಗದಿಂದ ಜಂಗಮಲತೆಯೆಂಬಂತೆ। ನಡೆದರಾಳಿಯರೊಗ್ಗಿನಲಿ ॥ ೭೮ ॥

ಮಾರನ ಪಟ್ಟದ ಮದಕರಿ ಬರುತದೆ। ದೂರ ತೊಲಗಿ ಸಂಚಲರು ॥
ಗಾರಾಗಬೇಡಿ ನೀವೆಂದು ಕುಂಚುಕಿಯರು। ಸಾರುತಲೈದಿದರಾಗ ॥ ೭೯ ॥

ಭೇರಿ ತಮ್ಮಟ ನಿಸ್ಸಾಳ ತುಡುಮುರುಂಜೆ। ಚೀರುವ ಕಹಳೆ ಶಂಖಗಳು ॥
ಭೂರುಹ ಮುಂತಾದ ಪಲವು ವಾದ್ಯಂಗಳು। ಭೋರೆಂದು ಮೊರೆದುವಾಗಲ್ಲಿ ॥ ೮೦ ॥

ಕಡು ಬೆಡಗಿಂದ ಸ್ವಯಂವರ ಗೃಹಕಾಗಿ। ಮಡದಿ ರನ್ನಳು ಬರುತಿರಲು ॥
ಪೊಡವಿಪರತ್ತ ತಮ್ಮಯ ದೈವಗಳಿಗೆ। ಒಡನೆ ಪರಸಿಕೊಂಡರಿಂತು ॥ ೮೧ ॥

ಕುವರಿಯೆನಗೆ ಮಾಲೆಯ ಸೂಡಿದೊಡಾನು। ನವರತ್ನದಿಂದ ಗೋಪುರವ ॥
ಹವಣಿಸಿ ಕೊಡುವೆನು ಕುಲದೈವಕೆ ಎಂದು। ಕುವರ ನೆನೆದನೋರ್ವ ಮನದಿ ॥ ೮೨ ॥

ಗುರುಕುಚೆ ತನಗೆ ಸೋತರೆ ಕರ್ಬೊನ್ನದಿ। ಮೆರೆವ ಕಿರೀಟವ ನಾನು ॥
ವರ ದೇವತೆಗೆ ಮಾಡಿಸಿ ಕೊಡುವೆನು ಎಂದು। ಪರಸಿಕೊಂಡೋರ್ವ ಚಿತ್ತದೊಳು ॥ ೮೩ ॥

ಕಡು ಜಾಣೆ ಕಡೆಗಣ್ಣ ಕೊನೆಯಿಂದೆನ್ನನು। ಬಿಡದೆ ನೋಡಿದರೆ ಸಾಕಾನು ॥
ಕಡವರವನು ಪತ್ತು ಲಕ್ಷವ ಕೊಡುವೆನೆಂ-। ದೊಡನೆ ಹರಕೆ ಪೊತ್ತನೋರ್ವ ॥ ೮೪ ॥

ನೀರೆ ಕುಮಾರಕರೆಲ್ಲರ ಬಿಟ್ಟೆನ್ನ। ಸಾರಿದೊಡಾನು ದೇವತೆಗೆ ॥
ತೋರಮುತ್ತಿನ ಕಂಠಸರವ ಕೊಡುವೆನೆಂದು। ಹಾರೈಸಿಕೊಂಡಿರ್ದನೋರ್ವ ॥ ೮೫ ॥

ತರುಣಿಯೆನ್ನಯ ರೂಪ ನೋಡಿ ಸೋತೊಡೆಯಾನು। ಭರದಿ ಮೌಕ್ತಿಕದ ಮಂಟಪವ ॥
ಕರ ಚೆಲುವಿಂದ ಮಾಡಿಸುವೆನೆಂದಾಗೋರ್ವ। ಪರಸಿಕೊಂಡನು ದೇವತೆಗೆ ॥ ೮೬ ॥

ಸುದತಿ ಇವನಾವ ದೇಶದ ಕುಮಾರಕನೆಂದು। ಚದುರಿಂದ ಬೆಸಗೊಳಲಾನು ॥
ಪದಿನಾರು ಲಕ್ಕ ಗ್ರಾಮಗಳ ಬಿಡುವೆನೆಂದು। ಹೃದಯದೊಳ್ನೆನೆದಾಗೋರ್ವ ॥ ೮೭ ॥

ಬಲದಗೈಯಿಂದೆಡದೋಳ ಪೈರಣೆಯನು । ಚೆಲುವಿಂದ ನೇವರಿಸುತ್ತ ॥
ನಲವಿನಿಂದೆಡಗೈಯ ಮೀಸೆಯ ಮೇಲಿಟ್ಟು । ಒಲವಿನಿಂದಿರ್ದನಾಗೋರ್ವ ॥ ೮೮ ॥

ಎಡಗೈಯಿಂದ ಸ್ತ್ರೀ ವಶ್ಯದ ಜಪವನು । ಸಡಗರದಿಂ ಮಾಡುತಲಿ ॥
ಮಡದಿ ಯಾವಾಗ ಬಂದಪಳೋ ಎಂದಾಗೋರ್ವ । ಒಡನೆ ನೋಡುತ ಕುಳಿತಿರ್ದ ॥

ಮಡದಿರನ್ನಳು ಬರುತಹಳೆ ಎಂದಾಗೋರ್ವ । ಸಡಗರದಿಂದ ತಿಲಕವ ॥
ಇಡದೆ ಹಣೆಯೊಳು ಮೂಗಿನ ಕೊನೆಯೊಳಗಿಟ್ಟು । ಕಡು ಬೇಗದಿಂ ನೋಡುತಿಹನು ॥

ತರುಣಿ ಬಂದಪಳೆಂಬ ಸಡಗರದಿಂದೋರ್ವ । ಶಿರಕೆ ವಸ್ತ್ರವ ಕಟ್ಟಿ ಮರೆದು ॥
ಭರದಿಂದ ಮೊಣಕಾಲಿಗೆ ಕಟ್ಟಿಕೊಂಡಾಗ । ತರುಣಿ ಬರವ ನೋಡುತಿಹನು ॥ ೯೧ ॥

ಕರಟದ ಕಪ್ಪ ಬಟ್ಟಲೊಳಿಟ್ಟಾಗೋರ್ವ । ನರೆತಿರ್ದ ಗಡ್ಡ ಮೀಸೆಗಳ ॥
ಒರಸಿಕೊಳ್ಳುತ ತಲೆ ಎತ್ತೆತ್ತಿ ನೋಡುತ- । ಲಿರುತಿರ್ದ ಕಡು ಹೆಡ್ಡ ವೃದ್ಧ ॥ ೯೨ ॥

ಶಿರಬಾಗಿಯುರದೊಳಗಿರ್ದಾಭರಣವ । ಭರದಿ ನೋಡುತಲೊಮ್ಮೊಮ್ಮೆ ॥
ಶಿರವೆತ್ತಿ ಕುವರಿಯ ಬರವ ನೋಡುವನೊಮ್ಮೆ । ಸೆರೆ ಮುಗ್ಧ ನಗಿಸುತ್ತೆಲ್ಲರನು ॥ ೯೩ ॥

ಇತ್ತಲು ಕುವರಿ ಪಲ್ಲಕಿಯಿಂದಿಳಿದು ತಾ । ಮುತ್ತಿನ ಹಾವುಗೆ ಮೆಟ್ಟಿ ॥
ಬಿತ್ತರದಿಂ ಕೈಲಾಗದಿಂ ಬರುತಿರೆ । ಮತ್ತರಾದರು ತಾ ದೊರೆಗಳು ॥ ೯೪ ॥

ಇಟ್ಟ ದಿಟ್ಟಿಗಳ ತೆಗೆಯದೆ ಬಾಯಿಗಳನು । ಬಿಟ್ಟು ಕೈಕಾಲು ಮಿಡುಕದೆ ॥
ತೊಟ್ಟಿಡುತಂಗದ ಬೆವರು ಪುತ್ತಳಿಯಂತೆ । ಬಟ್ಟ ಜವ್ವನೆಯ ನೋಡಿದರು ॥ ೯೫ ॥

ಕಡೆಗಣ್ಣ ಕಾಂತಿಯು ಬೆಳಗು ನೀರೆಯ ಮೇ- । ಲೊಡನೆ ಪರಿಯಲು ರಾಜಿಸಿತು ॥
ಮಡದಿಯ ಸೆಳೆವರೆ ಇಕ್ಕಿದ ಬೆಳ್ಳಿಯ । ನಿಡಿದಾದ ಸೆಳೆಯಂತಿಹುದು ॥ ೯೬ ॥

ಗರುವೆಯ ದೇಹಚಾಂಪೇಯ ಕುಸುಮಕಾಗ । ದೊರೆಕುವರರ ದೃಗ್ಮಧುಗಳು ॥
ಅರಿಯೆನ್ನದೆರಗಿದವಾಸಕ್ತ ಜನರಿಗೆ । ಹರಣದ ಮೇಲಾಸೆಯುಂಟೆ ॥ ೯೭ ॥

ಪರಿದಿರೆಯುರಸುಮಕ್ಕಳ ಕಣ್ಬೆಳಗಾ- । ಗರಸಿ ಚಲಿಸಲೊಪ್ಪಿದಳು ॥
ಸ್ಮರಚಕ್ರೇಶ್ವರ ಸಾಧಿಪ ಹೊನ್ನಿನ । ಪರಿಜೋ ತಾನೆಂಬಂತಿಹಳು ॥ ೯೮ ॥

ಎಳೆಯಳಂಗದಿ ರಾಜಕುವರರ ಲೋಚನ । ಪೊಳೆಯಲೊಪ್ಪಿದುದು ನೋಟಕರ್ಗೆ ॥
ಜಳಧಿಯೊಳಗೆ ಸಂಚರಿಪ ಪಾಠೀನದ । ಬಳಗವೊ ಎಂಬಂತಿಹುದು ॥ ೯೯ ॥

ನಾರೀಮಣಿಯೆತ್ತೆತ್ತಲೊಲೆಯಲತ್ತ- । ಲಾ ರಾಜಕುವರರಾಸ್ಯಗಳು ॥
ಸೂರಿಯನು ಕಂಡ ಸೂರಿಯ ಕಾಂತಿಯು । ಚಾರುಕುಸುಮಗಳೆಂಬಂತೆ ॥ ೧೦೦ ॥

ಮುತ್ತಿನ ಹಾವುಗೆ ಮೆಟ್ಟಿ ನಡೆವ ರಾ- । ಜೋತ್ತಮೆ ಕುವರಿಯೆಸೆದಳು ॥
ಬಿತ್ತರದಿಂ ಬಿಳುಮುಗಿಲೇರಿ ಬರುತ- । ಪ್ಪುತ್ತಮ ಮಿಂಚಿನಂತಿಹಳು ॥ ೧೦೧ ॥

ಮಡವಿರನ್ನಳು ಮಂದಗಮನದಿಂ ನಡೆತಂದು । ಪೊಡವಿಪರಿರ್ದೆಡೆಗೈದಿ ॥
ಕಡು ಬೇಗದಿಂದಲವಳ ನೇಹದ ಸಖಿ । ಸಡಗರದಿಂ ಮುಂದೆ ನಿಂದು ॥ ೧೦೨ ॥

ಸುರಮಂಜರಿ ಸೊಬಗಿಂದ ನಟನೆಯಿಂದ । ಮುರುಕದಿಂ ಮುದ್ದುವಾತಿಂದ ॥
ಗುರುಕುಚೆಯೊಡನೆ ದೊರೆಗಳ ಕಥನವನು । ಒರೆದಳಿಂತೆಂದು ಬೊಟ್ಟೆತ್ತಿ ॥ ೧೦೩ ॥

ವರ ಇಕ್ಷ್ವಾಕುಕುಲಾಂಬರ ತಿಲಕನು । ನೆರೆ ಜಾಣ ರೂಪು ಸಂಪನ್ನ ॥
ಹರಿವಿಕ್ರಮಿ ಹರಿಪುರವನಾಳುವನಿವ । ಪರಿಕಿಸೆಲೆ ಪಿಕ ವಾಣಿ ! ॥ ೧೦೪ ॥

ಸುರರೊಳು ಪುರುಡಿಪ ತನ್ನ ಸಂಪದದಿಂದ । ಹರಿವಂಶಾಂಬುಧಿಚಂದ್ರ ॥
ಪುರುಷಸಿಂಹನು ಸಿಂಹಪುರವನಾಳುವನಿವ । ಮರಿದುಂಬಿಗುರುಳಳೆ ! ನೋಡು ॥ ೧೦೫ ॥

ಕಾಮನ ರೂಪ ಜರೆವ ತನ್ನ ರೂಪಿಂದ । ಸೋಮಕುಲೋತ್ತಂಸ ಚದುರ ॥
ಕಾಮನ ಮುಂಗೈಯರಗಿಳಿಯೆ ! ನೋಡು । ಸಾಮಜ ಪುರಪತಿಯಿವನು ॥ ೧೦೬ ॥

ರವಿಕುಲ ಶಿಖರಶೇಖರ ಭಾಗ್ಯವಂತನು । ನವ ಮನ್ಮಥ ಚೆಲುವಿಂದ ॥
ಕವಿಜನನುತ ಚಾಂಪೇಯನಾಳುವನೀತ । ಕುವರಿ ! ನೋಡೆಲೆ ಕುಂಭಕುಚದ ॥ ೧೦೭ ॥

ಧುರದೊಳಗಿದಿರಾದ ದೊರೆಗಳ ಸೀಳುವ । ಸುರತರು ಯಾಚಕ ಜನಕೆ ॥
ವರ ಉಗ್ರವಂಶಲಲಾಮ ಕಾಶಿ ಎಂ- । ಬುರುತರ ಜನಪದದೊಳಗೆ ॥ ೧೦೮ ॥

ಕರ ಸೊಗಯಿಪ ವಾರಣಾಸಿಯ ಪಟ್ಟಣ- । ದರಸ ಪೆಸರು ಧರ್ಮರಥನು ॥
ಎರಕದಿಂ ನೋಡೆಲೆ ಸೊಬಗಿನ ಸೋನೆಯೆ ! । ಸ್ಮರನ ಕರದ ಹೊನ್ನ ಬೊಂಬೆ ! ॥ ೧೦೯ ॥

ನಾಥವಂಶಾಂಬರ ದಿನಮಣಿ ಪ್ರೌಢನು । ಖ್ಯಾತನುಭಯಕುಲಶುದ್ಧ ॥
ಶ್ವೇತಪುರಾಧೀಶ ಜಯವರ್ಮನೀತನು । ಶಾತೋದರಿ ! ನೀ ನೋಡು ॥ ೧೧೦ ॥

ಕದನಲಂಪಟನು ಕಾಂಪಿಲ್ಯದೇಶಾಧೀಶ । ಮದನ ಸಮಾನ ಚೆನ್ನಿಗನು ॥
ಉದಯಾರ್ಕತೇಜಸ್ವಿ ಹರಿವರ್ಮನೀತನು । ಬೆದರ್ವ್ವಗಲ್ಲೆಗಣ್ಣಳೆ ! ನೋಡು ॥ ೧೧೧ ॥

ಕೊನೆ ಮಿಸೆ ಕೋರೆ ರುಮಾಲು ಮುಂದುರುಬಿನ । ಮಿನುಗು ವಿಭೂತಿ ಪಣೆಯೊಳು ॥
ಅನುವಿನಾಭರಣ ರಂಜಿಪ ಮೇಲುದುಪ್ಪಟಿ । ಕನಕವಿಷ್ಟರದೊಳು ಕುಳಿತು ॥ ೧೧೨ ॥

ಚೆಲುವರ ಚೆನ್ನಿಗನತಿ ಜಾಣ ಗಾಂಭೀರ್ಯ । ತೆಲುಗುದೇಶಾಧೀಶನಿವನು ॥
ನಲವಿಂದ ನೋಡು ಪವಳದ ಲತೆಯಂತೆ । ಬಳುಕುವ ಮೈಯ ಲತಾಂಗಿ ! ॥ ೧೧೩ ॥

ಬಲಗೈಯೊಳಿಟ್ಟು ಮುರುಡಿಯ ಸರಪಣಿಯು । ಪೊಳೆವ ನೀಲದ ಒಂಟಿ ಮೆರೆಯೆ ॥
ಚೆಲುವಿನ ಓರೆದುರುಬು ಮುಂಚುಂಗಿನಿಂ । ನಲವೆತ್ತು ಸಿಂಗಾರವಾದ ॥ ೧೧೪ ॥

ಬವರಿಗಡ್ಡವು ರಾಜಿಪ ಚಂದ್ರಗಾವಿಯು । ನವ ವಸ್ತ್ರವನು ತುಂಬ ಹೊದೆದು ॥
ತವೆ ಮೋಹನ ತಿಲಕವು ಚಾರು ನೊಸಲೊಳು । ರವಿಸಮ ಕಾಂತಿಯಿಂದೆಸೆವ ॥ ೧೧೫ ॥

ಬಲಗೈಯೊಳು ಬಾಂಕನಾಂತು ನಟನೆಯಿಂದ । ಮಲಗಿನ ಮೇಲೊರಗಿರುವ ॥
ತುಳುವದೇಶಾಧೀಶನಿವನ ರೂಪನು ನೋಡೆ । ಎಳೆವಾಳೆದೊಡೆಯೆಳೆವೆಣ್ಣೆ ! ॥ ೧೧೬ ॥

ತೋರಮುತ್ತಿನ ಚೌಕುಳಿಯ ಕರ್ಣದೊಳಿಟ್ಟು । ನೇರಾಣಿ ಬೊಂಬೆಯಂದದೊಳು ॥
ತೋರುವನೀತ ಕರ್ಣಾಟಕರಾಯನು । ತೋರವೊಲೆಯ ಹೆಣ್ಣೆ ! ನೋಡು ॥ ೧೧೭ ॥

ಜೋಡಂಗಿಯ ತೊಟ್ಟಂಗದ ಕಾಂತಿಯು । ನೋಡಲದರ ಮೇಲೆ ಪೊಳೆಯೆ ॥
ದಾಡಿಮದಂತದ ಗುರ್ಜರದೇಶೇಂದ್ರ । ನೋಡೆಲೆ ಕುಡಿತೆಗಣ್ಣಬಲೆ ! ॥ ೧೧೮ ॥

ತಿಲಕವೃಕ್ಷವನೆಮ್ಮಿಕೊಂಡು ಹೊಂಜೆಳೆಯಂತೆ । ಬಳುಕುವ ಕಾಯದ ಚೆಲುವ ॥
ಕಲಭಮಸ್ತಕನಿತಂಬೆ ! ನೀ ನೋಡಿವ । ಕಲಿವಂತ ಸಿಂಹೋದರನು ॥ ೧೧೯ ॥

ಪುನ್ನಾಗವೃಕ್ಷವನೆಮ್ಮಿ ನೆಲದೊಳೂರಿ । ಚಿನ್ನದ ಸಾಣೆಗಂಡೆಯವ ॥
ಬಿನ್ನಾಣದಿಂದಿರುವ ಜಯದ್ರಥನಿವ । ಕನ್ನಡಿಮೊಗದಳೆ ! ನೋಡು ॥ ೧೨೦ ॥

ಚಂದನವೃಕ್ಷವನೊರಗಿ ಕೈಯೊಳಗಾ- । ನಂದದಿಂ ಸಿಂಗಾಡಿವಿಡಿದು ॥
ನಿಂದಿರುವೀತನರಿಂದಮ ನೋಡೆಲೆ । ಕಂದರ್ಪನ ಕೈಯಂಚೆ ! ॥ ೧೨೧ ॥

ವೀಣೆಯ ಕರದೊಳು ಪಿಡಿದು ಅಶೋಕೆಯ । ಜಾಣಿಂದಲೊರಗಿಕೊಂಡಿರುವ ॥
ಕ್ಷೋಣಿಭೂಷಣ ಸುರಪತಿ ಪದ್ಮರಥನಿವ । ಏಣಾಂಕವದನೆ ! ನೀ ನೋಡು ॥ ೧೨೨ ॥

ಸುರಮಂಜರಿ ಭೂಪಾಲರ ಗುಣವನು । ನೆರೆ ಕೊಂಡಾಡಿ ಕೊನರಲು ॥
ಗುರುಕುಚೆಯಿವರು ಸಾಮಾನ್ಯ ಪುರುಷರೆಂದು । ಬೆರಳಮಿಡಿಯೆ ನೋಡಿ ಕೆಳದಿ ॥ ೧೨೩ ॥

ಗಗನೇಚರರಿರ್ದೆಡೆಗೆ ಕುಮಾರಿಯ । ಸೊಗಸಿಂದ ಕರೆದೊಯ್ವಾಗ ॥
ಮುಗುಥೆಯ ನಡುವಿನ ಕಾಂಚಿಯ ಕಿರುಘಂಟೆ । ಮರಿಗೆಜ್ಜೆ ಗಿಲಿ ಗಿಲಿರೆನಲು ॥ ೧೨೪ ॥

ಎಲೆ ಖೇಚರಿರ ! ನಮ್ಮಕ್ಕಾಜಿಯು । ಒಲಿವಳಲ್ಲೇತಕೆ ನೀವು ॥
ಸಲೆ ಬಾಯ್ಬಿಗೆದು ನೋಡುವಿರೆಂದು ಪೇಳ್ವಂತೆ । ಉಲಿದವು ಕಿರಿಘಂಟೆಗೆಜ್ಜೆ ॥ ೧೨೫ ॥

ಜೊಗಸೆಗಂಗಳ ಭಾವಕಿರನ್ನೆ ನಡೆತರೆ । ಜೊಗರಿವೊಲೆಯವಳ ಕೂಡೆ ॥
ಗಗನೇಚರರ ಲಾವಣ್ಯ ಸುಪುಣ್ಯವ । ಸುಗುಣೆ ಪೆಣ್ಣಿಗೆ ಪೇಳಿದಳು ॥ ೧೨೬ ॥

ತುಂಬುಜವ್ವನೆ ತೊಂಡೆವಣ್ಣದುಟಿಯಳೆ ! । ಕಂಬುಕಂಧರೆ ! ನೋಡಿವನು ॥
ಅಂಬರತಿಲಕವನಾಳ್ವ ಗರುಡವೇಗ- । ನೆಂಬ ಖಚರ ರೂಪವಂತ ॥ ೧೨೭ ॥

ಕುಲವಿದ್ಯೆ ಜಾತಿಸಾಧಿತವಿದ್ಯೆಗಳೊಳು । ಬಲವಂತನಧಿಕ ಗಂಭೀರ ॥
ಕಲಿವಂತ ಸಿಂಹಧ್ವಜನೆಂಬ ದೊರೆಯು । ಚೆಲುವೆ ! ನೋಡೆಂದು ತೋರಿದಳು ॥ ೧೨೮ ॥

ಕಿನ್ನರಗಿರಿಗೊಡೆಯನು ಸುಪ್ರವೀಣನು । ಉನ್ನತೈಶ್ವರ್ಯ ಸಂಪನ್ನ ॥
ಗನ್ನಗದಕ ರಶ್ಮಿವೇಗನಿವನ ನೋಡು । ಪುನ್ನಾಗದ ಪೂಬೊಂಬೆ ॥ ೧೨೯ ॥

ಗಿರಿಗಳೆಲ್ಲವ ಕಿತ್ತು ತನ್ನ ವಿದ್ಯೆಗಳಿಂದ । ತಿರಿಕಲ್ಲಾಡುವ ಶಕ್ತಿಯುಂಟು ॥
ಮರುತವೇಗನು ಈತನ ರೂಪ ನೀ ನೋಡು । ಸ್ಮರನ ಪಟ್ಟದ ಮದದಾನೆ ! ॥ ೧೩೦ ॥

ರವಿಬಿಂಬವ ತನ್ನಯ ಮಹಾವಿದ್ಯೆಯಿಂ । ಜವದಿಂದೊದೆವ ಸಮರ್ಥ್ಯ ॥
ಇವನ ಹೆಸರು ಪವಿಗಲನೀತನ ನೋಡು । ಶಿವನ ವೈರಿಯ ಕೈಯ ಸೆಳೆಯೆ ! ॥ ೧೩೧ ॥

ಇವರಾದಿಯಾಗಿ ಸಮಸ್ತ ನೃಪರ ತೋರಿ । ಕವುರವನೊತ್ತಿರಕ್ಕೈದಿ ॥
ಸವಿವಿಲ್ಲನರಸಿಯ ಜರೆವ ರೂಪಿನವಳೆ ! । ಇವನ ಗುಣವ ಪೇಳ್ವೆ ಕೇಳು ॥ ೧೩೨ ॥

ಕುರುವಂಶಾಂಬರದಿನಮಣಿ ಕಾಶ್ಮೀರ- । ದುರುತರ ಜನಪದದೊಳಗೆ ॥
ಕರ ಚೆಲುವಾದ ಕನಕಪುರವನಾಳ್ವ । ದೊರೆ ಜಿನಚಂದ್ರನ ಸುತನು ॥ ೧೩೩ ॥

ಶಾಂತಿಜಿನರ ಸಂತಾನದೊಳೊಗೆದನು । ಕಂತು ಸದೃಶ ಕಲೆವಂತ ॥
ದಂತಿಯ ವನದೊಳು ದ್ವಾತ್ರಿಂಶತ್ಕರಣದಿಂ । ಭ್ರಾಂತಿಗೊಳಿಸಿದ ಸುಜಾಣ ॥ ೧೩೪ ॥

ಮಿನುಗುವ ರತ್ನಪುರೋದ್ಯಾನವನದೊಳು । ಘನದೇಳು ಲಕ್ಷ ವಿದ್ಯೆಯನು ॥
ಇನಿಸು ಬೇಗದಿ ಸಾಧಿಸಿದವನಿವನೀಗ । ಬಿನುಗು ಖೇಚರ ಪವಿಗಲನ ॥ ೧೩೫ ॥

ಮಿನುಗುವರ್ಧೇಂದು ರೋಪಣದಿ ಶಿರವನೆಚ್ಚ । ಜಿನರಿಗೆ ತಾರಾದ್ರಿಯಲ್ಲಿ ॥
ಮನದಕ್ಕರಿಂದಭಿಷವಣವನೆಸಗಿದ । ಘನ ಪುಣ್ಯವಂತನು ಇವನು ॥ ೧೩೬ ॥

ಹರಿಬಲ ಹರಿಧನು ಖೇಚರರೀರ್ವರ । ವರ ತನುಜೆಯರ ತಾ ವರಿಸಿ ॥
ಸುರುಚಿರ ಸಿದ್ಧ ಸಾಸಿರಕೂಟ ವಸತಿಯ । ಮೆರೆವ ಪಡಿಗಳೆರಡಿವನ ॥ ೧೩೭ ॥

ಕರ ಸೋಂಕಲೊಡನೆ ವಜ್ರದ ವಿತಂಡಗಳುರ್ಚಿ । ತೆರೆದವು ಜೀಕು ಗಿರ್‍ರೆಂದು ॥
ದುರುಳ ರಕ್ಕಸ ಮುನಿಗುಪಸರ್ಗವ ಮಾಡೆ । ಭರದಿ ಪಿಂಗಿಸಿದ ಮಹಾತ್ಮಾ ॥ ೧೩೮ ॥

ಸರಸ ಸಂಗೀತ ಸಾಹಿತ್ಯ ಕೋವಿದ ಜಾಣ । ಸುರಪೂಜಿತ ದಿವ್ಯ ಚರಣ ॥
ಪರಪುರುಷಾರ್ಥ ಚಿಂತಾಮಣಿಯಿವನೀಗ । ಹರಿವಿಕ್ರಮಿ ತೇಜಸ್ವಿ ॥ ೧೩೯ ॥

ಸುರಸತಿ ಸಮರೂಪೆ ಸುರುಚಿರ ಶೃಂಗಾರೆ । ಸಿರಿದೇವಿ ಕರದ ಕಂದುಕವೆ ! ॥
ದೊರೆರನ್ನ ಜ್ಞಾನೇಂದು ಕುವರನ ನೋಡೆಂ- । ದೊರೆಯಲು ಸಖಿಮನದಂದು ॥ ೧೪೦ ॥

ಬೆಳ್ಳಿಲೆ ಗಳಿಗೆಯನೋರ್ವ ಕೆಳದಿ ನೀಡೆ । ಚೆಳ್ಳುಗುರ್ಗೊನೆಯಿಂದಾನುತ್ತ ॥
ತಳ್ಳೋದರಿ ಕುವರನ ಕೊನೆಗಣ್ಣಿಂದ । ಚೆಲ್ಲಗಾರಿಕೆಯಿಂ ನೋಡಿದಳು ॥ ೧೪೧ ॥

ಕಡೆಗಣ್ಣಿಂದ ಜ್ಞಾನೇಂದುವ ನೋಡಲು । ಒಡನೆ ಸಾತ್ವಿಕ ಭಾವಪುಟ್ಟೆ ॥
ಮುಡದಿ ತನ್ನೊಳಗಿಂತೆಂದಳು ಕುವರನು । ಕಡು ಚೆನ್ನಿಗ ತಾನಹನು ॥ ೧೪೨ ॥

ನನ್ನ ರೂಪಿಗೆ ತಕ್ಕ ವರನಹುದಾದೊಡೆ । ನನ್ನ ವೀಣೆಯಲಿ ಸೋಲಿಸುವ ॥
ಸನ್ನುತ ಪ್ರೌಢಿತಾನುಂಟೊ ಇಲ್ಲವೊ ಎನೆ । ಚೆನ್ನೆ ಮುಂದಕೆ ತೆರಳಿದಳು ॥ ೧೪೩ ॥

ಕರ ರಂಜಿಪ ವೀಣೆಯ ಮಂಟಪವ್ರೊಕ್ಕು । ಬೆರಕೆ ವರಲ ಗದ್ದುಗೆಯೊಳು ॥
ಸರಸಿಜಲೋಚನೆ ಸಾಮಜ ಸಮಯಾನೆ । ಗುರುಕುಚೆ ಕುಳಿತಳುತ್ಸಹದಿ ॥ ೧೪೪ ॥

ಮೆರೆವ ದುರಂಗಿ ಪಟ್ಟೆಯ ಗದ್ದುಗೆಯೊಳು । ರಸಿಕೆ ಕುಳಿತ ಭಾವವಿಹುದು ॥
ಹರಿಯುರದೊಳು ರಾರಾಜಿಸಿ ತೋರುವ । ಸಿರಿದೇವಿಯೊ ಎಂಬಂತೆ ॥ ೧೪೫ ॥

ತರುಣಿವೆಣ್ಣುಗಳ ನಡುವೆಯೋಲಗಗೊಟ್ಟು । ತರಳಾಂಬಕಿಯೊಪ್ಪಿದಳು ॥
ಸುರಸತಿಯರು ಬಳಸಿರೆ ನಡುವಿರುತಿರ್ಪ । ವರ ಶಚಿಮಹಾದೇವಿಯಂತೆ ॥ ೧೪೬ ॥

ಕಡೆಗಣ್ಣ ಕೊನೆಯಿಂದ ಜ್ಞಾನೇಂದು ಕುವರನ । ಮಡದಿ ನೋಡುತ ಕುಳಿತಿರಲು ॥
ಬೆಡಗು ಬಿನ್ನಾಣದೊಳತ್ತ ಭೂಭುಜರ । ನಡುವೆಸೆದನು ರಾಜಕುವರ ॥ ೧೪೭ ॥

ಅರಿನೃಪತರಧಿಯ ಕುಡಿವ ಬಡಬ ವಹ್ನಿ । ಪರಬಲಹರಿಣ ಶಾರ್ದೂಲ ॥
ತರುಣಿಯರುಗಳಿಗೆ ಪೂಗೋಲ ಜ್ಞಾನೇಂದು । ದೊರೆಯೊಪ್ಪಿದನು ಸುಶೀಲ ॥ ೧೪೮ ॥

**॥ ಅಂತು ಸಂಧಿ ೧೮ಕ್ಕಂ ಪದ ೨೫೩೯ಕ್ಕಂ ಮಂಗಲಂ ॥**

## ವೀಣಾಲಾಪ.

ಜಯಸೇನ ಸುತೆಯ ವೀಣೆಯೊಳು ಜ್ಞಾನೇಂದುವು । ಜಯಿಸಿ ವರಿಸಿದುದ ಪೇಳ್ವೆ ॥ ಪ ॥

ಬಿಡುಗಣ್ಣರಸುನುತ ಉಡುಪತಿ ಪೂಜಿತ । ಮೃಡನ ವೈರಿಯ ಕುಡುವಿಲ್ಲ ॥
ಕಡಿದು ಕೈವಲ್ಯವ ಪಡೆದ **ಶ್ರೀ ಶಾಂತೀಶ** ! । ಕೆಡಿಸೆಮ್ಮ ಪಾಪದ ತೊಡರ ॥ ೧ ॥

ಆ ವೇಳೆಯೊಳು ಕಟ್ಟಿಗೆಗಾರರು ಬಂದು । ತಾವಿಂತೆಂದು ಸಾರಿದರು ॥
ಭೂವರರೊಳು ವೀಣೆಯ ಭಾಜಿಸುವಲ್ಲಿ । ಕೋವಿದರುಂಟೆ ಸಭೆಯೊಳು ॥ ೨ ॥

ಕಡು ಬೇಗದಿಂ ಬಂದು ವೀಣೆಯ ಬಾಜಿಸಿ । ಮಡದಿಯ ಮೆಚ್ಚಿಸಿ ನೀವು ॥
ಕುಡಿತೆಗಂಗಳ ಕೋಮಲೆಯ ವರಿಸಿ ಎಂದು । ನುಡಿಯಲಾ ವಚನವ ಕೇಳಿ ॥ ೩ ॥

ಉರ್ವೀಶ್ವರರೆಲ್ಲ ವೀಣೆಯೊಳಾದರು । ಸರ್ವರ ಮೆಚ್ಚಿಸಿ ನಾವು ॥
ಗರ್ವವ ಮುರಿದೀ ಹೆಣ್ಣ ವರಿಪೆವೆಂದು । ಪರ್ವಿದ ಮೋಹದೊಳೇಳೆ ॥ ೪ ॥

ಕಡು ವೇಗದಿಂದೋರ್ವ ದುರುದುಂಬಿ ಕುವರನು । ಸಡಗರದಿಂ ನಡೆತಂದು ॥
ತುಡುಕಿ ವೀಣೆಯ ತಲೆ ಕೆಳಗಾಗಿ ಪಿಡಿಯಲು । ಮಡದಿಯರೆಲ್ಲಾಗ ನಗಲು ॥ ೫ ॥

ಕರ ನಾಣ್ಚಿ ಶಿರಬಾಗಿ ಹಾಸ್ಯಕ್ಕೆಡೆಯಾಗಿ । ಕಿರುಬೆಮರಿಡುತ ವೀಣೆಯನು ॥
ಇರಿಸಿ ಮೆಲ್ಲನೆಯೊಂದು ವೃಕ್ಷದ ಮರೆಗೊಂಡು । ಕೊರಗಿ ಮೌನದೊಳು ಕುಳಿತನು ॥ ೬ ॥

ಸಡಗರದಿಂ ರಾಜಕುವರನೈತಂದೋರ್ವ । ಮಡಗಿರ್ದ ವೀಣೆಯ ಪಿಡಿದು ॥
ನುಡಿಸಲರಿಯದೆ ಲಜ್ಜಿತನಾಗಿ ಸಾಗಲು । ಪೊಡವಿಯಾಣ್ಮರು ನಕ್ಕರಾಗ ॥ ೭ ॥

ನೆರೆ ಮೋಹಿ ರಾಜಕುಮಾರಕನೋರ್ವನು । ನೆರೆವೆರೆಮೊಗದ ನೀರೆಯನೇ ॥
ಮರುಳಾಗಿ ನೋಡುತ ಬರುತಿರೆ ಮುಂದಿರ್ದ । ವರ ವಿಪಂಚಿಯ ಕಾಣದೆಡಹಿ ॥ ೮ ॥

ತ್ವರಿತದಿಂದರಸಿಯ ಮುಂದೆ ಡಬ್ಬನೆ ಬಿದ್ದು । ಗರವಡೆದೊಲು ಕಳವಳಿಸಿ ॥
ಶಿರ ಮುಚ್ಚಿ ಕಂಬದ ಮರೆಗೊಳೆ ಸಖಿಯರು । ಕರ ಹುಯ್ದು ನಕ್ಕರಾಗಲ್ಲಿ ॥ ೯ ॥

ಭರದಿಂದಲೈತಂದು ರಾಜಕುವರನೋರ್ವ- । ನಿರಿಸಿದ ವಲ್ಲಕಿವಿಡಿದು ॥
ಉರದೊಳಗೌಂಚಿ ಕಿನ್ನರಿಯೆಂದು ನುಡಿಸಲು । ಜರೆದು ನಕ್ಕರು ಸಭೆಯೆಲ್ಲ ॥ ೧೦ ॥

ಮದಮುಖನೈತಂದು ರಾಜಕುವರನೋರ್ವ । ಪದಪಿಂದ ಬೆಬ್ಬುಳಿಗೊಂಡು ॥
ಸುದತಿಯ ನೇರದೃಷ್ಟಿಗಳಿಂದ ನೋಡುತ । ಇದಿರೊಳಗಿರ್ದ ವಲ್ಲಕಿಯ ॥ ೧೧ ॥

ಕರಗಳ ನೀಡಿ ಜಾತ್ಯಂಧಕನಂದದಿ । ನೆರೆ ಹೆಡ್ಡ ತಡವರಿಸುವುದ ॥
ಅರಸಿ ಮುಂತಾದರೆಲ್ಲರು ಭೋಯೆಂದಾಲಿ । ಪರಿಹಾಸಕವ ಮಾಡಿದರು ॥ ೧೨ ॥

ಕಡು ಹೆಡ್ಡ ರಾಜಕುವರನೋರ್ವನೈತಂದು । ಮಡದಿರ ಮುಂದೆ ತಾ ನಾಣ್ಚಿ ॥
ಗಡಗುಟ್ಟಿ ನಡುಗುತ ಮೈಯೆಲ್ಲ ಬೆಮರುತ । ಬಿಡದೆ ತಲೆಯ ಕುತ್ತಿ ನೆಲಕೆ ॥ ೧೩ ॥

ಪಿಡಿದು ವೀಣೆಯ ತಿದ್ದುವೆನೆಂದು ತಂತಿಯ । ಕಡಿದು ಮೆಟ್ಟುಗಳೆಲ್ಲ ಕಿತ್ತು ॥
ಬಿಡಲದ ಕಂಡು ನೃಪರು ಖವಖವಿಸುತ । ಒಡನೆ ನಕ್ಕರು ಕೊರಳ್ತಬ್ಬಿ ॥ ೧೪ ॥

ಇಂತಪ್ಪ ಹಾಸ್ಯರಸವು ಸಭೆಯೊಳು ಪುಟ್ಟಿ । ಕಂತು ಸದೃಶ ತಾ ಕಂಡು ॥
ತಾಂತಳುವದೆ ಮುಗುಳ್ನಗೆಯಿಟ್ಟು ಜ್ಞಾನೇಂದು । ದಂತಿವೈರ್ಯಾಸನದಿಂದ ॥ ೧೫ ॥

ಮುರುಕದಿಂದೆದ್ದು ಮುತ್ತಿನ ಹಾವುಗೆ ಮೆಟ್ಟಿ । ದೊರೆಮಗನಧಿಕಲೀಲೆಯೊಳು ॥
ಮರಿಯಾನೆಯಂದದಿಂ ದುಂಡುದೋಳನು ಬೀಸಿ । ಚರಣವ ನೀಡಿ ಗಾಡಿಯೊಳು ॥ ೧೬ ॥

ನಡೆದು ಬರುವ ರಾಜಕುವರನ ಸೊಬಗು ತಾ । ಮಡದಿ ರನ್ನಳಿಗೆ ಕಾಣಿಸಿತು ॥
ಕುಡಿಮಿಂಚನು ಮೆಟ್ಟಿ ಬರುವ ಸೂರಿಯನೊಂದು । ಗಡಣವೊ ತಾನೆಂಬಂತೆ ॥ ೧೭ ॥

ಮುರುಕದಿಂ ದೊರೆಮಗ ನಡೆದು ಬರುವುದನಾ । ತರುಣಿಯಾಳಿಯರೆಲ್ಲ ಕಂಡು ॥
ಎರಕದಿಂ ತಂತಮ್ಮೊಳೋರ್ವೋರ್ವರುಗಳು । ಬೆರಳೆತ್ತಿ ನುಡಿದರಿಂತೆಂದು ॥ ೧೮ ॥

ಚಿಕ್ಕಪ್ರಾಯದ ಚೆಂದಳಿರ್ದುಟಿಯಳೆ ! ನೋಡು । ಶರ್ಕ್ಕರೆವಿಲ್ಲನ ಜರೆವ ॥
ಚೊಕ್ಕರೂಪಿನ ವಿಧುಮುಖದ ಲಲಾಟದ । ಚಿಕ್ಕ ಹರೆಯನುಣ್ಗೊರಲ ॥ ೧೯ ॥

ಕಡು ರಂಗುವಡೆದ ದಾಡಿಮ ಸಮದಂತದ । ಕುಡಿತೆಗಂಗಳ ಮುದ್ದು ಮೊಗದ ॥
ಕಡೆಯಾಣಿ ಬೊಂಬೆಯಂದದ ಕಾಂತಿ ಕಾಯದ । ಕಡು ಚೆನ್ನಿಗ ಬರುತಹನೆ ॥ ೨೦ ॥

ಗುರುಕುಚೆ ನಮ್ಮಕ್ಕಾಜಿಯ ಪ್ರೌಢಿಗೆ । ವರ ರೂಪಿಗೆ ಯೌವನಕೆ ॥
ಗರುವಿಗೆ ಗಾಂಭೀರ್ಯ ಗಾಡಿವೋಡಿಯ ನೋಡಿ । ವರನಹುದೀ ಕುಮಾರಕನು ॥ ೨೧ ॥

ಘನವಾದ ವೀಣೆಯ ನುಡಿಸಿ ನಮ್ಮಕ್ಕನ । ಮನವನು ಸೂರೆಗೊಂಬಲ್ಲಿ ॥
ಅನುಪಮ ಕಲೆವಂತನೋ ಏನೋ ಕಾಣೆವು । ಎನುತಿರಲಾಳಿಯರಾಗ ॥ ೨೨ ॥

ತನುಕಾಂತಿ ಇನನ ಕಿರಣವ ಮರೆಸುತಿರೆ । ತನುಗಂಧ ಸಭೆಯ ತುಂಬಿರಲು ॥
ಕೊನಬುಗಾರನು ಮೆತ್ತ ಮೆತ್ತನೆ ನಡೆತಂದು । ಮಿನುಗುವ ವೀಣಾಮಂಟಪವ ॥ ೨೩ ॥

ತರಳೆಯ ಕಣ್ಮನಂಗಳ ಸೂರೆಯಾಡುತ । ದೊರೆವೊಕ್ಕು ಗದ್ದುಗೆಯೊಳಗೆ ॥
ದರಹಸಿತಾನನದಿಂದ ಜಿನೇಂದ್ರನ । ಸ್ಮರಿಸುತ ಕುಳಿತ ಠೀವಿಯೊಳು ॥ ೨೪ ॥

ಆ ವೇಳೆಯೊಳು ವೀಣಾಚಾರ್ಯನೈತಂದು । ಕೋವಿದನಿದಿರೊಳು ಕುಳಿರೆ ॥
ಭಾವಕಿಯರು ಹತ್ತೆಂಟು ವೀಣೆಯ ತಂದು । ದೇವನ ಮುಂದೆ ಮಡಗಲು ॥ ೨೫ ॥

ದೊರೆಗಳ ದೇವ ವೀಣೆಗಳೆಲ್ಲವ ನೋಡಿ । ಒರೆದನಿಂತೆಂದು ದೋಷಗಳ ॥
ಭರದಿ ತಂತ್ರಿಗಳೊಳಲೋಮ ದರ್ಶನವ । ಮಿರುಗುವ ತುಂಬಿ ಫಲದೊಳು ॥ ೨೬ ॥

ಒಡನೆ ತೋರಿದ ಶಲ್ಯ ದೋಷದ ವೀಣೆಯ । ಕಡು ಚೆಲುವಾದ ದಂಡದೊಳು ॥
ಬಿಡದೆ ಕುಪಾಷಾಣಗಳೆಂಬ ದೋಷವ । ಪೊಡವಿಪ ತೋರಿ ಕಳೆದನು ॥ ೨೭ ॥

ಇವು ಮೊದಲಾದ ವೀಣೆಗೆ ಬೇರೊಂದೊಂದು । ಕುವರ ದೋಷವನಿಟ್ಟು ಕಳೆಯೆ ॥
ಕುವರಿ ಮತ್ತೆರಡು ವೀಣೆಗಳನು ತರಿಸಿ ತಾ । ಕುವರನ ಮುಂದೆ ಮಡಗಿಸೆ ॥ ೨೮ ॥

ಅದರೊಳಗೊಂದು ವೀಣೆಗೆ ದೋಷವನಿಟ್ಟು । ಚದುರರಸ ಮತ್ತೊಂದು ॥
ಮಧುರ ಮಂದ್ರಧ್ವನಿಯುಳ್ಳ ವೀಣೆಯನಾ- । ಗದಟ ತನ್ನಯದೊಂದು ಕರವ ॥ ೨೯ ॥

ಮಡಗಲು ಕುವರಿಗೆ ವೀಣೆಯ ಕಲಿಸಿದ । ಕಡು ಜಾಣ ಜಗನ್ಮೋಹಿ ಎಂಬ ॥
ಬೆಡಗುಗಾರನು ಗಾಂಧರ್ವಾಚಾರ್ಯನು । ಸಡಗರದಿಂದಿಂತು ನುಡಿದ ॥ ೩೦ ॥

ಪೊಸಮಿಸುನಿಯ ಎಸೆವೆಸಳೊಳು ಒಸರುವ । ರಸದಂತೆ ಪೊಳೆವ ಮೈಯುವನೆ ! ॥
ರಸಿಕ ! ನಿನ್ನಯ ತೊಡೆಯೊಳಗಿರ್ಪ ವೀಣೆಯ । ಪೆಸರು ಕುಲವ ಪೇಳೆನಲು ॥ ೩೧ ॥

ರನ್ನಗನ್ನಡಿಯೇ ಮಾತಾಡುತಿರ್ದುದೋ ಎನೆ । ಚುನ್ನವಾಡುತಲಿರೆ ನಗೆಯು ॥
ಚೆನ್ನಿಗರೆರೆಯ ಬಾಯ್ದೆರೆದಿಂತು ನುಡಿದನು । ಚೆನ್ನಾಗಿ ಸಭೆ ಕೇಳುವಂತೆ ॥ ೩೨ ॥

ಭಳಿರೆ ಜಗನ್ಮೋಹಿಯೆಂಬ ಪೆಸರು ನಿನ- । ಗಳವಟ್ಟುದು ಜಾಣಸಹುದು ॥
ತಳುವಿಲ್ಲದೆ ಕೇಳು ತುಳುಕುವೆನಿದರೊಂದು । ಕುಲವನು ಪೆಸರುಗಳೊಲಿದು ॥ ೩೩ ॥

ಸುರಗಣ ನಡೆತಂದು ಶ್ರೀ ಶಾಂತಿ ಜಿನಪನ । ಮೆರೆವ ಸಮವಸರಣದೊಳು ॥
ಅರುಹನ ಸಂಕೀರ್ತಿಸಿ ಭೂಚರರಿಗೆ । ಇರದಿತ್ತ ಕಾರಣವಿದಕೆ ॥ ೩೪ ॥

ಸುರಕುಲವಾಯಿತು ಸರಸ್ವತಿ ತನ್ನಯ । ಕರದೊಳು ಪಿಡಿದ ಕಚ್ಛಪಿಯ ॥
ಸ್ವರವನು ತನ್ನ ಮಂದ್ರಧ್ವನಿಯಿಂದಲು । ಜರೆದು ರಾಜಿಸುವುದರಿಂದ ॥ ೩೫ ॥

ವರಘೋಷವತಿಯೆಂಬ ಶುಭನಾಮಕರಣವು । ದೊರಕಿತಿದಕೆಂದು ಪೇಳೆ ॥
ನೆರೆ ಜಾಣರರಸ ತನ್ನಯ ತೆರಪಾದೊಂ- । ದುರದೊಳು ಮಿರಿಮಿರಿ ಮಿರುವ ॥ ೩೬ ॥

ತೋರಮುತ್ತಿನ ಸರವನು ಜಗನ್ಮೋಹಿಗೆ । ಸಾರಹೃದಯನೊಲಿದಿತ್ತು ॥
ಕೋರಿವೆಣ್ಣನು ತೊಡೆಯೊಳು ತೆಗೆದಿಡುವಂತೆ । ಭಾರಿಯ ವೀಣೆಯ ತನ್ನ ॥ ೩೭ ॥

ದುಂಡುದೊಡೆಯೊಳಿಟ್ಟು ಶೃತಿಗೂಡಿ ಮನ್ಮಥ । ಖಂಡಶರ್ಕರವಿಲ್ಲಿಗಾಗ ॥
ಬಂಡುಣಿವೆದೆಯ ಸೇರಿಸಿ ಜೇವಡೆದಂತೆ । ಮಂಡಳೇಶ್ವರ ಸ್ವರದೋರೆ ॥ ೩೮ ॥

ಎಡಗೈಯ ನಡುವಿರ್ದ ಕುಡಿವೆರಳನು ಮೂರ । ಮಡಗೆ ಮೆಟ್ಟಿನ ಮೇಗಡೆಯೊಳು ॥
ಒಡನೆ ಕೀಳಿನ ತಂತಿಗಳೊಳು ಬಲಗೈಯ । ಕುಡಿತೆವೆರಳು ನಾಲ್ಕರೊಳು ॥ ೩೯ ॥

ಮಿಡಿವುತ ಕರಡಿಗೆ ಬಾಯ್ದೆರೆದಃ ಎಂದು । ಬೆಡಗುಗಾರನಾಳಾಪಿಸಲು ॥
ಒಡನೆ ಬೆಳಗ ಬೀರೆ ಕೆಂಬಲ್ಲ ಕಾಂತಿಯು । ಬಿಡದೆ ಸುಯ್ಲಿಗೆ ತುಂಬಿ ಎರಗಿ ॥ ೪೦ ॥

ಮೆಲ್ಲಮೆಲ್ಲನೆ ಎಡಗೈ ಮೆಟ್ಟಲು ಮೆಟ್ಟಿ- । ನಲ್ಲಿ ಇಡುತಲಿಳಿತರಲು ॥
ಬೆಳ್ಳುಗುರ್ಬರುಡೆಯೊಳ್ಪೊಳೆದವು ಎಳೆಮಿಂಚು । ಚೆಲ್ಲಾಡುವಂತಂಬರದೊಳು ॥ ೪೧ ॥

ಬೆರಳುಗಳನು ಮೇಲಕೆ ಮೆಲ್ಲ ಮೆಲ್ಲನೆ । ಸರಿಗಮಪದನಿಸೆಂಬೇಳು ॥
ಸ್ವರದೋರುತ ಜಾರಿಸಲದು ನುಡಿದುದು । ಮರಿದುಂಬಿ ಝೇಂಕರಿಪಂತೆ ॥ ೪೨ ॥

ನುಡಿಯಿಸುತಿರ್ದ ಬಲದಕೈ ಬಿಟ್ಟೊಮ್ಮೆ । ಎಡಗೈಯಿಂದ ತಂತಿಗಳ ॥
ಕಡುಜಾಣ ನುಡಿಯಿಪ ನುಡಿವೆಣ್ಣನು ತ- । ನ್ನೊಡನೆ ಮಾತಾಡಿಸುವಂತೆ ॥ ೪೩ ॥

ವೀಣೆಯ ಸ್ವರವೆತ್ತಿ ರಕ್ತಕಂಠವೊಳಾ । ಜಾಣನಾಳಾಪಿಸುವಾಗ ॥
ವೀಣೆಯನೊಳಪೊಕ್ಕು ದನಿದೋರುವಂದದಿ । ಕಾಣಿಸಿತರಸಿನ ರಾಗ ॥ ೪೪ ॥

ಮಂಡೆಯನಲುಗುತ ವೀಣೆಯ ನುಡಿಪಾಗ । ಕಂಡಿತು ರೂಪು ವೀಣೆಯೊಳು ॥
ಮಂಡಲೀಕನೊಳು ಕಲಿವೆನೆಂದು ಬಂದಿರ್ದ । ಗಂಡುರೂವಡೆದ ಶಾರದೆಯೋ ॥ ೪೫ ॥

ನೀತಿಕೋವಿದ ಸವಿಸವಿಯಾಗಿ ವೀಣೆಯೊ- । ಳ್ಗೀತದಿಂ ಕಡುಬೆಡಗಿನೊಳು ॥
ವೀತರಾಗನ ಪಾಡಲು ಸಭೆಯೆಲ್ಲವು । ಪೂತು ಮಝ್ಝರಿ ! ಭಾಪೆನಲು ॥ ೪೬ ॥

ಕಟ್ಟಾಯತದಿಂದ ಕಡುಗಾದಿಕಾರನಾ- । ಗಷ್ಟಪದಿಯೊಳೈವರನು ॥
ಮುಟ್ಟಿ ಮನಸು ಪಾಡೆ ಕುವರಿಯೆರ್ದೆಗೆ ಜುಮ್ಮು- । ದಟ್ಟಿಸಿದನು ಏನೆಂಬೆ ॥ ೪೭ ॥

ಅಂದಗಾರನು ತಕ್ಕಿಡ ತೋ ತೋಧಿಗ- । ವೆಂದು ಪ್ರಬಂಧದೊಳಾಗ ॥
ಕಂದರ್ಪವೈರಿಯ ಪಾಡಲು ಗಾಂಧರ್ವ- । ವೃಂದವು ತಲೆಯಲುಗಿದುದು ॥ ೪೮ ॥

ತಕ್ಕಡಗಿಪದಿಗ ತೋದಿಗದಿಗವೆಂದು । ಎಕ್ಕತಾಳದಿ ರಾಯಕುವರ ॥
ಸಕ್ಕರೆ ಜೇನ ಸೋನೆಯು ದೊರೆಗಳ ಕ- । ರ್ಣಕ್ಕೆ ಸುರಿದನೇನೆಂಬೆ ॥ ೪೯ ॥

ತಾಳದ ಕಟ್ಟಳೆಯರಿದು ಶ್ರೀ ಕೇದಾರ- । ಗೌಳ ಭೈರವಿಯೊಳೊಮ್ಮೊಮ್ಮೆ ॥
ಗೌಳದೇಶಿಯ ಶಂಕರಾಭರಣವನೆತ್ತಿ- । ಯಾಳಾಪಿಸಿದನೆಂದು ಚದುರ ॥ ೫೦ ॥

ಮಾಳವ ಪಂಚಮವೆಂಬ ಸುಸ್ವರದೊಳ- । ಗಾಳಾಪಿಸಲು ಜ್ಞಾನೇಂದು ॥
ಬೆಳುವೆಗೊಂಡಹಿಮೃಗ ಪಕ್ಷಿಗಣಗಳ । ಜಾಲವೆಲ್ಲವು ಸ್ವಯಂವರಕೆ ॥ ೫೧ ॥

ಅತಿವೇಗದಿಂ ಬಂದು ರಾಜಕುಮಾರನ । ನುತವೆತ್ತು ಬಳಸಿ ನಿಂದಾಗ ॥
ಶ್ರುತಿಯಿತ್ತು ತಮ್ಮ ಮೇಲುಗಳನು ತೊರೆದವು । ಮತಿಯಿತ್ತು ಲಾಲಿಸುತಿಹವು ॥ ೫೨ ॥

ಸುರಸತಿಯರ ಸಂಘವೈತಂದು ದೃಶ್ಯವ- । ನೆರಕದಿಂ ತಾಳಿ ಗಾನವನು ॥
ಹರುಷದಿಂಚರಗೇಳಿ ಮನಸೋತಿತೆಂದರು । ಸುರನಾದೊಡಾವೆತ್ತಿಕೊಂಡು ॥ ೫೩ ॥

ಸುರಲೋಕಕೆ ಕೊಂಡೊಯ್ದು ವಿಮಾನದಿ । ಎರೆಯರು ಕಾಣದಂದದೊಳು ॥
ವರಚ್ಛಾಯಾಕನ್ನಿಕೆಯಂತಾವು ಬೈಚಿಟ್ಟು । ನೆರೆಯದೆ ಜಿಡೆವೆನುತಿಹರು ॥ ೫೪ ॥

ಮೆರೆವ ಜ್ಯೋತಿಷ್ಕನಾರಿಯರಾಗೈತಂದು । ಗರುವನ ವೀಣೆಯಿಂಚರವ ॥
ಎರಕದಿಂ ಲಾಲಿಸಿಯಿಂತು ನುಡಿದರೆನೆ । ಅರಸಿನ ತೋಳ ತೆಕ್ಕೆಯೊಳು ॥ ೫೫ ॥

ಅನುದಿನವಿರುವ ಸೌಭಾಗ್ಯವ ಪಡೆಯದೆ । ಬಿನುಗು ಜೋಯಿಸರುಗಳಾಗಿ ॥
ಮನೆಯನು ಡೊಂಬರಂದದಿ ಪೊತ್ತು ಚರಿಪೆವೆಂ- । ದನಿಮಿಷೆಯರುಗಳಾಡಿದರು ॥ ೫೬ ॥

ಕಿನ್ನರ ವನಿತೆಯರೆಲ್ಲರು ನಡೆತಂದು । ಸನ್ನುತ ಗಾನಕೆ ಸೋಲ್ತು ॥
ಚೆನ್ನಿಗನಂದದೊಳಿಟ್ಟ ದಿಟ್ಟಿಗಳ ಸಂ- । ಪನ್ನೆಯರ್ತೆಗೆಯದೆ ನೋಡಿ ॥ ೫೭ ॥

ಏನಾದೊಡಾಗಲಿ ನಮ್ಮಯ ಭವನಕ್ಕೆ । ಈ ನೃಪನನು ಕೊಂಡು ಪೋಗಿ ॥
ಸಾನುರಾಗದಿ ನಾವು ಕೂಡುವೆವೆಂದಾಗ । ವಾನವ್ಯಂತರಿಯರಾಡಿದರು ॥ ೫೮ ॥

ಉರಗಲೋಕದ ಕಾಮಿನಿಯರು ತಾವೈದಿ । ಮರೆಯಿಸಿಕೊಂಡಂಗವನು ॥
ದೊರೆರನ್ನನ ನಸುಗಾನರವವ ಕೇಳಿ । ಶಿರದೂಗಿ ನುಡಿದರಿಂತೆಂದು ॥ ೫೯ ॥

ಭವನಲೋಕದೊಳಗೆ ಇಂತಪ್ಪ ರೂಪಿನ । ಕುವರನ ಕಂಡುದಿಲ್ಲಾವು ॥
ಸವಿವಿಲ್ಲನಲ್ಲದೆ ಬೇರೊಬ್ಬನಲ್ಲವೆಂ- । ದವರು ಕೊಂಡಾಡಿ ಮನದೊಳು ॥ ೬೦ ॥

ಬರಿದೆ ಪುಟ್ಟಿದೆವು ಭವನಜೆಯರಾವಾಗಿ । ನರಜನ್ಮವ ನಾವು ಪಡೆದು ॥
ವರಿಸಬೇಡವೆ ಇಂತಪ್ಪ ನಲ್ಲನನೆಂ- । ದೊರೆದರು ನಾಗನಾರಿಯರು ॥ ೬೧ ॥

ನೆರೆದ ಸಭೆಯ ಜನ ಭಳಿರೆ ಭಾಪುರೆ ! ಎಂದು । ದೊರೆಕುಮಾರನ ಕೊಂಡಾಡೆ ॥
ಸುರರಾಗಸದೊಳು ಪೂಮಳೆಗರೆದರು । ಸುರಭೇರಿ ಧಾಂಧಳರೆಂದು ॥ ೬೨ ॥

ದೊರೆಕುವರನು ವೀಣೆಯ ಭಾಜಿಸಲಾ । ಸ್ವರ ಕುವರಿಯ ಚಿತ್ತವೊಕ್ಕು ॥
ನೆರೆ ಸೂರೆಯಾಡಲದರ ಸವಿ ತಲೆಗೇರಿ । ತರುಣಿ ಮೈಮರೆದಳೊಂದಿನಿತು ॥ ೬೩ ॥

ಕಡು ಬೇಗದೆಚ್ಚತ್ತು ಶಿರವ ತಾನೊಲೆದಾಗ । ಪೊಡವಿಲಿಂತಪ್ಪ ಜಾಣ್ಮೆಯನು ॥
ಕಡು ನಲ್ಮೆಯಿಂದ ಕಲಿತ ಕುಮಾರರ । ಬೆಡಗ ನಾ ಕಂಡುದಿಲ್ಲಕಟ ! ॥ ೬೪ ॥

ತಾನ-ಮಾನಗಳನು ತಂದು ತಾನಲ್ಲಲ್ಲಿ । ಸಾನುರಾಗದ ಬೆರಳ್ಕೊರಳು ॥
ಏನ ಪೇಳುವೆನು ಕುಮಾರನು ಜೇನ । ಸೋನೆಯ ಕರೆದನು ದಿಟದಿ ॥ ೬೫ ॥

'ಆ' ಎಂದು ತಂತಿಯು ಸ್ವರಕೆ ತಾ ಸಮನಾಗಿ । ಬಾಯ ಬಿಡುವ ಗಾಡಿ ನೋಡಿ ॥
ವೈಯಾರದಿಂ ತಂತಿಯೊಳು ಕೈಯಾಡುವ । ರಾಯನ ಬೆಡಗನೇನೆಂಬೆ ॥ ೬೬ ॥

ಎಲ್ಲಿ ಕಲಿತನೋ ಇಂತಪ್ಪ ಮುರುಕವನು । ಬಲ್ಲರ ಬಲ್ಲಹನಿವನು ॥
ತಲ್ಲಣಿಸುತಲಿದೆ ನನ್ನೆದೆಯಾವಾಗ । ಚೆಲ್ಲವಾಡುವರೀತನೊಡನೆ ॥ ೬೭ ॥

ಏಸು ಭವದೊಳು ನಾನಾ ಬಗೆ ಕುಸುಮವ । ಸೂಸುವ ಭಕ್ತಿಯಿಂ ಜಿನನ ॥
ಕೇಸಡಿಗಳಿಗರ್ಚಿಸಿದೆನೊ ಇಂತಪ್ಪ ವಿ- । ಲಾಸಗಾರನ ಒಲಿಸಿದೆನು ॥ ೬೮ ॥

ಈತನ ಪಡೆದ ಸನ್ಮಾತೆಯದಾವಳೊ । ಖ್ಯಾತಳವಳೆ ಲೋಕದೊಳಗೆ ॥
ಮಾತೇನು ನನಗತ್ತೆಯಮ್ಮಾಜಿಯಾದರು । ಪೂತ ಮಜ್ಜುರಿಯಂಗಸಿರಿಯೆ ॥ ೬೯ ॥

ಮಡದಿರನ್ನನು ಇಂತೆಂದು ಶಿರವ ತೂಗಿ । ಕಡುಮೆಚ್ಚಿಯೊಲಿದಾಡುತಿರಲು ॥
ಸಡಗರದಿಂದೋರ್ವ ಕೆಳದಿ ಪೂಸರವನು । ಕುಡುತೆಗಂಗಳ ಕೈಗೆ ನೀಡೆ ॥ ೭೦ ॥

ತರುಣಿರನ್ನಳು ಹಸ್ತದೊಳಗಾಂತು ರಾಜಿಸು- । ವರಳ ಸರವುನೊಪ್ಪಿದುದು ॥
ಮೆರೆವ ಪೂದೊಂಗಲನಾಂತು ವಿಭ್ರಾಜಿಪ । ತರುಣ ಕನಕಲತೆಯಂತೆ ॥ ೭೧ ॥

ಪರಿಮಳಮಯವಾದರಳ ಸರದ ಮೇಲೆ । ಮರಿದುಂಬಿ ಸಾಲಿಡಲಿಹುದು ॥
ಪರಿಕಿಸಿ ಜೇರೊಂದು ನೀಲರತ್ನಂಗಳ । ವರಮಾಲೆಯೊ ಎಂಬಂತೆ ॥ ೭೨ ॥

ಸಿಂಧುದೇವಿಯು ಮಾಲೆಯ ಕರದೊಳಗಾಂತು । ಮಂದಗಮನೆಯಡಿಯಿಡಲು ॥
ಅಂದುಗೆ ಝುಣರೆನೆ ಸ್ಮರದೀವದ ಹಕ್ಕಿ- । ಯಂದದುಲುಹೋ ಎನಲಿಹುದು ॥ ೭೩ ॥

ಕಣ್ಣನಿತ್ತತ್ತ ಥಾಳಿಸಲಾ ಕುವರಿಯು । ಹಣ್ಣಾಗಿ ನೃಪರುಗಳೆದೆಯು ॥
ತಣ್ಣೆಲರಿಗೆ ಮೈಯೊಡ್ಡಿ ಉಸ್ಸೆಂದಾಗ । ಬಣ್ಣಗುಂದಿಯು ಬಳಲುವರು ॥ ೭೪ ॥

ಕಡೆಗಣ್ಣಕಾಂತಿ ನೃಪರ ಮೇಲೆ ಪಸರಿಸೆ । ಕಡು ದೊಡ್ಡ ಬೆಳ್ಬಾರದೊಳಗೆ ॥
ಕಡೆಯಿಲ್ಲದ ಮೃಗಸಂತತಿಗಳು ಸಿಕ್ಕಿ । ಮಿಡಿಮಿಡಿ ಮಿಡುಕುನಂತಿಹವು ॥ ೭೫ ॥

ಉರುತರ ತಪನನಾಂತದರಿಂದೀ ಭವದೊಳು । ಮರುಭವದೊಳು ನಸ್ನಂತ ॥
ತರುಣಿಯುರೊಲಿಸಿ ನೀವೆಂದು ಸದಸ್ಸಿಗೆ । ತರಳೆ ಪೇಳ್ವಂತೈತಂದು ॥ ೭೬ ॥

ಸ್ಮರನಿರ್ದ್ದ ತಾಣಕೆ ರತಿದೇವಿ ಬರ್ಪಂತೆ । ಗುರುಕುಚೆ ಕುವರನಿರ್ದೆಡೆಗೆ ॥
ಹರುಷದಿಂದಲಿ ಬಂದು ಜ್ಞಾನೇಂದು ಕುವರನ । ವರ ಸನ್ಮುಖದೊಳು ನಿಂದು ॥ ೭೭ ॥

ಏರುದೃಷ್ಟಿಗಳಿಂದ ಕುವರನ ನೋಡಲು । ತೋರಿದವಾಸ್ಯದೊಳ್ನಯನ ॥
ವಾರಿಜದಳದೊಳು ನಟಿಪ ಜವಳಿ ತುಂಬಿ । ಸೇರುವೆಯೋ ಎಂಬಂತೆ ॥ ೭೮ ॥

ದುಂಡುದೋಳುಗಳೆತ್ತಿ ಮಾಲೆಯ ಕುವರಿ ಭೂ- । ಮಂಡಲೇಶನ ಕಂಠಕಿಡಲು ॥
ದುಂಡಾದ ಕೈಯಿಂದ ಸ್ಮರ ಮೋಹಪಾಶದಿ । ಕಂಡು ಬೀರಿಸಿದಂತಾಯ್ತು ॥ ೭೯ ॥

ಸಿರಿದೇವಿ ಪದ್ಮನಾಭನ ನುಣ್ಗೊರಲಿಗೆ । ವರ ಕೌಸ್ತುಭವಿಡುವಂತೆ ॥
ಸರಸಿಜವದನೆ ಕೌರವನ ಕೊರಳಿಗಾಗ । ಅರಳಮಾಲೆಯನಿಕ್ಕಿದಳು ॥ ೮೦ ॥

ದೊರೆಕುವರನ ಉರದೊಳು ರಾರಾಜಿಪ । ಪರಿಮಳ ಮಾಲೆ ಹೂಡಿದಳು ॥
ಗಿರಿಜೆ ಶಂಭುವಿನ ಕೊರಳೊಳಿಕ್ಕಲೊಪ್ಪುವ । ಸಿರಿಸದ ದಂಡೆಯಂದದೊಳು ॥ ೮೧ ॥

ಮಾಲೆಯ ಸೂಡಿ ನೃಪನ ಬಲಗಡೆಯೊಳು । ಬಾಲಕಿ ನಿಲಲೊಪ್ಪಿದಳು ॥
ಲೀಲೆಯಿಂ ಚಂದ್ರನ ಬಲಗಡೆಯೊಳಗಿರ್ದ । ಲೋಲಾಕ್ಷಿ ರೋಹಿಣಿಯಂತೆ ॥ ೮೨ ॥

ಮೊಳಗಿದವಾ ವೇಳೆಯದೊಳು ಕೋಟಿ ವಾದ್ಯವು । ಇಳೆಯಾಣ್ಮ ಜಯಸೇನ ಬಂದು ॥
ಅಳಿಯನ ಕಂಡು ಸಂತಸದೊಳು ಮುಳುಗಿದ । ಜಳಧಿ ಚಂದಿರನ ಕಂಡಂತೆ ॥ ೮೩ ॥

ಇನನ ಕಂಡಂಬುಜ ನಗುವಂತೆಯಳಿಯಾನ । ಮಿನುಗುವ ತೇಜವ ಕಂಡು ॥
ಮನ ಹಿಗ್ಗಿ ಜಯಸೇನನ ಚಾರುಲಪನವು । ಸನುಮಾನಗೊಂಡುದು ನಗೆಯ ॥ ೮೪ ॥

ಹಾಲಕೆನೆಯ ಕಂಡರಸಂಚೆಯಂದದಿ । ಸಾಲುಮೇಘವನು ತಾ ಕಂಡ ॥
ವ್ಯಾಲಭುಗುವಿನಂತಳಿಯನ ನೃಪ ಕಂಡು । ಓಲಾಡಿದನು ಸಂತಸದೊಳು ॥ ೮೫ ॥

ಸುರನರೋರಗರೊಳಗಿಂತಪ್ಪ ಸೊಬಗಿನ । ಪರಿಕಿಸಲಿಲ್ಲೊಂದು ದಿವಸ ॥
ಸರಸಿಜಭವನೀ ಬಾಲೆಗೆ ಕಡು ಸೋತು । ಧರೆಗಿಳಿದವನಾಗಬೇಕು ॥ ೮೬ ॥

ನನ್ನ ಮಗಳು ಮುನ್ನ ಜಿನರಾಜ ಮಲ್ಲನ । ಚೆನ್ನಡಿಗಳಿಗೇಸು ದಿವಸ ॥
ಹೊನ್ನ ಸಂಪಿಗೆಯರಳಿಂದ ಪೂಜಿಸಿದಳೋ । ಸನ್ನುತ ನೋಂಪಿಗಳಿನಿತು ॥ ೮೭ ॥

ಕಡು ಭಕ್ತಿಯಿಂ ನಡೆಸಿದಳೋ ಕಾಣೆಂತಪ್ಪ । ಬೆಡಗುಗಾರನ ವರಿಸಿದಳು ॥
ಕಡು ಕೊಬ್ಬಿ ಬೆಳೆದ ಕನಕವಲ್ಲರಿಯಿಾ- । ಗಡರ್ದಂತಾಯ್ತು ಚಂದನವ ॥ ೮೮ ॥

ಇಂತಪ್ಪ ಚೆನ್ನಿಗ ನನಗೆ ಅಳಿಯನಾಗೆ । ಪಿಂತಣ ಭವದೊಳಗಾನು ॥
ಎಂತಪ್ಪ ನೋಂಪಿಯ ನೋಂತೆನೊ ಜಿನ ! ನ- । ನ್ನಂತಪ್ಪ ಧನ್ಯರಾರೆಂದು ॥ ೮೯ ॥

ಮನದೊಳು ಹಿಗ್ಗಿ ಹಿಸಿದು ಜಯಸೇನನು । ತನುವಡೆದಂತಮರ್ದಪ್ಪಿ ॥
ವಿನಯ ವಚನದಿಂದಳಿಯನ ಕೊಂಡಾಡಿ । ಮಿನುಗುವ ರತ್ನರಥದೊಳು ॥ ೯೦ ॥

ನಪುಣ್ಯವಂತನು ತನ್ನ ನಂದನೆಯನು । ಮನದಕ್ಕರಿಂದಲೇರಿಸಿದ ॥
ನಿತೆಯರುಗಳಾಗ ರಥವ ಬಳಸಿಕೊಂಡು । ದನಿದೋರಿದರು ಶೋಭನವನು ॥ ೯೧ ॥

ಳುವ ಪೈಕ ಹತ್ತುಸಾಸಿರ ರಥವನು । ಬಳಸಿ ಬರಲು ಊರ ಪೊಕ್ಕು ॥
ಲವಿಂದಲಿರುತಿರಲಿತ್ತ ಭೂಭುಜರೆಲ್ಲ । ನೆರೆದಾಗ ನುಡಿದರಿಂತೆಂದು ॥ ೯೨ ॥

ಹುಳಿತ ವೀಣೆಯ ಯಾಚಕರಂತೆ ಭಾಜಿಸೆ । ಸಲೆ ಮೆಚ್ಚಿ ಕನ್ನಿಕೆಯದಕೆ ॥
ಳೆತ ಹುಲ್ಲಿಗೆ ಸರಿಗಂಡೆಮ್ಮೆಲ್ಲರ । ಒಲವಿಂದ ಮಾಲೆ ಸೂಡಿದಳು ॥ ೯೩ ॥

ಾಡಿ ಬೇಡುವರಂತೆ ಡೊಂಕು ವಿಪಂಚಿಯು । ಕೂಡಿ ನುಡಿಸಲದು ಹೆಚ್ಚೆ ! ॥
ಪ್ರೌಢಿಯಿಂದರಿಭೂಪಾಲರ ಎರ್ದೆಯೊಳು । ಲೌಡಿಸಾಮನು ತೋರಬೇಕು ॥ ೯೪ ॥

ುರದೊಳಗೋರ್ವನೆ ಹರಿಯುನಡರಿಕೊಂ- । ಡರಿರಾಯ ಲಪನದಿ ತಿವಿದು ॥
ಸರನೇಜೆಯ ಹೆಡ ತಲೆಯೊಳು ತೆಗೆದನೊ । ನೆರೆಗಲಿ ಇಂದೀಗ ಹೆಣ್ಣ ॥ ೯೫ ॥

ೆರೆದ ನೃಪರುಗಳೆಲ್ಲರು ಇರ್ದಂದದಿ । ದುರುಳತನದಿ ಕೊಂಡುಪೋದ ॥
ರನ ನೋಡಿರೋ ಎಂದು ಭೂಚರರೆಲ್ಲರು । ವೊರೆದೆದ್ದರು ಒಗ್ಗಿನೊಳು ॥ ೯೬ ॥

ೆಲುವ ಚೆನ್ನಿಗರು ಭೂಚರರೊಳಗಿರ್ದಂತೆ -। ಯುಳಿಮಾನಸ ಜಯಸೇನ ॥
ಕೊಳು ಕೊಡೆಯಿಲ್ಲದಂಬರ ಪಕ್ಕಿಗಳಂತೆ । ಸಲೆ ತಿರುಗುವ ವಿಯಚ್ಚರಗೆ ॥ ೯೭ ॥

ಕೊಡುವುದುಚಿತವೆ ಎಂದೆಲ್ಲ ಭೂವರರಾಗ । ಕಡೆಗಣ್ಣಿಗೆ ಕೆಂಪ ತಂದು ॥
ಮಿಡಿ ಮಿಡಿ ಮಿಡುಕುತ ಕದನಕ್ಕೆ ಮನದಂದು । ಒಡನೈನೂರಕ್ಷೋಹಿಣಿಯು ॥ ೯೮ ॥

ಬಲಗೂಡಿ ರಣಭೇರಿಯ ಹೊಯ್ಸಿ ನೃಪರೆಲ್ಲ । ಲಲನೆಯನವನ ಕೈಯಿಂದ ॥
ಕಳಿದೆಮ್ಮೊಳೋರ್ವಗೆ ಕೊಡಹೇಳೆಂದಾಗ । ಕಳುಹಿದರೋರ್ವ ಚರನನು ॥ ೯೯ ॥

ನಡೆತಂದು ಜಯಸೇನನಿದಿರಲ್ಲಿ ನಿಂದವ । ನುಡಿದನೆಲೆ ರಾಯ ! ನಿನ್ನ ॥
ಒಡಲೊಳು ಬಂದ ನಂದನೆಯನಾ ಖೇಚರ । ತುಡುಗುಣಿ ಕೈಯಿಂದ ಸೆಳೆದು ॥ ೧೦೦ ॥

ನೆರೆದಿರ್ದ ನೃಪರೊಳಗೋರ್ವಗೆ ನೀ ಕೊಡು । ಸರಸ ಸಂಗೀತ ಕೋವಿದರು ॥
ದೊರೆಗಳೊಳವನಿಂದಲಧಿಕ ಲಾವಣ್ಯದ । ನೆರೆಗಲಿಗಳು ಬೇಕಾದಿನಿತು ॥ ೧೦೧ ॥

ಹರಿವಿಕ್ರಮಿಗಳು ಧರೆಯನಾಕಾಶಕೆ । ಭರದಿ ಕಿತ್ತಿಡುವ ತ್ರಾಣಿಗಳು ॥
ಸುರಪತಿಯೊಳು ಹುರುಡಿಪ ಭಾಗ್ಯವಂತರು । ಇರುತಿರ್ದು ಕುಲವನರಿಯದೆ ॥ ೧೦೨ ॥

ಪರದೇಶಿಯಾಗಿ ತಿರುಗುತ ಬಂದವನಿಗೆ । ತರುಣೀಮಣಿಯ ನೀನೀಗ ॥
ಪರಿಕಿಸದಿತ್ತೆ ಬಹಳ ಹಣ ಹೊನ್ನುವ । ತರಿಸಿಕೊಂಡೆಯೊಯಾಗಬೇಕು ॥ ೧೦೩ ॥

ಅಲ್ಲದಿರ್ದೊಡೆ ನೀ ತನುಜೆಯ ಕೊಡುವೆಯು । ಸಲ್ಲದು ಸಕಲಭೂಪರೊಳು ॥
ಲ್ಲದೆ ಕಷ್ಟವ ನೀ ಕಟ್ಟಿಕೊಂಬುದು । ಒಳ್ಳಿತಾಗದು ಮುಂದೆ ನಿನಗೆ ॥ ೧೦೪ ॥

ಅದರಿಂದಲವನನೂರಿಂದ ಬೆಬ್ಬಟ್ಟಿಸಿ । ಮುದದಿಂದಲಿತ್ತು ಕುವರಿಯ ॥
ಪದುಳದಿ ಬಾಳ್ವುದು, ಅಲ್ಲದಿರ್ದೊಡೆಯಿಗ । ಕದನಲಂಪಟರೂರ ಮುತ್ತಿ ॥ ೧೦೫ ॥

ನಿರುತದಿಂ ಸುಟ್ಟು ಧೂಳೀಪಟವನು ಮಾಡಿ । ನೆರೆಗಲಿಗಳನೆಲ್ಲ ಕೊಂದು ॥
ಕರಿ ಹಯ ಬೊಕ್ಕಸ ಭಂಡಾರ ಮುಂತಾದ । ವರವಸ್ತುಗಳ ಸೂರೆಯನು ॥ ೧೦೬ ॥

ಮಾಡಿ ಬೇಗದಿ ಸೆರೆ ತುರುಗಳನು ಕೊಂಡು । ಕೇಡುಮಾಡದೆ ಬಿಡರೆಂದು ॥
ಆಡಿ ಹುಲ್ಲೆತ್ತಲು ಜ್ಞಾನೇಂದು ತಾ ಕೇಳಿ । ಕೂಡೆ ಮನಕೆ ತಂದು ಮುನಿಸ ॥ ೧೦೭ ॥

ಪೆಂಡಿರೊಳಾಡುವ ಪಾಡು ಪಂಥದ ಮಾತ । ಫುಂಡಜನಗಳಾಡಲೇನು ? ॥
ಹಿಂಡುವೆನವರಸುವನು ನಾನು ರಣಭೂ- । ಮಂಡಲದೊಳಗಿದಿರಾಗಿ ॥ ೧೦೮ ॥

ಉರಗಬಳಗವೇನು ಫೂತ್ಕಾರವ ಮಾಡೆ । ಗರುಡನ ಕಾಣುವಾಗಳ್ಕಿ ॥
ಧರೆಗಿಳಿದಾಡುವಂದದಿ ನನ್ನನು ಕಾಣೆ । ಬಿರಿದೋಡುವರು ಕಂಡ ಕಡೆಗೆ ॥ ೧೦೯ ॥

ಕಾಗೆಗಳೇಸು ಕೂಡಿದರೇನು ಒಂದಂಬ । ಬೇಗದಿ ಕಂಡೋಡುವಂತೆ ॥
ಬಾಗುಳಿಗಳು ಏಸು ನೆರೆದಿರ್ದೊಡೆ ಏನು । ಕೂಗಿಸುವೆನು ಕಾಗೆಯಂತೆ ॥ ೧೧೦ ॥

ಅರಿರಾಯರೆಂಬಾರಣ್ಯವ ಕಡಿವಲ್ಲಿ । ಪರಶುವಲ್ಲವೆ ಎನ್ನ ಭುಜವು ॥
ದುರುಳ ದೊರೆಗಳೆಂಬಂಬುಧಿ ಪೀರ್ವಲ್ಲಿ । ಶರಗಳಲ್ಲವೆಯುಗ್ನಿಯೆನ್ನ ॥ ೧೧೧ ॥

ಹೆಣ್ಣು ಬೇಕಾದೊಡೆ ತಮ್ಮ ಮಾವಂದಿರ । ಬಣ್ಣಿಸಿ ಬೇಡಿಕೊಂಬುವುದು ॥
ದೊಣ್ಣೆಯ ಪೆಟ್ಟು ಬೇಕಾದೊಡೆ ರಣದೊಳ- । ಗಣ್ಣಂದಿರು ಬಂದು ನಿಲಲಿ ॥ ೧೧೨ ॥

ನಡೆನಡೆ ಮನುಜ ! ನಿಮ್ಮೊಡೆಯರ ದಂಡನು । ಕಡುಬೇಗದಿಂ ತಾರೆಂದು ॥
ನುಡಿದು ಕಳುಹಿಸಿ ಮಾತುಳನಾಗೂರಿಗೆ । ಒಡನೆ ಕಾಪಿಟ್ಟು ಜ್ಞಾನೇಂದು ॥ ೧೧೩ ॥

ಸಾಸಿರಧಾರೆ ಎಂದೆಂಬ ರಥವನೇರಿ । ಸಾಸಿಗನೂರಿಂದ ಪೊರಟು ॥
ಸೂಸುತ ಕೋಪದಿ ಕಣ್ಣಾಲಿ ಕಿಡಿಯನು । ಈಶನಂದದಿ ಬರುತಿರಲು ॥ ೧೧೪ ॥

ವನಿತಾಮಣಿ ಸಿಂಧುದೇವಿ ತಾನತ್ತಲು । ಜಿನಗೃಹವನು ತಾ ಪೊಕ್ಕು ॥
ಮನದಕ್ಕರಿಂ ಪೂಜೆಯ ಮಾಡಿಸಿ ಮತ್ತೆ । ಜಿನಪತಿ ಸಾಕ್ಷಿಯೊಳಾಗ ॥ ೧೧೫ ॥

ಈ ಉಪಸರ್ಗವು ನನ್ನ ಪ್ರಾಣೇಶಗೆ । ತಾವಿರದೈದುವನ್ನೆವರ ॥
ಸೇವಿಸುವದಿಲ್ಲನ್ನ ಪಾನಂಗಳ । ದೇವನ ಚೆನ್ನಡಿಯಾಣೆ ॥ ೧೧೬ ॥

ಈ ಶರೀರದ ಮೇಲೆ ಮೋಹ ಮಮತ್ವ- । ದಾಶೆ ನನಗೆ ಬೇಡವೆಂದು ॥
ಆ ಶಶಿಮುಖಿ ಪ್ರತಿಜ್ಞೆಯ ಮಾಡಿ ಜಿ- । ನೇಶನ ಇದಿರೊಳು ನಿಂದು ॥ ೧೧೭ ॥

ಜಪಸರವನು ಕೈಯೊಳಗಾಂತು ಕಾಮಿನಿ । ಜಪಿಸುತ ಪಂಚಗುರುಗಳ ॥
ವಪು ತನ್ನದಲ್ಲೆಂದು ಪುತ್ತಳಿಯಂದದಿ । ಚಪಲಲೋಚನೆ ನಿಂದಿರಲು ॥ ೧೧೮ ॥

ಇತ್ತಲಾ ಚರ ಹೋಗಿಯವರಾಡಿದ ಮಾತ । ಬಿತ್ತರಿಸಲು ಕೇಳಿ ನೃಪರು ॥
ಕತ್ತಿಗಳನು ಚಿಮ್ಮಿಸುತಲಾಲುತ ಭೂ- । ಪೋತ್ತಮನಿದಿರಾಗಿ ಬರಲು ॥ ೧೧೯ ॥

ಆದ ಕಂಡು ಜ್ಞಾನೇಂದು ವರಸೈನಿಕರಿಂದ । ಕದನಲಂಪಟ ನೂರುಮಡಿಯ ॥
ಪದುಳದಿ ಚದುರಂಗ ಬಲ ನಿರ್ಮಿಸಿ ನಾನಾ- । ವಿಧದ ಪರಿಗಳ ಪೊಯ್ಸಿದನು ॥ ೧೨೦ ॥

ಕುಲಿಲಿ ಎಂದಾಲುತುಭಯಬಲ ತಾಗಲು । ಬಳಲಿಕೆಯರಿಬಲಕಾಗೆ ॥
ಕಲಿಗಳು ರಥಗಳ ಮುಂದಕೆ ನೂಂಕಲು । ಇಳೆಯಾಣ್ಮ ಜ್ಞಾನೇಂದು ಕಂಡು ॥ ೧೨೧ ॥

ಪ್ರಳಯ ಭೈರವನೆಂಬ ಧನುವಿನ ನಾರಿಯ । ಘಳಿಲನೆ ಹೂಡಿ ಜೇವಡೆದು ॥
ನಲವಿಂದಲಿ ದಿವ್ಯ ಶರ ತೊಟ್ಟೆಸೆಯಲು । ಕಲಿಗಳ ರಥ ಹುಡಿ ಹಾರೆ ॥ ೧೨೨ ॥

ಶರವೊಂದ ತೆಗೆದೆಸೆಯಲು ನೂರು ಗಾವುದ । ಕರಿಹಯ ರಥಗಳ ಕೊಂದು ॥
ಆರುಸಾಸಿರಗಳ ಪ್ರತ್ಯೇಕ ನುಗ್ಗೊತ್ತೆ । ಭರದಿ ಭಸ್ಮವ ಮಾಡಿದುದು ॥ ೧೨೩ ॥

ಬರಿದೆ ಈ ಬಿನುಗುಗಳೇತಕೆ ಕೊಲುವುದು । ನೆರೆ ಭಂಗವನಿವರುಗಳ್ಗೆ ॥
ತುರಿಹದಿಂ ಮಾಡುವೆನೆಂದು ಜ್ಞಾನೇಂದು ತಾ । ಕರುಣಾಳು ಹೃದಯದೊಳ್ನೆನೆದು ॥ ೧೨೪ ॥

ಕರೆದು ವೈತಾಳಿಯ ಬೆಸಸಲದೈತಂದು । ಧರೆಯಿಂದ ಗಗನಕ್ಕೆ ಬೆಳೆದು ॥
ಕರಿಕಾಂಗ ಕೆಂಗಣ್ಣ ಕೋರದಾಡೆಗಳಾಂತು । ತ್ವರಿತದಿಂ ಶತಕೋಟಿ ರೂಪ ॥ ೧೨೫ ॥

ಇರದಾಂತು ಹೆಮ್ಮರಗಳ ತನ್ನ ಹೆಗಲೊಳು । ಧರಿಸಿ ಭೂಪರನಂಜಿಸಲು ॥
ಕರಗಳಿಂ ಮುಚ್ಚಿ ಮೊಗವ ನೋಡಲಮ್ಮದೆ । ಶಿರಮುಚ್ಚೆ ತೊಡೆಗಳೊಳ್ತಮ್ಮ ॥ ೧೨೬ ॥

ಉರಗಬಂಧಿನಿಯೆಂಬ ವಿದ್ಯೆಗೆ ಬೆಸಸಲು । ಉರುಪಾಶಗಳಿಂದ ನೃಪರ ॥
ಉರುಳಿಸಿ ಕಟ್ಟಿ ಕೆಡಹಿ ಹಿಂಗಟ್ಟನು । ಧರೆಯೆಲ್ಲ ಬೆಚ್ಚುವಂದದೊಳು ॥ ೧೨೭ ॥

ಸ್ತಂಭಿನಿಯೆಂಬ ವಿದ್ಯೆಗೆ ಪೇಳಲೈತಂದು । ಕುಂಭಿನಿಪತಿಗಳತ್ತಿತ್ತ ॥
ಇಂಬಿನಿಂ ಮಿಡುಕದಂದದಿ ನಿಲಿಸಿದುದಾಗ । ಸ್ತಂಭಗಳೆಂಬ ಮಾಳ್ಕೆಯೊಳು ॥ ೧೨೮ ॥

ಇಳೆಯಾಣ್ಮರಿದೆಯೊಳು ಮಾರು ಮಾರುದ್ದದ । ಮೊಲೆಗಳು ಜೋತಾಡುವಂತೆ ॥
ಘಳಿಲನೆ ಮಾಡಿ ಮೂಗುಗಳಾನೆಗಳ ಸಿಡಿ- । ಬಲು ಶುಂಡಿಲಗಳಂತೆ ಮಾಡಿ ॥ ೧೨೯ ॥

ಹೆದ್ದಾಡೆ ಗಾತ್ರದ ತುಟಿಗಳೆಲ್ಲಕೆ ಮಾಡಿ । ಮದ್ದಳೆಯಂತೆ ಕೊರಳನು ॥
ಉದ್ದಕೆ ನಿಗುರಿಸಿ ಗೆರಸೆಯಂದದೊಳಾಗ । ತಿದ್ದಿ ಕಿವಿಗಳನೆಲ್ಲರಿಗೆ ॥ ೧೩೦ ॥

ಹಲ್ಲುಗಳನು ಚೋಟುದ್ದಗಳನು ಮಾಡಿ । ನಿಲ್ಲದೆ ಮೊಳದುದ್ದಂಗವನು ॥
ಎಲ್ಲ ಭೂಪರಿಗೆ ಮಾಡಲು ತಮ್ಮಾಕಾರ । ನಿಲ್ಲದೆ ನೋಡಿ ಹೇಸುತ್ತ ॥ ೧೩೧ ॥

ಏನು ಕಾರಣವೆಂದು ಭಯಗೊಂಡು ನೋಡುತ । ಹೀನಮಾನಸರು ನಿಂದಿರಲು ॥
ಮಾನವೇಂದ್ರರು ಕೆಲಬರುಯೆಂದರಿದರು । ಜ್ಞಾನೇಂದು ತಂತ್ರವೆಂದರಿದು ॥ ೧೩೨ ॥

ನಡೆತಂದು ಮಂತ್ರಿ ನಿಯೋಗಿಗಳೆಲ್ಲರು । ಪೊಡವಿಪ ಜ್ಞಾನೇಂದುಗೆರಗಿ ॥
ಒಡನೆ ಕೈಮುಗಿದು ನಿನ್ನಯ ಸಾಮರ್ಥ್ಯಕೆ । ಮೃಡ ಕಾಲನಳವಲ್ಲವೆನಲು ॥ ೧೩೩ ॥

ನರರು ಎಣೆಯೆ ಸ್ವಾಮಿ ! ದುರುಳಗೊಬ್ಬಿಂದಲಿ । ಬೆರತು ಕಲಹವೆಸಗಿದರು ॥
ಪರಿಕಿಸದೆಲೆ ದೇವ ! ಅವರ ದೋಷಂಗಳ । ಕರುಣಾಳುತನದಿಂದಲೀಗ ॥ ೧೩೪ ॥

ಪರಿಹರಿಸುವುದೆಂದು ಮಂತ್ರಿಗಳೆಲ್ಲರು । ಎರಕದಿಂ ಸಾಷ್ಟಾಂಗವೆರಗಿ ॥
ಚರಣವ ಪಿಡಿದಾಗ ಬಹುಬಗೆಗಳೊಳೆ- । ಲ್ಲರಸನ ಪ್ರಾರ್ಥಿಸಿ ಕಂಡು ॥ ೧೩೫ ॥

ಮುಗುಳುನಗೆಗಳಿಂದ ಕೇಳಿಂಜಲು ಬೇ- । ಡಗಲಿತು ನಿಮ್ಮ ಭೂಭುಜರ ॥
ಮೊಗವೆತ್ತಿಯೊಳಿರ್ದ ಬಾಧೆಗಳೆಂದೆನಲಾಗ । ನಗೆಮೊಗದಿಂದೆದ್ದರವರು ॥ ೧೩೬ ॥

ತೆರಳಿರೈ ಎಂದುಡುಗೊರೆಗಳನವರ್ಗಿತ್ತು । ಎರಕದಿಂ ಕಳುಹಿಸಲವರು ॥
ಎರಿಯರ ಬಳಿಗೈದಿ ಜ್ಞಾನಚಂದ್ರಮನೊಳು । ಬರಿದೆ ಎಸಗಿ ಜಗಳವನು ॥ ೧೩೭ ॥

ಪರಿಭವಕೊಳಗಾಗದಿರಿ ಎಂದು ಮಂತ್ರಿಗ- । ಳೊರೆಯೆ ಲಜ್ಜಿತರಾಗಿರಲು ॥
ಪುರದಿಂದ ಜಯಸೇನ ನಡೆದು ಬಂದಾಗ ಭೂ- । ವರರಿಗೆ ವಿನಯವ ನುಡಿದು ॥ ೧೩೮ ॥

ಮನಮರಿಯೊಳಗಾನು ನಿಮ್ಮನು ವಂಚಿಸಿ । ತನುಜೆಯ ಕೊಟ್ಟೆನೆ ಕೇಳಿ ॥
ಮಿಸುಗುವ ವೀಣೆಯ ಬಾಜಿಸಿ ಗೆಲಿದಗೆ । ವನಿತೆ ಮಾಲೆಯನಿಕ್ಕಿದಳು ॥ ೧೩೯ ॥

ಕುಲಹೀನನೆಂದೆಂಬಿರಿ ಆ ಕುವರನು । ಕಲಿಲಾರಿ ಶಾಂತಿ ಜಿನಪನ ॥
ವಿಲಸದ್ವಂಶದ ಜಿನಚಂದ್ರ ಕುವರನು । ಬಲು ಬಂಟರ ತಲೆವಣಿಯು ॥ ೧೪೦ ॥

ಘನಪುಣ್ಯವಂತ ಮಹಾಮಂಡಳೇಶ್ವರ । ಮುನಿದರೆ ಧರೆಯ ಮುಗುಚುವ ॥
ಅನುಪಮ ಮೋಕ್ಷಗಾಮಿಯು ನಿಮ್ಮೆಲ್ಲರ್ಗೆ । ಇನನು ಕಲಾಗುಣವಂತ ॥ ೧೪೧ ॥

ವಿಚಾರಬಾರದು ಎಂದೀ ಸ್ವಯಂವರವನು । ಧೀರರು ಮಾಡಿದರದನು ॥
ವಿಚಾರಿದಿರೀಗ ವಿಚಾರಿದೊಡೇನಾಯಿತು । ಬೇರೊಬ್ಬರಲ್ಲ ನೀವೆಂದು ॥ ೧೪೨ ॥

ಉಡುಗೊರೆಗಳನಿತ್ತು ನೆರೆದ ಭೂಪಾಲರ್ಗೆ । ಕಡುಹರುಷದಿಯುಮರ್ದಪ್ಪಿ ॥
ಒಡನೆ ಬೀಳ್ಕೊಡಲವರತ್ತಲೈದಿದರಿತ್ತ । ಪೊಡವಿಪ ಜ್ಞಾನೇಂದುಗೂಡಿ ॥ ೧೪೩ ॥

ಪುರವೊಕ್ಕು ಪುರುಜಿನೇಂದ್ರನ ಪಸತಿಗೆ ಬಂದು । ಎರಕದಿಂದಭಿಷೇಕವೆಸಗಿ ॥
ತರುಣೀಮಣಿ ತನ್ನ ತನುಜೆಯ ಬಳಿಗೈದಿ । ನರನಾಥ ಜಯಸೇನ ನಿಂದು ॥ ೧೪೪ ॥

ಎಲೆ ಪುಣ್ಯಜನನಿ ! ನೀ ಕೈಎತ್ತಿಕೋ ನಿನ್ನ । ವಿಲಸಿತ ಭಕ್ತಿಮುಕ್ತಿಯನು ॥
ಒಲಿದೀವುದೆನೆ ಈ ಬಾಧೆ ಪಿಂಗುವುದೆಂದು । ಸಲೆ ದೊಡ್ಡಿತೆ ನಿನ್ನ ಶೀಲ ॥ ೧೪೫ ॥

ಧರೆಯ ವ್ಯಾಪಿಸುತಿದೆ ನಿನ್ನ ಗಂಡನ ಕೀರ್ತಿ । ಭರಿತವಾಗಿದೆ ಮೂಜಗವ ॥
ಪರಿಹರಿಸೌ ನಿನ್ನ ಚಿಂತೆಯನೆಂದೆನೆ । ತರುಣಿ ತಾ ಕಣ್ಣನು ತೆರೆದು ॥ ೧೪೬ ॥

ಜಿನನಾಮವನುಚ್ಚರಿಸುತ ಬೆಡಗಿಂದ । ಕನಕವಲ್ಲರಿಯಂತೆ ತನ್ನ ॥
ತನು ಬಳುಕುತಲಿರೆ ಮೆಲ್ಲನೆ ನಡೆತಂದು । ಜಿನರಾಜನಿಗೆ ತಾನೆರಗಿ ॥ ೧೪೭ ॥

ಪಲವು ಸ್ತೋತ್ರಗಳಿಂದ ಜ್ಞಾನೇಂದು ಜಿನಪನ । ಚೆಲುವಡಿಗಳ ನುತಿಗೈದು ॥
ಕಲಿಲಾರಿಯ ಬೀಳ್ಕೊಂಡು ಮಾತುಳ ಸಹ । ಮೊಳಗುವ ವಾದ್ಯದೊಗ್ಗಿನೊಳು ॥ ೧೪೮ ॥

ಅರಮನೆಯನು ಪೊಕ್ಕು ಶುಭವಾದ ತಿಥಿಯೊಳು । ದೊರೆಗೆ ತನ್ನಯ ತನುಜೆಯನು ॥
ಹರುಷದಿಂದಲಿ ಬಂಧುಸಾಕ್ಷ್ಯಗ್ನಿಸಾಕ್ಷಿಯಿಂ- । ದೆರೆದು ಕೈನೀರಿತ್ತನಾಗ ॥ ೧೪೯ ॥

ಭೂರಿದಾನವ ಯಾಚಕ ಜನರಿಗೆ ಕೊಟ್ಟು । ಊರೊಳು ವಸವಂತವನು ॥
ಚಾರುವೈಭವದೊಳು ನಡೆಸಿ ಬಂಧುಗಳಿಗೆ । ಧೀರನೌತಣವ ಮಾಡಿಸಿದ ॥ ೦೫೦ ॥

ಜಿನಚಂದ್ರಸೂನುವ ಕರೆದು ತಂದವರಿಗೆ । ಕನಕಾಭರಣವನಿತ್ತು ॥
ಮನದಕ್ಕರಿಂದ ಸಾಸಿರಗ್ರಾಮಂಗಳ । ಜನಪತಿಯಿತ್ತು ಬೀಳ್ಕೊಟ್ಟ ॥ ೧೫೧ ॥

ಸುರಪತಿ ಶಚಿಯೊಡನಿರುವಂತೆಯಿತ್ತಲು । ತರುಣಿ ಸುರತ್ನಾಕರಿಯೊಳು ॥
ಸರಸಕಲಾಕೋವಿದ ಜ್ಞಾನಚಂದ್ರನು । ಪರಮಸುಖದೊಳಿರುತಿಹನು ॥ ೧೫೨ ॥

ತರುಣಿಯರುಗಳ ಚಿತ್ತಾಂಬೋಧಿ ಹಿಮಕರ- । ನರುಹಮತಾಬ್ಜ ಭಾಸ್ಕರನು ॥
ದೊರೆಗಳ ಮಕುಟತಾಟಿತಚಾರುಚರಣನು । ಗರುವ ಜ್ಞಾನೇಂದುವೊಪ್ಪಿದನು ॥ ೧೫೩ ॥

**॥ ಅಂತು ಸಂಧಿ ೧೯ಕ್ಕಂ ಪದ ೨೬೯೨ಕ್ಕಂ ಮಂಗಲಂ ॥**

# ತೀರ್ಥವಂದನೆ.

ಜಿನಚಂದ್ರನಂದನ ಮನುಜಲೋಕದೊಳಿರ್ಪ । ಜಿನರ್ಗೆ ವಂದಿಸಿದುದನೊರೆವೆ ॥ ಪ ॥

ಒಳುನುಡಿಯೆಂದೆಂಬ ಧರ್ಮವೃಷ್ಟಿಗಳನು । ಇಳೆಯೊಳಿರುವ ಭವ್ಯರೆಂಬ ॥
ಬೆಳೆವ ಸಸ್ಯೌಘಕೆರೆವ **ಶಾಂತಿಜಿನ** ಮೇಘ ! । ತೊಳೆ ಎನ್ನ ಕರ್ಮ ಕರ್ದಮವ ॥ ೧ ॥

ಸರಸಿಜಾಕ್ಷಿಯ ಕಟಾಕ್ಷಶೃಂಖಲೆಯೊಳ- । ಗಿರುತಿರ್ದ ಜ್ಞಾನೇಂದುಕುವರ ॥
ಎರಡೂವರೆಯ ದ್ವೀಪದೊಳು ವರ್ತಿಸುತಿರ್ಪ । ಅರುಹನಾಲಯವ ನೋಳ್ಪರ್ತಿ ॥ ೨ ॥

ಮನದೊಳು ಸಂಜನಿಸಲು ಬೋಧೇಂದು ತಾ । ಕನಕವಿಮಾನವನೇರಿ ॥
ಜಿನ ಸಿದ್ಧ ! ಶರಣೆಂದು ದಕ್ಷಿಣ ಭರತದ । ಅನುವಾದಯೋಧ್ಯೆಯನೈದಿ ॥ ೩ ॥

ಸುರನಿರ್ಮಿತವಾದಾದಿ ಜಿನೇಂದ್ರನ । ವರ ಚೈತ್ಯಗೃಹವನು ಪೊಕ್ಕು ॥
ಪರಿಮಳವುಳವಾದರವಿಂದ ಪುಷ್ಪದಿಂ । ಪುರುಜಿನೇಂದ್ರಗೆ ಪೂಜೆ ಮಾಡಿ ॥ ೪ ॥

ಎರಗಿ ಬೀಳ್ಕೊಂಡಷ್ಟಾಪದಗಿರಿಗೈದಿ । ಕರಚೆಲುವಾದ್ಯೈನೂರು ॥
ಪುರುಷಪ್ರಮಾಣದ ಪುರುಜಿನನಾಥಗೆ । ಕರವ ಮುಗಿದು ಭಕ್ತಿಯಿಂದ ॥ ೫ ॥

ಸುರಗಿಯ ಪುಷ್ಪವನರ್ಚನೆಯನು ಮಾಡಿ । ಭರತೇಶ್ವರ ಮಾಡಿಸಿದ ॥
ವರಗೀರ್ವಾಣ ಜಿನಾಧೀಶ ಮೊದಲಾದ । ದುರಿತಭಂಜನರೆಪ್ಪತ್ತೆರಡು ॥ ೬ ॥

ವರ ತೀರ್ಥೇಶ್ವರರಿಗೆ ತಾನು ವಂದಿಸಿ । ಸುರಹೊನ್ನೆಯಿಂ ಪೂಜೆ ಮಾಡಿ ॥
ಕರಗಳ ಮುಗಿದು ಬೀಳ್ಕೊಂಡು ಸುರಮ್ಯದ । ಪಿರಿ ಸೊಬಗಿಂದ ರಂಜಿಸುವ ॥ ೭ ॥

ವರಪೌದನಪುರವನು ತಾನಿರದೈದಿ । ಮರಕತ ಮಣಿಯಿಂದ ಚಕ್ರಿ ॥
ಭರತೇಶ ಮಾಡಿಸಿದೈನೂರಿಪ್ಪತ್ತೈದು । ಪುರುಷಪ್ರಮಿತ ದೋರ್ಬಲಿಯ ॥ ೮ ॥

ಕರಚೆಲುವಿನ ಬಿಂಬವ ಕಂಡು ಜಯ ಜಯ । ಸುರಪತಿನತ ದಿವ್ಯಚರಣ ! ॥
ವರಮೋಕ್ಷಲಕ್ಷ್ಮಿಯ ಪ್ರಾಣೇಶನೆ ! ಎಂದು । ಹರುಷದಿಂದೆರಗಿ ಕೊಂಡಾಡಿ ॥ ೯ ॥

ಪರಿಮಳಮಯವಾದ ಮಾಧವಿಯರಳಿಂದ । ಚರಣಾಬ್ಜ ಪೂಜೆಯ ಮಾಡಿ ॥
ಅರುಹನ ಬೀಳ್ಕೊಂಡು ಚಂಪಾಪುರಕೈದಿ । ವರವಾಸುಪೂಜ್ಯ ಜಿನನಿಗೆ ॥ ೧೦ ॥

ಎರಗಿ ಸಂಪಗೆಯ ಪುಷ್ಪಗಳಿಂದಲರ್ಚಿಸಿ । ಕರಗಳ ಮುಗಿದು ಬೀಳ್ಕೊಂಡು ॥
ವರಸಮ್ಮೇದಕುತ್ಕಿಲವನು ತಾನೇರಿ । ವರಪುಣ್ಯಕ್ಷೇತ್ರವಿದೆಂದು ॥ ೧೧ ॥

ಎರಗಿ ವಿಂಶತಿಜಿನರಾಜರಘಾತಿಯ- । ನುರುಹಿ ಮುಕ್ತಿಗೆ ಪೋಪುದಕೆ ॥
ಗಿರಿರಾಜ ! ನೀನೆ ಕಾರಣವಾದೆ ಎಂದಾ । ಗಿರಿಯನು ತಾನು ಕೊಂಡಾಡಿ ॥ ೧೨ ॥

ಪಾವಾಪುರಿಗೆ ತಾ ಭರದೊಳಗೈತಂದು । ತೀವಿದ ಭಕ್ತಿಯಿಂದೆರಗಿ ॥
ಏವಣ್ಣಿಪೆ ಪಂಚಕೋಟಿ ಯತೀಶರು । ತೀವ್ರಕರ್ಮವ ಕೆಡಿಪುದಕೆ ॥ ೧೩ ॥

ಆಧಾರಭೂತ ನೀನಾದೆಂದು ಕೊಂಡಾಡಿ । ಮೇದಿನೀಶ್ವರನೂರ್ಜಯಂತ ॥
ಭೂಧರವನು ಏರಿ ಮೂಮೆ ತಾ ಬಲವಂದು । ಸಾದರ ಸಾಷ್ಟಾಂಗವೆರಗಿ ॥ ೧೪ ॥

ನೇಮೀಶ ಮೊದಲಾದೆಪ್ಪತ್ತೆರಡು ಕೋಟಿ । ಕಾಮನ ಗೆಲಿದ ಮುನಿಗಳು ॥
ಪ್ರೇಮದಿಂ ಕರ್ಮವ ಕೆಡಿಸುವುದಕೆ ನೀನು । ನೇಮಿತನಾದೈ ಎಂದು ॥ ೧೫ ॥

ಕೊಂಡಾಡಿ ಗಿರಿ ಶತ್ರುಂಜಯ ನಗವೇರಿ । ಮಂಡಳಾಧೀಶ್ವರ ನಮಿಸಿ ॥
ಪಾಂಡವರಾದ್ಯಷ್ಟಕೋಟಿ ಮುನೀಶ್ವರ । ಹಿಂಡು ಕರ್ಮವ ಸುಡುವುದಕೆ ॥ ೧೬ ॥

ನೀನೆ ಕಾರಣನಾದೆ ಎಂದಾ ಶೈಲವ । ಮಾನವೇಶ್ವರ ಕೊಂಡಾಡಿ ॥
ಆನಂದದಿಂ ತುಂಗಿಗೋತ್ರವ ತಾನೇರಿ । ಜ್ಞಾನಚಂದ್ರಮ ನಮಿಸಿದನು ॥ ೧೭ ॥

ರಾಘವ ಮೊದಲಾದ ನವ ನವತಿಕೋಟಿ । ಯೋಗೀಶ್ವರರು ಕರ್ಮಗಳ ॥
ನೀಗುವುದಕೆ ನೀನೆಯಾಧಾರವಾದೆ ಎಂ- । ದಾ ಗಿರಿಯನು ತಾ ಪೊಗಳಿ ॥ ೧೮ ॥

ನೃಪ ನಡೆತಂದು ಪಾವಾಪುರಿಯನು ಪೊಕ್ಕು । ವಿಪುಲಾಚಲವ ತಾನಡರಿ ॥
ಲಪಿಸಿದನಿಂತು ಶ್ರೀ ವೀರಜಿನೇಶನ । ಸುಪವಿತ್ರ ಸಮವಸರಣವ ॥ ೧೯ ॥

ಧರಿಸುವುದಕೆ ನೀ ಕಾರಣವಾದೆ ಎಂ- । ದರಮುಗ ಕೊಂಡಾಡಿ ಬಳಿಕ ॥
ಭರದಿಂದ ವಿಜಯಾರ್ಧಗಿರಿಗೆ ತಾನೈತಂದು । ವರಕಾಂಚನಮಯವಾದ ॥ ೨೦ ॥

ಹರದಾರಿಯಾಯಾಮ ತದ್ದಲವಿಸ್ತಾರ । ಪರಿಕಿಸೆ ತತ್ಪಾದಹೀನ ॥
ಹರದಾರಿಯುನ್ನತ ಪೂರ್ವಾಭಿಮುಖವಾದ । ವರಸಿದ್ಧಕೂಟವಸತಿಯ ॥ ೨೧ ॥

ಭೂಗಧಿನಾಥನು ಒಳಪೊಕ್ಕು ಜಿನರಿಗೆ । ರಾಗದಿಂ ಕೈಗಳ ಮುಗಿದು ॥
ನಾಗಸಂಪಗೆಯಿಂದ ಪೂಜಿಸಿ ಜಿನರನು । ಬೇಗದಿಂ ಬೀಳ್ಕೊಂಡು ಬಂದು ॥ ೨೨ ॥

ಗಂಗಾದೇವಿಯ ಗೃಹದ ಮೇಲ್ಭಾಗದಿ । ಗಾಂಗೇಯ ಕಮಲದ ಮೇಲೆ ॥
ಮಂಗಲಮೂರ್ತಿ ಜಿನಪನಿಹನಾತನ । ತುಂಗಜಟಾಮುಕುಟದೊಳು ॥ ೨೩ ॥

ವರಕಹಳೋಪಮದೊಳು ಗಂಗಾನದಿ । ಸುರಿಯುತಿರಲು ತಾ ಕಂಡು ॥
ಪರಮ ವಿದ್ಯಾದೇವತೆಗಳಿಂ ಹಸ್ತವ । ತ್ವರಿತದಿಂದಡ್ಡ ಕಡೆಯಿಸೆ ॥ ೨೪ ॥

ಜಿನಬಿಂಬವ ಕಂಡು ಸತನಾಗಿ ಕೊಂಡಾಡಿ । ಜನಪನಲ್ಲಿಂದ ಪೊರಮಟ್ಟು ॥
ಘನವಾದ ಶತಯೋಜನ ಉದ್ದ ಉಂಟಾದ । ಕನಕವರ್ಣದ ಕಾಂತಿಯೆಸೆವ ॥ ೨೫ ॥

ಹಿಮವದ್ಗಿರಿಯೇರಿ ಜ್ಞಾನೇಂದು ಕುವರನು । ಕಮಲಸರಸಿನೊಳು ಮಿಂದು ॥
ಮಮತೆಯಿಂದಲಿ ಜಿನಪತಿಗೃಹವನು ಪೊಕ್ಕು । ನಮಿಸಿ ಕೊಂಡಾಡಿ ಬೀಳ್ಕೊಂಡು ॥ ೨೬ ॥

ಪಿರಿದಪ್ಪ ಹೈಮವತ ಕ್ಷೇತ್ರವೆಂದೆಂಬ । ಪರಮ ಭೋಗ ಭೂಮಿಯನು ॥
ಎರಡು ಸಾಸಿರ ಕಾರ್ಮುಖದುತ್ಸೇಧದ । ಪುರುಷರ ರೀತಿಯ ಕಂಡು ॥ ೨೭ ॥

ನಳನಳಿಸುವ ರೋಹಿದ್ರೋಹಿತಾಸ್ಯಗಳೆಂಬ । ಹೊಳೆಯ ತಡಿಯ ವನಕೈದಿ ॥
ಜಳಕೇಳಿ ವನಕೇಳಿಗಳನು ತಾನಾಡಿದ । ಇಳೆಯೈಸಿರಿಯ ನಿಟ್ಟಿಸುತ ॥ ೨೮ ॥

ಇನ್ನೂರು ಯೋಜನದುತ್ಸೇಧವನುಳ್ಳ । ಸನ್ನುತಾರ್ಜುನಮಯವಾದ ॥
ಚೆನ್ನುವಡೆದ ಹನ್ನೊಂದು ಕೂಟವನುಳ್ಳ । ಉನ್ನತ ಮಹಾಹಿಮವನ್ನೇರಿ ॥ ೨೯ ॥

ಕಡುರಂಜಿಪ ಮಹಾಪದ್ಮ ಕಾಸಾರದ । ಮಡುವೊಕ್ಕು ಸ್ನಾನವ ಮಾಡಿ ॥
ಬಿಡದಾ ಗಿರಿಯ ಮೂಡಣದಿಕ್ಕಿನೊಳಿರ್ದ । ಕಡೆಯಾಣಿವರ್ಣವಸತಿಯ ॥ ೩೦ ॥

ಕಡುಭಕ್ತಿಯಿಂ ಪೊಕ್ಕು ದೇವರ ದೇವಗೆ । ಒಡನೆ ಸಾಷ್ಟಾಂಗದಿಂದೆರಗಿ ॥
ಮುಡಿವಾಳ ಲಾವಂಚಗಳನರ್ಚನೆ ಗೈದಿ । ಪೊಡವಿಪ ನುತಿಸೆ ತಾ ಮಗುಳಿ ॥ ೩೧ ॥

ಭರದಿ ಮಧ್ಯಮಭೋಗ ಭೂಮಿಯೆಂದೆನಿಸಿದ । ಹರಿವರ ದೇಶವ ಪೊಕ್ಕು ॥
ಅರಮಗ ನಾಲ್ಕುಸಾಸಿರ ಬಿಲ್ಲಿನುದ್ದದ । ಪುರುಷರ ಚೆಲುವನು ಕಂಡು ॥ ೩೨ ॥

ಹರಿವ ಹರಿದ್ಧರಿಕಾಂತನದಿಗಳೊತ್ತಿ- । ಲಿರುವ ವನವ ತಾನು ಪೊಕ್ಕು ॥
ಮೆರೆವ ಮಹಾವನಗಳ ಚೆಲ್ವ ನೋಡುತ । ದೊರೆಯಲ್ಲಿಂದಲು ತೆರಳಿ ॥ ೩೩ ॥

ಕರಗಿದ ಸ್ವರ್ಣವರ್ಣದಿ ಮನೋಹರವಾದ । ವರ ಚತುಶ್ಶತಯೋಜನದ ॥
ಸಿರಿವೆತ್ತುನ್ನತಿಯುಳ್ಳ ನಿಷಧವೆಂಬ । ಗಿರಿಯ ಕುಮಾರಕನೇರಿ ॥ ೩೪ ॥

ಕರಚೆಲುವಾದ ತಿಗಿಂಚ ಪೆಸರನಾಂತ । ಸರಸಿಯೊಳೆಸಗಿ ಸ್ನಾನವನು ॥
ಅರುಹನ ಗೃಹಕ್ಕೈದಿ ಜಿನರಾಜಮಲ್ಲನಿ- । ಗೆರಗಿ ಕೈಮುಗಿದು ಕೊಂಡಾಡಿ ॥ ೩೫ ॥

ಸಿರಿಪ ಜಾಜಿಯ ಕುಸುಮಗಳಿಂದರ್ಚನೆ ಮಾಡಿ । ಕರಗಳ ಮುಗಿದು ಬೀಳ್ಕೊಂಡು ॥
ವರಭೋಗಭೂಮಿಯೆನಿಪ ದೇವಕುರುವ್ಪೊಕ್ಕು । ಅರುಸಾಸಿರ ಬಿಲ್ಲುದ್ದದವರ ॥ ೩೬ ॥

ವರವಧುಗಳ ಚೆಲುವಿಕೆಯ ತಾ ನೋಡುತ । ಮೆರೆವ ಶಾಲ್ಮಲಿ ವೃಕ್ಷದೊಳು ॥
ಅರುಹನ ಗೃಹಮುಂಟಾ ಗೃಹವನು ಪೊಕ್ಕು । ದುರಿತಾರಿ ಜಿನರಾಜಗೆರಗಿ ॥ ೩೭ ॥

ಮಘಮಘಿಸುವ ಕಲ್ಹಾರದರಳುಗಳಿಂ । ಸುಗುಣನರ್ಚನೆಯನು ಮಾಡಿ ॥
ಅಗಣಿತ ಮಹಿಮನಿಗೆರಗಿ ಬೀಳ್ಕೊಂಡಾಗ । ಸೊಗಸಿಂದುತ್ತರ ಕುರುವನೈದಿ ॥ ೩೮ ॥

ಜಂಬೂದ್ರುಮದುಪರಿಮದೊಳು ರಾಜಿಪ । ಪೊಂಬಣ್ಣ ವಸತಿಯ ಪೊಕ್ಕು ॥
ಶಂಬರಾರಿಯ ಗೆಲ್ದ ಜಿನರಾಜ ಮಲ್ಲನ । ಬಿಂಬವ ಕೈರವದಿಂದ ॥ ೩೯ ॥

ನರನಾಥ ಪೂಜಿಸಿ ವಕ್ಷಾರ ನೂರರೊ- । ಳಿರುವ ವಸತಿಗಳ ಪೊಕ್ಕು ॥
ಕುರವಕ ಮಲ್ಲಿಗೆ ಮೊದಲಾದ ಕುಸುಮದಿಂ । ನೆರೆಜಾಣ ಪೂಜೆಯ ಮಾಡಿ ॥ ೪೦ ॥

ನೂರೆಪ್ಪತ್ತು ರಜತಶೈಲದೊಳಗಿರ್ಪ । ಮಾರಾರಿ ಜಿನಗೃಹಕ್ಕೈದಿ ॥
ವಾರಿಜದರಳಿಂದ ಜಿನಪನ ಪೂಜಿಸಿ । ಚಾರುವಿಷ್ವಾಕಾರಕ್ಕೈದಿ ॥ ೪೧ ॥

ಕನಕವರ್ಣದ ನಾಲ್ಕು ಬಸದಿಗಳನು ಪೊಕ್ಕು । ಜಿನರಾಜರಡಿದಳಕೆರಗಿ ॥
ಜನನಾಥ ಸ್ವರ್ಣಕೇತಕಿಯ ದಲಗಳಿಂದ । ಜಿನರ ಪೂಜಿಸಿ ಬೀಳ್ಕೊಂಡು ॥ ೪೨ ॥

ಹರುಷದಿಂದವೆ ನಾಲ್ಕು ಕ್ಷುಲ್ಲಕ ಮಂದರ- । ದರುವತ್ತನಾಲ್ಕು ಬಸದಿಯ ॥
ಕರಶೋಭಿಪ ಜಂಬೂ ಶಾಲ್ಮಲಿಯೊಳಗಿ- । ರ್ಪರುಹನಾಲಯವಷ್ಟಕವ ॥ ೪೩ ॥

ತ್ವರಿತದಿಂದವೆ ಪೊಕ್ಕು ಜಿನರಾಜ ಚರಣವ । ಇರುವಂತಿಯರಲಿಂದ ಕುವರ ॥
ಪರಮಭಕ್ತಿಯೊಳು ಪೂಜಿಸಿ ಚತುರ್ವಿಂಶತಿ । ವರಕುಲಪರ್ವತಕ್ಕೈದಿ ॥ ೪೪ ॥

ಜಿನಪನ ಸದನವಿಪ್ಪತ್ತನಾಲ್ಕನು ಪೊಕ್ಕು । ಜಿನರಿಗೆ ಸಾಷ್ಟಾಂಗವೆರಗಿ ॥
ವನರುಹ ಕುಸುಮವ ಜಿನಪಾದಕರ್ಚಿಸಿ । ಜನನಾಥ ಮಾನುಷೋತ್ತರದ ॥ ೪೫ ॥

ಗಿರಿಯ ಮೇಲಿರ್ಪ ಬಸದಿ ನಾಲ್ಕನು ಪೊಕ್ಕು । ಅರುಹನ ಪಾದಪದ್ಮವನು ॥
ಪರಿಮಳಮಯವಾದ ನಾಗಸಂಪಿಗೆಯಿಂದ । ದೊರೆಮಗ ಪೂಜೆಯ ಮಾಡಿ ॥ ೪೬ ॥

ಮರಳಿ ಬಂದೈರಾವತ ಜನಪದದೊಳಿ-। ರ್ಪ್ಪರುಹನ ಗೃಹಗಳ ಪೊಕ್ಕು ॥
ಕರಗಳ ಮುಗಿದು ನುತಿಸಿ ದೇಶದ ಚೆಲ್ವ। ಧರಣೇಶ ನೋಡುತ ಬಂದು ॥ ೪೭ ॥

ಕನಕವರ್ಣವನುಳ್ಳ ಶತಯೋಜನದಿಂದ। ಮಿನುಗುವ ಶಿಖರಿ ಶೈಲವನು ॥
ಮನುಜೇಶನೇರಿ ಮಹಾಪುಂಡರೀಕಮೆಂ-। ಬನುಪಮ ಕಾಸಾರವೊಕ್ಕು ॥ ೪೮ ॥

ಇನಿಸು ಬೇಗದಿ ಮಿಂದು ಜಿನಮಂದಿರಕ್ಕೈದಿ। ಜಿನರಿಗೆ ಸಾಷ್ಟಾಂಗವೆರಗಿ ॥
ವನರುಹ ಕುಸುಮಗಳಿಂದ ಪೂಜೆಯ ಮಾಡಿ। ಜಿನರಾಜನ ಬೀಳ್ಕೊಂಡು ॥ ೪೯ ॥

ಕುವರನು ಹೈರಣ್ಯವತವೆಂದೆನಿಸಿದ। ವರಭೋಗಾವನಿಗೈದಿ ॥
ತವಕದಿ ಪ್ರಿಯಂಗು ಶ್ಯಾಮ ವರ್ಣವನುಳ್ಳ। ಸುವಿಲಾಸದ ವಧೂವರರ ॥ ೫೦ ॥

ಚೆಲುವನು ನೋಡುತ ಸ್ವರ್ಣರೂಪ್ಯಗಳೆಂಬ। ವಿಲಸಿತ ನದಿಗಳ ಪೊಕ್ಕು ॥
ಜಲಕೇಳಿ ವನಕೇಳಿಗಳಾಡಿ ದೇಶವ। ನಲವಿಂದ ನೋಡುತ ಬಂದು ॥ ೫೧ ॥

ದ್ವಿಶತಯೋಜನದುನ್ನತಿಕೆಯಿಂದೆಸೆವ ವಿ-। ಲಸದರ್ಜುನಮಯವಾದ ॥
ಮಿಸುಪ ಟಂಕೋತ್ಕೀರ್ಣದಿಂದ ವರ್ತಿಸುತಿರ್ಪ। ಹೊಸಹೊನ್ನಕೂಟಗಳಿಂದ ॥ ೫೨ ॥

ಥಳಥಳಿಸುವ ರುಕ್ಮಿ ಶಿಖರಿಯ ತಾನೈದಿ। ಪೊಳೆವ ಪೌಂಡರಿಕವೆಂದೆಂಬ ॥
ಜಳಜಾಕರವೊಕ್ಕು ಮಜ್ಜನವನು ಮಾಡಿ। ಘಳಿಲನೆ ಜಿನಗೃಹಕೈದಿ ॥ ೫೩ ॥

ಕರಗಳ ಮುಗಿದು ಸಾಷ್ಟಾಂಗವೆರಗಿ ತಾ-। ನರುಹನ ಚರಣಕಂಜವನು ॥
ಕರವೀರ ಕುಸುಮದಿಂ ಪೂಜಿಸಿ ನುತಿಗೈ-। ದರುಹನ ಬೀಳ್ಕೊಂಡು ನೃಪತಿ ॥ ೫೪ ॥

ಹರುಷದಿಂ ಮಧ್ಯಮ ಭೋಗಾವನಿಯಾದ। ವರ ರಮ್ಯಕ ದೇಶವೊಕ್ಕು ॥
ಪರಿಪೂರ್ಣಚಂದ್ರನ ಕಾಂತಿಯಂಗವನುಳ್ಳ। ವರವಧೂಗಳ ಚೆಲ್ವ ಕಂಡು ॥ ೫೫ ॥

ನರನಾರೀ ಕಾಂತ ನದಿಯ ವನಸಂಪತ್ತ-। ನರಮಗ ನೋಡುತ ಬಂದು ॥
ವರವೈಢೂರ್ಯಮಯದಿ ರಾರಾಜಿಪ। ಮೆರೆವ ನಾಲ್ನೂರು ಯೋಜನದ ॥ ೫೬ ॥

ಉನ್ನತಿಕೆಯನುಳ್ಳ ನೀಲಗಿರಿಯ ಪ್ರ-। ಸನ್ನ ಕೇಸರಿ ಸರಸಿಯೊಳು ॥
ಚೆನ್ನಿಗರರಸ ಸ್ನಾನವ ಮಾಡಿ ರಾಜಿಪ। ಹೊನ್ನ ಬಸದಿಯನು ಪೊಕ್ಕು ॥ ೫೭ ॥

ಅರಳಿಂದ ಪೂಜಿಸುತ್ತರ ಕುರುಭುವಿಯಲ್ಲಿ। ಮೆರೆವ ಬಾಲಾರ್ಕ ಕಾಂತಿಯನು ॥
ಜರೆವ ದೇಹದ ದಂಪತಿಗಳ ಚೆಲುವನು। ಅರಮಗ ಕಂಡು ಲೀಲೆಯೊಳು ॥ ೫೮ ॥

ತ್ವರಿತದಿಂ ಪೂರ್ವ ವಿದೇಹವ ತಾ ಪೊಕ್ಕು। ಮೆರೆವ ಕಚ್ಛಾದಿ ದೇಶಗಳ ॥
ವರನದಿಗಳ ಪಟ್ಟಣಗಳ ವನಗಳ। ಹರುಷದಿ ನೋಡುತ ಬಂದು ॥ ೫೯ ॥

ಜನಪತಿಯಪರವಿದೇಹದ ಪದ್ಮಾದಿ-। ಯನುಪಮ ದೇಶಪಟ್ಟಣದ ॥
ಮಿನುಗುವ ನದ-ನದಿ ವಾಪಿ-ಕೂಪಂಗಳ। ಮನದಕ್ಕರಿಂದ ನೋಡುತಲಿ ॥ ೬೦ ॥

ಸುರಗಿರಿ ಭದ್ರಶಾಲೆಯ ವನವೊಕ್ಕಲ್ಲಿ । ಇರುತಿರ್ಪ ನಾಲ್ಕು ಬಸದಿಯ ॥
ಅರಮಗ ತಾ ಪೊಕ್ಕು ಜಿನಪನ ನುತಿಗೈದು । ಮರುಗಮಲ್ಲಿಗೆ ಜಾಜಿಯಿಂದ ॥ ೬೧ ॥

ಜಿನರಡಿದಳವ ಪೂಜಿಸಿ ಭದ್ರಶಾಲೆಯ । ವನದಿಂದ ಮೇಲೈನೂರು ॥
ಘನ ಯೋಜನ ಪೋದಲ್ಲಿ ನಂದನವೆಂಬ । ವನ ರಾಜಿಪುದದರಲ್ಲಿ ॥ ೬೨ ॥

ವನದ ಮಹಾನಾಲ್ಕು ದಿಕ್ಕಿನೊಳಿರುತಿರ್ಪ । ಜಿನಗೇಹಮಿಹವವ ಪೊಕ್ಕು ॥
ವನ ಸಂಪಿಗೆಯಿಂದ ಜಿನರನು ಪೂಜಿಸಿ । ಜನತಾಧೀಶ ಬೀಳ್ಕೊಂಡು ॥ ೬೩ ॥

ಮೆರೆವ ನಂದನವನದಿಂ ಮೇಲೆ ಅರುವತ್ತು । ಎರಡುವರೆ ಸಹಸ್ರ ॥
ಸುರುಚಿರ ಯೋಜನ ಪೋದಲ್ಲಿ ನೆಲೆಗೊಂ- । ಡುರು ಸೌಮನಸ ವನಮಿಹುದು ॥ ೬೪ ॥

ಮಿನುಗುವ ವನದ ನಾಲ್ಕು ದಿಕ್ಕುಗಳೊಳು । ಜಿನಗೃಹ ನಾಲ್ಕಿಹವವನು ॥
ಜನತಾಧೀಶ್ವರ ಕಡು ಭಕ್ತಿಯಿಂ ಪೊ- । ಕ್ಕನುರಾಗಮಿಗೆ ಬಲವಂದು ॥ ೬೫ ॥

ದುರಿತಾರಿ ಜಿನರಿಗೆ ಬಲವಂದು ಪೊಡಮಟ್ಟು । ಕರ ವೀರವೊಲ್ಲೆಮಲ್ಲಿಗೆಯ ॥
ಅರಳ ಜಿನೇಶ್ವರನಡಿಗಳಿಗರ್ಚಿಸಿ । ಪರಮಾತ್ಮನ ಬೀಳ್ಕೊಂಡು ॥ ೬೬ ॥

ಆ ಸೌಮನಸದ ಮೇಲೆ ಮೂವತ್ತಾರು । ಸಾಸಿರ ಪೋದಲ್ಲಿ ಮೆರೆವ ॥
ಲೇಸಪ್ಪ ಪಾಂಡುಕವನಮುಂಟದರಲ್ಲಿ । ಪೂಸರಮದಮರ್ದನರ ॥ ೬೭ ॥

ಜಿನರಾಜ ಮಲ್ಲರ ಭವನ ನಾಲ್ಕಿಹವವ । ಜಿನಚಂದ್ರನಂದನ ಪೊಕ್ಕು ॥
ಘನ ತ್ರಿಕರಣಶುದ್ಧಿ ಭಕ್ತಿಯಿಂ ವಂದಿಸಿ । ಕನಕಾಂಬುಜ ನೈದಿಲಿಂದ ॥ ೬೮ ॥

ಜಿನಪತಿಗಳ ಪೂಜಿಸಿಯೂ ವನದೊಳು । ಘನ ನವರತ್ನ ಕೀಲಿತದ ॥
ಮಿನುಗುವರ್ಧೇಂದು ಸಮಾನ ವಿರಾಜಿತ । ದನುಜವೈರಿ ಮುಖವಾಗಿ ॥ ೬೯ ॥

ಇರುತಿರ್ಪ ಪಾಂಡು ಉಪಾಂಡು ಕಂಬಲರಕ್ತ । ವರ ರಕ್ತ ರಕ್ತ ಕಂಬಲವ ॥
ಗಿರಿಕಾಗ್ನಿ ನೈಋುತಿ ಪವನ ದಿಕ್ಕಿನೊಳುಳ್ಳ । ಅರುಹನ ಸ್ನಾನಪೀಠವನು ॥ ೭೦ ॥

ದೊರೆತನ್ನನೀಕ್ಷಿಸಿ ಜಯ ಜಯ ಜಯವೆಂದು । ಕರಕಂಜಗಳ ಮುಗಿಯುತ್ತ ॥
ಎರಕದಿಂ ಸಾಷ್ಟಾಂಗವೆರಗಿ ತ್ರಿಕಾಲದ । ವರ ಜಿನಧಾರಕರುಗಳ ॥ ೭೧ ॥

ಜಿನರಭಿಷೇಕದ ಕ್ಷೀರೋದಕದಿಂದ- ! ಲಸುದಿನ ಪಾವನನಾಗಿ ॥
ಘನ ಮಹಿಮೆಯನಾಂತಿರಿ ಎಂದು ಕೊಂಡಾಡಿ । ಜನಪತಿ ನಿಂದು ತಾನಲ್ಲಿ ॥ ೭೨ ॥

ನಂದೀಶ್ವರವೆಂಬ ಪೆಸರಾಂತು ರಾಜಿಪ । ಬಂಧುರ ದಿವಿ ಎಂಟರೊಳು ॥
ಚಂದದಿಂ ಮೆರೆವೈವತ್ತೆರಡು ಜಿನ- । ಮಂದಿರವನು ತಾ ನೆನೆದು ॥ ೭೩ ॥

ವರ ಕುಂಡಲ ರುಚಕಾದ್ರಿಯೊಳಿರುತಿರ್ದ । ಅರುಹನಾವಾಸವೆಂಟಕ್ಕೆ ॥
ಕರಗಳ ಮುಗಿದು ನಮಿಸಿ ಪೂಮಳೆಯನು । ಕರೆದನು ಜಯ ಜಯವೆನುತ ॥ ೭೪ ॥

ಉರಗಲೋಕದೊಳಿರ್ಪ ಏಳು ಕೋಟಿಯು ಎಪ್ಪ- । ತ್ತೆರಡು ಲಕ್ಷದ ಸಂಖ್ಯೆಯಿಂದ ॥
ಅರುಹನಾಲಯಮುಂಟವಕೆ 'ನಮೋ' ಎಂದು । ಕರೆದನು ಕುಸುಮದ ಮಳೆಯ ॥ ೭೫ ॥

ಸುರುಚಿರ ವ್ಯಂತರಜ್ಯೋತಿಷ್ಕಲೋಕದೊ- । ಳಿರುತಿರ್ದಸಂಖ್ಯಾತ ಜೈನ ॥
ವರ ಗೃಹ ಜಿನರಿಗೆ ಕೈಗಳ ಪಣೆಗೆತ್ತಿ । ಕರೆದನು ಪುಷ್ಪಾಂಜಲಿಯ ॥ ೭೬ ॥

ಸುರಲೋಕದೊಳಿರ್ಪ ಎಂಭತ್ತ ನಾಲುಕು । ವರ ಲಕ್ಷವು ತೊಂಬತ್ತೇಳು ॥
ಮೆರೆವ ಸಾಸಿರದಿಪ್ಪತ್ತ ಮೂರಾಗಿರ್ಪ । ಅರುಹನ ಬಸದಿಯ ಜಿನರ ॥ ೭೭ ॥

ಸ್ಮರಿಸಿ ಸಾಷ್ಟಾಂಗವೆರಗಿ ಜಯ ಜಯವೆಂದು । ವರ ಕುಸುಮಾಂಜಲಿ ಕರೆದು ॥
ಪರಮಾನಂದದಿ ಶ್ರೀಪುರಕೈತಂದು । ತರುಣಿ ರತ್ನಾಕರೆಗೂಡಿ ॥ ೭೮ ॥

ಸುರಮಿಥುನಗಳಂತೆ ಉರಗಯುಗಲದಂತೆ । ವರ ಕಿನ್ನರಯುಗ್ಮದಂತೆ ॥
ತರ ತರ ಭೋಗಭೂಮಿಯ ವಧೂವರರಂತೆ । ಸುರುಚಿರ ಜೋತಿಷ್ಕರುಗಳ ॥ ೭೯ ॥

ದಂಪತಿಗಳವೊಲು ಸರಸಚುಂಬನಗಳ । ಪೆಂಪಿನಿಂದಾ ರಾಯಕುವರ ॥
ಕೆಂಪಿಯೊಡನೆ ಸುಖದೊಳಗೋಲಾಡಿ ನಿ- । ಳಿಂಪೇಂದ್ರನಂತೊಪ್ಪಿದನು ॥ ೮೦ ॥

ಪರರಾಯ ಶರಧಿಯ ಪೀರುವ ಬಡಬಾಗ್ನಿ । ಧುರಗಲಿಗಳ ತಲೆವಣಿಯು ॥
ಸುರಭೂಜ ವಂದಿಜನಗಳಿಗೆ ಜ್ಞಾನೇಂದು । ಕರುಣಾಬ್ಧಿ ಚಂದ್ರನೊಪ್ಪಿದನು ॥ ೮೧ ॥

**॥ ಅಂತು ಸಂಧಿ ೨೦ಕ್ಕಂ ಪದ ೨೭೭೩ಕ್ಕಂ ಮಂಗಲಂ ॥**

## ಪಟ್ಟಣ ಪ್ರವೇಶ.

ಜ್ಞಾನಚಂದ್ರನು ತಂದೆ-ತಾಯ್ಗಳನು ಕಂಡ ಸು- । ಮ್ಮಾನವ ಪೇಳುವೆ ಕೇಳಿ ॥ ಪ ॥

ಸಂಗವಿದೂರ ಬಹ್ಯಾಂಗವಿವರ್ಜಿತ । ಮಂಗಲಾತ್ಮಕ ದಿವ್ಯಾಂಗ ॥
ಅಂಗಜನನು ಭಂಗಿಸಿದ **ಶ್ರೀ ಶಾಂತೀಶ** ! । ಪಿಂಗಿಸೆಮ್ಮಯ ಕರ್ಮಗಳ ॥ ೧ ॥

ಮರಿದುಂಬಿ ಹೊನ್ನ ತಾವರೆಯ ಕೇಸರದೊಳು । ಚರಿಸಿ ಝೇಂಕರಿಸೆರಗುವೊಲು ॥
ತರುಣಿಯ ಮೊಗದಾವರೆಯೊಳು ಜ್ಞಾನೇಂದುವ । ತರಳನಯನ ನಟಿಸುವುವು ॥ ೨ ॥

ವೇಣುನಾದವ ಕೇಳಿದ ಮರಿ ಹುಲ್ಲೆಯು । ಗೋಣೆತ್ತಿ ಕೇಳುವಂದದೊಳು ॥
ಜಾಣೆಯ ಮಂಜುಳ ವಾಣಿ ನೃಪನ ಶ್ರುತಿ । ಕೇಣಿಗೊಂಡವು ಏನೆಂಬೆ ॥ ೩ ॥

ಅರಗಿಳಿಗಳು ನೇರಿಲದೋರೆವಣ್ಣಿನ । ಸುರಸವ ಸೇವಿಸುವಂತೆ ॥
ನೆರೆ ಜಾಣೆಯ ಚೆಂದಳಿದುರ್ಟಿಯಮೃತವ । ಸುರರೀಂಟುವಂತೆ ಪೀರುವನು ॥ ೪ ॥

ಪರಿಮಳದೊಡಗೂಡಿ ಪವನ ಸಂಚರಿಸ- । ಲುರಗೇಂದ್ರ ಭುಂಜಿಸುವಂತೆ ॥
ತರುಣಿಯ ಸುರಭಿ ನಿಃಶ್ವಾಸವ ಜ್ಞಾನೇಂದು । ವರ ನಾಸಿಕದೀಂಟುವನು ॥ ೫ ॥

ಎಳೆಲತೆ ಸುತ್ತಲು ಮೈಗೊಟ್ಟು ಚಂದನ- । ದೆಳೆ ಮರ ಶೋಭಿಸುವಂತೆ ॥
ಲಲಿತಾಂಗಿಯ ದುಂಡು ತೋಳ್ತೆಕ್ಕೆಯೊಳು ಸಿಲ್ಕಿ । ಇಳೆಯಾಣ್ಮನಿಹನು ಸಂತಸದಿ ॥ ೬ ॥

ತರುಣೀಮಣಿಯಿಂದಾಗುವ ಪಂಚೇಂದ್ರಿಯ । ವರ ಸುಖದಿಂಗಡಲೊಳಗೆ ॥
ನೆರೆ ಜಾಣ ತೇಂಕಾಡುತಲಾವಾಗಲು । ಇರುತಿರ್ದೊಂದಾನೊಂದು ಪಗಲು ॥ ೭ ॥

ನೆನೆದನು ಮನದಲ್ಲಿ ಧರೆಯೊಳು ವರ್ತಿಪ । ಜನಪಾಲರಿಂ ಕಪ್ಪಗೊಂಡು ॥
ಜನನಿ-ಜನಕರ ಕಾಣುವೆನೆಂದು ಪ್ರಸ್ಥಾನ । ಘನ ಭೇರಿಯ ಪೊಯ್ಸಿದನು ॥ ೮ ॥

ಕರಿಹಯ ರಥ ಕಾಲಾಳು ಖೇಚರರೆಲ್ಲ । ನೆರೆದಾಗ ತೆಟ್ಟೆ ತೆಟ್ಟೆಯೊಳು ॥
ಕರದ ಖಡ್ಗಗಳ ತೂಗುತ ಬಂದು ಜ್ಞಾನೇಂದು । ಧರಣೀಶಗೆ ಕೈಯ ಮುಗಿಯೆ ॥ ೯ ॥

ಮಿನುಗುವ ನಗೆಯಿಂದಾ ರಾಯಕುವರನು । ಜಿನ ಸಿದ್ಧ ಶರಣೆಂದೆನುತ ॥
ಕನಕರಚಿತ ಜಿನಭವನಕೆ ನಡೆತಂದು । ಘನ ಭಕ್ತಿಯಿಂದ ಕೊಂಡಾಡಿ ॥ ೧೦ ॥

ಓಜೆಯಿಂದಲೆ ಮಹಾಮಹಿಮೆಯು ಎಂದೆಂಬ । ಪೂಜೆಯ ಮಾಡಿಸಿ ಜಿನಗೆ ॥
ರಾಜಾಧಿರಾಜನು ಶುಭದಿನದೊಳಗೂರ । ಫೌಜುವೆರಸಿ ಹೊರವಂಟು ॥ ೧೧ ॥

ಉತ್ತರ ಮುಖವಾಗಿ ದಂಡು ನಡೆಯಲು ಭೂ- । ಪೋತ್ತಮರಾ ವಾರ್ತೆ ಕೇಳಿ ॥
ಕತ್ತಿಯ ಚಿಮ್ಮುತ ಸರ್ವ ಬಲವ ಕೂಡಿ । ದತ್ತಾವಧಾನದಿಂದೂರ ॥ ೧೨ ॥

ಹೊರವಂಟು ತಾಗಲು ಜ್ಞಾನೇಂದು ದಳವಾಯಿ । ನೆರೆಗಲಿ ವಜ್ರಾಯುಧನು ॥
ತುರಗಗಳಿಂ ತುಳಿಯಿಸಿ ಊರ ಹೊಗಿಸಿದ । ಕರಿಯಿಂದ ಬಾಗಿಲ ತಿವಿಸಿ ॥ ೧೩ ॥

ಒಳಪೊಕ್ಕು ದೊರೆ ದೊರೆಗಳ ಹಿಡಿಯಾಳಾಗಿ । ಕಲಿ ವಜ್ರಾಯುಧ ಪಿಡಿಸಿ ॥
ಇಳೆಯಾಣ್ಮನ ಪಾದಕೆ ತಂದು ಕೆಡಹಲು । ತಲೆವಿಡಿದೇಳೇಳೆಂದು ॥ ೧೪ ॥

ಉಡುಗೊರೆಗಳನಿತ್ತಂಜಲು ಬೇಡೆಂದು । ಪೊಡವಿಪನವರ ಸಂತೈಸಿ ॥
ನಡೆದು ನಿಮ್ಮಯ ರಾಜ್ಯವಾಳಿರೆಂದೆನುತಾಗ । ಕಡು ಹರ್ಷದಿಂ ಬೀಳ್ಕೊಟ್ಟು ॥ ೧೫ ॥

ಗಂಗಾನದಿಯ ತೀರದೊಳಿರುತಿರ್ದ । ತುಂಗವಿಕ್ರಮ ಭೂಭುಜರ ॥
ಪಿಂಗದೆ ಕಾಣಿಸಿಕೊಳುತವರಿತ್ತ ತು- । ರಂಗಾದಿ ವಸ್ತುನಿಚಯವ ॥ ೧೬ ॥

ಹರುಷದಿಂದವೆಯೊಪ್ಪಿಸಿಕೊಂಡವರಿಗೆ । ವರ ವಸ್ತುವಿತ್ತುಡುಗೊರೆಯ ॥
ಕರೆಸಿದಾಗಲು ಬನ್ನಿಮೆಂದವರ ಬೀಳ್ಕೊಟ್ಟು । ಮರಳಿ ತನಗೆ ಇದಿರಾವ ॥ ೧೭ ॥

ಧುರಗಲಿಗಳ ನೆಲಕಿಕ್ಕಿಯಪ್ಪಳಿಸುತ್ತ । ಭರದಿಂದವರ ಮಕ್ಕಳಿಗೆ ॥
ವರ ರಾಜ್ಯವನಿತ್ತವರಿತ್ತ ಕನ್ಯಾ- । ಸರಸ ರತ್ನಗಳ ಕೈಕೊಂಡು ॥ ೧೮ ॥

ಮುಂದಕ್ಕೆ ದಂಡೆತ್ತಿ ನಡೆಯುತಿರಲು ವ- । ಸುಂಧರಾಧೀಶ್ವರರಳುಕಿ ॥
ಸೌಂದರಾಂಗಿಯರ ತಮ್ಮಯ ನಂದನೆಯರ । ಒಂದುಸಾಸಿರ ಕನ್ನಿಕೆಯರ ॥ ೧೯ ॥

ದಳಪತಿ ಮತದಿಂದಿಳೆಯಾಣ್ಮನ ಕಂಡು । ವಿಲಸಿತ ಲಗ್ನದೊಳಾಗ ॥
ನಲವಿಂದ ಮದುವೆಯ ಮಾಡಿ ಭೂಭುಜನಿಂದ । ಕಳುಹಿಸಿಕೊಂಡರು ಕೆಲರು ॥ ೨೦ ॥

ಅಂಗ ಸುವಂಗ ಕಳಿಂಗ ಗುರ್ಜರ ಭೋಜ । ಸಿಂಗಳ ಮಗಧವವಂತೀ ॥
ಬಂಗಾಳ ನೇಪಾಳ ತೆಲುಗ ತಿಗುಳಲಾಟ । ಕೊಂಗ ಕುಡಂಗ ಕರ್ನಾಟ ॥ ೨೧ ॥

ಇವು ಮೊದಲಾದ ನಾನಾ ದೇಶದೊಡೆಯರ । ಭುವನೇಂದ್ರ ನೀತಿವಿಕ್ರಮಿಯು ॥
ಸವಿನಯದಿಂದ ಕಾಣಿಸಿಕೊಳುತಾಗಲು । ತವಕದಿಂದಲೆ ನಡೆಶಂದು ॥ ೨೨ ॥

ಶ್ರೀಪುರದೊತ್ತಿನುದ್ಯಾನವನದೊಳು । ಭೂಪಾಲ ಹೊರಬೀಡ ಬಿಡಿಸಿ ॥
ಚಾಪಲಲೋಚನೆಯನುಮತಿ ಮೊದಲಾ- । ದಾ ಪೆಣ್ಮಣಿಯ ಗೊಂದಣವ ॥ ೨೩ ॥

ಹರಿಬಲ ಹರಿಧನು ಗರುಡವೇಗನು ಖಗ- । ದೊರೆರನ್ನ ಕುಸುಮಾದಿ ಚೂಲ ॥
ನೆರೆಗಲಿ ಖಚರನಾಯಕರೆಲ್ಲರ ತಾ । ಕರೆಸಲು ವಿದ್ಯೆಗಳಿಂದ ॥ ೨೪ ॥

ಕಡುಗಾಡಿಯಿಂದಂಬರಚರರೈತಂದು । ಪೊಡವಿಪತಿಯ ಕಂಡು ಬೀಡ ॥
ಸಡಗರದಿಂ ಬಿಡೆಯನುಮತಿ ಮೊದಲಾದ । ಒಡಹುಟ್ಟಿದರಸುಮಕ್ಕಳನು ॥ ೨೫ ॥

ಗರುಡವೇಗನು ಹರಿಬಲ ಮುಂತಾಗಿರ್ದ । ವರಖೇಚರಧಿನಾಯಕರು ॥
ಹರುಷದಿಂದೊಡಗೊಂಡು ಬಂದು ಜ್ಞಾನೇಂದುವಿ- । ಗೆರಗಿ ಬೀಡನು ಬಿಟ್ಟಿರಲು ॥ ೨೬ ॥

ಜನಪ ತಾನಾಗೆದ್ದು ಶ್ರೀಪುರವನು ಪೊಕ್ಕು । ವನಿತೆ ರತ್ನಾಕರೆಯೊಡನೆ ॥
ಜನಕನ ಕಾಣ್ಬಭಿಪ್ರಾಯವ ಸೂಚಿಸಿ । ಮನದಕ್ಕರಿಂದ ಮಾತುಳಗೆ ॥ ೨೭ ॥

ಉಸುರಿಯಮಾತ್ಯ ನಂಟರು ಪರಿವಾರಕೆ । ಎಸಕದಿಂದುಡುಗೊರೆಗೊಟ್ಟು ॥
ಶಶಿಮುಖಿವೆರಸಿ ಜಿನಾಲಯಕೈತಂದು । ವಸುಧೇಶ ಜಯಸೇನವೆರಸು ॥ ೨೮ ॥

ಜಿನರಿಗೆರಗಿ ಜಿನಮುನಿಗಳ ಪರಕೆಯ । ಜನನಾಥ ಶಿರದೊಳಗಾಂತು ॥
ವನವೊಕ್ಕು ಶುಭದಿನದೊಳು ಪ್ರಯಾಣದ । ಘನವಾದ ಭೇರಿಯ ಪೊಯ್ಸಿ ॥ ೨೯ ॥

ನಲಿದರು ದೊರೆದೊರೆಗಳು ಪಾಠಕಕೋಟಿ । ಉಲಿದರು ಕೈಗಳನೆತ್ತಿ ॥
ಸಲವೇರಿತು ಸೇನೆ ಧಿಂ ಧಿಮಿ ಧಿಮಿಕೆಂದು । ಪಲವು ವಾದ್ಯಗಳು ಮೊರೆದವು ॥ ೩೦ ॥

ಅನುಮತಿ ಮೊದಲಾದ ಪದಿನೈದುಸಾಸಿರ । ವನಿತೆಯರುಗಳು ಪುಷ್ಪಕವ ॥
ಮನದಕ್ಕರಿಂದೇರಿಯಂಬರ ಪಥದೊಳು । ಘನವಾದ ವಾದ್ಯರಭಸದಿ ॥ ೩೧ ॥

ತಾರಾಸತಿಯರೊಗ್ಗಿನೊಳು ನಡೆದು ಬ- । ರ್ಪಾ ರೋಹಿಣಿದೇವಿಯಂತೆ ॥
ರಾರಾಜಿಸುವ ರಾಜಾಂಗನೆಯರಗೂಡಿ । ನೀರೆ ನಡೆನಳು ಗಾಡಿಯೊಳು ॥ ೩೨ ॥

ಸುರರಾಜಕರಿಯೊಳು ಸೆಣಸುವೆನೆಂದೆಂಬ । ಕರಿಗಳಿಪ್ಪತ್ತೊಂದು ಲಕ್ಷ ॥
ಮರುತದಿಂ ಮೊದಲೆ ಪಾರುವ ನಾಲ್ಕುವರೆ ಲಕ್ಷ । ತುರಗಂಗಳು ಸಂದಣಿಸೆ ॥ ೩೩ ॥

ದಿನನಾಥನೇರುವ ರಥದಿಂದಗ್ಗಳವಾದ । ಕನಕಾರ್ಜುನ ನಿರ್ಮಿತದ ॥
ಮಿನುಗುವ ನಾಲ್ಕುವರೆ ಕೋಟಿ ರಥಗಳ । ಘನ ಚೀತ್ಕಾರವೆಸೆಯಲು ॥ ೩೪ ॥

ಅಸಹಾಯ ಶೂರರ ಪದಿನೆಂಟು ಸಾಸಿರ । ವಸುಧೇಶ ಖೇಚರ ನೃಪರು ॥
ಪೆಸರಿನ ಭಟರು ನಾಲ್ವತ್ತೆಂಟು ಕೋಟಿಯು । ಎಸಕದಿಂ ಬರೆ ಜ್ಞಾನೇಂದು ॥ ೩೫ ॥

ಈರೇಳು ಯೋಜನದಗಲದೊಳಗೆ ಬೀಡ । ಭೂರಿವೈಭವದೊಳು ಬಿಡುತ ॥
ಮಾರಸಂಕಾಶನಲ್ಲಲ್ಲಿ ಉಪ್ಪಯಣವ । ಸೇರುವೆಯಿಂದಲಿಳಿಯುತ ॥ ೩೬ ॥

ನಡೆದು ನಡೆದು ಬಂದು ಕಾಶ್ಮೀರ ದೇಶವ । ಪೊಡವಿಪತಿಯು ತಾನು ಪೊಗಲು ॥
ಕುಡುವಿಲ್ಲನಾಡುಂಬೊಲ ಲಕ್ಷ್ಮಿನಿಳಯಕೆ । ಪಡಿಯಾದ ದೇಶವ ಕಂಡು ॥ ೩೭ ॥

ಹರಿಬಲ ಮುಂತಾದ ಖೇಚರಭೂಪರು । ನೆರೆಗಲಿ ನಾಯಕರೆಲ್ಲ ॥
ಶಿರದೂಗಿ ಇಂತಪ್ಪ ಜನಪದವನು ನಾವು । ಪರಿಕಿಸಲಿಲ್ಲಿನ್ನೆವರ ॥ ೩೮ ॥

ಎನುತ ಕೊಂಡಾಡುತ ಭೂಶಕ್ರ ! ನಿನ್ನಂತೆ । ಘನಪುಣ್ಯವಂತರನೆಲ್ಲೂ ॥
ಕನಸು–ಮನಸಿನಿಂದ ಕಂಡು ಕೇಳಿದುದಿಲ್ಲ । ಅನುಪಮ ಗುಣಿಯೆಂದು ಕೊನರೆ ॥ ೩೯ ॥

ಆರಮುಗನಾ ದಿನ ಬೀಡ ಬಿಡಿಸಿಯಲ್ಲಿ । ಕರೆದು ಪ್ರಜ್ಞಪ್ತಿ ವಿದ್ಯೆಯನು ॥
ಭರದಿಂದ ಹೋಗಿ ನಮ್ಮಯ್ಯನ ಮುಂದೆ ನೀ- । ನೊರೆ ಎನ್ನ ಶುಭವಾರ್ತೆ ಎನಲು ॥ ೪೦ ॥

ಕಳುಹಿಸಿಕೊಂಡು ಕುಮಾರನ ಕೈಯಿಂದ । ತಳೆದು ಪಾಠಕನೊಂದಿರವ ॥
ಇಳೆಯಾಣ್ಮ ಜಿನಚಂದ್ರನ ಸಭೆಯೊಳು ನಿಂದು । ಬಲದ ಹಸ್ತವ ಮೇಲಕೆತ್ತಿ ॥ ೪೧ ॥

ಗಂಡರ ಗಂಡ ಪ್ರಚಂಡ ಕಾಳಗದೊಳು । ಹಿಂಡುವ ಪರರಾಯ ದಂಡ ॥
ಖಂಡಶರ್ಕರವಿಲ್ಲ ಜ್ಞಾನೇಂದು ಕುವರಗೆ । ಲಂಡಿ ಭೂಪರು ಸಮ ಬಹರೇ ? ॥ ೪೨ ॥

ಜಾಣರ ದೇವ ಪ್ರವೀಣರ ತಲೆವಣಿ । ತ್ರಾಣಿಗಳರಸ ಪುಂವಾಣಿ ॥
ಏಣಾಕ್ಷಿಯರ ಚಿತ್ತಾಂಬೋಧಿ ಚಂದ್ರಗೆ । ಕ್ಷೋಣೀಶರು ಸಮ ಬಹರೇ ? ॥ ೪೩ ॥

ಏಕಾಂಗ ವೀರನು ಲೋಕೈಕ ಚೆನ್ನಿಗ । ಭೂಕಾಮಿನಿ ಪ್ರಾಣನಾಥ ॥
ನಾಕಿಗವಂದಿತ ಜ್ಞಾನೇಂದು ಕುವರಗೆ । ಬಾಕುಳಿ ನೃಪರೆಣೆಯಹರೇ ? ॥ ೪೪ ॥

ಜಿನಪಾದಾಂಬುಜ ಮತ್ತ ಮಧುವ್ರತ । ಜಿನಮುನಿಪಾದ ಸೇವಕನು ॥
ಜಿನಮತಾಂಬುಧಿಚಂದ್ರ, ಜ್ಞಾನಚಂದ್ರಮುನಿಗೆ । ಬಿನುಗು ನೃಪರು ಪಾಸಟಿಯೆ ? ॥ ೪೫ ॥

ಎಂದಿವು ಮೊದಲಾದ ಜ್ಞಾನೇಂದು ಕುವರನ । ಬಂಧುರ ಗುಣಕಥನವನು ॥
ಚಂದ ಚಂದದಿ ಪಾಠಕನು ಕೊಂಡಾಡಲು । ಕಂದನ ವಾರ್ತೆಯ ಕೇಳಿ ॥ ೪೬ ॥

ಜಿನಚಂದ್ರ ಮೂರ್ಛಿತನಾಗಿ ಗದ್ದುಗೆಯೊಳು । ಇನಿಸೊರಗಿರಲು ಸೇವಕರು ॥
ಪನಿನೀರ ಕಣ್ಣುಮೂಗಿಗೆಯೊತ್ತೆ ದಿಗಿಲನೆ । ಜಿನ ಸಿದ್ಧ ಎನುತೆದ್ದು ಕುಳಿತು ॥ ೪೭ ॥

ವನದತ್ತ ಪೋಗುವದೆತ್ತಲಾ ಚಾಂಡಾಲ । ವನಕರಿ ಕೊಲುವೆನೆಂದೆನುತ ॥
ಮುನಿದು ತಗುಳಲದ ಸೋಲಿಸಿ ಮಸ್ತಕ- । ವನುಪಮಗುಣಿ ! ನೀನೇರಿ ॥ ೪೮ ॥

ಕಡು ಪಾಪಿ ಖಚರ ಕೊಂಡೊಯ್ದುವುದೆತ್ತಲು । ಕಡೆಯಾಣಿಬೊಂಬೆಯೆ ! ನಿನ್ನ ॥
ಕಡೆ ನೂಂಕಿಸಿ ದೈವ ನಮ್ಮನಿನಿತು ಕಾಲ । ಒಡಲ ಹೊರಯಿಸಿತೆಯಕಟ ! ॥ ೪೯ ॥

ಎಲೆ ಭಟ ! ನನ್ನ ಮುದ್ದಿನ ಕಂದನೆಲ್ಲಿರ್ದ । ಹೊಲಬಾಯಿತಾವಲ್ಲಿ ನಿನಗೆ ॥
ಸಲೆ ಕ್ಷೇಮದೊಳಗಿರ್ದಪನೆ ನಮ್ಮೂರತ್ತ । ಎಳಸಿ ಬಂದನೊ ನಮ್ಮ ತಾನು ॥ ೫೦ ॥

ನೆನೆವನೊ ಇಲ್ಲವೊ ಪರರಾಜ್ಯದೊಳಗಿರ್ದು । ತನುವ ಪಿಡಿದಿರುವನೆಂತು ? ॥
ಎನಲು ಕಂಬನಿಗಳು ಘುಳು ಘುಳು ಗುಟ್ಟುತ । ಜನಪನ ಕಣ್ಣಿಂದ ಸೂಸೆ ॥ ೫೧ ॥

ಅರಸನ ಮರುಕವ ಕಂಡು ವಿದ್ಯಾದೇವಿ । ದೊರೆಯೊಡನಿಂತಾಡಿದುದು ॥
ಮುರುಕದಿಂ ನಿನ್ನ ಕಂದನ ಸೇವಕಿ ನಾನು । ವರ ಪ್ರಜ್ಞಪ್ತಿ ದೇವತೆಯು ॥ ೫೨ ॥

ಅರಮಗ ಕಳುಹಿಸೆ ನಿನ್ನಲ್ಲಿಗೆ ಬಂದೆ । ಮೆರೆವ ನಿನ್ನೂರ ಬನದೊಳು ॥
ಧರೆ ತೆರಪಿಲ್ಲದಂದದಿ ಬೀಡನು ಬಿಟ್ಟು । ದೊರೆಯೆ ! ನಿನ್ನಯ ಮುದ್ದು ಕುವರ ॥ ೫೩ ॥

ಇರುತಿರ್ದಪನೆಂದು ಪೇಳಲು ಕೇಳುತ । ವರ ಮೇಘ ರವವನು ಕೇಳ್ದ ॥
ಬರುಹಿಯಂದದಿ ಆರಿವೆರೆಗಂಡ ಕಡಲಂತೆ । ಪುರುಷನು ಬಂಜೆಯಾಗಿರ್ದ ॥ ೫೪ ॥

ತನ್ನ ನಲ್ಲಳು ಗಂಡು ಮಗುವ ಪೆತ್ತಳು ಎಂ- । ಬುನ್ನತ ವಾರ್ತೆಗೇಳ್ವಂತೆ ॥
ತನ್ನ ಮಗನ ಬರವನು ಕೇಳ್ದ ಜಿನಚಂದ್ರ- । ರನ್ನ ಪೆರ್ಚಿದನು ಚಿತ್ತದೊಳು ॥ ೫೫ ॥

ಕರೆಯಿಸಿ ಮಂತ್ರಿಯ ಪುರವ ಸಿಂಗರಿಸೆಂದು । ಒರೆಯಲು ಕಡು ಬೆಡಗಿಂದ ॥
ತರ ತರದಿಂದ ಗಿಂಡಿಯ ಬಟ್ಟೆಲುಗಳ । ಮೆರೆವ ತೋರಣವ ಕಟ್ಟಿಸಿದ ॥ ೫೬ ॥

ತಳಿತವಾಗಲ್ಲಲ್ಲಿ ಪಲವು ಬುರುಜುಗಳು । ತಳಿರು ಝಲ್ಲಿಗಳ ತೋರಣವ ॥
ಘಳಿಲನೆ ಕಟ್ಟಿಸಿ ಕಸ್ತುರಿ ಸಾರಣೆ । ಪೊಳೆದವಲ್ಲಲ್ಲಿ ಬೀದಿಯೊಳು ॥ ೫೭ ॥

ತೋರಮುತ್ತಿನ ರಂಗವಲಿಯಿಂದ ಕುಂಕುಮ । ಕಾರಣೆಯಿಂ ಪನಿನೀರ ॥
ಚಾರುಚಳಯದಿಂದ ಸಿಂಗರವಾಗಲು । ಭೂರಿವಾದ್ಯಗಳು ಮೊರೆದವು ॥ ೫೮ ॥

ಕಳಶಕನ್ನಡಿಗಳ ಬೆಳತಿಗೆಗಂಗಳ । ಎಳೆವೆಂಗಳು ನಡೆ ಮಡಿಯಿಂ ॥
ತಳೆಯ ನೆಳಲಿನಲ್ಲಿ ಮುಂಗಡೆ ನಡೆಯಲು । ಲಲನೆಯರ್ಪಾಡೆ ಶೋಭನವ ॥ ೫೯ ॥

ಪುರಜನ ಪರಿಜನ ದಂಡನಾಯಕ ಮಂತ್ರಿ । ಸರಸ ಕವಿಗಳು ಕೋವಿದರು ॥
ದೊರೆ ದೊರೆಗಳು ಮನ್ನೆಯರು ಸಾಮಂತರು । ಕರುಣಿಕಾದಿಯರೊಡಗೂಡಿ ॥ ೬೦ ॥

ಕರಿಯ ಮಸ್ತಕವೇರಿ ನರನಾಥ ನಡೆತರೆ । ಒರೆಯೆ ಪಾಠಕರು ಗುಣಗಳ ॥
ಗುರುಕುಚೆಯರು ಚಾಮರವಿಕ್ಕೆ ಕೆಲದೊಳು । ತರುಣಿಯರಾಡೆ ನರ್ತನವ ॥ ೬೧ ॥

ಪಲವು ಕೇತನಗಳಾಗಸವನು ತುಂಬಿಸೆ । ಪಲವು ಸತ್ತಿಗೆ ಪಿಡಿದೆತ್ತಿ ॥
ಪಲವಾನೆ ತೇರು ಕುದುರೆ ಭಟರೊಡ ಬರೆ । ನಲವಿಂದಲೂರ ತಾ ಪೊರಟು ॥ ೬೨ ॥

ಮೊರೆವ ವಾದ್ಯದ ರಭಸದೊಳೈತಂದಾಗ । ಪುರದ ಮುಂದಣ ಬಯಲೊಳಗೆ ॥
ಹರುಷದಿಂ ನಿಂದು ತನ್ನಯ ಮುದ್ದು ಕಂದನ । ಬರವ ನಿಟ್ಟಿಸುತ ಮೋಹದೊಳು ॥ ೬೩ ॥

ಅಲ್ಲಿ ಬಂದನು ಸ್ವಾಮಿ ! ಇಲ್ಲಿ ಬಂದನು ಜೀಯ ! । ಇಲ್ಲಿದಕೋ ಬಂದನೆಂದು ॥
ನಿಲ್ಲದೆ ಪೇಳುವರಿಗೆ ವಸ್ತ್ರತೊಡವಿ- । ತ್ತೆಲ್ಲರಗೂಡಿ ನಿಂದಿರಲು ॥ ೬೪ ॥

ಇದು ಜ್ಞಾನಚಂದ್ರಕುಮಾರನ ತೇಜಸ್ಸು । ತ್ರಿದಶ ಲೋಕಕ್ಕೆ ಪೋದಪುದೋ ॥
ಪದಪಿಂದಲೆಂದೆನೆ ಗಗನವ ತುಂಬಿ ತಾ- । ನುದುರುವ ಕೆಂಧೂಳ ಕಂಡು ॥ ೬೫ ॥

ಸುರಸತಿಯರು ಜ್ಞಾನಚಂದ್ರ ಬರುವುದನು । ಎರಕದಿಂ ನೋಡಬೇಕೆಂದು ॥
ಉರದೊಳು ಚೆಲ್ಲಿದ ಕುಂಕುಮರಜಮೆನೆ । ಧರೆಯ ವ್ಯಾಪಿಸಿತು ಕೆಂಧೂಳು ॥ ೬೬ ॥

ತರುಣಿಯರುಗಳು ಢಾಳಿಸುವ ಚಾಮರಗಳ । ಮರುತ ಕೆಂಧೂಳ ತಾ ಕಳೆಯೆ ॥
ಸ್ಮರಸಖ ಪಲವು ಪಗಲು ತೋರುವಂದದಿಂ । ವರಛತ್ರ ಪಲವು ತೋರಿದವು ॥ ೬೭ ॥

ರವಿಬಿಂಬವೊಂದೆ ಲೋಕದೊಳೆಂದು ಪೇಳ್ವರು । ರವಿಬಿಂಬ ಪಲವು ನಡೆಯುತ ॥
ಅವಿರಳದೊಳು ಬರುತಿದೆ ಗಗನದೊಳೆಂತು । ಭುವನೇಶ ಕಂಡ ಪುಷ್ಪಕವ ॥ ೬೮ ॥

ಧರೆಯಾಕಾಶವ ತುಂಬಿದ ಪಡೆಗಂಡು । ವರವಿಧುಗಂಡ ಕೂಪಾರ ॥
ತ್ವರಿತದಿಂದಲೆ ಪೆರ್ಚುವಂತೆ ಶ್ರೀಜಿನಚಂದ್ರ । ನೆರೆ ಸಂತಸದಿಂದುಬ್ಬಿದನು ॥ ೬೯ ॥

ಪೆರೆಯುಂದದೊಳಿರ್ಪಬ್ಧಿ ಮಹಾರ್ಣವ । ಎರಕದಿಂ ಕೂಡುವಂದದೊಳು ॥
ಮೆರೆದವುಭಯಬಲದೊಳಗಿರ್ದ ಸೇನೆಯು । ಸ್ವರದೋರುತ ಕೂಡಿದವು ॥ ೭೦ ॥

ಜನಕನಾನೆಯ ಶಿರವಿಳಿದು ಬರುವುದಾಗ । ತನುಜಾತ ಜ್ಞಾನೇಂದು ಕಂಡು ॥
ಇನಿಸು ಬೇಗದಿ ರತ್ನಶಿಬಿಕೆಯನಿಳಿದು ತಾ । ಮನದಕ್ಕರಿಂದುಡೆ ಸುತ್ತಿ ॥ ೭೧ ॥

ಬಿರುದಾವಳಿಗಳ ಬಗೆಬಗೆಯೊಳಗಾ- । ಗಿರದೆ ಪೊಗಳುವ ವಂದಿಗಳ ॥
ಕರಸನ್ನೆಯಿಂ ನಿಲ್ಲಿಸುತತಿ ಭಕ್ತಿಯಿಂ । ದೊರೆರನ್ನ ತಾನೈತಂದು ॥ ೭೨ ॥

ಸುತ್ರಾಮ ಸಮದ ವೈಭವ ಜಾಣರೊಡೆಯ ಜ- । ಗತ್ರಯ ಭರಿತ ಯಶಸ್ವಿ ॥
ಕ್ಷತ್ರಿಯ ತಿಲಕ ಜತನ ಪರಾಕೆಂದು । ವೇತ್ರಧಾರಿಗಳುಗ್ಘಡಿಸೆ ॥ ೭೩ ॥

ಜಾಳಿಗೆ ಜಾಳಿಗೆಗಳ ತೆಗೆತೆಗೆದಾಗ । ಲೀಲೆಯಿಂದಿಡುತೆಡಬಲಕೆ ॥
ಮೇಲುಪಟ್ಟೆಗಳ ಸುರುಳು ಸುರುಳುಗಳ । ಜಾಲವ ಕೆದರಿ ಹಾಕುತಲಿ ॥ ೭೪ ॥

ನವರತ್ನ ವೃಷ್ಟಿಯು ಕರೆದು ಪಿತನ ಮುಂದೆ । ತವಕದಿಂ ಚಿನ್ನಬೆಳ್ಳಿಗಳ ॥
ನವ ಕುಸುಮಗಳ ಪಾದದ ಮೇಲೆ ಸೂಸುತ । ಸವಿನಯದಿಂದೆರಗಿದನು ॥ ೭೫ ॥

ಎರಗಿದ ಸುತನ ಮಸ್ತಕವೆತ್ತಿ ಬಿಗಿದಪ್ಪಿ । ಕರೆದು ಭಾಷ್ಪಾಂಬು ಕಂಗಳೊಳು ॥
ಹರುಷದಿಂ ಗಲ್ಲವ ಪಿಡಿದು ಮುದ್ದಾಡುತ । ಹರಸಿ ತಾ ಪಲವು ಪರಕೆಯ ॥ ೭೬ ॥

ತಂದೆಯನಗಲ್ದನ್ಯದೇಶದೊಳಿರುತಿರ್ದು । ಬಂದು ಮಗುಳಿ ಕಾಂಬಲ್ಲಿ ॥
ಒಂದು ಸಾಸಿರ ವತ್ಸರವಾಯಿತೇನೆಂಬೆ । ತಂದೆನಂದನರ ಪ್ರೀತಿಗಳ ॥ ೭೭ ॥

ಹರಿಬಲ ಮೊದಲಾದ ದೊರೆಗಳು ಜಿನಚಂದ್ರ । ಧರಣೀಶಗೆ ಕೈಯ ಮುಗಿಯೆ ॥
ಒರೆದರಾಗವರವರುಗಳ ಪೆಸರ್ಗೊಂಡು । ಸ್ವರವೆತ್ತಿ ವೇತ್ರಧಾರಿಗಳು ॥ ೭೮ ॥

ವಿನಯೋಪಚಾರವನವರಿಗೆ ತಾ ಪೇಳಿ । ಮನದಕ್ಕರಿಂ ಜಿನಚಂದ್ರ ॥
ಜಿನ ಸಿದ್ಧ ಶರಣೆಂದು ವಿಜಯಾರ್ಧಗಿರಿಯೆಂ- । ಬನುಪಮ ಗಜವೇರಿದನು ॥ ೭೯ ॥

ದೊರೆದೊರೆಗಳು ಗಜತುರಗರಥಂಗಳ- । ನಿರದೇರಿ ಜ್ಞಾನೇಂದು ಕುವರ ॥
ಹರುಷದಿಂ ತ್ರಿಜಗದ್ಭೂಷಣವೆಂದೆಂಬ । ಕರಿಪತಿ ಸ್ಕಂಧವನೇರಿ ॥ ೮೦ ॥

ಛಿಟಿ-ಛಿಟಿ ಧಮು-ಧಮು ಸರ-ಸರ ಸುರು-ಸುರು । ಫಟಿ-ಫಟಿ ಬುಸ್ಸು ಡಬ್ಬೆಂದು ॥
ಪೆಟಲು ಕೋಟಾಕೋಟಿ ಸೂಡಲಾರ್ಭಟೆ ದಿ- । ಕ್ತಟವ ಮುಸುಕಿದವೇನೆಂಬೆ ॥ ೮೧ ॥

ಆ ವೇಳೆಯೊಳು ಕೋಟಿ ವಾದ್ಯ ರಭಸವು । ತೀವಿತಾಶಾಂಬರಗಳನು ॥
ಭೂವಳಯದೊಳಂಬರಮಾರ್ಗದೊಳಾಗ । ಲಾವಣ್ಯಾಂಘ್ರಿಯರು ಲಾಸ್ಯವನು ॥ ೮೨ ॥

ಅತಿಚದುರಿಂದಲಾಡುತ ಬರುತಿರಲಾಗ । ಶತಸಾಸಿರ ಪಾಠಕರು ॥
ಕ್ಷಿತಿಪರ ಗುಣಕಥನವ ಪೊಗಳುತಲಿರ- । ಲತಿ ಸಂಭ್ರಮದಿ ಕೈಯೆತ್ತಿ ॥ ೮೩ ॥

ಖೇಚರರೆಲ್ಲರು ರವಿಪಥದೊಳು ಬರೆ । ಭೂಚರರೆಲ್ಲರು ತಮ್ಮ ॥
ಆ ಚಮೂ ಸಹವಾಗಿ ಭೂಮಿಯೊಳಗೆ ಬರೆ । ಸೂಚಿಸಲೇನದರಿರವ ॥ ೮೪ ॥

ಗಿರಿಯಾಗೆ ಕರಿಗಳು ತುರಗವು ತೆರೆಯಾಗೆ । ವರಶಂಖವಾಗೆ ಬೆಳ್ಗೊಡೆಯು ॥
ನೊರೆವಿಂದುಗಳಾಗಿ ಶುಭ್ರ ಚಾಮರಗಳು । ಮೆರೆವ ಕಾಲಾಳಾಗೆ ಮೀನು ॥ ೮೫ ॥

ದೊರೆಗಳ ಚೆಂದುಟಿಗಳೆ ಪವಳಗಳಾಗೆ । ವರಲಾವಣ್ಯ ನೀರಾಗೆ ॥
ಮೊರೆವ ವಾದ್ಯವು ಘೋಷರಭಸ ತಾನಾಗಲು । ಶರಧಿಯಂತಾಯಿತಾ ಬಲವು ॥ ೮೬ ॥

ರಥಗಳ ಚೀತ್ಕಾರ ಕರಿಗಳ ಬೃಂಹಿತ । ನುತವೆತ್ತ ವಾಜಿ ಹ್ರೇಷಗಳು ॥
ಪೃತನದ ಕೂಗಾಟವೆಲ್ಲಿ ನೋಡಿದರಾ । ಪೃಥಿವಿಪ ಬಲದೊಳೊಪ್ಪಿಹವು ॥ ೮೭ ॥

ಹರಿಗಳ ಖುರಪುಟದಿಂದೆಳ್ದ ಧೂಳಿಂದ । ಸುರಪಥ ಧರಣಿ ತಾನಾಗೆ ॥
ಕರಿಗಳ ಮದಧಾರೆಯಿಂದ ಭೂತಳವೆಲ್ಲ । ಸರಿತುಗಳಾದವೇನೆಂಬೆ ॥ ೮೮ ॥

ಬರುತ ಬರುತ ದೊರೆ ದೊರೆಗಳು ಕನಕಾದ್ರಿ । ಪುರದ ದ್ವಾರವನೊಳಪೊಕ್ಕು ॥
ಹರುಷದಿಂ ರಾಜವೀಥಿಯೊಳು ವಿಡಾಯದಿಂ । ಮುರಿದು ನಿಟ್ಟಿಸುತಲಾ ಪುರವ ॥ ೮೯ ॥

ಬರುತಿರೆ ಪುರದ ಕಾಂತೆಯರೆಲ್ಲ ನಮ್ಮಯ । ದೊರೆಗುವರ ಜ್ಞಾನಚಂದ್ರ ॥
ಪರದೇಶವ ಪೊಕ್ಕು ಪಲವು ದೇಶಂಗಳ । ದೊರೆಯಾಗಿ ಪಲವು ವಿದ್ಯೆಗಳ ॥ ೯೦ ॥

ಸಾಧಿಸಿಕೊಂಡು ಪಲವು ವಿದ್ಯಾಧರ । ಮೇದಿನಿಪತಿ ನಂದನೆಯರ ॥
ಕಾದಲೆಯರ ಮಾಡಿ ಕೊಂಡು ಬಂದಪ ಗಡ । ಸಾದರದಿಂದಾವು ಪೋಗಿ ॥ ೯೧ ॥

ನೋಡುವ ಬನ್ನಿಮೆಂದೆನುತ ಮಾತಾಡುತ । ಸೂಡಿದ ಕುಸುಮ ಚೆಲ್ಲಿದುದ ॥
ಈಡಾಡಿ ಹೋದ ತೊಡಿನ ಥಟ್ಟೆಗೊಳ್ಳದೆ । ನೋಡದೆ ಸೀರೆ ಪರಿದುದ ॥ ೯೨ ॥

ಮೇಲುಸೆರಗು ಹಾರಿಹೋದುದನರಿಯದೆ । ಕಾಲಂದುಗೆಯ ಲೆಕ್ಕಿಸದೆ ॥
ಓಲಾಡುವ ಮುಡಿ ತುರುಬು ಕೆದರಿದುದ । ಬಾಲಾನಿಕರವರಿಯದೆ ॥ ೯೩ ॥

ತೋರಕುಚಂಗಳು ಕುಣಿಕುಣಿದಾಡಲು । ಹಾರವಲೆಯಲತ್ತಲಿತ್ತ ॥
ಸೀರೆಯುರುಗಳೋಡಿ ಬರುವಾಗನರ ಪೊರ- । ವಾರು ಜಗ್ಗುತ ನಡು ಬಳುಕೆ ॥ ೯೪ ॥

ಕರುಮಾಡಗಳೇರಿ ಸಜ್ಜೆಗಳನು ಹತ್ತಿ । ಚಿರಕೆವರಲ ಸೌಧವಡರಿ ॥
ಮರನೇರಿ ಪೌಳಿಗಳನು ಹತ್ತಿ ಎರಕದಿಂ । ಪುರನಾರಿಯರು ನೋಡಿದರು ॥ ೯೫ ॥

ತ್ರಿಜಗದ್ಭೂಷಣವೆಂಬ ಗಜವನೇರಿ । ಭುಜಗೇಂದ್ರ ವೈಭವದಿಂದ ॥
ದ್ವಿಜರಾಜ ಮಂಡಳ ಛತ್ರದ ನೆರಳೊಳು । ಸುಜನೈಕಬಾಂಧವನೆನಿಸಿ ॥ ೯೬ ॥

ನೊರೆವಿಂಡಿನಂದದ ಪನ್ನೆರಡ್ಚಮರದ । ತರುಣಿಯರಿಕ್ಕೆ ಇಕ್ಕೆಲದಿ ॥
ಸುರಪತಿಯೈರಾವತವೇರಿ ಬರುವಂತೆ । ಬರುವ ಚೆನ್ನಿಗನಾರೆ ಕೆಳದಿ ! ॥ ೯೭ ॥

ಲಲನಾಮಣಿ ! ಕೇಳು ಕಡುಸೊಕ್ಕಿಯುದ್ಧದ । ಕುಲಿಶಗಲನ ರಣದೊಳಗೆ ॥
ನೆಲಕಿಕ್ಕಿ ನೆರಪಿದ ಜ್ಞಾನಚಂದ್ರಮುನಿವ । ಚೆಲುವ ನಮ್ಮರಸನ ಮಗನು ॥ ೯೮ ॥

ಇವನ ಕಾಂತಿಗೆ ಸಮುದಂಗಕಾಂತಿಯುಸುಳ್ಳ । ಜಿನಚಂದ್ರನ ತನುಜಾತ ॥
ಘನಕುಚೆ ! ನೋಡಿವ ನೇತಾಳನ ಗೆಲ್ದ । ಮನುಜಮುಂದಾರ ಜ್ಞಾನೇಂದು ॥ ೯೯ ॥

ಛಪ್ಪನ್ನ ದೇಶದರಸುಗಳ ಮೆಚ್ಚದೆ । ಒಪ್ಪದಿಂ ಸ್ವಯಂವರದೊಳಗೆ ॥
ತೆಪ್ಪದಿ ಕುಳಿತಿರೆ ರತ್ನಾಕರದೇವಿ- । ಯಲ್ಪಮಧ್ಯೆಯನು ವೀಣೆಯೊಳು ॥ ೧೦೦ ॥

ಗೆಲಿದು ಮಾಲೆಯ ಸೂಡಿಸಿ ಕೊಳ್ಳೆ ತರುಣಿಯಿಂ । ಕಲಹಕೆಂದೆರ್ದ ಭೂಭುಜರ ॥
ತಲೆಯ ಚೆಂಡಾಡಿದ ಜ್ಞಾನಚಂದಮುನಿವ । ಕಳಕಂಠನಾದೆ ! ನೋಡೆನಲು ॥ ೧೦೧ ॥

ಎಳೆವೆಣ್ಣುಗಳೆಲ್ಲ ಇಟ್ಟ ದಿಟ್ಟಿಗಳನು । ಬಲುಮೋಹದಿಂದ ತೆಗೆಯದೆ ॥
ಇಳೆಯಾಣ್ಮಸುತನನು ತಮ್ಮ ಚಿತ್ತದೊಳಿಟ್ಟು । ಕಳವಳಿಸುವರು ಕಾತರದಿ ॥ ೧೦೨ ॥

ಏನಾದೊಡಾಗಲಿ ನಾವೆಲ್ಲ ಹೋಗೀಗ । ಜ್ಞಾನಚಂದ್ರನನೆತ್ತಿಕೊಂಡು ॥
ಈ ನಮ್ಮ ಸೌಧದೊಳಗೆ ಇಟ್ಟು ನೆರೆವೆವೆಂ- । ದೂಹಿಸಿದರು ಚಿತ್ತದೊಳು ॥ ೧೦೩ ॥

ಈತನಿಗಲ್ಲದೆ ನಮ್ಮಯ ತಾತರು । ಕೋತಿಮುಸುಡ ಕುವರರಿಗೆ ॥
ಓತೆಮ್ಮನಿತ್ತೊಡೆ ಒಡನೆ ನಾವೆಲ್ಲರು । ವೀತರಾಗನ ರೂಪುಗಳ ॥ ೧೦೪ ॥

ತಳೆವೆವು ಎಂದು ಪ್ರತಿಜ್ಞೆಯ ಮಾಡುತ । ಕಳಶಕುಚೆಯರು ದೊರೆಗಳ ॥
ಪೊಳೆವಂಗವನೆ ಬಾಯನು ಬಿಟ್ಟು ನೋಡುತ । ಸುಳಿವುತಿಹರು ಉಸ್ಸೆಂದು ॥ ೧೦೫ ॥

ಮತ್ತೆ ಕೆಲರು ಸಜ್ಜೆಗಳೊಳು ಕುಳಿತಿರ್ದ । ವೃತ್ತಕುಚೆಯರು ದೊರೆಗಳ ॥
ಅಳ್ತಿವಡುತ ಕೇಳಲು ಕೆಲಬರಲ್ಲಿ । ಬಿತ್ತರಿಸಿದರ್ಪೆಸರ್ಗೊಂಡು ॥ ೧೦೬ ॥

ಅವನೀಗ ಅನುಮತಿ ವೊದಲಾದೆಣ್ಬರ ಪೆತ್ತ । ದಿವಿಚರ ಹರಿಬಲ ನೃಪತಿ ॥
ಅವನ ನೋಡೆಂದು ತೋರಿದಳೋರ್ವ ಕುವರಿಗೆ । ತವಕದಿಂದೋರ್ವ ಭಾವಕಿಯು ॥

ಅವನೀಗ ನಂದವತಿಯರೆಣ್ಬರ ಪೆತ್ತ । ದಿವಿಜೇಂದ್ರಕಾರ್ಮುಕನವನ ॥
ಕುವಲಯಗಂಧಿ ಕುಂಕುಮವರ್ಣೆ ! ನೋಡೆಂದು । ಯುವತಿ ತೋರಿದಳೋರ್ವಳಿಗೆ ॥

ಮುತ್ತಿನ ಸತ್ತಿಗೆ ನೆಳಲೊಳು ವಾಜಿಯ । ಬಿತ್ತರದಿಂದ ಕುಣಿಸುತ ॥
ಉತ್ತರ ಶ್ರೇಣಿಗೊಡೆಯ ಘನರಥನವ । ವೃತ್ತಪಯೋಧರೆ ! ನೋಡು ॥ ೧೦೯ ॥

ಹಸುರುವಾಲನು ಹಾಕಿಸಿಕೊಂಡು ಗಜವೇರಿ । ಮಸಕದಿಂದವೆ ಬರುವಾತ ॥
ಶಶಿಮುಖಿ ! ನೋಡವ ವಜ್ರಾಯುಧನೆಂಬ । ಪೆಸರುಳ್ಳ ಭೂಚರನವನು ॥ ೧೧೦ ॥

ಅವನೀಗ ಜಯಸೇನನವ ಪುಷ್ಪಚೂಲ ಮ- । ತ್ತವ ಹರಿಪುರದ ರಾಜೇಂದ್ರ ॥
ಅವನೀಗ ಗರುಡವೇಗನು ಎಂಬವನೆಂದು । ಯುವತಿಯರಾಡುವ ನುಡಿಯ ॥ ೧೧೧ ॥

ದೊರೆಗಳೆಲ್ಲರು ಕೇಳುತ ವಿಡಾಯದಿಂ । ಕರಿಹಯರಥಗಳನೇರಿ ॥
ಪುರದೈಸಿರಿಯ ನೋಡುತಲೈತರುತಿರೆ । ತರುಣಿಯರಲ್ಲಲ್ಲಿ ನಟಿಸೆ ॥ ೧೧೨ ॥

ಡೊಂಬರುಗಳು ತಟಪಟನೆ ಲಾಗುಗಳನು । ಸಂಭ್ರಮದೊಳು ಹಾಕುತಿರಲು ॥
ಕುಂಭಿನಿಪತಿಗಳು ಮೆಚ್ಚಿ ಭಾಗ್ಯಂಗಳ । ತುಂಬಿ ಕೊಟ್ಟರು ತೃಪ್ತಿಯೆನಲು ॥ ೧೧೩ ॥

ಹಾರಬಂಧದ ನಾಗಬಂಧದ ಛತ್ರದ । ವಾರಿಜಬಂಧ ಮುಂತಾದ ॥
ಆರತಿಗಳ ಬೆಳಗಿದರು ಗಮಕದಿಂದ । ನೀರೆಯರ್ಜ್ಞಾನಚಂದ್ರಮಗೆ ॥ ೧೧೪ ॥

ಹರಳೋಲೆ ರನ್ನಗಂಕಣ ಕಾಂಚೀಧಾಮ । ಕೊರಲಿಗೆ ಹತ್ತ ಕಟ್ಟುಗಳ ॥
ತರುಣಿಯರುಗಳಿಗೆ ಒಲಿದಿತ್ತ ಜ್ಞಾನೇಂದು । ದೊರೆದೊರೆಗಳು ಸಹವಾಗಿ ॥ ೧೧೫ ॥

ಉತ್ತಮ ಗಜವನಿಳಿದು ಜ್ಞಾನಚಂದ್ರಭೂ- । ಪೋತ್ತಮ ಜಿನಚಂದ್ರನೃಪರು ॥
ಚಿತ್ತರದಿಂದೋಲಗಶಾಲೆಗೈತಂದು । ಅಳ್ತಿಯಿಂ ರನ್ನವಿಷ್ಟರದಿ ॥ ೧೧೬ ॥

ಕುಳಿರಲು ದೊರೆ ದೊರೆಗಳು ಇತ್ತರದಲ್ಲಿ। ವಿಳಸಿತ ಭದ್ರಾಸನದಿ ॥
ಕುಳಿತರು ಪಟುಭಟರುಗಳು ಓಲೈಸುತ। ನಲವಿಂದ ನಿಂದುಕೊಂಡಿರಲು ॥ ೧೧೭ ॥

ಜಿನಚಂದ್ರ ಭೂಪನಾ ವೇಳೆಯದೊಳು ತಾ। ಮಿನುಗುವ ಕುಂಕುಮ ರಸವ ॥
ಘನಸಾರ ಕಸ್ತುರಿ ಗಂಧವುಡಿಗಳನು। ಜನಪರಿರ್ದೆಯೊಳು ಶಿರದೊಳು ॥ ೧೧೮ ॥

ಹರಿಸದಿ ಚೆಲ್ಲಿಯಣ್ಪಿಟ್ಟು ಸೇಚಿಸಿ ಮತ್ತೆ। ವರ ಕರ್ಪೂರ ವೀಟಿಕೆಯ ॥
ದೊರೆ ದೊರೆಗಳಿಗೆ ಕೊಡಿಸಿ ತಾ ವಿನಯವ-। ನೊರೆಯೆ ಸಮಸ್ತ ಭಟರಿಗೆ ॥ ೧೧೯ ॥

ಪರಿಮಳ ವಸ್ತು ಪಟ್ಟೆಯ ವೀಳೆಗಳನು। ತರಿಸಿ ತಾ ಕೊಟ್ಟು ಭೂಷಣವ ॥
ವರ ಭೂಷಣಾಂಗದ ಕಲ್ಪತರುವೆ ತಾ-। ನೆರಕದಿಂ ಕೈ ನೀಡಿದಂತೆ ॥ ೧೨೦ ॥

ಜನನಾಥ ಜ್ಞಾನೇಂದು ತರತರವರಿದಾಗ। ಅನುರಾಗವಿಗೆ ಕೊಡಿಸಿದನು ॥
ವಿನಯವ ನುಡಿದು ಸೇನೆಯನೆಲ್ಲ ಬೀಳ್ಕೊಡೆ। ಘನವಾದ ಭೇರಿ ಮೊರೆದವು ॥ ೧೨೧ ॥

ಕರಗಳನೆತ್ತಿ ಪಾಠಕರು ಭೂಪಾಲರ। ಬಿರುದಾವಳಿಗುಳುಗ್ಗಡಿಸೆ ॥
ಧರಣೀಶರು ತನ್ನೊಡಬರೆ ಜ್ಞಾನೇಂದು। ಹರುಷದಿಂ ಬಂದರಮನೆಯ ॥ ೧೨೨ ॥

ದ್ವಾರದೊಳಗೆ ನಿಂದು ಮಂತ್ರಿಯ ಕರೆಯಿಸಿ। ಭೂರಮಣೀಶರಿವರಿಗೆ ॥
ಸೇರುವೆಯಿಂ ಪಡಿ ಬಿಡಾರಗಳನು-। ದಾರಗುಣದಿ ಮಾಡಿಸೆಂದು ॥ ೧೨೩ ॥

ವಿರಚಿಸಿ ಜೀಯ ! ಬಿನ್ನಹವಾಗಳೆ ನಾ-। ನರಮನೆಗಳ ಸಿಂಗರಿಸಿ ॥
ತ್ವರಿತದಿಂದಲೆ ಬಂದೆನೆನೆ ಜ್ಞಾನಚಂದ್ರನು। ದೊರೆ ದೊರೆಗಳಿಗೆ ವಿನಯವ ॥ ೧೨೪ ॥

ನಲವಿಂದ ನುಡಿದು ಬೀಳ್ಕೊಡೆ ಕರಸನ್ನೆಯಿಂ। ಕೆಲಬರ ಕಳುಹಿಸಿ ಕೊಟ್ಟು ॥
ಕೆಲಬರ ಮಸ್ತಕದಲುಹಿಂದ ಕಳುಹಿಸಿ। ಕೆಲಬರ ಕಡೆಗಣ್ಣಿಂದ ॥ ೧೨೫ ॥

ಕೆಲಬರ ನೋಟದಿಂ ಕೆಲಬರ ಪುರ್ವಿನ। ವಿಲಸಿತ ಸನ್ನೆಗಳಿಂದ ॥
ಕೆಲಬರ ವಚನಗಳಿಂದ ಬೀಳ್ಕೊಟ್ಟಾಗ। ಚೆಲುವರ ದೇವ ಜ್ಞಾನೇಂದು ॥ ೧೨೬ ॥

ಅರಮನೆಯನು ಪೊಕ್ಕು ಲಕ್ಷ್ಮೀಮಂಟಪದೊಳು। ದೊರೆರನ್ನ ಜಿನಚಂದ್ರ ನೃಪತಿ ॥
ಹರಿಧನು ಮುಂತಾದ ದೊರೆಗಳು ಸಹವಾಗಿ। ಧರಣೀಶ ಜ್ಞಾನೇಂದು ಕುಳಿರೆ ॥ ೧೨೭ ॥

ತಾರಾಲೋಕದಿಂ ಧರೆಗಿಳಿತರುತಿರ್ದ। ತಾರಾಸತಿಯರೆಂಬಂತೆ ॥
ವಾರಿದ ಸರಣಿಯಿಂದಿಳಿತಂದು ನಟನೆಯಿಂ। ವಾರಿಜಾಕ್ಷಿಯರರಮನೆಯ ॥ ೧೨೮ ॥

ಮೇಲುಭಾಗದಿ ನಿಂದು ರತ್ನಪುಷ್ಪಕಗಳ। ಲೀಲೆಯಿಂದಿಳಿದರಮನೆಗೆ ॥
ಬಾಲಕಿಯರು ಬಂದು ಜಿನಚಂದ್ರ ನೃಪತಿಗೆ। ಮೇಲುರತ್ನಗಳ ಕಾಣಿಕೆಯ ॥ ೧೨೯ ॥

ಹರುಷದಿಂದಲಿ ಕೊಟ್ಟು ಪಾದಕೆರಗಲಾಗ। ಶಿರವಿಡಿದೆತ್ತಿ ನಂದನೆಯರ ॥
ಉರುಮುದದಿಂ ಪೆತ್ತು ಮುತ್ತೈದೆಯರಾಗಿ। ಎರೆಯನೊಳ್ಸುಖ ಬಾಳಿರೆಂದು ॥ ೧೩೦ ॥

ಎರಕದಿಂದವೆ ಬೀಳ್ಕೊಡಲು ನಡೆದುತರೆ । ಸ್ಮರರೂಪ ಜ್ಞಾನೇಂದು ಕುವರ ॥
ಗುರುಕುಚಿಯರು ಸಹವಾಗಿ ತಾಯರಮನೆ- । ಗರಮುಗ ತಾ ಬಂದು ಪೊಕ್ಕ ॥ ೧೩೧ ॥

ಜನನಿ ಶ್ರೀಕಾಂತಾದೇವಿಯ ಕಂಡಾಗ । ಮಿನುಗುವ ರತ್ನದೇಹರವ ॥
ತನಯ ಭಕ್ತಿಯೊಳು ಕಾಣಿಕೆಗೊಟ್ಟು ಚರಣಕೆ । ವಿನಯದಿಂದೆರಗಲು ಶಿರವ ॥ ೧೩೨ ॥

ಪಿಡಿದೆತ್ತಿಯಮುರ್ದಪ್ಪಿ ಗಲ್ಲವನಲುಗುತ । ಒಡನೆ ತೂಪಿರಿದು ಮುಂಡಾಡಿ ॥
ತೊಡೆಯೊಳು ಕುಳ್ಳಿರಿಸಿ ವರ ಸಾಮ್ರಾಜ್ಯವ । ಬಿಡದೆ ನೀನಾಳಿಂದ್ರನಂತೆ ॥ ೧೩೩ ॥

ಜಿನಮತಾಂಬುಧಿಗೆ ನಕ್ಷತ್ರ ನೇಮಿಯಾಗು । ಜಿನಮುನಿ ಪಾದಾಂಬುಜಕೆ ॥
ಮಿನುಗುವ ಮಧುಕರ ನೀನಾಗು ಸಜ್ಜನ- । ವನರುಹ ಭಾಸ್ಕರನಾಗು ॥ ೧೩೪ ॥

ದೊರೆಗಳ ಮಕುಟತಾಟಿತಪಾದಯುಗನಾಗು । ತರುಣೀರ ಲೋಚನವೆಂಬ ॥
ವರ ಕುವಲಯ ಶಶಾಂಕ ನೀನಾಗೆಂದು । ಪರಸಿ ತಾ ಕೋಟಿ ಪರಕೆಯ ॥ ೧೩೫ ॥

ಒಡನೊಡನಮುರ್ದಪ್ಪಿ ನನ್ನಯ ಕಂದನೆ ! । ಕಡು ದೇಶಿಗರ ಮಾಡಿ ನಮ್ಮ ॥
ತಡೆದಿರ್ದೆ ಎನಿಸು ದಿವಸ ಪರಿಯಂತರ । ಒಡಲ ನಿನ್ನಾಶೆಯಿಂದಾವು ॥ ೧೩೬ ॥

ಹೊರೆದು ಸೈರಿಸಿಕೊಂಡಿರ್ದೆವೆಲ್ಲವನದ । ತರಹರಿಪುದೆ ನಮ್ಮ ಪ್ರಾಣ ॥
ವರ ಚಾತಕ ಮೇಘದ ಪನಿ ಪಾರ್ವಂತೆ । ಮರಿಯಾನೆ ! ನಿನ್ನ ನೆನೆವೆವು ॥ ೧೩೭ ॥

ಜನನಿ-ಜನಕರೊಳು ನನ್ನಯ ಕಂದನೆ ! । ಕನಸು-ಮನಸಿನೊಳಾದೊಡೆಯು ॥
ನೆನಹು ನಿನಗೆ ಇಲ್ಲದಾಯಿತಕಟ ! ನಿನ್ನ । ಮನವೇನು ತಾ ನರಗುಲಿಯೋ ॥ ೧೩೮ ॥

ಇಂತಪ್ಪ ವನಿತಾಮಣಿಗಳು ನಿನ್ನಯ । ಸ್ವಾಂತವ ಸೆರೆಗೈದ ಮೇಲೆ ॥
ಎಂತು ನಮ್ಮನು ನೀನು ಹಾರುವೆ ಕಂದಯ್ಯ ! । ಸಂತೋಷ ನಮ್ಮದು ನಿನ್ನ ॥ ೧೩೯ ॥

ಎಂದು ನುಡಿದ ನಿಜ ಜನನಿಯ ಮಾತ ಬೋ- । ಧೇಂದು ಕೇಳುತ ನಸುನಕ್ಕು ॥
ಅಂದೇ ನಾ ಬರುವೆನಮ್ಮಾಜಿ ! ನಿಮ್ಮನು ಬಿಟ್ಟು । ನಿಂದು ಸೈರಿಸುವೆನೆ ನಾನು ॥ ೧೪೦ ॥

ಎಲೆ ಮಾತೆ ! ನಿನ್ನ ಕೇಸಡಿಗಳ ಸೇವೆಯ । ಒಲಿದು ಮಾಡುವ ಜಾಣೆಯರ ॥
ಪಲವು ಸೇವಕಿವೆಂಗಳ ತಂದೆ ತಡವಾಯ್ತು । ಗೆಲವಿಂದ ನೋಡಿವರೀಗ ॥ ೧೪೧ ॥

ಎನಲು ತಾ ಶ್ರೀಕಾಂತಾದೇವಿ ನಸುನಕ್ಕು । ತನುಜ ! ನೀನಿಂತು ನುಡಿವರೆ ॥
ಮನೆಗೆ ಮಂಗಲವಾದ ಮಹಾಲಕ್ಷ್ಮಿಯರನು । ನನಗೆ ಮುದ್ದಿನ ಸೊಸೆಯರನು ॥ ೧೪೨ ॥

ಕುಲವ ಬೆಳಗುವ ಕುಲಾಂಗನೆಯರ ನನ್ನ । ಚೆಲುವ ಮಗನ ಮಡದಿಯರ ॥
ಪಳಿವರಿಯಣ್ಣಾಜಿಯೆನೆ ಸೊಸೆಯರುಗಳು । ಒಳಗುಬ್ಬಿ ನಗುತಲಿರುವರು ॥ ೧೪೩ ॥

ಅನಿತರೊಳಗೆ ತಾಯ ತೊಡೆಯಿಂದಲಿಳಿದಾಗ । ಕನಕಪೀಠದೊಳು ಕುಳ್ಳಿರಲು ॥
ಮನದಕ್ಕರಿಂದ ಕಾಣಿಕೆಯ ತಮ್ಮತ್ತೆಗೆ । ವನಿತೆಯರಿತ್ತರಿಂತೆನಲು ॥ ೧೪೪ ॥

ನೆನೆದಲ್ಲಿಗೆ ಮೆಟ್ಟಲು ಕೊಂಡುಪೋಗುವ । ಮಿನುಗುವ ಮುತ್ತಿನಾವುಗೆಯ ॥
ಅನುಮತಿದೇವಿಯತ್ತೆಗೆ ಕಾಣಿಕೆಗೊಟ್ಟು । ವಿನಮಿತೆಯಾದಳು ಪದಕೆ ॥ ೧೪೫ ॥

ನೀರ ತಳಿದರೆ ಕಾಣಿಸಿಕೊಂಬುದಲ್ಲದೆ । ತೋರದು ಕಣ್ಣಿಗಂತಪ್ಪ ॥
ಸೀರೆಯ ನಂದವತಿಯು ಕಾಣಿಕೆಗೊಟ್ಟು । ಚಾರುಪಾದಕೆ ಮುಗ್ಗಿದಳು ॥ ೧೪೬ ॥

ತೂಗೆಂದರೆ ತೂಗುವ ಬೇಡೆಂದರೆ । ಬೇಗದೊಳಗೆ ನಿಲುವಂತ ॥
ಸೋಗೆ ನವಿಲ ತೂಗುಮಂಚವನೊಲಿದಿತ್ತು । ಬಾಗಿದಳಂಗಕ್ಷಮಾಲೆ ॥ ೧೪೭ ॥

ಕರಿಯಾದಿ ಪದಿನಾರು ಸ್ವಪ್ನವ ಬಳಸಿರೆ । ಶಿರದೊಳೆಡದ ಕರವಿಟ್ಟು ॥
ಪುರುಜಿನಾರ್ಭಕನು ಮಗ್ಗಲಿ ಮಲಗಿರುತಿರೆ । ಮರುದೇವಿಯಮ್ಮನ ರೂಪ ॥ ೧೪೮ ॥

ಬರೆದಿರ್ದ ಚಿನ್ನದ ರೇಷಿನ ಪಟವನು । ತೆರೆದತ್ತೆಯ ಮುಂದೆ ಇರಿಸಿ ॥
ಚರಣಕೆ ಮಂಡೆಯನಿಟ್ಟಳು ರತ್ನಾ- । ಕರೆಯತಿ ಭಕ್ತಿಯಿಂ ತಾನು ॥ ೧೪೯ ॥

ಬಿಸುತಪ್ಪ ಗಾಳಿ ಬೇಕೆಂದೊಡೆ ಮನದೊಳು । ಒಸೆದು ತಣ್ಣೆಲರು ಬೇಕೆಂದು ॥
ಕುಸಲದಿಂ ಬೀಸಿಕೊಳಲು ಕೊಡುತಿರುತಿರ್ದ । ಪೊಸ ರನ್ನ ಕೀಲಿತವಾದ ॥ ೧೫೦ ॥

ಕನಕದ ಹಿಡಿಯುಳ್ಳ ಚೀರಣೆಗೆಲಸದ । ಮಿನುಗುವ ಬೀಸಣಿಗೆಯನು ॥
ಮನ್ನದಕ್ಕರಿಂದ ಕಾಣಿಕೆಗೊಟ್ಟತ್ತೆಗೆ । ಕನಕಲತೆಯು ನಮಿಸಿದಳು ॥ ೧೫೧ ॥

ಪಂಚ ಕೋಟಿಗೆ ಬೆಲೆಯಾದ ಮುತ್ತಿನದೊಂದು । ಪಂಚ ಸರವ ಕಾಮಲತೆಯು ॥
ತಾಂ ಚದುರಿಂದತ್ತೆಗೆ ಕಾಣಿಕೆಗೊಟ್ಟು । ಚಂಚಲಾಕ್ಷಿಯು ನಮಿಸಿದಳು ॥ ೧೫೨ ॥

ಸುರುಳಿ ನೋಡಿದೊಡೆ ಬೋರೆಯಹಣ್ಣಿನನಿತೆಯೆ । ನೆರೆದ ಜಾಣರಿಗೆ ಕಾಣಿಸುವ ॥
ವರ ಚೀನಿಗೆಲಸದ ರವಕೆ ಕಾಣಿಕೆಗೊ- । ಟ್ಟೆರಗಿದಳ್ಮದನ ಸೌಂದರಿಯು ॥ ೧೫೩ ॥

ಗದುಗುದುರುಣಿಗಾತ್ರದ ತೋರಮುತ್ತಿನ । ಸದಮಲದಾಣಿ ಮೂಗುತಿಯ ॥
ವಿಧುಲೇಖೆಯತ್ತೆಮ್ಮಗೆ ಕಾಣಿಕೆಗೊಟ್ಟು । ಪದತಳಕೆರಗಿದಳೊಲಿದು ॥ ೧೫೪ ॥

ಕೆಲಬರು ವೀಣೆ ಕತ್ತುರಿಯನು ಕೆಲಬರು । ಮಲಯಜಗಂಧಪುಣುಗನು ॥
ಕೆಲಬರು ನೂತನವಾದ ಮಂಜೂಷವ । ಕೆಲಬರು ಸಣ್ಣ ಚವರಿಯ ॥ ೧೫೫ ॥

ಕೆಲಬರು ರನ್ನದ ನಿಲುಗನ್ನಡಿಯನು । ಕೆಲಬರು ಕಾಂಚೀಧಾಮವನು ॥
ಕೆಲಬರು ನವರತ್ನಖಚಿತದಡ್ಡಣಿಗೆಯ । ನಲವಿಂದ ಕಾಣಿಕೆಗೊಟ್ಟು ॥ ೧೫೬ ॥

ಚರಣಕ್ಕೆರಗಿದ ಸೊಸೆಯರನು ಜಿಗಿದಪ್ಪಿ । ಧರೆಯನೆಲ್ಲವ ಬಿಡದಾಳ್ವ ॥
ವರ ಪುತ್ರಪೌತ್ರಪ್ರಪೌತ್ರರ ಪಡೆಯಿರಿ । ಪರಮಾಯುಷ್ಯವನಾಂತು ॥ ೧೫೭ ॥

ವರ ಮುತ್ತೈದೆಯರುಗಳಾಗಿ ಭಾಗ್ಯವ । ನೆರೆ ಪಡೆದು ಭಾಗ್ಯವೆಂಬ ॥
ಶರಧಿಯೊಳಗೆಯೋಲಾಡಿ ಬಾಳಿರಿ ಎಂದು । ಪರಸಿ ಪಲವು ಪರಕೆಗಳ ॥ ೧೫೮ ॥

ದೊರೆ ಜ್ಞಾನಚಂದ್ರನ ಮುತ್ತಿನ ಹಸೆಯೊಳು । ಹರಿಸದಿಂದಲೆ ಕುಳ್ಳಿರಿಸಿ ॥
ತರುಣಿಯರೆಡಬಲದೊಳು ಕುಳ್ಳಿರಿಸಿ । ವರ ಶೋಭನ ಧವಳಗಳ ॥ ೧೫೯ ॥

ತರಳೆವೆಣ್ಣುಗಳು ಪಾಡುತಲಿರೆ ಶಿರದೊಳು । ಹರಸಿ ಮುತ್ತಿನ ಸೇಸೆದಳಿದು ॥
ಮಿರಿ ಮಿರಿ ಮಿಂಚುವ ಮಿಸುನಿ ದಟ್ಟಣೆಗಳಿಂ । ಸಿರಿಕಾಂತೆಯಾರತಿ ಬೆಳಗಿ ॥ ೧೬೦ ॥

ಮರಳಿ ಮರಳಿಯಾಶೀರ್ವಾದವನು ಮಾಡಿ । ಎರಕದಿಂ ಮುತ್ತಿನಕ್ಷತೆಯ ॥
ಕಿರುವರೆಯದ ಸೊಸೆಯರು ಸೋವಿಲ ತುಂಬಿ । ವರ ಫಲಗಳನಿಟ್ಟದರೊಳು ॥ ೧೬೧ ॥

ತನ್ನ ಮಗನ ಮೊಗವನು ಸೊಸೆಯುಂದಿರ । ಚೆನ್ನೆ ತಾ ನೋಡಿ ಸಂತಸದ ॥
ಮುನ್ನೀರ ನಡುವೆ ಮುಳುಗಿಯಾಡಿದಳು ಗು- । ಣೋನ್ನತೆ ಶ್ರೀಕಾಂತಾದೇವಿ ॥ ೧೬೨ ॥

ಜಿನಚಂದ್ರ ನೃಪನತ್ತ ಪುರದೊಳೋಕುಳಿಯ । ಘನವಾಗಿ ಮಾಡಿಸಿ ಜನಕೆ ॥
ಮನದಣಿವಿನ ಭೂರಿದಾನಗಳನು ಕೊಟ್ಟು । ಜನಪರಿಗುಡುಗೊರೆಗೊಟ್ಟು ॥ ೧೬೩ ॥

ಇರುತಿರೆ ಹರಿಬಲ ಮುಂತಾದ ದೊರೆಗಳು । ಹರುಷದಿಂ ನಿಜಸುತೆಯರಿಗೆ ॥
ವರ ವಸ್ತುತತಿಗಳ ಬಳುವಳಿಗಳನು ತಾ- । ವೆರಕದಿಂ ಕೊಟ್ಟರಾಗಿಂತು ॥ ೧೬೪ ॥

ಚಿನ್ನದ ಸರಿಗೆಯ ಸೀರೆಯ ಹತ್ತೆಂಟು । ರನ್ನದ ಪೆಟ್ಟಿಗೆ ತುಂಬಿ ॥
ಚೆನ್ನೆಯರಿಗೆ ಸಂತಸದಿಂದವೆ ಗು- । ಣೋನ್ನತರಿತ್ತರರ್ತಿಯೊಳು ॥ ೧೬೫ ॥

ಬರಹದ ಸೀರೆಯ ನಾಲ್ಕೈದು ಪೆಟ್ಟಿಗೆ । ಸುರುಚಿರ ಚಂದ್ರಗಾವಿಗಳ ॥
ವರ ವಸ್ತ್ರವ ಹತ್ತೆಂಟು ಮಂಜೂಷವ । ತರಿಸಿಕೊಟ್ಟರು ಸುತೆಯರಿಗೆ ॥ ೧೬೬ ॥

ಕರಿಯ ಉದಯರಾಗದ ಬಾಣಗೆರೆಯುದ । ಮೆರೆವಪ್ಪಗೊಳದಪ್ಪಳಿಯ ॥
ಹರಿತ ವರ್ಣದ ಪಟ್ಟೆ ಪೀತಾಂಬರಗಳ । ಭರದಿ ಹತ್ತೆಂಟು ಪೇಟಕವ ॥ ೧೬೭ ॥

ಚೀನಿ ಚೀನಾಂಬರ ಹತ್ತೆಂಟು ಪೆಟ್ಟಿಗೆ । ಚೀನಿಗೆಲಸದ ಕಂಚುಕವ ॥
ಏನ ಹೇಳುವೆ ಈರಾರು ಮಂಜೂಷೆಯ । ಮಾನವೇಂದ್ರರು ಕೊಟ್ಟರಾಗ ॥ ೧೬೮ ॥

ಹರಳೋಲೆ ಬಂದಿ ನೂಪುರ ಮುತ್ತಿನ ಸರ । ಜೆರಕೆ ರತ್ನಗಳಿಂದ ಸಮೆದ ॥
[illegible] ಕಂಠಮಾಲೆ ಕಾಂಚೀಧಾಮ ಮುಂತಾದ । ಸುರುಚಿರಾಭರಣ ಹತ್ತೆಂಟು ॥ ೧೬೯ ॥

ಕನಕನಿರ್ಮಿತಮಾದ ಬೊಕ್ಕಸದೊಳು ತುಂಬಿ । ಜನಪರು ತಮ್ಮ ಮಕ್ಕಳಿಗೆ ॥
ಘನ ಘನವಾಗಿ ತರಿಸಿಕೊಟ್ಟರೇನೆಂಬೆ । ತನುಜೆಯರೊಳು ಮಮತೆಯನು ॥ ೧೭೦ ॥

ಸರಸ ವಿನೋದವ ಮಾತನಾಡುವ ಚೊ- । ಕ್ಕರಗಿಳಿಗಳ ಹತ್ತೆಂಟ ॥
ವರ ಪುಟ ಪಂಚವರ್ಣದ ಗಿಳಿ ಹತ್ತೆಂಟ । ತರಿಸಿಕೊಟ್ಟರು ಸುತೆಯರಿಗೆ ॥ ೧೭೧ ॥

ಬಾಲಕಿಯರ ಬೇಸರು ಪರಿಹಾರಕೆ । ನೀಲಕಂಠಗಳ ಹತ್ತೆಂಟ ॥
ಲೋಲನೇತ್ರೆಯರಾಸರ ಹಿಂಗಿಪುದಕೆ । ಬಾಲಕರೇಣು ಹತ್ತೆಂಟ ॥ ೧೭೨ ॥

ಹರಿಣಲೋಚನೆಯರ ಹರಿದಾಟಕೆ ಹುಲ್ಲೆ । ಮರಿಗಳ ಹಂಸೆ ಮರಿಗಳ ॥
ಮರೆಗಳ ಮರಿಗಳ ತರಿಸಿಕೊಟ್ಟರು ತಮ್ಮ । ವರ ನಂದನೆಯರಿಗೆ ನೃಪರು ॥ ೧೭೩ ॥

ಹಡಪವಿಡಿವರ ಕಾಳಂಚಿಯ ಪಿಡಿವರ । ಪಡಿಗವಿಡಿವ ಕಂಚು ಪಿಡಿವ ॥
ಬಿಡದೆಡವಕೆ ಕರಗಗಳನು ಪಿಡಿದಿರ್ಪ । ಕಡು ಸೇವಕಿಯರನಿತ್ತಾಗ ॥ ೧೭೪ ॥

ದಿನಚರಿ ಪರಿಮಳದರಳ ಪೂಸರವನು । ವನಿತೆಯರಿಗೆ ಕೊಡುವುದಕೆ ॥
ಜನಪರು ಮಾಲೆಗಾತಿಯರ ನೇಮಿಸಿದರು । ತನುಜೆಯರಿಗೆ ಪ್ರೀತಿಯಿಂದ ॥ ೧೭೫ ॥

ಇವು ಮೊದಲಾದ ಪಲವು ಬಳುವಳಿಗೊಟ್ಟು । ಕುವರಿಯರನು ಸಂತೈಸಿ ॥
ದಿವಿಚರ ಭೂಚರ ನೃಪರೆಲ್ಲ ಜ್ಞಾನೇಂದು । ಕುವರನ ಬಳಿಗೈತಂದು ॥ ೧೭೬ ॥

ಪಲವು ತೊಡವುಗಳ ಪಲವು ದುಕೂಲವ । ಪಲವಾನೆ ತೇಜಿ ತೇರುಗಳ ॥
ಚೆಲುವರ ದೇವನೆನಿಸಿದ ತಮ್ಮಳಿಯಗೆ । ನಲವಿಂದ ಕೊಟ್ಟಾಗವರು ॥ ೧೭೭ ॥

ಅಳಿಯನ ಬಿಗಿಯಪ್ಪಿ ನಾವು ನಮ್ಮಯದೊಂದು । ಪೊಳಲುಗಳನು ಬಿಟ್ಟು ಬಂದು ॥
ಇಳೆಯಾಣ್ಮ ಬಹಳ ದಿವಸವಾಯಿತೆಂದಾ- । ಗಳಿಯಗೆ ಸೂಚನೆ ಮಾಡಿ ॥ ೧೭೮ ॥

ಜಿನಚಂದ್ರ ನೃಪನೆಡೆಗೈತಂದು ಜ್ಞಾನೇಂದು । ಜನಕ ! ನಮ್ಮಯ ಮಾತುಳರು ॥
ಮಿನುಗುವ ತಮ್ಮ ಪಟ್ಟಣಕೆ ಪೋಪೆವು ಎಂದು । ಮನುಜೇಶರು ಪೇಳುತವರೆ ॥ ೧೭೯ ॥

ಎನಲಾಗ ಜಿನಚಂದ್ರ ವಿನಯೋಕ್ತಿಗಳಾಡಿ । ಜನಪತಿಗಳಿಗುಡುಗೊರೆಯ ॥
ಮಿನುಗುವಾಭರಣಗಳನು ಕೊಟ್ಟಮರ್ದ- । ಪ್ಪಿನಿಸು ದೂರವು ನಡೆತಂದು ॥ ೧೮೦ ॥

ಹರುಷದಿ ಸಾಗು ಕಳುಹಿಕೊಟ್ಟು ತನ್ನಯ । ವರ ಸುತ ಜ್ಞಾನೇಂದುಗೂಡಿ ॥
ಅರಸುಗಳೀರ್ವರು ಕನಕಪುರವ ಪೊ- । ಕ್ಕರಮನೆಗಾಗೈತಂದು ॥ ೧೮೧ ॥

ಇರುತಿರಲಿತ್ತ ಜ್ಞಾನೇಂದು ಉಮ್ಮಳಿಸುವ । ತರುಣಿಯರುಗಳ ಸಂತೈಸಿ ॥
ಸುರಪತಿ ಸುರಸತಿಯರೊಳು ಮೆರೆಯುವಂತೆ । ಅರಸಿಯರೊಳು ಸುಖಮಿರಲು ॥ ೧೮೨ ॥

ಜಿನಮತಾಂಬರ ಸೂರ್ಯ ಜಿನಮುನಿ ಸೇವಕ । ಜಿನಪಾದಕಮಲದ್ವಿರೇಫ ॥
ವನಿತಾಲೋಚನ ಕೈರವಚಂದ್ರಮ । ಜಿನಚಂದ್ರಸೂನುವೊಪ್ಪಿದನು ॥ ೧೮೩ ॥

**॥ ಅಂತು ಸಂಧಿ ೨೧ಕ್ಕಂ ಪದ ೨೯೫೭ಕ್ಕಂ ಮಂಗಲಂ ॥**

# ಮುನಿಯು ನಿಂದೆ.

ಜಿನಚಂದ್ರನೃಪ ನಿಜಪೂರ್ವಭವಗಳನು। ಮುನಿಯುಗದೊಳು ಕೇಳ್ದುದುಸುರ್ವೆ॥ಪ॥

ನವಕೇವಲಲಬ್ಧ್ಯಬ್ಧಿವರ್ಧನಚಂದ್ರ !। ದಿವಿಜಪೂಜಿತ ದಿವ್ಯ ಚರಣ ! ॥
ಭವಸಾಗರೋತ್ತಾರಣ ಚೈತ್ರ **ಶಾಂತೀಶ** !। ನವಗೆ ಕೊಡಮೃತ ಸುಖವನು ॥ ೧ ॥

ಒಂದಾನೊಂದು ಪಗಲು ಜಿನಚಂದ್ರನು ।-ನಂದನ ಜ್ಞಾನೇಂದು ಕೂಡಿ ॥
ಸೌಂದರಾಂಗನು ಚಿತ್ರದ ಚಾವಡಿಯೊಳು । ಬಂದೋಲಗಗೊಟ್ಟಿರಲು ॥ ೨ ॥

ಮೊರೆದವು ಕೋಟಿ ವಾದ್ಯಗಳು ಭೂಭುಜರೆಲ್ಲ। ನೆರೆದು ಬಂದಾಗ ನೃಪರಿಗೆ ॥
ಕರಗಳ ಮುಗಿದು ಸಾಲಾಗಿ ನಿಂದಿರ್ದರು । ಕರವೆತ್ತಿ ಭಟ್ಟರು ಪೊಗಳೆ ॥ ೩ ॥

ಉಡೆ ಸುತ್ತಿ ಕೈಯೊಳು ಪುಷ್ಪ ಫಲಂಗಳ । ಪಿಡಿದು ಬಿನ್ನಣ ಬೆಡಗಿಂದ ॥
ಕಡು ಬೇಗದಿಂ ಬಂದು ನೃಪನ ಸಭೆಯ ಪೊಕ್ಕು । ಪೊಡವಿಪ ಜಿನಚಂದ್ರ ನೃಪನ ॥ ೪ ॥

ಪಿರಿದು ಸಂತಸದಿಂದ ಕಂಡು ಕಾಣಿಕೆಗೊಟ್ಟು। ಧರಣಿಯಾಲಿಂಗಿತನಾಗಿ ॥
ಕರಗಳ ನೊಸಲಿಗೆ ತಂದಾ ವನಪಾಲ । ನರನಾಥ ! ಬಿನ್ನಹವೀಗ ॥ ೫ ॥

ಅನಿಮಿಷಪತಿಯ ಕಾಂಡಾವನಕ್ಕೆಣೆಯಾದು- । ದೆನೆ ನಮ್ಮೂರ ವನದೊಳು ॥
ಘನ ಪಾಪ ವನವಹ್ನಿ **ಜಯ-ವಿಜಯ**ರೆಂ- । ಬನುಪಮ ಕೇವಲಿಯುಗವು ॥ ೬ ॥

ಗಂಧಕುಟಿಗಳು ಎರಡು ಸಹವಾಗೀಗ । ಬಂದು ನೆಲಸಿದವು ಜೀಯ ! ॥
ಎಂದು ಬಿನ್ನವಿಸಲು ಜಿನಚಂದ್ರ ಜ್ಞಾನೇಂದು । ತಂದು ನೊಸಲಿಗೆ ಕೈಗಳನು ॥ ೭ ॥

ಹರಿಪೀಠದಿಂದೆದ್ದಾ ದೆಸೆಗೇಳಡಿ। ದೊರೆಗಳು ನಡೆದು ನಿರ್ಭರದಿ ॥
ಪರಮ ಭಕ್ತಿಯೊಳು ಸಾಷ್ಟಾಂಗವೆರಗಿದರು । ವರ ಸಪ್ತ ಪರಮಸ್ಥಾನಗಳು ॥ ೮ ॥

ದೊರೆ ಕೊಳಲೆಮಗೆಂದು ಒಸಗೆವೇಳಿದನಿಗೆ । ಇರದಿತ್ತಂಗ ಚಿತ್ತವನು ॥
ಭರದಿಂದಾನಂದ ಭೇರಿಯ ಪೊಡಯಿಸೆ । ಸ್ವರವೆಂಟು ದಿಕ್ಕನು ತುಂಬೆ ॥ ೯ ॥

ಪುರಜನ ಪರಿಜನ ದೊರೆಗಳಾ ರವ ಕೇಳಿ । ಪರಮಾನಂದವನೈದಿ ॥
ಮುರುಕದಿಂದವೆ ಸಿಂಗರದೊಟ್ಟು ರಥ ಹಯ । ವರ ಶಿಬಿಕಂದಣವೇರಿ ॥ ೧೦ ॥

ಕಡು ಸಂಭ್ರಮದಿಂದಷ್ಟವಿಧಾರ್ಚನೆ- । ವಿಡಿದು ಬರಲು ಗಮಕದೊಳು ॥
ಪೊಡವಿಪ ಜಿನಚಂದ್ರ ಕೌರವರೀರ್ವರಾ- । ಗಡರಿ ಗಜಂಗಳ ಶಿರವ ॥ ೧೧ ॥

ಜನಪರು ಬರುತಿರೆ ವಾದ್ಯ ಕೋಟಾಕೋಟಿ । ದನಿದೋರಲಾ ವೇಳೆಯೊಳು ॥
ಅನುಮತಿ ಮೊದಲಾದ ಸೊಸೆಯರು ಸಹ ಬರೆ । ವನಿತೆ ಶ್ರೀಕಾಂತಾದೇವಿ ॥ ೧೨ ॥

ಹರಿಸದಿಂದಲೆ ಮುತ್ತಿನ ಶಿಬಿಕೆಯನೇರಿ । ಬರುತಿರಲತ್ತ ಲೀಲೆಯೊಳು ॥
ಅರಸುಗಳೀರ್ವರು ಉದ್ಯಾನವನಕಾಗಿ । ತೆರಳಿ ಬಂದತಿದೂರದೊಳು ॥ ೧೩ ॥

ವಾರಣಗಳ ತಾವಿಳಿದು ನಡೆದು ಬಂದು । ಧೀರರು ಗಂಧಕುಟಿಯನು ॥
ಮೂರು ಸೂಳಿಂದ ಪ್ರದಕ್ಷಿಣೆಗೈದಾಗ । ಮಾರಾರಿ ಜಿನಯುಗಕೆರಗಿ ॥ ೧೪ ॥

'ಜಯ ಜಯ ಕರ್ಮಕಾಂತಾರಪಾವಕಶಿರ ! । ಜಯ ಜಯ ಶರ್ಮದಾಯಿಕರ ! ॥
ಜಯ ಮೋಕ್ಷಲಕ್ಷ್ಮೀಪ್ರಾಣನಾಯಕಶಿರ ! । ಜಯ'ವೆಂದು ನುತಿಗೈದು ಬಂದು ॥ ೧೫ ॥

ಮನುಜಕೋಷ್ಠದೊಳು ಕುಳಿತು ಕೆಲವು ಪೊತ್ತು । ಜಿನರ ದಿವ್ಯಾಂಗವ ನೋಡಿ ॥
ಜಿನಚಂದ್ರ ನೃಪನೆದ್ದು ಜಿನರಿಗೆ ಕೈಮುಗಿ- । ದನುಪಮ ಧರ್ಮವ ಕೇಳಿ ॥ ೧೬ ॥

ಬಳಿಕಾ ಘಾತಿಹರಣ ಜಯ ಜಿನರನು । ಖಳ ಕರ್ಮ ಬಲೆಯೊಳು ಸಿಲುಕಿ ॥
ತೊಳಲಿದೆನ್ನಯ ಪೂರ್ವಭವವನಿರವಿಸೆಂ- । ದಿಳೆಯಾಣ್ಮ ಬಿನ್ನಹ ಮಾಡೆ ॥ ೧೭ ॥

ಮೃದು ಗಂಭೀರ ಮಧುರವಾದ ಸ್ವರದಿಂದ । ಒದವಿ ನುಡಿದರಿಂತೆಂದು ॥
ಸದಮಲ ಜಿನಚಂದ್ರ ನೃಪ ! ಕೇಳು ನಿನ್ನಯ । ಮೊದಲ ಭವಗಳ ಪೇಳುವೆವು ॥ ೧೮ ॥

ಸುರಗಿರಿ ಯಮನ ದಿಕ್ಕಿನೊಳು ರಾಜಿಸುತಿರ್ಪ । ಭರತಾರ್ಯಖಂಡ ಮಧ್ಯದೊಳು ॥
ಕೆರೆಗಳಿಂ ನದ-ನದಿ, ವಾಪಿ-ಕೂಪಗಳಿಂದ । ಮೆರೆವ ಗಂಧರ್ವ ದೇಶದೊಳು ॥ ೧೯ ॥

ಅರುಹನಾಲಯದಿಂದ ಪರಮ ಮುನಿಗಳಿಂದ । ದೊರೆ ದೊರೆಗಳ ಸೌಧದಿಂದ ॥
ಕರ ಶೋಭಿಪ ಶೈಲಪುರವಿಹುದದನಾಳ್ವ । ಸ್ಮರ ಸನ್ನಿಭ ತೇಜಸ್ವಿ ॥ ೨೦ ॥

ಸಕಲ ಭೂಪಾಲ ಮಕುಟತಾಟಿತಪಾದ- । ನಕಲಂಕಕೀರ್ತಿ ಸಂಪನ್ನ ॥
ಸುಕವಿ ಜನಾನಂದನಜಿತಂಜಯನೆಂಬ । ವಿಕಸಿತ ವದನನೊಪ್ಪಿದನು ॥ ೨೧ ॥

ಅವನಿಗೆ ಪ್ರಾಣೇಶ್ವರಿಯಾದಳಾಗೋರ್ವ । ದಿವಿಜಾಂಗನೆ ಸಮರೂಪೆ ॥
ಕುವಲಯಗಂಧಿ ಕುಮುದನೇತ್ರೆ ನಳಿತೋಳ । ನವ ಯೌವನೆ ನಳಿನಾಸ್ಯೆ ॥ ೨೨ ॥

ರೂಪಿಣಿದೇವಿಯೆಂಬಳು ಆ ಮಿಥುನಕ್ಕೆ । ಚಾಪವಿದ್ಯಾಚಾರ್ಯ ಚದುರ ॥
ಪಾಪಾರಣ್ಯಪಾವಕ, ಪುಣ್ಯವಂತನು । ರೂಪ ಕಂದರ್ಪ ಸುಜಾಣ ॥ ೨೩ ॥

ಪರದಾರಾಸೋದರ ಜಿತಶತ್ರುವೆಂದೆಂಬ । ಮುರುಕದ ನಂದನನಾಗಿ ॥
ಇರುತಿರಲಜಿತಂಜಯರಾಜ ರಾಜ್ಯವ । ಧರೆ ಬಣ್ಣಿಸಲಾಳುತಿರಲು ॥ ೨೪ ॥

ಒಂದಾನೊಂದು ದಿನದ ರಾತ್ರಿಯೊಳಾ- । ನಂದದಿಂ ಸಜ್ಜೆಮನೆಯೊಳು ॥
ಚಂದದಿಂ ಪವಡಿಸಿರಲುಯಜಿತಂಜಯ- । ನಂದಿನ ಬೆಳಗು ಜಾವದೊಳು ॥ ೨೫ ॥

ಸುರಭೂಜವರಮನೆ ಬಾಗಿಲಿಗೈತಂ- । ದುರು ಫಲತತಿಗಳ ಕೊಡದೆ ॥
ತಿರುಗಿ ಹೋಗುವ ದುಃಸ್ವಪ್ನವ ತಾ ಕಂ- । ಡರಸು ಧಿಗಿಲನೆಚ್ಚತ್ತು ॥ ೨೬ ॥

ಗುಗರುಳ್ಳೈವರುಗಳ ನಾಮೋಚ್ಚರಣೆಯ । ದೊರೆರನ್ನ ಮಾಡುತಾ ಇರುಳು ॥
ಭರದಿಂದ ಕಳೆದಿನನುದಯದೊಳಗೆ ಎದ್ದು । ಅರಸು ಮಜ್ಜನವನು ಮಾಡಿ ॥ ೨೭ ॥
ಜಿನಪತಿಗಭಿಷೇಕ ಪೂಜೆಯ ಮಾಡಿಸಿ । ಮುನಿಗಳಿಗನ್ನದಾನವನು ॥
ಮನದಕ್ಕರಿಂದೀವುತ ದುಃಸ್ವಪ್ನ- । ಜನಿತ ಫಲವು ಕೆಡಲೆಂದು ॥ ೨೮ ॥
ವರ ಶಾಂತಿಕಪೌಷ್ಠಿಕ ಮೊದಲಾದವ- । ನರುಹನಾಲಯದೊಳು ನಿಚ್ಚ ॥
ಹರುಷದಿಂ ನಡೆಸುತಲಜಿತಂಜಯ ನೃಪ- । ನಿರುತಿರಲೊಂದು ಪಗಲೊಳು ॥ ೨೯ ॥
ಮಾಸೋಪವಾಸದ ಪಾರಣೆದಿನದೊಳು । ವಾಸವಾರ್ಚಿತ ದಿವ್ಯ ಚರಣ ॥
ಪೂಸರ ಮದಮರ್ದನ ಪ್ರಿಯಧರ್ಮರೆಂ- । ಬ ಸಾಧು ಮುನಿಯರಮನೆಗೆ ॥ ೩೦ ॥
ಧರೆಯ ಶೋಧಿಸುತ ಭ್ರಾಮರಿಯಿಟ್ಟು ಬರುತಿರೆ । ಕರುಮಾಡದೊಳಿದ್ದ ಪಾಪಿ ॥
ನೆರೆ ಚಾಂಡಾಳಿ ರೂಪಿಸಿ ಕಂಡು ಕೋಪಿಸಿ । ಒರೆದಳು ನಿಂದೆಯನಿಂತು ॥ ೩೧ ॥
ಮಲಿನನಿವನು ಕಡು ಪಾಪಿಷ್ಠ ತನ್ನಯ । ಲಲನೆ ಮುಂತಾದ ಜನಗಳ ॥
ಸಲಹಲಾರದೆ ಕೊಳುಗೇಡಿ ದರಿದ್ರನು । ತಲೆಯನು ಬೋಳಿಸಿಕೊಂಡು ॥ ೩೨ ॥
ತಲೆ ಬಾಲಹುಳಿತ ನಾಯಂದದಿ ತಿರುಗುತ । ಪುರದೊಳು ಮನೆ ಮನೆವೊಕ್ಕು ॥
ಪಲಬರ ತನ್ನಂತೆ ಮಾಡುವನೀ ಪಾಪಿ । ಮಲವ ಮೈಯೊಳು ಪೊತ್ತುಕೊಂಡು ॥ ೩೩ ॥
ಈ ರೂಪು ನಾನಾ ಪ್ರಕಾರದಿಂದಲೆ ನೋಡೆ । ಮಾರಸುಖಕೆ ವೈರಿಯೆಂದು ॥
ಕ್ರೂರೆ ತಾನಾರ್ಭೈದು ಬೇಗದಿಂದಿಳಿತಂದು । ದ್ವಾರದ ಪಡಿಗಳೆರಡನು ॥ ೩೪ ॥
ಅತಿವೇಗದಿಂದಿಕ್ಕಲಾ ಧೂರ್ತೆ ಕಂಡಾ । ಯತಿಗೆ ಭಾಮರಿ ಮುರಿದಾಗ ॥
ಸುತವೆತ್ತ ವನವೊಕ್ಕು ಕೈಯಿಕ್ಕಿ ನಿಂದಿರೆ । ಕ್ಷಿತಿಪತಿಗಿತ್ತೋರ್ವ ದಾದಿ ॥ ೩೫ ॥
ಕಡು ನೊಂದು ಮನದೊಳು ಎಲೆ ರಾಯ ! ನಿನ್ನಯ । ಮಡದಿ ರೂಪಿಣಿ ಪಾಪಿ ದುಷ್ಟೆ ॥
ಗಿಡಿ ಗಿಡಿ ಜಂತ್ರವೊಗಿದ್ದೋರ್ವ ಜತಿರಾಯ । ಒಡನೆ ಭಾಮರಿಯಿಟ್ಟು ನಮ್ಮ ॥ ೩೬ ॥
ಅರಮನೆಗಾಗಿ ನಡೆದು ಬರುತಿರೆ ಕಂಡು । ಅರಸಿಯು ಪಡಿಗಳೆರಡನು ॥
ಭರದಿಂದಲಿಕ್ಕಿಸೆ ಮುನಿ ಕಂಡು ಗಕ್ಕನೆ । ತೆರಳಿದನುದ್ಯಾನವನಕೆ ॥ ೩೭ ॥
ಎಂದು ಸೊಲ್ಲಿಸಿದಾ ದಾದಿಯ ನುಡಿಯನು ಕೇಳಿ । ತಂದು ಕರ್ಣಕೆ ಕರಯುಗವ ॥
ದಂದಶೂಕನವೊಲು ಸುಯ್ದು ನಾರೀಜನ- । ದೊಂದವಗುಣವ ತಾ ನೆನೆದು ॥ ೩೮ ॥
ಮದಮಾತ್ಸರ್ಯವೆ ಒಡಲಾಗಿರುವರು । ಕದನಲಂಪಟರಾವಾಗ ॥
ಮದನ ತಾಪದಿ ಬೆದೆ ಬೆದೆ ಬೇವರಾವಾಗ । ಮುದವೆಂಬುದೆಳ್ಳನಿತಿಲ್ಲ ॥ ೩೯ ॥
ಅತಿ ಮೂರ್ಖತನವೆ ರೂಪಾಗಿ ತಾವಿರುವರು । ಸತತ ನುಡಿವರು ಸಟೆಯನು ॥
ಅತಿ ನಿಂದೆಯ ಹೊಂದಿಪರನ್ಯ ಜನರೊಳು । ಅತಿ ಲೋಭಿಗಳು ಭಾವಿಸಲು ॥ ೪೦ ॥

ಪರರ ವಂಚಿಸುವ ಗುಣಗಳಾವಾಗಲು । ನೆರೆ ದಿಟ್ಟೆಯರಶುಚಿಗಳು ॥
ಕರುಣವೆಂಬುದು ತಿಲಾಂಶವವರೊಳಿಲ್ಲ । ಪರಿಕಿಸೆಯತಿ ಕ್ರೂರೆಯರು ॥ ೪೧ ॥

ನಾರಿಯರನು ನಂಬಿದ ಪುರುಷರಿಗೆ ತಾ । ಘೋರನರಕವಲ್ಲದಿಲ್ಲ ॥
ಚಾರಿತ್ರವೆಂಬುದವರಿಗೆ ಭಾವಿಸಲಿಲ್ಲ । ಸಾರರವರು ಮೋಕ್ಷಪದವ ॥ ೪೨ ॥

ಎಂದು ಚಿಂತಿಸಿ ಪಾತಕಿ, ಮುನಿ ಭಾಮರಿ- । ಯಿಂದಿಕ್ಕಿ ಬರೆ ಪಡಿ ಹೊಚ್ಚಿ ॥
ನಿಂದಿಸಿ ನರಕಕ್ಕೆ ಹೋಗುವ ದಾರಿಯ । ತಂದುಕೊಂಡಳು ಅಕಟಕಟ ! ॥ ೪೩ ॥

ಇನಿತು ಕಾಲಂಬರ ರಕ್ಕಸ ರೂಪಿನ । ವನಿತೆಯರೆಂಬ ಬಲೆಯೊಳು ॥
ಮನವೆಂಬ ಬೆಳ್ಮಿಗವನು ನಯನಗಳೆಂಬ । ಮಿನುಗುವ ಪಾಠೀನಯುಗಳ ॥ ೪೪ ॥

ಜಿನ ಜಿನ ! ಸಿಲುಕಿಕೊಂಡಿರ್ದೆವು ಎಂದಾಗ । ಜನಪತಿ ವಿಸ್ಮಯಬಟ್ಟು ॥
ಘನವಾಗಿ ತೂಗಿ ಛೀಃ ಜನ್ಮವ ಸುಡಲೆಂದು । ಮನದೊಳು ಕಡು ನೊಂದು ನೃಪತಿ ॥ ೪೫ ॥

ಸಿರಿಯೆಂಬುದು ಭಾವಿಸಿ ನೋಡೆ ನಾನೀಗ । ದರಿಯ ಮರನು ಮುಗಿಲೊಡ್ಡು ॥
ಸುರಧನು ಮಿಂಚಿನ ಚಂಚಲವೃತ್ತಿಯು । ತರುಣಿಯ ಕಡೆಗಣ್ಣ ಸೊಬಗು ॥ ೪೬ ॥

ಸುರಜಾಲ ಸಂಜೆಯ ಕೆಂಪು ಬಯಲ್ಬೊರೆ । ಪರಿವ ಬೆಂಚೆಯು ಸೀರ್ಪನಿಯು ॥
ನೆರೆ ಲಂಚಗೂಳಿಯ ಚಿತ್ತಕ್ಕೆ ಸರಿಯಾದ । ಸಿರಿಯಿರವನು ನಾ ನಂಬಿ ॥ ೪೭ ॥

ಕುರಿಬಾಳೆಯಹಣ್ಣ ಮೆಚ್ಚಿದ ನ್ಯಾಯದಿ । ಮರುಳಾಗಿ ವಿಷಯ ಸುಖದೊಳು ॥
ಸುರಗಿಯ ಧಾರೆಗೆ ತೊಡೆದು ಜೇನ್ನೆಯಿಕ್ಕಿ । ಹರಿದುಕೊಂಬಂತೆ ನಾಲಗೆಯ ॥ ೪೮ ॥

ಕಡು ಹೆಡ್ಡನಾಗಿ ಕೈವಲ್ಯವ ಮರೆದು ನಾ । ಮಡದಿಯರೆಂಬ ಕೆಸರೊಳು ॥
ಬಿಡದೆಯೆ ಪಂದಿಯಂದದಿ ಪೊರಳುತಲಿರ್ದೆ । ಸುಡು ಸುಡು ಸಂಸಾರಸುಖವ ॥ ೪೯ ॥

ಮನಸಿಜಾಸಕ್ತಿಯಿಂ ಚಾಂಡಳೆ ಕುಟಿಲೆಯು । ಮುನಿಯ ನಿಂದಿಸಿದಳಯ್ಯಯೊ ॥
ಘನವಾದ ಪಾಪವ ಕಟ್ಟಿಕೊಂಡಳು ಎಂದು । ಜನಪಾಲನತಿ ಕೊಕ್ಕರಿಸಿ ॥ ೫೦ ॥

ಸುಡುವೆ ಕರ್ಮಾರಣ್ಯವ ತಪಕಿಚ್ಚಿಂದ । ಪಡೆವೆ ಸದ್ಗತಿಯ ನಾನೆಂದು ॥
ಬಿಡದೆ ವೈರಾಗ್ಯವ ಭಾವಿಸಿ ಮನದಲ್ಲಿ । ಪೊಡವಿಪ ಸುತನನು ಬರಿಸಿ ॥ ೫೧ ॥

ಎಡದೊಡೆಯೊಳು ಕುಳ್ಳಿರಿಸಿಕೊಂಡು ಮಗನನು । ತಡಹುತ ಬೆನ್ನ, ಮುದ್ದಾಡಿ ॥
ಪಿಡಿದು ಗಲ್ಲವನಲುಗುತ ಮುಂಡಾಡುತ । ನುಡಿದನಿಂತಜಿತಂಜಯನು ॥ ೫೨ ॥

ಎಲೆ ಜಿತಶತ್ರು ಕೇಳೆನ್ನಯ ಕಂದನೆ ! । ಸಲೆ ಸಾಮ್ರಾಜ್ಯದೊಳ್ನಿಂದು ॥
ವಿಲಸಿತವಾದ ತಪೋರಾಜ್ಯಕೆನ್ನಯ । ಕಳುಹಿಸಿ ಕೊಡಬೇಕೆಂದೆನಲು ॥ ೫೩ ॥

ಕರವ ಮುಗಿದು ಜಿತಶತ್ರುವಿಂತೆಂದಾ- । ನೊರೆದನೆಲೇ ಪ್ರಿಯ ಜನಕ ! ॥
ವರ ಸುತರುಗಳ ತಂದೆಗಳು ಬದುಕಲೆಂದು । ನೆರೆ ಚಿಂತಿಸಿ ಸಲಹುವರು ॥ ೫೪ ॥

ಅದರಿಂದ ನನ್ನನೀ ಸಲಹಬೇಕಲ್ಲದೆ। ಸದಯಾಲು ನನಗತ್ಯಂತ ॥
ಒದವಿದ ದುಃಖಕೆ ಕಾರಣವೆಂದೀಗ । ಒದೆದು ನೂಂಕಿದ ರಾಜ್ಯವನು ॥ ೫೫ ॥

ಸಿರದೊಳು ಧರಿಸೆಂದೊಡೆ ನಾನು ಹೊರುವೆನೆ । ನರನಾಥ ಚಂದ್ರಮ ! ನಿನಗೆ ॥
ಗುರು ದುಃಖಕೆ ಭಾಜನವಾದ ರಾಜ್ಯವು । ಪರಿಕಿಸೆ ನನಗದು ಸುಖವೇ ? ॥ ೫೬ ॥

ಸುಡು ಸುಡು ನಿನ್ನ ರಾಜ್ಯವ ನಾನೊಲ್ಲೆನು । ಪೊಡವಿಯನಾರಿಗಾದೊಡೆಯು ॥
ಕೊಡು ನಿನ್ನೊಡನೆ ಪಡೆವೆ ದೀಕ್ಷೆಯನೆಂದು । ನುಡಿದ ಸುತನ ನುಡಿ ಕೇಳಿ ॥ ೫೭ ॥

ಬಿಗಿ ಬಿಗಿದಮರ್ದಪ್ಪಿ ಭಳಿರೆ ಭಾಪುರೆ ! ಎಂದು । ಮಗನ ಮುದ್ದಿಸಿ ಮುಂಡಾಡಿ ॥
ಜಗದೇಕವೀರ ನಿನ್ನಂತೆಳೆವರೆಯದೊ- । ಳ್ತಿಗೆದಿಟ್ಟರಾರೋ ಮೋಹನವ ॥ ೫೮ ॥

ಕಂಡಿರೆ ಸಭೆಯೆಲ್ಲ ನನ್ನ ಕುಮಾರನ । ಪಾಂಡಿತ್ಯದೊಂದು ಬಲ್ಮೆಯನು ॥
ಲಂಡಕ್ಕೆ ಸಮವೆಂದು ರಾಜ್ಯಸಂಪದವ ಪ್ರ- । ಚಂಡನೊರೆದು ನೂಂಕಿದುದ ॥ ೫೯ ॥

ನನ್ನ ಕುವರನ ಗುಣಕೆ ಮನುಮುನಿಗಳು । ತಾಂ ನೆರೆ ಸಾಟಿಯಲ್ಲದೆಯು ॥
ಇನ್ನುಳಿದಿರ್ದ ರಾಜಕ ಸರಿಸಾಟಿಯೆ । ಹೊನ್ನ ಬೊಂಬೆಯೆಂದಪ್ಪುವನು ॥ ೬೦ ॥

ಸುರಲೋಕದೊಳು ಹೊನ್ನುಪ್ಪರಿಗೆಯ ಮೇಲೆ । ಮರಿಯಂಚೆದುಪ್ಪುಳಗೆಲುವ ॥
ಸುರುಚಿರಮಳ್ಪಾಸು ಹಾಸಿಕೆಯನು ಹಾಸಿ । ಸುರಸತಿಯರು ಎಂದೆಂದು ॥ ೬೧ ॥

ದೊರಕದೆ ಚೆನ್ನಿಗನಿಂದು ವಿರಕ್ತಿಯಿಂ । ಧರಿಸಿ ಜಿನೇಂದ್ರ ದೀಕ್ಷೆಯನು ॥
ಪರಿದಿಟ್ಟಂಗವ ನಾಳೆ ನಮ್ಮೆಲ್ಲರ್ಗೆ । ಎರೆಯನಾಗುವನೆಂದು ನಾಲ್ಕು ॥ ೬೨ ॥

ಸಾಸಿರ ದೇವಿಯರ್ಕರಗಳ ಜೋಡಿಸಿ । ಸೂಸುವ ನಗೆಯಿಂದಹರೆ ॥
ಭಾಸಿಪ ಏಳನೆ ಜನ್ಮದ ಕಡೆಯೊಳು । ಈಶನಾಗುವನೆನಗೆಂದು ॥ ೬೩ ॥

ಮುಕ್ತಿದ್ವಾರಗಳೊಳು ನಾನಾ ರತ್ನಗಳಿಂದ । ಕೆತ್ತಿದ ವಡಿಗಳ ತೆರೆದು ॥
ಮುತ್ತಿನ ಗದ್ದುಗೆ ಹಾಸಿಕೆಯನು ಮಾ- । ಡೆತ್ತಿಯಾರತಿಗಳ ಪಿಡಿದು ॥ ೬೪ ॥

ಇತ್ತ ನೋಡುತ ನನ್ನ ಕಂದನ ಬರವನು । ಮುಕ್ತ್ಯಂಗನೆ ನಿಂದಿಹಳೆ ॥
ಉತ್ತಮ ನಾಯಕನಹುದೆನ್ನ ಕಂದನೆಂ- । ದೆತ್ತಿ ಮುದ್ದಾಡಿ ಮತ್ತೊಮ್ಮೆ ॥ ೬೫ ॥

ಮಗನ ಪರಮ ವಿರಕ್ತಿಯ ತಾ ಕಂಡು । ಮುಗುಳುನಗೆಯ ಸಕ್ಕ ನೃಪತಿ ॥
ಸುಗುಣಿ ತನ್ನನುಜಾತನಪರಾಜಿತಸಿಗೆ । ಸೊಗಯಿಪ ರಾಜ್ಯ ಪಟ್ಟವನು ॥ ೬೬ ॥

ಹರುಷದಿಂದಲಿ ಕಟ್ಟಿ ಗಂಧಕುಟಿಯ ಪೊ- । ಕ್ಕರಸುಗಳೀರ್ವರು ಜಿನಗೆ ॥
ಎರಗಿ ಪಲವು ಸ್ತೋತ್ರವ ಮಾಡಿ ಗುಣಪಾಲ । ಪರಮ ಜಿನರ ಪಕ್ಕದೊಳು ॥ ೬೭ ॥

ಪರಮ ಧರ್ಮವ ಕೇಳಿಯುಭಯ ಗ್ರಂಥಗಳ । ಪರಿದಿಟ್ಟಾಗ ಭೂಭುಜರು ॥
ಎರಕದಿಂ ಜೈನೀಯ ದೀಕ್ಷೆಯನಿರದಾಂತು । ಪರಮ ಮುನೀಶ್ವರರಾಗಿ ॥ ೬೮ ॥

ಸಕಲ ಶಾಸ್ತ್ರಂಗಳ ಪಠಿಸಿ ತಾವೀರ್ವರಾ- । ಗಕಲಂಕ ಚಾರಿತ್ರರಾಗಿ ॥
ಮುಕುತಿ ಪಥವ ನೆಮ್ಮಿ ಧ್ಯಾನಾಯುಧದಿಂದ । ಮಕರಕೇತನನಿರದಾಂಕಿ ॥ ೬೯ ॥

ಉರುತರ ಸಿಂಹವಿಕ್ರೀಡಿತ ಮೊದಲಾದ । ವರತಪದೊಳು ನೆಗಳುತ್ತ ॥
ಇರುತಿರಲಿತ್ತ ಮುನಿಯ ನಿಂದಿಸಿದುರು । ದುರಿತದ ಕೋಟಲೆಯಿಂದ ॥ ೨೦ ॥

ವನಿತೆ ರೂಪಿಣಿ ದೇಹದೊಳು ಭಗಂದರ । ಘನವಾದ ಸ್ಫೋಟಕಗೂಡಿ ॥
ಇನಿಸು ಬೇಗದಿ ಸರ್ವಾಂಗದೊಳಗೆ ಸಂ- । ಜನಿಸಿತೌದುಂಬರ ಕೋಷ್ಠ ॥ ೨೧ ॥

ಪುಳು ಪುಟ್ಟಿ ದುರ್ಗಂಧ ಸಾರಲಾಗಾ ರಾಜ- । ನಿಳಯದೊಳಿರ್ದವರೆಲ್ಲ ॥
ಹೊಲಸಿಗೆ ಮೂಗುಗಳನು ಮುಚ್ಚಿ ಹೇಸುತ । ಹಳಿವುತಿರಲು ಕಂಡವರು ॥ ೨೨ ॥

ಕಡುವೇದನೆಯು ತಾಳಲಾರದೆಯಾ ಪಾಪಿ । ಪೊಡವಿಲಿ ಬಿರ್ದು ಪೊರಳುತ ॥
ಬಿಡದಾರುದಿಂಗಳು ಪರಿಯಂತರಾ ದುಷ್ಟೆ । ಒಡಲ ಹೊರೆವುತಿರುತಿರಲು ॥ ೨೩ ॥

ದುರಿತ ದಟ್ಟುಳಿಯಿಂದ ಮನೆಕಿಚ್ಚೇಳಲು । ನೆರೆ ಚಾಂಡಾಳಿಯುದರೊಳು ॥
ಪರವಶದಿಂ ಸಿಲ್ಕಿ ಮೈಯೆಲ್ಲ ಸುಟ್ಟಾಗ । ಹರಣವಳಿದು ಕಾಳಿಂದಿ ॥ ೨೪ ॥

ಹೊಳೆಯೊಳು ಮೀನಾಗಿ ಸಂಜನಿಸಿರುತಿರೆ । ಘಳಿಲನೆ ಧೀವರ ಬಂದು ॥
ಬಲೆಯನು ಬೀಸಿರೆಯುದರೊಳು ಸಿಲುಕಿ ತಾ- । ನಳಿದು ರಾಸಭೆಯಾಗಿ ಪುಟ್ಟಿ ॥ ೨೫ ॥

ಸುರಿಪು ರಗಳೆಗಳ ಹೊತ್ತೊತ್ತು ಬಿಸಿಲೊಳು । ಬರಿಗಳೊಡೆದು ಘುಣ್ಣು ಪುಟ್ಟಿ ॥
ಭರದಿಂದ ಕೊಳೆತು ಸತ್ತಾಗ ಕರಡಿಯಾ- । ಗಿರುತಿರೆ ಕೋಳೆವಾವು ಕೊಳಲು ॥ ೨೬ ॥

ಗರಳದುರಿಯು ಮೈಯನಾವೇಷ್ಟಿಸಿಕೊಂಡು । ಹೊರಳಿ ಹೊರಳಿ ಬೆದೆ ಬೆಂದು ॥
ಅರಚುತ ಕಾಡೊಳಗೊಂದು ಗುಹೆಯ ಪೊಕ್ಕು । ಹರಣವಳಿದು ತಾನು ಮಗುಳಿ ॥ ೨೭ ॥

ಅಡವಿಯೊಳಗೆ ಕಾಡುವಂದಿಯಾಗಿರುತಿರೆ । ಪೊಡೆಯೆ ಸಿಡಿಲು ಸುಟ್ಟು ಸತ್ತು ॥
ಮಡುವಿನೊಳಗೆ ನಳ್ಳಿಯಾಗಿ ಸಂಜನಿಸಲು । ಪಿಡಿದು ಕುಡಿಯುರು ಕೈಕಾಲ ॥ ೨೮ ॥

ಮುರಿದಗ್ನಿಯೊಳು ಹಾಕಿ ಬೆದೆ ಬೆದೆ ಬೆಂದಾಗ । ಹರಣವಳಿದು ಮತ್ತಡವಿಯ ॥
ಕರಿಣಿಯಾಗೊಗೆಯಲದರ ಶಿರ ಹರಿಯೇರಿ । ಕರದಿ ಸೀಳಲು ಅಡಿಯಿಂದ ॥ ೨೯ ॥

ಭರದಿಂದಲೊದೆಯಲು ಸತ್ತು ಕುಕ್ಕುರಿಯಾಗಿ । ಶಿರಬಾಲಹುಳುತೂರೊಳಗೆ ॥
ತಿರುಗಿ ತಿರುಗಿ ಬಂದು ಬೂದಿಲಿ ಬಿದ್ದಿರೆ । ಇರುಳೊಳು ಹೆಬ್ಬುಲಿ ಕಂಡು ॥ ೩೦ ॥

ಅಡರಲು ಸತ್ತುದು ಮರಳಿಯಾ ಪೊಳಳೊಳು । ಒಡನೆ ವಿಟ್ಚರನಾಗಿ ಪುಟ್ಟಿ ॥
ಕಡಿಯೆ ಶುನಕವಿಂಡು ಹುಳಿತದರೊಳು ಸತ್ತು । ಗಿಡುಗ ತರಕ್ಷು ಮುಂತಾದ ॥ ೩೧ ॥

ಭವಮಾಲೆಯೊಳು ತೊಳಲುತಲಿರಲಿತ್ತಲು । ದಿವಿಜಪೂಜಿತ ಮುನಿಯುಗಳ ॥
ಕುವಲಯದೊಳು ಧರ್ಮಾಮೃತಗರೆವುತ । ಸುವಿವೇಕಿಗಳಿರುತಿರ್ದು ॥ ೩೨ ॥

ಪರಮಾಯುಷ್ಯವು ತಿಂಗಳುಂಟೆಂಬಾಗ । ವರಮುನಿಯುಗಳವು ತಾವು ॥
ಅರಿದು ಪ್ರಾಯೋಪಗಮನ ಸನ್ಯಸನವ । ಧರಿಸಿ ಶ್ರೀಪಂಚಗುರುಗಳ ॥ ೮೩ ॥

ಸ್ಮರಿಸುತ ತನುಬೇರೆಯಾತ್ಮಬೇರೆಂದೆಂಬ । ಪರಮಾತ್ಮಧ್ಯಾನದೊಳಿರ್ದು ॥
ತ್ವರಿತದಿಂ ದೇಹವ ಬಿಟ್ಟು ಸೌಧರ್ಮವೆಂ- । ಬುರುತರ ಪ್ರಥಮ ಕಲ್ಪದೊಳು ॥ ೮೪ ॥

ಪೊಳೆವ ಮಳ್ವಾಸಿನೊಳಾ ಈರ್ವರು ಪುಟ್ಟಿ । ತಳೆದು ಷಟ್ಪರ್ಯಾಪ್ತಿಯನು ॥
ತೊಳಗಿ ಬೆಳಗುವ ದಿವ್ಯಾಂಗವ ಪಡೆದಾಗ । ಮಳವಿದೂರರು ಇರುತಿಹರು ॥ ೮೫ ॥

ಕೆತ್ತಿದ ವಜ್ರದ ಪಡಿಗಳೆರಡು ಉ- । ದಾತ್ತರುದ್ಭವಿಸೆ ತೆರೆದವು ॥
ಮುತ್ತಿನಾರತಿಗಳ ಪಿಡಿದಮರೀಜನ- । ವೆತ್ತುತ ಜಯ ಜಯವೆನಲು ॥ ೮೬ ॥

ಇವರಾರು ನಾವಾರೀ ಭವನ ತಾನಾವುದು । ಕವಿತಪ್ಪ ಸತಿಯರಿವರಾರು ॥
ಭವವಾವುದೆಂದು ತವ್ಮೊಳು ಪುಟ್ಟಿದವಧಿಯಿಂ । ದಿವಿಯಿದು ತಾನೆಂದು ತಿಳಿದು ॥ ೮೭ ॥

ಕಡುಪಾಪಿರೂಪಿಣಿದೇವಿಯ ಚರಿತಕೆ । ಗಡಗಡ ನಡುಗಿ ಕೊಕ್ಕರಿಸಿ ॥
ಪಡೆದು ತಪವ ಚಾರಿತ್ರದೊಳಗೆ ನಾವು । ನಡೆದು ಶರೀರವ ಬಿಸುಟು ॥ ೮೮ ॥

ಪಡೆದೆವು ತಪದ ಮಹಿಮೆಯೊಳಿಂತಪ್ಪೊಂದು । ಬಿಡುಗಣ್ಣನಾಡಿನೈಸಿರಿಯ ॥
ಮಡದಿಯರಿವರೆಮ್ಮರಿವರೆಮ್ಮ ಪರಿಜನ । ಪಡಿವಳ ಜನರಿವರೆಮ್ಮ ॥ ೮೯ ॥

ಇದು ನವರತ್ನಖಚಿತ ವಿಮಾನ ಮ- । ತ್ತಿದು ಕಲ್ಪಸೌಧರ್ಮವೆಂಬ ॥
ಇದು ಭಾವಿಸಿನೋಡೆ ಜಿನಧರ್ಮ ಮಹಿಮೆಯಿಂ- । ದೊದವಿತು ನಮಗೆಂದು ಸಿರಿಯು ॥

ವರಧರ್ಮ ನಮಗಿನ್ನು ಕರಣೀಯವೆಂದಾಗ । ಹರುಷದಿಂ ಜಿನಗೃಹಕೈದಿ ॥
ಅರುಹನ ಪೂಜಿಸಿ ವಂದಿಸಿ ಸುತಿಸುತ । ಇರುತಿರೆಯಾ ಸಗ್ಗದೊಳು ॥ ೯೧ ॥

ಪರಮಾಯುಷ್ಯ ಸಾಗರವೊಂದವರಿಗೆ । ವರದೇಹ ನಿಡಿದೇಳು ಮೊಳವು ॥
ಅರಸಿಯರಾದರು ನಾಲ್ಕು ಸಾಸಿರಮೆಂ- । ಬುರುತರ ಸಂಖ್ಯೆಗಳಿಂದ ॥ ೯೨ ॥

ಕನಕಪ್ರಭವೆಸರಜಿತಂಜಯನಿಗೆ । ತನುಜಾತ ಜಿತಶತ್ರುಚರಗೆ ॥
ಮಿನುಗುವ ಸೂರ್ಯಪ್ರಭನೆಂಬ ನಾಮದಿಂ । ದಿನಕರ ಸದೃಶಾಂಗರಾಗಿ ॥ ೯೩ ॥

ಸುರಲೋಕದೊಳಗಮರಿಯರ ಸುಖಂಗಳೊ- । ಳಿರುತಿರ್ದ ಜಿತಶತ್ರುಚರನು ॥
ಪರಮ ಸ್ನೇಹವ ಪಿತೃಚರ ಸ್ವರ್ಣಪ್ರಭನೊಳು । ಮುರುಕದಿಂ ಮಾಡಿ ಕೂಡಿರುತ ॥ ೯೪ ॥

ಜಿನಪೂಜೆ ಜಿನಕಥೆಯನಾವಾಗಲು । ಮನದಕ್ಕರಿಂದ ನಡೆಸುತ ॥
ಕನಕಪ್ರಭ ಸೂರ್ಯಪ್ರಭರೀ ದಿವಿಜರು । ವನದೊಳು ಕುಳಿತೊಂದು ದಿವಸ ॥ ೯೫ ॥

ಜನಕಚರನುಮಾದ ಕನಕಪ್ರಭನೊಳು । ತನುಜಚರನು ಸೂರ್ಯಪ್ರಭನು ॥
ವನಧಿ ಸಮಾನ ಗಾಂಭೀರ್ಯದ ವಚನವ । ವಿನಯದೊಳಿಂತು ನುಡಿದನು ॥ ೯೬ ॥

ಎಲೆ ಕನಕಪ್ರಭ ! ಕೇಳು ನಾವೀರ್ವರು । ಕಲಿಲಾರಿದೀಕ್ಷೆಯ ಫಲದಿ ॥
ಸಲೆ ಬಿಡುಗಣ್ಣನಾಡ್ಯೈಸಿರಿ ಪಡೆದೆವು । ವಿಲಸಿತ ಧರ್ಮವನಿನ್ನು ॥ ೯೭ ॥

ಮುಂದಕ್ಕೂ ನಡೆಯಿಸಿ ಭವಭವದೊಳು ನಮ್ಮ । ಕೊಂದು ಕೂಗುವ ಕರ್ಮಂಗಳನು ॥
ಛಿಂದಿಸಿ ಮೋಕ್ಷಕೆ ತೆರಳುವ ಮಾತನಾ- । ನೊಂದನಾಡುವೆ ಕೇಳು ಚದುರ ! ॥ ೯೮ ॥

ಸಂಚಿತಾಯುಷ್ಯವು ನಮ್ಮೊಳಗಾರಿಗೆ । ಮುಂಚೆ ಮನುಷ್ಯನಾದವನ ॥
ಹೆಂಚಿಪ ದೇವನು ಬಂದು ಬೋಧಿಸಿ ತಾ । ವಂಚಿಸಿದಾಗ ದೀಕ್ಷೆಯನು ॥ ೯೯ ॥

ಹರುಷಹೃದಯನಾಗಿ ಕೊಡಿಸಬೇಕೆಂದಾ- । ಗೊರೆದ ಭಾಷೆಯ ಕೇಳಿ ಜನಕ ॥
ಚರ ಸ್ವರ್ಣಪ್ರಭ ಮಂದಸ್ಮಿತನಾಗಿ । ಮುರುಕದಿಂ ಸೂರ್ಯಪ್ರಭನ ॥ ೧೦೦ ॥

ಅಡಿಗಡಿಗಮರ್ದಪ್ಪಿ ಮುದ್ದಿಸಿ ಮುಂಡಾಡಿ । ತೊಡೆಯೊಳು ಕುಳ್ಳಿರಿಸಿಕೊಂಡು ॥
ಒಡನೆ ಗಲ್ಲವ ಪಿಡಿದಲುಗುತ ಕರದಿಂದ । ತಡಹುತ ಚೆನ್ನ ಸ್ನೇಹದೊಳು ॥ ೧೦೧ ॥

ಭಳಿರೆ, ಭಾಪುರೆ, ಭಾಪು ! ನಿನ್ನಂತ ಜ್ಞಾನವ । ತಳೆದವರಾರು ಸ್ವರ್ಗದೊಳು ॥
ಬಳುಕುವ ದೇಹದ ದೇವಸ್ತ್ರೀಯರೊಳಿರ್ದು । ತಿಳಿದುದು ಹೆಚ್ಚೆನ್ನ ಕಂದ ! ॥ ೧೦೨ ॥

ಏಳೇಳು ಜನ್ಮದೊಳ್ನಿನ್ನಂಥ ಕಂದನ । ಲೀಲೆಯಿಂ ಪಡೆವ ಸೌಭಾಗ್ಯ ॥
ಏಳಿಗೆ ನನಗಾಗಲಿ ಎಂದು ಕೊಂಡಾಡೆ । ಮೇಳದ ಸುಖದೊಳಗಿರ್ದು ॥ ೧೦೩ ॥

ಹರುಷದಿಂ ರತ್ನವಿಮಾನವ ತಾನೇರಿ । ಸುರಶೈಲಕೆ ನಡೆತಂದು ॥
ಅರುಹನ ಪೂಜಿಸಿ ಪೊಡವಿಯ ನೋಡುತ । ಸುರಲೋಕಕೈದ ವೇಳೆಯೊಳು ॥ ೧೦೪ ॥

ರತ್ನವಿಮಾನವು ಕೀಲಿಸಿ ನಿಲಲಾಗ । ಚೆನ್ನಿಗರಾಶ್ಚರ್ಯಬಟ್ಟು ॥
ಚೆನ್ನವಾವುದು ಇದು ನಿಲುವುದಕ್ಕೆಂದು ಸಂ- । ಪನ್ನರಧೋಮುಖವಾಗಿ ॥ ೧೦೫ ॥

ಥಳಿಲನೆ ಭೂಮಿಯ ನೋಡೆ ಬಿಂಜದೊಳಗೆ । ಹಳದು ಕರಿಣಿಯನು ಕಂಡು ॥
ಕಳೆದಾ ಕರಿಣಿಯ ಭವಮಾಲೆಗಳನ್ನು । ತಿಳಿದು ಭೂಮಿಗೆ ಇಳಿತಂದು ॥ ೧೦೬ ॥

ಭೀಕರವಾದ ಅನೇಕ ಮೃಗಗಳಿಂದ । ಸ್ವೀಕೃತವಾದಟವಿಯನು ॥
ನಾಕಿಗರೈದಿ ಪಿಡಿಯ ಮುಂದೆ ನಿಂದಿಂತು । ವಾಕುದೋರಿದರೇನೆಂಬೆ ॥ ೧೦೭ ॥

ಹಿಂದೆ ವಿರೂಪಿಣಿಯಾಗಿರ್ದ ಭವದೊಳು । ನಿಂದಿಸಿ ಮುನಿನಾಥನನು ॥
ಬಂದೆಯನಂತ ಸಂಸಾರವಿಪಿನದೊಳು । ನೊಂದೆ ನೀ ಬಹುದುಃಖದಿಂದ ॥ ೧೦೮ ॥

ಮುನಿನಿಂದೆಯೆಂಬುದು ನರಕವೈದಿಸುವುದು । ಶುನಕಾದಿ ಭವದೊಳೊಗೆವುದು ॥
ಜನಿಪರು ಹೊಲೆ ಮಾದಿಗರ ಬಸುರಿನೊಳು । ತಿನುತಿರ್ಪರು ತಿಪ್ಪೆಗೂಳ ॥ ೧೦೯ ॥

ಎಂದು ನುಡಿದ ಗೀರ್ವಾಣರ ನುಡಿಗೇಳಿ । ಅಂದು ಜಾತಿಸ್ಮರಣೆಯಾಗಿ ॥
ಹಿಂದಣ ಭವದ ದುಃಖವ ನೆನೆನೆನೆದಾಗ । ತಂದು ತಾ ಕಣ್ಣಿಗೆ ನೀರ ॥ ೧೧೦ ॥

ಪಿಡಿದಿರ್ದ ಕರದ ಕಬಳವನು ಈಡಾಡಿ । ಮಡಿದು ಶುಂಡಿಲ ತಲೆವಾಗಿ ॥
ಕಡುದುಃಖದೊಳಿರ್ದ ಪಿಡಿಯ ಸುರರು ಕಂಡು । ಬಿಡದೆ ಬಂದಾ ಮೋಹದಿಂದ॥ ೧೧೧ ॥

ಕರುಣಾರಸದಿಂ ನಿಳಿಂಪರು ತಮ್ಮಯ । ಕರಗಳ ಕಡುಬೇಗದಿಂದ ॥
ಕರಿಣಿಯ ಮಸ್ತಕದೊಳಗಿಟ್ಟು ಮರಳಿಂ- । ತೊರಿದರು ಮಮತೆಯಿಂದವರು ॥ ೧೧೨ ॥

ನಿನ್ನಭಿಮಾನ ಗರ್ವದೊಳು ಸದ್ಧರ್ಮವ । ಮನ್ನಿಸದೆ ಕೆಟ್ಟ ಕೇಡು ॥
ಇನ್ನಾದರು ಸಾಲದೆ ಬೇಡ ಜೀವನೆ ! । ಚೆನ್ನಾಗಿ ನಂಬು ಧರ್ಮವನು ॥ ೧೧೩ ॥

ಗುರುಜನರೊಳು ಭಯಭಕ್ತಿಯನಿಡು ನಿಚ್ಚ । ತೊರೆ ಮದ್ಯ ಮಾಂಸ ಮಧುಗಳ ॥
ಸ್ಥಿರವಾಗೆಲೆ ಜೀವ ! ಪಂಚಾಣುವ್ರತದಲ್ಲಿ । ಮುರಿಯದಿರೆಳೆಗೊಂಬುಗೊನರ ॥ ೧೧೪ ॥

ಬಳಲಿ ಪಿಪಾಸದಿ ಪ್ರಾಸುಕವಾದ ಸ- । ಜ್ಜಳನ ಸೇವಿಸು ಪಂಚಪದವ ॥
ಫಳಿಲನೆ ನೆನೆಯೆಂದು ಗೀರ್ವಾಣರು ಪೇಳೆ । ನಲವಿಂದ ಕೈಕೊಂಡು ಕರಿಣಿ ॥ ೧೧೫ ॥

ಮೂರು ಸೂಳಾಗಿ ನಿರ್ಜರರನು ಬಲಬಂದು । ಚಾರುಚರಣಕೆ ತಾ ಮುಗ್ಗೆ ॥
ಹಾರಿತಿದಕೆ ಮಿಥ್ಯಾತ್ವವೆಂದಮರರು । ಸೂರ್ಯಪಥಕೆ ಲಂಘಿಸಿದರು ॥ ೧೧೬ ॥

ಕರಿಣಿಕೊರಳನೆತ್ತಿಯಾಗಾಸದೊಳು ಪೋಪ । ಸುರರ ನೋಡುತಲುಸ್ಸೆಂದು ॥
ಕೊರಗುತ ಚಿಂತೆ ಮೌನದಿ ನಿಂದುಕೊಂಡಿರೆ । ಸುರರತ್ತಲೈದಲಾಗಿತ್ತ ॥ ೧೧೭ ॥

ಪಿಡಿದ ಶ್ರಾವಕವ್ರತದೊಳು ನಡೆವುತ ತಾನು । ಅಡಿಗಡಿಗೆ ಪಂಚಪದವ ॥
ಬಿಡದೆ ಧ್ಯಾನಿಸುತ ನಿಳಿಂಪರ ನೆನೆವುತ । ಕಡುಶುಚಿಯಾಗಿ ಮನದೊಳು ॥ ೧೧೮ ॥

ಮುರಿಯದೆ ಕೊನೆ ಕೊಂಬುಗಳ ಪದಹತಿಯಿಂದ । ಒಡನೆ ಪ್ರಾಸುಕವಾದ ಜಲವ ॥
ಕುಡಿವುತ ಜೀವಾನುಕಂಪದಿಂ ನಡೆವುತ । ಒಡಲ ದಂಡಿಸುತ ತಾನಿರ್ದು ॥ ೧೧೯ ॥

ತೊಡಗಿ ಸಲ್ಲೇಖನವನು ಶಾಂತ ಮನದಿಂದ । ಬಿಡದೆ ಸುರರ ನೆನೆವುತ್ತ ॥
ಅಡಿಗಡಿಗಲಸದೆ ನೆನೆವುತಲೈವರ । ಪಿಡಿ ತನ್ನ ದೇಹವ ಬಿಸುಟು ॥ ೧೨೦ ॥

ಪರಮ ಸುಖವನೀವ ಸೌಧರ್ಮವೆಂದೆಂಬ । ವರಕಲ್ಪದೊಳು ಥಳಥಳಿಪ ॥
ಮಿರುಗುವಂಗವನಾಂತು ಕೀರ್ತಿಮತಿಯುಮೆಂಬ । ಸುರಸತಿಯಾಗಿ ಸಂಜನಿಸಿ ॥ ೧೨೧ ॥

ಕನಕಪ್ರಭನಿಗೆ ಪಟ್ಟದರಸಿಯಾಗಿ । ಅನುಬದ್ಧ ಸ್ನೇಹದಿಂ ಕೂಡಿ ॥
ತನುಜಾತಚರ ಸೂರ್ಯಪ್ರಭನ ಕೊಂಡಾಡುತ । ಮನದಕ್ಕರಿಂದಿರುತಿರಲು ॥ ೧೨೨ ॥

ಕನಕಪ್ರಭದೇವ ಕೀರ್ತಿಮತೀದೇವಿ । ತನುರುಹ ಚರ ಸೂರ್ಯಪ್ರಭನು ॥
ಅನುದಿನ ಕೂಡಿ ಸ್ವರ್ಲೋಕದ ಸುಖವನಾ- । ಗನುಭವಿಸುತಲಿರಲಿತ್ತ ॥ ೧೨೩ ॥

ಭರತಾರ್ಯಖಂಡದೊಳಗೆ ರಾಜಿಸುತಿರ್ದ । ಸಿರಿವೆತ್ತ ಮಗಧ ದೇಶದೊಳು ॥
ಸುರಪುರಕೆಣೆಯೆನಿಸುವ ರಾಜಗೃಹವೆಂಬ । ಪುರವೊಪ್ಪುತಿಹುದದನಾಳ್ವ ॥ ೧೨೪ ॥

ಸುರತರು ಸಮದಾಸಿ ಹರಿಯಂತೆ ವಿಕ್ರಮಿ । ಪುರುಷೋತ್ತಮನೆಂಬ ನೃಪನು ॥
ಇರುತಿರ್ಪನವನಿಗೆ ಸುರುಚಿರ ಶೃಂಗಾರಿ । ಸುರತರುಣಿಯ ಸಮರೂಪೆ ॥ ೧೨೫ ॥

ಸರಸ ಸತ್ಕಲೆವಂತೆ ಸನ್ಮುನಿಪದಭಕ್ತೆ । ಪುರುಷರ ಚಿತ್ತಾಪಹಾರಿ ॥
ಗರುವೆ ಸುಶೀಲೆಯನಂತಮತಿಯುಮೆಂಬ । ತರುಣಿಯಾದಳು ಪಟ್ಟದರಸಿ ॥ ೧೨೬ ॥

ಇಂತು ರಾಜಿಪ ದಂಪತಿಗಳ ಬಸಿರೊಳು । ಮುಂತೆ ಸ್ವರ್ಣಪ್ರಭ ಬಂದು ॥
ಸಂತೋಷದಿಂದೊಗೆದತಿವೀರ್ಯ ಪೆಸರಾಂತು । ಕಂತು ಸದೃಶನೊಪ್ಪಿದನು ॥ ೧೨೭ ॥

ಮುಂ ಪೇಳ್ದ ರೂಪಿಣಿ ಚರಿ ಕೀರ್ತಿಮತಿದೇವಿ । ಚಾಂಪೇಯ ಜಯವರ್ಮನಿಗೆ ॥
ತಾಂ ಪುತ್ರಿಯಾಗಿ ಸುನಂದೆಯ ಪೆಸರಾಂತು । ಪೆಂಪಿನಿಂದತಿವೀರ್ಯನಿಗೆ ॥ ೧೨೮ ॥

ವರಪಟ್ಟದರಸಿ ತಾನಾಗಿ ಪ್ರಾಣೇಶನ । ಗರುವೆ ವಶೀಕೃತ ಮಾಡಿ ॥
ಇರುತಿರಲತಿವೀರ್ಯ ದಿವ್ಯಸುಖಾಮೃತ । ಶರಧಿಯೊಳಾಳಿಯೊಪ್ಪಿದನು ॥ ೧೨೯ ॥

ಬೆರೆತು ಮೆರೆವ ರಾಯರ ಗಂಟಲಗಾಣ । ಸುರಭೂಜನಸ್ಕರಿಕರ್ಗೆ ॥
ಅರುಹನ ಪದಭಕ್ತನತಿವೀರ್ಯನೊಪ್ಪಿದ । ಶರನಿಧಿಸಮಗಾಂಭೀರ್ಯ ॥ ೧೩೦ ॥

**॥ ಅಂತು ಸಂಧಿ ೨೨ಕ್ಕಂ ಪದ ೩೦೮೬ಕ್ಕಂ ಮಂಗಲಂ ॥**

## ಸೂರ್ಯಪ್ರಭನ ಉಪದೇಶ.

ಮೋದದಿಂದತಿವೀರ್ಯನ ಸೂರ್ಯಪ್ರಭ । ಬೋಧಿಸಿದುದನು ಸೊಲ್ಲಿಪೆನು ॥ ಪ ॥

ಸುರನರಖಚರೋರಗವಂದಿತ ಪಾದ । ದುರಿತಾಂಧಕಾರ ಹಿಮಕರ ॥
ವರಮೋಕ್ಷಾಂಗನಾವಲ್ಲಭ **ಶಾಂತೀಶ** ! । ಉರುಹೆನ್ನ ಪಾಪರಜವನು ॥ ೧ ॥

ಅತಿವೀರ್ಯ ತನ್ನ ವಲ್ಲಭೆ ನಂದೆಯೊಡಗೂಡಿ । ಸತತ ಸುಖದೊಳಿರುತಿರ್ದು ॥
ಕ್ಷಿತಿಪನೊಂದಾನೊಂದು ಪಗಲು ರಾರಾಜಿಪ । ಅತಿಶಯ ವನವನು ಪೊಕ್ಕು ॥ ೨ ॥

ಜಲಕ್ರೀಡೆ ವನಕ್ರೀಡೆ ನಂದೆವೆರಸು ಆಡಿ । ಎಳಲತೆವನೆಯನು ಪೊಕ್ಕು ॥
ಬೆಳತಿಗೆಗಣ್ಣ ಕೋಮಲೆಯೊಳು ಮನ್ಮಥ । ವಿಲಸಿತ ಕೇಳಿಲಿ ತಣಿದು ॥ ೩ ॥

ಒರಗಿದ ಪತಿಯ ನಿದ್ರೆಯನು ಸುನಂದೆ ತಾ । ಪರಿಹರಿಸಲು ಬಾರದೆಂದು ॥
ಹರುಷದಿ ವನದೊಳು ಕೆಳದಿಯರೊಡಗೂಡಿ । ಮುರುಕದಿಂ ತಿರುಗುತಲಿರಲು ॥ ೪ ॥

ಸುರಲೋಕದೊಳಗತ್ತ ಜಿತಶತ್ರುಚರದೇವ । ವರಕೃತ ಭಾಷೆಯ ನೆನೆದು ॥
ಅರಸಿದ್ದ ನಂದನ ವನಕಾಗಿ ನಡೆತಂದು । ಬರಿಸಿ ಹೆಬ್ಬುಲಿಯಾಕಾರವನು ॥ ೫ ॥

ರುಗುತಾರಾಮದೊಳಗೆ ಇದ್ದ ನಂದೆಯು । ಕೊರಳನಗಿದು ಈಡಾಡಿ ॥
ರಿಯೋ ! ನುರಿಯೋ ! ಎಂದಾಳಿ ಜನಂಗಳು । ಕೊರಚುತಲತಿವೀರ್ಯನೆಡೆಗೆ ॥ ೬ ॥

ಡುಬೇಗದಿಂ ಬಂದು ನಮ್ಮನ್ಮ್ಮಾಜಿಯು । ಪಿಡಿದುಕೊಂಡಿತು ಹುಲಿಯೆನಲು ॥
ಡವಿಯಾಣ್ಮನು ಕೇಳಿ ಘುಡುಘುಡಿಸುತಲಾಗ । ಪಿಡಿದು ಸುರಗಿಯುಳಲಿಂದ ॥ ೭ ॥

ರಿತದಿಂ ನಡೆತಂದು ತನ್ನಸುವೆರೆಯುಳ । ಶಿರ ಬೇರೆ ಮುಂಡ ಬೇರಾಗಿ ॥
ರಣವಳಿದು ಬಿದ್ದಿರ್ದಳ ತಾ ಕಂಡು । ಖರನಖರಗಳಿಂದ ಸೀಳಿ ॥ ೮ ॥

ರುಳುಗಳನು ಹಿರಿಹಿರಿದು ಅಸ್ಥಿಗಳನು । ಭರದಿ ಬಿಸುಟು ರಕ್ತವನು ॥
ರಿಗುಟ್ಟಿ ಹೀರುವ ಪುಂಡರೀಕನ ಕಂಡು । ಸ್ವರದೋರಿ ಭೋರೆಂದು ನೃಪತಿ ॥ ೯ ॥

ರೆಯು ಕರಗಳಿಂದ ಹುಯ್ಯುತ ಬಾಯನು । ತೆರೆದು ಗಜರಿ ಘರ್ಜಿಸುತ ॥
ರದಿಂದ ಬಂದರಸನ ಮೇಲುವಾಯಲು । ದೊರೆ ವೀರಮುಂಡಿಯ ಹೂಡಿ ॥ ೧೦ ॥

ಡಗೈಲಿ ಪಿಡಿದಿರ್ದ ಜವದಾಡೆಯನಾಗ । ಪೊಡವಿಪ ಹುಲಿಯ ಬಾಯೊಳಗೆ ॥
ಡದೆ ತಿವಿಯೆ ಹೆಡತಲೆಯೊಳು ಮೂಡಲು । ಕಡುಕೋಪದಿಂ ಬಲಗೈಲಿ ॥ ೧೧ ॥

ಡಿದಿರ್ದ ಸುರಗಿಯನಾಲಿ ಬೊಬ್ಬಿರಿವುತ । ತಡೆಯದೆ ವೀರರ ದೇವ ॥
ಡುಬೇಗದಿಂದ ಹಿಂದಕೆ ತಾನು ತೆಗೆವಾಗ । ಕೆಡುಕ ಹುಲಿಯನು ತಿವಿಯಲು ॥ ೧೨ ॥

ರದೊಳು ತಾಗಿ ಬೆನ್ನೊಳು ನೆಸೆಯಲು ಹುಲಿ । ಸೊರಗಿ ಕೆನ್ನೆತ್ತರ ಕಾರಿ ॥
ರಣಿಯೊಳಗೆ ಬಿರ್ದ ನಂದೆಯೊಡನೆ ತನ್ನ । ಹರಣವಳಿಯೆ ನಂದೆಯೊಡಲ ॥ ೧೩ ॥

ರಗಿಂದ ಜೊಮ್ಮೆಂದು ಮುತ್ತುವ ನೊಣದಿಂದ । ಕರುಳಿಂದ ಮಲಮೂತ್ರದಿಂದ ॥
ರಿವ ರಕುತದಿಂದ ಮಿದುಳು ಮಾಂಸಗಳಿಂದ । ಪರಿದು ಜೋಲುವ ನರದಿಂದ ॥ ೧೪ ॥

ಲವು ದಿಕ್ಕುಗಳೊಳು ಬಿದ್ದಿರ್ದೆಲುಗಳಿಂದ । ಹೊಲಸು ನಾರುವ ಶವಗಳನು ॥
ಳಿಲನೆ ಕಂಡು ಮನದೊಳು ಕೊಕ್ಕರಿಸುತ । ತಲೆದೂಗಿಂತೆಂದು ನುಡಿದನು ॥ ೧೫ ॥

ಡಿಕೆಯಮನೆ ದುರ್ಗಂಧದ ಹೆಮ್ಮಡು । ಕಡು ಹೇಸಿಕೆಯ ಪಾಕಳವು ॥
ಡದೊಸರುವ ವಿಣ್ಮೂತ್ರದ ಬಳ್ಗರೆ । ಕಡು ಹೊಲಸಿನ ಸಿಡುಮನೆಗೆ ॥ ೧೬ ॥

ಡಲಾಗಿರ್ದ ನಾರೀಜನಗಳಿಗಾನು । ಕಡುಸೋತು ಬೊಬ್ಬುಳಿಗೊಂಡು ॥
ಡೆಯನಾಗಿರ್ದೆ ಇಸಿತು ಕಾಲಂಬರ । ಪಡೆಯದೆ ಸದ್ಗತಿಗಳನು ॥ ೧೭ ॥

ಟ್ಟಿಸಕಟಕಟ ! ಇನ್ನೆಂತೋ ಬಲುದೊಡ್ಡ । ಬೆಟ್ಟದಂತಪ್ಪ ದುಷ್ಕೃತವು ॥
ಟ್ಟುಣಿಸಿತ್ತೊ ಕಾಣೆ ಇಂತಪ್ಪ ಪಾಪವ । ಹಿಟ್ಟುಗುಟ್ಟುವರೆ ಜೈನೀಯ ॥ ೧೮ ॥

ರವು ದೀಕ್ಷೆಯ ಕೈಕೊಂಡಲ್ಲದಾಗದೆಂ- । ದರಮುಗ ಬೆದೆ ಬೆದೆ ಬೆಂದು ॥
ರುಗುತ ತನ್ನ ಭಾಗ್ಯವ ಸುಡುಸುಡು ಛೀ । ದುರಿತಕೆ ಕಾರಣವಾದ ॥ ೧೯ ॥

ಎಂದು ಚಿತ್ತದೊಳು ವಿರಕ್ತಿಯ ಭಾವಿಸಿ । ನಿಂದುಕೊಂಡಿರಲತಿವೀರ್ಯ ॥
ಅಂದು ಸೂರ್ಯಪ್ರಭ ಮಾಯೆಯ ತೊಲಗಿಸಿ । ನಂದೆ ವೆರಸು ನಡೆತಂದು ॥ ೨೦

ನರನಾಥನತಿವೀರ್ಯನೊಡನೆ ಸೂರ್ಯಪ್ರಭ- । ನೊರೆದು ಹಿಂದಣ ಭಾಷೆಯನು ॥
ಅರಸಿನ ಮನವ ಕರಗಿಸಿ ವೈರಾಗ್ಯವ । ಸ್ಥಿರಮಾಡಿ ನಿಂದುಕೊಂಡಿರಲು ॥ ೨೧

ಭಳಿರೆ ಸೂರ್ಯಪ್ರಭ ! ಖಳಕರ್ಮವಶದಿಂದ । ನಳಿನಾಕ್ಷಿಯರೊಳು ನಾ ಸಿಲುಕಿ
ಮುಳುಗಿರ್ದೆ ಪಾಪದ ಕುಳಿಯೊಳಿನಿತು ಕಾಲ । ಜಳಕನೆ ಪರಿಹರಿಸೆನ್ನ ॥ ೨೨

ಸಲಹಿದೆ ನಿನ್ನಂತ ಪುತ್ರ ಮಿತ್ರರುಗಳ । ಚೆಲುವನ ಕಂಡುದಿಲ್ಲೆಂದು ॥
ಅಲಘುಪರಾಕ್ರಮಿ ಬಿಗಿಬಿಗಿಯಮರ್ದಪ್ಪಿ । ಪೊಳಲಿಗೆ ತಾನೈತಂದು ॥ ೨೩

ಜನನಿ-ಜನಕ ಮುಂತಾದ ಬಂಧುಗಳಿಗೆ । ವಿನಯದಿಂ ಪೂರ್ವಭವಗಳ ॥
ಮನದಕ್ಕರಿಂ ಪೇಳಿ ಬೀಳ್ಕೊಂಡು ಯಮಧರ । ಮುನಿಯ ಪಾದೋಪಾಂತ್ಯಕೈದಿ ॥ ೨೪

ಎರಗಿ ಧರ್ಮಾಧರ್ಮದಿರವನು ತಾ ಕೇಳಿ । ಪರಿಪಡಿಸುಭಯಗ್ರಂಥವನು ॥
ಪರಮೋತ್ಸಾಹದಿಂದಲಿ ಜಿನದೀಕ್ಷೆಯ । ಧರಿಸಿದನತಿ ಮಮತೆಯೊಳು ॥ ೨೫

ಸುರ ಸೂರ್ಯಪ್ರಭನದ ಕಂಡು ಮುನಿಪನ । ಚರಣಕೆರಗಿ ಕೊಂಡಾಡಿ ॥
ಹರಿಸದಿಂ ಬೀಳ್ಕೊಂಡು ಸುರಲೋಕಕೆ ಪೋಗೆ । ಗುರುರಾಯನತಿವೀರ್ಯನಿತ್ತ ॥ ೨೬

ಬಂಧುರತಪದೊಳಗಾಚರಿಸುತಲಿರೆ । ನಂದೆಯು ವೈರಾಗ್ಯದಿಂದ ॥
ಬಂದಾಗ ಜಿನಮತಿಯಜ್ಜೀರ ಕೈಯೊಳು । ಚಂದದಿಂ ಜಿನದೀಕ್ಷೆಯಾಂತು ॥ ೨೭

ವರತಪದೊಳಗಾಚರಿಸುತಲಿರಲಿತ್ತ । ಸುರ ಸೂರ್ಯಪ್ರಭನತ್ತ ॥
ಸುರತರುಣಿಯರೊಳು ಸುಖದೊಳಗಿರುತಿರೆ । ಪರಮಾಯುಷ್ಯವು ಇನ್ನು ತೀರಿ ॥ ೨೮

ಅರುದಿಂಗಳುಂಟೆಂಬಾಗ ಮುನ್ನವೆ ತನ್ನ । ವರವಸ್ತ್ರಪೂವಿನ ಸರವು ॥
ಕೊರಗಿ ಮಾಸಿರೆ ಕಂಡು ಸುರಗಿರಿ ಮುಂತಾದ । ವರತೀರ್ಥವಂದನೆ ಮಾಡಿ ॥ ೨೯

ಕಡುಶಾಂತಚಿತ್ತದಿಂದನುಪ್ರೇಕ್ಷೆಗಳನು । ಬಿಡದೆ ಭಾವಿಸುತ ತಾನಾಗ ॥
ನುಡಿವುತ ಧರ್ಮವ ಪಂಚಪದಂಗಳ- । ನಡಿಗಡಿಗುಚ್ಚರಿಸುತ್ತ ॥ ೩೦

ಇಂತಾರುದಿಂಗಳು ಕಳೆದು ಸೂರ್ಯಪ್ರಭ- । ನಂತ್ಯಕಾಲದೊಳು ತಾ ಬಂದು ॥
ಪಿಂತಣನಂತಮತಿಗೆ ಪುಟ್ಟಲವನಿಗೆ । ಸಂತಸದಿಂದವರಯ್ಯ ॥ ೩೧

ಅರುಹನ ಪೂಜಿಸಿಯತಿಬಲ ಪೆಸರಿಟ್ಟು । ಮುರುಕದಿಂ ಸಲಹುತಲಿರಲು ॥
ಪರಿಪಾಟಿಯಿಂ ಬಾಲ್ಯವ ಪತ್ತುವಿಟ್ಟಾಗ । ವರಯೌವನಾರೂಢನಾಗಿ ॥ ೩೨

ಇರುತಿರಲಿತ್ತತ್ತಲತಿವೀರ್ಯ ಮುನಿನಾಥ- । ನರಿದ ತಾನವಧಿಲೋಚನದಿ ॥
ಸುರ ಸೂರ್ಯಪ್ರಭ ದಿವದಿಂದಲೈತಂದು । ಪುರುಷೋತ್ತಮ ತಮ್ಮಯ್ಯನಿಗೆ ॥ ೩೩

…ನಿಸಿ ತಾನತಿಬಲನೆಂಬಭಿಧೇಯನ । ಘನಪುಣ್ಯವಂತನು ತಾಳಿ ॥
…ನುಜಾತ ತನಗೆಯಾದುದನರಿದೈತಂದಾ । ಮುನಿಯತಿವೀರ್ಯನಾ ಪುರವ ॥ ೩೪ ॥
…ತಿ ಹರುಷದಿ ಪೊಕ್ಕು ಬೀದಿಲಿ ಬರುತಿರ- । ಲತಿಬಲ ಕಂಡಿರದೆದ್ದು ॥
…ತಿನಾಥನ ದಿವ್ಯ ಪಾದಪದ್ಮಗಳಿಗೆ । ನತನಾಗಲಾ ಮುನಿ ಪರಸಿ ॥ ೩೫ ॥

ಏನಯ್ಯ ಸೂರ್ಯಪ್ರಭದೇವ ! ನೀನಂದು । ಜೈನೀಯ ದೀಕ್ಷೆಯನೆಮಗೆ ॥
…ನಂದದಿಂ ಕೈಕೊಳಿಸಿ ಸ್ವರ್ಲೋಕದಿಂ । ನೀನೀಗಲಿಳಿದು ಬಂದಿಲ್ಲಿ ॥ ೩೬ ॥
…ನುಜಜನ್ಮವನಾಂತತಿಬಳನೆಂದೆಂ- । ಬನುಪಮ ಪೆಸರನು ಪಡೆದು ॥
…ಸಹು ಮರೆಯದೆ ಮುನ್ನಾಡಿದ ಭಾಷೆಯ- । ನೆನಲತಿಬಲನದ ಕೇಳಿ ॥ ೩೭ ॥
…ಂದಣ ಭವಮಾಲೆಯ ಜಾತಿಸ್ಮರಣೆ- । ಯಿಂದ ತಿಳಿದು ಮೂರ್ಛೆವೋಗಿ ॥
…ಂದು ಭೂಮಿಯೊಳೊರಗಿರಲು ಸೇವಕಜನ । ಬಂದು ಶೀತಳಕ್ರಿಯೆ ಎಸಗಿ ॥ ೩೮ ॥
…ನಿಸಿತಾನು ಬೇಗದಿಂದೆಚ್ಚತ್ತಾಗತಿಬಲ । ಮುನಿನಾಥನಡಿಗಳಿಗೆರಗಿ ॥
…ನವಾದ ಮೋಹದಿಂ ಸಂಸಾರಕೆ ಸಿಲ್ಕಿ । ಬಿನುಗಾಗಿ ಕೆಟ್ಟು ಪೋಗುವಗೆ ॥ ೩೯ ॥
…ರಧರ್ಮನ ಪೇಳಿ ಮೋಕ್ಷದ ಬಟ್ಟೆಯ । ಕರುಣಾಳು ತೋರಿದೆ ಎಂದು ॥
…ರುಷದಿಂ ಕೊಂಡಾಡಿ ನಿರ್ಮಲ ದೀಕ್ಷೆಯ । ಧರಿಸಿದನಾಗತಿಬಳನು ॥ ೪೦ ॥
…ನಶನವಮೋದರ್ಯ ಮೊದಲಾಗಿರುತಿರ್ಪ । ಘನದ್ವಾದಶವಿಧ ತಪದಿ ॥
…ನಿಗಳೀರ್ವರು ಪಲಕಾಲನಾಚರಿಸುತ । ವಿನಯದಿಂದಲೆ ಕೂಡಿರ್ದು ॥ ೪೧ ॥
…ರಮಾಯುರವಸಾನದೊಳು ಮುನಿಪತಿಗಳು । ಪರಮಾತ್ಮ ಭಾವನೆಯಿಂದ ॥
…ರಿದು ಶರೀರವನೆರಡನೆ ಸಗ್ಗದೊ- । ಳ್ಸುರರಾಗಿ ತಾವು ಸಂಜನಿಸೆ ॥ ೪೨ ॥
…ಣಿಸಮಾನದ ಉರು ತೇಜಾನ್ವಿತ । ಪರಿಮಳಮಯ ದೇಹವಾಂತು ॥
…ರಿಹೃತಾಖಿಲ ಸಪ್ತಧಾತು ವರ್ಜಿತರಾಗಿ । ವರಭೂಷಣವನು ಧರಿಸಿ ॥ ೪೩ ॥
…ರವಿಂದಿನಂತೆ ಧವಲ ವಸನವನಾಂತು । ಪರಿಮಳ ಸ್ರಗ್ವಾಂತು ಶಿರದಿ ॥
…ರಿಸಿ ತಾನಣಿಮಾದ್ಯಷ್ಟಗುಣಂಗಳ । ಸುರರು ಸುಖವನುಣುತಿಹರು ॥ ೪೪ ॥

ಅತಿಹರುಷದೊಳಿತ್ತ ನಂದವತ್ಯಾರ್ಯಿಕೆ । ಶ್ರುತಶಾಲಿನಿ ತಾನಾಗಿ ॥
…ತಶಿಲೋಪವಾಸದಿಯಾಚರಿಸುತ । ಸತತ ಸುಖವನೀಶಾನ ॥ ೪೫ ॥
…ರಕಲ್ಪದೊಳು ಪೂರ್ವಾರ್ಜಿತ ಪುಣ್ಯದಿ । ಸುರನಾಗಿ ತಾ ಸಂಜನಿಸಿ ॥
…ರಿವ ಕುಸುಮಚೂಲ ನಾಮವನಿರದಾಂತು । ಸುರ ಮುನ್ನಿನ ಸ್ನೇಹದಿಂದ ॥ ೪೬ ॥
…ಣಿಚೂಳ ರತ್ನಾದಿಚೂಳರೊಳಗೆ ತಾನು । ಕ್ಷಣಹೊತ್ತಗಲದೆ ಕೂಡಿರುತ ॥
…ಣವಂತ ಕುಸುಮಾದಿ ಚೂಲನು ಸುಖವ ತಾ- । ನುಣುತ ಭೋಗದೊಳಿರುತಿರಲು ॥

ಭರತಾರ್ಯಖಂಡದೊಳಿತ್ತಲವಂತಿಯೆಂ- । ಬುರುತರ ಜನಪದದೊಳಗೆ ॥
ಸುರಪುರಕೆಣೆಯಾದುಜ್ಜೈನಿಯೆಂದೆಂಬ । ವರಪಟ್ಟಣವೊಪ್ಪುತಿಹುದು ॥ ೪೮

ಅದನಾಳ್ವನಖಿಲ ಭೂಪಾಲಚೂಡಾಮಣಿ । ಮದನಸದೃಶ ನಾಗಶರ್ಮ ॥
ಸುದತಿಯಾದಳು ನಾಗವತಿಯೆಂಬವನಿಗೆ । ವಿದಿತ ವಿಲಾಸಾನ್ವಿತೆಯು ॥ ೪೯

ಅವರಿಗೆ ಜಿತಶತ್ರುಚರ ರತ್ನಚೂಲನು । ದಿವಿಯಿಂದ ತಾನಿಳಿತಂದು ॥
ಕುವರನಾದನು ವರಸೇನನೆಂದೆಂಬೋರ್ವ । ಸುವಿವೇಕಿ ಸುಜನೈಕಬಂಧು ॥ ೫೦

ವರಸೇನನಿಗೆ ರೂಪಿಣಿಚರ ಕುಸುಮಾದಿ । ವರಚೂಲ ದೇವನು ಬಂದು ॥
ನೆರೆವೆರೆವೊಗವ ಭಗಿನಿಯಾಗಿ ತಾ ಪುಟ್ಟಿ । ಸುರಮಂಜರಿಯೆಂಬ ಪೆಸರ ॥ ೫೧

ಇರದಾಂತು ಪೊಸಜವ್ವನೆಯಾಗಿರಲದ । ವರಸೇನ ಕುವರನು ಕಂಡು ॥
ಕರ ಸೊಗಯಿಪ ಕೌಶಂಬಿಪುರವನಾಳ್ವ । ಅರಸು ಶ್ರೀ ಜಿನಪಾಲಕನೆ ॥ ೫೨

ಸುದತೀಮಣಿ ಜಿನದತ್ತೆಗೆ ಪುಟ್ಟಿದ । ಉದಯಾರ್ಕಸನ್ನಿಭತೇಜ ॥
ಮದನಸಮಾನ ಚೆನ್ನಿಗ ಜಿನದತ್ತಗೆ । ಸುದತಿಯು ಸುರಮಂಜರಿಯು ॥ ೫೩

ಗರುಡವಿದ್ಯಾಚಾರ್ಯ ವರಸೇನ ಕುವರನು । ಹರುಷದಿ ಮದುವೆಯ ಮಾಡಿ ॥
ಇರುತಿರೆ ಸುಖದೊಳೋಲಾಡುತಲಿತ್ತಲಾ । ವರ ಮಣಿಚೂಲಾದಿ ದೇವ ॥ ೫೪

ಸುರಲೋಕದೊಳಗಾದ ಸುಖವನುಣುತಲಿರ್ದು । ವರಬೋಧದಿ ರತ್ನಚೂಲ ॥
ವರಸೇನನಾಗಿರ್ದ ಭವವನು ತಿಳಿದಾಗ । ಭರದಿ ಬೋಧಿಸಬೇಕೆಂದವನ ॥ ೫೫

ಕೊರಮನ ರೂಪಾಂತು ನೂರು ಪೆಡಿಗೆಯಲ್ಲಿ । ಉರಗಗಳನು ತುಂಬಿಕೊಂಡು ॥
ಹೊರಿಸಿ ಹಾವಡಿಗರ ಹೆಗಲೊಳು ಬಳಿಯನು । ಧರಿಸಿ ತಾ ಮೈಯೊಳಗೆಲ್ಲ ॥ ೫೬

ಕೊರಳಿಗೆ ಕರ್ಣಕೆ ತೋಳಿಗೆ ನಡುವಿಗೆ । ಕರಕೆ ಚರಣಯುಗ್ಮಲಕ್ಕೆ ॥
ಉರಗಂಗಳನಾಭರಣವ ಮಾಡಿಟ್ಟು । ಒರಸಿ ಬೂದಿಯ ಮೈಗೆಲ್ಲ ॥ ೫೭

ಹಲುಬಿಯ ಗರಿಯ ಮಸ್ತಕದೊಳಗಿರದಾಂತು । ಹುಲಿಚರ್ಮ ಹೊಕ್ಕುಳ ಘಂಟೆ ॥
ಸಲವಿಂದಿವು ಮೊದಲಾದ ಬಿರುದ ತೊಟ್ಟು । ವಿಲಸಿತ ನಾಗಸರವನು ॥ ೫೮

ಊದುತಲಾಗ ಗಾರುಡಿಗರರಸನೆಂ- । ದೋದಿಸಿಕೊಳುತಾಗ ಸಭೆಗೆ ॥
ಆ ದೇವ ಸಾಲಾಗಿರಿಸಿ ಪೇಳಿಗೆಯನು । ಮೇದಿನೀಶನ ಮುಂದಾಗ ॥ ೫೯

ಉರಗವೇಳಿಗೆಗಳ ತೆಗೆದು ಸರ್ಪಂಗಳ । ತ್ವರಿತದಿ ಹೆಡೆಯೆತ್ತ್ಯಾಡಿಸುತ ॥
ಎರಕದಿಂ ತೊಡೆ ಮುಂಗೈಯೊಳಾಡಿಸುತಾಗ । ಒರೆದನೆಲೆ ನಾಗಶರ್ಮ ! ॥ ೬೦

ಜನನಾಥ ! ನೀ ಕೇಳು ಭಪನ್ನದೇಶವ- । ನನುನಯದಿಂ ನಾನು ಪೊಕ್ಕು ॥
ಘನವಾದ ಗಾರುಡಿಗರ ಹೆಮ್ಮೆಯ ತೂಳ್ದು । ಮಿನುಗುವ ವರ ಬಿರುದುಗಳ ॥ ೬೧

ಉರಗವೇಳಿಗೆಗಳ ನಾಗಸರಂಗಳ । ಭರದಿ ಬಿರುದ ಸೆಳಕೊಂಡು ॥
ಮೊರೆದನ್ನ ನಿನ್ನ ಕುಮಾರಕ ವರಸೇನ । ಉರಗವಿದ್ಯದಿ ದಕ್ಷನೆಂದು ॥ ೬೨ ॥
ಜನಗಳು ಪೇಳುವ ವಾರ್ತೆಗಳನು ಕೇಳಿ । ಜನಪ ! ನಾನಿಲ್ಲಿಗೆ ಬಂದೆ ॥
ತನುಜನ ವರಸೇನನ ವಿದ್ಯೆಯ ನಾನು । ಮನದಕ್ಕರಿಂ ನೋಡಬೇಕು ॥ ೬೩ ॥
ದೇವ ! ಕರೆಸು ಎಂದು ಫಣಿಕುಂಡಲನಾ । ಭೂವರನಿಗೆ ಪೇಳುವುದ ॥
ಕೋಪಿದ ವರಸೇನ ಸೇವಕರಿಂ ಕೇಳಿ । ತೀವಿದ ಸಂತಸದಿಂದ ॥ ೬೪ ॥
ತರರ ಕೈಯಿಂದಲುರಗವೇಳಿಗೆಗಳ । ಭರದಿಂದ ಓಡಿಯಿಸಿಕೊಂಡು ॥
ಮೊರೆಕುವರರು ತನ್ನೊಡಬರೆ ವರಸೇನ । ನೆರೆ ಜಾಣ ಜಾವದಿಗೈದಿ ॥ ೬೫ ॥

ಆ ವೇಳೆಯೊಳು ಪುರಜನ ಪರಿಜನವೆಲ್ಲ । ಭಾವಜ್ಞ ವರಸೇನ ಕುವರ ॥
ಗಾರುಡಿಗನ ವಿದ್ಯೆಯ ನೋಡುವೆವೆಂದು । ತಾವೆಲ್ಲ ಬಂದು ನೆರೆದರು ॥ ೬೬ ॥
ಲೆ ಗಾರುಡಿಗನೆ ! ನಿನ್ನಯ ವಿದ್ಯೆಯ । ಬಲುಹ ನೋಡುವೆ ನನ್ನ ಮೇಲೆ ॥
ಲಸದೆ ಬಿಡು ಕಾಕೋದರನೆನಲಾ । ಕಲಿ ಸರ್ಪಕುಂಡಲನಾಗ ॥ ೬೭ ॥
ದು ಕೋಪದಿಂದ ಭುಜಂಗನ ತಾನೊಂದ । ಪಿಡಿದು ತಡೆಯನಾಗ ಒಡೆದು ॥
ಡಲದು ಘುಡುಘುಡಿಸುತ ವಿಷಗಾರುತ । ನಡೆದು ಬರ್ಪುದ ವರಸೇನ ॥ ೬೮ ॥
ಡುಬೇಗದಿ ತಡೆಯನು ಕಟ್ಟಿ ಮಂತ್ರಿಸೆ । ಕೆಡುಕ ನಾಗನು ಹೆಡೆಯೊಡೆದು ॥
ಡೆಯುಲು ಫಣಿಕುಂಡಲ ತಾ ಕಂಡಾಗ । ಕಿಡಿ ಕಿಡಿಪ್ರೋಗಿ ಮತ್ತೊಂದು ॥ ೬೯ ॥
ರಗನ ಬಿಡಲದು ಧರೆಯನಪ್ಪಳಿಸುತ । ಮೊರೆವ ಗರಳವನುಗುಳುತ ॥
ರಿತದಿಂ ಬರುತಿರೆ ದಾಡಾ ಬಂಧನ- । ನರಮಗ ಮಾಡಿ ಮಂತ್ರಿಸಲು ॥ ೭೦ ॥
ರದಿಂದ ಬಾಲಪರ್ಯಂತರ ತಾ ಸೀಳಿ । ಉರಗನು ಕೆಡೆಯೆ ಕುವರನು ॥
ರಿಸಿ ತಾ ದೃಷ್ಟಿವಿಷೋರಗನಾಗೊಂದು । ವರದೃಗ್ಬಂಧವನೊಡೆದು ॥ ೭೧ ॥
ಡಲದು ತನ್ನಯ ಕೆಡುಕು ದೃಷ್ಟಿಗಳಿಂದ । ಪೊಡವಿಯ ಸುಡುತಾರ್ಭಟಿಸಿ ॥
ಡುಬೇಗದಿಂ ಬರುತಿರೆ ಫಣಿಕುಂಡಲ । ಒಡನೆ ದೃಗ್ಬಂಧವ ಕಟ್ಟಿ ॥ ೭೨ ॥
ರಿತದೊಳಗೆ ಮಂತ್ರಿಸಲಾ ಸರ್ಪನ । ಶಿರ ಹಾರಿ ಭುವಿಯೊಳು ಕೆಡೆಯೆ ॥
ರಮಗನದ ಕಂಡು ಕೋಪಾಟೋಪದಿ । ಮೊರೆದೊಡೆ ಗಾವುದ ಸುಡುವ ॥ ೭೩ ॥
ದಶೂಕನ ಮಂತ್ರಿಸಿಯಾಗ ಬಿಡಲದು । ದಂದಶ್ಯಮಾಡುತ ಧರೆಯ ॥
ಧುವಿನಂತೆ ಘೋರ್ಮೋರೆದು ಬರುವುದ- । ನಂದು ಕಂಡನು ವಿಷವೈದ್ಯ ॥ ೭೪ ॥
ರದ ಬಂಧನವಿಕ್ಕಿ ದಿವ್ಯ ಮಂತ್ರಗಳಿಂದ । ಉರಗಕುಂಡಲಭಸ್ಮೀಕರಿಸಿ ॥
ದುಕೋಪದಿಂದ ಕರ್ಕೋಟಕನೆಂದೆಂಬ । ವರಸಪ್ತದರ್ಪಿಯನುಳ್ಳ ॥ ೭೫ ॥

ಉರಗನ ಬಿಡಲದು ಜಿಹ್ವೆಯ ನೀಡುತ । ಗರುಡನಾದರು ಅಗಲದನು ॥
ಭರದಿ ನುಂಗುವೆನೆಂದು ಧರೆಯಾಗಸವನು । ಗರಳದಿ ಸುಡುತ ಫೂತ್ಕರಿಸಿ ॥ ೭೬ ॥

ಬರುತಿರ್ದ ಕುಂಡಲಿಯನು ಕಂಡು ವರಸೇನ । ಇರದೆ ಮಂತ್ರಿಸೆಯಾಗವರ ॥
ವರದೇಹ ಗೇಣು ಗೇಣಿಗೆ ತುಂಡು ತುಂಡಾಗಿ । ಧರೆಯೊಳು ಬಿರ್ದಿರೆ ಕಂಡು ॥ ೭೭ ॥

ಭರದಿ ಜಾಂಗುಲಿಕನು ಹಲು ತಿಂದು ಮೊರೆದೆದ್ದು । ಹರನಾದರು ಬೆಚ್ಚಿ ಬೆದರ್ವ ॥
ಕರ ಭೀಕರವಾದ ನವಫಣಗಳನುಳ್ಳ । ವರ ಧನಂಜಯನೆಂದೆಂಬ ॥ ೭೮ ॥

ಪವನಾಶನವನು ಬಿಡಲದು ಮೊರೆವುತ । ಕವಿದ ಕೋಪದೊಳೆಂಬರಕೆ ॥
ತವಕದಿಂ ನಾಲಗೆಗಳ ನೀಡುತಲದು । ಕುವರನೊತ್ತಿಗೆ ಬರುತಿರಲು ॥ ೭೯ ॥

ವರಸೇನ ತಾ ಕಂಡು ಮಂತ್ರಿಸಿ ಹೆಡೆಗಳು । ಇರದೊಂದೊಂದು ಬೇಗದೊಳು ॥
ಹರಿಯಾಗಸಕೆ ನೆಗೆದು ಧರೆಯೊಳು ಬಿರ್ದು । ಹರಣವಳಿದುದು ಜಾಂಗಳಿಕ ॥ ೮೦ ॥

ಕಡುಬೇಗದಿಂ ಕಂಡು ಸಾಸಿರ ಪೆಡೆಯುಳ್ಳ । ಕೆಡುಕ ಕಾಳೋರಗವಿಡಿದು ॥
ಪೊಡವಿಪ ನಂದನ ! ನೀ ಕೇಳೀ ಸರ್ಪನು । ಬಿಡದೆ ಕೋಪದಿ ನೋಡಿದೊಡೆ ॥ ೮೧ ॥

ಪೊಡವಿಯನೀರಾರು ಗಾವುದ ಸುಡುವುದು । ಮೃಡನಾದರು ಹಿಮ್ಮೆಟ್ಟುವನು ॥
ಉಡುಪತಿ ಬೆಚ್ಚಿ ದೇವಾಸುರರೆಲ್ಲರು । ಗಡಗಡ ನಡುಗಿಯಂಜುವರು ॥ ೮೨ ॥

ಗರುಡನಾದರು ಒಮ್ಮೆ ಪಾತಾಳಕಿಳಿವನು । ಧರೆ ಗಡಗಂಪಿಪುದೆನಲು ॥
ನರಕೀಟಕರನು ಲೆಕ್ಕಿಪುದೇ ಎಲೆ । ಮರುಳೆ ! ಹೆಮ್ಮೆಯೊಳೇಕೆ ಬೆರೆತೆ ॥ ೮೩ ॥

ಕುಂಡಲಿಯದ್ಭುತವಾದ ಸ್ವರೂಪವ । ಕಂಡಾಗಲೆ ನೀ ಸಾವೆ ॥
ಮಂಡಳೇಶ್ವರನು ನನಗೆ ಮುನಿಯದೆ ಬಿಡ- । ನುಂಡುಟ್ಟು ಪೆಂಡವಾಸದೊಳು ॥ ೮೪ ॥

ಉರುತರ ಸುಖವ ನೀನನುಭವಿಸೆಂದೆನೆ । ನೆರೆಗಲಿ ವರಸೇನ ಕೇಳಿ ॥
ದರಹಸಿತಾನನದೊಳಗಿಂತೆಂದಾಗ । ಒರೆದನೆಲೆ ಜಾಂಗುಲಿಕ ! ॥ ೮೫ ॥

ಕರಿಯಾರ್ಭಟಿಸಲು ಹುಲಿಯಂಜುವುದೆ ಕೇ- । ಳುರಗನ ಭಯಕೆ ತಾ ಬೆಚ್ಚಿ ॥
ಹೆರಸಾರುವುದಿಲ್ಲ ಗರುಡವಂಜಲು ಬೇಡ । ಉರಗನ ಬಿಡು ಎಂದೆನಲು ॥ ೮೬ ॥

ನನ್ನಿಂದ ತಿಲಮಾತ್ರವಾದರು ತಪ್ಪಿಲ್ಲ । ನಿನ್ನ ಹಣೆಲಿ ಬರೆದಂತೆ ॥
ಚೆನ್ನಾಗಿ ನೀನನುಭವಿಸು ದುಃಖವನೀಗ । ನಿನ್ನ ದೇವತೆಗಳ ನೆನಕೋ ॥ ೮೭ ॥

ಎನುತಾಗ ಫಣಿಕುಂಡಲ ತಡೆಯನು ಬಿಟ್ಟು । ಘನಭಯಂಕರ ಮೂರ್ತಿಯಾದ ॥
ವನಧಿಯಂದದಿ ಘೋರ್ವೋರೆನೆ ಕೃಷ್ಣಾಹಿಯು । ಜನಪ ಸುತನ ಮೇಲೆ ಬಿಡಲು ॥ ೮೮ ॥

ಧರೆಯನಪ್ಪಳಿಸುತ ಗರಳವನುಗುಳುತ । ಅರುಣ ಜಿಂಹ್ವೆಯ ನೀಡುತಲಿ ॥
ಭರದಿಂದ ಭುಸ್ಸೆಂದು ಕಿಡಿಗಳನುಗುಳುತ । ಬರುವಾಗ ಸರ್ಪನ ನೆಳಲು ॥ ೮೯

ಪೊಡವಿಯ ಕಾರ್ಗಾಲ ಕತ್ತಲೆ ಕವಿದಂತೆ । ಕಡುಬೇಗ ಮುಸುಕೆಯುದರೊಳು ॥
ನಿಡುಸಾಲಿಗೆಸೆದವು ಕರಿಯ ಮುಗಿಲಿನೊಳು । ಎಡೆಯಾಡುವ ಮಿಂಚಿನಂತೆ ॥ ೯೦ ॥

ಜನಗಳು ವಿಷದ ಜ್ವಾಲೆಗೆ ಬಿರ್ದು ಹೊರಳುತ । ಇನಿಸು ನೋಡುವರಂಜಿ ತಮ್ಮ ॥
ಕೊನೆವಸ್ತ್ರದಿಂದ ಕಣ್ಣನು ಮುಚ್ಚಲು ಸರ್ಪ । ಇನಪಥದುದ್ದಕ್ಕೆ ಬೆಳೆದು ॥ ೯೧ ॥

ಅರುನೂರು ಕವಲಾದ ಬಾಲದಿ ಸಿಲ್ಲುತ । ಚುರುಚುರು ಚುಮ್ಮೆಂದೆನುತ ॥
ಎರಡು ಸಾವಿರ ನಾಲಿಗೆಯನು ನೀಡುತ । ವರಸೇನನ ಬಂದಪ್ಪಳಿಸೆ ॥ ೯೨ ॥

ವಿಷಪೂರಿತವಾಗಿ ಮೂರ್ಛೆಯು ಸಂದಾಗ । ವಸುಧೇಶಸೂನು ಭೂಮಿಯೊಳು ॥
ಹಸುರಿನ ಮೈಯಿಂದ ಕಪ್ಪಾಗಿ ಕೆಡೆದು ತಾ- । ನಸು ಹಾರಿಯೊರಗಿರ್ದದನು ॥ ೯೩ ॥

ಮೃತನಾದ ವರಸೇನನೆಂದಾಗ ಮೋಹದಿ । ಕ್ಷಿತಿನಾಥನೆಂದೆಲೆ ಕೊರವು ! ॥
ಸುತನಲ್ಲಿ ಸೈರಿಸು ಪ್ರತಿವಿದ್ಯೆಯರಿಯದೆ । ಮತಿಹೀನನೆಸಗಿದನವನ ॥ ೯೪ ॥

ಅಪರಾಧಕೋಟಿಯುಂಟಾದರು ಸೈರಿಸಿ । ವಸುಪೂರಿತ ಗರಳವನು ॥
ಕೃಪೆಯಿಂದ ತೊಲಗಿಸು ನೀ ಬಲ್ಲಂದದಿ । ಕಪಟ ಹೃದಯವನು ಬಿಟ್ಟು ॥ ೯೫ ॥

ಎಲೆ ಫಣಿಕುಂಡಲ ! ಪಲವು ಮಾತೇತಕೆ । ಬಲಯುತನನು ಮಾಡುವೆನು ॥
ಸಲಹುವೆ ಪುತ್ರನಂದದೊಳು ನಾ ನಿನ್ನನು । ಪಲವು ದೇಶಗಳನು ಕೊಡುವೆ ॥ ೯೬ ॥

ಇದಕೆ ಸಂಶಯ ಬೇಡ ಜಿನರಾಣೆ ! ಎಂದು ಭೂ- । ಸುದತೀಶ ಕಣ್ಣೀರ ತುಂಬೆ ॥
ಅದ ಕೇಳಿ ಪಣಿಕುಂಡಲ ನಾಗಶರ್ಮನೊ- । ಳದುರದೆ ನುಡಿದನಿಂತೆಂದು ॥ ೯೭ ॥

ನರನಾಥ ! ನೀ ಕೇಳು ನಿನ್ನ ಕುಮಾರಕ । ದುರುಳತನದ ಕೊಬ್ಬಿನಿಂದ ॥
ನೆರೆ ಗಾರುಡಿಗ ನಾನೆಂದೀಗ ಲೋಕದಿ । ಬೆರೆತು ಹೆಮ್ಮೆಯ ಮಾಡಿಕೊಂಡು ॥ ೯೮ ॥

ಪರಿಭವಕೊಳಗಾಗಿ ಮರಣವನೈದಿದ । ಪರಿಹರಿಸುವರಳವಲ್ಲ ॥
ಅರಸ ! ನೀ ಕೇಳು ಹಾಗಾಗದು ನಾನೊಂದು । ಒರೆವೆನು ಮೇಲು ಯೋಚನೆಯ ॥ ೯೯ ॥

ಜಿನದೀಕ್ಷೆಯ ತಾಳುವೆನೆಂಬಗಲ್ಲದೆ । ಘನಮಪ್ಪ ವಿಷ ಪೋಗದೆಂದು ॥
ನನಗೋರ್ವನು ಜೈನಯೋಗೀಂದ್ರನು ಪೇಳಿ- । ದನುಪಮ ಮೂಲಮಂತ್ರವಿದು ॥ ೧೦೦ ॥

ನರಪಾಲ ! ಕೇಳದು ಕಾರಣ ಬೇರೊಂದು । ತೆರನು ಕಾಣೆನು ವಿಷಹರಕೆ ॥
ವರಕುಮಾರಕನೆಂತು ಬದುಕುವನಂತಪ್ಪ । ತೆರನ ನೀನೆಸಗುವುದುಚಿತ ॥ ೧೦೧ ॥

ಭ್ರಾಂತಿಗೊಳಲುಬೇಡವೆಂದಹಿಕುಂಡಲ । ತಾಂ ತಳುವದೆ ಪೇಳೆ ನೃಪತಿ ॥
ಅಂತಾದೊಡಾಗಲಿ ಎಂದು ಪೇಳಲು ತನ್ನ । ಸ್ವಾಂತದೊಳಗೆ ಮಂತ್ರವನು ॥ ೧೦೨ ॥

ತ್ವರಿತದಿಂದಲಿ ಚಿಂತಿಸೆ ಫಣಿ ವಿಷವನು । ಪರಿಹಾರವನು ತಾ ಮಾಡೆ ॥
ವರಸೇನನೆಚ್ಚತ್ತು ಹರುಷದಿಂ ಕುಳ್ಳಿರೆ । ಸುರವರ ತನ್ನ ವೇಶವನು ॥ ೧೦೩ ॥

ಪರಿಹರಿಸಲು ದಿವ್ಯಾಂಗದ ಕಾಂತಿಯು । ಸರನಾಥನ ಸಭೆ ತುಂಬೆ ॥
ಬೆರಕೆ ವರಲದಿವ್ಯ ಭೂಷಣಗಳ ರುಚಿ । ತರುಣಾರ್ಕರುಚಿಯಂತೆ ಪೊಳೆಯೆ ॥ ೧೦೪ ॥

ಪೊಸತಾದ ತನುರುಚಿಯೆಸೆವಾತ ನೀನಾರು । ಬೆಸಸೆಂದು ವರಸೇನ ಕೇಳೆ ॥
ಎಸಳುಗಂಗಳ ಕಾಂತಿ ಪತ್ತುದೆಸೆಯ ನಾ- । ಗಸವಸದಿಂ ಪಸರಿಸಲು ॥ ೧೦೫ ॥

ನಸುನಗೆ ಮಿಂಚುತ ನಿರ್ಜರ ತಾನಿಂ- । ತುಸುರ್ದನು ವರಸೇನನೊಡನೆ ॥
ಬಿಸರುಹಾನನ ! ಕೇಳು ನಾಲ್ಕನೆ ಭವದೊಳು । ವಸುಧೇಶನಜಿತಂಜಯನು ॥ ೧೦೬ ॥

ನಾನಾಗಿರ್ದಾಗ ಜಿತಶತ್ರುವೆಂದೆಂಬ । ಮಾನಿತ ನಂದನ ನನಗೆ ॥
ನೀನಾಗಿರ್ದೆಯಾ ಜನ್ಮಾಂತರವನು । ಜಾನಿಸಿ ತಿಳಿ ಎನ್ನ ಕಂದ ! ॥ ೧೦೭ ॥

ಎನಲಿಂತು ವರಸೇನ ಜಾತಿಸ್ಮರಣೆಯಿಂ । ಘನತರ ಭವಗಳ ತಿಳಿದು ॥
ಇನಿತು ಬೇಗದಿ ಮೂರ್ಛಿತನಾಗಿ ಬೀಳಲು । ಜನನಿ ತಾ ಕಂಡು ದುಃಖಿಸಲು ॥ ೧೦೮ ॥

ಅರಸನುಮ್ಮಳಿಸುತ ಶೀತಳಕ್ರಿಯೆಯಿಂದ । ಪರಿಹರಿಸಲು ಮೂರ್ಛೆ ತಿಳಿದು ॥
ವರಸೇನನೆಚ್ಚತ್ತು ಜಿತಶತ್ರು ಮೊದಲಾದ । ವರಭವಗಳ ಸಭೆಯೊಳಗೆ ॥ ೧೦೯ ॥

ಜನಕ ಮುಂತಾದ ಜನಪರೊಳು ತಾ ಪೇಳಿ । ಮನ ಬೆಚ್ಚಿಯಾಜವಂಜವಕೆ ॥
ಘನವಾಗಿ ಮಣಿಚೂಲದೇವನ ಕೊಂಡಾಡಿ । ಜನಿಸಿದ ನಿರ್ವೇಗದಿಂದ ॥ ೧೧೦ ॥

ಜನನಿ-ಜನಕ ಮುಂತಾದ ಬಂಧುಗಳಿಗೆ । ವಿನಯವ ನುಡಿದು ಬೀಳ್ಕೊಂಡು ॥
ಅನಘ ಜೈನೀಯ ದೀಕ್ಷೆಯನು ತಳೆದು ಜಿನ- । ಮುನಿ ಧರ್ಮಸೇನರ ಸೇರಿ ॥ ೧೧೧ ॥

ಅಕ್ಷಯಾನಂತ ಸುಖಕೆ ಕಾರಣಮಾದ । ದೀಕ್ಷೆಯ ಮಣಿಚೂಲ ಕೊಡಿಸಿ ॥
ಅಕ್ಷುಣ್ಣಚರಿತ ಮುಮುಕ್ಷುಗಳ್ಗೆರಗಿ ತಾ- । ನಾಕ್ಷಣದೊಳು ಬೀಳ್ಕೊಂಡು ॥ ೧೧೨ ॥

ಸುರಲೋಕಕೆ ಪೋದ, ನಾಗವರ್ಮನು ಇತ್ತ । ಅರಸುತನದ ಭಾರವನು ॥
ಕಿರಿಯಗೆ ಜಯವರ್ಮಗೆ ಕೊಟ್ಟು ದೀಕ್ಷೆಯ । ಧರಿಸಿದ ‘ನಂದಿ’ಯುಮಿಯೊಳು ॥ ೧೧೩ ॥

ಶತಮುಖ ಲೋಕದಿಂ ಚದುರ ಶ್ರೀ ಮಣಿಚೂಲ । ಮಿತದಾಯು ತೀರಿಳಿತಂದು ॥
ಕ್ಷಿತಿಪಾಲ ಜಯವರ್ಮನ ಪಟ್ಟದ ರಾಣಿ । ಶ್ರುತದೇವಿಗೆ ಸರಿಯಾದ ॥ ೧೧೪ ॥

ಅತಿರೂಪವತಿ ರೋಹಿಣಿದೇವಿ ಬಸಿರೊಳು । ಸುತನಾಗಿ ಪುಟ್ಟಲು ಅವಗೆ ॥
ಕ್ಷಿತಿಪತಿ ಪದ್ಮರಥನು ಎಂಬ ಲೋಕವಿ- । ಶ್ರುತವಾದ ಪೆಸರನು ಕರೆಯೆ ॥ ೧೧೫ ॥

ಪಾಡಿವದೆಳೆವೆರೆ ಕಲೆಗೂಡಿ ಬೆಳೆವಂತೆ । ಗಾಡಿಕಾರನು ಬೆಳೆಬೆಳೆದು ॥
ರೂಢಿಯಿಂ ಜಗದೊಳು ಜಸವೆತ್ತು ಸೊಬಗಿಂದ । ಪ್ರೌಢರರಸನೊಪ್ಪಿದನು ॥ ೧೧೬ ॥

ಸುರಸತಿ ಸಮರೂಪೆ ಸುಲಿಪಲ್ಲ ಶುಕವಾಣಿ । ಅರಸಂಚೆ ನಡೆಯ ಸೊಮ್ಮ್ರಡಿಯ ॥
ಗುರುಕುಚೆ ಪುಷ್ಪಾವತಿ ಪದ್ಮರಥನಿಗೆ । ವರಪಟ್ಟದರಸಿಯಾಗಿಹಳು ॥ ೧೧೭ ॥

...ರಪತಿ ಶಚಿಯೊಳು ಹರಿಯುಂದಿರೆಯೊಳು । ಸ್ಮರರತಿಯೊಳಗಿರುವಂತೆ ॥
...ರುಣಿ ಪುಷ್ಪಾವತಿಯೊಳು ಪದ್ಮರಥನಾಗ । ವರಸುಖದೊಳು ಕೂಡಿಹನು ॥ ೧೧೮ ॥
...ರಿರಾಯುಗಜ ಕಂಠೀರವ ಮರೆಹೊಕ್ಕ । ಧರಣೀಶ ಶರಧಿ ಶಶಾಂಕ ॥
...ರುಹನ ಪಾದೇಂದೀವರರೋಲಂಬ । ದೊರೆ ಪದ್ಮರಥನೊಪ್ಪಿದನು ॥ ೧೧೯ ॥

**॥ ಅಂತು ಸಂಧಿ ೨೩ಕ್ಕಂ ಪದ ೩೨೦೫ಕ್ಕಂ ಮಂಗಲಂ ॥**

## ವರಸೇನ ಮುನಿಯನ್ನು ಬೇಡರು ಹಿಡಿದುದು.

ವರಸೇನಮುನಿ ಪದ್ಮರಥನ ಬೋಧಿಸಲೆಂದು। ಬರೆ, ಬೇಡರ್ಪಿಡಿದುದನುಸುರ್ವೆ ॥ಪ॥

ಪುರುಹೂತ ಮುಕುಟತಾಟಿತ ದಿವ್ಯ ಶ್ರೀಪಾದ । ಸ್ಮರಗರ್ವಹರ ಸರ್ವಶಾಂತ ॥
...ರಭವ್ಯಾಂಬುಜ ದಿನಮಣಿ **ಶಾಂತೀಶ** ! । ಪರಿಹರಿಸೆಮ್ಮ ದುಷ್ಕೃತವ ॥ ೧ ॥

ಉತ್ತಮ ನಾಯಕ ಜಿನಚಂದ್ರ ಭೂಭುಜ ! । ದತ್ತಾವಧಾನದಿ ಕೇಳು ॥
...ತ್ತಲುಜ್ಜೈನಿಯ ಸುರರಾಜಮರಾವತಿ । ಪತ್ತನವನು ಆಳುವಂತೆ ॥ ೨ ॥

...ರಿ ಪದ್ಮರಥ ಪುಷ್ಪವತಿಯೊಡನೆ ಕೂಡಿ । ಧರೆಯನೇಕಛತ್ರದಿಂದ ॥
...ರಿಪಾಲಿಸುತಾಗಿರಲೊಂದಾನೊಂದು । ವರದಿನದೊಳು ನಾಗಲತೆಯು ॥ ೩ ॥

...ರಕೌಶಂಬಿ ಪಟ್ಟಣಕೆಂದು ತನ್ನಯ । ಪರಿಜನಂಗಳ ಕೂಡಿಕೊಂಡು ॥
...ರಮಂಜರಿಯೆಂಬ ಮಗಳ ನೋಡುವೆನೆಂದು । ಬರಲು ವಿಂಧ್ಯಾಟವಿಯೊಳಗೆ ॥ ೪ ॥

...ಡನು ಬಿಟ್ಟಲ್ಲಿರುತಿರಲತ್ತಲಾ । ಕಾಡೊಳು ಮನೆಗಟ್ಟಿಕೊಂಡು ॥
...ಡನಾಯಕರಿಗೊಡೆಯ ಶೂರದತ್ತನು । ಕೇಡಾಳಿ ಬಟ್ಟೆಬಡಿಕನು ॥ ೫ ॥

...ತಳವೆಲ್ಲವನಾಕ್ರಮಿಸಿಕೊಂಡು । ಭೀತಿಯ ಜನಕೆ ಪುಟ್ಟಿಸುತ ॥
...ತನಾಗಿರುತಿರೆ ಅವನಿಗೆ ಬಂಟರು । ನೂತನ ವಿಂಧ್ಯಗಿರಿಯೊಳು ॥ ೬ ॥

...ರುತಿರೆ ನಾಗಲತೆಯು ಇತ್ತ ತನ್ನಯ । ವರಸುತೆ ಸುರಮಂಜರಿಗೆ ॥
...ರವಸ್ತು ತತಿಗಳ ಕೊಂಡುಪೋಪುದನವ- । ರರಿದು ಹಾದಿಯೊಳಡಗಿರಲು ॥ ೭ ॥

...ರಗಣಪೂಜಿತ ಪಾದಾರವಿಂದನು । ವರಸೇನ ಮುನಿನಾಥನಿತ್ತ ॥
...ತಾರ್ಯಖಂಡದೊಳಗೆ ವರ್ತಿಸುತಿ- । ರ್ದರುಹತ್ಸ್ವಾಮಿಗೆರಗುತ ॥ ೮ ॥

...ವಿಕ್ರೀಡಿತಾಚಾರನ್ನು ವರ್ಧನವಾದಿ । ಪರಮವ್ರತದೊಳು ನಡೆವುತ ॥
...ರುತಿರ್ದೊಂದಾನೊಂದು ದಿವಸದೊಳು । ಅರಿದು ಅವಧಿಬೋಧದಿಂದ ॥ ೯ ॥

ದಿವಿಯಿಂದ ಮಣಿಚೂಳ ನಿರ್ಜರನಿಳಿತಂದು । ಭುವಿಯೊಳಗಾ ಪದ್ಮರಥನು ॥
ಭುವನೇಶ್ವರನಾದನೆಂದು ತಿಳಿದು ಮುನಿ- । ಯವನ ಬೋಧಿಸಬೇಕೆಂದು ॥ ೧೦ ॥

ಮುನಿನಾಥನತ್ಯಂತ ಶಾಂತಮಾನಸನಾಗಿ । ಮಿನುಗುವ ಉಜ್ಜೈನಿಪುರಕೆ ॥
ಇನಿಸು ಬೇಗದಿ ವನವನು ಪೊಕ್ಕು ಬರುತಿರೆ । ವನಚರರ್ಕಂಡಾ ಮುನಿಯ ॥ ೧೧ ॥

ಈ ಯಮಿಯನು ನಾವು ಬಿಟ್ಟೊಡೀತನು ಪೋಗಿ । ತಾಯೊಡಗೂಡಿ ಬಿಟ್ಟಿರ್ದ ॥
ತಾಯೊಳು ಪೇಳ್ಗುಮೆಂದರಿದಾಗಲಾ ಬೇಡ- । ರಾ ಯತಿಯನು ಬಂದು ತಡೆದು ॥ ೧೨ ॥

ದುರಿತ ಕಾಂತಾರದಾವಾಗ್ನಿಯೆಂದೆನಿಸಿದ । ಸುರಗಿರಿಸಮ ಬಲಯುತನ ॥
ಕರುಣಾರ್ಣವಚಂದ್ರಮುನಾ ಪುಳಿಂದರು । ತ್ವರಿತದಿಂದವೆ ಪಿಡಿತಂದು ॥ ೧೩ ॥

ಒಡೆಯನೆನಿಪ ಶೂರದತ್ತನ ಮುಂದಕೆ । ಕೆಡುಕ ವ್ಯಾಧರು ಮುಂದೆ ನಿಲಿಸೆ ॥
ಮಿಡುಕದೆ ಧ್ಯಾನದೊಳಗೆಯಿರ್ದ ಜತಿಯನು । ಒಡನೆ ಕಂಡಾ ಶೂರದತ್ತ ॥ ೧೪ ॥

ಕರುಣಹೃದಯನಾಗಿ ಈ ಜತಿರಾಯನ । ಕರೆದು ತಂದವರಾರೆನುತ ॥
ಪರಿಚಾರಕರ ಕೇಳಲು ಕಿರಾತರು । ಕರವ ಮುಗಿದು ಪೇಳ್ದರಿಂತು ॥ ೧೫ ॥

ಧನಕನಕಾದಿ ವಸ್ತುವ ಕೊಂಡುಬಂದೀ । ವನದೊಳು ಬೀಡನು ಬಿಟ್ಟು ॥
ವನಿತಾಮಣಿ ನಾಗಲತೆಯಿರುತಿರೆ ಕಂಡು । ಇನಿಸು ಬೇಗದೊಳಡಗಿರ್ದು ॥ ೧೬ ॥

ಘನವಸ್ತುಗಳನು ಸೆಳೆಯಲೆಂದಿರುತಿರೆ । ಮುನಿನಾಥ ನಮ್ಮನು ಕಂಡು ॥
ವನದೊಳು ಪೋಗುತಿರಲು ಈತನು ತನ್ನ । ಜನನಿಗೆ ಪೇಳ್ದೊಡೆ ನಮಗೆ ॥ ೧೭ ॥

ವರ ವಸ್ತುತತಿ ಸಿಕ್ಕಲರಿಯದೆಂದು ಎಣಿಸಿ । ತ್ವರಿತದಿಂದವೆ ನಾವೀ ಮುನಿಯ ॥
ಕರೆದು ತಂದೆವು ಎಂದು ವನಚರರಾಡಲು । ವರಶೂರದತ್ತನಿಂತೆಂದ ॥ ೧೮ ॥

ಮನಸಿಜಮದಮರ್ದನ ದುರಿತಾರಿಯು । ಮುನಿನಾಥನ ಚಿತ್ತವನು ॥
ವನಚರರುಗಳು ನೀವೇನ ಬಲ್ಲಿರಿ ತನ್ನ । ತನುವಿನೊಳಾಶೆ ತಾನಿಲ್ಲ ॥ ೧೯ ॥

ಜನನಿ–ಜನಕ ಬಂಧು–ಬಳಗದ ಮೋಹವ । ಕನಸಿನೊಳಗೆ ಮಾಳ್ಪರಲ್ಲ ॥
ಮುನಿವವನಲ್ಲಾವ ಜೀವಕು ಕೃಪೆವಂತ- । ನನಘನು ಚಾರಿತ್ರವಂತ ॥ ೨೦ ॥

ಕಡಿವ ಕಳ್ಳರಿಗು ದಯವ ಚಿಂತಿಸುವನು । ಅಡಿಗೆರಗಿದ ಭವ್ಯ ಜನಕೆ ॥
ಬಿಡದೆ ಧರ್ಮವ ಪೇಳ್ವ ನಿಚ್ಚಲು ಸತ್ಯವ । ನುಡಿವನು ಶೀಲ ಸಂಪನ್ನ ॥ ೨೧ ॥

ಸಕಲ ಜೀವಗಳಲ್ಲಿ ಕ್ಷಮೆದಮೆವಂತನು । ಮುಕುತಿ ಮಾರ್ಗವ ಜಾನಿಸುವನು ॥
ಅಕಲಂಕ ಬೋಧನವನ ಗುಣಗಣಗಳ । ಸಕಲರು ಬಲ್ಲರು ನಾನು ॥ ೨೨ ॥

ಬಲ್ಲೆನೆಲೆ ಮುನಿರಾಜ! ನೀನೆಡೆಯೊಳು । ನಿಲ್ಲದೆ ನಿನ್ನ ಚಿತ್ತಕ್ಕೆ ॥
ಬಲ್ಲಂತೆ ಚಿತ್ತೈಸು ಎಂದು ಕೈಮುಗಿದಾ । ಬಿಲ್ಲರಾಜನು ಬೀಳ್ಕೊಡಲು ॥ ೨೩ ॥

ಮುನಿಪತಿ ವನದೊಳು ನಡೆತರುತಿರೆ ತಾ । ಜನಗಳು ಕಂಡು ವೇಗದೊಳು ॥
ವನಿತಾಮಣಿ ನಾಗವತಿಯೊಳು ಪೇಳಲು । ತನುಜನವರು ನನಗೆಂದು ॥ ೨೪ ॥

ಹರುಷವ ಮನದಲ್ಲಿ ತಾ ತಾಳಿ ನಡೆತಂದು । ವರಮುನಿಯಡಿದಳಕೆರಗಿ ॥
ಗರುವೆ ಮನದ ಬೆದರಿಕೆಯ ಸಂಶಯವನು । ಮುರುಕದಿಂ ಕೇಳ್ದಳಿಂತೆಂದು ॥ ೨೫ ॥

ಕಂದ ! ಕೇಳೆಮಗಿಂದು ಮುಂದಣ ಪಯಣಕೆ । ಸಂದೇಹವಾಗಿದೆ ನೀವು ॥
ಬಂದಿರ್ದ ಪಾರಿಪಂಥಿಗರ ಕಂಡುದು ಉಂಟೋ । ಎಂದು ತಾ ಬೆಸಗೊಳೆ ಮುನಿಯು ॥

ಎಂದು ನುಡಿಯದೆ ಮುಂದಣ ವನದೊಳು ಬಂ- । ದುದ್ಯಾನವನದೊಳು ನಿಂದು ॥
ಚಂದನವನದೊಳಗಡಗಿರ್ದ ಬೇಡರು । ಬಂದು ಬೀಡನು ಮುತ್ತಿಕೊಂಡು ॥ ೨೭ ॥

ವನಕನಕಾದಿ ವಸ್ತುಗಳ ಕಸಿದುಕೊಂಡು । ವನಚರರುಗಳು ಬೇಗೊಯ್ದು ॥
ಇನನಾದ ಶೂರದತ್ತನ ಮುಂದೆ ವಸ್ತುವ- । ನನಿತೆಲ್ಲವ ತಂಗಿರಿಸೆ ॥ ೨೮ ॥

ವರವಸ್ತುವಾಹನಗಳ ಬೇಡ ಕಂಡಾಗ । ಶಿರದೂಗಿ ಮೆಚ್ಚಿ ಮುನಿಪನ ॥
ವರಗುಣ ಚಾರಿತ್ರಗಳ ಪುಳಿಂದಾಧಿಪ । ಒರೆದನು ಮಹಾಭಕ್ತಿಯಿಂದ ॥ ೨೯ ॥

ಅರಿಬಂಧು ಜನದಲ್ಲಿ ಪುರದಲ್ಲಿ ವನದಲ್ಲಿ । ದೊರೆಕೊಂಡ ಸುಖದುಃಖದಲ್ಲಿ ॥
ವಿರಹದಿಂ ಯೋಗದಿ ಸರಿಯೆಂದು ಭಾವಿಸಿ । ಪರಮಾತ್ಮನ ಚಿಂತಿಸುವ ॥ ೩೦ ॥

ಪುರುಷರತ್ನಗೆ ಮುನಿನಾಥಗೆ ಸರಿಯನು । ಒರವೆನಿನ್ನಾರ ಜಗದೊಳು ॥
ಅರರೆ ಭಾಪುರೆ ಭಾಪು ಎಂದು ಬಿಲ್ಲಾಧಿಪ । ನೆರೆಗೊಂಡಾಡುವ ನುಡಿಯ ॥ ೩೧ ॥

ಸತಿ ನಾಗವತಿ ಕೇಳಿ ಮನದೊಳಗತ್ಯಂತ । ವ್ಯಥೆಯನು ತಾ ಮಾಡಿಕೊಂಡು ॥
ಬತವೆಂದು ಎಲೆ ಶೂರದತ್ತ ! ನೀ ಕೇಳೈ । ಅತಿಕ್ರೂರ ನನ್ನ ಗರ್ಭದೊಳು ॥ ೩೨ ॥

ಸುತನಾಗಿ ನನಗೆ ಕಷ್ಟವ ತಾನೆಸಗಿದ । ಹಿತವನೆ ಮಾಡಿದ ನಿನಗೆ ॥
ಅತಿಪಾಪಿ ವಂಚಕ ಮಲಿನಾಂಗ ದುಷ್ಟನ । ಪ್ರತಿಯೆನ್ನಬಹುದೆ ಬಣಗನ ॥ ೩೩ ॥

ಆತನ ಪೆತ್ತ ಬಸಿರ ಸೀಳಿ ಹಾಕುವೆ । ಖಾತಿಯ ಮಾಡುವೆನವಗೆ ॥
ನೀ ತಳುವದೆ ಸುರಗಿಯ ನೀಡಲ್ಲದೆ । ದೂತರ ಕೈಯಿಂದಲೆನ್ನ ॥ ೩೪ ॥

ಇರಿಯಿಸಿ ಹಾಕು ಕೈಕಾಲನು ಮುರಿಯಿಸು । ಗರಗಸದಿಂದ ಕೊರಯಿಸು ॥
ಹರಣವನಾವಂಗದೊಳು ಬಿಡುವೆನೆಂದು । ಮೊರೆಯಿಟ್ಟು ಶೋಕಿಸುತಿರಲು ॥ ೩೫ ॥

ವನಸರಾಜನವಳ ಶೋಕವ ಕೇಳಿ ದಯೆಯಿಂದ । ಪನಿವ ಕಣ್ಬನಿಗಳನೊರಸಿ ॥
ಜನನಿ ! ನೀ ಶೋಕವ ಬಿಡು ಬಿಡು ನಿನ್ನಯ । ಮನಕೆ ಬಂದಂತೆ ಮಾಡುವೆನು ॥ ೩೬ ॥

ಎನುತ ಶಬರನಾಯಕ ಕಾಲಿಗೆ ಬಿದ್ದು । ಕನಕಾದಿ ವಸ್ತು ವಾಹನವ ॥
ವಿನಯಪೂರ್ವಕವಾಗಿ ಕರೆಸಿ ಕೊಟ್ಟವಳನು । ಅನುವಾದ ತನ್ನಾಳಕೂಡಿ ॥ ೩೭ ॥

ಕಳುಹಿಸಿ ಕೌಶಂಬಿ ನಗರಿಗೆ ಜತಿಯನು । ಬಳಿಕಲವನ ಸುವ್ರತಕೆ ॥
ಜಲಧಿ ಗಾಂಭೀರ್ಯಚಾರಿತ್ರಾದಿ ಗುಣಗಳಿ- । ಗೆಳೆಯಾಣ್ಮ ಮೆಚ್ಚಿ ಮನದೊಳು ॥ ೩೮ ॥

ಶಿರವನಲುಗಿ ಜತಿರಾಯನ ಶಮತೆಗೆ । ಕರಗಳ ಮುಗಿದು ಕಣ್ಣಸಿಯ ॥
ಸುರಿವುತಿನಿತು ಕಾಲ ಪರಿಯಂತರ ನಾನು । ಪರರೊಡವೆಯ ಸುಲಿಕೊಂಡು ॥ ೩೯ ॥

ದಾರಿಯ ಕಟ್ಟಿ ನರರ ಕೊಂದು ಕೂಗುತ । ಕ್ರೂರಮನದಿ ಪುರವೊಕ್ಕು ॥
ಸೂರೆಯ ಮಾಡುತ ಜನವ ಗೋಳಿಡಿಸುತ । ಘೋರಕರ್ಮವ ಕಟ್ಟಿಕೊಂಡೆ ॥ ೪೦ ॥

ಎನುತಾಗ ಬೆದೆ ಬೆದೆ ಬೆಂದು ದುಷ್ಕರ್ಮಕೆ । ಘನವಾಗಿ ಬೆಚ್ಚಿ ಬೆದರುತ ॥
ತನುಜನ ಕರೆದು ರಾಜ್ಯವನವನಿಗೆ ಕೊಟ್ಟು । ವಿನಯವ ನಿಜಜನಕಾಸುರಿ ॥ ೪೧ ॥

ಕಡುಬೇಗ ಬಂದು ಸಂಪದವ ವಿಸರ್ಜಿಸಿ । ಅಡವಿಪ ಮುನಿಯೆಡೆಗೈದಿ ॥
ಅಡಿದಳಕೆರಗಿ ಎಲೆ ಜತಿರಾಯನೆ ! । ಪೊಡವಿಯೊಳಿನ್ನಂತ ಪಾಪಿ ॥ ೪೨ ॥

ದುರುದುಂಬಿ ವಂಚಕ ನೀಚಾಚಾರಿಯ । ಪರಿಕಿಸಲಿಲ್ಲಕಟಕಟ ! ॥
ಗುರುಜನಹಿರಿಯರು ಮಾಸ್ಕರಿಂಬುದ ನಾ- । ನರಿಯದೆಯವರ ಗೋಳಿಡಿಸಿ ॥ ೪೩ ॥

ನರಕಾಯುಷ್ಯವ ಕಟ್ಟಿಕೊಂಡೆನು ಸ್ವಾಮಿ ! । ಕರುಣಾಳು ಎನ್ನನುದ್ಧರಿಸಿ ॥
ದುರುಳ ಬುದ್ಧಿಯನು ಬಿಡಿಸಿ ಸನ್ಮಾರ್ಗವ । ಪರಮ ಗುರುವೆ ತೋರಿಸೆನಗೆ ॥ ೪೪ ॥

ದುರಿತಹರಣವಾದ ನಿನ್ನ ರೂಪನೆಯಿತ್ತು । ಕರುಣಾಳು ! ಕಾವುದೆಂದೆನಲು ॥
ಗುರುರಾಯ ಕೈವಲ್ಯಕಾಮಿನಿ ಮೋಹಿಪ । ಪರಮ ದೀಕ್ಷೆಯನಿತ್ತನವಗೆ ॥ ೪೫ ॥

ವರಸೇನ ಮುನಿ ಮತ್ತೆ ಧರೆಯೊಳು ಚರಿಸುತ । ಕರೆವುತ ಧರ್ಮಾಮೃತವ ॥
ಕರುಣಾರ್ಣವಚಂದ್ರನುಜ್ಜೈನಿಗೈತಂದು । ಪುರುಜಿನ ವಸತಿಯ ಪೊಕ್ಕು ॥ ೪೬ ॥

ಜಿನಪತಿಗೆರಗಿ ಪಲವು ಸ್ತೋತ್ರಗಳಿಂದ । ಮುನಿಕುಂಜರ ನುತಿಸೈದು ॥
ಮಿನುಗುವ ಕಳಶ ಮಂಟಪದೊಳು ಕುಳಿತಿರೆ । ಮುನಿ ಬಂದ ಒಸಗೆಯ ಕೇಳಿ ॥ ೪೭ ॥

ದೊರೆ ಪದ್ಮರಥ ಕಡುಭಕ್ತಿಯೊಳೈತಂದು । ಅರುಹನಾಲಯವನು ಪೊಕ್ಕು ॥
ಪುರುಪರಮೇಶಗೆ ವಿನಮಿತಶಿರನಾಗಿ । ಕರಗಳ ಮುಗಿದು ಕೊಂಡಾಡಿ ॥ ೪೮ ॥

ವರಸೇನ ಮುನಿಯಿರ್ದ ಮಂಟಪಕೈತಂದು । ಚರಣಕೆರಗಿ ಕೈಯ ಮುಗಿದು ॥
ವರಕಾಯ ಕ್ಷೇಮದ ವಾರ್ತೆಯ ಬೆಸಗೊಳೆ । ಹರಸಿ ಹರಕೆಗಳ ಮುನಿಯು ॥ ೪೯ ॥

ವರಕ್ಷೇಮವೆಂಬುದು ಸುರಶೈಲಕೆಯೆಂದು । ವರಸೇನ ಮುನಿರಾಯ ನಗುತ ॥
ಕರವ ಪಿಡಿದು ಪದ್ಮರಥನ ! ಎನ್ನೆ ನೀನು ! ಸಿರಿಯ ಮದದೊಳೆಮ್ಮ ಮರೆವೆ ॥ ೫೦ ॥

ಪೊಡವಿಪನಾದೆಯದರ ಮೇಲೆ ಯೌವನ । ಬಡವರ ನಮ್ಮ ಲೆಕ್ಕಿಪೆಯ ॥
ಉಡುವರರುವೆಯಿಲ್ಲ ನಮಗೆಂದು ನಗೆಗೂಡಿ । ನುಡಿದ ನುಡಿಗಳನು ಕೇಳಿ ॥ ೫೧ ॥

ಇದು ನನಗಚ್ಚರಿಯಾಗಿದೆ ಜಿನಜಿನ ! । ತ್ರಿದಶ ಪೂಜಿತ ದಿವ್ಯಚರಣ ॥
ಮದನ ಮದಾಪಹರಣ ನಿನ್ನ ಪಾದವ । ಮೊದಲೆಲ್ಲಿ ನಾ ಕಂಡುದಿಲ್ಲ ॥ ೫೨ ॥

ತೆರದರುಶನವಾಗಿ ನಿರವಿಸಬೇಕೆಂದು । ದೊರೆ ಮುನಿಯಡಿಗಳ ಪಿಡಿದು ॥
ಮುರುಕದಿಂದಲಿ ಕೇಳೆ ಮುನಿಪುಂಗವನಾ- । ಗೊರೆದನಿಂತೆಂದು ವಿವರವ ॥ ೫೩ ॥

ಜನನಾಥ ! ಕೇಳು ನೀನೈದನೆ ಭವದಲ್ಲಿ । ನನಗೆ ಜನಕಸ್ಥಾನವಾಗಿ ॥
ಜನಪತಿಯಜಿತಂಜಯನಾದೆ ನಿನಗೆ ನಾ । ತನಯನು ಜಿನಶತ್ರುವಾದೆ ॥ ೫೪ ॥

ಪರಿಕಿಸೆ ಜನಕ ಸಖನು ಸೋದರ ಮಿತ್ರ । ಮರಳಿ ಸೋದರನಾದೆ ಈಗ ॥
ಗುರುರಾಯನ ನಿಂದಿಸಿದ ರೂಪಿಣಿದೇವಿ । ತಿರಿಯಗ್ಗತಿಯೊಳು ಪುಟ್ಟಿ ॥ ೫೫ ॥

ಸುರಮಂಜರಿಯೆಂಬ ತಂಗಿಯಾದಳು ಎಂದು । ವರಸೇನ ಮುನಿ ಪೇಳೆ ಕೇಳಿ ॥
ದೊರೆ ಪದ್ಮರಥ ಪೂರ್ವಭವಸಂಬಂಧವ- । ನರಿದು ಮೂರ್ಛಾಗತನಾಗಿ ॥ ೫೬ ॥

ಪನಿನೀರು ಮೊದಲಾದ ಶೀತಲಕ್ರಿಯೆಯಿಂದ । ಜನನಾಥನು ಎಚ್ಚತ್ತು ॥
ಜಿನ ಜಿನ ! ಎಂಬಕ್ಕರವನುಚ್ಚರಿಸುತ । ಮುನಿತಿಲಕನೊಳಿಂತು ನುಡಿದ ॥ ೫೭ ॥

ಭವಕಾಂತಾರದೊಳ್ತೊಳಲಿ ಕಣ್ಗಾಣದೆ । ನವಮೋಹವೆಂಬಗ್ನಿಯೊಳು ॥
ತವೆ ಸಿಕ್ಕಿ ಬೆದೆ ಬೆದೆ ಬೇವವನನು ಎತ್ತಿ । ಭವದೂರ ! ಧರ್ಮವೃಷ್ಟಿಯನು ॥ ೫೮ ॥

ಕರೆದು ದುರಿತಹರ ಜಿನದೀಕ್ಷೆಯನಿತ್ತು । ವರಮೋಕ್ಷ ಬಟ್ಟೆಯ ನನಗೆ ॥
ಕರುಣಾಬ್ಧಿ ಪೂರ್ಣೇಂದುವೆ ! ತೋರಿಸೆಂದಾಗ । ಚರಣಮೂಲಕೆ ಮುಗ್ಗಿದನಿಗೆ ॥ ೫೯ ॥

ಮುನಿನಾಥ ಕಾರುಣ್ಯದಿಂ ಪದ್ಮರಥನಿಗಾ- । ಗನಘ ಜೈನೀಯ ದೀಕ್ಷೆಯನು ॥
ಮನದಕ್ಕರಿಂ ಕೊಡೆ ತಪದೊಳಾಚರಿಸುತ । ಮುನಿಯುಗ ಕೌಶಂಬಿಗೈದಿ ॥ ೬೦ ॥

ಜತಿರಾಯ ಬಂದ ವರ್ತಮಾನವನು ಕೇಳಿ- । ಯತಿ ಮಮತೆಯನಾಗ ತಾಳಿ ॥
ಪತಿಸಹ ಸುರಮಂಜರಿ ಬಂದು ಮುನಿಗಳ್ಗೆ । ನತಳಾಗೆ ಪರಮ ಭಕ್ತಿಯೊಳು ॥ ೬೧ ॥

ಜಿನದತ್ತ ಧರ್ಮವ ಕೇಳಿದ ಬಳಿಕಾ । ವನಿತೆ ಹಸ್ತಗಳನು ಮುಗಿದು ॥
ಮುನಿಯ ನಿಂದಿಸಿದ ರೂಪಿಣಿ ಜನ್ಮ ಮುಂತಾದ । ಘನಭವಗಳನು ತಾ ಕೇಳಿ ॥ ೬೨ ॥

ವರಸೇನ ಮುನಿಯಲ್ಲಿ ಪರಮ ಪ್ರವ್ರಾಜ್ಯವ । ಎರಕದಿಂದವೆ ತಾ ಧರಿಸಿ ॥
ಸುರಮಂಜರಿ ಕಂತಿಕೆ ಚಾರಿತ್ರವ- । ನಿರದಾಂತು ತಪಿಸುತಲಿರಲು ॥ ೬೩ ॥

ವರಸೇನ ಪದ್ಮರಥನು ಸುರಮಂಜರಿ । ಧರೆಯೊಳು ಧರ್ಮವೃಷ್ಟಿಯನು ॥
ಕರೆವುತಾಚಾಮ್ಲ ಚಾಂದ್ರಾಯಣ ಧರ್ಮದಿ । ವರ ಚಕ್ರಮುಕ್ತಾವಳಿಯ ॥ ೬೪ ॥

ಕನಕಾವಳಿ ರತ್ನಾವಳಿ ಮುಂತಾದ । ಅನುಪಮ ತಪದೊಳು ತಾವು ॥
ವನಗುಹೆ ಗಿರಿಗಳೊಳ್ಸಂಚರಿಸುತಲಿ- । ರ್ದನುಪಮಾಯುಷ್ಯಾಂತ್ಯದೊಳು ॥ ೬೫ ॥

ಹರುಷದಿಂ ಪ್ರಾಯೋಪಗಮನ ಸನ್ಯಸನವ । ಧರಿಸಿ ಶ್ರೀಪಂಚಗುರುಗಳ ॥
ಚರಣವ ನೆನೆವುತ ದೇಹವನೀಡಾಡಿ । ವರ ಲಾಂತವ ಕಲ್ಪದೊಳು ॥ ೬೬ ॥

ಸುರರಾಗಿ ಪದಿಮೂರು ಸಾಗರಾಯುಷ್ಯವ । ನೆರೆ ಪಡೆದು ಸುಖವುಣುತ ॥
ಪರಮ ಜಿನರ ಪಾದಪೂಜೆಯ ಮಾಡುತ । ಒರೆವುತ ಧರ್ಮವ ಸುರರ್ಗೆ ॥ ೬೭ ॥

ಕನಕಾದ್ರಿ ಮೊದಲಾದ ಗಿರಿಗಳೊಳಗೆಯಿರ್ದ । ಜಿನರ ಪೂಜಿಸುತ ವಂದಿಸುತ ॥
ವಿನುತ ಪೂರ್ವಾದಿ ವಿದೇಹಗಳನು ಪೊಕ್ಕು । ಜಿನರ ಕಲ್ಯಾಣವ ತಾವು ॥ ೬೮ ॥

ಪಿರಿದು ಸಂತಸದಿ ಮಾಡುತ ಧರಣೇಂದ್ರನ । ವರ ಜ್ಯೋತಿಷ್ಕವೆಂತರರ ॥
ಸುರುಚಿರ ಲೋಕವ ಪೊಕ್ಕಾಗಕೃತ್ರಿಮ । ಚಿರಜಿನಬಿಂಬಕ್ಕೆರಗುತ ॥ ೬೯ ॥

ದಿನಚರಿ ದ್ವಿಶತ ಸುರರಿಗೆ ಸಮ್ಯಕ್ತ್ವವ- । ನನುಗೊಳಿಸುತ ತತ್ತ್ವದೊಳು ॥
ಮನವಿಟ್ಟಾಚರಿಸುತ ದೇವಲೋಕದ । ಘನಸುಖವನು ಉಣುತಿರ್ದು ॥ ೭೦ ॥

ಪರಮಾಯುಷ್ಯದ ಕಡೆಯೊಳು ಭರತದ । ಧರೆಯ ಕಾಶ್ಮೀರ ದೇಶದೊಳು ॥
ಕರ ಚೆಲುವಿನ ಕನಕಪುರವಾಳುವ । ದೊರೆ ಶ್ರೀ ಚಂದ್ರನು ಅವನ ॥ ೭೧ ॥

ಅರಸಿ ಜ್ಯೋತಿರ್ಮಾಲೆಗೆ ಪದ್ಮರಥಚರ । ಸುರಬಂದು ಜಿನಚಂದ್ರನೆಂಬ ॥
ಪರಮ ಸಮ್ಯಗ್ದೃಷ್ಟಿ ನೀನಾದೆ ನಿನಗಾ । ಸುರಮಂಜರಿ ಚರದೇವ ॥ ೭೨ ॥

ಸುರಲೋಕದಿಂ ಬಂದು ಶ್ರೀಕಾಂತೆಯೆಂದೆಂಬ । ಅರಸಿಯಾದಳು ನಿನಗರಸ ! ॥
ವರಸೇನಚರ ಸುರಲೋಕದಿಂದಲೆ ಬಂದು । ಚರಮಾಂಗನಧಿಕ ತೇಜಸ್ವಿ ॥ ೭೩ ॥

ಜಿನಪದಭಕ್ತ ಮಹಾಮಂಡಳೇಶ್ವರ । ಘನಪುಣ್ಯವಂತನುದಾರಿ ॥
ಮನಸಿಜ ಸಮರೂಪ ಜ್ಞಾನಚಂದ್ರಮನೆಂಬ । ತನಯನಾದನು ಈತ ನಿನಗೆ ॥ ೭೪ ॥

ಅಜಿತಂಜಯ ಸ್ವರ್ಣರುಚಿಯುತಿವೀರ್ಯನು । ನಿಜ ಶುಚಿವರ ಮಣಿಚೂಳ ॥
ಸುಜನವಿನುತ ಪದ್ಮರಥನು ನಿರ್ಜ್ಜರರಾಗಿ । ವೃಜಿನಾರಿ ಜಿನಚಂದ್ರನಾದೆ ॥ ೭೫ ॥

ರೂಪಿಣಿ ಸಂಖ್ಯಾತ ತಿರ್ಯಗ್ಭವ ಮತ್ತೆ । ಪೇಳ್ವೆ ಪಿದಿ ಕೀರ್ತಿಮತಿಯು ॥
ಚಾಪಲಾಂಬಕಿ ನಂದೆ ಕುಸುಮಚೂಲನು ಸು- । ರೂಪೆಯು ಸುರಮಂಜರಿಯು ॥ ೭೬ ॥

ಏಳನೆ ಸಗ್ಗದ ಸುರನಾರಿ ಸುಖಮುಂಡು । ಲೀಲೆಯಿಂದಿಳಿದು ಬಂದೀಗ ॥
ಲೋಲಾಕ್ಷಿ ಶ್ರೀಕಾಂತಾದೇವಿವೆಸರಾಂತು । ಸೋಲಿಸಿದಳು ನಿನ್ನ ಮನವ ॥ ೭೭ ॥

ಜಿತಶತ್ರು ರವಿರುಚಿಯುತಿಬಳ ರತ್ನಾದಿ । ನುತ ಚೂಳ ವರಸೇನ ಕುವರ ॥
ಅತಿಶಯವಾಗಿ ಬಂದಿಲ್ಲಿಗೆ ಜ್ಞಾನೇಂದು । ಸುತನಾದ ನಿನಗೆಲೆ ನೃಪತಿ ! ॥ ೭೮ ॥

ಎಂದು ನಿರೂಪಿಸೆ ಜಿನಚಂದ್ರ ಭೂಪಾಲ । ತಂದು ಮನಕೆ ವಿರಕ್ತಿಯನು ॥
ಮಂದರ ಧೀರರ್ಗೆ ಮುನಿಪತಿಯುಗಲಕೆ । ಅಂದು ನಿರ್ಭರ ಭಕ್ತಿಯಿಂದ ॥ ೭೯ ॥

ಕರಕಮಲಂಗಳ ಮುಗಿದು ಸಾಷ್ಟಾಂಗದಿಂ- । ದೆರಗಿ ಜಿನರ ಬೀಳ್ಕೊಂಡು ॥
ಹರುಷದಿಂ ಜ್ಞಾನಚಂದ್ರನಗೂಡಿ ಜಿನಚಂದ್ರ । ಸುರಪತಿ ವೈಭವದಿಂದ ॥ ೮೦ ॥

ಕನಕಪುರವ ಪೊಕ್ಕು ಶುಭದಿನದೊಳು ತನ್ನ । ತನಯಗೆ ತೀರ್ಥಾಂಬುವಿಂದ ॥
ಮನದಕ್ಕರಿಂದ ಮಜ್ಜನವನು ಮಾಡಿಸಿ । ಕನಕ ಪೀಠದೊಳು ಕುಳ್ಳಿರಿಸಿ ॥ ೮೧ ॥

ಮಿನುಗುವ ರತ್ನಕಿರೀಟವ ಶಿರದೊಳು । ಜಿನಚಂದ್ರನೃಪನಳವಡಿಸಿ ॥
ಅನುಪಮ ನವರತ್ನದಿಂದಭಿಷೇಕವ । ತನಯನ ಶಿರದೊಳು ಮಾಡಿ ॥ ೮೨ ॥

ದೊರೆದೊರೆಗಳ ಸಾಕ್ಷಿಯೊಳು ಸಾಮ್ರಾಜ್ಯವ । ಹರುಷದಿಂ ಜ್ಞಾನಚಂದ್ರನಿಗೆ ॥
ಅರಸು ಶ್ರೀ ಜಿನಚಂದ್ರನೃಪನಿತ್ತು ವಿನಯವ- । ನೊರೆದು ಬಂಧುಗಳ ಬೀಳ್ಕೊಟ್ಟು ॥

ಪುರಜನ ಪರಿಜನ ಮಂತ್ರಿ ಪುರೋಹಿತ । ದೊರೆದೊರೆಗಳಿಗೆಯುಚಿತವ ॥
ನರನಾಥ ನುಡಿದು ಬೀಳ್ಕೊಂಡು ಜಿನೇಂದ್ರನ । ವರ ಗಂಧಕುಟಿಯನು ಪೊಕ್ಕು ॥ ೮೪ ॥

ವರಮುಕ್ತಿಕಾಂತೆಯ ವರಿಸುವ ಶ್ರೀಜಿನ । ಪರಮ ದೀಕ್ಷೆಯನು ಸಹಸ್ರ ॥
ದೊರೆಗಳು ಸಹವಾಗಿ ಕೈಕೊಂಡು ಮುನಿಯಾದ । ಗರುವೆ ಶ್ರೀ ಕಾಂತಾದೇವಿ ॥ ೮೫ ॥

ಮುನಿಯ ನಿಂದಿಸಿದ ಪಾತಕದಿಂದಿಂತಪ್ಪ । ಘನಭವದೊಳು ತೊಳತೊಳಲಿ ॥
ವನಧಿಗೆ ಸಮನಾದ ದುಃಖವ ನಾನುಂಡೆ । ಎನಿತು ಪಾಪಿಯೋ ನಾನೆಂದು ॥ ೮೬ ॥

ದುರಿತಕೆ ಕಡುಬೆರ್ಚಿಯಿಂತಪ್ಪ ಪಾಪವ- । ನುರುಹುವೆ ತಪದ ಬಲ್ಪಿಂದ ॥
ಪರಿಹರಿಸುವೆ ಸ್ತ್ರೀಜನ್ಮವನೆಂದಾಗ । ಪರಮ ನಿರ್ವೇಗವ ತಾಳಿ ॥ ೮೭ ॥

ಅನುಮತಿ ಮೊದಲಾದ ಸೊಸೆಯಂದಿರುಗಳ । ವಿನಯದಿಂದವೆಯಮರ್ದಪ್ಪಿ ॥
ವನಿತಾರತ್ನಗಳಿರ ! ನಮ್ಮೊಳಗಿಪ್ಪ । ಘನವಾದ ಕ್ಷಮೆ ನಿಮಗಿರಲಿ ॥ ೮೮ ॥

ಜಿನಪೂಜೆಗಳನನವರತ ಮಾಡುತ ಬನ್ನಿ । ಮುನಿಜನಕನ್ನದಾನವನು ॥
ಅನುದಿನ ಕೊಡಿ, ದಿವ್ಯ ನೋಂಪಿಗಳನು ಮಾಡಿ । ಜಿನಮತ ವಾತ್ಸಲ್ಯವಿರಲಿ ॥ ೮೯ ॥

ದಿನಚರಿ ಚರಿತೆ ಪುರಾಣವ ಕೇಳ್ವುದು । ಕುನಯವ ಬಿಡಿ ನಿಮ್ಮೊಳಗೆ ॥
ಮುನಿಗಳಿಗೌಷಧ ಶಾಸ್ತ್ರದಾನಂಗಳ । ಮನದೊಲಿದಾವಾಗ ಮಾಡಿ ॥ ೯೦ ॥

ಎರೆಯನೊಳನುದಿನ ಸುಖದೊಳು ಬಾಳಿರೌ । ಮರೆಯದಿರಮಲಧರ್ಮವನು ॥
ದುರಿತಕೆ ಬೆಚ್ಚಿ ನಿಮಗೆ ನಾನು ಬುದ್ಧಿಯ । ಒರೆವವಳೇ ನೀವೇನು ॥ ೯೧ ॥

ಅರಿತವರುಗಳಲ್ಲವೆ ಶಾಸ್ತ್ರಗಳೊಳು । ಸರಸ್ವತಿಗೊರೆವಿರಿ ನೀವು ॥
ನೆರೆ ಜಾಣೆಯರು ಸಕಲರಿಗೆ ಬುದ್ಧಿಯ । ಒರೆದು ತಿದ್ದುವಿರಿ ನೀತಿಯೊಳು ॥ ೯೨ ॥

ಜ್ಞಾನಚಂದ್ರನ ನೆನೆದವರುಗಳೆಲ್ಲರ್ಗೆ । ಜ್ಞಾನವು ಪುಟ್ಟುವುದೆನಲು ॥
ಜ್ಞಾನಚಂದ್ರಮನರ್ಧಾಂಗಿಯರೆಲ್ಲಹ । ಜ್ಞಾನವಂತೆಯರೆಂಬುದನು ॥ ೯೩ ॥

ಪರರಿಗೆ ಸೂಚಿಸುವುದು ಎನುತಿರಲದು । ದುರಿತವ ಕೆಡಿಪೊಂದು ಜೈನ ॥
ವರದೀಕ್ಷೆಗೆ ಪೋಪೆನೆಂಬ ವಚನಗಳ । ತರಳಾಕ್ಷಿಯರೆಲ್ಲ ಕೇಳಿ ॥ ೯೪ ॥

ನುಡಿದರು ಎಲೆ ಅತ್ತೆಮ್ಮಾಜಿ ! ಮಾವಾಜಿ । ತಡೆದೊಡೆ ನಿಲ್ಲದೈದಿದರು ॥
ಪಡೆದ ಸುತನ ನೀವೀಡಾಡಿ ಪೋಪು- । ದೊಡಬಡಿಕೆಯ ಹವಣಲ್ಲ ॥ ೯೫ ॥

ಮಗ ಪರದೇಶವ ಸಾಧಿಸಿ ಪುರವನು । ಪೊಗಲೊಡನೆ ತಂದೆ ತಾಯಿ ॥
ಅಗಲಿದರೇನು ಮಗನ ಮೇಲೆ ವೈರವೋ । ಮಗನು ತಾನೇನರಗುಲಿಯೋ ॥ ೯೬ ॥

ಸೊಸೆಯರು ಎಂತಾ ಮುಹೂರ್ತದೊಳ್ಮನೆಯನು । ಪೊಸತಾಗಿ ಪೊಕ್ಕರೋ ಅಕಟ ! ॥
ಸಸಿನೆ ನೂರಾರು ವರುಷವತ್ತೆಮಾವಂದಿ- । ರಿಸಕದಿ ಕೂಡಿರಲಿಲ್ಲ ॥ ೯೭ ॥

ಲಕ್ಷಣಹೀನೆಯರೆಂದೆಮ್ಮೆಲ್ಲರ- । ನೀ ಕ್ಷಿತಿ ಹಳಿವುದತ್ತೆಮ್ಮ ! ॥
ಸುಕ್ಷೇಮದೊಳಗೆ ನಮ್ಮೆಲ್ಲರ್ಗೆ ನೀತಿಯ । ಶಿಕ್ಷೆ ಮಾಡುತಲಿರಬೇಕು ॥ ೯೮ ॥

ಮಾವಾಜಿ ದೀಕ್ಷೆಗೈದಿದರೇನಾಯಿತು । ನೀವು ನಿಮ್ಮಯ ಮುದ್ದು ಮಗನ ॥
ಸಾವಿರ ಮಾತೇನು ಮುಂದಿಟ್ಟುಕೊಂಡೀ । ಭೂವಳಯವನು ಪಾಲಿಸುತ ॥ ೯೯ ॥

ದಾನಪೂಜೆಗಳನು ಶೀಲೋಪವಾಸವ । ಸಾನಂದದಿಂ ಮಾಡಿಕೊಂಡು ॥
ಈ ನಿಮ್ಮ ಮನೆಯೊಳು ಗೃಹತಪಸ್ವಿನಿಯಾಗಿ । ಜೈನಮಾರ್ಗದ ಓಜೆಯನು ॥ ೧೦೦ ॥

ನಮಗೆಲ್ಲ ಬುದ್ಧಿಗಲಿಸಿ ತಿಳುಹಿಸುತೀ । ಭವದೊಳಗಣ ಸುಖಮುಂಡು ॥
ದಿವಿಜಲೋಕವ ಸೂರೆಗೊಂಬ ದೀಕ್ಷೆಯ ನಾವು । ಭುವಿಯೊಳಿದ್ದು ಕಡೆಯೊಳಗೆ ॥ ೧೦೧ ॥

ಧರಿಸಬೇಕಲ್ಲದೆ ನೀವು ನಮ್ಮೆಲ್ಲರ । ಪರಿದೀಡಾಡಿ ತಾ ಪೋಗೆ ॥
ಹಿರಿಯರಾರೀಯರಮನೆಗೆ ನಾವಿನ್ನಾರ । ಕರೆಯಬೇಕತ್ತೆಮ್ಮ! ಎಂದು ॥ ೧೦೨ ॥

ಜಿನಪೂಜೆಯೆಂದೊಡೆ ಸಡಗರಗೊಂಡಾವು । ಮನೆಗೆಲ್ಲ ವಸಗೆಯಾದಂತೆ ॥
ವಿನಯದಿಂದಾರ ಕೇಳುವೆವು ನಮ್ಮೊಡಗೊಂಡು । ಜಿನಗೃಹಕ್ಕೈದುವರಾರು ? ॥ ೧೦೩ ॥

ಪನಿಯ ಪೊಳ್ತಾರೆ ಜಿನಪನ ಮೊಗವ ಕಂಡು । ವನಿತೆಯರುಗಳಾದ ನಾವು ॥
ವಿನಯದಿಂದತ್ತೆಮ್ಮನವರ ಪಾದವ ಕಂಡು । ಮನದಕ್ಕರಿಂ ಶರಣೆಂದು ॥ ೧೦೪ ॥

ಪಲವು ಪರಕೆಗಳ ಪಡೆವ ಬನ್ನಿಮೆಂದು । ನಲವಿಂ ತಮ್ಮೊತ್ತಿಗೆ ಬಪೆವು ॥
ಪಲವು ಮಕ್ಕಳ ಪೆತ್ತು ಮುತ್ತೈದೆಯರಾಗಿ । ಸಲೆ ಸುಖಿ ಬಾಳೆಂಬರಾರು ? ॥ ೧೦೫ ॥

ನಿಮ್ಮ ಕುವರನಾರೋಗಣೆಗೈತರೆ । ನಿಮ್ಮ ಪಂಕ್ತಿಯೊಳು ಕುಳ್ಳಿರಿಸಿ ॥
ಸುಮ್ಮಾನದಿಂದಿನ್ನಾರಿಗಿಕ್ಕುವೆವಾವು । ನಮ್ಮ ಮನೆಗೆ ಬರುತಿರಲು ॥ ೧೦೬ ॥

ಸಡಗರದಿಂದಿದಿರೆದ್ದು ನಡೆದು ಬಂ- । ದಡಿಗೆರಗುತ ಕೈಲಾಗದೊಳು ॥
ನಿಡುಭಕ್ತಿಯಿಂದೊಡಗೊಂಡು ನಡೆದು ಬಂದು । ಬಿಡದೆ ಗದ್ದುಗೆಯೊಳ್ಕುಳ್ಳಿರಿಸಿ ॥ ೧೦೭ ॥

ಚರಣವನೊತ್ತುತ ನುಡಿದ ವಚನಗಳ । ಕರವ ಮುಗಿದು ಭಕ್ತಿಯಿಂದ ॥
ಶಿರದೊಳಗೆ ವಹಿಸಿಕೊಂಬ ಭಾಗ್ಯವಿಂ- । ದರತುದು ಎಂದಳಲಿದರು ॥ ೧೦೮ ॥

ಅಳಲುವ ಸೊಸೆಯಂದಿರ ಭಕ್ತಿಯ ಕಂಡು । ಕುಲಜೆಯರಲ್ಲವೆಯೆಂದು ॥
ತಲೆದೂಗುತ ಬಿಡದೆಲ್ಲರನವುರ್ದಪ್ಪಿ । ಪಲವು ವಚನದಿಂದ ತಿಳುಪಿ ॥ ೧೦೯ ॥

ಕಳುಹಿಸಿಕೊಂಡು ಜ್ಞಾನೇಂದುಕುಮಾರನ । ಬಳಿಗೆ ಗಮ್ಮನೆ ತಾನು ಬಂದು ॥
ಅಲಘುತರ ಪ್ರೀತಿಯಿಂದೆಲೆ ಕುವರನೆ ! । ಕಳುಹಿಸಿಕೊಡು ದೀಕ್ಷೆಗೆನ್ನ ॥ ೧೧೦ ॥

ಎಂದು ನುಡಿಯೆ ಘುಳ ಘುಳನೆ ಕಣ್ಬನಿಯನು । ತಂದು ಜ್ಞಾನೇಂದು ಕುವರನು ॥
ಅಂದು ಜನನಿಯ ಕಾಲನು ಕಟ್ಟಿಕೊಂಡಿಂ- । ತೆಂದು ನುಡಿದನೆಲೆ ತಾಯೆ ! ॥ ೧೧೧ ॥

ಜನಕನು ನಿಲ್ಲದೈದಿದ ನೀ ಪೋಗಲು । ಮನೆ ಬಿನ್ನಗಾಗದೆ ನನ್ನ ॥
'ತನಯ ! ಬಾರೆಂದು' ಕರೆವರೀ ಭಾಗ್ಯವ- । ನನುಭವಿಸುವೆನಾರ ಮುಂದೆ ? ॥ ೧೧೨ ॥

ಅರಮನೆಗೈತಂದು 'ಜನನಿ' ಎಂದಾರನು । ಕರೆವೆನು 'ಮಗ' ಬಂದನೆಂದು ॥
ಮರುಕದಿಂ ಸಡಗರಗೊಂಬರಿನ್ನಾರುಂಟು । ಅರರೆ ! ಹಾಹಾ ! ಎಂದುಮ್ಮಳಿಸಿ ॥ ೧೧೩ ॥

ಕೆಲವು ದಿವಸ ನನ್ನ ಸಿರಿಯನು ಕಂಡುಂಡು । ನೆಲನ ಬಿಸುಟು ನಾನು ನೀನು ॥
ವಿಲಸಿತ ಜೈನದೀಕ್ಷೆಯ ಧರಿಸುವ ಎಂದು । ಪಲಬಗೆಯೊಳು ಪೇಳೆ ನೃಪತಿ ॥ ೧೧೪ ॥

ನನ್ನ ಕಂದನೆ ! ಕೇಳು ಮುನಿರೂಪಿತಮಾದ । ಚೆನ್ನುವಡೆದ ನುಡಿಗೇಳಿ ॥
ಇನ್ನು ಸಂಶಯವನು ಪಡಬೇಡ ನನ್ನಾಣೆ । ಚೆನ್ನಡಿಯಾಣೆ ಜಿನಪನ ॥ ೧೧೫ ॥

ಎಂದು ಪಲವು ತೆರದೊಡಬಡಿಕೆಯ ಮಾಡಿ । ಕಂದನ ಬಿಗಿಬಿಗಿಯಪ್ಪಿ ॥
ನಂದನರುಗಳ ಪಡೆದು ಪಲಂಬರಾ- । ನಂದದಿಂ ಸುಖಿ ! ಬಾಳೆಂದು ॥ ೧೧೬ ॥

ಪರಸಿ ಪಲವು ಪರಕೆಗಳ ಬೀಳ್ಕೊಂಡಾಗ । ಗರುವೆ ನಡೆದು ಪೋಪಾಗ ॥
ದೊರೆ ಬಂದು ಜನನಿ ಪಾದವು ನೊಂದಪವೆಂದು । ಗುರುಭಕ್ತಿಯಿಂ ಪಲ್ಲಕ್ಕಿಯನು ॥

ತರಿಸಿ ಎಲೆ ತಾಯೆ ! ಏರಿ ಎಂದೆನಲಾಗ । ದರಹಸಿತಾನನೆಯಾಗಿ ॥
ಒರೆದಳೆಲೆ ನನ್ನ ಕಂದ, ನನ್ನಪ್ಪಾಜಿ ! । ಮುರುಕದ ಮುದ್ದಾನೆ ! ಬೇಡ ॥ ೧೧೮ ॥

ಬಿಸಿಲೆನ್ನದೆ ಚಳಿಯೆನ್ನದೆ ನಾರಿನ । ಹೊಸ ಸೀರೆಯನುಟ್ಟು ನಾನು ॥
ಅಸವಸದಿಂದ ಸುರಿವ ಮಳೆ ಎನ್ನದೆ । ದೆಸೆದಿಕ್ಕಿಗೆ ಪರಿವಲ್ಲಿ ॥ ೧೧೯ ॥

ಎಲ್ಲೆಲ್ಲಿಗೆ ನನ್ನಯ ಮುದ್ದರಗಿಳಿ ! । ಪಲ್ಲಕ್ಕಿಯ ತಂದು ಪಿಡಿವೆ ॥
ಫುಲ್ಲಾಸ್ತ್ರ ! ಬೇಡ ಬೇಡೆಂಬ ಜನನಿಯ । ಸೊಲ್ಲುಗೇಳುತ ಮೂರ್ಛೆವೋಗಿ ॥ ೧೨೦ ॥

ಕಡುಬೇಗದೆಚ್ಚತ್ತು ಕಣ್ಬನಿಗಳನಾಗ । ಬಿಡು ಮುತ್ತಿನಂತೆ ಸೂಸುತ್ತ ॥
ಅಡಿದಳಿರ್ಗಳ ಪಿಡಿದು ಗಂಧಕುಟಿಯನು । ಬಿಡದೈದುವ ಪರಿಯಂತ ॥ ೧೨೧ ॥

ತನಯನ ಮೇಗಣ ಪ್ರೀತಿಯಿಂದೆರಗುವ । ವನ ಶ್ರೀಕಾಂತಾದೇವಿ ॥
ತನಯನ ಕಣ್ಬನಿಯಂಚಲದಿಂದುಜ್ಜಿ । ವಿನುಗುವ ಗಲ್ಲವನಲುಗಿ ॥ ೧೨೨ ॥

ಬಿಡಿಸಿಯುಮ್ಮಳವನು ಪಲ್ಲಕ್ಕಿಯನೇರಿ । ನಡೆತಂದು ಜಿನವಾಸಕಾಗಿ ॥
ಕಡುಭಕ್ತಿಯಿಂದವೆ ಗಂಧಕುಟಿಯ ಪೊ- । ಕ್ಕಡಿದಳಕ್ಕೆರಗಿ ಶ್ರೀ ಜಿನರ ॥ ೧೨೩ ॥

ಐನೂರು ಸಂಖ್ಯೆಯಾದರಳಿಯರೊಡಗೂಡಿ । ಜೈನದೀಕ್ಷೆಯನು ಶ್ರೀಕಾಂತೆ ॥
ತಾನಾಂತು ತಪದೊಳಾಚರಿಸುತಲಿರಲಿತ್ತ । ಜ್ಞಾನೇಂದು ಕಡು ಚಿಂತೆಯಿಂದ ॥ ೧೨೪ ॥

ವರಮಾತಾಪಿತೃವಿಯೋಗವಿ ಉಸ್ಸೆಂದು । ನೆರೆಯುಮ್ಮಳಿಸುತಲಿರಲು ॥
ಹಿರಿಯರು ಮಂತ್ರಿವರ್ಗವು ಕಡು ದುಃಖವ । ಪರಿಹರಿಸಲು ಭೂಭುಜನು ॥ ೧೨೫ ॥

ಜಿನರ ಪೂಜಿಸುತ ಜಿನಾಗಮ ಕೇಳುತ । ಜಿನಮುನಿಗಳಿಗನ್ನವನು ॥
ವಿನಯದಿಂದೀವುತ ಸುಖಸಾಗರದೊಳು । ಜನಪತಿ ಶೇಂಕಾಡುತಿಹನು ॥ ೧೨೬ ॥

ಉರದೊಳು ಮನೆಗಟ್ಟಿ ಸಿರಿದೇವಿ ನಿಂದಳು । ವರಭುಜದೊಳು ವೀರಲಕ್ಷ್ಮಿ ॥
ದರಹಸಿತಾನನದೊಳು ಶಾರದಾಂಬಿಕೆ । ಎರಕದಿ ಮನೆಗಟ್ಟಿ ನಿಲಲು ॥ ೧೨೭ ॥

ಕರಕಮಲದೊಳಿರೆ ದಾನ ಮಹಾಲಕ್ಷ್ಮಿ । ಕರಸೊಗಯಿಪ ಸರ್ವಾಂಗದೊಳು ॥
ಮೆರೆವುತಲಿರಲತಿ ಸೌಭಾಗ್ಯಲಕ್ಷ್ಮಿಯು । ಪುರುಡಿಂದ ಮುನಿದರಸಿನೊಳು ॥ ೧೨೮ ॥

ಇರಬಾರದಿಲ್ಲಿ ಸವತಿ ಮಚ್ಚರದೊಳು । ಧೊರೆ ಮತ್ತೆಯವರೊಯ್ಸಿಕೊಂಡು ॥
ಕೊರತೆಯಿಲ್ಲವೆ ಉದಾಸೀನವ ಕಂಡಲ್ಲಿ । ಇರುವುದು ಮಾತವಲ್ಲವೆಂದು ॥ ೧೨೯ ॥

ನೆರೆ ನಾಣ್ಚಿ ಜಸವಧು ದೊರೆರನ್ನನ ಬಿಟ್ಟು । ಭರದಿ ದೂರಾಂತರವೈದಿ ॥
ಸುರಲೋಕವೆಂಟುದಿಕ್ಕುಗಳುರಗಲೋಕ- । ವಿರದೆ ಸಾರಿದಳು ಕೋಪದೊಳು ॥ ೧೩೦ ॥

ನಿಜಭುಜದೊಳು ಸಮಸ್ತ ರಾಜ್ಯಂಗಳ । ಭುಜಗೇಂದ್ರನಂದದಿ ಧರಿಸಿ ॥
ಭಜಿಸುತ ಶ್ರೀಜಿನದಿವ್ಯಚರಣವನು । ಸುಜನೈಕಬಂಧುವೊಪ್ಪಿದನು ॥ ೧೩೧ ॥

**॥ ಅಂತು ಸಂಧಿ ೨೪ಕ್ಕಂ ಪದ ೩೩೩೬ಕ್ಕಂ ಮಂಗಲಂ ॥**

# ವನಕ್ರೀಡೆ.

ವನಿತಾಮಣಿಗಳೊಳಗೆ ಜ್ಞಾನಚಂದ್ರನು । ವನಕ್ರೀಡೆಯಾಡಿದುದುಸುರ್ವೆ ॥ ಪಲ್ಲ॥

ದಂದಶೂಕಾಧೀಶವಂದಿತ ಪಾದ ಪು- । ರಂದರ ಪೂಜಿತ ಮಹಿಮ ॥
ಇಂದು ತರಣಿ ಕೋಟಿತೇಜ **ಶ್ರೀ ಶಾಂತೀಶ!** । ಕುಂದಿಸೆಮ್ಮಯ ದಂದುಗವನು ॥ ೧ ॥

ಸುರಪತಿ ಗೀರ್ವಾಣಕಾಂತೆಯರೊಡಗೂಡಿ । ಹರುಷದೊಳಿರುವಂದದೊಳು ॥
ಗುರುಪಯೋಧರೆಯೊಡನೆ ಜ್ಞಾನೇಂದುವು । ಇರುತೋಂದಾನೊಂದು ದಿನವು ॥ ೨ ॥

ಜಿನರಾಜನಿಗೆ ಮಹಾಮಹಿಮೆ ಎಂಬ । ಘನತರ ಪೂಜೆಯನೆಸಗಿ ॥
ವನಿತಾ ಶಿರೋಮಣಿಯನುಮತಿ ದೇವಿಗೆ । ಜನನಾಥ ಶುಭದಿನದೊಳಗೆ ॥ ೩ ॥

ವರಪಟ್ಟಮಹಾದೇವಿ ಪಟ್ಟವ ತಾ ಕಟ್ಟಿ । ಮೊರೆದ ವಾದ್ಯದ ಗಲಭೆಯೊಳು ॥
ಗರುವೆ ಸುನಂದವತಿಗೆ ಸಿಂಧುದೇವಿಗೆ । ತರಳಾಕ್ಷಿ ಕನಕಲತೆಗೆ ॥ ೪ ॥

ವನಿತಾಮಣಿ ಕಾಮಲತೆಗೆಯಿಂತೈವರ್ಗೆ । ಜನನಾಥ ಪಟ್ಟವ ಕಟ್ಟಿ ॥
ಘನಕುಚೆಯರ ಕೂಡಿ ಸುಖದೊಬ್ಬುಳಿಯೆಂ- । ಬಿನಿಗಡಲೊಳು ಮುಳುಗಿದನು ॥ ೫ ॥

ಇರುತಿರಲಾ ಕುವರನ ಯೌವನವೆಂಬ । ಕರಿಗೆ ಕಬಳವಿಕ್ಕುವಂತೆ ॥
ಸುರುಚಿರವಾದ ವಸಂತರ್ತು ಬಂದುದ । ಒರವೆ ನಾನೆಂತುಂಟೆಂಬುದನು ॥ ೬ ॥

ಆ ವೇಳೆಯೊಳೋರ್ವ ವನಪಾಲಕ ಬಂದು । ಮಾವಿನ ತಳಿರು ಪಿಡಿಗಳ ॥
ತಾವರೆಯಲರು ಕೇಂಜಾಜಿ ಮಲ್ಲಿಗೆಗಳ । ಪೂವಿನ ಪೊಟ್ಟಣವಿಡಿದು ॥ ೭ ॥

ಕಡು ತವಕದಿ ಪೊಕ್ಕು ಓಲಗಶಾಲೆಯ । ಪೊಡವಿಪಗಿತ್ತು ಕಾಣಿಕೆಯ ॥
ಪೊಡಮಟ್ಟು ಸಾಷ್ಟಾಂಗವೆರಗಿ ಕೈಮುಗಿದಾ- । ಗೊಡನೆ ನುಡಿದ ಚದುರಿಂದ ॥ ೮ ॥

ಜನಪತಿ! ಬಿನ್ನಹ ಚಿತ್ರಕೂಟವೆಂಬ । ವನದಿ ವಸಂತರಾಜೇಂದ್ರ ॥
ವನಲಕ್ಷ್ಮಿ ಸಹವಾಗಿ ಬಂದು ದಂಡನು ಬೀಡ । ಮನದಕ್ಕರಿಂ ಬಿಟ್ಟುಕೊಂಡು ॥ ೯ ॥

ಸ್ಮರಚಕ್ರೇಶಗೆ ರತಿದೇವಿ ಸಹವಾಗಿ । ಭರದಿಂದ ಪಟ್ಟವ ಕಟ್ಟಿ ॥
ಮರಿದುಂಬಿ ಝೇಂಕೃತಿ ಶಂಖನಾದಗಳಿಂದ । ಪರಪುಟ್ಟರವ ಭೇರಿಧ್ವನಿಯು ॥ ೧೦ ॥

ನಾಗಸಂಪಿಗೆಯ ತರುಜ ಪುಂಡರೀಕದಿಂ । ಸೋಗೆವಿಂಡುಗಳ ತಾಂಡವದಿಂ ॥
ಕೂಗಿಯೋಡುವ ರಾಜಕೀರ ಪಾಠಕರಿಂದ । ಪೂಗೊಂಚಲ ಚಮರಗಳಿಂ ॥ ೧೧ ॥

ಸುರುಚಿರ ಕೇದಗೆ ಮೊಗ್ಗೆ ಪಂಜುಗಳಿಂದ । ಅರುಣ ಕಂಕೇಲಿ ಪಲ್ಲವದ ॥
ಮೆರೆವ ಪಾವುಡ ವಾವುಗಳ ಹಾಕಿಸಿಕೊಂಡು । ಹರಳ ಗದ್ದುಗೆಯೊಳು ಮದನ ॥ ೧೨ ॥

ಇರುತಿರಲಾರಾಮಲಕ್ಷ್ಮೀ ರಸಾಲದ । ಕರ ಶೋಭಿಪ ನೆಲೆ ನೆಲೆಯ ॥
ತರುಜದ ನೀರಾಜನವನು ಪಿಡಿ ತಂದು । ಸ್ಮರಗು ರತಿಗು ಎತ್ತುತಹಳೆ ॥ ೧೩ ॥

ಎಂದು ಬಿನ್ನವಿಸಲುಯುಡುಗೊರೆಯುವನಿಗೆ । ಕಂದರ್ಪನಿಭ ತಾನು ಕೊಡಿಸಿ ॥
ಸೌಂದರಾಂಗನು ಎದ್ದರಮನೆಯನು ಪೊಕ್ಕು । ಚಂದದಿಂ ಅನುಮತಿಯೊಡನೆ ॥ ೧೪ ॥

ನಿನಗೆ ನಾನಿಲ್ಲಿ ಪಟ್ಟವ ಸೊಬಗಿಂ ಕಟ್ಟಿ । ಮನಸಿಜವನದೊಳು ಬಂದು ॥
ಮನದಕ್ಕರಿಂ ರತಿದೇವಿಗೆ ಪಟ್ಟವ । ವಿನಯದಿಂ ಕಟ್ಟಿದನಂತೆ ॥ ೧೫ ॥

ಗುರುಕುಚೆ ! ನಿನ್ನ ರೂಪಿಂದಾ ರತಿಯನು । ಜರೆದಾರಾಮ ಮಂಗಲೆಗೆ ॥
ಹರುಷವ ಪುಟ್ಟಿಸಿ ನಿನ್ನ ದೃಷ್ಟಿಗಳಿಂದ । ಎರಳೆಯ ನೇತ್ರವ ಜರೆದು ॥ ೧೬ ॥

ಅರುಣ ಹಸ್ತಂಗಳ ಚೆಳಗಿಂದ ಪದ್ಮವ । ನೆರೆ ಸೋಲಿಸಿಯುಡಿದಳದ ॥
ಅರುಣ ಮೃದುವಿನಿಂದ ಕರ್ಣಪೂರಗಳನು । ವರ ಕಿಸಲಯವನು ಹಳಿದು ॥ ೧೭ ॥

ಅರಗಿಳಿಗಳಿಗೆ ನಿನ್ನಯ ಮುದ್ದು ನುಡಿಯನು । ಪರಪುಟ್ಟಕೆ ನಿನ್ನ ಸ್ವರವ ॥
ಮರಿಯಂಚೆಗೆ ನಿನ್ನ ಮಂದಗಮನವನು । ಮರಿದುಂಬಿಗುರುಳಳು ಕಲಿಸಿ ॥ ೧೮ ॥

ಜಲಕ್ರೀಡೆ ವನಕ್ರೀಡೆಗಳನಾಡುವೆವೇಳು । ನಳಿನಾಕ್ಷಿ ನಲ್ಲಳೆ ! ಎಂದು ॥
ಇಳೆಯಾಣ್ಮ ಪೇಳಿ ಸಿಂಗರವಾಗಿ ನಡೆತಂದು । ಒಳಜಾವಡಿಯೊಳು ನಿಲಲು ॥ ೧೯ ॥

ಸುರಕರಿ ಸಮನಾದ ತ್ರಿಜಗದ್ಭೂಷಣ । ದ್ವಿರದವನಾಗ ಸಿಂಗರಿಸಿ ॥
ನರನಾಥನ ಮುಂದೆ ತಂದು ಪಿಡಿಯಲಾಗ । ದೊರೆ ಜ್ಞಾನೇಂದು ಸರಸದಿ ॥ ೨೦ ॥

ಸುರರಾಜನೈರಾವತನೇರುವಂದದಿ । ಕರಿಪತಿ ಸ್ಕಂಧವನಡರಿ ॥
ತರಳ ನೇತ್ರೆಯರಿಡಬಲದೊಳು ಚಮರಿಗ- । ಳಿರದಿಕ್ಕೆ ಕೈ ಮೇಲಕೆತ್ತಿ ॥ ೨೧ ॥

ಜಗಜಂಪು ಮುತ್ತಿನ ಮಣಿ ಸತ್ತಿಗೆಯನು । ಜಗಧೀಶ ಜ್ಞಾನೇಂದುವಿಗೆ ॥
ಸೊಗಸಿಂದ ಪಿಡಿಯಲು ಕೋಟಿ ವಾದ್ಯದ ರವ । ಜಗವ ತುಂಬಿದುದಾ ವೇಳೆಯೊಳು ॥

ಇತ್ತಲಾಗನುಮತಿ ಮಹಾದೇವಿ ಮುಂತಾದ । ನೃತ್ತಕುಚೆಯರು ಸಿಂಗರಿಸಿ ॥
ಮುತ್ತಿನ ಪಲ್ಲಕಿಗಳ ತಾವೇರಲು । ವೇತ್ರಧಾರಿಗಳುಗ್ಘಡಿಸೆ ॥ ೨೩ ॥

ಅರುಣ ಹಸುರು ನೀಲ ಹಳದಿ ಕದಂಬದ । ಸುರುಚಿರ ಬುರುಸಾಲುಗಳ ॥
ಮೆರೆವ ಪನ್ನಂಗದೊಳಗೆ ಬಿಂಕ ಬೆಡಗಿನ । ತರಳಾಕ್ಷಿಯರ್ನಡೆತರಲು ॥ ೨೪ ॥

ಅನುಮತಿದೇವಿಯ ಪಲ್ಲಕ್ಕಿಯ ಮುಂದೆ । ಘನ ವಾದ್ಯದಾಡೆಜೇಗಟೆಯು ॥
ಘನಕುಚೆ ನಂದವತಿಯ ಮುಂದೆ ಭಾಜಿಸೆ । ಕನಕ ತಮ್ಮಟೆ ಕೊಳಲುಗಳು ॥ ೨೫ ॥

ಸಿಂಧುದೇವಿಯ ಮುಂದೆ ಸಮ್ಮೇಳ ಧನಿದೋರೆ । ಕುಂದಣಲತೆಯಿದಿರಲ್ಲಿ ॥
ಬಂಧುರ ಧವಲ ಶಂಖವು ಬೋರ್ವೊರೆಯಲು । ಸೌಂದರಾಂಗದ ಕಾಮಲತೆಯ ॥ ೨೬ ॥

ರೊಳು ಚೀರಿ ಕಹಳೆ ಇಸ್ಸೀಳದಿರ್ಪ । ಬೆದರುಳ್ಳಿಗಳ್ಳೀರ ಮುಂದೆ ॥
ಂದದಿಂದ ನಾನಾ ಬಗೆಯ ವಾದ್ಯಂಗಳು । ಒದರಿದವಾಗ ಬೋರೆಂದು ॥ ೨೭ ॥
ತಪ್ಪ ವೈಭವದಿಂದ ಕಾಮಿಸಿಯರು । ಪಿಂತೆ ಬರಲು ಜ್ಞಾನೇಂದು ॥
ಂತಳುವದೆ ರಾಜಧಾನಿಯ ಪೊರಮಟ್ಟು । ಅಂತರಿಸದೆ ಚಿತ್ರಕೂಟ ॥ ೨೮ ॥
ದ ಸಮಿಾಪಕೆ ಬರುತಿರಲಿಸಿತಾಗ । ವನದ ಮಾಮರದ ಕೊಂಬೆಯೊಳು ॥
ಸಂತೋಷಿ ದಾಡಿಮದ ಪಣ್ಣನು ತಿಂದು । ದನಿದೋರಿ ರಾಜಕೀರಗಳು ॥ ೨೯ ॥
ಮಿಂದದರಳ ಬಂದುಂಬ ಹೆಣ್ದುಂಬಿಯು । ಸರಸ ಮಧುರ ಸುಸ್ವರಗಳು ॥
ಸನ ಕರ್ಣಕೆ ತಾರಕ ಮಧ್ಯಮ । ವರ ಮಂದ್ರ ಭೇದದಿಂದಾಗ ॥ ೩೦ ॥
ರಗಿಸಿ ಚಿತ್ತವ ಮೊಲ್ಲೆ ಮಲ್ಲಿಗೆ ಜಾಜಿ । ಸುರಹೊನ್ನೆಯುದಿರ್ಗಂತಿ ಸುರಗಿ ॥
ಕಲ್ಹಾರ ಮಂದಾರವು ಮೊದಲಾದ । ಅರಳ ಪರಿಮಳವ ಕೊಂಡು ॥ ೩೧ ॥
ರುಷದಿಂದಿರ್ದಂದು ದಕ್ಷಿಣಾನಿಲನಾ- । ಗರಸನ ನಾಸಾಪುಟಕೆ ॥
ರದಿ ಕಾಣಿಕೆಗೊಟ್ಟಾಲಿಂಗನವನು । ವರ ಪ್ರೀತಿಯಿಂದ ಮಾಡಿದುದು ॥ ೩೨ ॥
ತದನಂತರದೊಳು ಜ್ಞಾನೇಂದು ಕುವರನು । ಮದದಂತಿ ಶಿರದಿಂದಿಳಿದು ॥
ಂದದಿಂದ ಮುತ್ತಿನ ವನದ ದ್ವಾರವ ಪೊಗೆ । ಚದುರಿಂದ ಸರ್ಮಸಚಿವನು ॥ ೩೩ ॥
ರಿಗಳ ದೇವಗೆ ಕೈಲಾಗವನು ಕೊಡೆ । ಪರಿಮಿತ ಜನಸಹವಾಗಿ ॥
ದ ಮುತ್ತಿನ ಪಾವುಗೆ ಮೆಟ್ಟಿ ಗಮಕದಿ । ನರನಾಥ ನಡೆವ ವೇಳೆಯೊಳು ॥ ೩೪ ॥
ಳುಕುವ ಎಳಲತೆ ಪೊಳೆವಾಂಗವಾಗಲು । ಗಿಳಿ ಮುದಿ ಒಳುಮಿಯಾಗೆ ॥
ಳಜ ಮೊಗ್ಗೆಯೆ ಸ್ತನಯುಗಳವು ತಾನಾಗೆ । ಜಳಜನಾಳವೆ ತೋಳಾಗೆ ॥ ೩೫ ॥
ಳಿನ ರಾಶಿಗಳು ನಿತಂಬ ಯುಗಳವಾಗೆ । ಸುಳಿನಾಭಿ ತಂಗೊಳನಾಗೆ ॥
ಹಂಸಯಾನವೆ ಮಂದಗಮನವಾಗೆ । ಪೊಳೆವ ಮಿಾಸ್ಗಳು ಕಣ್ಣಾಗೆ ॥ ೩೬ ॥
ರಿಸೋಗೆ ಸೊಮ್ಮರ್ದಿ ಸೊಸ್ಕಾರದಿಂದಾಗೆ । ಪರಿವ್ಯಾಧದರಳಾಗೆ ಮೊಗವು ॥
ಕದ ಚಿತ್ತಿನ ಸಾಲೆ ಕೆಂಬಲ್ಲಾಗೆ । ಮರಿದುಂಬಿ ಕುಂತಳವಾಗೆ ॥ ೩೭ ॥
ಯ ಕೇದಿಗೆಗಳು ಪಾಣಿ ಪಾದಗಳಾಗೆ । ಬೆಳೆವ ಬಾಳೆಯೆ ಸುಜಂಘೆಯು ॥
ಳೆವ ನೈದಿಲನಾಳ ಬಡಬಾಸೆಯುಮಾಗೆ । ಬಿಳಿಯೆಲೆಗಳು ಕದಪಾಗೆ ॥ ೩೮ ॥
ರಿಲನಸುದೋರಿ ಪಕ್ವ ಚೆಂದುಟಿಯಾಗೆ । ಮಾರನ ಬಿಲ್ಲು ಪುರ್ಬಾಗೆ ॥
ರಾಜಿಪ ಸಂಪಿಗೆ ಬಿರಿ ಮುಗುಳೆ ತಾ । ಸೇರಿದ ನಾಸಿಕವಾಗೆ ॥ ೩೯ ॥
ಸೊಗಯಿಪ ಮಾಂದಳಿರ ಪಟ್ಟೆಯನುಟ್ಟು । ವರ ವನಲಕ್ಷ್ಮಿ ಒಯ್ಯರದಿ ॥
ವ ಸಂಪಗೆ ನಿಲೆ ನಿಲೆಯಾದ ಪೂವಿನ । ಸುರುಚಿರಾರತಿಕವಿದಿದು ॥ ೪೦ ॥

ಪರಪುಟ್ಟರವವೆಂಬ ಕಹಳೆಯೂದಲು ಮುಂದೆ। ಮರಿದುಂಬಿ ಝೇಂಕಾರವೆಂಬ ॥
ವರ ಶಂಖಗಳು ಭೋರೆಂದು ಸಂತೋಷದಿಂ-। ದರಸಗೆ ತಾಸಿದಿರ್ದಂದು ॥ ೪೧ ॥

ಕಡು ರಂಗುವಡೆದ ಕಂಕೇಲಿ ಪೂದೊಂಗಲ-। ನಿಡಿದು ನಿವಾಳಿಗಳೆರಡ ॥
ಸಡಗರದಿಂ ಹಾಕಿ ನೀರಾಜನವೆತ್ತಿ। ಒಡನೆ ಪುಷ್ಪಾಂಜಲಿ ಮಾಡಿ ॥ ೪೨ ॥

ಅರಗಿಳಿ ರವದಿಂದ ಧರೆಯ ನೀನಾಳೆಂದು। ಪರಸಿ ಸಮ್ಮಾರಾಮವೆಂಬ ॥
ಅರಮನೆಯತ್ತ ಚಿತ್ತೈಸಬೇಕೆಂದಾಗ। ವರ ಕೀರ ರವದಿಂದ ನುಡಿಯೆ ॥ ೪೩ ॥

ಪಾಡುಗಾರಿಕೆಯಿಂದ ನರ್ಮ ಸಚಿವನಾಗ। ನಾಡಿಗೊಡೆಯ ಬೀಳ್ಕೊಟ್ಟು ॥
ಕಾಡಿಗೆಕಣ್ಣ ಕಾಮಿನಿಯರ ಗೋಷ್ಠಿಯಿಂ। ಪ್ರೌಢರರಸನಡಿಯಿಡುತ ॥ ೪೪ ॥

ಮರುತವಶದಿ ಮಾವಿನ ಪಣ್ಣೊಡೆದಾಗ। ಕುಡಿವ ರಸವ ಕಂಡು ಗಿಳಿಯು ॥
ಎರಕದಿಂದೈತಂದು ಪಕ್ಕವ ಪಸರಿಸಿ। ಕೊರಳನಿಮಿರ್ದಸವಸದಿ ॥ ೪೫ ॥

ರಸವ ಸೇವಿಸಿ ಮೈವೆರ್ಚೆ ಕೀಳ್ಗೊಂಬೆಯ। ರಸಿಕತನದಿ ಮೆಚ್ಚಿಕೊಂಡು ॥
ಕುಸುಮಾಯುಧನಂಕಮಾಲೆಯೋದುವುದನು। ವಸುಧೇಶ್ವರ ಕೇಳಿ ನಕ್ಕು ॥ ೪೬ ॥

ಅನುಮತಿ ದೇವಿಯ ಮುದ್ದು ಮೊಗವ ನೋಡಿ। ವನದೈಸಿರಿಯ ರಾಜೇಂದ್ರ ॥
ಮನದಕ್ಕರಿಂದವಳಿಗೆ ಪೇಳಿದನಾಗ। ಮನುಜಮಂದಾರನುದಾರ ॥ ೪೭ ॥

ಗುರುಕುಚೆ ! ನೋಡು ನಿನ್ನಂಗವರ್ಣದೊಳಿರ್ಪ। ಪರಿವ್ಯಾಧ ಕುಸುಮವ ಪೊಕ್ಕು ॥
ಸ್ವರದೋರುತ ವಿಲಾಸವನೀಂಟಿ ಮುಗುಳುವ। ಮರಿದುಂಬಿಗಳ ಶ್ರೇಣಿಯನು ॥ ೪೮ ॥

ಕನಕಲತಾಂತದ ಕಿಂಜಲ್ಕವನು ಪೊಕ್ಕು। ಜಿನುಗುತ ಮಕರಂದವನು ॥
ಅನುರಾಗದಿಂದೀಟಿ ಮೆರೆವ ಬಂಡುಣಿಗಳ-। ನಸಿಮಿಷಲೋಚನೆ ! ನೋಡು ॥ ೪೯ ॥

ವನಲೋಕ ಜನನಿ ಸೂರಿದನೆಂಬ ದೇವಗೆ। ಅನುದಿನ ಬೆಳಗುವಾರತಿಯೋ ॥
ಎನಲೊಪ್ಪುವ ಸಂಪಿಗೆಯ ಪೂದೊಂಬೆಯ। ಕನಕಲತೆಯೆ ! ನೋಡೆಂದ ॥ ೫೦ ॥

ಮರಕತ ಮಾಣಿಕ್ಯ ನೀಲರತ್ನಂಗ-। ಳರನೇರಿಲೊಳು ಪದ್ಮಜನು ॥
ವಿರಚಿಸಿದನೊ ಎನೆ ಮಿಡಿದೋರೆಪಣ್ಗಳಿಂ। ಮೆರೆವ ನೇರಿಲ ನೋಡಬಲೆ ! ॥ ೫೧ ॥

ನುಡಿಯದೆ ಜನಕುಪಕರಿಪುತ್ರಮರಂತೆ। ಬಿಡದೆ ತಾಳಿಂತುದಿಮುಟ್ಟಿ ॥
ತೊಡರಿ ಪಣ್ಗಾಯಿಂದ ಮೆರೆವ ಪನಸುಗಳ। ಕುಡಿತೆಗಣ್ಣಳಿಗೆ ತೋರಿದನು ॥ ೫೨ ॥

ಕಿರಿದಂದು ಸಾಕಿದ ಒಡೆಯುಗೆ ಶಿರದಲ್ಲಿ। ಮರಕತ ಕನಕ ಪುಟದೊಳು ॥
ಪಿರಿದು ಸುಧೆಯ ಧರಿಸಿ ನೀಡುತಲಿರ್ಪ। ತರುಣಚೆಂದೆಂಗ ನೋಡಬಲೆ ! ॥ ೫೩ ॥

ಪಲವು ದೇವತೆಗಳು ಪಲವು ಫಲವ ಬಿಟ್ಟು। ನಲವಿಂದ ಪಿಡಿದೊಪ್ಪುತಿರ್ಪ ॥
ಫಲ ಪೂರಗಳ ನೋಡೆಂದಬ್ಧಿದೇವಿಗೆ। ಚೆಲುವರರಸ ತೋರಿದನು ॥ ೫೪ ॥

ಸರಸಿಜವದನೆ ! ನಿನ್ನಯ ಕೆಂಬಲ್ಲಿಗೆ । ಸರಿಯೆಂದು ದಾಳಿಂಬ ತನ್ನ ॥
ಕರದಿಗೆ ಬಾಯ ತೆರೆದು ತೋರುವಂದದಿ । ಬಿರಿದ ಪಣ್ಗಳ ನೋಡೇಣಾಕ್ಷಿ ! ॥ ೫೫ ॥

ಗುರುಕುಚೆ ! ನಿನ್ನಯ ಪಾಣಿಪಲ್ಲವಗಳೆ । ಸರಿಯೆಂದು ಕರಗಳ ನೀಡಿ ॥
ಭರದಿ ತೋರಿಸುವಂತಸುಗೆಯ ತರುಗಳ । ಮೆರೆವ ತಳಿರುಗಳ ನೋಡು ॥ ೫೬ ॥

ಸಮ ಮಾಡಿ ಪತ್ರವ ಪಕ್ಷಕ್ಕೆ ತುಂಡವ । ಸಮಮಾಡಿ ಕುಸುಮಕ್ಕೆ ನಮ್ಮ ॥
ಭ್ರಮೆಗೊಳಿಸುವ ಮುತ್ತುಗದ ಮರೆಯೊಳಿರ್ಪ । ರಮಣಿ ! ನೀ ನೋಡೆಲೆ ಗಿಳಿಯ ॥

ತರುಣಿ ! ನೀನೆತ್ತ ನಡೆಯಲು ತನುವಿನ ರುಚಿ । ತರುಣಾರ್ಕಕಾಂತಿ ತಾನೆಂದು ॥
ಎರಕದಿಂ ತಿರುಗುವ ರವಿಕಾಂತದಪೂವ । ಮರಿದುಂಬಿಗುರುಳಳೆ ! ನೋಡು ॥ ೫೮ ॥

ಸುದತಿ ! ನಿನ್ನಯ ಸುಣ್ಗೊಡೆ ತನ್ನ ಚೆಲುವಿಂ- । ದೊದೆದು ನೂಂಕಿತು ತನ್ನನೆಂದು ॥
ಕದಳಿ ಪಣ್ಗಳನಾಂತು ಶಿರ ಬಾಗಿರುವುದ । ಮದದಂತಿ ಗಮನೆ ! ನೀ ನೋಡು ॥ ೫೯ ॥

ವನಸಂಪಿಗೆ ಬ್ರಹ್ಮಜಟಿ ನಾಗವಲ್ಲಿಯ । ಘನವಾದುಶೀರೊಡಪಚ್ಚೆ ॥
ಮಿನುಗುವ ಕುದ್ದಾಲ ಮಾಧವಿ ಕಲ್ಹಾರ । ಅನುಪಮ ಸಪ್ತ ಪರ್ಣಗಳ ॥ ೬೦ ॥

ಮರುಗ ಮಲ್ಲಿಗೆ ಜಾಜಿ ಮದಯಂತಿ ಮಾಗಧಿ । ತರಣಿ ನಿರ್ಗುಂಡಿ ಸಪ್ತಲದ ॥
ಕುರವಕ ಕುಂದ ಮುಂತಾದ ಪೂಜಾತಿಯ । ತರುಣಿಯರಿಗೆ ತೋರಿಸಿದ ॥ ೬೧ ॥

ಕುವಲಯಪತಿಯಿಂತಪ್ಪ ವನದ ಚೆಲ್ವ । ಕುವಲಯಲೋಚನೆಯರಿಗೆ ॥
ಸವಿನಯದಿಂದ ತೋರಿಸುತ ವಿಡಾಯದಿಂ । ನವ ಪಂಚಶರ ನಡೆತಂದ ॥ ೬೨ ॥

ಪರಿಮಳವಸು ಪತ್ತು ದೆಸೆಗೆ ಬೀರುತಲಿರ್ದ । ಮೆರೆವ ಕತ್ತುರಿ ಸೇವಂತಿಗೆಯ ॥
ಸುರುಚಿರ ವನದೊಳು ಕದಳಿ ಕಂಬಗಳಿಂದ । ಪರಿವ್ಯಾಪ್ತ ಫಲದ ಗಡಿಗೆಯಿಂ ॥ ೬೩ ॥

ಕೇಸರ ಕುಸುಮದ ಪಾಸಿವಟ್ಟಲುಗಳಿಂ । ವಾಸಂತಿಯರಳ ಬೋಧಿಗೆಯಿಂ ॥
ಭಾಸುರವಾದಿಕ್ಷುದಂಡದ ತೊಲೆಗಳಿಂ । ಸಾಸಿರೆಸಳ ಪತ್ರಗಳ ॥ ೬೪ ॥

ಮೆರೆವ ಮುಚ್ಚುಳು ವಲಗೆಗಳಿಂದ ಕೊಸಗಿಲೆ- । ಯರಳ ವಿಕರ್ಣಗಳಿಂದ ॥
ಅರವಿಂದ ತಂತುವಿನಿಂದ ರಚಿಸಿದ । ತರುಣ ಬಾಳೆಯ ಸುಳಿ ಎಲೆಯ ॥ ೬೫ ॥

ಮೇಲುಕಟ್ಟುಗಳಿಂದಶೋಕೆಯ ಪೂವಿನ । ಜೋಲುವ ಕುಚ್ಚುಗಳಿಂದ ॥
ಬಾಳದ ಬೇರಿನ ನಡುಝಲ್ಲಿಗಳಿಂದ । ಬಾಳೆಯ ಮದನ ಕೈಯಿಂದ ॥ ೬೬ ॥

ಕರಿಯ ಗೋರಟೆಯ ಪುಷ್ಪದ ಸೆಲಕಟ್ಟಿನಿಂ । ಪರಿಮಳಮಯ ಕರ್ಪುರದ ॥
ಮೆರೆವ ಜಗಲಿಗಳಿಂ ಸಂಪಗೆ ಮೊಗ್ಗೆಯ । ಸುರುಚಿರ ಮತ್ತವಾರಣದಿಂ ॥ ೬೭ ॥

ಕುಸುಮದೆಸಳ ಹಾಸಿಕೆಯಿಂ ಮತ್ತದರೊಳು । ರಸಿಕತೆಯಿಂದ ಹಾಸಿರಲು ॥
ಕೊಸಗಿಲೆ ಪೂವ ರಜದ ರಂಗವಲಿಯಿಂದ । ಘಸೃಣರಸದ ಚಳಯಗಳಿಂ ॥ ೬೮ ॥

ಸ್ಮರರತಿ ಪವಡಿಪ ಸಜ್ಜಾಗೃಹದಂತೆ। ಸಿರಿಯಿರ್ಪರಮನೆಯಂತೆ ॥
ಸರಸಿಜ ಭವನಾಸ್ಥಾನಮಂಟಪದಂತೆ। ಕರ ಚೆಲುವಾದ ವಸಂತ ॥ ೬೯ ॥

ವರ ಮಂಟಪವ ವಿನೋದದಿ ನೋಡುತ। ಹರಿಸದಿಂ ತಾನೊಳಪೊಕ್ಕು ॥
'ಸ್ಮರತರಂಗಿಣಿ' ಎಂಬ ತೂಗುಮಂಚದ ಮೇಲೆ। ನರನಾಥನನುಮತಿವೆರಸು ॥ ೭೦ ॥

ಓಲಗಗೊಟ್ಟಿರೆ ಆ ವೇಳೆಯೊಳು ಬಂದು। ನೀಲಕಂಠಗಳಿದಿರೊಳಗೆ ॥
ಲೀಲೆಯಿಂ ನಟಿಸಿ ಕುಹೂರಟವಿಂದಲ್ಲಿ। ಆಳಾಪಿಸೆ ಮತ್ತೆ ಕೆಲವು ॥ ೭೧ ॥

ಪರಪುಟ್ಟಗಳು ಕುಕಿಲು ಕುಕಿಲೆಂದೆಂಬ। ಸ್ವರಕಾಂಸ್ಯತಾಲ ತಾನಾಗೆ ॥
ಹರಿಗಳು ಮದ್ದಳೆಗಳ ಬಾಜಿಸುತಿರೆ। ಅರಸನತ್ಯಚ್ಚರಿಯಿಂದ ॥ ೭೨ ॥

ನೋಡುತ ಬೆಡಗಿನೊಳಿರುತಿರೆ ಅನುಮತಿ। ನಾಡೊಡೆಯನ ಮುದ್ದು ಮೊಗವ ॥
ನೋಡಲು ಜ್ಞಾನೇಂದು ತಿಳಿದು ಕಣ್ಸನ್ನೆಯ। ಮಾಡಲು ಯುವತಿಯರೆಲ್ಲ ॥ ೭೩ ॥

ಕುಸುಮಾಪಚಯವ ಮಾಡುವೆವೆಂಬ ನೆವದಿಂದ। ಅಸವಸದಿಂದ ತಾವೆದ್ದು ॥
ಹೊಸ ಜವ್ವನೆಯರು ಪರಮ ಸಂತಸದಿಂದ-। ಲಸಗಮನದಿ ಬರುತಿರಲು ॥ ೭೪ ॥

ಮುಡಿಯಲುಗಲು ಕುಚಯುಗಲವು ಕುಣಿಯಲು। ಕಡೆಗಣ್ಣರುಚಿ ಪಸರಿಸಲು ॥
ನಡು ಬಳುಕಲು ತೊಡೆ ದಡದಡಿಸಲು ಮತ್ತೆ। ಮಡದಿಯರ್ನಡೆವ ವೇಳೆಯೊಳು ॥ ೭೫ ॥

ಹರಿಣಿಯ ಮರಿಯಂತೆ ಹಾರುತ ಕೆಲಬರು। ಹರಿಯ ಮರಿಗಳಂತೆ ಕೆಲರು ॥
ಭರದಿಂ ಲಂಘಿಸುತಾನೆ ಮರಿಯಂತೆ ಕೆಲಬರು। ತಿರಿಯಕ್ಕಾಗಿ ಪರಿವುತ ॥ ೭೬ ॥

ಹಾರ ಹರಿದು ಹೋದುದ ತಾವರಿಯದೆ। ಸೀರೆ ಸೀಳಿದುದನರಿಯದೆ ॥
ಚಾರು ನೂಪುರ ಬಿದ್ದು ಹೋದುದನರಿಯದೆ। ನಾರಿಯರಡಿಯಿಟ್ಟರಾಗ ॥ ೭೭ ॥

ಮರುಗ ಮಲ್ಲಿಗೆ ಜಾಜಿ ಸುರಹೊನ್ನೆಯತಿಮುಕ್ತ। ಇರುವಂತಿ ಮೊಲ್ಲೆ ಕುಮಾರಿ ॥
ಸುರಗಿ ಸಂಪಿಗೆ ಮೊದಲಾದ ಪುಷ್ಪಗಳನು। ತಿರಿದರು ಲತೆವನವೊಕ್ಕು ॥ ೭೮ ॥

ಅರಳಿಗೆ ಲೋಚನ ತಳಿರಿಗೆ ಪದತಲ। ಕುರುಳಿಗೆ ಮರಿದುಂಬಿಗಳನು ॥
ಬೆರಳಿಗೆ ತಳಿಕೆ ಲತೆಗೆ ತಮ್ಮ ತನುವನು। ಸರಿಗಂಡು ಕೊಯ್ದರು ನನೆಯ ॥ ೭೯ ॥

ತರುಣಿಯೋರ್ವಳು ಪುಷ್ಪಂಗಳ ಕೊಯ್ವಾಗ। ಮೊರೆವೇಳುವಳಿಗಳೊಪ್ಪಿದವು ॥
ವರಲತೆವೆಣ್ಣೊಳಾಡುವ ನೀಲದ। ತಿರಿಕಲ್ಲುಗಳೋ ಎಂಬಂತೆ ॥ ೮೦ ॥

ಗುರುಕುಚೆಯೋರ್ವಳು ಕುಸುಮವ ಕೊಯ್ವಲ್ಲಿ। ಕರಗಳ ನೀಡೆಯಾರಡಿಯು ॥
ಅರುಣಾಂಬೋಜಾತವೆಂಬ ವಿಭ್ರಾಂತಿಯಿಂ। ಮೊರೆದೆರಗಿದವು ಕರದೊಳು ॥ ೮೧ ॥

ನೀರೆಯೋರ್ವಳು ಪುಷ್ಪಂಗಳ ಕೊಯ್ವಾಗ। ನೇರಿಲದೋರೆವಣ್ಣೆಂದು ॥
ಕೀರನೆರಗಿ ಚೆಂದುಟಿಯ ಕರ್ದುಂಕಲು। ಮೋರೆಯ ಮುಚ್ಚಿ ಓಡಿದಳು ॥ ೮೨ ॥

ಗರುವೆಯೋರ್ವಳು ಲತಾಂತವ ಕೊಯ್ವಾಗ । ಕುರುಳ್ಗಳ ಪೆಣ್ದುಂಬಿ ಕಂಡು ॥
ಮರಿಯಲ್ಲವೆ ಎನ್ನದೆಂಬ ವ್ಯಾಜದಿ ಬಂದು । ದುರುದುಂಬಿ ಪರಿಮಳಕೆರಗೆ ॥ ೮೩ ॥

ಕರತಳ ಕಾಂತಿಯಿಂ ಪುಷ್ಪದ ಗೊಂಚಲು । ವರ ಕಿಸಲಯವಾಗೆ ಬಿಟ್ಟು ॥
ಅರುಣಪಲ್ಲವವುಗುರ್ವೆಳಗಿಂದ ಪೂವಿನ । ಅರಳುಗಳಾಗೆ ಕೊಯ್ಯುವರು ॥ ೮೪ ॥

ಹರಿತಮಿಡಿಯ ಮೇಲೆ ಕೆಂಬಲ್ಲ ಕಾಂತಿಯು । ಹರಿಯಲು ಕೆಂಪಾದುದನು ॥
ಭರದಿ ಕಂಡಿದು ಮಾಮರಸಲ್ಲ ಮಾಯದ । ಮರನೆಂದು ಮುಗುದೆ ಜಾರಿದಳು ॥ ೮೫ ॥

ತರುಣಿಯೋರ್ವಳು ವಸಂತ ಶಾಖೆಯೊಳಿರ್ದ । ಅರಗಿಳಿ ನೋಡೆ ಕಣ್ಬೆಳಗು ॥
ಪರಿಯಲು ಬೆಳುಪಾಗೆ ಮಾಯದ ಗಿಳಿಯೆಂದು । ಕರಬೆಚ್ಚಿ ಮುಗುದೆಯೋಡಿದಳು ॥

ತರುಣಿಯೋರ್ವಳು ಪೂಗೊಯ್ವವಸರದೊಳು । ಭ್ರಮರ ಕುಚವ ಕಂಡವಳ ॥
ಕಮಲ ಕುಡ್ಮಲವೆಂದು ಝೋಂಕರಿಸುತ ಬಂದು । ಭ್ರಮೆಗೊಂಡು ಎರಗಿದವಾಗ ॥ ೮೭ ॥

ಎಳಲತೆಯೊಳು ಪೊಕ್ಕು ಪೂ ಕೊಯ್ಯಲೋರ್ವಳು । ಬಳಿಮುಖ ಠರ್ರೆಂದೆಸಲು ॥
ಕಳವಳಿಸುತ ಬೆದರ್ವೋಡಿ ಬಂದೋರ್ವಳು । ನಳಿನಾಕ್ಷಿಯನಪ್ಪಿದಳು ॥ ೮೮ ॥

ಪುಲ್ಲಾಕ್ಷಿ ನೀಲದ ಬಟ್ಟಲೊಳೋರ್ವಳು । ಮೊಲ್ಲೆ ಹೂ ಕೊಯ್ದಿಡಲಿಹುದು ॥
ಬಲ್ಲಿದ ಚಂದ್ರನ ನುಂಗಿದ ರಾಹುವ । ಸೊಲ್ಲಿಸುತಿಹುದು ನೋಳ್ಪರಿಗೆ ॥ ೮೯ ॥

ಗರುವೆಯೋರ್ವಳು ಬೆಳ್ಳಿಯ ಬಟ್ಟಲೊಳು ಕೊಯ್ದು । ಕರಿಯ ಮಲ್ಲಿಗೆಯಿಡಲಿಹುದು ॥
ಧರೆಗಿಳಿತಂದಿರ್ದ ಕರಿವೆರೆಯನ ಚೆಲ್ವ । ತೆರನ ಬಲ್ಲರಿಗೆ ಪುಟ್ಟಿಪುದು ॥ ೯೦ ॥

ಸುದತಿಯೋರ್ವಳು ಕಂಕೇಲಿಯ ಎಡೆಗೈದಿ । ಒದೆಯಲಾಗದು ದುಷ್ಟನಂತೆ ॥
ಪದಪಿಂದ ಪಲ್ಲವಿಸಲು ತಳಿರ್ಗೊಯ್ದಾಗ । ಚದುರೆಯು ಮುಡಿದಳು ಮುಡಿಗೆ ॥ ೯೧ ॥

ತರುಣಿಯೋರ್ವಳು ಪ್ರಿಯಂಗುವಿನೆಡೆಗೈದಿ । ಕರದಿ ತಡಹಲಿದು ಚಿಗುರೆ ॥
ಹರಿಸದಿಂ ಕಿಸಲಯವನು ಕೊಯ್ದು ಮುಡಿಗಿಟ್ಟು । ಪೆರತೋರ್ವಳಿಗಿತ್ತಳಾಗ ॥ ೯೨ ॥

ಶಶಿಮುಖಿಯೋರ್ವಳು ರಂಜದೆಡೆಗೆ ಎಯ್ದಿ । ಕುಸುಮರಂಜಿನಿಯಿಂದೆಂಬ ॥
ಪೊಸರಾಗವ ಪಾಡೆ ಕುಸುಮವಂಕುರಿಸಲು । ಅಸಿಯಳು ಕೊಯ್ದು ಮುಡಿದಳು ॥ ೯೩ ॥

ದಿಟ್ಟಿದೆರೆದು ನೋಡಿಯೋರ್ವ ತಳೋದರಿ । ತೊಟ್ಟನೆ ಕುರವಕವರಳೆ ॥
ತುಷ್ಟಮಾನಸೆಯಾಗಿ ಕುಸುಮವ ಕೊಯ್ದಳು । ಬಟ್ಟಮುಡಿಗೆ ಕಟ್ಟಲೆಂದು ॥ ೯೪ ॥

ಮಡದಿಯೋರ್ವಳು ಬಕುಳದ ವೃಕ್ಷವ ಸಾರಿ । ನಿಡುದೋಳಿಂ ಬಿಗಿಯಪ್ಪಿ ॥
ಒಡನೆ ಲತಾಂತವಂಕುರಿಸಲು ಗಮ್ಮನೆ । ಕಡು ಜಾಣೆ ಕುಯ್ದು ಮುಡಿದಳು ॥ ೯೫ ॥

ಲಲನೆಯೋರ್ವಳು ಲಾವಣ್ಯವ ಸೂಸುತ । ತಿಲಕ ವೃಕ್ಷವ ವೀಳ್ಯದಿಂದ ॥
ಒಲವಿನಿಂದಿಡೆ ಕಿಸಲಯ ಕುಸುಮಗಳಾಗೆ । ಚೆಲುವಿಂ ತಿರಿದು ಮುಡಿದಳು ॥ ೯೬ ॥

ತರುಣಿಯೋರ್ವಳು ಕೆಂದೆಂಗಿನ ಎಳನೀರ । ತಿರಿ ತಂದು ತನ್ನಯ ಸ್ತನಕೆ ॥
ದೊರೆಯಲ್ಲವೆಂದು ಸಖಿಗೆ ತಾ ತೋರ್ವಂತೆ । ಕರದೊಳಾಂತಿಹಳು ಲೀಲೆಯೊಳು ॥ ೯೭ ॥

ಲೋಲಾಕ್ಷಿಯೋರ್ವಳು ಬಿನದಕಿಳಿದು ಬಿ- । ಟ್ಟಾಲದೆರಡು ಬೀಳಲುಗಳ ॥
ಲೀಲೆಯಿಂ ಗಂಟಿಕ್ಕಿ ಕುಳಿತು ನಡುವೆ ಉಯ್ಯ- । ಲ್ಯಾಲಿಳಿವಿಟ್ಟಾಡಿದಳು ॥ ೯೮ ॥

ಧರೆಯಿಂದಲಾಗಸವರೆಗುಯ್ಯಲಾಡುತ । ಹರಿಣಾಂಬಿಕೆಯೊಪ್ಪಿದಳು ॥
ಸುರಸತಿ ವನಕೇಳಿಗಿಳಿತಂದು ಇವರೊಳು । ಭರದಿಯಾಡುವಳೆನಲಿಹಳು ॥ ೯೯ ॥

ಭಾವೆಯೋರ್ವಳ ಬೀಳಲ್ವಿಡಿದುಯ್ಯಲಾಡುವ । ರಾಮಣೀಯಕ ಭಾವಮಿಹುದು ॥
ವ್ಯೋಮಕೇಶವನ ಜಡೆಯ ಪಿಡಿದಾಡುವ । ಹೈಮವತಿಯೋ ತಾನೆಂಬಂತೆ ॥ ೧೦೦ ॥

ಭರದಿಂದುಯ್ಯಲನಾಡೆ ಮೇಲಕಿರದೆ ಪೋಪ । ವರ ಭಾವವೊಪ್ಪಿತು ಪಳೆಯ ॥
ಸುರಸತಿಯುರ ತನ್ನ ರೂಪಿಂ ಜರಿವೆನೆಂದು । ಸುರಪುರಕ್ಕೈದುವಂತಿಹಳು ॥ ೧೦೧ ॥

ಚರಣವ ಹರಿಯ ಬಿಟ್ಟಾಡುವ ನೀರೆಯು । ವರ ಭಾವಮಿಹುದು ತನ್ನೊಂದು ॥
ಸಿರಿಮೊಗಕೆಣೆಯೆಂಬ ಚಂದ್ರನೊದೆವೆನೆಂದು । ಭರದಿ ನೀಡಿದಳೆನಲಿಹುದು ॥ ೧೦೨ ॥

ಬೀಳಿಲುಗಳನು ಕಾಲೊಳು ಮೆಟ್ಟಿ ಹತ್ತುವ । ಎಳೆವೆಣ್ಣೋರ್ವಳೊಪ್ಪಿದಳು ॥
ನಳಿನಾಸ್ತ್ರವೈರಿಯ ಜಡೆ ಮೆಟ್ಟಿ ಶಿರವೇರ್ವ । ನಳಿನಾಕ್ಷಿ ಗಂಗೆಯಂತಿಹಳು ॥ ೧೦೩ ॥

ತರುಣಿಯೋರ್ವಳು ಉಯ್ಯಲಾಡುತಲಿರಲಾಗ । ತುರುಬು ಕೆದರಿ ಪುಷ್ಪವೋಗಲು ॥
ಕರಿಯ ಮುಗಿಲೊಳಿರ್ದ ನಕ್ಷತ್ರ ಪೇಟಕ । ಧರೆಗುದುರಿದ ತೆರನಾಯ್ತು ॥ ೧೦೪ ॥

ಮಡದಿಯೋರ್ವಳು ಉಯ್ಯಲನಾಡೆ ಬೆನ್ನೊಳು । ಜಡೆ ಸಿಡಿದಾಗಿ ಒಪ್ಪಿದುದು ॥
ಮಡದಿಯ ಮುಖಶಶಿಯನು ನುಂಗಲು ಬಂದ । ಕೆಡುಕ ರಾಹುವೋ ಎನಲಿಹುದು ॥

ಸರಸಿಜಾಂಬಕಿಯೋರ್ವಳು ಉಯ್ಯಲಾಡಲು । ತುರುಬು ಜಳಪಿ ಫುಲ್ಲ ಸುರಿದು ॥
ಶಿರಜದೊಳಗೆ ಬರ್ಹಿಣಿ ನರ್ತಿಸುವಾಗ । ಮೆರೆವ ಹೀಲಿಗಳಂತಿಹುದು ॥ ೧೦೬ ॥

ಇಂತಿವು ಮೊದಲಾದ ವನಕ್ರೀಡೆಯನಾಡಿ । ಕಾಂತಾಮಣಿಗಳಾ ದೊರೆಗೆ ॥
ಸಂತೋಷದಿಂ ಪುಷ್ಪಾಭರಣಗಳ ನೋ- । ರಂತೆ ತಂದಿತ್ತರಿಂತೆನಲು ॥ ೧೦೭ ॥

ನಾರಿಯೋರ್ವಳು ಕಡು ಸೊಗಸಿಂದ ತಾನಾಗ । ಪಾರಿಜಾತದ ಕುಸುಮದೊಳು ॥
ಭಾರಿಯ ಕಂಠಮಾಲೆಯ ವಿರಚಿಸಿ ತನ್ನ । ನೀರಗಿತ್ತಳು ಕಾಣಿಕೆಯ ॥ ೧೦೮ ॥

ಚಲ್ಲೆಗಂಗಳೆಯೋರ್ವಳು ಮಹಾರಚನೆಯಿಂ । ಮಲ್ಲಿಗೆ ಮೊಗ್ಗೆ ಬಾಸಿಗವ ॥
ಸಲ್ಲೀಲೆಯಿಂ ವಿರಚನೆ ಮಾಡಿ ತನ್ನಯ । ನಲ್ಲಗಿತ್ತಳು ಕಾಣಿಕೆಯ ॥ ೧೦೯ ॥

ತರುಣಿಯೋರ್ವಳು ಎಡೆ ಎಡೆಗೆ ಸಂಪಗೆಯಿಕ್ಕಿ । ಸಿರಿಸ ಕುಸುಮ ದಂಡೆಯನು ॥
ಅರಸನ ಕೊರಳಿಗಿಕ್ಕಲು ರಾಜಿಸಿದನು । ವರ ಮಾಲ್ಯಾಂಗದಂದದೊಳು ॥ ೧೧೦ ॥

ಲೋಲಾಕ್ಷಿಯೋರ್ವಳು ಸುರಗಿಯರಳಿನಿಂದ। ಕಾಲಪೆಂಡೆಯವನು ರಚಿಸಿ ॥
ಓಲಗಗೊಟ್ಟಿಹ ಪ್ರಾಣನಾಯಕನಿಗೆ। ಲೀಲೆಯಿಂ ತಂದಿತ್ತಳಾಗ ॥ ೧೧೧ ॥

ತರುಣಿಯೋರ್ವಳು ಮಂದಾರದರಳಿನಿಂದ। ಕರದ ಕಂಕಣವನು ರಚಿಸಿ ॥
ಅರಸಗೆ ಕಾಣಿಕೆಯಿಕ್ಕಿ ಕೈ ಮುಗಿದಳು। ಸರಸಾಲಾಪೆ ಸುಜಾಣೆ ॥ ೧೧೨ ॥

ಕಾಮಿನಿಯೋರ್ವಳು ಬಂದುಗೆಯರಳಿಂದ। ಸ್ವಾಮಿಗೆ ಭುಜಕೀರ್ತಿಯನು ॥
ಪ್ರೇಮದಿಂ ರಚಿಸಿ ಕಾಣಿಕೆಯಿಕ್ಕಿ ಚರಣಕೆ। ತಾಮರೆಗಂಧಿ ಮಣಿದಳು ॥ ೧೧೩ ॥

ನೀರೆಯೋರ್ವಳು ದುಂಡುಮಲ್ಲಿಗೆ ಮೊಗ್ಗೆಯ। ಸೇರುವೆ ಮಾಡಿ ಚೌಕುಳಿಯ ॥
ಭೂರಮಣನಿಗೆ ಕೈ ಕಾಣಿಕೆಯನು ಕೊಟ್ಟು। ಚಾರು ಚರಣಕೆ ಬಾಗಿದಳು ॥ ೧೧೪ ॥

ವನಿತೆಯೋರ್ವಳು ಗೋರಟೆಯ ಹೂವುಗಳಿಂದ। ಮಿನುಗುವ ಡಾಬನ್ನು ರಚಿಸಿ ॥
ಇನಯನ ನಡುವಿಗೆ ಕೈಯಾರೆ ಮುಟ್ಟಿ ತಾ। ಮನದಕ್ಕರಿಂದಿಕ್ಕಿದಳು ॥ ೧೧೫ ॥

ವಾಮಲೋಚನೆಯೋರ್ವಳು ಕೆಂಜಾಜಿಯಿಂ। ಪ್ರೇಮದಿಂ ಕೈಯಂಬ ರಚಿಸಿ ॥
ಹೇಮಚಂಪಕಧಾಮ ಕೋಮಲಾಂಗಕೆ ಕಾಣ್ಕೆ। ನೇಮಿಸಿ ಕೈಯ ಮುಗಿದಳು ॥ ೧೧೬ ॥

ಪ್ರಮದೆಯೋರ್ವಳು ಮಾಧವಿ ಕುಸುಮಗಳಿಂದ। ಚಮರವ ರಚಿಸಿ ಸಂಪಗೆಯ ॥
ಸುಮನಸ ಕುಡ್ಮಲದಿಂ ಕಾವ ವಿರಚಿಸಿ। ರಮಣಗಿತ್ತಳು ಕಾಣಿಕೆಯ ॥ ೧೧೭ ॥

ವೃತ್ತಪಯೋಧರೆ ಮೊಲ್ಲೆಯ ಮುಗುಳಿಂದ। ಸತ್ತಿಗೆಯನು ಅನುಮಾಡಿ ॥
ಮತ್ತೆ ಬಂದುಗೆಯರಳಿಂದ ಕಾವನು ಗೈದು। ಚಿತ್ತೇಶಗಿತ್ತಳರ್ತಿಯೊಳು ॥ ೧೧೮ ॥

ಯುವತಿಯೋರ್ವಳು ಅದಿರ್ಗಂತಿಯ ಕುಸುಮದಿ। ನವ ನೂತನದ ಸುರಗಿಯ ॥
ತವಕದಿಂ ರಚಿಸಿ ಕಾಣಿಕೆಯಿತ್ತು ಪಣೆಯನು। ಭುವನೇಶನಡಿಗೆ ಚಾಚಿದಳು ॥ ೧೧೯ ॥

ತುಂಗಪಯೋಧರೆ ಪೊಸ ಕೈ ಮಾಟದಿಂ। ಹೊಂಗೇದಗೆಯೊಳು ರಚಿಸಿ ॥
ಕಂಗೊಳಿಸುವ ಜವದಾಡೆಯ ಮುಂದಿಕ್ಕಿ। ಸಿಂಗವಿಕ್ರಮಿಗೆ ಮಣಿದಳು ॥ ೧೨೦ ॥

ಇವು ಮೊದಲಾದ ಪುಷ್ಪಾಯುಧಾಭರಣವ। ಯುವತಿ ಮಣಿಗಳು ತಂದಿತ್ತು ॥
ತವಕದಿಂದರಸಗೆ ಸಿಂಗರವನು ಮಾಡಿ। ನವ ಮನ್ಮಥನಂತಿರ್ದ ॥ ೧೨೧ ॥

ನರನಾಥ ಚಂದ್ರಮ ನವ ಯೌವನೆಯರ। ಪುರುಷ ಭಕ್ತಿಗೆ ತಾನು ಮೆಚ್ಚಿ ॥
ತರತರದಿಂದವರಿಗೆ ತಕ್ಕ ಮೋಹನ। ಸರಸ ಸಲ್ಲಾಪವಾಡಿದನು ॥ ೧೨೨ ॥

ತರುಣಿಯರುಗಳ ಚಿತ್ತಾಂಬೋಧಿ ಹಿಮಕರ। ಸರಸ ಕಲಾಕೋವಿದನು ॥
ಗುರುಜನ ಪಾದೇಂದೀವರ ಮಧುಕರ। ಧರಣೀಶ ಜ್ಞಾನೇಂದೊಪ್ಪಿದನು ॥ ೧೨೩ ॥

**॥ ಅಂತು ಸಂಧಿ ೨೫ಕ್ಕಂ ಪದ ೩೪೫೯ಕ್ಕಂ ಮಂಗಲಂ ॥**

# ಜಲಕ್ರೀಡೆ.

ಲಲನಾರತ್ನ ಸಹಿತ ಜ್ಞಾನಚಂದ್ರಮ । ಜಲಕ್ರೀಡೆಯಾಡಿದುದುಸುರ್ವೆ ॥ ಪ ॥

ಪದಿನೆಂಟು ಸಾಸಿರ ಶೀಲವಿಭೂಷಿತ । ಮದದಂತಿ ಹರ್ಯ್ಯಕ್ಷಮುಕ್ತಿ ॥
ಸುದತಿಯ ಕುಚಕುಂಭ ಪಲ್ಲವ **ಶಾಂತೀಶ** ! । ಒದವಿಸೆಮಗೆ ಮೋಕ್ಷಪದವ ॥ ೧ ॥

ವನಕ್ರೀಡೆಯನಾಡಿ ಬಳಲಿದ ತನ್ನಯ । ಮನದನ್ನೆಯರ ಬೇಸರನು ॥
ಅನುಪಮ ಜಲಕ್ರೀಡೆಯೊಳು ಕಳೆವೆನೆಂದು । ಜಿನಚಂದ್ರ ಸುಕುಮಾರ ನೆನೆದು ॥ ೨ ॥

ಜಿನಸಿದ್ಧ ! ಶರಣೆಂದು ಓಲಗದಿಂದೆದ್ದು । ಮನುಜೇಂದ್ರ ತಿಳಿಗೊಳದತ್ತ ॥
ಮನದಕ್ಕರಿಂದಡಿಯಿಡುವಾಗ ನಯನಕ್ಕೆ । ವನಜಾಕರ ಕಾಣಿಸಿತು ॥ ೩ ॥

ಹರಿಯಿಂದಮೃತದಿಂದ ಪುಂಡರೀಕಗಳಿಂದ । ಮೆರೆವನಿಮಿಷತತಿಯಿಂದ ॥
ಅರಸಿನ ಕಣ್ಗೆ ಕಾಣಿಸಿತು ಪದ್ಮಾಕರ । ಸುರಲೋಕವೋ ಎಂಬಂತೆ ॥ ೪ ॥

ಮರಿಹಂಸೆಗಳಿಂದ ದ್ವಿಜ ಸಮಿತಿಗಳಿಂದ । ಪರಿ ಪರಿ ಪದ್ಮಗಳಿಂದ ॥
ನರನಾಥನ ಕಣ್ಗೆ ತೋರಿತು ಸರಸಿಯು । ತರಣಿಪಥವೋ ಎಂಬಂತೆ ॥ ೫ ॥

ಶಿವದಿಂದ ಶಿವದಿಂದ ಮಧುವಿಂದ ಮಧುವಿಂದ । ಕುವಲಯದಿಂ ಪರ್ಣದಿಂದ ॥
ಕುವರನ ಕಣ್ಗೆ ತಟಾಕ ತೋರಿದುದಾಗ । ನವ ನೂತನ ವನದಂತೆ ॥ ೬ ॥

ಇಂತು ರಾಜಿಪ ಕಮಲಾಕರದೆಡೆಗೆ ಭೂ- । ಕಾಂತ ಹಾವುಗೆಯನು ಮೆಟ್ಟಿ ॥
ಕಾಂತೆಯೋರ್ವಳು ಕೈಲಾಗವ ಕೊಡಲು ಸೀ- । ಮಂತಿನಿಯರ ಕೂಡಿಕೊಂಡು ॥ ೭ ॥

ವರ ಕೌರವೇಶ ಬರುವುದ ಕಂಡಾ ಕೊಳ । ಹರುಷವಿಂದಿದಿರು ಬಂದಾಗ ॥
ಹರಸಿ ಮರಾಳವಿಹಂಗಮ ಧ್ವನಿಯಿಂದ । ತೆರೆಯ ಸೀಕರ ಸೇಸೆಯಿಟ್ಟು ॥ ೮ ॥

ನೊರೆವಿಂಡೆಂಬ ದುಗುಲ ನಿವಾಳಿಯ- । ನರಸನ ಮುಂದೆ ಈಡಾಡಿ ॥
ತೆರೆಯ ನೀರಿಂದ ತೊಳೆದು ಕೇಸಡಿಗಳ । ಅರವಿಂದದಾರತಿ ಎತ್ತೆ ॥ ೯ ॥

ಆ ವೇಳೆಯೊಳು ಲತಾಂಗಿಯರೈತಂದು । ತೀವಿದ ಸಂತಸದಿಂದ ॥
ತಾವರೆಗೊಳದ ತಡಿಯೊಳು ನಿಂದಳ್ತಿಯಿಂ । ತಾವರೆಗೊಳನ ನೋಡಿದರು ॥ ೧೦ ॥

ಕೊಳವನಿಣಿಕಿ ನೋಡುವ ನೀರೆಯರಾಸ್ಯ । ಜಲದೊಳು ಮಾರ್ಪೊಳೆದಿಹುದು ॥
ವಿಲಸಿತ ಪುಷ್ಕರದೊಳು ತೊಳ ತೊಳಗುವ । ಜಳಜ ವೈರಿಗಳೋ ಎಂಬಂತೆ ॥ ೧೧ ॥

ಕಾಮಿನಿಯರ ಮುದ್ದು ಮೊಗವನುತ್ಪಲ ಕಂಡು । ಸೋಮಬಿಂಬವೆ ಎಂದು ನಲಿದು ॥
ಪ್ರೇಮದಿಂ ವಿಕಸಿತವಾಗಿಯಾಮೋದವ । ವ್ಯೋಮಕೆ ಬೀರುತಲಿಹುದು ॥ ೧೨ ॥

ತರುಣಿಯರುಗಳೆಡಗೈಲಿ ನಿರಿಯನಾಂತು । ಸರಸಿಯ ಪೊಗುವಂದವಿಹುದು ॥
ಸಿರಿದೇವಿ ಪಲವು ರೂಪಗಳಾಂತು ಕೊಳವನು । ಹರಿಸದಿಂ ಪೊಗುವಂದದೊಳು ॥ ೧೩ ॥

ಅನುಮತಿ ಮೊದಲಾದ ವಾಮಲೋಚನೆಯರು । ಮನದಕ್ಕರಿಂ ನೀರ ಪೊಗಲು ॥
ಸ್ತನಪರಿಯಂತರ ಜಲ ಬಂದು ಸೇರಲು । ವನಿತೇರುರೋಜಗಳಿಹವು ॥ ೧೪ ॥

ಜಲದ ಮೇಗಡೆಯೊಳು ಕೊಬ್ಬಿ ಬೆಳೆದು ತೋರ್ಪ । ಜಲಜ ಕುಡ್ಮಲಗಳೋ ಮೇಣು ॥
ನಲಿದಾಡುವ ಎಣೆವಕ್ಕಿಯ ಭ್ರಾಂತಿಯ । ಇಳೆಯಧಿಪಗೆ ಪುಟ್ಟಿಪವು ॥ ೧೫ ॥

ಯುವತಿಯೋರ್ವಳು ನಮ್ರ ನಯನ ಮುಖಂಗಳ್ಗೆ । ಕವಿಗಳು ಸರಿಯೆನ್ನಬಹುದೇ ॥
ಕವಿಗಳಲ್ಲವರು ಕಪಿಗಳೆಂದಬ್ಜವ । ತವಕದಿಂ ಕಿತ್ತೀಡಾಡಿದಳು ॥ ೧೬ ॥

ವಿರಹವಂಕುರಿಸಲು ಮದನಗೆ ಸಹವಾಗಿ । ಕೊರೆವವಂಬಾಗಿ ಬಂದಿಂದು ॥
ಉರುಕೋಪದಿಂ ಕೀಳಿಡುವರೋ ಎಂಬಂತೆ । ತರಳೆಯರ್ಕಿತ್ತರಂಬುಜವ ॥ ೧೭ ॥

ವನಿತೆಯೋರ್ವಳು ತಾವರೆ ಮೊಗ್ಗೆಗಳ ಕೊಯ್ದು । ಸ್ತನಕೆ ಸರಿಯ ನೋಡುತಿರಲು ॥
ಜನಪ ಕಾಣಲು ನಾಣ್ಚಿ ಮೊಗ್ಗೆಯನೀಡಾಡಿ । ವನಿತೆ ನೀರೊಳು ಮುಳುಗಿದಳು ॥ ೧೮ ॥

ಮುಳುಗುವ ಮೇಲಕೇಳುವ ತೇಂಕಾಡುವ । ಜಳವನೋರ್ವೋರ್ವರ ಮೇಲೆ ॥
ತುಳುಕುವ ಚೆಲ್ಲುವ ದುಡುಮು ಹುಯ್ದಾಡುವ । ಎಳೆವೆಣ್ಣ ತಂಡವೊಪ್ಪಿದುದು ॥ ೧೯ ॥

ಮೊಗೆ ಮೊಗೆದೋರ್ವೋರ್ವರ ಶಿರದೊಳು ಪೊಯ್ವ । ಬಿಗಿಲನೆ ಮೇಲಕೆ ನೆಗೆವ ॥
ಮುಗುಧೆಯರೊಬ್ಬೊಬ್ಬರ ತಬ್ಬಿ ಕೆಡಹುವ । ಉಗುಳವ ನೀರ ಮುಕ್ಕಳಿಪ ॥ ೨೦ ॥

ಚರಣಂಗಳ ಪಿಡಿದುಕೊಂಡೋರ್ವಳ । ಭರದಿ ನೀರೊಳಗಗುಳಿಸುತ ॥
ನೊರೆದು ಕೊಬ್ಬಿರಿದು ಭೋ ಎಂದು ನೀರ್ದುಳುಕುತ । ತರುಣಿಯರಾಡಿದರಾಗ ॥ ೨೧ ॥

ತರುಣಿಯೋರ್ವಳು ಮುಳುಗಿ ನೀರೊಳು ಬಂದು । ತರಳೆಯರರಿಯದಂದದೊಳು ॥
ಚರಣವ ಪಿಡಿದು ಕೆಡಹಲೋರ್ವಳು ಬೆರ್ಚಿ- । ಯರಸೀರುರಹಣಿಯಿಂ ನಗಲು ॥ ೨೨ ॥

ಗರುವೆಯೋರ್ವಳು ಜಲದೊಳು ಮುಳುಗೇಳುವ । ಪರಿಯೊಪ್ಪಿದುದು ನೋಳ್ಪರಿಗೆ ॥
ಸುರರು ಕಡೆಯಲಿಂಗಡಲಿಂದ ಮೇಲೇಳ್ವ । ಸಿರಿವೆಣ್ಣೊ ಎಂಬ ಮಾಳ್ಕೆಯೊಳು ॥ ೨೩ ॥

ಗರುವೆಯೋರ್ವಳು ಜಲದೊಳಗೀಸಾಡಲು । ಪೊರವಾರು ಮೇಲೆ ರಾಜಿಪವು ॥
ಶರಧಿಯ ಮೇಲೆಯುತ್ತುಂಗದಿಂ ತೋರುವ । ಗಿರಿಯುಗಲಗಳೋ ಎಂಬಂತೆ ॥ ೨೪ ॥

ಲಲನೆಯೋರ್ವಳು ಈಸಾಡುವಾಗಬಲೆಯ । ನೆಲೆ ಮೊಲೆಗಳು ರಾಜಿಸಿದವು ॥
ಕಲಧೌತಗುಂಡಿಗೆಯುಗಲವೆದೆಯೊಳಿಟ್ಟು । ಕಲಿವಳೋ ಈಸನೆಂಬಂತೆ ॥ ೨೫ ॥

ಇಂತು ನೀರಾಟವನಾಡುವಂಗನೆಯರ । ಸಂತೋಷವನಾ ರಾಯ ॥
ಸ್ವಾಂತದೊಳಗೆಯೊಂದ ನೆನೆದು ಪಟ್ಟದ ಸೀ- । ಮಂತಿನಿಯನು ತಾನು ಕರೆಸಿ ॥ ೨೬ ॥

ಎಲ್ಲರು ನಡೆತಂದು ರಾಯನ ತಮ್ಮಯು । ಚಲ್ಲೆಗಂಗಳ ಕೊನೆಯಿಂದ ॥
ಉಲ್ಲಾಸದಿಂ ನೋಡುತ ಮುಗುಳ್ನಗೆಯಿಂದ । ಚೆಲ್ಲಗಾತಿಯರು ನಿಂದಿರಲು ॥ ೨೭ ॥

ಇರಲಾಗನುಮತಿದೇವಿಯ ಮೊಗ ನೋಡಿ । ಒರೆದನೆಲೆ ಸ್ತ್ರೀರತ್ನ ! ॥
ಪರಿಕಿಸಬೇಕು ಭೂಚರಿ ಖೇಚರಿಯರ । ನೆರೆ ಜಾಣ್ಮೆಯ ನೀನೀಗ ॥ ೨೮ ॥

ಕನಕಮಾಲೆಯ ರತ್ನಮಾಲೆಯ ಗುಣಮಾಲೆ । ವನಮಾಲೆ ಜ್ಯೋತಿರ್ಮಾಲೆಯನು ॥
ಮಿನುಗುವ ವಿದ್ಯುನ್ಮಾಲೆ ಮದನಮಾಲೆ । ಘನ ಹೇಮಮಾಲೆ ಮುಂತಾದ ॥ ೨೯ ॥

ಏಳು ಸಾಸಿರ ವಿದ್ಯಾಧರಿಯರ ನೆಲೆ । ಬಾಲಾಮಣಿಯೆ ! ನಿನ್ನ ಪಕ್ಷ ॥
ಲೋಲಾಕ್ಷಿ ಸಿಂಧುದೇವಿಯನು ಕರೆದು ಭೂ- । ಪಾಲನಿಂತೆಂದು ನುಡಿದನು ॥ ೩೦ ॥

ಕಾಮಲತೆಯ ಕುಂದಲತೆಯ ಕನಕಲತೆ । ಹೇಮಲತೆಯು ಪದ್ಮಲತೆಯು ॥
ಸೋಮಲತೆಯು ಸೊನ್ನಾರದ ಲತೆಯನು । ರಾಮಲತೆಯ ವಿದ್ಯುಲ್ಲತೆಯ ॥ ೩೧ ॥

ಮದನಾವಳಿ ರತ್ನಾವಳಿ ರುಗ್ಮಿಣಿ । ಮದನಮಂಜೂಷೆ ಸುಭದ್ರೆ ॥
ಸುದತಿ ಲಕ್ಷ್ಮೀಮತಿ ಸರಸ್ವತಿ ರೋಹಿಣಿ । ಮದವತ್ಯನಂಗ ಪತಾಕೆ ॥ ೩೨ ॥

ಇವರಾದಿಯಾಗೆಂಟು ಸಾಸಿರ ಭೂಚರ । ಯುವತಿಯರನು ಕೂಡಿಕೊಂಡು ॥
ತವಕದಿಂ ನಿಮ್ಮೊಳಗೋರೋರ್ವರ ಈಗ । ನವ ನೂತನ ಚೀರ್ಕೊಳವೆಯ ॥ ೩೩ ॥

ಪಿಡಿದು ಜಲವನಿಟ್ಟಾಡುವದೆಂತೆನೆ । ಬೆಡಗುಗಾತಿಯರು ಭೂವರನ ॥
ಕಡೆಗಣ್ಣ ಕೊನೆಯಿಂದ ನೋಡುತ ತಮ್ಮೊಳು । ನುಡಿದಾಡಿದರಿಂತೆಂದು ॥ ೩೪ ॥

ಅಕ್ಕಾಜಿ ! ನೀ ನೋಡುತಾ ನೋಡು ತಂಗೀರ । ಗಕ್ಕನೆ ನೀವೆಲ್ಲ ಕೇಳಿ ॥
ಕಕ್ಕಸವನು ನಮ್ಮೊಳಗಿಕ್ಕಿ ಭೂವರ- । ನಕ್ಕರಿಂ ಕುಳಿತುಕೊಂಡೀಗ ॥ ೩೫ ॥

ಜಗಳವ ನೋಡಬೇಕೆಂದು ಯೋಚಿಸಿಕೊಂಡ । ಬಗೆಯ ಕಂಡಿರೆ ಎಂದೆನಲು ॥
ಮುಗುಳುನಗೆಯ ನಗುತ ಅನುಮತಿದೇವಿ । ಜಗಧೀಶನರ್ತಿಯ ನಾವು ॥ ೩೬ ॥

ಸಲಿಸುವ ಏಳೆಲೆ ತಂಗಿ ! ಎಂದೆನುತಾಗ । ಲಲನೆಯರೆರಡು ಫೌಜಾಗಿ ॥
ಬಲು ಮೋಹನಗಾಳವನೆಸಗಿದರು । ಸಲೆ ಮೆಚ್ಚುವಂದದೊಳರಸ ॥ ೩೭ ॥

ಅರಗಿಳಿಗಳ ಪೊಲು ಮುದ್ದಾದ ನುಡಿಗಳು । ಪರಪುಟ್ಟನಂತೆ ಸುಸ್ವರವು ॥
ಎರಡು ಫೌಜುಗಳೊಳು ಮಧುರ ನುಣ್ನುಡಿಗಳು । ದೊರೆಯ ಚಿತ್ತವನು ಸೋಲಿಪವು ॥

ಅಕ್ಕಾಜಿ ! ತಪ್ಪಿಸಿಕೊಳ್ಳಿ ನೀವೆಂದಾಗ । ಚೊಕ್ಕ ಮಲ್ಲಿಗೆ ಚೆಂಡಿನಿಂದ ॥
ಗಕ್ಕನೆ ರತ್ನಾಕರಿಯನುಮತಿಯ- । ನಕ್ಕರಿಂದಿಟ್ಟಳೆದೆಯೊಳು ॥ ೩೯ ॥

ಕರಿಯಗೋರಟೆಯ ಪೂಚೆಂಡಿನಿಂದನುಮತಿ । ಶರಧಿದೇವಿಯ ಮುಖಕಿಡಲು ॥
ಪರಿಪೂರ್ಣಚಂದ್ರನ ನುಂಗಲು ಬರುತಿರ್ಪ । ಉರಗನೋ ಎಂಬಂತಿಹುದು ॥ ೪೦ ॥

ಕನಕಲತೆಯು ಕೆಂಡಸಂಪಗೆ ಚೆಂಡಿಂದ । ಅನುಮತಿದೇವಿಯನಿಡಲು ॥
ನನಗೇಕೆ ವೈರ ದೇವಿಯು ಕೂಡೆ ಎಂದದು । ಬಿನದದಿ ಕೊರಳ ಸುತ್ತಿದುದು ॥ ೪೧ ॥

ಮದನಮಂಜೂಷೆ ಜ್ಯೋತಿರ್ಮಾಲೆಯು ಪೊಚ್ಚ । ಮದಯಂತಿ ಚೆಂಡಿನಿಂದಿಡಲು ॥
ಪದಯುಗಲವ ಸುತ್ತೆ ನಿಗಳಿಕ್ಕಲೊಪ್ಪುವ । ಮದದಂತಿಯಂತೊಪ್ಪಿದಳು ॥ ೪೨ ॥

ಪೊಸ ಜಾಜಿಯ ಚೆಂಡಿನಿಂ ಕಾಮಲತೆಯನು । ಶಶಿಕಾಂತಾದೇವಿ ಇಡಲು ॥
ಅಸಿಯ ನಡುವಿನ ಸುತ್ತಲು ಆಣಿಮುತ್ತಿನ । ರಸವಿಟ್ಟಂತೆ ರಾಜಿಸಿತು ॥ ೪೩ ॥

ಹರಿಹರಿದಾಡುತಲಿಡುವ ಕೋಮಲೆಯರ । ಕರದ ಕಂಕಣ ಝಣರೆನಲು ॥
ಪೊರವಾರಕಾಂಚಿಯು ಕಿರುಘಂಟೆ ಮರಿಗೆಜ್ಜೆ । ಚರಣದಂದುಗೆ ಗಲರೆನಲು ॥ ೪೪ ॥

ತನುಗಂಧಕೆಯುವರಿಟ್ಟಾಡುವ ಪೂವಿ- । ನನುಪಮ ಗಂಧಕೆ ತುಂಬಿ ॥
ಇನಪಥದೊಳು ಝೇಂಕರಿಸುತ ಕಾರ್ಗಾಲ । ಘನ ದೊಡ್ಡಣದಂತಿಹುದು ॥ ೪೫ ॥

ಎರಡು ಪಕ್ಕದ ನಾರಿಯುರಿಟ್ಟಾಡುವ । ವರುಣ ಶುಭ್ರದ ಚೆಂಡಂಬರದಿ ॥
ಭರದಿಂದ ತಾಟಿಯಾಡಿದವಿನ ಶಶಿಗಳು । ಸೆರೆ ಹೋರುವಂತೆ ತಮ್ಮೊಳಗೆ ॥ ೪೬ ॥

ಸಿಂಧುದೇವಿಯು ಅಕ್ಕನ ಜಡೆವಿಡಿದಾಗ । ಗಂಧವುಡಿಯ ಮಸ್ತಕದೊಳು ॥
ಮಂದಸ್ಮಿತದಿ ಸುರಿಯಲೀಶನಪ್ಪಿದ । ಸೌಂದರಿ ಗಿರಿಜೆಯೊಲಿಹಳು ॥ ೪೭ ॥

ಅನುಮತಿ ಪೊನ್ನಂಡೆಯೊಳು ಕತ್ತುರಿರಸ । ವನಧಿದೇವಿಯ ಮುಖಕಿಡಲು ॥
ಮಿನುಗಿತು ಚಂದ್ರನ ಮರೆಗೊಂಡ ಕಾರ್ಗಾಲ । ಘನ ಮೇಘವೊ ಎಂಬಂತೆ ॥ ೪೮ ॥

ಮಲಯಜ ಪುಣುಗು ಜವಾದಿ ಕುಂಕುಮವಾದಿ । ವಿಲಸಿತ ಗಂಧಗಳಿಂದ ॥
ಲಲನಾಮಣಿಗಳೋರ್ವೋರ್ವರು ತಮ್ಮೊಳು । ಗೆಲವಿಂದ ಚೆಲ್ಲಿಯಾಡಿದರು ॥ ೪೯ ॥

ಇವು ಮೊದಲಾದ ವಿನೋದವ ಕೆಲವೊತ್ತು । ಯುವತಿಯರಾಡಿ ಸಂತಸದಿ ॥
ತವಕದಿಂ ಕೀರದ ಹಂಸಚಕೋರದ । ನವಿಲ ಮಾಟದ ಪರಭೃತದ ॥ ೫೦ ॥

ಕನಕದ ಪಚ್ಚೆಯು ನೀಲದ ಹೀರದ । ಮಿನುಗುವ ಪುಷ್ಯ ಮೌಕ್ತಿಕದ ॥
ಘನವಾದ ಮಾಟದ ನೀರ್ಕೊಳವೆಗಳನು । ವನಿತೆಯರುಗಳಾಂತು ಕರದಿ ॥ ೫೧ ॥

ಕನಕಾರ್ಜುನ ನವರತ್ನ ಖಚಿತವಾದ । ಅನುಪಮ ಕೊಪ್ಪರಿಗೆಯೊಳು ॥
ಘನಸಾರ ಮಿಶ್ರಿತ ಕುಂಕುಮ ಕಸ್ತೂರಿ । ವನಗಳು ತುಂಬಿರುತಿರಲು ॥ ೫೨ ॥

ಭರದಿಂದಲೋರ್ವೋರ್ವರ ಮೇಲೆ ಕುಂಕುಮ । ರಸವ ನೀರ್ಕೊಳವೆಯಿಂ ತೆಗೆದು ॥
ತರುಣಿಯರುಗಳಿಟ್ಟಾಡಿದ ಚಾಸ್ಮೆಯು । ಪರಿಯ ಬಣ್ಣಿಸಲು ಬಂದಪುದೇ ॥ ೫೩ ॥

ಗರುವೆಯೋರ್ವಳು ಘಟವನು ನೀರೊಳ್ಮುಳುಗಿಪ । ತೆರನೊಪ್ಪುತಿರ್ಪುದು ತನ್ನ ॥
ಗುರುಕುಚಕೆಣೆಯೆ ಇದೆಂದು ಹುಡುಕು ನೀರ । ಭರದಿ ಮೆಟ್ಟುವಳೆನಲಿಹುದು ॥ ೫೪ ॥

ತರುಣಿಯೋರ್ವಳು ಕುಂಭದೊಳು ಜಲವನು ತುಂಬಿ । ಕರದಿ ಯುದ್ಧಕೆ ಎತ್ತಲಿಹುದು ॥
ದೊರೆಯಲ್ಲವೆ ಇದೆನ್ನ ಕುಚಕೆಯೆಂ- । ದರಸಗೆ ತೋರುವಂದದೊಳು ॥ ೫೫ ॥

ಮಡನಿಯೋರ್ವಳು ಜೀರ್ಕೊಳವೆಯಿಂದುದಕವ । ಬಿಡದೆ ಸೇದುವ ಭಾವನಿಹುದು ॥
ಪಿಡಿ ಶುಂಡಾಲದಿ ಜಲವನೀಂಟುತಲಿರ್ಪ । ಬೆಡಗನು ಅನುಕರಿಪಂತೆ ॥ ೫೬ ॥

ಸುದತಿಯೋರ್ವಳು ಜೀರ್ಕೊಳವೆಗಂಬುವ ತುಂಬಿ । ಎದೆಗಿಟ್ಟೊತ್ತುವ ನೀರಿಹುದು ॥
ಪದಪಿಂದ ರೋಮಲತಿಕೆಯಿಂದುದುರುವ । ಮುದಯಂತಿ ಕುಸುಮವೆಂಬಂತೆ ॥ ೫೭ ॥

ಕೋಮಲೆಯೋರ್ವಳು ಜೀರ್ಕೊಳವೆಯ ನೀರ । ವ್ಯೋಮಕೆಡಲು ಒಪ್ಪಿದುದು ॥
ವ್ಯೋಮಕೇಶನ ಮಸ್ತಕವೇರಿದ ಗಂಗಾ । ಭಾಮಿನಿಯಿಡುವಳೆಂಬಂತೆ ॥ ೫೮ ॥

ಕಡೆಗಂಗಳ ಕಾಂತಿ ಕುಡಿ ಮಿಂಚುಗಳಾಗೆ । ತೊಡವೆ ಶಕ್ರನ ಧನುವಾಗೆ ॥
ಕಡು ದೊಡ್ಡ ತುರುಬಾಗೆ ಮುಗಿಲೊಡ್ಡಣಗಳು । ಕಡಗಡುಲುಹು ಗುಡುಗಾಗೆ ॥ ೫೯ ॥

ಮಡದಿರನ್ನಗಳು ಕರದೊಳಾಂತು ಬೆಳಗುವ । ಕಡೆಯಾಣಿಯ ಜೀರ್ಕೊಳವೆಗಳು ॥
ತಡೆಯದೆ ಕೊರತಾಗೆ ಜೀರ್ಕೊಳವೆಯ ನೀರು । ಕಡು ದೊಡ್ಡ ಮಳೆಯಂತಿಹುದು ॥ ೬೦ ॥

ಅನುಮತಿದೇವಿ ರತ್ನಾಕರಿ ಮೊಗದೊಳು । ಬಿನದದಿಂ ಜೀರ್ಕೊಳವೆಯೊಳು ॥
ಮಿನುಗುವ ಜಲವ ಪುಂಜಾನುಪುಂಜಿಯೊಳಿಡೆ । ಘನವಾಗಿ ಮೊಗವಡ್ಡ ತಿರುಗೆ ॥ ೬೧ ॥

ನಂದವತಿಯ ಮೇಲೆ ಅನುಮತಿದೇವಿಯು । ಬಿಂದಿಗೆ ಕುಂಕುಮ ರಸವ ॥
ಬಂದೆತ್ತಿ ಸುರಿಯಲು ವನಿತಾಮಣಿಗಳ । ಗೊಂದಣ ಮೆರೆಗೊಂಡಳವಳು ॥ ೬೨ ॥

ಮಲಯಜಗಂಧವ ಜಿನಮತಿ ಮೊಗದೊಳು । ಚೆಲುವ ಜೀರ್ಕೊಳವೆಯನೆತ್ತಿ ॥
ನಲವಿಂದನುಮತಿದೇವಿಯಿಡಲು ಓಡಿ । ಕೊಳನ ಪೊಕ್ಕಳು ಸಿಗ್ಗಿನಿಂದ ॥ ೬೩ ॥

ಮದನಮಂಜೂಷೆಯ ಶಿರದೊಳಗನುಮತಿ । ಮುದದಿಂದ ಕರಗವನೆತ್ತಿ ॥
ಕದಡಿದ ಪರಿಮಳ ಜಲವನು ಸುರಿಯಲು । ಬೆದರಿಯೋಡಿದಳೊಂದುದೆಸೆಗೆ ॥ ೬೪ ॥

ಕತ್ತುರಿ ಜಲವನು ಸ್ವರ್ಣಕುಂಭದಿ ತುಂಬಿ । ವೃತ್ತ ರತ್ನಾಕರಿ ಬಂದು ॥
ಚಿತ್ತರದಿಂದನುಮತಿಯ ಮಸ್ತಕದೊಳ- । ಗೆತ್ತಿ ಸುರಿದಳು ಭೋ ಎಂದು ॥ ೬೫ ॥

ಕನಕಲತೆಯು ಜೀರ್ಕೊಳವೆಲಿ ಕುಂಕುಮ- । ದನುಪಮ ರಸವನು ತುಂಬಿ ॥
ಅನುಮತಿದೇವಿಯ ಮೊಗದ ಮೇಲಿಡಲದು । ಕನಕ ರಸದ ಪೊಲಿಳಿದುದು ॥ ೬೬ ॥

ಗಗನೇಚರಿಯರೆಲ್ಲರು ಭೂಚರಿಯರ । ಸೊಗಸಿಂದ ಜೀರ್ಕೊಳವೆಯೊಳು ॥
ತೆಗೆದು ನೀರಿಡುತ ಭೋ ಎಂದಾಲುತಲಾಗ । ತೆಗಿ ಬಿಗಿಯಿಂ ಬೆನ್ನ ಮಾಡೆ ॥ ೬೭ ॥

ಧರಣೀಚರಿಯರು ವಿದ್ಯಾಧರಿಯರ । ವರ ಸ್ವರ್ಣಕುಂಭದ ಜಲವ ॥
ಶಿರದೊಳು ಭೋ ಎಂದಾಲುತ ಸುರಿವುತ । ಇರದೆ ಬೆನ್ನನು ಮಾಡಿದರು ॥ ೬೮ ॥

ಓರ್ವಳ ಮೊಗವೊಳಗೋರ್ವಳು ಜಲವನು । ಪರ್ವಿದ ಪ್ರೀತಿಯಿಂದಿಡುತ ॥
ಈರ್ವಲ ಕಲಸಿ ಜಿರ್ಕೊಳವೆಯೊಳಿಟ್ಟಾಡಿ । ಊರ್ವೀಶಗಳ್ತಿದೋರಿದರು ॥ ೬೯ ॥

ಶರಧಿದೇವಿಯು ಬಂದಸುಮತಿ ಕಿವಿಯೊಳು । ಸ್ವರದೋರದಳಿಂತೆಂದು ॥
ದೊರೆರನ್ನನ ತಂದು ಕೊಳದೊಳು ಮುಳುಗಿಪ । ತೆರನೆಂತುಟಕ್ಕಾಜಿ ! ಎನಲು ॥ ೭೦ ॥

ದರಹಸಿತಾನನದಿಂದನುಮತಿದೇವಿ । ಶರಧಿದೇವಿಗೆ ಕಣ್ಣೊತ್ತೆ ॥
ನೆರೆದಿರ್ದ ಲಲನೆಯರಿಗೆ ರತ್ನಾಕರೆ । ಕರಸನ್ನೆಯನು ಮಾಡಿದಳು ॥ ೭೧ ॥

ತರುಣಿಯರಾಗ ಕೊಬ್ಬಿರಿದು ಕೂಗುತ ಬಂದು । ನರನಾಥನ ಸುತ್ತ ಮುತ್ತಿ ॥
ಸುರಿದರು ಕುಂಭದೊಳಿರ್ದ ಕುಂಕುಮವ । ಪರಿಮಳ ರಸವ ಶಿರದೊಳು ॥ ೭೨ ॥

ಮಿಸುಗುವ ನಗೆವೆರಸಿ ತಾನ್ಯೆತಂ- । ದನುಮತಿದೇವಿ ಲೀಲೆಯೊಳು ॥
ಜನಪನ ತಬ್ಬಿ ಪಿಡಿದು ತಂಗಿಯರಿಗೆ । ಕೊನೆಗಣ್ಣ ಸನ್ನೆದೋರಿದಳು ॥ ೭೩ ॥

ಕರ ಚರಣವ ತೊಡೆ ತೋಳು ನಡುಗಳನು । ತರಳಾಕ್ಷಿಯರ್ಸುತ್ತಿಕೊಂಡು ॥
ನರನಾಥನ ನೆಗಪ್ಪಿ ಗೊಬ್ಬಿರಿವುತ । ಭರದಿ ತಂಗೊಳದೊಳಗಿರ್ದ ॥ ೭೪ ॥

ಪರಿಮಳಮಯವಾದ ಕುಂಕುಮರಸದೊಳ- । ಗರಸನ ಮುಳುಗಿಸಿ ಮುದದಿ ॥
ಗುರುಕುಚೆಯರು ಜೀರ್ಕೊಳವೆಯ ರಸವನಾ- । ಗರಸನ ಮೇಲೆ ಚೆಲ್ಲಿದರು ॥ ೭೫ ॥

ವನಿತೆಯೋರ್ವಳು ವಿನಯನ ಮಸ್ತಕದೊಳು । ಪನಿನೀರನೆರೆಯಲೊಪ್ಪಿದುದು ॥
ಮಿಸುಗುವ ಗಂಗಾನದಿ ವಜ್ರಗಿರಿಯೊಳು । ವನವ ಸುರಿವ ರೀತಿಯಾಯ್ತು ॥ ೭೬ ॥

ಅನುಮತಿದೇವಿ ಕತ್ತುರಿಯ ಜಲವ ತೆಗೆ- । ದಿನಿಯನ ಮೇಲಿಡಲಿಹುದು ॥
ಕನಕಾಚಲವ ಮುತ್ತಿದ ಕಾರ್ಗಾಲದ । ಘನ ಸಂತಾನವೆಂಬಂತೆ ॥ ೭೭ ॥

ಜನಪ ತಾನಾಗ ಮುತ್ತಿನ ಜೀರ್ಕೊಳವೆಯ । ಮನದನುರಾಗದಿಂ ಪಿಡಿದು ॥
ವನಿತೆಯರುಗಳ ಲಪನದೊಳು ಪನಿನೀರ । ಘನವಾಗಿ ಸುರಿದ ಗಾಡಿಯೊಳು ॥ ೭೮ ॥

ಅರಸನೋರ್ವಳ ಮೇಲೆ ರಕ್ತಚಂದನವ । ಸುರಸವ ಚೆಲ್ಲೆ ರಾಜಿಪುದು ॥
ಮೆರೆವ ಸಂಧ್ಯಾರಾಗವೆ ಸ್ತ್ರೀ ರೂಪನು । ಧರಿಸಿತೋ ಎನಲೊಪ್ಪಿದಳು ॥ ೭೯ ॥

ಜನಪತಿ ಕತ್ತುರಿ ಜಲವ ಜೀರ್ಕೊಳವೆಯಿಂ- । ದನುಮತಿ ಮೊಗದೊಳು ಸೂಸೆ ॥
ಮಿಸುಗುತಿಹುದು ಕಲಂಕವ ತಾಳಿದ । ವಸಧಿಯ ಸುತನಂದದೊಳು ॥ ೮೦ ॥

ನರನಾಥ ಮೃಗಮದ ಜಲದಿಂದ ರತ್ನಾ- । ಕರೆಯ ಲಪನಕಿಡಲಿಹುದು ॥
ಮಿರುಗುವ ಜಂಬಾಲದೊಳು ಮುಳುಗಿರುತಿರ್ಪ । ಅರುಣದಾವರೆಯೋ ಎಂಬಂತೆ ॥ ೮೧ ॥

ಬೆಡಗ ಬೀರುತ ನಲ್ಲನ ಹಿಂದೆ ನಡೆತಂದು । ಕಡೆಯಾಣಿ ಕುಂಭನನೆತ್ತಿ ॥
ಪೊಡವೀಶನ ಮಸ್ತಕದೊಳು ಸುರಿದಳು । ಬಡನಡುವಿನ ಕಾಮಲತೆಯು ॥ ೮೨ ॥

ಕನಕಲತೆಯ ಮೇಲೆ ಕುಂಕುಮ ರಸವನು । ಜನಪ ಚೆಲ್ಲಲು ಒಪ್ಪಿದುದು ॥
ತೊನೆದಾಡುವ ಕೆಮ್ಮುಗಿಲೊಳು ತೋರುವ । ಅನುಪಮದೆಳೆ ಮಿಂಚಿನಂತೆ ॥ ೮೩ ॥

ಮೆಲ್ಲನೆ ಮರೆಯಿಸಿಕೊಂಡು ಜೀರ್ಕೊಳವೆಯ । ಫುಲ್ಲಲೋಚನೆ ಸಂದಮತಿಯು ॥
ಚೆಲ್ಲಿದಳರಸನು ಕಣ್ಮುಚ್ಚುವಂದದಿ । ನಿಲ್ಲದೆ ಕುಂಕುಮ ರಸವ ॥ ೮೪ ॥

ಜನಪ ಕತ್ತೂರಿಯ ಜಲವ ನಂದವತಿದೇವಿ । ಸ್ತನದ ಮೇಲೆಸೆಯಲೊಪ್ಪಿದುದು ॥
ವನಜ ಕುಡ್ಮಲದುಪರಿಮದೊಳು ಮುಸುಕಿರ್ಪ । ಜಿನುಗುವ ತುಂಬಿಗಳಂತೆ ॥ ೮೫ ॥

ಮೆಲ್ಲಮೆಲ್ಲನೆ ಕನಕಲತೆ ನಡೆತಂದು । ನಲ್ಲನ ಬೆನ್ನಮೇಲಾಗ ॥
ನಿಲ್ಲದೆ ಚೆಚ್ಚುವಂದದಿ ಮೇಘಪುಷ್ಪವ । ಚೆಲ್ವ ಜೀರ್ಕೊಳವೆಯೊಳೆಸೆಯೆ ॥ ೮೬ ॥

ಕಾಮಲತೆಯ ಸ್ತನದೊಳು ಕುಂಕುಮನೀರ । ಹೇಮಾಂಗವಿಡಲೊಪ್ಪಿದುದು ॥
ವ್ಯೋಮದೊಳಗೆ ಕೆಮ್ಮುಗಿಲು ಮುಸುಕಿ ತೋರ್ಪ । ಹೇಮಾಚಲಯುಗದಂತೆ ॥ ೮೭ ॥

ಅರಸ ಸುಭದ್ರೆಯ ಮೇಲೆ ಕರಗವೆತ್ತಿ । ಸುರಿವ ನೀರಿಹುದಿಂದಿರೆಯ ॥
ಶಿರದಲ್ಲಿ ಶುಂಡಿಲೊಳಗೆ ತುಂಬಿ ವನಕರಿ । ಸುರಿವ ನೀರ್ಧಾರೆಯಂತಾಯ್ತು ॥ ೮೮ ॥

ಜನಪ ನೀಲಾಂಜನೆ ಮೇಲೆ ಕುಂಕುಮನೀರ । ಘನವಾಗಿಡಲೊಪ್ಪಿದುದು ॥
ವನರುಹ ಕಿಂಜಲ್ಕದ ಧೂಳು ಮುಸುಕಿದ । ಮಿನುಗುವ ಪೆಣ್ಬುಂಬಿಯಂತೆ ॥ ೮೯ ॥

ರತಿದೇವಿಯು ಜೀರ್ಕೊಳವೆ ಕರದೊಳಾಂತು । ನರನಾಥನಿಡುವಾಗಲಿಹಳು ॥
ಭರದಿ ತ್ರಿಪುರವೊಕ್ಕ ಹರಿಯ ನೆಸವುತಿರ್ದ । ವರ ತ್ರಿಪುರಾಂಗನೆಯಂತೆ ॥ ೯೦ ॥

ಜಲದೊಳು ನೆನೆದ ಸೀರೆಯನುಟ್ಟು ನಡೆತಿರ್ಪ । ಲಲನೆಯೊಪ್ಪಿದಳು ಶೃಂಖಲವ ॥
ಫಳಿಲನೆ ಧರಿಸಿ ಮೆಲ್ಲನೆ ನಡೆತರುತಿರ್ದ । ಚೆಲುವಾದ ಕರಿಣಿಯೆಂಬಂತೆ ॥ ೯೧ ॥

ಅರಸನ ಮೇಲೆ ಜೀರ್ಕೊಳವೆಯ ಉದಕವ । ಎರಕದಿಂದಿಡುವೆನೆಂದೆನುತ ॥
ತುರಿಹದಿ ಬರುವಾಗ ಜಾರಿ ತಾನರಸನ । ಚರಣದೊತ್ತಿಲಿ ಬೀಳಲೆಲ್ಲ ॥ ೯೨ ॥

ಅರಸಿಯರುಗಳು ಕೈ ಹುಯ್ದಾಡಿ ನಗಲಾಗ । ಶಿರಬಾಗಿ ನಾಣ್ಚಿ ಮೌನದೊಳು ॥
ಅರಸನ ನೋಡಲಮ್ಮದೆ ತಿಳಗೊಳನನು । ಹರಿಣಾಕ್ಷಿ ಪೊಕ್ಕಡಗಿದಳು ॥ ೯೩ ॥

ತರುಣಿಯೋರ್ವಳ ರವಕೆಯು ನೆನೆದದರೊಳು । ಗುರುಕುಚಗಳು ಕಾಣಿಸಿದವು ॥
ವರ ಮಂಜಿನ ಪುಂಜದೊಳು ಕಾಣಿಸುತಿರ್ಪ । ಸುರಗಿರಿಯೆರಡೋ ಎಂಬಂತೆ ॥ ೯೪ ॥

ಗರುವೆಯೋರ್ವಳ ಕಾಗಿನ ಸೀರೆ ನೆನೆಯಲು । ಮಿರುತೊಪ್ಪಿದಳವಳಂಗ ॥
ಕರಿಯ ಮೇಘವು ಬಳಸಿರ್ದೆಳೆಮಿಂಚಿನ । ದೊರೆಯೆನಲಿಹುದೇನೆಂಬೆ ॥ ೯೫ ॥

ವರ ವಸ್ತ್ರ ನೆನೆದು ಜವಳಿ ನಿತಂಬದೊಳಗೆ । ಭರದಿ ಪತ್ತಿರಲೋರ್ವಂಗನೆಯ ॥
ಶರಧಿಯೊಳಗೆ ತೋರ್ಪ ಬಲು ದೊಡ್ಡ ಗಿರಿಗಳಾ- । ವರಿಸಿದ ತೆರೆಗಳೆಂಬಂತೆ ॥ ೯೬ ॥

ಇನಿಯನ ಮೈಯೊಳು ಗಂಧವುಡಿಯನಾ- । ಗನುಮತಿ ಚೆಲ್ಲಲೊಪ್ಪಿದನು ॥
ಮಿನುಗು ವಿಭೂತಿಯ ಧರಿಸಿ ರಾರಾಜಿಪ । ಮನಸಿಜವೈರಿಯಂದದೊಳು ॥ ೯೭ ॥

ಭೂತಳೇಶ್ವರ ಸಿಂಧುದೇವಿಯ ಮೈಯೊಳು । ತಾ ತಳಿಯಲು ಗಂಧವುಡಿಯು ॥
ಶಾತೋದರಿ ಮೆರೆದಳು ಧೂಳಿ ಮುಸುಕಿದ । ಕೇತಕಿ ಮೊಗ್ಗೆಯಂದದೊಳು ॥ ೯೮ ॥

ಇಂತಪ್ಪ ನಾನಾ ವಿನೋದವ ರಾಜೇಂದ್ರ । ಕಾಂತಾಜನದೊಳಗಾಡಿ ॥
ಸಂತೋಷವ ಸರ್ವಕಾಮಿನೀನಿಕರಕೆ । ತಾಂ ತಳುವದೆ ಪುಟ್ಟಿಸಿದ ॥ ೯೯ ॥

ಸರಸಿಯಿಂ ರಾಯ ಪೊರಟು ಬರೆ ಪಿತನೆ । ಅರಸಿಯರ್ಬರುವಂದವಿಹುದು ॥
ವರ ರಾಜಹಂಸನ ಬಳಸಿ ಬರುತಲಿರ್ದ । ತರುಣ ಹಂಸೀಗಣದಂತೆ ॥ ೧೦೦ ॥

ತರುಣೀಜನಂಗಳು ಜಲಕೇಳಿಯ ತೀರ್ಚಿ । ಸರಸಿಯಿಂ ಪೊರಮಟ್ಟು ಬರ್ಪ ॥
ವರ ಭಾವಮಿಹುದಿಂದಿರೆ ರೂಪ ಪಲವಾಂತು । ಶರಧಿಯಿಂ ಪೊರಮಡುವಂತೆ ॥ ೧೦೧ ॥

ಗುರುಕುಚೆಯರು ಸ್ತನದುಪರಿಮದೊಳು ತಮ್ಮ । ಕರವಿಟ್ಟು ಬರುವಂದವಿಹುದು ॥
ಸ್ಮರನ ಮುಡುವೆಯೊಳೈರಣೆಯ ಮೇಲಿಕ್ಕಿದ । ತರುಣ ಪಲ್ಲವಗಳೆಂಬಂತೆ ॥ ೧೦೨ ॥

ತರುಣಿಯರ ಕಚಗಳು ನೆನೆದು ಹಿಮ್ಮಡಿ ಮೇ- । ಲಿರಲು ಬರುವ ಭಾವಮಿಹುದು ॥
ಬರಿಹಿ ನೀರುಂಡು ಮುಗುಳ್ವಾಗ ನೆನೆದಿರ್ದ । ಬರಿಹವ ಪೊತ್ತು ಬರ್ಪಂತೆ ॥ ೧೦೩ ॥

ಗರುವೆರು ನೆನೆದ ಕುಂತಳವ ಕರದೊಳಾಂತು । ವರ ಬಾಹು ಭಾವವೊಪ್ಪಿದುದು ॥
ಸ್ಮರನ ಚಾವಡಿಯ ನೀಲದ ಬೋದಿಗೆಗಿಟ್ಟ । ವರ ಸ್ವರ್ಣ ಮದನ ಕೈಯಂತೆ ॥ ೧೦೪ ॥

ನೆನೆದ ಮೂರ್ಧಜವ ಪಾಣಿಯೊಳಾಂತು ಪಿಂಡುವ । ವನಿತೆಯರಂದವೊಪ್ಪಿದುದು ॥
ಮನನೊಂದು ಕಾವನ ಕರಿಯ ಕಬ್ಬಿನ ಬಿಲ್ಲ । ಘನವಾಗಿ ಪಿಂಡುವರೆನಲು ॥ ೧೦೫ ॥

ವರ ವನಕ್ರೀಡೆಯಲಿ ತಮ್ಮಯ ಬೇಸರ । ಪರಿಹರಿಸಿದ ನೀರೆಯರಿಗೆ ॥
ಮಿರುಗುವ ವಸ್ತ್ರಾಭರಣಗಳನು ರಾಯ । ಹರಿಸದಿಂದೆಲ್ಲರಿಗಿತ್ತ ॥ ೧೦೬ ॥

ಮುರುಕದೊಳಗೆ ಸಿಂಗರದೊಟ್ಟು ಮುನ್ನಿನ । ಪರಿಮಳವರಳ ತೊಡವನು
ಚರಣಾದಿ ತತ್ತತ್ ಸ್ಥಾನಂಗಳೊಳಗ । ಕರ ಚೆಲುವಾಗಿ ಸಿಂಗರಿಸಿ ॥ ೧೦೭ ॥

ನಾಗಸಂಪಗೆಯ ಪೆರ್ಮರದ ತಣ್ಣೆರಳೊಳು । ಭೂಗಧಿನಾಥ ಗದ್ದುಗೆಯ ॥
ಬೇಗದಿಂ ಹಾಕಿಸಿ ಅರದುಪರಿಮದೊಳು । ರಾಗದಿಂ ಕುಳಿತುಕೊಂಡಿರಲು ॥ ೧೦೮ ॥

ಅನುಮತಿ ಮೊದಲಾದ ರಾಮಾರತ್ನವು । ಮನದಕ್ಕರಿಂ ಸಿಂಗರಿಸಿ ॥
ವನರುಹ ಮೊದಲಾದ ಪುಷ್ಪಾಭರಣವ । ಜಿನದದಿಂದೆಲ್ಲರು ತೊಟ್ಟು ॥ ೧೦೯ ॥

ತರುಜಗಳನು ಪೊತ್ತ ಜಂಗಮಲತೆಯಂತೆ । ಗುರುಕುಚೆಯರು ಪುಷ್ಪವೊತ್ತು ॥
ಅರಸಿರ್ದ ತಾಣಕ್ಕೈತಂದು ವಿಲಾಸದಿಂ- । ದರಸಿಯರ್ಕುಳಿತರು ಸುತ್ತ ॥ ೧೧೦ ॥

ಭೂರಮಣನು ಸತಿಯರ ನಟ್ಟನಡುವೆ ತಾ । ರಾರಾಜಿಸಿದ ಸೋಳ್ಪರಿಗೆ ॥
ತಾರಾಸತಿಯರ ನಡುವೆ ಓಲಗಗೊಟ್ಟ । ಚಾರು ಸುಧಾಸೂತಿಯಂತೆ ॥ ೧೧೧ ॥

ಅರಳುಗಳನು ಪೊತ್ತು ಲತೆಗಳು ಬಳಸಿರೆ । ಸುರತರು ಸೊಗಯಿಸುವಂತೆ ॥
ವರ ಪುಷ್ಪಾಭರಣಾಂಕಿತವಾದಂಗನೆಯರು । ಪರಿವೇಷ್ಟಿಸಿರಲೊಪ್ಪಿದರಸ ॥ ೧೧೨ ॥

ಆ ವೇಳೆಯೊಳು ಬೋನಗುಡಿಕೆ ಪಟ್ಟಣದಿಂದ । ತೀವಿದ ವೋದವೆಸಗುತ ॥
ಭಾವಜ್ಞನಲ್ಲಿಗೆ ಬರಲು ರಾಜೇಂದ್ರದು । ಭಾವಕಿಯರ ಕೂಡಿಕೊಂಡು ॥ ೧೧೩ ॥

ಆರೋಗಿಸಿ ಕೈಗರ್ಚಿ ವೀಟಿಕೆಯಾಂ- । ತಾ ರಾಮಪಾಲನ ಕರೆಸಿ ॥
ಚಾರುದುಕೂಲ ವಿಭೂಷಣಗಳ ನಿ- । ತ್ತಾ ರಾಯ ಮನ್ನಿಸಿಯವನ ॥ ೧೧೪ ॥

ಹರುಷದಿಂದಲಿ ತ್ರಿಜಗದ್ಭೂಷಣವೆಂಬ । ಕರಿಪತಿ ಮಸ್ತಕವೇರೆ ॥
ಅರಸಿಯರುಗಳು ಪಲ್ಲಕ್ಕಿಯಂದಣವೇರೆ । ಭರದಿಂದ ಸೇವಕಿ ಜನರು ॥ ೧೧೫ ॥

ಬಿಲಿವೆಣ್ಣು ಮುಂತಾದ ಎಳೆವೆಣ್ಣುಗಳೆಲ್ಲ । ಪಲಬಗೆ ತೇಜಿ ರಥಗಳ ॥
ನಲವಿಂದಲೇರಿ ಬರಲು ವಾದ್ಯ ಕೋಟಿಯು । ಮೊಳಗಿದುವಾಗ ಭೋರೆಂದು ॥ ೧೧೬ ॥

ಸುರಬಲವೊಡಬರೆ ಅಮರಾವತಿಯನು । ಸುರಪತಿ ಪೊಗುವಂದದೊಳು ॥
ಉರಗಗಣವು ಸಹ ಬರೆ ಭೋಗಾವತಿಯನು । ಉರಗರಾಜನು ಪೊಗುವಂತೆ ॥ ೧೧೭ ॥

ತಾರಾಳಿಯೊಡಬರೆ ಚಂದ್ರಪುರಿಯನಾ- । ಗಾ ರೋಹಿಣೀಶೈದುವಂತೆ ॥
ಮಾರಸಂಕಾಶ ಪಂಚಾಂಗ ಬಲವು ಗೂಡಿ । ಊರಸು ಪೊಕ್ಕುತ್ಸಹದಿ ॥ ೧೧೮ ॥

ಮುರಿದು ಸಿಟ್ಟಿಸುತ ತನ್ನಯ ರಾಜಧಾನಿಯ । ನರನಾಥಚಂದ್ರನು ಬಂದು ॥
ಅರಮನೆ ಬಾಗಿಲೊಳಗೆನಿಂದು ದೊರೆಗಳ । ನೆರವಿಗೆ ಕವಿ ಬುಧಜನಕೆ ॥ ೧೧೯ ॥

ಪರಿವಾರ ಮಂತ್ರಿಗಳಿಗುಡುಗೊರೆಯಿತ್ತು । ದೊರೆರನ್ನಸವರ ಬೀಳ್ಕೊಟ್ಟು ॥
ಧರೆಯನೇಕ ಛತ್ರದಿಂದಲಾಳುತಲಾ । ಸುರರಾಜನಂತೊಪ್ಪಿದನು ॥ ೧೨೦ ॥

ತರುಣಿಯರುಗಳ ಹೃತ್ಕುವಲಯ ಚಂದಿರ । ಪರಬಲ ಹರಿಣ ಶಾರ್ದೂಲ ॥
ಅರುಹನ ಚರಣಾಂಬುರುಹ ಪುಷ್ಪಂಧಯ । ನರನಾಥ ಜ್ಞಾನೇಂದೊಪ್ಪಿದನು ॥ ೧೨೧ ॥

**॥ ಅಂತು ಸಂಧಿ ೨೬ಕ್ಕಂ ಪದ ೩೫೮ಲಂಕ್ಕಂ ಮಂಗಲಂ ॥**

# ಹರಿಶ್ಚಂದ್ರಕುಮಾರನ ಜನನ.

ಹರಿಶ್ಚಂದ್ರಕುವರನ ದಾಯಿಗ ಸಾಸಿರ । ಮರದಿಂದ ಕೆಡಹಿದದುಸುರ್ವೆ ॥ ಪ ॥
ಕಾಲತ್ರಯವೇದಿ ಕಳಕರ್ಮವಿದೂರ ! । ಮೂಲೋಕಸತದಿವ್ಯಚರಣ ! ॥
ಮೇಲಣ ಸುದತಿಯುರದ ಹಾರ **ಶಾಂತೀಶ** ! । ಪಾಲಿಸೆಮಗೆ ನಿಮ್ಮ ಪದನ ॥ ೧ ॥
ಸುರಪ ಪುಲೋಮಜೆಯಾದಿ ದೇವಿಯರೊಳು । ಹರಿ ರೋಹಿಣ್ಯಾದಿ ಸ್ತ್ರೀಯರೊಳು ॥
ಉರಗೇಂದ್ರ ಪದ್ಮಿನಿಯಾದಿಯಂಗನೆಯರೊ- । ಳಿರುವಂತೆ ಜ್ಞಾನಚಂದ್ರಮನು ॥ ೨ ॥
ಅನುಮತಿ ಮೊದಲಾದ ಕೋಮಲಾಂಗಿಯರೊಳು । ಅನುರಾಗದಿಂ ಕೂಡಿರಲು ॥
ವನಿತಾಮಣಿ ಅನುಮತಿದೇವಿ ತಾನೊಂದು । ದಿನದೊಳು ಪುಷ್ಪಿತೆಯಾಗಿ ॥ ೩ ॥
ಚಂದ್ರಗಾವಿಯ ಸೀರೆಯನು ಕೆಳದಿಯರು । ಚಂದ್ರಾನನೆಗಾಗುಡಿಸಿ ॥
ಇಂದ್ರಧನುವಿನಂತೆ ಪೊಳೆವಾಭರಣವ ಮೃ- । ಗೇಂದ್ರ ಮಧ್ಯೆಗೆ ತೊಡಿಸಿದರು ॥ ೪ ॥
ಅರುಣ ಚಂದನದ ವ್ರತತಿಯಂತೆ ಪವಳದ । ಕರ ಚೆಲುವಿನ ವಲ್ಲಿಯಂತೆ ॥
ತರುಣ ಮಾಧವಿರಕ್ತಿಮ ಲತೆಯಂದದಿ । ತರಳೆ ಚೆಂದೊಡವಿಟ್ಟೊಪ್ಪಿದಳು ॥ ೫ ॥
ಕೆಳದಿಯರುಗಳು ನಾಲ್ನೀರೆಟ್ಟಲು ಮಿಂದು । ಕಳಿಕಾವಳಿಯಂಬರವ ॥
ನಳಿನಾಕ್ಷಿಯನುಮತಿದೇವಿ ತಾನುಟ್ಟಾಗ । ಥಳಥಳಿಸುವ ಮೌಕ್ತಿಕದ ॥ ೬ ॥
ಹಾರಹೀರಾವಳಿ ಮೊದಲಾದಾಭರಣವ । ನಾರೀರತ್ನಳು ತಾ ತೊಟ್ಟು ॥
ಪಾರಿಜಾತದ ಲತಾಂತನ ಮುಡಿಗಿಟ್ಟು । ಧೀರೆ ಜಿನಗೆ ಪೊಡಮಟ್ಟು ॥ ೭ ॥
ಮುನಿಗಳಿಗೆರಗಿಯಾಗವರಿಂದ ಪರಕೆಯ । ಘನಕುಚೆ ಮಂಡೆಯೊಳಾಂತು ॥
ದಿನಕರನಸ್ತಂಗತನಾಗೆ ಸಜ್ಜೆಯ- । ನನುಮತಿದೇವಿಯು ಏರಿ ॥ ೮ ॥
ಪುಳಿನ ತಳದೊಳಿರ್ದ ರಾಜಮರಾಳನ । ಬಳಿಗೈವ ಪೆಣ್ಣಂಚೆಯಂತೆ ॥
ನಳಿನಾಕ್ಷಿ ನೃಪನಿರ್ದ ಶಕುನಿಯ ಮಂಚವ । ತಳುವದೇರಿದಳು ಲೀಲೆಯೊಳು ॥ ೯ ॥
ಸರಸ ಸಲ್ಲಾಪವ ಕೆಲವೊತ್ತರಸನೊ- । ಳರಸಿಯಾಡುತಲಿರುತಿರ್ದು ॥
ಸ್ಮರ ಕೇಳಿಯೊಳು ರಾಜೇಂದ್ರನ ತಣಿಯಿಸಿ । ಗುರು ಸುಖದಿಂ ಪಟ್ಟಿರಲು ॥ ೧೦ ॥
ವರ ಮನೋಹರ ಜಾವದೊಳು ಕನಸಿನಲ್ಲಿ । ಹರಿ ಹರಿ ಹರಿ ಕರಿಗಳನು ॥
ತರುಣಿ ರನ್ನಳು ಕಂಡು ಕಟ್ಟಕಡೆಯೊಳೊಂ- । ದರಮನೆಯೊಳಗಾಡುತಿರ್ದ ॥ ೧೧ ॥
ಗಿರಿಯಂಚೆಯ ಪಲವಂಚೆಯ ಮರಿಗಳು । ವರ ಚಂಚುಪುಟದಿಂದ ಕುಟುಕೆ ॥
ಸರದಿ ನೂಂಕುವ ಸ್ವಪ್ನವ ಕಂಡು ಎಚ್ಚತ್ತು । ತರುಣಿ ಜಿನನ ನೆನೆವುತ್ತ ॥ ೧೨ ॥

ಇರುತಿರಲಷ್ಟರೊಳಗೆ ಬೆಳಗಾಗಲಾ- । ಗರುಹನ ಪೂಜಿಸಿ ಮುದದಿ ॥
ವರ ಸಿದ್ಧಶೇಷೆಯ ಶಿರದೊಳಗಿರದಾಂತು । ಪುರುಷನಿರ್ದೆಡೆಗೈತಂದು ॥ ೧೩ ॥

ಜನಪನ ಚರಣಕ್ಕೆರಗಿ ಗದ್ದುಗೆಯೊಳು । ವನಿತೆಯು ಕುಳಿತಾಗೆರೆಯನ ॥
ನನೆಯಂಬುಗಣ್ಣಿನ ಕೊನೆಯಿಂದ ನೋಡುತ । ಮಿಸುಗುತಿರಲು ಮುದ್ದುನಗೆಯು ॥ ೧೪ ॥

ಕರಡಿಗೆ ಬಾಯನು ತೆರೆದು ತಾ ಕಂಡೈದು । ಹರಿಯಾದಿ ಸ್ವಪ್ನವ ಪೇಳೆ ॥
ಅರಸ ಮುಗುಳ್ನಗೆ ಇಡುತಾ ಸ್ವಪ್ನದ । ವರ ಫಲಗಳ ಪೇಳ್ದನಿಂತು ॥ ೧೫ ॥

ವನರುಹದಳನೇತ್ರೆ ! ರವಿಯ ಕಂಡುದರಿಂದ । ಜನಪಾಂಧಕಾರವ ಕೆಡಿಸಿ ॥
ಜಿನಮತವನು ಬೆಳಗುವ ಸುಪ್ರತಾಪನು । ಜನಿಪನಿನ್ನಮಲ ಗರ್ಭದೊಳು ॥ ೧೬ ॥

ವಿಧುಮುಖಿ ! ನೀನಿಂದಿನಿರುಳೊಳು ಕನಸಿಲಿ । ವಿಧುವ ಕಂಡುದರಿಂದ ಮೂಜಗವ ॥
ಸದಮಲ ಕೀರ್ತಿಯ ತುಂಬುವ ಶಾಂತ- । ನುದಯಿಪ ನಿನ್ನ ಬಸಿರೊಳು ॥ ೧೭ ॥

ಹರಿಯು ನಡುವಿನಂತೆ ಸಣ್ಣ ನಡುವಿನಳೆ ! । ಹರಿಯು ಕನಸ ಕಂಡ ಫಲದಿ ॥
ಹರಿ ಪರಾಕ್ರಮಿಯೋರ್ವ ನಿನಗುದಯಿಪನೆಲೆ । ದೊರೆ ಜ್ಞಾನೇಂದ್ರನರ್ಧಾಂಗಿ ! ॥ ೧೮ ॥

ಕರಿಕುಂಭ ಸದೃಶ ನಿತಂಬೆ ! ನೀ ಕನಸಿಲಿ । ಕರಿಯ ಕಂಡುದರಿಂದ ನಿನಗೆ ॥
ಸುರಭೂಜಸನು ದಾನಿ ಸುಜನೈಕಬಾಂಧವ । ವರ ಸುತನುದ್ಭವಿಸುವನು ॥ ೧೯ ॥

ಕಡೆಯೊಳು ನೀಕಂಡ ಸ್ವಪ್ನದ ಫಲದಿ ನಿ- । ನ್ನೊಡಲೊಳು ಪುಟ್ಟಿದರ್ಭಕನು ॥
ಕೆಡುಕ ದಾಯಿಗರಿಂದುಪಸರ್ಗಕೆ ಸಿಕ್ಕಿ । ಒಡನೆ ಬಿಟ್ಟಗಲುವ ನಮ್ಮ ॥ ೨೦ ॥

ಎಂದು ಸ್ವಪ್ನಂಗಳ ಫಲಗಳ ಪೇಳಿ ಜ್ಞಾ- । ನೇಂದು ಶಾಂತಿಕ ಪೌಷ್ಟಿಕವ ॥
ಕಂದರ್ಪಮದದೂರ ಜಿನಗೃಹದೊಳಗಾ- । ನಂದದಿಂ ನಡೆಯಿಸುತಿರಲು ॥ ೨೧ ॥

ಪ್ರಥಮ ಕಲ್ಪದೊಳಿರ್ದ ನಿರ್ಜರನೈತಂದು । ಪೃಥುನಿತಂಬೆಯ ಬಸಿರೊಳಗೆ ॥
ಅತಿಶಯದಿಂ ನೆಲಸಿರಲಾ ಗರ್ಭವು । ಸತತ ಬೆಳೆಯುತೊಪ್ಪಿರಲು ॥ ೨೨ ॥

ಮೂರನೆ ತಿಂಗಳಾಗಲು ಕೋಮಲಾಂಗಿಗೆ । ನಾರಿಯರುಗಳು ಸ್ನಾನವನು ॥
ಚಾರು ವೈಭವದಿಂದ ಮಾಡಿಸಿ ವಸನವ । ವಾರಿಜಾಂಬಕಿಗುಡಿಸಿದರು ॥ ೨೩ ॥

ತೊಳಗುವಾಭರಣದಿ ಸಿಂಗರವನು ಮಾಡಿ । ಮಲಯಜವಂಗಕೆ ತೊಡೆದು ॥
ಚೆಲುವ ಕಂಗಳಿಗೆ ಕಜ್ಜಳವಿಕ್ಕಿ ಪೂವಿನ । ವಿಲಸಿತ ಮಾಲೆಯ ಸೂಡೆ ॥ ೨೪ ॥

ಕರದೊಳು ಮಾತುಳುಂಗದ ಫಲವನು ಕೊಟ್ಟು । ಮೆರೆವ ಹಸೆಯ ಜಗುಲಿಯೊಳು ॥
ಎರೆಯನ ಬಲದ ಭಾಗದೊಳಾಗ ಕುಳ್ಳಿರಿಸಿ । ಶಿರದೊಳು ಮಂತ್ರಾಕ್ಷತೆಯ ॥ ೨೫ ॥

ತಳಿದು ಪುರೋಹಿತ ಹವನವ ಮಾಡಲು । ಚೆಲುವರದೇವ ಜ್ಞಾನೇಂದು ॥
ಪಲವು ದಕ್ಷಿಣೆಯನು ಪಾತ್ರರರಿದು ಕೊಟ್ಟು । ನಲವಿಂದಲೋಲಾಡುತಿರಲು ॥ ೨೬ ॥

**॥ ಇತಿ ಪ್ರಮೋದ ವಿಧಿಃ ॥**

ಬರಲೈದನೆಯ ತಿಂಗಳು ಜ್ಞಾನಚಂದ್ರನು । ಹರುಷದಿಂ ಮಜ್ಜನಗೈದು ॥
ವರ ವಸ್ತ್ರ ಭೂಷಣ ಗಂಧಾನುಲೇಪನ । ಅರಳು ಮುಂತಾದುವ ಧರಿಸಿ ॥ ೨೭ ॥

ಹೊಸ ಹೊನ್ನ ಹಸೆಯ ಜಗಲಿಯೊಳು ಕುಳಿತಿರೆ । ಎಸಳುಗಣ್ಣಳ ಅನುಮತಿಯ ॥
ಕುಶಲದಿಂ ಪೂರ್ವೋಕ್ತ ಕ್ರಮದಿಂ ಸಿಂಗರಗೈದು । ವಸುಧೇಶನ ದಕ್ಷಿಣದೊಳು ॥ ೨೮ ॥

ಕುಳಿರಿಸಲಾಚಾರ್ಯ ತಳಿದು ಪೂತಾಂಬುವ । ಫಲ ಮುಂತಾದ ವಸ್ತುಗಳಿಂ ॥
ನಲವಿಂದ ಹವನವ ಮಾಡಲು ಸ್ತ್ರೀಯಿಂದ । ತಿಳಿದುಪ್ಪವನಾಗ ಕೊಡಿಸಿ ॥ ೨೯ ॥

ದೊರೆರನ್ನನಾಗಗ್ನಿ ತರ್ಪಣವನು ಮಾಡಿ । ಹರಿ ಮಂದ ಗೋಧೂಮ ತೊಗರಿ ॥
ಕರಿಯ ಹೆಸರು ಉದ್ದು ಮುಂತಾದ ಹಸಿತಾದ । ವರ ಧಾನ್ಯದ ಮಾಲೆಯನು ॥ ೩೦ ॥

ಅರಸಿಯ ಕೊರಳಿಗೆ ಹಾಕಿ ಸಂತೋಷದಿಂ । ಹಿರಿಯರು ಕವಿಜನ ಬುಧರ್ಗೆ ॥
ಪರಿಮಳ ಗಂಧ ಸುವರ್ಣ ತಾಂಬೂಲಾದಿ । ವರ ದಾನಂಗಳ ತಾನು ಕೊಟ್ಟ ॥ ೩೧ ॥

॥ ಇತಿ ಪುಂಸವನ ವಿಧಿಃ ॥

ಹರಿ ವೈಭವದೊಳಗಿರುತಿರೆ ಜ್ಞಾನೇಂದು । ತರುಣೀಗೇಳನೆ ತಿಂಗಳಾಗೆ ॥
ವರ ಶುಭ ದಿನದೊಳು ಪುಸ್ನಕ್ಷತ್ರದೊ- । ಳರಸಿನೆಣ್ಣೆಯನಾಗ ತಿಗುರಿ ॥ ೩೨ ॥

ಸ್ನಾನವ ಮಾಡಿಸಿ ವಸ್ತ್ರಾಭರಣದಿ । ಮಾನಿನಿಯನು ಸಿಂಗರಿಸಿ ॥
ಭೂನಾಥನ ಗರ್ಭಿಣಿಸಹ ಹಸೆಯೊಳು । ಸಾನಂದದಿಂ ಕುಳ್ಳಿರಿಸಿ ॥ ೩೩ ॥

ವಿಧಿಪೂರ್ವಕವಾಗಿ ಪೌರೋಹಿತನಂದು । ಮೋದದಿಂ ಹವನವ ನಡೆಸಿ ॥
ಸದಮಲಚರಿತೆ ಸುಶೀಲೆ ಸುಭಗೆ ಶುಚಿ । ಒದವಿದ ಪತಿ ಪುತ್ರವತಿಯು ॥ ೩೪ ॥

ಅತಿ ಪ್ರೌಢೆ ಮುತ್ತೈದೆ ವೃದ್ಧೆ ತಾನೈತಂದು । ಸತಿಗೆ ಬೈತಲೆಯ ಮೂಸೂಳು ॥
ಅತಿಶಯದಿಂದಲಿ ತೆಗೆದು ಕ್ರಿಯೆಗಳನು । ನುತವೆತ್ತು ನಡೆಯಿಸೆ ಮತ್ತೆ ॥ ೩೫ ॥

ಸುಳಿಯ ಮುಳಿಗೆ ದರ್ಭೆಗಳನು ಕಟ್ಟಿ । ತಿಲಜ ಮಿಶ್ರಿತ ಸಿಂಧೂರವನು ॥
ಲಲನೆಯ ಬೈತಲೆಯೊಳಗಾ ವೃದ್ಧೆಯು । ಪಲಸೂಳು ತೊಡೆದಳೇನೆಂಬೆ ॥ ೩೬ ॥

ದೊರೆರನ್ನನಾಗೌದುಂಬರದುಡಿಯನು । ತರಳೆಯೆಡೆಯೊಳು ಶಿರದೊಳು ॥
ಮುರುಕದಿಂ ಸೇಚಿಸೆ ಪೌರೋಹಿತನಾಗ । ಸರವನೌದುಂಬರ ಫಲದ ॥ ೩೭ ॥

ವರ ಮಂತ್ರವನುಚ್ಚರಿಸುತ ವರ ಪತ್ನಿ । ಕೊರಳಿಗೆ ಹಾಕಿ ಸಮಸ್ತ ॥
ಉರುತರ ಕ್ರಿಯೆಯನೆಸಗೆ ರಾಜೇಂದ್ರನು । ನೆರೆದಿರ್ದ ವಿಪ್ರಾದಿ ಜನಕೆ ॥ ೩೮ ॥

ಕಡು ಸಂತೋಷದಿಂ ತುಷ್ಟಿದಾನವ ಕೊಟ್ಟು । ಪೊಡವಿಪ ಸೀಮಂತ ವಿಧಿಯ ॥
ನಡೆಯಿಸಿ ದೇವಪೂಜೆಯ ಗುರುಪೂಜೆಯ । ತೊಡಗಿ ತಾ ನಡೆಯಿಸುತಿರಲು ॥ ೩೯ ॥

॥ ಇತಿ ಸೀಮಂತ ವಿಧಿಃ ॥

ನವಮಾಸದಂತ್ಯದೊಳಗೆ ಶುಭ ದಿನದೊಳು । ಯುವತಿ ಪೆರಲು ಗಂಡುಮಗನ ॥
ಭವನದೊಳಗೆ ಜಯಘಂಟಿ ಮೊಳಗಿಮು- । ದಮಲ ಶೋಭನವ ಪಾಡಿದರು ॥ ೪೦ ॥

ಮೊಳಗಿದವಾಗ ಕೋಟಾಕೋಟಿ ವಾದ್ಯವು । ಕೆಳದಿಯೋರ್ವಳು ಪರಿತಂದು ॥
ಇಳೆಯಾಣ್ಮಗೆ ಕೈಯ ಮುಗಿದೆಲೆ ನೃಪ ನಿನ್ನ । ಲಲನೆ ಪೆತ್ತಳು ಕುಮಾರಕನ ॥ ೪೧ ॥

ಎಂದು ಒಸಗೆಯನು ದಾದಿಯು ಪೇಳಲಾ- । ನಂದವ ಪೊಂದಿ ಜ್ಞಾನೇಂದು ॥
ಅಂದಿತ್ತನವಳಿಗೆ ಮುಂಗೈಯ ಸರವನು । ಅಂದುಗೆ ಕಾಲಸರವನು ॥ ೪೨ ॥

ಕನಕಪುರವನತ್ಯಂತ ಸಿಂಗರಗೈಸಿ । ಕನಕಾದಿ ಭೂರಿದಾನವನು ॥
ಮನದಣಿವಂತೆ ಯಾಚಕ ಕವಿ ಬುಧರಿಗೆ । ಜನತಾಧಿನಾಯಕನಿತ್ತು ॥ ೪೩ ॥

ಜಿನಪೂಜೆಗೆ ಜಿನಗೃಹದೊಳಪ್ಪಯಿಸಿ ತಾ । ವಿನಯದಿಂ ಪೌರೋಹಿತಗೆ ॥
ಘನವಾಗಿ ಹವನವ ನಡೆಸೆಂದಾತಗೆ ಪೇಳಿ । ಮನುಜೇಂದ್ರ ಸೂತಿಕಾಗೃಹಕೆ ॥ ೪೪ ॥

ನಡೆತಂದು ದರ್ಭೆಯೊಳಗೆ ಪೂತಾಂಬುವ । ಮುಡದಿ ಶಿಶುವಿನ ಶಿರದೊಳು ॥
ಪೊಡವಿಗೊಡೆಯ ತಳಿದು ಸ್ವಪುತ್ರನ । ಕಡಲಸುತನ ಸಮ ಮೊಗವ ॥ ೪೫ ॥

ಪಿರಿಯದಿಂದವೆ ನೋಡಿ ಕ್ಷೀರಾಜ್ಯ ಶರ್ಕರಿ- । ವೆರೆಸಿದ್ದ ಪಾತ್ರೆಯನೆತ್ತಿ ॥
ವರ ಶಿಶುವನು ಪಂಚವಾರ ಪ್ರಕ್ಷಾಲಿಸಿ । ಭರದಿಂದುಳಿದ ಕ್ರಿಯೆಗಳನು ॥ ೪೬ ॥

ನಡೆಯಿಸಿ ಶುಭ ತಿಥಿಯೊಳು ನಾಭಿನಾಳವ । ಒಡನೆ ಕೊಯ್ದು ರಕ್ಷಿಸುತ ॥
ಬಿಡದೆ ಮತ್ತುಳಿದ ಕ್ರಿಯೆಗಳನು ನಡೆಯಿಸಿ । ಪೊಡವಿಪ ಸುಖದೊಳಗಿಹನು ॥ ೪೭ ॥

**॥ ಇತಿ ಜಾತಕರ್ಮ ವಿಧಿಃ ॥**

ಕಳೆಯಲಾಗೈದನೆ ದಿವಸದ ಸೂತಕ- । ನಿಳೆಯಾಣ್ಮ ಗೃಹಶುದ್ಧಿಗೆಯಿಸಿ ॥
ಜಳಕವ ದಂಪತಿಗಳು ಮಾಡಿ ಹಸೆಯೊಳು । ನಲವಿಂದ ಕುಳಿರೆ ಹವನವ ॥ ೪೮ ॥

ಪರಂಪರೆಯಿಂದ ಪೌರೋಹಿತ ನಡೆಯಿಸೆ । ದೊರೆರನ್ನ ಹತ್ತನೆ ದಿನಕೆ ॥
ಅರುಹನಾಲಯದೊಳು ಪೂಜೆಯ ಮಾಡಿಸಿ । ವರ ಬಂಧು ಭೂಪರ ಮುಂದೆ ॥ ೪೯ ॥

ಕನಕ ಪಾತ್ರೆಯೊಳು ಶುಭ್ರಾಕ್ಷತೆ ಹರಹಿಸಿ । ಜನಪತಿ ಶುಭ ನಾಮವನು ॥
ಮನದಕ್ಕರಿಂದ ಬರೆದು ಕ್ಷೀರಾಜ್ಯವ । ಕನಕ ಪಾತ್ರೆಯೊಳಗೆ ತೀವಿ ॥ ೫೦ ॥

ಹರಿವಾಣವೆರಡರೊಳಗೆ ಗಂಧ ಕುಶ ಪುಷ್ಪ । ವಿರಚಿಸಿ ಭೂಷಣವಿಟ್ಟು ॥
ಶಿರ ಕರ್ಣಗಳ ಭುಜ ವಕ್ಷಗಳನಾಗ । ಭರದಿಂದ ಕ್ಷೀರಾಜ್ಯದೊಳು ॥ ೫೧ ॥

ವಿಲಸಿತ ದರ್ಭೆಯನೆತ್ತಿಯು ಮುಟ್ಟಿಸಿ । ಪಲವಾಭರಣವ ಶಿಶುಗೆ ॥
ಇಳೆಗೀಶ ತೊಡಿಸೆ ಸಮಸ್ತ ನೃಪರ ಮುಂದೆ । ಗೆಲವಿಂದ ಪೆಸರಿಂತು ಕರೆದ ॥ ೫೨ ॥

ವರ ಬಾಲಕ ಪುಟ್ಟಿದಾಗಂಧಕಾರವು । ಹರದ ಕಾರಣ ದಿಕ್ಕಿಂದ ॥
ದೊರೆರನ್ನ ಕುವರಗೆ **'ಹರಿಶಂದ್ರ'** ವಿಶ್ರುತ । ವರ ನಾಮವನಿಟ್ಟು ಕರೆದು ॥ ೫೩ ॥

ಶಿಶುವನು ಸಂತೋಷದಿಂದೆತ್ತಿಕೊಂಡಾಗ । ವಸುಧೇಶ್ವರ ಮೂಸೂಳು ॥
ಕುಸುಮಾಯುಧಜಿತ ಜಿನಪತಿ ಗೃಹವನು । ಹಸುಳೆವೆರಸು ಬಲವಂದು ॥ ೫೪ ॥

ಜಿನಸಮ್ಮುಖದೊಳು ನಿಂದೆಲ್ಲರ ಮುಂದೆ । ಜನಪ ಕೂಸಿನ ಪೆಸರ್ವಿಡಿದು ॥
ಅಸುಪಮ 'ಹರಿಚಂದ್ರ' ಹರಿಚಂದ್ರ ನಸ್ನಯ । ತನಯ ಶ್ರೀ ಹರಿಶ್ಚಂದ್ರನೆಂದು ॥ ೫೫ ॥

ಕರೆದಿಂತು ಜಿನರಾಜಗೆ ಪೊಡವಡಿಸಿಯು । ವರ ಪೂರ್ಣಾಹುತಿಗೊಟ್ಟು ॥
ಗುರುಪೂಜೆ ಸಂಘಪೂಜೆಯ ಮಾಡಿ ಜ್ಞಾನೇಂದು । ತೆರಳಿ ಬಂದರಮನೆಗಾಗಿ ॥ ೫೬ ॥

ರಾತ್ರಿಯ ಸಮಯದೊಳಗೆ ದೊರೆರನ್ನನು । ಪುತ್ರನ ಕಿವಿಗಳ ಚುಚ್ಚಿ ॥
ಸುತ್ರಾಮ ಸಮದ ವೈಭವದಿ ಶಿಶುವಿಗೇಣ- । ನೇತ್ರೆಯರಿಕ್ಕೆ ತೊಟ್ಟಿಲನು ॥ ೫೭ ॥

॥ ಇತಿ ನಾಮಕರ್ಮ ವಿಧಿಃ ॥

ಶಿಶುವಿಗೆ ತಿಂಗಳು ಮೂರಾಗೆ ರಾಜೇಂದ್ರ । ಹಸನಪ್ಪ ಶುಕ್ಲಪಕ್ಷದೊಳು ॥
ನಸು ಬಿಸಿನೀರನು ಶಿಶುವಿಗೆ ಎರಯಿಸಿ । ಪಸದನದಿಂದಲಂಕರಿಸೆ ॥ ೫೮ ॥

ಹಿರಿಯರು ದರ್ಭೆಯೊಳಗೆ ಪೂತಾಂಬುವ । ಶಿರದೊಳು ತಳಿದು ಬಾಲಕನ ॥
ಪರಸುತಲಿರೆ ಜಯಜಯವೆಂದು ನರಪತಿ । ತರಳನ ತಾನೆತ್ತಿಕೊಂಡು ॥ ೫೯ ॥

ಮನೆಯಿಂದ ಪೊರಮಟ್ಟು ವಾದ್ಯದ ಗಲಭೆಯಿಂ । ಜಿನಮಂದಿರವೊಕ್ಕು ಮೂಮೆ ॥
ಘನಭಕ್ತಿಯಿಂ ಬಲಗೊಂಡೊಳಪೊಕ್ಕಾಗ । ಜಿನಪತಿಗಭಿಷೇಕವೆಸಗಿ ॥ ೬೦ ॥

ಶೇಷೆಯನಿಂದ್ರರು ತಂದು ಮಂತ್ರವನೋದಿ । ಕೂಸಿನ ಶಿರದೊಳು ತಳಿಯೆ ॥
ಆ ಸಮಯದಿ ಭೂವರನಿಂತು ನುಡಿದನಾ- । ಗಾ ಸಭೆ ಕೇಳುವಂದದೊಳು ॥ ೬೧ ॥

ಎಲೆ ಹರಿಶ್ಚಂದ್ರಕುಮಾರ ನಸ್ನಯ ಕಂದ ! । ಕಲಿಲವಿದೂರ ಜಿನಪನ ॥
ಗೆಲವಿನಿಂ ನೋಡು ನೋಡೆಂದು ಬೊಟ್ಟನು ನೀಡಿ । ಚೆಲುವಿಂದ ತೋರಿದ ಶಿಶುಗೆ ॥ ೬೨ ॥

ನವರತ್ನಮಯವಾಯ ಮಂಟಪಕ್ಕೆತಂದು । ದಿವಿಜಾರಾಧ್ಯಕೃತ್ರಿಮದ ॥
ಪವಿಮಯವಸತಿಯಿಂ ಥಳಥಳಿಸುತಲಿರ್ಪ । ರವಿ ಬಿಂಬವ ಕಾಣಿಸಿದ ॥ ೬೩ ॥

ಅರಮನೆಗಾ ಸಂಭ್ರಮದೊಳು ನಡೆತಂದು । ನೆರೆದಿರ್ದ ಯಾಚಕಬುಧರ್ಗೆ ॥
ದೊರೆರನ್ನನು ದಾನ-ದಕ್ಷಿಣಂಗಳ ಕೊಟ್ಟು । ಹರಿಸದೊಳು ಇರುತಿರಲು ॥ ೬೪ ॥

॥ ಇತಿ ಬಹಿರ್ಯಾನ ವಿಧಿಃ ॥

ಬಾಲಕಗೈದನೆ ತಿಂಗಳೊಳಗೆ ನೃಪ । ಲೀಲೆಯಿಂ ಮಜ್ಜನಗೈಸಿ ॥
ಮೇಲುರತ್ನಾಭರಣದಿ ಸಿಂಗರಗೈ- । ದಾಲಿಗೆ ಕಜ್ಜಳವೆಚ್ಚಿ ॥ ೬೫ ॥

ಮಲಯಜದಣ್ಪಿಟ್ಟು ರಂಗವಲಿಗಳಿಂದ । ಚೆಲುವರಮನೆಯೊಳಗಮಲ ॥
ಜಲರುಹಾಸನದಲ್ಲಿ ಧವಲ ವಸನವಿಕ್ಕಿ । ಕುಳಿರಿಸಿ ಬಾಲಕನಲ್ಲಿ ॥ ೬೬ ॥

ಎಡದ ತೊಡೆಯ ಮೇಲ ಬಲಗಾಲ ಮಡಿಯಿಟ್ಟು । ಕಡೆಯಾಣಿ ಭದ್ರಾಸನದೊಳು ॥
ಪೊಡವಿಪ ಪಲ್ಯಂಕಾಸನದೊಳು ಕುವರನ । ಒಡನೆ ಕುಳ್ಳಿರಿಸಿಯಾರತಿಯ ॥ ೬೭ ॥

ತರುಣಿಯರುಗಳು ಬಾಲಕನ ಮುಂದಿರದೆತ್ತೆ । ಪರಸುತಿರಲು ವೃದ್ಧಜನರು ॥
ಅರಸನೆಲ್ಲರಿಗೆ ಭೋಜನವನು ಮಾಡಿಸಿ । ವರ ತಾಂಬೂಲವನಿತ್ತ ॥ ೬೮ ॥

॥ ಇತ್ಯುಪವೇಶ ವಿಧಿಃ ॥

ಸುತನಿಗೇಳ್ತಿಂಗಳಾಗಲು ವಸುಧೇಶನು । ಸುತವೆತ್ತ ಶುಭದಿನದೊಳು ॥
ಅತಿಶಯದಿಂ ಸ್ನಾನಾಭರಣಗಳಿಂದ । ಕ್ಷಿತಿಪತಿ ಸಿಂಗರಗೈಸಿ ॥ ೬೯ ॥

ಹಸೆಯೊಳು ಕುಳ್ಳಿರಿಸಿ ದಾರಕನಿದಿರೊಳು । ಹಸನಾಗಿ ಹವನವ ನಡೆಸಿ ॥
ಶಶಿಮುಖಿಯರುಗಳು ಪೂರ್ವಾಭಿಮುಖವಾಗಿ । ರಸಿಕರ ದೇವನು ಕುಳಿತು ॥ ೭೦ ॥

ತನಯನ ದಕ್ಷಿಣ ಮುಖವಾಗಿ ತನ್ನಯ । ಮಿನುಗುವ ಎಡದ ತೊಡೆಯೊಳು ॥
ಮನದನುರಾಗದಿಂ ಕುಳ್ಳಿರಿಸಿಕೊಂಡಾಗ । ಕನಕಪಾತ್ರದೊಳು ರಾಜೇಂದ್ರ ॥ ೭೧ ॥

ಘಮಘಮಿಸುವ ತುಪ್ಪ ಹಾಲು ಶರ್ಕರೆಗೂಡಿ । ಸೊಗಯಿಪ ಪರಮಾನ್ನವನು ॥
ಮಗುವಿನ ಬಾಯಿಗೆ ತೊಡೆದು ಬಾಂಧವರಿಗೆ । ಮಿಗೆ ಕಲಸಿದ ದಧ್ಯನ್ನವನು ॥ ೭೨ ॥

ಭೋಜನವನು ಮಾಡಿಸಿ ಗಂಧವೀಳ್ಯವ । ಭೂಜಾಯೆವಲ್ಲಭ ಕೊಡಿಸಿ ॥
ತೇಜೋನಿಧಿ ಸಿಂಗವಣೆಯೊಳು ಕುಳಿತು ವಿ- । ಭ್ರಾಜಿಸಿದನು ರಾಜೇಂದ್ರ ॥ ೭೩ ॥

॥ ಇತಿ ಅನ್ನಪ್ರಾಶನ ವಿಧಿಃ ॥

ನವಮಾಸವಾಗಲು ವಿನಾಯಿಸಿ ಕುವರನ । ಕುವಲಯಪತಿಯಲಂಕರಿಸಿ ॥
ಸವಿನಯದಿಂಗಮನೋಚಿತ ತಾರೆಲಿ । ಹವನವ ನಡೆಸಿ ಮತ್ತದರ ॥ ೭೪ ॥

ಬಳಸಿ ಪ್ರದಕ್ಷಿಣ ಕ್ರಮದಿ ನಿರ್ಮಲವಾಗಿ । ತೊಳೆದ ವಸ್ತ್ರಗಳನು ಹರಹಿ ॥
ಚೆಲುವಿನಿಂ ಶಿಶುವನು ಸಮಪಾದದೊಳಾಗ । ಇಳೆಯಾಳ್ವನ ನಿಲಿಸಿ ಕುವರನ ॥ ೭೫ ॥

ಬಲದ ಭುಜವ ಕರಯುಗದೊಳು ಪಿಡಿದಾಗ । ಬಲಗಾಲನು ಮುಂದು ಮಾಡಿ ॥
ಇಳೆಯೊಳು ಉತ್ತರ ಮುಖವಾಗಿ ನಡೆಯಿಸಿ । ಬಲಗೊಂಡು ಹವನ ಕುಂಡವನು ॥ ೭೬ ॥

ಜಾಳಿಗೆ ಜಾಳಿಗೆಗಳ ದಾನವ ಕೊಟ್ಟು । ಭೂಲಲನೇಶ ಯಾಚಕರಿಗೆ ॥
ಲೀಲೆಯಿಂ ಮನ್ನಿಸಿ ಸುಖಸಾಗರದಲ್ಲಿ । ಓಲಾಡುತಲೊಪ್ಪಿದನು ॥ ೭೭ ॥

॥ ಇತಿ ಗಮನ ವಿಧಿಃ ॥

ವರುಷ ಮೂರಾಗಲು ಶಾಸ್ತ್ರೋಕ್ತ ಕ್ರಮದಿಂದ । ದೊರೆ ಚೌಲಕರ್ಮವ ಸುತಗೆ ॥
ಅರಮನೆಯೊಳು ಮಾಡಿ ಜಿನಮಂದಿರಕ್ಕೈದಿ । ಯರುಹನಿಗಭಿಷೇಕವೆಸಗಿ ॥ ೭೮ ॥

ಬಂಧುಗಳಿಗೆ ಭೋಜನವ ಮಾಡಿಸಿ ನೃ- । ಪೇಂದ್ರ ಪೌರರಿಗೆ ಪಡಿಯನು ॥
ಚಂದದಿಂ ಕೊಡಿಸಿ ಸುಖದೊಳೋಲಾಡುತ- । ಲಂದಿರುತಿರ್ದನೇನೆಂಬೆ ॥ ೭೯ ॥

॥ ಇತಿ ಚೌಲಕರ್ಮ ವಿಧಿಃ ॥

ವರುಷವೈದರೊಳು ಭೂಪಾಲ ಚೂಡಾಮಣಿ । ಎರಯಿಸಿ ಕುವರಗೆ ನೀರ ॥
ಮಿರುಗುವ ತೊಡವಿಂದ ಶೃಂಗಾರವ ಮಾಡಿ । ಕರಿಯ ಮಸ್ತಕವನಾರೋಹಿಸಿ ॥ ೮೦ ॥

ಪಲವು ವಾದ್ಯಂಗಳು ಭೋರ್ಮೊರೆಯುತಲಿರೆ । ಲಲನೆಯರಾಡೆ ನರ್ತನವ ॥
ಎಳೆವೆಂಗಳು ಕನ್ನಡಿ ಕಲಶಗಳಾಂತು । ತಳಿಯ ನೆಳಲೊಳು ಚೆಲ್ವಿಂದ ॥ ೮೧ ॥

ನಡೆ ಮಡಿಯೊಳು ಮುಂದೆ ನಡೆದು ಬರುತಲಿರೆ । ಬೆಡಗುಗಾತಿಯರು ಶೋಭನವ ॥
ಬಿಡದೆ ಪಾಡುತಲಿರೆ ದೊರೆದೊರೆಗಳು ಕೂಡಿ । ಪೊಡವಿಪ ಮೆರವಣಿಗೆಯನು ॥ ೮೨ ॥

ಪುರದೊಳು ಮಾಡಿಸಿ ಶಾಂತಿಜಿನೇಂದ್ರನ । ವರ ಚೈತ್ಯಗೃಹದತ್ತ ನಡೆದು ॥
ಬರೆ ಕರಿಶಿರದಿಂದ ಕುವರನ ಇಳಿಯಿಸಿ- । ಯರುಹನ ಮಂದಿರವೊಕ್ಕು ॥ ೮೩ ॥

ಕಡು ಭಕ್ತಿಯಿಂ ಮೂಮೆ ಬಲವಂದು ಜಿನಪತಿ- । ಯಡಿಗೆರಗಿಸಿ ಕುಮಾರಕನ ॥
ಮೃಡನ ವೈರಿಯ ವೈರಿಗಭಿಷೇಕವೆಸಗಿಸಿ । ಬಡಗ ಮುಖದಿ ಸ್ವರ್ಣಮಯದ ॥ ೮೪ ॥

ಪಲಗೆಯನಿರಿಸಿ ಹರಹಿ ತಂಡುಲವನು । ನಲವಿಂದ ಸಿದ್ಧಮಾತೃಕವ ॥
ಬಲದ ಹಸ್ತವ ಕುಮಾರಕನ ಯೋಗೀಶ್ವರ । ಚೆಲುವಿಂದ ಪಿಡಿದು ಬರೆಯಿಸಿ ॥ ೮೫ ॥

ವಸುಧೇಶ್ವರ ಜಿನರಾಜಮಲ್ಲನಿಗಾಗ । ಪೊಸ ಬಟ್ಟೆಯ ಸಿವಾಳಿಗಳ ॥
ಕುಶಲದಿಂದಿಟ್ಟಾಚಾರ್ಯರ ಚರಣಕೆ । ಹಸನಾಗಿ ಪೂಜೆಯನೆಸಗಿ ॥ ೮೬ ॥

ಮಿರುಗುವ ಕುಂಕುಮ ಗಂಧವ ಮುನಿಗಳ । ಚರಣಕೆ ಚರ್ಚನೆಗೈದು ॥
ಪರಿಪರಿ ಚಿನ್ನ ಬೆಳ್ಳಿಯ ಕುಸುಮಗಳನು । ಕರೆದನು ಭುಜ ಮಸ್ತಕದೊಳು ॥ ೮೭ ॥

ಪುರದೊಳು ವಸಂತವನು ಮಾಡಿಸಿಯಾಗ । ಪರಿಜನ ಬುಧ ವಂದಿಗಳಿಗೆ ॥
ಕರೆದು ಪೊಂಗಳ ನವರತ್ನದ ಮಳೆಗಳ । ದೊರೆರನ್ನ ಸುಖದೊಳೊಪ್ಪಿರಲು ॥ ೮೮ ॥

**॥ ಇತಿ ಅಕ್ಷರಾಭ್ಯಾಸ ವಿಧಿಃ ॥**

ಗುರುಸಮ್ಮುಖದೊಳಕಾರ ಮುಂತಾಗಿರ್ದ । ಮೆರೆವ ಹಕಾರಾಂತ್ಯವಾಗಿ ॥
ಮರೆದಿರ್ದುದ ತೋರಿ ಕೊಡೆ ವಿದ್ಯಾಯದಿ । ದೊರೆಮಗ ಕಲಿತ ಬೇಗದೊಳು ॥ ೮೯ ॥

ಹಲಗೆ ಕಡಿತ ಓಲೆ ಕಾಗದ ಕಂಠವ । ಬಳಹವ ಪಿಡಿದು ಬರೆವುತ ॥
ಸಲೆ ಜಾಣನಾಗಿ ಮಾತಾ-ಪಿತ-ಗುರುವಿನ । ತಳಿರಡಿಗಳಿಯಾಗಿಹನು ॥ ೯೦ ॥

ಶುಭ ದಿನದೊಳು ಜಿನಪತಿಗಭಿಷೇಕವ । ಪ್ರಭುಕುಲಶೇಖರನೆಸಗಿ ॥
ಇಭಶಿರದೊಳು ಪೊಂದಟ್ಟೆಯೊಳು ಪುಸ್ತಕವಿಡೆ । ರಭಸದೋರಿದವು ವಾದ್ಯಗಳು ॥ ೯೧ ॥

ಕೇರಿ ಕೇರಿಗಳೊಳು ಮೆರವಣಿಗೆಯು ಬಂದು । ಮರಾರಿಯ ಗೃಹಕಾಗಿ ॥
ಚಾರುವೈಭವದಿಂದ ಬರೆ ಗುರುವಿನ ಮುಂದೆ । ನೇರಾಣಿತಟ್ಟೆಯನಿರಿಸೆ ॥ ೯೨ ॥

ಹರಿಚಂದ್ರ ಕುವರನು ಜಿನನಿಗೆ ಪೊಡಮಟ್ಟು । ಗುರುವಿನ ಪಾದಕಮಲಕೆ ॥
ಶಿರವಿಟ್ಟು ಗುರುಸಮ್ಮುಖದೊಳು ಕುಳ್ಳಿರಲು । ಗುರುರಾಯ ಮಸ್ತಕವೆತ್ತಿ ॥ ೯೩ ॥

ವಿದ್ಯಾಪಾರಗ ನೀನಾಗು ವೈರಿಗ- । ಭೇದ್ಯ ಪರಾಕ್ರಮನಾಗು ॥
ಪ್ರದ್ಯುಮ್ನನಂತೆ ಕಾಂತಾನಿಕುರುಂಬಕೆ । ಹೃದ್ಯ ನೀನಾಗೆಂದು ಪರಸಿ ॥ ೯೪ ॥

ಪುಸ್ತಕವನು ಕುವರನ ಕೆಂಪಾಗಿರ್ದ । ಹಸ್ತಕಮಲದೊಳಗಿಟ್ಟು ॥
ಮಸ್ತಕದೊಳು ಗಂಧಾಕ್ಷತೆಯನು ಮುನಿ । ಸ್ವಸ್ತಿ ಎಂದೆನುತಲಿ ತಳಿಯೆ ॥ ೯೫ ॥

ಗಲಭೆನಿಂದುದು ಪುಸ್ತಕವ ಕುವರನಾಂತು । ಕಲಿಲವಿಜಯ ಮುನಿ ಮುಖವ ॥
ಗೆಲವಿಂದ ನೋಡುತಿರಲು ಮುನಿ ವೃಷಭನು । ಒಲಿದೋದಿಸಿದನಿಂತೆಂದು ॥ ೯೬ ॥

ಶ್ರೀ ಶಾಂತಿನಾಥಾಯ ನಮಃ ಪುಷ್ಪಚಾಪ ವಿ- । ನಾಶಾಯ ನಮೋ ನಮೋಽಸ್ತು ತೆ ॥
ಭಾಸುರ ಕೇವಲಜ್ಞಾನಜ್ಯೋತಿಷೇ ನಮೋ । ವಾಸವಾರ್ಚಿತ ನಮಸ್ತುಭ್ಯಂ ॥ ೯೭ ॥

ಎಂದು ಮುನೀಶ್ವರ ಮೊದಲುಚ್ಚರಿಸೆ ಜ್ಞಾ- । ನೇಂದು ಕುವರ ತಾ ಮುನ್ನ ॥
ಚಂದದಿಂ ಕಲಿತ ಪದ್ಯವನೋದುವಂತಾ- । ನಂದದಿಂ ಜಾಯ್ದೆರೆದೋದೆ ॥ ೯೮ ॥

ದೊರೆ ದೊರೆಗಳು ಕೇಳಿ ತಮ್ಮಯ ಶಿರಗಳ । ಭರದಿಯಲುಗಿಸಿ ಇಂತಪ್ಪ ॥
ಕಿರುವರೆಯದೊಳೋದುವ ಚಮತ್ಕಾರವ । ನೆರೆ ಜಾಣ್ಮೆಯಿಂತು ಪಡೆದನೋ ॥ ೯೯ ॥

ಜ್ಞಾನಚಂದ್ರನ ಕುಮಾರಕನಲ್ಲವೆ । ಜ್ಞಾನವಂತನೆಂಬುದೇನು ॥
ನಾನಾ ಪ್ರೌಢಿಗೆ ತೌರಲ್ಲವೆ ಎಂದು । ಮಾನವೇಶ್ವರರ್ಪೊಗಳಿದರು ॥ ೧೦೦ ॥

ಗುರುಜನವೆಲ್ಲವು ಪರಸಿ ಪೊಗಳಿದುದ । ನೆರೆದಿರ್ದ ಸಭೆ ಕೊಂಡಾಡೆ ॥
ದೊರೆ ದೊರೆಗಳು ಭಂಗಾರ ವಸ್ತ್ರಂಗಳ । ಹರಿಚಂದ್ರಗುಡುಗೊರೆಗೊಡಲು ॥ ೧೦೧ ॥

ನರನಾಥ ಸುತನ ಕೈಯಿಂ ಶ್ರುತಪೂಜೆಯ । ಎರಕದಿಂ ಮಾಡಿಸಿ ಬಳಿಕ ॥
ಪರಳು ಮುತ್ತಿನ ಮಣಿ ಬಿಗಿದೇಕರಂಗಿಯ । ಸರಿಗೆಯ ಶ್ರುತಪಾವಡೆಯ ॥ ೧೦೨ ॥

ಶ್ರುತದ ಮೇಲರ್ಚನೆಯನು ಮಾಡಿ ಕುವರನು । ಯತಿಗಳ ಪಾದಪೂಜೆಯನು ॥
ಅತಿಶಯದಿಂ ಮಾಡಿ ಬುಧಕವಿ ವಿಪ್ರರ್ಗೆ । ಶತಸಾಸಿರ ಪೊಂಗಳನು ॥ ೧೦೩ ॥

ಕರೆದಿತ್ತು ಸರ್ವರ ಮನ್ನಿಸಿ ರಾಯನು । ಹರಿಸದಿಂದರಮನೆಗೈದಿ ॥
ಪರಮ ಸುಖದೊಳೋಲಾಡುತ ನಿಜಸುತ । ಹರಿಚಂದ್ರಗೂಡಿರುತಿರಲು ॥ ೧೦೪ ॥

॥ ಇತಿ ಪುಸ್ತಕಗ್ರಹಣ ವಿಧಿಃ ॥

ಗುರುಸನ್ನಿಧಿಯೊಳು ಧಾತು ನಿಘಂಟುವ । ವರ ಛಂದೋಲಂಕಾರ ಕಾವ್ಯ ॥
ಭರತ ವ್ಯಾಕರಣ ಸಾಮುದ್ರಿಕ ಹಯ ಗಜ । ನರ ನವರತ್ನ ಪರೀಕ್ಷೆ ॥ ೧೦೫ ॥

ನೀತಿ ಶಾಸ್ತ್ರವ ಪ್ರಮಾಣ ಶಾಸ್ತ್ರಂಗಳ । ಜ್ಯೋತಿಷ್ಯ ವೈದ್ಯ ಮುಂತಾದ ॥
ಸಾತಿಶಯದ ವಿದ್ಯಂಗಳ ಕಲಿತು ವಿ- । ಖ್ಯಾತನಾದನು ಹರಿಚಂದ್ರ ॥ ೧೦೬ ॥

ಗರುಡಿ ಮನೆಯ ಹೊಕ್ಕು ಗದೆಯಾದಿ ಬತ್ತೀಸ। ತೆರದ ವಿದ್ಯೆಗಳನು ಕಲಿತು ॥
ಇರುತಿರೆ ಮೌಂಜೀಬಂಧನ ಹರಿಚಂದ್ರಗೆ। ದೊರೆ ಮಾಡಿಸಿದ ವೈಭವದಿ ॥ ೧೦೭ ॥

॥ ಇತಿ ಮೌಂಜೀಬಂಧನ ವಿಧಿಃ ॥

ತದನಂತರದೊಳು ಜ್ಞಾನೇಂದು ರಾಯನ। ಸುದತಿಯರಿಗೆ ಸಹಸ್ರ ॥
ಉದಯಾರ್ಕಸನ್ನಿಭ ಕಾಯದ ಕುವರರಾ-। ಗುದಿಸಿ ಬೆಳೆದರರ್ತಿಯೊಳು ॥ ೧೦೮ ॥

ನರನಾಥ ತನುಜರ್ಗೆ ಶಾಸ್ತ್ರ ಶಸ್ತ್ರಂಗಳ। ಕಿರಿವರೆಯದೊಳಗೆ ಕಲಿಸೆ ॥
ಹರಿಚಂದ್ರ ಕುವರಗೆ ಪ್ರಜ್ಞಪ್ತಿ ಮೊದಲಾದ। ವರ ವಿದ್ಯೆಗಳನಾಗ ಕಲಿಸಿ ॥ ೧೦೯ ॥

ಜನಪತಿ ಪುತ್ರರುಗಳ ಗೂಡಿ ಸುಖವನು। ಅನುಭವಿಸುತ ಇರಲಾಗಿ ॥
ಅನುಮತಿ ಕುವರನ ಪುಣ್ಯದೇಳ್ಗೆಯ ಕಂಡು। ಮನದಿ ಸೈರಿಸದೆ ದಾಯಿಗರು ॥ ೧೧೦ ॥

ಇರಿದು ಹಾಕುವೆವೆಂದನುವಾಗಿ ತಾವಿರ್ದು। ತೆರಪುಗಾಣದೆ ಮತ್ತೆಲ್ಲ ॥
ನೆರೆದಾಲೋಚನೆಯನು ಮಾಡಿದರಿಂತು। ಹರಿಚಂದ್ರನತಿಸೊಕ್ಕಿ ನಮ್ಮ ॥ ೧೧೧ ॥

ಪರಿಕಿಸಲತಿಧೂರ್ತ ಬಲಮಾನಸ ಗರ್ವಿ। ಕರುಣವಿಲ್ಲಾರೊಳಗವಗೆ ॥
ವರ ಬಂಧು ಕಂಟಕ ತೃಣಕಿಂತ ಲಘುವಾಗಿ। ದುರುಳ ಕಾಣ್ಬನು ನಮ್ಮೆಲ್ಲರನು ॥ ೧೧೨ ॥

ಅವನ ಕೊಂದಲ್ಲದೆ ಬದುಕೆಮಗಿಲ್ಲೆಂ-। ದವರೆಲ್ಲ ಯೋಚಿಸಿಕೊಂಡು ॥
ಕುವರನ ಕೂಡತಿ ಸ್ನೇಹದೊಳಿರ್ದೊಂದು। ದಿವಸದೊಳಿಂತು ನುಡಿದರು ॥ ೧೧೩ ॥

ಹರಿವಿಕ್ರಮಿ ಎಲೆ ಹರಿಚಂದ್ರ ! ಕೇಳೈ। ವರ ರತ್ನಮಯ ಕೂಟಗಿರಿಯ ॥
ದರಿಯ ಬಾಗಿಲೊಳು ರಾರಾಜಿಪ ರಸಾಲ-। ದುರುಫಲಗಳ ಸೇವಿಸಿದರೆ ॥ ೧೧೪ ॥

ಧರೆಯನೆಲ್ಲವನಾಳುವರು ಸಕಲ ವಿದ್ಯೆ। ಭರದಿ ಸೇರುವುದವರುಗಳ ॥
ಅರವಿಂದಸಖನಂತವರಂಗಚ್ಛವಿ। ಮಿರುಗುವುದದು ಕಾರಣದಿ ॥ ೧೧೫ ॥

ಕಡು ಬೇಗದಿಂ ಪೋಗುತಿವೆ ನಾವೆಲ್ಲ ನ-। ಮ್ಮೊಡನೆ ಬಾರೆಂದು ವಂಚನೆಯ ॥
ನುಡಿಯನವನೊಳಾಡಿ ನಂಬಿಸಿ ಕರೆದೊಯ್ದು। ಕೆಡುಕರವರು ಗಿರಿಯೇರಿ ॥ ೧೧೬ ॥

ಇನಿಸು ಬೇಗದಿ ಮಾವಿನಮರದೆಡೆಗೈದಿ। ಕನಕವರ್ಣದ ಪಣ್ಗಳನು ॥
ಮನದಕ್ಕರಿಂ ನಮ್ಮೊಳು ಕೊಯ್ದುಳುಹುವ। ಘನ ಸತ್ವನಾರೆಂದೆನಲು ॥ ೧೧೭ ॥

ಹರಿಚಂದ್ರಕುವರ ನಾನೇರುವೆನೆಂದಾ। ಗಿರಿಯಿಂದ ರವಿಬಿಂಬವನು ॥
ಒರಸುವ ಶಾಖೋಪಶಾಖೆಗಳಿಂದಲು। ಇರುವ ಮಾಕಂದವನೇರಿ ॥ ೧೧೮ ॥

ಭರದಿಂದ ಕುವರನೇರಿದ ಕೊಂಬೆಯ ಕಂಡು। ಕರುಣರಹಿತರು ಕರುಬರು ॥
ಪರಶುವಿನಿಂದ ಕಡಿದು ಕೊಂಬೆ ಛಿಟಲೆಂದು। ಮುರಿಯೆ ಕುಮಾರನು ಕೆಡೆದು ॥ ೧೧೯ ॥

ಗಿರಿಯಿಂದ ಕೆಳಗೆ ಪಾತಾಳಂಬರ ಮುಟ್ಟಿ। ಪಿರಿದು ಘೂರ್ಣಿಸಿ ಹರಿತರ್ಪ ॥
ಶರಧಿಯಂದದ ಹೊಳೆ ಮಡುವಿನೊಳಗೆ ಬಿರ್ದು। ಭರದಿ ಮುಳುಗುತ್ತಲೇಳುತ್ತ ॥ ೧೨೦ ॥

ಸುಳಿಯೊಳು ಸಿಲುಕಲು ಪಾತಾಳಕೌಕುತ । ಫಳಿಲನೆ ತೆರೆ ಮೇಲಕಿಡುತ ॥
ಹೊಳೆಯೊಳು ತೇಲಿ ಹೋಗುತಲಿರಲಿತ್ತಲಾ । ಖಳರು ಸಹಸ್ರ, ಕುವರರು ॥ ೧೨೧ ॥

ಗಿರಿಗುಹೆಗಿಡುಗಳೊಳೆಲ್ಲೆಲ್ಲಿ ತಾವಾಗ । ಅಱಸಿ ಕಾಣದೆ ಕುಮಾರಕನ ॥
ಸೊರಗಿ ಬೆಂಡಾಗಿ ಪಿತನ ಸಮೀಪಕೆ । ತುರಿಹದಿಂದಳುತಲೈತಂದು ॥ ೧೨೨ ॥

ಕರಗಳ ಮುಗಿದು ಕೈಕಾಲು ನಡುಗಿಸುತ । ಸ್ವರವ ಕುಂಠಿಸುತ ಭೀತಿಯೊಳು ॥
ನರನಾಥ ನೀ ಕೇಳು ವನದೊಳು ನಾವೆಲ್ಲ । ತಿರುಗುತಲಿರೆ ಹರಿಚಂದ್ರ ॥ ೧೨೩ ॥

ದುರುದುಂಬಿತನದಿಂ ನಮ್ಮೆಲ್ಲರ ವಚನವ- । ನುರೆಲಂಘಿಸಿ ಪಳತೊಂದು ॥
ಸರಸ ಚೂತವನೇರಿ ಪಲವು ಪಣ್ಣುಗಳನು । ಹರುಷದಿಂ ಮೆದ್ದು ದಣಿಯದೆ ॥ ೧೨೪ ॥

ಮಿಡಿಗಳ ಕಾಯ್ಗಳ ಪಣ್ಗಳ ಗೊಂಚಲ- । ದಡಿಗೊಂಡು ಸವರಿ ಕೊನೆಗಳ ॥
ಪಿಡಿದುಯ್ಯಲನಾಡುತಿರಲಾವು ಬೇಡೆನೆ । ಬಿಡು ನುಡಿಯಿಂದೆಮ್ಮ ಬೈಯುತ ॥ ೧೨೫ ॥

ಮಡವ ಗಂಟಿಕ್ಕಿ ಕೊನೆಯೊಳಾಡುತಿರೆ ಕೊನೆ । ಸಿಡಿಯಲು ಹರಿಚಂದ್ರ ಕೆಡೆದ ॥
ಒಡನೆ ಬಿದ್ದಿರ್ದ ತಾಣವ ನಾವು ಕಾಣದೆ । ಬಿಡದೆ ಕಾನನದೊಳು ತೊಳಲಿ ॥ ೧೨೬ ॥

ನರನಾಥ ಚಂದ್ರಮ ! ನಿನ್ನ ಸಮೀಪಕೆ । ಪರಿತಂದೆವು ಎಂದೆನಲು ॥
ಅರಸನಾ ನುಡಿಗೇಳಿ ಏನೇನೆಂದಾಗ । ಒರಗಿ ಕಂಬವ ಬೊಂಬೆಯಂತೆ ॥ ೧೨೭ ॥

ಧರೆಯ ನೋಡುತ ಮೌನದೊಳು ಕುಳಿತುಕೊಂ- । ಡಿರುತಿರೆ ಅವನ ದುಃಖವನು ॥
ಪರಿಕಿಪೆನೆಂದು ಸಾಸವೆಯು ಮೈಯೊಳು ಸೂಸೆ । ಹುರಿದಂತೆ ಛಿಟಿಛಿಟಿಲೆಂದು ॥ ೧೨೮ ॥

ಅರಳಿದವೆಂದೆನೆ ನೃಪನ ದುಃಖಕೆ ಇನ್ನು । ಸರಿಗಾಣೆ ಎಂತಾದೊಡರಸು ॥
ನೆರೆ ಜಾಣನಲ್ಲವೆ ಧೈರ್ಯ ಹೃದಯನಾಗಿ । ದೊರೆಗಾಣಿಸಲಿಲ್ಲ ಸಭೆಗೆ ॥ ೧೨೯ ॥

ನಂದನನಳಿದು ಹೋದನು ಎಂಬ ಸುದ್ದಿಯ । ಸೌಂದರಿಯನುಮತಿ ಕೇಳಿ ॥
ನೊಂದಳು ಬೆಂದಳಾಗಳಲಿ ಬಳಲಿದಳು । ನಂದಳು ಮೂರ್ಚ್ಛೆಗೆ ತಾನು ॥ ೧೩೦ ॥

ಕೆಳದಿಯರುಗಳಾಗ ಶೈತ್ಯೋಪಚಾರದಿಂ । ನಳಿನಾಕ್ಷಿಯುರುಪಚರಿಸೆ ॥
ಫಳಿಲನೆ ಮೂರ್ಚ್ಛೆ ತಿಳಿದು ಎದ್ದು ಶೋಕದಿಂ । ಪಲಬುತಲಿಂತು ನುಡಿದಳು ॥ ೧೩೧ ॥

ಹಾ ಹಾ ಕುರುವಂಶಾಂಬರ ದಿನಮಣಿ ! । ಹಾ ಹಾ ಕುವಲಯಚಂದ್ರ ! ॥
ಹಾ ಹಾ ಹಸುಳೆ ! ಕುಮಾರರ ತಲೆವಣಿ ! । ಹಾ ಹಾ ಚಿತ್ತಜರೂಪ ! ॥ ೧೩೨ ॥

ಹಾ ಹಾ ಸರಸತಿ ಮುಂಗೈಯರಗಿಳಿ ! । ಹಾ ಹಾ ಗೃಹಮಣಿದೀಪ !
ಹಾ ಹಾ ಸಂಗೀತ ಸಾಹಿತ್ಯ ಕೋವಿದ ! । ಹಾ ಹಾ ನನ್ನಯ ಪ್ರಾಣ ! ॥ ೧೩೩ ॥

ಹಾ ಹಾ ಗುಣಗುಣಾಭರಣಲಂಕೃತ ! । ಹಾ ಹಾ ಪೂರುಷರತ್ನ !
ಹಾ ಹಾ ಪೆಂಗಳ ಕಡೆಗಣ್ಣ ಶೃಂಗಾರ ! । ಹಾ ಹಾ ಸುರಭೂಜದಾನಿ ! ॥ ೧೩೪ ॥

ಹಾ ಹಾ ಅಂಗಣದೊಳಗಾಡುವರಸಂಚೆ ! । ಹಾ ಹಾ ರಿಪುವನದಹನ ! ॥
ಹಾ ಹಾ ಶೃಂಗಾರ ಶರಧಿಗೆ ಶಶಿಲೇಖೆ ! । ಹಾ ಹಾ ಸುರಗಿರಿಧೈರ್ಯ ! ॥ ೧೩೫ ॥

ಹಾ ಹಾ ಚೌಷಷ್ಠಿ ಕಲೆಗಳಿಗಾಧಾರ ! । ಹಾ ಹಾ ಬುಧಜನಮಿತ್ರ ! ॥
ಹಾ ಹಾ ವೀರಶಿಖಾಮಣಿ ! ಶುಕವಾಣಿ ! । ಹಾ ಹಾ ಕಂದನೆಂದಳಲಿ ॥ ೧೩೬ ॥

ಸುರತರುಣಿಯರು ನಿನ್ನಯ ಠೀವಿಯನು ಕಂಡು । ಭರದಿ ಕಟ್ಟೊಯ್ದರೋ ನಾಗ ॥
ತರುಣಿಯರ್ವಂಚಿಸಿ ಕೊಂಡುಪೋದರೋ ಕಾಣೆ। ಮುರುಕದ ನನ್ನ ಕಂದನನು ॥ ೧೩೭ ॥

ಜೋಯಿಸರುಗಳ ಕಾಂತೆಯರು ವಂಚಿಸಿಕೊಂಡು । ಜೋಯಿಸಲೋಕಕ್ಕೈದಿದರೋ ॥
ಕಾಯಜರೂಪ ! ನಿನ್ನನು ಕಾಣದೆ ಎನ್ನ। ಕಾಯವನೆಂತು ಪೊರೆವೆನೋ ॥ ೧೩೮ ॥

ಗಗನೇಚರಿಯರು ಕಡು ಚಪಲೆಯರ್ಗಳು । ಮಗನೆ ! ನಿನ್ನೊಯ್ದರೋ ಕಾಣೆ ॥
ಸುಗುಣ ! ಹಾ ಹಾ ಸುಜಾಣ ! ಹಾ ಹಾ ನನ್ನ । ನಗೆಮೊಗದರ್ಭಕ ! ಹಾ ಹಾ ॥ ೧೩೯ ॥

ಗರುಡಿ ಮನೆಗೆ ಹೋಗಿ ಕರೆತನ್ನಿರೊ ಎನ್ನ। ಮರಿಯಾನೆಯನೆಂಬ ನುಡಿಯು ॥
ಅರತು ಹೋದುದು ಈಗ ಹಾ ಬೆಂದ ವಿಧಿಯೆ ! ಈ- । ಪರಿಯ ಬೇಗೆಯ ಪುಟ್ಟಿಪರೆ ॥

ಓದುವ ಮಠಕ್ಕೈದಿ ಕರೆತನ್ನಿರೊ ಎನ್ನ । ಓದುವ ಅರಗಿಳಿ ಹಸಿದ ॥
ದಾದೀರ ಎಂದೆಂಬ ನುಡಿಯಡಗಿತು ಕಂದ !। ಹಾದಿತು ನನ್ನ ಜನ್ಮವನು ॥ ೧೪೧ ॥

ತಡೆದ ನನ್ನಯ ಕಂದ ವೈಹಾಳಿಗೆ ಹೋಗಿ । ಮಡದೀರ ನೋಡಿರೋ ಎಂಬ ॥
ಕಡೆಯ ಬಾಗಿಲಿ ನಿಂದು ನಿನ್ನ ಬರವ ನೋಳ್ಪ। ಕಡು ಬಿಂಕವಡಗಿತು ಕಂದ ! ॥ ೧೪೨ ॥

ಮುತ್ತಿನ ಚಾವಡಿಯಿಂದಲು ಬರುವಾಗ । ಹೆತ್ತ ತಂದೆಯ ಕೈವಿಡಿದು ॥
ಅಲ್ಲಿಯಿಂ ನಡೆದು ಬರುವ ಹೊನ್ನಬೊಂಬೆಯೆ ! । ಎತ್ತ ಹೋದೆಯೋ ನನ್ನ ಬಿಟ್ಟು ॥

ಮನೆಯೊಳಗೆಲ್ಲಿಯು ನಿನ್ನಯ ಹಾವಳಿ। ಘನವಾಗಿ ತುಂಬಿಕೊಂಡಿಹುದು ॥
ಇಸಿಸು ಕಾಣೆನು ನಿನ್ನ ದನಿಯ ನನ್ನಯ ಕಂದ !। ಮನೆ ಭಿನ್ನವಾಯ್ತೆಂದಳುವಳು ॥

ನೀನೇರುವ ವಾಜಿ ಹಮ್ಮಳಿಸುತಲಿದೆ। ಮೌನದೊಳಿದೆ ನಿನ್ನಾಳು ॥
ಏನ ಪೇಳುವೆ ನಿನ್ನ ಸಖರು ಮಂಕುಗಳಾಗಿ । ಜಾನಿಸುತಿಹರೆನ್ನ ಕಂದ ! ॥ ೧೪೫ ॥

ಮೆರೆವ ಬೊಗರಿ ಗರ್ದುಗ ಚೆಂಡ ತಾರೆಂದು । ಸೆರಗವಿಡಿದು ಚಂಡಿಗರೆವ ॥
ವರ ಬಾಲಕ ! ನನ್ನನು ಬಿಟ್ಟೆಲ್ಲಿಗೆ ಹೋದೆ । ತರಳೆ ಹಾ ಹಾ ಎಂದಳುವಳು ॥ ೧೪೬ ॥

ನೆರೆದು ಬಂದಹರಿ ದೊರೆಗಳ ಕುಮಾರರು । ವರ ಭೂಷಣವ ತೊಡಿಸಮ್ಮ ॥
ನಿರಿಯ ಪಿಡಿದು ಚಂಡಿಗೊಂಬ ಬಾಲಕನನು । ತೊರೆದು ನಾನೆಂತು ಸೈರಿಪೆನೋ ॥ ೧೪೭ ॥

ಮರಿಯಾನೆಯಂತೆ ತೈ ತೈ ಎಂದು ಕುಣಿವುತ। ಹರಿವಾಣದೊಳಗುಂಬಾಗ ॥
ಭರದಿಂದಲೋಡಿ ಬಂದೆನ್ನ ಕೈತುತ್ತನು। ಹರಿದುಕೊಂಬವರಿನ್ನಾರುಂಟು ॥ ೧೪೮ ॥

ಚರಣದಂದುಗೆಯ ಘಲಿರು ಘಲಿರೆನಿಸುತ । ಮರಿಸಿಂಹನಂತೆ ಹಾರುತ್ತ ॥
ಭರದಿಂದಲೈತಂದು ಮುತ್ತು ನನಗೆ ಕೊಟ್ಟು । ಸರಸದಂಬುಲಗೊಂಬರಾರು ॥ ೧೪೯

ತನುಜ ! ನನ್ನೊಳಗಿಷ್ಟು ಚಾಳಿ ಬೇಡವೊ ನಿನ್ನ । ತನುವ ತೋರಿಸಿ ಎಂತುಟೆನ್ನ
ತನುವ ರಕ್ಷಿಸು ಎಂದು ಬಿದ್ದು ಹೊರಳುತಿದ್ದ । ಅನುಮತಿಯನು ರಾಯ ಕಂಡು ॥ ೧೫೦

ಪಲವು ತೆರದ ವಚನಗಳಿಂದ ಹಲುಬುವ । ಲಲನೆಯ ಶೋಕವ ನಿಲಿಸಿ ॥
ಚೆಲುವರದೇವ ಬಂಟರ ದಿಕ್ಕು ದಿಕ್ಕಿಗೆ । ಕಳುಹಿಸಿ ತಾ ವನಕೈದಿ ॥ ೧೫೧

ಗಿಡುಗಿಡುದಪ್ಪದೆಯರಸಿ ಕುಮಾರನ । ಪೊಡವಿಪ ಕಾಣದೆ ಪೊಳಲ್ಗೆ ॥
ಕಡು ಬೇಗದಿಂ ಬಂದು ಚಿಂತೆಯೊಳಿರಲೊಂದು । ನುಡಿಯಾಯಿತಾಗಸದಲ್ಲಿ ॥ ೧೫೨

ನರನಾಥ ಚಿಂತೆಯ ಬಿಡು, ನಿನ್ನ ಕುವರನು । ಪರದೇಶವ ಪೊಕ್ಕು ಪಲವು ॥
ತರುಣಿಯರುಗಳನು ವರಿಸಿ ಪಲವು ದೇಶ- । ಕ್ಕರಸಾಗಿ ನಿನ್ನ ಚರಣವ ॥ ೧೫೩

ಕಾಣುವನಿದಕೆ ಸಂಶಯ ಬೇಡವೆಂದು ಗೀ- । ರ್ವಾಣವಾಕ್ಯಾಗಲು ಕೇಳಿ ॥
ಜಾಣರದೇವ ಸಂತಸವ ಮನದೊಳಾಂತು । ಕ್ಷೋಣಿಯನಾಳುತಲಿಹನು ॥ ೧೫೪

ಸುರಗಿರಿ ಸಮಧೀರ ಕೂಪಾರ ಗಂಭೀರ । ಸುರಭೂಜ ಸಮನಾದ ದಾನಿ ॥
ಸರಸತಿ ಮಣಿಹಾರ ಸಂಗರಾಂಗಣ ಶೂರ । ದೊರೆ ಜ್ಞಾನೇಂದೊಪ್ಪಿದ ಮಾರ ॥ ೧೫೫

॥ ಅಂತು ಸಂಧಿ ೨೭ಕ್ಕಂ ಪದ ೩೭೩೫ಕ್ಕಂ ಮಂಗಲಂ ॥

## ಷೋಡಶ ಭಾವನೆ.

ಭೂವರ ಜಿನಚಂದ್ರ ಮುನಿಯೊಳು ಷೋಡಶ । ಭಾವನೆಗಳ ಕೇಳ್ದುದೊರವೆ ॥

ಸರ್ವಾಮರವಂದಿತ ದಿವ್ಯ ಶ್ರೀಪಾದ । ಊರ್ವೀಶ ಪೂಜಿತ ಮಹಿಮ ! ॥
ದರ್ವೀಕರಾಧೀಶಕೃತ ಸ್ತೋತ್ರ **ಶಾಂತೀಶ** ! । ಗೀರ್ವಾಣಸುಖವೀವುದೆಮಗೆ ॥ ೧

ವಾಮಲೋಚನೆಯರಪಾಂಗ ಸಂಕಲೆಯೊಳು । ಭೂಮೀಶ್ವರ ತಾನು ಸಿಲುಕಿ ॥
ಪ್ರೇಮದೊಳಗೆ ಇರುತಿರಲಾಗ ಹಿಮಖುತು । ತಾ ಮೆಟ್ಟಿತು ಏನೆಂಬೆ ॥ ೨

ಸುರಪನ ದಿಕ್ಕಿಂದ ಬೀಸಿತು ತಂಗಾಳಿ । ಹರಿದುದು ಮೆಲ್ಲನೆ ಮೇಘ ॥
ಗಿರಿನದಿವನಭೂಮಿಗಳೊಳೆಲ್ಲೆಲ್ಲಿಯು । ಭರಿತವಾದುದು ಮಂಜುವಾಗ ॥ ೩

ಪರಮೇಶ ಹಿಮಕಳ್ಕಿ ಭಸ್ಮವ ದೇಹಕ್ಕೆ । ಧರಿಸಿ ಕೈರವದರಲಲ್ಲಿರ್ದ ॥
ಮೆರೆವ ವಿಭೂತಿ ಲೋಕವ ತುಂಬಿತೊ ಎನೆ । ಧರೆಯ ತುಂಬಿತು ಮಂಜಿನೊಡ್ಡು ॥ ೪

ವಿಜೇಶನೇರುವ ಗಜ ಶುಂಡಿಲನೆತ್ತಿ । ತವಕದಿಂ ಭುಸ್ಸೆಂದು ಸುರಿಯೆ ॥
ವಿಯ ಬಂದಾ ಸೀಕರ ಮುಸುಕಿತೊ ಎನೆ । ತವೆರಾಜಿಸಿದತ್ತು ತುಹಿನ ॥ ೫ ॥

ರಾಶರ ಮುನಿಯಂಬಿಗಿತ್ತಿಯ ತಾನು । ನೀರೊಳು ನೆರಿವೆನೆಂದೆನುತ ॥
ರಿಯ ಜನಗಳು ಕಾಣದಂತಿಕ್ಕಿದ । ಭೂರಿಭಸ್ಮದೊಲು ಮಂಜಿಹುದು ॥ ೬ ॥

ರಣಿಗೆ ಇನ್ನು ತೇಜಸ್ಸು ಕಡಿಮೆಯೆಂದು । ಶರಧಿಯ ಮಗನಬ್ಜದೊಳು ॥
ರಿವೆನೆನುತ ವಶೀಕರಣದ ಬೂದಿಯ । ಹರಹಿದನೆನೆ ಮಂಜಿಹುದು ॥ ೭ ॥

ರಿಯರಮನೆಯೊಕ್ಕು ಕೋಶದೊಳಗೆ ಇರ್ದ । ಪರಿಮಳವನ್ನು ಕಳಲೆಂದು ॥
ರಹಿದ ಶಿಶಿರ ತಸ್ಕರನ ಠಕ್ಕಿನ ಮಂತ್ರ । ವರ ಭಸ್ಮದೊಲು ಮಂಜಿಹುದು ॥ ೮ ॥

ಲನ ತಾಯಿತಾನರಳೆಯ ನೆಕ್ಕೆಕ್ಕಿ । ಸಾಲಾಗಿ ಹರಹಿದಂದದೊಳು ॥
ಲೋಕದೊಳೆಲ್ಲಿಂ ಮಂಜಿನ ಪುಂಜವು । ಓಲಾಡಿಹುದೇನೆಂಬೆ ॥೯ ॥

ರರಾಜ ರಟ್ಟೆಯ ಕಡಿಯಲಂದಿಂದಳ್ಕಿ । ಮರೆಯಲಿರ್ದೊಂದು ದಿಕ್ಕಿನೊಳು ॥
ರಿಗಳವನಿಯೊಳಃ ವ್ಯೆ ಬಂದವೊ ಎನೆ । ತರತರದಿಂ ಹಿಮ ಬಹವು ॥ ೧೦ ॥

ನನ ಕುದುರೆಗಳು ನೊರೆವಿಂಡುಗುಳುತ । ಅನಿಲನಂದದಿ ದುವ್ವಾಳಿಸುತ ॥
ನಪಥದಿಂದವನಿಗೆ ಇಳಿತಂದಂತೆ । ತೊನೆವುತೊಪ್ಪಿತು ಮಂಜೆಲ್ಲೆಲ್ಲಿ ॥ ೧೧ ॥

ರನದಿ ತಡಿಯೊಳಗೇಳೆಲೆವಾಳೆಲೆ । ಮುರುದೊರಗಿದ ಕರ್ಪುರವು ॥
ರುತ ತೀಡಲು ಬಂದು ಧರೆಯ ತೀವಿತೊ ಎನೆ । ಮೆರೆದುದು ಮಂಜಿನ ಪುಂಜ ॥ ೧೨ ॥

ಳೆಕೊಳ ಕೆರೆಕಟ್ಟೆ ಕಾಲುವೆಗಳ ನೀರು । ಛಳಿಗೆ ಬಲಿತು ಆಲಿಗಲ್ಲು ॥
ಳಿಕೆಯ್ವಕಠಿಣದಿಂ ಮುಟ್ಟಿದವರ ಕೈಯ । ಬೆರಳುಗಳನು ಕತ್ತರಿಪವು ॥ ೧೩ ॥

ರಿದೇವಿ ಹಿಮಕಳ್ಕಿ ಸರಸಿಯನುಳಿದು ತಾ । ಹರಿಯುರವನು ಸೇರಿದಳು ॥
ರಸಂಚೆ ಪದ್ಮಾಕರವನು ಪೊರ್ದದೆ । ಸರಸಿಜಭವನ ಸಾರಿದಳು ॥ ೧೪ ॥

ದಿ ತಾನು ಶೀತಕೆ ಬೆರ್ಚಿ ತನ್ನಾಲಯ । ಪದುಮವಿಷ್ಟರದಿಂದಿಳಿದು ॥
ದುಗುಟ್ಟುವ ಸಂಪಗೆಯ ಗದ್ದುಗೆಯೊಳು । ಸುದತಿವೆರಸು ಕುಳಿತಿಹನು ॥ ೧೫ ॥

ರಮೇಶ ಹಿಮಕಳ್ಕಿ ಗಿರಿಜೆಯನಪ್ಪಲು । ಧರೆಯ ಜನಂಗಳೆಂದಿಂದ ॥
ರನರ್ಧಾಂಗಿಯಾದಳು ಎಂದೆಂಬರು । ಒರವೆನೆ ನಾ ಹಿಮದಿರವ ॥ ೧೬ ॥

ಜನ್ಮಕೊಲ್ಲೆ ಇವಳನೆಂದು ಬಿಟ್ಟಿರ್ದ । ಭೋಜಗಮೆಲ್ಲನಾಗೋರ್ವ ॥
ಜೆಯಿಂ ಬಂದು ನಲ್ಲಳ ಕಾಲ್ಪಿಡಿದಾಗ । ತಾ ಜಾಣ್ಮೆಯಿಂದಪ್ಪಿದನು ॥ ೧೭ ॥

ರೆಯುಗಳ್ಕೆತಂದು ಪ್ರಿಯಳ ತೊರದರೆ । ತೆರೆ ಜಾರೆ ಹಿಮದೊಳು ಸ್ತನವು ॥
ರಸಿಜ ಮೊಗ್ಗೆಯಂತಿರೆ ಕಂಡು ನಲ್ಲನು । ತರುಣಿಯೆಂದಮರ್ದಪ್ಪುವನು ॥ ೧೮ ॥

ಧನಿದೋರಲಮ್ಮವು ನುಡಿವಕ್ಕಿ ಜಡಿವಕ್ಕಿ । ನುಡಿಯಲಮ್ಮರು ವಿಟರ್ತಮ್ಮ ॥
ವನಿತೆಯರೊಳು ಎಂದೆನೆಯಾ ಹಿಮದೊಂದು । ಘನತರ ಶೈತ್ಯವೇನೆಂಬೆ ॥ ೧೯ ॥

ಮುರುಟಿದುವಾಗ ಲತೆಯು ಗಿಡ ಕುಡಿಗಳು । ಹೊರಡಲಮ್ಮವು ಸಿಂಹ ಗುಹೆಯ ॥
ಹರಿಣವಿಂಡುಗಳಾಲದ ಮರಗಳ ಬಂದು । ಮರೆಗೊಂಡವು ಶೀತಕಳ್ಕಿ ॥ ೨೦ ॥

ಹರನುರಿಗಣ್ಣಿನ ಕಿಚ್ಚಡಗಿತು ಎಂದು । ಸ್ಮರ ಕೋಪಿಸಿ ತಾನೇಳ್ವ ॥
ಸ್ಮರನಂಬುಜ ಬಾಣಕೆರಗಿತೆಂದೀಶನು । ಭರದಿ ತ್ರಿಶೂಲವಿಡಿದನು ॥ ೨೧ ॥

ಕಡು ಶೈತ್ಯವಾದ ಇಂತಪ್ಪ ಹಿಮದೊಳಾಗ । ಪೊಡವೀಶ್ವರ ಜ್ಞಾನೇಂದು ॥
ಕಡು ನಲ್ಮೆಯಿಂ ತನ್ನ ಮಡದಿಯರುಗಳ ಪೊಂ- । ಗೊಡವೊಲಿಗೆರ್ದೆಗೊಟ್ಟೊಪ್ಪಿದನು ॥

ಸರಸಿಜದರಳನು ಸುರಹೊನ್ನೆ ಕುಸುಮವ । ಇರುವಂತಿಯ ಫುಲ್ಲವನು ॥
ಸರಸಿಜಪತ್ರದೊಳಗೆ ಪೊಟ್ಟಣಗಟ್ಟಿ । ಎರಕದಿಂದಾರಾಮಪಾಲ ॥ ೨೩ ॥

ಕರದೊಳಗಾಂತೋಲಗ ಶಾಲೆಯೊಳಪೊಕ್ಕು । ನರನಾಥ ಚಂದ್ರನ ಕಂಡು ॥
ಅರಳ ಪೊಟ್ಟಣಗಳ ಕಾಣಿಕೆಯನು ಕೊಟ್ಟು । ಧರಣಿಯಾಲಿಂಗನಗೈದು ॥ ೨೪ ॥

ನೊಸಲಿಗೆ ಕೈಗಳ ತಂದಾಗ ವನಪಾಲ । ವಸುಧೇಶ! ಬಿನ್ನಹವೀಗ ॥
ಕುಸುಮಾಸ್ತ್ರಮದಮರ್ದನ ಜಿನಚಂದಿರ । ಋಷಿರಾಯ ಬಂದೆಮ್ಮ ಪುರದ ॥ ೨೫ ॥

ವನದೊಳು ಹದಿನೆಂಟು ಸಾಸಿರ ಗಣನೆಯ । ಮುನಿಗಣ ಬಳಸಿಕೊಂಡಿರಲು ॥
ಮಿನುಗುವ ಚಂದ್ರಕಾಂತದ ಶಿಲೆಯೊಳು ನಿಂ- । ದನಘನ ಚಿಂತಿಸುತಹರೆ ॥ ೨೬ ॥

ಎಂದು ಬಿನ್ನವಿಸಲು ನೊಸಲಿಗೆ ಕರಗಳ । ತಂದು ಜಯತು ಜಯತೆಂದು ॥
ನಿಂದಾದಿಕ್ಕಿಗೆ ಏಳಡಿ ನಡೆದು ವ- । ಸುಂಧರವನು ಬಿಗಿಯಪ್ಪಿ ॥ ೨೭ ॥

ಒಸಗೆ ಪೇಳಿದನಿಗಾಗಂಗಚಿತ್ತವನಿತ್ತು । ವಸುಧೇಶಾನಂದ ಭೇರಿಯನು ॥
ಅಸವಸದಿಂ ದಾಂಘಣರೆಂದು ಪೊಡಯಿಸೆ । ಒಸಗೆಯೇ ಮರಳುಗೊಂಡಂತೆ ॥ ೨೮ ॥

ಕೌರವೇಶ್ವರ ಸಡಗರದಿಂ ಸಿಂಗರದೊಟ್ಟು । ವಾರಣಮಸ್ತಕವೇರಿ ॥
ಭೋರೆಂಬ ವಾದ್ಯ ಕೋಟಾಕೋಟಿ ಮೊಳಗಲು । ಧಾರುಣೀಶ್ವರ ಮುಂದೆ ನಡೆಯೆ ॥ ೨೯ ॥

ಅನುಮತಿ ಮೊದಲಾದಂತಃಪುರಜನ । ಘನರತ್ನ ಪಲ್ಲಕ್ಕಿಯೇರಿ ॥
ಜನನಾಥನ ಹಿಂತೆ ವಾದ್ಯದ ರಭಸದಿ । ಅನುರಾಗದಿಂ ಬರುತಿರಲು ॥ ೩೦ ॥

ಸಾಸಿರ ಮಂದಿ ಕುವರರು ಸಿಂಗರವಾಗಿ । ಸಾಸಿರಗಣ್ಣನಂದದೊಳು ॥
ಕೇಸರಿಗಮನದ ಕುದುರೆಯ ಕುಣಿಸುತ । ಸಾಸಿಗರಾಗಿ ಏರಿದರು ॥ ೩೧ ॥

ಪುರಜನವೆಲ್ಲವು ಭೇರಿಯರವ ಕೇಳಿ । ಹರಿಸದಿ ಮಜ್ಜನಗೈದು ॥
ಸುರುಚಿರ ವಸ್ತ್ರಾಭರಣಗಳನು ತೊಟ್ಟು । ಸರಸದಿಂದವೆ ಸಿಂಗರಿಸಿ ॥ ೩೨

ಕುಸುಮ ಫಲಾಕ್ಷತೆ ಚಂದನ ಸಾಂಬ್ರಾಣಿ । ಹೊಸತಾದ ಧೂಪ ಕುಂಕುಮವ ॥
ಕುಸುರಿಗೆಲಸದ ರನ್ನದ ಚಿನ್ನ ಬೆಳ್ಳಿಯ । ಹಸನಾದ ತಟ್ಟೆಲಿ ತೀವಿ ॥ ೩೩ ॥

ಕರಕಮಲದೊಳಾಂತು ಜಯ ಜಯವೆನುತಾಗ । ಪರಮ ಭಕ್ತಿಯೊಳು ಶ್ರಾವಕರು ॥
ವರ ಶ್ರಾವಕಿಯರು ಪಲ್ಲಕ್ಕಿ ರಥಗಳ । ತುರಗವಂದಣಗಳನೇರಿ ॥ ೩೪ ॥

ಮನದಕ್ಕರಿಂ ಬರೆ ಜನನಾಥ ನಡೆತಂದು । ವನಸನ್ನಿಧಿಯೊಳು ನಿಂದು ॥
ಅನಿಮಿಷೇಂದ್ರನವೊಲು ಗಜವನಿಳಿದು ಬಂದು । ಮುನಿಪನ ತಪದತಿಶಯದಿ ॥ ೩೫ ॥

ಹರಿಶಾಬಕಂಗಳು ತೊರೆದು ವೈರವ ತಮ್ಮ । ಹರಿಣಿಯ ಮೊಲೆಯುಣುತಿಹವು ॥
ಉರಗಂಗಳು ನವಿಲ್ಗಳ ಕೊರಳನು ಸುತ್ತಿ । ಚರಣದೊಳಾಡುತಲಿಹವು ॥ ೩೬ ॥

ಹರಿಣಿಯ ಮರಿಗಳ್ಗೆ ಪೆಣ್ಣ ಪೆರ್ಬುಲಿಗಳು । ಮುರುಕದಿಂ ಮೊಲೆಗೊಡುತಿಹವು ॥
ತೊರೆದು ವೈರವ ಹುಲಿಗಳ ಮರಿಗಳಿಗಾಗ । ಸರಗುಟ್ಟಿ ನೆಕ್ಕುತ ಪಶುವು ॥ ೩೭ ॥

ಕೊಡುತ ಮೊಲೆಗಳ ವಿನೋದವನಾಡುತ । ಬಿಡದೆ ಶಿರದೊಳು ಶಿರವನು ॥
ಮಡಗಿ ಮಲಗಿಕೊಂಡಿರುವುದ ರಾಜೇಂದ್ರ । ತಡೆಯದೆ ಕಂಡಾ ಮುನಿಯ ॥ ೩೮ ॥

ಪರಮ ಶಾಂತತೆಯ ಗುಣಕೆ ನೃಪ ಮೆಚ್ಚುತ । ಶಿರದೂಗುತ ನಡೆತಂದು ॥
ಗುರುಜನ ವಂದ್ಯನನತಿದೂರದೊಳಾ- । ಗರಮಗ ಕಂಡನಾ ಮುನಿಯ ॥ ೩೯ ॥

ಪರಿರಂಜಿಸುವ ನಕ್ಷತ್ರ ಮಧ್ಯದೊಳಿರ್ಪ । ಪರಿಪೂರ್ಣ ಚಂದ್ರನೆಂಬಂತೆ ॥
ಗುರುಜನಂಗಳ ಮಧ್ಯದೊಳು ರಾಜಿಸುತಿರ್ದ । ಗುರುಜಿನಚಂದ್ರನ ಕಂಡು ॥ ೪೦ ॥

ಶಶಿಕಾಂತ ಶಿಲೆಯೊಳು ತೊಳಗಿ ಬೆಳಗುತಿರ್ದ । ಋಷಿರಾಯನಂಗ ತೋರಿದುದು ॥
ಹಸನಾದ ಸಿದ್ಧಶಿಲೆಯೊಳಿರ್ದ ಸಿದ್ಧರ । ಎಸೆವ ಮೂರುತಿಯೋ ಎಂಬಂತೆ ॥ ೪೧ ॥

ಪಳುಕಿನ ಶಿಲೆಯ ಮೇಲಿರ್ದ ಮುನೀಂದ್ರನ । ಪೊಳೆವ ಮೂರುತಿಯು ಕಾಣಿಸಿತು ॥
ಬಿಳಿಯ ತಾವರೆಯ ಮೇಲೆಸೆವಾದಿ ಬ್ರಹ್ಮನ । ಮಳದೂರ ದಿವ್ಯಾಂಗದಂತೆ ॥ ೪೨ ॥

ಅರುಣ ಕಂಕೇಲಿಯ ನೆಳಲೊಳೋಲಗಗೊಟ್ಟು । ಪರಮ ಮುನೀಂದ್ರನೊಪ್ಪಿದನು ॥
ವರ ಸಂಧ್ಯಾರಾಗದ ಮುಗಿಲೊಳು ಬೆಳಗುವ । ತರಣಿಮಂಡಲವೋ ಎಂಬಂತೆ ॥ ೪೩ ॥

ಮಿನುಗುವ ಕರ್ಣಪೂರದ ಲತಾಂತವು । ಮುನಿಯ ಮೇಲೋಗಲೊಪ್ಪಿದವು ॥
ಕನಕಾದ್ರಿಯ ಮೇಲೆ ಕೌಚಿಕೊಂಡಿರುತಿರ್ದ । ಇನನ ಕಿರಣವೊ ಎಂಬಂತೆ ॥ ೪೪ ॥

ಮುನಿಪನಂಗದೊಳು ಪತ್ತಿದ ತುಹಿನಂಗಳ । ಪರಿಗೊಂಡಣವೊಪ್ಪಿದುದು ॥
ಕನಕಾಚಲದೊಳಲ್ಲಲ್ಲಿ ಪೊಳೆವುತಿ- । ರ್ಪನುಪಮ ವಜ್ರವೆಂಬಂತೆ ॥ ೪೫ ॥

ಮುನಿಪತಿಯುರದೊಳು ಮಂಜಿನ ಪುಂಜದ । ಮಿನುಗುವ ಸಾಲೊಪ್ಪಿದುದು ॥
ಮನಸೋತು ಮೋಕ್ಷಾಂಗನೆ ಮಂದಾರದ । ನನೆಯ ಮಾಲೆಯನಿಟ್ಟಂತೆ ॥ ೪೬ ॥

ಗುರು ಜಿನಚಂದ್ರನ ಹಸ್ತ ನಖಗಳಿಂದ । ಸುರಿವ ಮಂಜಿನ ಪನಿಯಿಹವು ॥
ಪರಮ ತಪದಿ ಪುಟ್ಟಿದ ಶಾಂತರಸ ಪೆರ್ಚಿ । ಧರೆಗೆ ಸುರಿವುದೋ ಎಂಬಂತೆ ॥ ೪೭ ॥

ದುರಿತಾರಿ ಜಿನಪನ ಪರಮ ಮೂರುತಿಯೊಳು । ಧರಿಸಿದ ಮಂಜು ರಾಜಿಸಿತು ॥
ವರ ತಪೋಂಗನೆಯಾಲಿಂಗಿಸೆ ಪತ್ತಿದ । ಮೆರೆವ ಕತ್ತುರಿ ಲೇಪದಂತೆ ॥ ೪೮ ॥

ಮುನಿ ಪರಮಾತ್ಮನ ಧ್ಯಾನಿಸೆ ಒಳಗಿರ್ದ । ಘನದುರಿತವು ನಿಲ್ಲದಂಜಿ ॥
ಇನಿಸುಬೇಗದಿ ಹೊರಹೊಮ್ಮಿತ್ತೋ ಎಂದೆನೆ । ಮುನಿಪನಂಗದಿ ಮಣ್ಣಿಹುದು ॥ ೪೯ ॥

ಮನಸಿಜ ಕುವಲಯರೋಪಣದಿಂದಿಡೆ । ಮುನಿಯ ತಾಗದೆ ಮುಂದೆ ನಿಂದು ॥
ಮುನಿಯ ಶಾಂತಿಯ ನೋಡುತಲಿರ್ದುವೊ ಎನೆ । ಘನವಾದ ಕುಂಚ ಮುಂದಿಹುದು ॥ ೫೦ ॥

ದೋಷಾಕರನೆಂಬ ಪೆಸರ ಕೆಡಿಪೆನೆಂ- । ದಾ ಸಂಯಮಿಯ ಸೇವೆಯನು ॥
ಲೇಸಾಗಿ ಮಾಡಲು ಬಂದ ಶಶಿಯೊ ಎನೆ । ಭಾಸಿಪುದೆಡದ ಗುಂಡಿಗೆಯು ॥ ೫೧ ॥

ಮನವ ಪುರ್ವಿನ ಕೊನೆಯೊಳಗಿಟ್ಟು ಯೋಗೀಂದ್ರ । ನೆನೆವ ಮೋಕ್ಷಾಗ್ರದೊಳಿಟ್ಟು ॥
ಮಿನುಗುವ ಅರೆಗಣ್ಣ ನಾಸಾಗ್ರದೊಳಿಟ್ಟು । ಮುನಿಪರಮನ ನೋಡುತಿರಲು ॥ ೫೨ ॥

ಜನನಾಥಸಿಂತಪ್ಪತಿಶಯಗಳ ತಾನು । ಮನದಕ್ಕರಿಂ ನೋಡುತ್ತೈದಿ ॥
ಮುನಿರಾಯನ ಮೂಮೆ ಬಲವಂದು ವಂದಿಸಿ । ಘನಭಕ್ತಿಯಿಂ ನುತಿಗೈದು ॥ ೫೩ ॥

ನರನಾಥಚಂದ್ರಮ ಮುನಿವೃಷಭನ ದಿವ್ಯ । ವರ ದೇಹವ ಸಿಟ್ಟಿಸುತ ॥
ಪರಮಾನಂದದ ಕಡಲೊಳು ಮುಳುಗುತ । ಘನಸುಖವನು ಪೊಂದಿದನು ॥ ೫೪ ॥

ಮುನಿಯ ಮುಖೇಂದುವ ಕಾಣಲೊಡನೆ ಹಸ್ತ । ವನರುಹ ಮುಗಿದವು ನೃಪನ ॥
ಮಿನುಗುವ ನಯನಗಳೆಂದೆಂಬ ಕೈರವ । ಘನವಾಗರಳಿದವು ಸಹಜ ॥ ೫೫ ॥

ಮುನಿರಾಯಕುಂಜರ ಸಿದ್ಧಕ್ಷೇತ್ರದೊಳಿರ್ದ । ನೆನೆವ ತನ್ನಂಗಕೆ ತಂದು ॥
ಅನುಪಮ ಧ್ಯಾನವಿಸರ್ಜನೆಯನು ಮಾ- । ಡಿನಿಸುಬೇಗಗಿ ಕಣ್ದೆರೆದು ॥ ೫೬ ॥

ಮುನಿನಾಥನು ನೋಡೆ ಕಣ್ಗಳ ಕಾಂತಿಯು । ಮನುಜೇಶನ ಮೇಲೆ ಮುಸುಕೆ ॥
ಇನನ ಕಿರಣ ಸೋಂಕಿದ ಪದ್ಮವಲರ್ವಂತೆ । ಜನಪತಿ ಮೊಗ ನಗುತಿಹುದು ॥ ೫೭ ॥

ಪರಮ ಭಕ್ತಿಯೊಳು ಜ್ಞಾನೇಂದು ಸಾಷ್ಟಾಂಗವ । ದೊರೆದೊರೆಗಳು ಸಹ ತಾನು ॥
ಹರುಷದೊಳೆರಗಿ ನೊಸಲಿಗೆ ಕೈಗಳ ತಂದು । ಗುರುವಿನ ಮುಂದೆ ನಿಂದಿರ್ಪಲು ॥ ೫೮ ॥

ರದನದ ರುಚಿ ದೆಸೆದೆಸೆಗಳ ಪಸರಿಸೆ । ಸದಮಲಬೋಧಸಂಯುತನು ॥
ಉದಯಾರ್ಕಸಮ ಕೇವಲಜ್ಞಾನವು ಭೂ- । ಸುದತೀಶ ! ನಿನಗಾಗಲೆಂದು ॥ ೫೯ ॥

ಪರಸಿ ಮತ್ತುಳಿದ ಭೂಪಾಲರ್ಗೆ ಭವ್ಯರ್ಗೆ । 'ವರ ಧರ್ಮವೃದ್ಧಿರಸ್ತೆ'ಂದು ॥
ನಿರವಿಸಿ ಶಶಿಕಾಂತ ಶಿಲೆಯೊಳು ಯೋಗೀಶ । ಹರಿಸದಿಂ ಕುಳಿರೆ ಜ್ಞಾನೇಂದು ॥ ೬೦ ॥

ಜಲವಾದಿ ಫಲವಂತ್ಯಾನರ್ಘ್ಯವಸ್ತುಗಳಿಂದ । ಕಲಿಲಾರಿ ಜಿನಚಂದ್ರ ಮುನಿಯ ॥
ತಳಿರಡಿಗಳ ಭಕ್ತಿಭರದಿಂದ ಪೂಜಿಸಿ । ಗೆಲವಿಂದ ವಂದನೆ ಮಾಡಿ ॥ ೬೧ ॥

ಉಳಿದ ಯಮಿಗಳ ಕೇಸಡಿ ಜವಳಿಗಳಿಗೆ । ಘಳಿಲನೆರಗಿ ಪರಕೆಗಳ ॥
ತಳೆದು ನೃಪರು ಮಂತ್ರಿ ಶ್ರಾವಕರೊಡಗೂಡಿ । ಇಳೆಯಾಣ್ಮ ಕುಳಿತು ಲೀಲೆಯೊಳು ॥ ೬೨ ॥

ಕಿರಣದ ಗೊಂದಣ ಇನನ ಬಳಸಿಕೊಂ- । ಡಿರುವಂತೆ ಜ್ಞಾನಚಂದ್ರಮನ ॥
ತರುಣಾರ್ಕತೇಜರು ಸಾಸಿರ ಕುವರರು । ಪರಿವೇಷ್ಟಿಸಿ ಕುಳಿತಿಹರು ॥ ೬೩ ॥

ಸುರರು ಬಳಸಿಕೊಂಡಿರೆ ವೃಗಣ್ಣನು । ಮೆರೆವ ಸಮವಸರಣದೊಳು ॥
ಅರಹಂತನೋಲಗಿಪಂತೆ ಸುತ್ತಿರೆ ನೃಪ- । ರೆರೆಯನೋಲಗಿಪ ಸ್ವಗುರುವ ॥ ೬೪ ॥

ಕರಗಳ ಮುಗಿದು ಧರ್ಮಾಧರ್ಮದಿರವನು । ಧರಣೀಶ್ವರ ಬೆಸಗೊಂಡು ॥
ಅರಿಕೆತನಗೆಯುಂಟಾದರು ಭವ್ಯರು । ಎರಕದಿಂ ಕೇಳಬೇಕೆಂದು ॥ ೬೫ ॥

ಸ್ಮರಮರ್ದನ ಕರುಣಾರ್ಣವ ಚಂದಿರ । ಸುರನರ ಪೂಜಿತ ಚರಣ ॥
ಗುರುಜನ ನತಪಾದ ! ಎಲೆ ಜತಿರಾಯನೇ ! । ಪರಮ ಷೋಡಶ ಭಾವನೆಯ ॥ ೬೬ ॥

ತೆರನ ನಿರೂಪಿಸಿ ಎಂದು ಬಿನ್ನವಿಸಿದ । ನರನಾಥನೊಡನೆ ಮುನೀಂದ್ರ ॥
ಒರೆದನೆಲೆ ಭವ್ಯ ಪುಂಡರೀಕನೆ ! ಕೇಳು । ಸರಗಮೋಕ್ಷಕೆ ಬೀಜವಾದ ॥ ೬೭ ॥

ಪರಮ ಧರ್ಮವ ಕೇಳೆ ಭಳಿರೆ ಭಾಪುರೆ ! ಎಂದು । ಪುರುಷಸಿಂಹನ ಕೊಂಡಾಡಿ ॥
ನಿರವಿಸಿದನು ಷೋಡಶ ಕಾರಣಂಗಳ । ತೆರೆದರುಶನದಿ ಭೂಭುಜಗೆ ॥ ೬೮ ॥

ದರುಶನವಿಶುದ್ಧಿ ವಿನಯಸಂಪನ್ನತೆ । ವರ ಶೀಲೇಷ್ವನತಿಚಾರ ॥
ಪರಮಾಭೀಕ್ಷ್ಣಜ್ಞಾನೋಪಯೋಗವು । ಮೆರೆವ ಸಂಯೋಗವು ಮತ್ತೆ ॥ ೬೯ ॥

ವರ ಶಕ್ತಿತಸ್ತ್ಯಾಗ ತಪಸು ಸಮಾಧಿಯು । ಪರಮ ವೈಯ್ಯಾವೃತ್ಯಕರಣ ॥
ಅರುಹದಾಚಾರ್ಯಭಕ್ತಿಯು ಬಹುಶ್ರುತಭಕ್ತಿ । ಸುರುಚಿರ ಪ್ರವಚನಭಕ್ತಿ ॥ ೭೦ ॥

ಪಿರಿದೆನಿಪಾವಶ್ಯಕಪರಿಹಾಣಿಯು । ಮೆರೆವ ಮಾರ್ಗಪ್ರಭಾವನೆಯು ॥
ಪರಮ ಪ್ರವಚನವತ್ಸಲತ್ವಗಳೆಂಬೀ । ವರ ಷೋಡಶ ಭಾವನೆಗಳು ॥ ೭೧ ॥

ವಿವರಣವನು ಒಂದೊಂದಾಗಿ ಬೇರಿಟ್ಟು । ವಿವರಿಸುವೆನು ಚೆನ್ನಾಗಿ ॥
ಭವಸಾಗರೋತ್ತಾರಣತರಂಡಕ । ಭುವನಭುಂಭುಕ ! ಲಾಲಿಪುದು ॥ ೭೨ ॥

ಎಂಟಂಗದೊಡಗೂಡಿರುವುದು ಶಂಕಾದಿ । ಎಂಟು ದೋಷೋಜ್ಝಿತವಾಗಿ ॥
ಗೆಂಟು ಮಾಡಿರುವದು ಗರ್ವಮೂಢಂಗಳ । ದಾಂಟಿಸುವುದು ಭವಾಬ್ಧಿಯನು ॥ ೭೩ ॥

ಅರನಾಯತನ ಸೇವೆಗಳಿಂದಗಲಿದುದು । ಚಾರು **ದರುಶನವಿಶುದ್ಧಿ** ॥
ಸೇರಿಸುವುದು ಇದು ಮುಕ್ತಿಯ ಮೊದಲಿನ । ಭಾರಿಯ ಭಾವನೆಯರಸ ! ॥ ೭೪ ॥

ಸುರುಚಿರ ಸಮ್ಯಗ್ದರ್ಶನ ಜ್ಞಾನವು । ವರ ಚಾರಿತ್ರ ತಪಗಳ ॥
ಧರಿಸಿ ಧರಿಯಿಸಿ ಶ್ರಾವಿಕೆಯಜ್ಜಿಕೆಯರು । ಪರಮ ಶ್ರಾವಕ ಜನರೊಳಗೆ ॥ ೭೫ ॥

ಮನವಚನಂಗಶುದ್ಧಿಯೊಳವರ್ಕಂಡೊಡೆ । ವಿನಯ ಸತ್ಕಾರ ವಂದನೆಯ ॥
ಮನದಕ್ಕರಿಂದ ತಾ ಮಾಡುವುದೆರಡನೆ । **ವಿನಯಸಂಪನ್ನತೆ** ಭವ್ಯ ! ॥ ೭೬ ॥

ಅತಿಶಯವಾದ ಶೀಲಗಳೊಂದುಗೂಡಿದ । ವ್ರತ ಪಂಚಕ ಸಹವಾದ ॥
ನುತ ಪಂಚವಿಂಶತಿ ಕ್ರಿಯೆಯೊಡಗೂಡಿದ । ಹತಿಸಿ ಕ್ರೋಧಾದಿ ನಾಲ್ಕುವನು ॥ ೭೭ ॥

ನಿರುತದಿಂದಲೆ ಮನೋವಚನಾಂಗದಿ ಪರಿ- । ಶುದ್ಧಿಯಿಂದಾಚರಿಪುವುದು ॥
ಪರಮ **ಶೀಲವ್ರತದಲನತಿಚಾರವೆಂ**- । ಬುದು ಮೂರನೆಯ ಭಾವನೆಯು ॥ ೭೮ ॥

ಪರಮ ಪ್ರತ್ಯಕ್ಷ ಪರೋಕ್ಷ ಲಕ್ಷಣವಾದ । ನಿರವದ್ಯವಾದೇಳು ತತ್ವ ॥
ಸುರುಚಿರ ನವ ಪದಾರ್ಥವಿಷಯವಾದ । ವರ ಹಿತ ಸಂಪ್ರಾಪ್ತಿ ಅಹಿತ ॥ ೭೯ ॥

ಪರಿಹಾರವಜ್ಞಾನ ನಿವೃತ್ತಿಕಾರಣ । ಪರಮಾಭ್ಯುದಯ ನಿಃಶ್ರೇಯಸದ ॥
ನಿರತಾಭಿ ಫಲದಾಯಿ ಮತಿಶ್ರುತಾವಧಿಯಾದಿ । ವರ ಬೋಧವನಾವಾಗ ॥ ೮೦ ॥

ಸೇವೆಯ**ಭೀಕ್ಷ್ಣ ಜ್ಞಾನೋಪಯೋಗ**ವು । ಭಾವನೆ ಇದು ನಾಲ್ಕನೆಯದು ॥
ಪಾವನ ಚಾರಿತ್ರ ವರ ಪವಿತ್ರ ಗಾತ್ರ । ಭಾವಿಸು ಮೋಕ್ಷರಸಿಕನೆ ! ॥ ೮೧ ॥

ಶಾರೀರಮಾನಸಾಗಂತುಕ ಮೊದಲಾದ । ಘೋರದುಃಖಕೆ ಪಕ್ಕಾದ ॥
ಭೂರಿವಸ್ತುಗಳನಿಷ್ಟಾನಿಷ್ಟದೊಳಗಾದ । ಕ್ರೂರ ವ್ಯಥೆಗೆ ನೆಲೆಯಾದ ॥ ೮೨ ॥

ಭವವತಿ ಕಷ್ಟವೆಂದೆನುತ ಭಾವಿಸುವುದು । ಯುವತಿಯರಾದಿವಸ್ತುವಿಲಿ ॥
ತವಕದಿಂದಲಿ ವಿರಕ್ತಿಗೊಳಿಪುದದು । ಕುವರ ! **ಸಂವೇಗ**ವೈದನೆಯ ॥ ೮೩ ॥

ತನ್ನ ಶಕ್ತಿಯನು ಮರೆಯಿಸದೆ ಚತುರ್ವಿಧ- । ದುನ್ನತದಾನವ ಮುದದಿ ॥
ಸನ್ನುತ ಮಧ್ಯಮೋತ್ಕೃಷ್ಟಾದಿ ಪಾತ್ರನ । ಮನ್ನಿಸಿ ಭಯಭಕ್ತಿಯಿಂದ ॥ ೮೪ ॥

ಕರ ಮುಟ್ಟಿ ಕೊಡುವುದು ಬೋಧಿಸಿ ಪರರನು । ಎರಕದಿಂ ಕೊಡಿಸುವುದವರು ॥
ಇರದೀವ ದಾನಕೆ ಸಂತೋಷಬಡುವುದು । ದೊರೆ ಇದು **ತ್ಯಾಗಭಾವನೆಯು** ॥ ೮೫ ॥

ಸುರನರಫಣಿಪರ ಭಾಗ್ಯಕೆ ರೂಪಿಗೆ । ಹರಿಯಗೊಡದೆ ತನ್ನ ಮನವ ॥
ವರ ಮೋಕ್ಷಕಾಂಕ್ಷೆಯಿಂ ನಡೆವುದು ದ್ವಾದಶ । ತೆರನಾದ **ಪರಮತಪ**ದೊಳು ॥ ೮೬ ॥

ಮರಸದೆ ತನ್ನ ಶಕ್ತಿಯ ಭಕ್ತಿಯೊಡಗೂಡಿ । ಅರ್ಹನ್ಮತಕೆ ವಿರೋಧವನು ॥
ತರದೆ ನಿರತಿಚಾರದೊಳಗಾಚರಿಪುದು । ದೊರೆಯೆ ಏಳನೆಯ ಭಾವನೆಯು ॥ ೮೭ ॥

ಗಿರಿ ಗುಹೆ ನದಿ ವೃಕ್ಷ ಕೋಡುಗಲ್ಲೊಳು ಭಯಂ- । ಕರವಾದ ರುದ್ರಭೂಮಿಯೊಳು ॥
ಸುರುಚಿರ ತಪದೊಳಾಚರಿಸುವ ಮುನಿಗಳ್ಗೆ । ಪರಮೋಪಸರ್ಗವು ಬರಲು ॥ ೮೮ ॥

ನಾನಾ ತೆರದಿಂದ ಪರಿಹಾರವ ಮಾಡಿ । ಧ್ಯಾನಾಧ್ಯಯನದೊಳವರ ॥
ತಾ ನಿಲಿಸುವುದು **ಸಮಾಧಿ** ಎಂಬೆಂಟನೆ । ಮಾನಿತ ಭಾವನೆಯರಸ ! ॥ ೮೯ ॥

ಜ್ವರ ಕುಷ್ಠೋದರ ಗುಲ್ಮ ಭಗಂದರ । ಪಿರಿದೆನಿಸುವ ಶ್ವಾಸಖಾಸ ॥
ಶಿರದ ವೇದನೆ ವಾತಪಿತ್ಥಶ್ಲೇಷ್ಮಂಗಳು । ಗುರು ಜನಂಗಳ ಪೀಡಿಸಲು ॥ ೯೦ ॥

ಅಂದು ಭೈಷಜ್ಯಮಾಹಾರ ಸೇವೆಗಳಾದಿ । ಪರಮ ವೈಯ್ಯಾವೃತ್ಯವನು ॥
ಕರುಣದಿ ಮಾಳ್ಪುದು **ವೈಯ್ಯಾವೃತ್ಯ**ವೆಂ- । ಬುರು ನವಭಾವನೆಯರಸ ! ॥ ೯೧ ॥

ನಡೆವಲ್ಲಿ ನುಡಿವಲ್ಲಿ ಕೊಡುವಲ್ಲಿ ಪಡೆವಲ್ಲಿ । ಒಡನೆ ತಾ ಜಿನ ಜಿನ ಎಂದು ॥
ಬಿಡದೆ ವಾಚಿಪು**ದರ್ಹದ್ಭಕ್ತಿ** ಎಂಬುದು । ಪೊಡವಿಪ ! ದಶಮ ಭಾವನೆಯು ॥ ೯೨ ॥

ಅರುಹನ್ಮತದ ಮುನೀಂದ್ರರ ಸೇವೆಯು । ಸ್ವರ್ಮೋಕ್ಷಕೆ ಬೀಜವೆಂದು ॥
ಪಿರಿದಪ್ಪ ಭಕ್ತಿಯನವರೊಳು ಮಾಡುತ । ಎರಕದಿಂದಲಿ ತ್ರಿಕಾಲದೊಳು ॥ ೯೩ ॥

ವಿನಯವಂದನೆ ನುಡಿಗಳನು ಮಾಡುವುದದು । ಘನವಾದ ಪನ್ನೊಂದನೆಯು ॥
ಅನುಪ**ಮಾಚಾರ್ಯಭಕ್ತಿ**ಯು ಇದು ಕೇಳೆಲೆ। ಮನುಮುನಿಚರಿತ ರಾಜೇಂದ್ರ ! ॥ ೯೪ ॥

ಸ್ವಸಮಯ ಪರಸಮಯದ ಶಾಸ್ತ್ರಗಳೊಳು । ಕುಶಲನಾಗಿಯು ಧರ್ಮವನು ॥
ಹಸನಾಗಿ ಭವ್ಯಜನರಿಗುಪದೇಶನ। ಎಸಕದಿಂ ಮಾಡಿ ಮೋಕ್ಷಕ್ಕೆ ॥ ೯೫ ॥

ವರ ಮಾರ್ಗವ ತೋರುವ ಬಹುಶ್ರುತರೊಳು । ಪಿರಿದು ಭಕ್ತಿಯನು ಮಾಡುವುದು ॥
ಸುರಭೂಜ ಸಮದಾನಿ ! ಲಾಲಿಸು ಇದು ಪ- । ನ್ನೆರಡನೆ **ಬಹುಶ್ರುತಭಕ್ತಿ** ॥ ೯೬ ॥

ಈರೇಳು ಪೂರ್ವಷಡ್ದ್ರವ್ಯಷಣ್ಣಯಗಳ- । ನೀರಾರು ಭೇದದ ಶ್ರುತವು ॥
ಈರೇಳು ತರದ ಗುಣಸ್ಥಾನಂಗಳು । ಚಾರು ಮಾರ್ಗಣ ಸ್ಥಾನಗಳು ॥ ೯೭ ॥

ಪರಮ ತತ್ತ್ವಂಗಳು ನವಪದಾರ್ಥಂಗಳು । ಒರೆದು ಬರುವು**ದಾಗಮವು** ॥
**ಎರಕದಿಂದದನು ನಂಬುವುದು** ತ್ರಯೋದಶ । ವರ ಭಾವನೆ ಕೇಳರಸ ! ॥ ೯೮ ॥

ಶಮತಾ ಸ್ತುತಿವಂದನೆ ಪ್ರತಿಕ್ರಮಣವು । ರಮಣೀಯವಾದ ಸ್ವಾಧ್ಯಾಯ ॥
ಕ್ರಮದಿಂದ ಕಾಯೋತ್ಸರ್ಗಗಳೆಂದೆಂ- । ಬಮಲವಾದಾವಶ್ಯಕದೊಳು ॥ ೯೯ ॥

ನಡೆವುದು ತಾನ**ದಾವಶ್ಯಕವೆಂದೆಂಬ** । **ಬಿಡದೆ ನಡೆವ** ಹದಿನಾಲ್ಕು ॥
ಕಡು ರಮ್ಯವಾದ ಭಾವನೆ ಕೇಳು ಮೋಕ್ಷದ । ಮಡದಿ ನೋಡುವ ಮಣಿ ಮುಕುರ !

ಜಿನರಿಗೆ ಮಹಾಮಹಿಮೆಯೆ ಮೊದಲಾದ । ಅನುಪಮ ಪೂಜೆ ಮಾಳ್ಪಾಗ ॥
ಮನದಕ್ಕರಿಂ ನಾಲ್ಕು ಸಂಘವನೆರಯಿಸಿ। ಘನವಾದ ವಾದ್ಯ ನೃತ್ಯಗಳಿಂ ॥ ೧೦೧ ॥

ಬಿರುಸು ಬಾಣಗಳಿಂ ರಥೋತ್ಸವಗಳಿಂದ । ವರ ಧರ್ಮವನು ಪ್ರಕಟಿಪುದು ॥
ಪರಮ ಶಾಸ್ತ್ರಂಗಳ ವ್ಯಾಖ್ಯಾನಿಸುವುದು । ಒರೆವುದು ಶಾಸ್ತ್ರವ ಪರರ್ಗೆ ॥ ೧೦೨ ॥

ದೊರೆದೊರೆಗಳ ಸಭೆಯನು ಪೊಕ್ಕು ಜಿನಧರ್ಮ- । ದಿರವ ಪ್ರಕಟಿಸಿ ವಾದಿಗಳ ॥
ಶಿರವ ಬಾಗಿಸುವುದು ಸುರಪನ ಫಣಿಪನ । ಹರಿವಿಷ್ಟರವ ನಡುಗಿಪ ॥ ೧೦೩ ॥

ಹರಿವಿಕ್ರೀಡಿತ ಸಿಕ್ತಚಾಂದ್ರಾಯಣ । ಉರುತರ ಮಾಸೋಪವಾಸ ॥
ವರ ಪಕ್ಷೋಪವಾಸಗಳನು ಮಾಡಿ ತಾ- । ನರುಹನ್ಮತವ ಪ್ರಕಟಿಪುದು ॥ ೧೦೪ ॥

ಹರಿಸದಿಂದವೆ ನಾಲ್ಕು ದಾನವ ನಡೆಸುತ । **ವರ ಧರ್ಮವ ಬೆಳಗುವುದು** ॥
ಅರಸ ! ಕೇಳದು ಪದಿನೈದನೆ ಸಂಖ್ಯೆಯ । ಉರುತರ ಭಾವನೆಯಿಹುದು ॥ ೧೦೫ ॥

ವ್ರತಶೀಲಗುಣತಪ ಚಾರಿತ್ರಂಗಳ । ಸತತ ಧರಿಸಿಯಾಚರಿಪ ॥
ವ್ರತಿ ಮೊದಲಾಗಿರ್ದ ನಾಲ್ಕು ಸಂಘಗಳೊಳು । ನುತವೆತ್ತ ವತ್ಸಲತ್ವವನು ॥ ೧೦೬ ॥

ವಿನಯ ಸತ್ಕಾರವ ಮಾಡುವುದದರೊಳ- । ಗಿನಿಸು ದೋಷಂಗಳು ಬರಲು ॥
ತನಯರ ದೋಷವನೆಂತು ಮರೆಸುವಂತೆ । ಮುನಿಗಳ ದೋಷವ ಮರೆಸಿ ॥ ೧೦೭ ॥

ದೃಢವಾಗಿರಿಸಿ ಅವರನು ರಕ್ಷಿಸಿ ಮತ್ತೆ । ಕಡು ಭಕ್ತಿಯನು ಮಾಡುವುದು ॥
ಒಡನೊಡನವರ ಕೊಂಡಾಡಿ ಕೊನರುವುದು । ನುಡಿಯಲು ಪರರ ಝುಂಕಿಪುದು ॥ ೧೦೮ ॥

ಸನುಮಾನಂಗಳನವರೊಳು ಮಾಳ್ಪುದು । ಘನ **ವತ್ಸಲತ್ವ**ವೆಂದೆಂಬ ॥
ಮಿನುಗುವ ಹದಿನಾರನೆಯ ಭಾವನೆ ಕೇಳು । ನೆನಹು ಮೋಕ್ಷದೊಳಿರುವರಸ ! ॥ ೧೦೯ ॥

ಇಂತಪ್ಪ ಹದಿನಾರು ಶುಭಭಾವನೆಗಳ । ತಾಂತಳುವದೆ ಯಾವನೋರ್ವ ॥
ಸ್ವಾಂತದೊಳಗೆ ಭಾವಿಸುತಿರ್ದನವನಿಗೋ- । ರಂತೆ ತೀರ್ಥಕರತ್ವನಹುದು ॥ ೧೧೦ ॥

ಎಂದು ನಿರೂಪಿಸೆ ಜ್ಞಾನೇಂದು ಭೂಭುಜ- । ನಂದು ತಾ ಸುಖವೆಂದೆಂಬ ॥
ಸಿಂಧುವಿನೊಳು ತೇಂಕಾಡೆ ಭವ್ಯಾವಳಿಯಾ- । ನಂದವೈದುದು ಆ ವೇಳೆಯೊಳು ॥ ೧೧೧ ॥

ಜಿನಮುನಿಗಳ ಅಡಿದಾವರೆಗಳಿಶಿಶು । ಜಿನಮತಾಂಬುಧಿಪೂರ್ಣಚಂದ್ರ ॥
ಅನುಪಮಗುಣಿ ಧರ್ಮವ ಕೇಳುತೊಪ್ಪಿದ । ಘನಪುಣ್ಯವಂತ ಜ್ಞಾನೇಂದು ॥ ೧೧೨ ॥

॥ **ಅಂತು ಸಂಧಿ ೨೮ಕ್ಕಂ ಪದ ೩೮೮೭ಕ್ಕಂ ಮಂಗಲಂ** ॥

# ಹರಿಚಂದ್ರನ ಭವಾವಳಿ.

ಜಿನಚಂದ್ರ ಮುನಿಯೊಳು ಹರಿಚಂದ್ರನಿರವನು । ಜನಪತಿ ಬೆಸಗೊಂಡದುರ್ವೆ ॥ ಪ ॥

ಪಂಚಮ ಚಕ್ರೇಶನಾಗಿಯು ಕಡೆಯೊಳು । ಪಂಚ ಸಂಸಾರವ ಕೆಡಿಸಿ ॥
ಪಂಚಮಗತಿಯ ಪಡೆದ **ಶಾಂತಿಜಿನಚಂದ್ರ** ! । ಪಂಚಮಗತಿಯಾವುದೆಮಗೆ ॥ ೧ ॥

ಘನರವವನು ಕೇಳಿದ ಸೋಗೆ ನವಿಲಂತೆ । ಅನುಪಮ ಧರ್ಮವ ಕೇಳಿ ॥
ಮನುಜಾಧೀಶ್ವರನಾನಂದವ ತಾಳಿ । ವಿನಯದಿಂ ಮುಗುಳೆ ಕೈಮುಗಿದು ॥ ೨ ॥

ಮುನಿಕುಲತಿಲಕನೆ ! ಬಿನ್ನಹ ಎನ್ನಯ । ತನುಜನಗಲಿ ಪೋದಿರವ ॥
ಅನುಪಮ ಕಾರುಣ್ಯದಿಂ ಪೇಳಬೇಕೆನೆ । ಜಿನಚಂದ್ರ ಮುನಿಯಿಂತು ನುಡಿದ ॥ ೩ ॥

ಕುರುಕುಲಗಗನ ಭಾಸ್ಕರನೆ ! ನೀ ಕೇಳೀಗ । ಒರವೆನವನ ಭವಗಳನು ॥
ವರ ಕಾಂಪಿಲ್ಯಮಹಾಪಟ್ಟಣವೆಂಬು- । ದಿರುತಿಹುದಾ ಪುರದರಸು ॥ ೪ ॥

ನರಸಿಂಹನೆಂಬ ಭೂಭುಜನಿಹನಾತಗೆ । ಕರುಣರಹಿತ ಪಾಪಿಷ್ಠ ॥
ದುರುದುಂದುಬಿ 'ವಸುಕಾಂತ' ಪೆಸರನುಳ್ಳ । ದೊರೆಗೆ ಕುವರನಿರುತಿಹನು ॥ ೫ ॥

ಆ ನಗರಿಯ ಕೋಣಪದಿಕ್ಕಿನೊಳಿರ್ದ । ಕಾನನದೊಳಗೊಂದಾನೊಂದು ॥
ಏನ ಹೇಳುವೆ ರಕ್ಕಸನ ಹೊಳಲಿನಂತೆ । ತಾನತಿ ಭೀಕರಮಾದ ॥ ೬ ॥

ಮಾರಿಯ ಗುಡಿ ರಾಜಿಪುವುದಾ ಗುಡಿಗೆ ಕು- । ಮಾರನು ಚೈತ್ರಮಾಸದೊಳು ॥
ಭೂರಿವೈಭವದಿಂದ ಶೃಂಗಾರಾಂಗನುಮಾಗಿ । ಚಾರುವೈಭವದೊಳಗಾಗ ॥ ೭ ॥

ಪರಿಜನ ಪುರಜನಂಗಳ ಕೂಡಿಕೊಂಡು । ಭರದಿಂದ ಜಾತ್ರೆಗೆ ಪೋಗಿ ॥
ಹರುಷದಿಂ ವನವೊಕ್ಕು ನೆರೆದ ಜನಗಳೆಲ್ಲ । ಪರಿಪರಿ ಪರಕೆಗೊಡುವುದ ॥ ೮ ॥

ದೊರೆಮಗ ಕಂಡನೆಂತೆನೆ ಕೆಲಬರು ಬೇಗ । ಸುರಗಿಯಿಂ ತನ್ನ ಹೊಟ್ಟೆಯನು ॥
ಇರಿದು ಕರುಳಮಾಲೆಯ ತೆಗೆತೆಗೆದಾಗ । ಪರಕೆಯೊಪ್ಪಿಸುವುದ ಕಂಡ ॥ ೯ ॥

ಗಂಡಕತ್ತರಿಯೊಳು ಕೆಲವು ಜನರು ತಮ್ಮ । ಮುಂಡೆಯನಿಟ್ಟು ಕಾಲಿಂದ ॥
ಲಂಡತನದಿಯೊದೆಯಲು ಶಿರ ಹಾರಿ ಭೂ- । ಮಂಡಲದೊಳು ಬೀಳೆ ಕಂಡ ॥ ೧೦ ॥

ಕೆಲರು ಚೂರಿಗಳಿಂದ ತಮ್ಮಯ ನಯನವ । ಕಳೆದಿಟ್ಟು ಪರಿಯಾಣದೊಳಗೆ ॥
ಅಳುಕದೆ ದೇವಿಗೆ ಬಲಿಗೊಡುವುದನಾ । ಇಳೆಯಾಣ್ಮನ ಪುತ್ರ ಕಂಡ ॥ ೧೧ ॥

ಕುಲಿಲಿ ಎಂದಾಲುತ ಕುರಿಯ ಹೊಯ್ವುದರಿಂದ । ಬಲದ ಬೆರಳನೊಂದ ಕೊರೆದು ॥
ಬಲಿಗೊಡುವವರಿಂದ ಕೆಂಗೂಳಡುವರಿಂದ । ಕಲಿತನದಿಂ ಸಿಡಿಯೇರಿ ॥ ೧೨ ॥

ನಲಿವವರುಗಳಿಂದ ಮುಖಕೆ ಬೀಯಗವಿಕ್ಕಿ । ಪಲವು ಸೊಪ್ಪುಗಳುಡುಗೆಯನು ॥
ಲಲನೆಯರುಗಳುಟ್ಟು ಬನಕೆ ಬರುವುದ ಭೂ- । ಲಲನೇಶಸುತ ಕಂಡನಾಗ ॥ ೧೩ ॥

ಒಳವೊಕ್ಕು ಗುಡಿಯನು ಬಲಗೊಳುತಲಿ ಬಂದು । ಮಲಿನಾಂಗ ಕೋರೆದಾಡೆಗಳಿಂ ॥
ಬಲದ ಕೈಯಲಿ ಖಡ್ಗ ಕೆದರಿದ ತಲೆಯಿಂದ । ಬಲು ಭಯಂಕರ ಮೂರ್ತಿಯನು ॥ ೧೪ ॥

ಚಂಡಮಾರಿಯ ಕಂಡು ಬೆದರದೆ ತನ್ನಯ । ಮುಂಡೆಯ ಚಾಚಿ ಬೇಗದೊಳು ॥
ಕೊಂಡುಬನ್ನಿರೊ ಸಾಸಿರ ಕುರಿಗಳ ಪ್ರ- । ಚಂಡದೇವಿಗೆ ಬಲಿಗೊಡುವ ॥ ೧೫ ॥

ಎಂದು ಬಂಟರಿಗೆ ಪೇಳಲು ಮೇಷಂಗಳ। ಗೊಂದಣವಸು ಹೊಡೆತಂದು ॥
ಅಂದು ದೇವಿಯ ಮುಂದೆ ನಿಲಿಸಿ ಸಾಲುಗಳಾಗಿ। ಗಂಧಪುಷ್ಪಗಳ ತಳಿದರು ॥ ೧೬ ॥

ಕುರಿಗಳು ಮೊರೆಯಿಟ್ಟರಚುವ ಮೊರೆ ತಾನು । ಮೆರೆದುದೈದನೆಯ ನರಕವು ॥
ಭರದಿಂದ ಬಾಯ್ಬಿಟ್ಟು ಕುವರನ ಬಾರೆಂದು । ಕರೆದಪುದೋ ಎಂಬಂತೆ ॥ ೧೭ ॥

ಕರುಣವಿಲ್ಲದೆ ಪಾಪಿ ನರಕಗಾಮಿನಿಯಾಗ । ಕುರಿಗಳು ಸಾಸಿರಗಳನು ॥
ಅರಿದನು ದೇವಿಯ ಮುಂದೆ ಸ್ವಹಸ್ತದಿಂ । ಪರಿಯೆ ರಕುತದ ಕೋಡಿಗಳು ॥ ೧೮ ॥

ಮರಣವೇರಿದ ಆವಿಗಳು ದುಃಕೃತದಿಂದ । ಪುರದ ನಿಕಟದೊಳು ಮೆರೆವ ॥
ಗಿರಿಯ ಮೇಲಿರ್ದ ಗರ್ದುಗದ ಶಾಖೆಯೊಳು । ಭರದಿ ಸಾಸಿರ ಪಕ್ಕಿಯಾಗಿ ॥ ೧೯ ॥

ಪುಟ್ಟಿರುತಿರಲಿತ್ತಲಾಗ ಸುಕಾಂತನು । ದುಷ್ಟಮಾನಸ ಬಲೆಗೊಂಡು ॥
ಪಟ್ಟಣದೊಳಗಿರ್ದ ಬೇಡರ ಸಹವಾಗಿ । ಬೆಟ್ಟವ ಬಂದೇರಿ ಬೇಗ ॥ ೨೦ ॥

ಬೀಸೆ ಕರಂಜ ವೃಕ್ಷಕೆ ಬಲೆಯನು ಪಾಪಿ। ಸಾಸಿರ ಪಕ್ಕಿಯ ಪಿಡಿದು ॥
ಓಸರಿಸದೆ ಕೊಲಲವು ಸತ್ತು ಪೊಳೆಯೊಳು । ಸಾಸಿರ ಮೀನಾಗಿ ಪುಟ್ಟಿ ॥ ೨೧ ॥

ಬೇಡರುಗಳ ಕೂಡಿಕೊಂಡು ಸುಕಾಂತನು । ಕೇಡಾಳಿ ನದಿಯನು ಪೊಕ್ಕು ॥
ಆಡುವ ಮೀನುಗಳಿಗೆ ಬಲೆಯನು ಬೀಸಿ । ಕೋಡಿಮಾನಸ ತಾನು ಕೊಂದು ॥ ೨೨ ॥

ಇರಿಕಿಸಿಕೊಂಡು ಹೊಳೆಯ ಹಾದು ಬರುವಾಗ। ಭರದಿಂದಲೈತಂದು ಮೊಸಳೆ ॥
ಚರಣವ ಹಿಡಿದು ನೀರೊಳಗೆ ಮುಳುಗಿಸಿತಾ। ಹರಿದು ತಿಂದುದು ಹೊಟ್ಟೆಯನು ॥ ೨೩ ॥

ಕೊಂದವರಿಗೆ ಕೊಲೆಯೆಂದೆಂದೂ ತಪ್ಪ- । ದೆಂದು ಪೇಳುವ ಮುನಿ ವಚನ ॥
ಅಂದು ಸುಕಾಂತನೊಳಗೆ ದೃಷ್ಟಾಂತವು। ನಿಂದುದು ನನ್ನಿಯ ಮಾಡಿ ॥ ೨೪ ॥

ಕಿವಿ ಕಣ್ಣು ಮೂಗು ಕಾಲುಗಳ ಹರಿದು ತಿನ್ನೆ। ಕುವರನು ಪಾಪದಿಂ ಸತ್ತು ॥
ತವಕದಿಂ ಪಂಚಮ ನರಕದೊಳ್ಪುಟ್ಟಿದ। ವಿವರವ ಪೇಳ್ವೆ ಬಲ್ಲನಿತ ॥ ೨೫ ॥

ಸುರಗಿರಿ ಸಮನಾದ ಲೋಹದ ಪಿಂಡವ। ಭರದಿಯಾ ನಾರಕಿಗಿಡಲು ॥
ಕರಗಿ ಪೋಪುದು ಮೇಣದುಂಡೆಯಂತೆನಲಾ। ನರಕದ ಉಷ್ಣವಿನ್ನೆಂತೋ ॥ ೨೬ ॥

ಆ ನರಕದ ಮೇಲುಭಾಗದೊಳಗೆ ಬಂದು । ಶ್ವಾನ ಮುಖದ ಬಿಲದೊಳಗೆ ॥
ಹೀನಮಾನಸ ಸುಕಾಂತನದರೊಳು ಪುಟ್ಟಿ। ಯಾನದೆ ಷಟ್ಪರ್ಯಾಪ್ತಿಯನು ॥ ೨೭ ॥

ಇನಿಸು ಬೇಗದಿ ತಾಳಿ ಕಾಲು ಮೇಲಾಗಿಯು । ಮೊನೆ ಮುಂತಾಗಿ ರಾಜಿಸುವ ॥
ಮಿನುಗುವ ಬತ್ತೀಸ ತೆರದಸ್ತ್ರದ ಮೇಲೆ। ಮನಹೀನ ತ್ವರಿತದಿಂ ಬೀಳೆ ॥ ೨೮ ॥

ಶಿಲೆಯುಪರಿಯೊಳು ಹೊಡೆದ ಚೆಂಡು ಮೇಲಕೆ। ಘಳಿಲನೆ ಪುಟ ನೆಗೆವಂತೆ ॥
ಅಲಗಿನ ಮೇಲೆ ಕೆಡೆದು ಉದ್ದಕೆ ಹಾರಿ । ನೆಲದೊಳು ರಪ್ಪನೆ ಬೀಳೆ ॥ ೨೯ ॥

ಪಳಿಯ ನಾರಕರವನನು ಕಂಡು ಮೊರೆಯುತ। ಘಳಿಲನೆ ಕೈದುಗಳಾಂತು ॥
ಕಲಕಲ ರವದಿಂದ ಕುಣಿಯುತಲೈತಂದು। ಮುಳಿದು ಕೋಪಾಟೋಪದಿಂದ ॥ ೩೦ ॥

ಸುರಗಿಯಿಂ ತಿವಿವರು ಪರಶುವಿಂ ತರಿವರು। ಕೊರೆವರು ಗರಗಸದಿಂದ ॥
ಅರಿವರು ಮೂಗ ಚೂರಿಗಳಿಂದ ದೇಹವ। ಸೆರೆವರು ಕುರಿಜಿಗೆಯಿಂದ ॥ ೩೧ ॥

ಜವದಾಡೆಯಿಂದ ತಿವಿವರಲ್ಲಿ ಕೆಲಬರು। ಲವುಡಿಯಿಂ ಸದೆವರು ಕೆಲರು ॥
ತವಕದಿಂ ವಜ್ರಸೂಜಿಗಳನುಗುರು ಕಣ್ಣಿ-। ಗವಯವಗಳಿಗೆ ಪಟ್ಟುವರು ॥ ೩೨ ॥

ಚರಣವ ಹಿಡಿದು ಶಿಲೆಯೊಳು ಬಡಿವರಾ-। ಗುರಿವ ಕುಂಡದೊಳು ನೂಕುವರು ॥
ನರಿನಾಯಿಹುಲಿಯಾಕಾರದೊಳಗೆ ಬಂದು। ಹರಿದು ಹರಿದು ತಿನುತಿಹರು ॥ ೩೩ ॥

ಶಿಲೆಯೊಳು ತಲೆಯ ತಾಟಿಸುವರು ಕೆಲಬರು। ಒಲೆಯೊಳಗಿಕ್ಕಿ ಸುಡುವರು ॥
ಬಲುಹಿಂದ ಕೈಕಾಲ ಸಿಗಿದಿಡುವರು ಮೈಯ। ಪಲವು ಪಂಜಿಂದ ಸೇಯುವರು ॥ ೩೪ ॥

ಬೆರಳುಗಳನು ಕಡಿ ಖಂಡವ ಮೂಳ್ಪರು। ಮುರಿವರು ಕೈಕಾಲುಗಳ ॥
ತರಿವರು ಸಂದು ಸಂದುಗಳುಪ್ಪುನೀರನು। ಎರೆವರು ಗಾಯ ಗಾಯದೊಳು ॥ ೩೫ ॥

ಹರಡುಗಳನು ಚಮ್ಮಟಿಯಿಂದ ಬಡಿವರು। ಭರದಿಂದ ಶೂಲಕಿಕ್ಕುವರು ॥
ಪೆರರ ಪೆಂಡಿರಿಗೆ ನೀನಳಿಪಿದೆ ಎಂದಾ-। ಗುರಿವ ಲೋಹದ ಪುತ್ಥಳಿಯ ॥ ೩೬ ॥

ಅಡಿಗಡಿಗಪ್ಪೆಂದಪ್ಪಿಸುವರು ಕಳ್ಳ। ಕುಡಿಯೆಂದು ಲೋಹದ ರಸವ ॥
ಕುಡಿಯಿಸುವರು ಗುಟ್ಟುಗುಟುಕೆಂದು ಮಾಂಸವ-। ನಿಡುವರು ಬಾಯ್ಗೆ ತಿನ್ನೆನುತ ॥ ೩೭ ॥

ಕಡು ಕಾಯ್ದ ಲೋಹದ ಪಿಂಡವ ಕೋಪದಿಂ। ಬಡಿದು ನುಡಿವರು ಜರೆವರು ॥
ಕೆಡಹಿ ಮುಂದಲೆಯ ಪಿಡಿದು ಶಿರವರಿವರು। ಘುಡುಘುಡಿಸುವರು ಕೋಪದೊಳು ॥ ೩೮ ॥

ಕೀವು ಸುರಿವ ಮೈಯನು ಚೂರಿಗಳಿಂದ। ಸಾಸಿವೆಯರೆದು ಮೆತ್ತುವರು ॥
ಕಾಸಿದ ಕಾವಲಿಯೊಳು ಮಲಗಿಸುವರು। ರೋಷದಿಂ ತಿವಿದಾಲುವರು ॥ ೩೯ ॥

ಇವು ಮೊದಲಾದ ಘೋರೋಪಸರ್ಗಗಳ। ತವತವಗೆಸಗೆ ನಾರಕನು ॥
ತವೆ ಕೆಟ್ಟೆನೆಂದು ನಾಲಗೆಯನು ನೀಡುತ। ಭುವಿಯೊಳು ಬಿರ್ದು ಹೊರಳುವ ॥ ೪೦ ॥

ಮೇರುವ ನುಂಗುವ ಹಸಿವಿರುತಿರಲಾ-। ಹಾರವು ಎಳ್ಳೆನಿತಿಲ್ಲ ॥
ಭೂರಿಮಾರ್ಜಾಲಕುಕ್ಕುಟಶ್ವಾನಶಾರ್ದೂಲ। ಪೇರು ದ್ವಿರದ ಮುಂತಾದ ॥ ೪೧ ॥

ಕ್ರೂರಮೃಗಂಗಳು ಸಾಯಲುದರ ಶಬ। ನಾರುವ ದುರ್ಗಂಧಕ್ಕಿಂತ ॥
ಈರಾರು ಮಡಿಯಾದ ದುರ್ಗಂಧವನುಳ್ಳ। ನಾರಕ ಭೂಮಿಮೃತ್ತಿಕೆಯ ॥ ೪೨ ॥

ಹಸಿವನು ತಾಳಲಾರದೆ ಇನಿಸಿನಿಸುವ। ಪೊಸ ನಾರಕ ಭುಂಜಿಸುವ ॥
ಅಸವಸದಿಂದಬ್ಧಿಯ ಪೀರುವೆನೆಂಬ। ತೃಷೆ ಪುಟ್ಟೆ ನೀರಿನಿತಿಲ್ಲ ॥ ೪೩ ॥

ಹಳೆಯ ನಾರಕರು ವೈತರಣಿಯೆಂದೆಂಬೊಂದು। ಹೊಳೆಯನುಗುರ್ವಿಸೆಯವನು ॥
ಘಳಿಲನೆ ಕಾಣುತ ಜಲವೆಂದಲ್ಲಿಗೆ ಹೋಗಿ। ಹೊಳೆಯ ನೀರೊಳು ಮುಳುಗುತವೆ ॥ ೪೪ ॥

ಕ್ಷಾರೋದಕದಿಂದಾ ನಾರಕನ ಶ- । ರೀರವೆಲ್ಲವು ಭಸ್ಮವಾಗೆ ॥
ಭೂರಿಮತ್ಸ್ಯಗಳು ಕಚ್ಛಪ ನೆಗಳುಗಳಾಗಿ। ಕ್ರೂರರು ಹರಿತಿನುತಿಹರು ॥ ೪೫ ॥

ಅವರ ಬಾಧೆಯ ನಾರಕ ತಾಳಲಾರದೆ। ತವಕದಿಂ ಗುಹೆಯನು ಪೊಗಲು ॥
ದವದಾವಕ್ಕಿಂತ ನಾಲ್ಮಡಿಯಾದುರಿ ನಿ- । ಚ್ಚವನ ಸುಡಲು ಬೊಬ್ಬಿಡುತ ॥ ೪೬ ॥

ಮೊರೆಯಿಟ್ಟು ಕೆಟ್ಟೆನಿನ್ನೆವೆ ಎಂದೆನುತಾಗ। ಚರಣದುರಿಯನು ಸಹಿಸದೆ ॥
ತುರಿಹದಿಂ ಬೀಳುತಲೇಳುತಲೈತಂದು। ಸುರಗಿ ಪತ್ರದ ವನವೊಕ್ಕು ॥ ೪೭ ॥

ನೆಳಲಿಗಾಟಿಸಿಯೊಂದಸಿಪತ್ರ ವೃಕ್ಷದ। ಕೆಳಗೆ ನಿಂದಿರೆ ಗಾಳಿಯಲೆಯೆ ॥
ಗಳಿಲನೆ ಕುಂತಾಸಿ ಪರಶುತೋಮರ ಇಟ್ಟ। ಪೊಳೆವ ಕುಠಾರಿ ಮುಂತಾದ ॥ ೪೮ ॥

ವರ ರೂಪಾಂತಸಿಪತ್ರವು ಮರದಿಂದ। ಸುರಿಯಲು ಬಳಬಳನವನ ॥
ಶಿರ ಕೈಕಾಲು ನಾಸಿಕ ತುಟಿ ಗಲ್ಲವು। ಪರಿದು ನೆತ್ತರಕೋಡಿ ಹರಿಯೆ ॥ ೪೯ ॥

ತಾನಾ ದುಃಖವ ತಾಳಲಾರದೆ ಬಂದು। ಹೀನಮಾನಸಕೃತ್ರಿಮದ ॥
ಆ ನಗವನು ಏರಿ ಜರಿದದು ಬೀಳಲು। ತಾನಲ್ಲಿಂದುರುಳಿ ಕೆಡೆಯಲು ॥ ೫೦ ॥

ಎಲು ನುಚ್ಚುನುರಿಯಾಗೆ ಕೈಕಾಲು ತುಂಡಾಗೆ। ತಲೆ ಚಿಪ್ಪು ಚಿರಿಯಾಗೆ ಹಲ್ಲು ॥
ಘಳಿಲನೆ ಕವಡೆಯ ಚೀಲ ಕೊಡಹಿದಂತೆ। ಬಳಬಳನುದುರಿದುವಾಗ ॥ ೫೧ ॥

ರಸವ ತಡಕಲದು ದಿಕ್ಕು ದಿಕ್ಕಿಗೆ ಹಾರಿ। ಎಸೆಕದಿಂದೊಬ್ಬುಳಿಗೂಡೆ ॥
ಹಸನದಿ ಕೂಡುವಂದದಿ ನಾರಕನಂ- । ಗಸವಸದಿಂದ ಕೂಡಿದುದು ॥ ೫೨ ॥

ಇಂತಪ್ಪ ವೈಕ್ರೀಯಕದ ಶರೀರವ। ತಾಂತಳೆದಾ ನಾರಕನು ॥
ಸಂತಾಪ ಪಡುತ ಸೂಜಿಯ ಹೊರೆಗಳ ಮೇಲು। ಮುಂತಾಗಿ ಮಡಗಿದಂತಿರ್ದ ॥ ೫೩ ॥

ಧರೆಯನು ತಾ ಮೆಟ್ಟಿ ದುಃಖದಿ ಬರುತಿರೆ। ಚರಣವ ತಾಗಿ ರಕುತವು ॥
ಸುರಿಯೆ ನಾರಕರು ಮುಂದಲೆವಿಡಿದಾತನ। ದರದರನೆಳೆದಪ್ಪಳಿಪರು ॥ ೫೪ ॥

ಧರೆಯ ಮೈ ಸೋಂಕಲು ಮಣಿಚೇಳು ಸಾಸಿರ। ಭರದಿಂದುರಿದು ದುಃಖವಹುದು ॥
ಕರುಣವಿಲ್ಲದೆ ನಾರಕರು ಚಮ್ಮಟಿಯಿಂದ। ಕರುಳ ಹಿರಿದು ಹಾಕುವರು ॥ ೫೫ ॥

ಎವೆ ಹಳಚುವ ಪರಿಯಂತರವಾದರು। ಅವಗೆ ಕಿಂಚಿತು ಸುಖವಿಲ್ಲ ॥
ತವೆ ಕೆಟ್ಟೆ ಬೆಂದೆನೆಂದರಚುತ ನಾರಕ। ವಿವಿಧ ದುಃಖದಿ ಮುಳುಗಿಹನು ॥ ೫೬ ॥

ಒಂದು ನಿಮಿಷಮಾತ್ರದೊಳೈದು ಕೋಟಿಯು। ನಿಂದರು ಮತ್ತೆಂಟು ಲಕ್ಕ ॥
ಮುಂದಿರ್ದು ತೊಂಬತ್ತೊಂಬತ್ತು ಸಾಸಿರ। ಹೊಂದಿ ಐನೂರು ಲೆಕ್ಕದೊಳು ॥ ೫೭ ॥

ಚತುರಶೀತಿಯ ಗಣನೆಯನುಳ್ಳ ರೋಗವು । ವ್ಯಥೆ ಬಡಿಸವು ನಿಮಿಷದೊಳು ॥
ಸತತವಿಂತಪ್ಪ ದುಃಖಕೆ ಭಾಜನನಾಗಿ । ಮತಿಹೀನ ಚಿಂತೆಯೊಳಿರ್ದ ॥ ೫೮ ॥

ತನಗೆ ಪುಟ್ಟಿರ್ದ ವಿಭಂಗಜ್ಞಾನದೊಳಾಗ । ಜಿನಮತವನು ನಂಬದಾನು ॥
ಘನದುಃಖಕೆ ಒಡಲಾಗಿ ಕೆಟ್ಟೆನು ಎಂದು । ಮನಹೀನ ಮರುಗುವ ಪಾಪಿ ॥ ೫೯ ॥

ಇರುತಿರ್ದ ಪದಿನೇಳು ಸಾಗರಾಯುಷ್ಯಂ- । ಬರ ದುಃಖಮನುಂಡು ಬಂದು ॥
ಭರತದ ವಿಂಧ್ಯಗಿರಿಯೊಳೊಂದಾನೊಂದು । ದರಿಯೊಳು ಹೆಬ್ಬುಲಿಯಾಗಿ ॥ ೬೦ ॥

ಜನಿಸಿ ಸಮಸ್ತ ಜೀವಂಗಳ ಹತಿಸುತ । ಘನ ಭಯಂಕರ ಮೂರ್ತಿಯಾಗಿ ॥
ಜನಗಳ ಬೆದರಿಸುತಿರಲಿತ್ತ ಬಲೆಯೊಳು । ತನುವನೀಡಾಡಿಕೊಂಡಿರ್ದ ॥ ೬೧ ॥

ಒಂದು ಸಾಸಿರ ವರ್ಷಗಳು ಭವಭವದೊಳು । ಹೊಂದುತ ದುಃಖವನುಣುತ ॥
ಬಂದಾ ವಿಂಧ್ಯಾಚಲದೊಳು ತಾವು ಪು- । ಳಿಂದರಾದರು ಪಾಪದಿಂದ ॥ ೬೨ ॥

ಒಂದಾನೊಂದು ದಿವಸ ಬೇಡನಾಯಕ- । ವೃಂದವೆಲ್ಲವು ಕೂಡಿಕೊಂಡು ॥
ಸಂದಣಿಸುತ ಬೇಂಟೆಯನಾಡುವುದಕೆ । ಎಂದು ತೆರಳಿದರೇನೆಂಬೆ ॥ ೬೩ ॥

ತೊಡೆದಂಗ ಭಸ್ಮವು ಸರ್ವಾಂಗದೊಳೆಡೆ- । ವಿಡದೆ ಸುತ್ತಿದ ಸೊಪ್ಪು ಮೆರೆಯೆ ॥
ಮುಡಿದ ಮುತ್ತಿನ ಸರ ಹುಲಿಯ ಬಾಲಗಳನು । ನಡುವಿಗೆ ಸುತ್ತಿ ನಡೆದರು ॥ ೬೪ ॥

ತಲೆಯೊಳಗಾಂತು ಕೆಲಂಬರು ಚಕ್ರವ । ಹುಲಿದೊಗಲುಗಳನು ಹೊದೆದು ॥
ಕಲಿತನದಿಂದಾಂತು ಕೈಯೊಳು ಬಿಲ್ಕೋಲ । ನಲವಿನಿಂ ನಡೆದರೊಗ್ಗಿನೊಳು ॥ ೬೫ ॥

ದಡಿ ಬಲೆ ಬೆಳ್ವಾರ ಕಾಲು ಕಣ್ಣಿಗಳನು । ತಡಿಕೆಯುರುಳು ಗಾಳಗಳ ॥
ಸಿಡಿಬಡಿಗೋಲು ಮುಂತಾದುವನಿರದಾಂತು । ನಡೆದರಳ್ತಿಯೊಳು ಬಿಲ್ಲವರು ॥ ೬೬ ॥

ಗಿಡುಗವಿಂಡನು ಸಾಳುವನವಕ್ಕಿಗಳನು । ಕಡು ಬಂಟ ಬೇಂಟೆನಾಯಿಗಳ ॥
ಹಿಡಿದು ಬೊಬ್ಬಿರಿವುತ ಬೇಡನಾಯಕರಾಡೆ । ಸಡಗರದಿಂದ ನಡೆದರು ॥ ೬೭ ॥

ಮುಡಿ ಬೆನ್ನೊಳೋಲೆವುತ ದಂತದೋಲೆಯನಿಕ್ಕಿ । ವುಡಿಗುಟ್ಟುತಳಿರು ಹಿಲಿಗಳ ॥
ಒಡನೆ ಹೆಣೆದು ನಡುವಿಗೆ ಸುತ್ತಿ ನಡೆದಳು । ಬಿಡದೆಸೆವಿರುಳ್ವೆಣ್ಣಿನಂತೆ ॥ ೬೮ ॥

ಕಿವಿಗಿಟ್ಟು ತಾಳೆಯ ಸುಳಿಯೋಲೆಗಳನು । ನವಿಲಗರಿಗಳುಡಿಗಿಟ್ಟು ॥
ತವಕದಿಂ ಹುಲ್ಲೆಮರಿಯ ಸರವನು ತೊಟ್ಟು । ನವ ಬೇಡವೆಂಗಳೈದಿದರು ॥ ೬೯ ॥

ಅಡವಿಗೆ ಕೆಡುಕ ಬೇಡರು ಬೇಗೈತಂದು । ಬಡಿವುತ ಗಿಡವ ಥಾಣೆಯೊಳು ॥
ಇಡುತ ಕವಣೆಯಿಂದ ದೂರದ ಮಿಗಗಳ । ಗಿಡುಗನ ಬಿಡುತ ಪಕ್ಕಿಯೊಳು ॥ ೭೦ ॥

ಹಿಡಿಹಿಡಿ ಬಡಿಬಡಿ ಕಡಿಕಡಿ ಇಡಿಇಡಿ । ಹೊಡೆಹೊಡೆ ಕೆಡುಹು ಎಂದೆನುತ ॥
ಕೆಡುಕ ಬೇಡರು ಭೋಭೋ ಕುಲಿಕುಲಿ ಬಿಬಿ ಎಂದು । ಬಿಡದೆ ಬೊಬ್ಬಿರಿದು ಸೋವಿದರು ॥

ಹರಹಿ ಬೆಳ್ಳಾರವನಿರಿಸಿ ತಡಿಕೆಗಳ । ಉರಿಹಿಡಿ ಪೆಟಲಿಂದ ಗುಂಡ ॥
ಶರಸಂಧಾನವನತಿ ವೇಗದಿಂ ಮಾಡಿ । ಇರಿದು ಕೆಡಹಿ ಹೆಬ್ಬುಲಿಗಳ ॥ ೭೨ ॥

ಅದೆ ಗಿಡಗಳ ಪೊರಟವು ಕಾಡುವಂದಿಗ- । ಳದೆ ಹುಲ್ಲೆಗಳೋಡಿದವು ॥
ಅದೆಯಾನೆಯವಿಂಡ ಸಂದಣಿಯೆಂದೆಂಬ । ಒದರುವಾರ್ಭಟೆ ತುಂಬಿಹವು ॥ ೭೩ ॥

ಇಡು ಸಾಳುವನಮೇಲಕೆ ಜಾಯಿಲಗಳ । ಬಿಡು ಬಲೆಗಳ ಬೇಗ ಬೀಸು ॥
ಗಿಡುಗನ ಹಾರಿಸು ಪಕ್ಕಿಯಿರ್ದೆಡೆಗೆಂದು । ನುಡಿವಾರ್ಭಟೆ ಘನವಾಯ್ತು ॥ ೭೪ ॥

ಕವಲಂಬಿನಿಂದೋರ್ವ ಬೇಡನಾಯಕನಾಗ । ತವಕದಿಂದಾನೆಯನಿಡಲು ॥
ನವ ಮುತ್ತು ಶಿರವೊಡೆದೊಗಲು ರಾಜಿಸಿದವು । ದಿವಿಯಿಂದುಡುಗಳುದುರ್ವಂತೆ ॥ ೭೫ ॥

ಘನಕುಚ ಕುಣಿಯಲು ನಡೆವ ಭಾರಕೆ ತನ್ನ । ಕೊನೆಗಣ್ಣ ಬೆಳಗು ಪಲ್ಲವಿಸೆ ॥
ಇನಿತು ಬೇಗದಿ ಬರೆ ಶಬರ ಮೌಕ್ತಿಕವದ- । ವನಿತೆಗಿತ್ತೆರಡು ಮುತ್ತುಗಳ ॥ ೭೬ ॥

ಮೆಳೆಯಸೋವುತ ಬರಲಾಗೊಂದು ಎಯ್ಯಂದಿ । ಘಳಿಲನೆ ತನ್ನ ಮೈಯೊದರೆ ॥
ಹೊಳೆದವು ಚುಯಿಚುಯಿಗುಟ್ಟುತದರ ಮುಳ್ಳು । ಇಳೆಯಾಗಸವ ತುಂಬಿದವು ॥ ೭೭ ॥

ವನಚರರುಗಳ ತೋಳೆಡೆ ಹೊಟ್ಟೆಗಳನು । ಇನಿಸು ಬೇಗದಿ ತಟ್ಟುಗಿದು ॥
ಘನವಾದ ಗಾಯದಿಂದೊದಗಿರೆ ಎಯ್ಯಂದಿ । ವನವ ಪೊಕ್ಕುದು ಲಂಘಿಸುತ ॥ ೭೮ ॥

ಬೇಡನಾಯಕನೋರ್ವ ಕ್ರೋಧಸಿಗಿದಿರಾಗೆ । ದಾಡೆಯಿಂ ತೊಡೆ ಮುರಿಹೊಯ್ಯೆ ॥
ಗಾಢದಿಂ ಸುರಗಿಯ ಕಿತ್ತದರೆದೆಯನು । ಬೇಡ ತಿವಿದು ಕೆಡಹಿದನು ॥ ೭೯ ॥

ಹರಿಣವಿಂಡುಗಳನು ಕಂಡು ಬೇಡರುಗಳು । ಭರದಿ ತಡಿಕೆ ಬೆಳ್ಳಾರಗಳ ॥
ಹರಹಿ ಸುತ್ತಲು ಒಡ್ಡಿ ಶ್ವಾನಗಳನು ಬಿಟ್ಟು । ಸ್ವರದೋರಿ ಕುಲಿಲಿ ಭೋ ಎಂದು ॥ ೮೦ ॥

ಮರುತದಿಂದಿಮ್ಮಡಿಯಾಗಿ ಹಾರುತ ಹುಲ್ಲೆ । ಹರಿಯಿಂದ ನಾಲ್ಮಡಿಯಾಗಿ ॥
ಭರದಿಂದ ಲಂಘಿಸಿ ಲಂಘಿಸಿ ನೆಗೆವುತ । ಬಿರುತೋಡಿದವು ಕಂಡ ಕಡೆಗೆ ॥ ೮೧ ॥

ತಡಿಕೆಯ ನೆಗೆದು ಪೋಗಲು ಪುಲ್ಲೆಯುದರ ಬೆಂ- । ಗಡೆಯೊಳು ಕರ್ಕ್ಕರ ಹಾರಿ ॥
ಹಿಡಿದು ಕೆಡಹಿದವು ಕೆಡುಕ ಬೇಡರುಗಳು । ಒಡನೆ ಕವಣೆಯಿಂದೆಸೆವರು ॥ ೮೨ ॥

ಬಸಿರಾದ ಹರಿಣಿಯು ಬಿಟ್ಟು ಹೋಗದೆ ಗಂಡು । ಎಸಕದಿಂ ಕಾದಿರೆಯರಳೆ ॥
ಅಸವಸದಿಂ ಬೇಡನೆಚ್ಚು ಕೆಡಹಿ ತ- । ನ್ನಸಿಯಳ ನೋಡು ನೋಡೆಂದ ॥ ೮೩ ॥

ನಡೆಯಲಾರದೆ ತುಂಬಿದ ಗರ್ಭಿಣಿ ಹುಲ್ಲೆ । ಒಡನೆ ನಿಂದಿರೆ ಬೋಳಂಬಿಂದ ॥
ಬಿಡದೆ ಎಸೆಯಲು ಘಾಯದಿ ಮರಿ ಹೊರಡಲು । ಕಡು ನಲ್ಮೆಯಿಂ ನೆಕ್ಕುತಿಹುದು ॥ ೮೪ ॥

ಶಶವೊಂದು ಬೆಚ್ಚುತ ಗಗನಕ್ಕೆ ಲಂಘಿಸಿ । ಶಶಿಯೊಡಲನು ಮರೆಗೊಳಲು ॥
ವಸುಧೆಯೊಳಂದಿಂದ ಚಂದಿರನೊಡಲೊಳು । ಶಶವುಂಟೆಂದು ಪೇಳುವರು ॥ ೮೫ ॥

ಗ್ರಾನು ಶಾರ್ದೂಲವು ಹರಿಣಗಳನು ಕಂಡು । ಸೋಮನೊಡಲೊಳು ರಂಜಿಸುವ ॥
ಹೇಮವರ್ಣದ ಮಿಗವನು ಕೊಲಬೇಕೆಂದು । ವ್ಯೋಮಕೆ ನೆಗೆವವೇನೆಂಬೆ ॥ ೮೬ ॥

ಆನೇರಿದ ಹರಿಣವನೀ ಬೇಡರು । ಹೀನರು ಕೊಂದಪರೆಂದು ॥
ಆನಂಜಿಯಾಗಾರನೆಯ ಮೂಲೆಯ ಹೊಕ್ಕ । ಏನೆಂಬೆ ಅಡಗಿಹ ಮರುತ ॥ ೮೭ ॥

ಒಡಲೊಳಗಿರ್ದ ರಳೆಯನೀ ಬೇಡರು । ತಡೆಯದೆಚ್ಚಪರೆಂದಂಜಿ ॥
ನೃಡಶಿರವಿಧುವೇರಿ ಚಂದ್ರಮೌಲಿಯೆಂದು । ನುಡಿವರಂದಿದುಮಾಪತಿಯು ॥ ೮೮ ॥

ಭರದಿಂದ ಸ್ವರದೋರಲಾಗೋರ್ವ ಬೇಡನು । ಕರಡಿಯ ಶಿರವೆತ್ತಿ ನೋಡಿ ॥
ಹರಿ ತಂದವನ ತನ್ನ ಮುಸುಡಿನಿಂದಲೆ ಗುದ್ದಿ । ಧರೆಯೊಳು ಬಿರ್ದನ ಕಂಡು ॥ ೮೯ ॥

ಮುರಿದೊಂದು ಕಡ್ಡಿಯ ತಂದಾಸನದೊಳು । ಸರಿದಾಗ ಜಕ್ಕುಲಿ ಗಿರಿಯ ॥
ತುರಿಹದಿಂದಾಡಿಸಿಯಾಡಿಸಿಯವನನು । ಹರಣವ ಕಳೆದೋಡುತಿರಲು ॥ ೯೦ ॥

ವನಚರ ಶಕ್ತಿಯಿಂದಿಡಲು ಮರಳಿ ಕೊಂ- । ಡಿನಿಸು ಬೇಗದೊಳದು ಬೀಳೆ ॥
ವನದೊಳಗಿರ್ದ ಮೃಗೀಗಣ್ಣಂಗಳ । ಘನವಾಗಿ ಹತಿಸಿ ಬೊಬ್ಬಿರಿದು ॥ ೯೧ ॥

ಬೀಸಿ ಬೆಳ್ಳಾರವ ಪಿಡಿವುತ ಮಿಗವನು । ಓಸರಿಸದೆ ಪಂದಿಗೊಲುತ ॥
ಸಾಸಿಗತನದಿಂದ ಸಿಂಹನ ಸೀಳುತ- । ಲಾ ಶಬರರು ಬಿಡದಾಲೆ ॥ ೯೨ ॥

ಸ್ವರವನು ಗುಹೆಯೊಳಗಿರ್ದ ಹೆಬ್ಬುಲಿ ಕೇಳಿ । ಕೆರೆವುತ ಕಾಲೊಳು ನೆಲನ ॥
ದರಿಯ ಬಾಗಿಲೊಳು ಬಂದಿರ್ಪ ಹೆಬ್ಬುಲಿಯನು । ಹರಿದಾಡುತಿರ್ದ ಶಬರರು ॥ ೯೩ ॥

ಕಡು ಬೇಗದಿಂ ಕಂಡು ಕುಣಿದು ಬೊಬ್ಬಿರಿವುತ । ಬಿಡುತ ಬೇಂಟೆಯ ನಾಯಿಗಳ ॥
ಇಡುತ ಕವಣೆ ಕಲ್ಲುಗಳಿಂದ ವ್ಯಾಧರು । ನಡೆದು ಬರುವುದನು ಕಂಡು ॥ ೯೪ ॥

ಅಡಗಿಸಿ ತನ್ನ ತನುವ ಕೋಪಾಟೋಪದಿ । ಕಡೆಗಾಲದ ಸಿಡಿಲಂತೆ ॥
ಘುಡಿಘುಡಿಸುತ ತನ್ನ ಬಾಯನು ತೆರೆವುತ । ಪೊಡವಿಯ ಕೈಗಳಿಂ ಹೊಯುತ ॥ ೯೫ ॥

ಒಡೆದು ಹಾಕುತ ದಾಡೆಗಳಿಂದ ಮರಗಳ । ಬಿಡದೆ ದುಂಡಿಸುತ ಬಾಲವನು ॥
ಬಡಿ ಬಂಡವ ಮಾಡುತ ಜಾಯಿಲಂಗಳ । ಬಡಿದು ಸೀಳುತ ಪುಳಿಂದರನು ॥ ೯೬ ॥

ಹರಿವುತ ಕಾಲಕಣ್ಣುಗಳನ್ನು ತಡಿಕೆಯ । ಮುರಿವುತ ಗಜರಿ ಘರ್ಜಿಸುತ ॥
ಶಿರಗಳನಗಿದು ರಕ್ತಗಳನು ಕುಡಿವುತ । ಕರುಳುಗಳನು ತೋಡಿಯಿಡುತ ॥ ೯೭ ॥

ತೊಡೆಗಳ ಉಗುರುಗಳಿಂದ ಹಿಸಿವುತಲಿ । ಕೆಡಹಿ ಜಗಿದು ಪಲ್ಗಳಿಂದ ॥
ಒಡನೆ ಮೆಳೆಯ ಕರ್ಚಿ ರಕ್ತವ ಹೀರುತ- । ಲಡಿಗಳಿಂದೊದೆದು ಕೆಡುಹುತ ॥ ೯೮ ॥

ತೋಳ ಜಿಗಿದು ಮಿದುಳನು ಈಡಾಡುತ । ಆಳುಗಳನು ಕೆದರಿಸುತ ॥
ಘೋಳಿಡಿಸುತ ಬೇಡಪಡೆಯನೆಲ್ಲವ ಕೊಂದು । ಕೋಳಾಹಳದಿ ಗುಹೆವೊಗಲು ॥ ೯೯ ॥

ಕಡು ಪಾಪಿಗಳು ವನೇಚರರಳುಕದೆ । ಬಿಡದೆ ಗುಹೆಯು ಬಂದು ಮುತ್ತಿ ॥
ಬಿಡಲಾಗ ರಾತ್ರಿಜಾಗರಗಳನವು ಹೋಗಿ । ಹಿಡಿದವು ನಾಣುದಾಣವನು ॥ ೧೦೦ ॥

ಕಲಿತನದಿಂ ಕಾಡ ಬೇಡರು ಗುಹೆವೊಕ್ಕು । ಹುಲಿಯನಿಕ್ಕಡಿ ಮಾಡಿಯದರ ॥
ಬಲು ದೊಡ್ಡ ಬಾಲುಗುರುಗಳ ಮಿಾಸೆಯ ಕೊಂಡು । ಗೆಲವಿನಿಂ ಪೋದರಾ ಪುಲಿಯು ॥

ಅತಿ ಪಾಪವ ನೆರಪಿದ ಕಾರಣದಿಂದ । ಪ್ರಥಮ ನರಕವನು ಪೊಕ್ಕು ॥
ಮಿತವಾದೊಂದಂಬುಧಿಯಾಯುತೀರಲುಮಿರ್ದು । ನುತವೆತ್ತ ಭರತಕ್ಷೇತ್ರದೊಳು ॥

ಕರ ಚೆಲುವಾಗಿರ್ದ ಸಹ್ಯಾಚಲದೊಳು । ಮೆರೆವ ರೋಹಟಕಾಪುರದ ॥
ಅರಸು ಗಂಧರ್ವಗೆ ನಾರಕಚರ ಬಂದು । ವರ ಕುಮಾರಕನಾಗಿ ಪುಟ್ಟಿ ॥ ೧೦೩ ॥

ಕುವರಗೆ ಶುಭದಿನದೊಳಗಾ ಭೂವರ । ಪವಣಾಗಾಣದ ಸಂಭ್ರಮದಿ ॥
ಸವಿನಯದಿಂದ 'ಅರಿಂಜಯ' ಪೆಸರಿಡೆ । ನವ ಯೌವನವಾಂತು ಬೆಳೆದು ॥ ೧೦೪ ॥

ಮುನಿನಾಥನೋರ್ವನ ಕೆಂಬಜ್ಜೆಗಳ ಸೇರಿ । ಜಿನಧರ್ಮಾರಾಧಕನಾಗಿ ॥
ಘನ ದುರಿತಾರಣ್ಯ ನಿಶಿತ ಕುಠಾರವಾದ । ಮಿನುಗುವ ಸಮ್ಯಕ್ತ್ವವಾಂತು ॥ ೧೦೫ ॥

ಇರುತಿರಲಿತ್ತ ಗುಹೆಯು ಬಾಗಿಲ ಮುತ್ತಿ । ಭರದಿ ಹೆಬ್ಬುಲಿಯನು ಕೊಂದು ॥
ಕರಿಕವಣ್ಣದ ಕಾಡಿಗರು ದುಷ್ಕೃತದಿಂದ । ಮರಣವಡೆದು ಸಂಸಾರದೊಳು ॥ ೧೦೬ ॥

ತಿರುಗಿ ತಿರುಗಿ ಬಂದು ನಾನಾ ಪುಣ್ಯದಿ । ವರ ರೋಹಟಕಪುರದೊಳಗೆ ॥
ತಿರುಕ ಹಾರುವರು ಸಾಸಿರಮಂದಿಯಾಗಿರು- । ತಿರಲೊಂದಾನೊಂದು ಪಗಲು ॥ ೧೦೭ ॥

ಕಡು ಬೇಗದಿಂದಲಿ ಪಾರ್ವರೆಲ್ಲರು ಬಂದು । ಒಡನೆ ಪೊಕ್ಕಾ ರಾಜಸಭೆಯ ॥
ಪೊಡವಿಪ ಗಂಧರ್ವೇಶನ ಪರಸುತ । ಬಿಡದೆ ಮಂತ್ರಾಕ್ಷತೆ ತಳಿದು ॥ ೧೦೮ ॥

ಹರುಷದಿ ಶಾಸ್ತ್ರಪ್ರಸಂಗಗಳನು ಮಾಡಿ । ನರನಾಥ ! ನಾವೀ ಲೋಕದೊಳು ॥
ನರಜನ್ಮದೊಳಗುತ್ತಮರು ನಮ್ಮಿಂ ಬಿಟ್ಟು । ವರ ಪಾತ್ರಮಿಲ್ಲದರಿಂದ ॥ ೧೦೯ ॥

ಕರಿ ಹಯ ದಾಸೀ ಕನ್ಯಾವನಿ ಸ್ವರ್ಣ । ಮೆರೆವ ಗೌ ತಿಲ ರಥ ಭವನ ॥
ಪಿರಿದೆನಿಪತುಳ ದಾನಗಳಿವು ದಶ ದಾನ । ಮುರುಕದಿಂ ನಮಗೀಯೆ ಮುಂದೆ ॥ ೧೧೦ ॥

ಸುರಪದವಿಯ ಸೂರೆಗೊಂಡು ಕೈವಲ್ಯ- । ದರಸಾಗಿ ಪರಮೇಶ್ವರನ ॥
ಚರಣ ಸೇವೆಯ ಮಾಡಿಕೊಂಡನವರತವು । ಇರಬಹುದು ನೀನೆಂದು ॥ ೧೧೧ ॥

ನುಡಿದ ನುಡಿಯ ಕೇಳಿ ನಸುನಕ್ಕರಿಂಜಯ । ಒಡನೆ ತಾನಿಂತು ನುಡಿದನು ॥
ಬಿಡದೆ ಜೀವಂಗಳ ಯಜ್ಞದ ನೆವದಿಂದ । ಕಡಿದು ತಿಂಬರ ವಂಶವನು ॥ ೧೧೨ ॥

ವರ ವಂಶವೆನ್ನಬಹುದೆ ಈ ಧರೆಯೊಳು । ನೆರೆ ಪಾಪಿಷ್ಠರು ನೀವೇ ॥
ಕರುಣರಹಿತರು ನಿಕೃಷ್ಟ ಜಾತಿಯು ನೀವೇ । ಅರಿಕೆಯಿಂ ನಿಮಗಿತ್ತ ದಾನ ॥ ೧೧೩ ॥

ನರಕವೆಯ್ದಿಸುವುದಲ್ಲದೆ ಬೇರೊಂದಿಲ್ಲ । ಉರಗಗೆ ಪಾಲನೆರೆಯಲು ॥
ಗರಳವ ಸೋವನ್ನ ಬಿಡದೆಂಬ ಗಾದೆಯಿಂ । ಮರುಭೂಮಿಯೊಳು ಬೀಜವನು ॥ ೧೧೪ ॥

ನೆಡಲಡು ಪುಸಿವಂತೆ, ಹಸಿಯ ಮಡಕೆಯೊಳು । ಮಡಗಿದ ಗೋವಿನ ಪಾಲು ॥
ಒಡೆದು ತಾ ಕೆಡುವಂತೆ ನಿಮಗಿತ್ತ ದಾನವು । ಕೊಡಲಾರದು ಸಫಲತೆಯ ॥ ೧೧೫ ॥

ಕನಸು ಮನಸಿನೊಳು ಜೀವರಾಶಿಗಳೊಳು । ಇನಿಸಾದರು ದಯವಿಲ್ಲ ॥
ಮುನಿಗಳ ಕಂಡರೆ ಹಳಿವುತ ನಿಮಗಿಂತ । ಘನ ಪೂಜ್ಯರೆ ಎನುತಿಹಿರಿ ॥ ೧೧೬ ॥

ರಾಟಿಳೆಯಂತೆ ಮುಂಗೈ ತೋರ ಹಗ್ಗವ ! ತಾಟಕರಿಕ್ಕಿ ಕೊರಳಿಗೆ ॥
ಕೋಟಲೆಯಿಂದ ತಟಾಕನದಿಗಳೊಳು । ಪೋಟರುಗಳು ಕಾಗೆಯಂತೆ ॥ ೧೧೭ ॥

ಮುಳುಗುತ ಕಳ್ಳಹೊನ್ನಿಗೆ ದೊಡ್ಡ ಮುದ್ರೆಯಿಂ- । ಬಿಳಿಯಾಡುವ ಗಾದೆಯಂತೆ ॥
ಬಳಿದ್ಯೆದೆ ಪಣೆ ತೋಳು ಕೊರಳು ಕಿವಿಗಳೊಳು । ಮಲಯಜ ನಾಮ ಬೂದಿಯನು ॥

ಹೊಲೆಯರ ಮನೆಯಾದಿ ಪದಿನೆಂಟು ಜಾತಿಯ । ನಿಳಯಕೆ ಪೋಗಿ ಪಡಿಯನು ॥
ತಲೆ ಹುಳಿತುಕೊಂಡ ನಾಯಂತೆ ತಿರುಗಿ ಬೀಳ್ಪ । ಖಳರಿಗಿತ್ತೊಡೆ ಫಲವೇನು ॥ ೧೧೯ ॥

ಸಲೆ ಇನಿಸಾದರು ಲಜ್ಜೆ ನಾಚಿಕೆಯಿಲ್ಲ । ಕಿಲುವುತ ಕೊರವರಂದದೊಳು ॥
ಸುಲಿಕೊಂಬುದಲ್ಲದೆ ಕಂಡರ ಕಡೆಯಿಂದ । ಬಳಲಿ ಬಂದೋರ್ವ ಬೇಡಿದರೆ ॥ ೧೨೦ ॥

ಇಲ್ಲೆಲ್ಲಿಯದು ಹೋಗು ತಿರುಕ ಮುರವನೆಂದು । ಸೊಲ್ಲಿಪ ನುಡಿಗಳಲ್ಲದೆಯು ॥
ಗೆಲ್ಲದಿಂದೀವ ಗುಣಗಳು ನಿಮ್ಮಯ ಜಾತಿ- । ಯಲ್ಲುಂಟೆ ದಯೆ ದಾಕ್ಷಿಣ್ಯ ॥ ೧೨೧ ॥

ಕಪಿಯಂತೆ ಹಲ್ಲಕಿರಿಯುತ ದೈನ್ಯೋಕ್ತಿಯಿಂ । ಕೃಪೆ ಮಾಡಿ ದಾನವನೆಂದು ॥
ಲಪಿಸುತ ಮತ್ತು ನಿಮ್ಮಯ ಮೂಳಾಟವ । ಕೃಪಣರು ಬಿಡುವರಲ್ಲೆಂದು ॥ ೧೨೨ ॥

ಕತ್ತೆಗಿರುಬ ಇಲುವನು ಕೂಡಿಹಾಕಿದಂ- । ತೆತ್ತೆತ್ತಲಿಂ ತಿರಿತಂದು ॥
ಮತ್ತೆ ಬಾಯ್ಬಿಡುವುದಲ್ಲದೆ ದಾನ ಧರ್ಮವ । ಉತ್ತಮ ಪಾತ್ರಕೆ ನೀವು ॥ ೧೨೩ ॥

ಕೊಡುವವರುಗಳಲ್ಲ ವ್ರತ ನೋಂಪಿ ನಿಮಗಿಲ್ಲ । ಪಡದೊಡವೆಯ ವೇಶಿಯರಿಗೆ ॥
ಬಿಡದಿತ್ತು ಸಪ್ತವ್ಯಸನದಲ್ಲಿ ನಡೆವರ್ಗೆ । ಕೊಡುವಾತ ನರಕಗಾಮಿನಿಯು ॥ ೧೨೪ ॥

ದಶದಾನವೆಂಬವು ಹಿಂಸೆಗೆ ಕಾರಣ । ವ್ಯಸನಿಗಳ್ಪೇಳಿದರದನು ॥
ಋಷಿಪ್ರೋಕ್ತವಲ್ಲವು ನರಕಭಾಜನವೆಂದು । ವಸುಧೆಯೊಳ್ಕೊಡಬಾರದವನು ॥ ೧೨೫ ॥

ಅನ್ನಾಭಯಭೈಷಜ್ಯಶಾಸ್ತ್ರಗಳಿಂ- । ಬುನ್ನತ ನಾಲ್ಕು ದಾನಗಳು ॥
ಸನ್ನುತ ಮೋಕ್ಷ ಫಲಂಗಳ ಕೊಡುವ ಪ್ರ- । ಸನ್ನ ಬೀಜಗಳಿವು ತಾನೆ ॥ ೧೨೬ ॥

ಎಂದು ನುಡಿದ ದೊರೆಗುವರನ ನುಡಿಗೇಳಿ । ನೊಂದು ಚಿತ್ತದೊಳು ಬ್ರಾಹ್ಮಣರು ॥
ಇಂದು ನೃಪನು ಕೊಡುವ ದೊಡ್ಡ ದಾನಕ್ಕೆ । ಬಂದಡ್ಡಲಾದನು ಪಾಪಿ ॥ ೧೨೭ ॥

ಏನ ಹೇಳುವೆ ನಮ್ಮೆಲ್ಲರ ಸಭೆಯಲ್ಲಿ । ಹೀನವ ಮಾಡಿ ತಾ ಹಳಿದು ॥
ಮಾನಭಂಗವ ಮಾಡಿದ ಈ ಕುವರನ । ನಾನಾ ತೆರದೊಳಗಾವು ॥ ೧೨೮ ॥

ಹರಣಕೆ ತಾರದಿರ್ದೊಡೆ ಬದುಕಿಲ್ಲೆಂದು । ಇರುತಿರಲೊಂದು ದಿನದೊಳು ॥
ಪರಿಮಳಮಯವಾದ ವೀಳೆ ಕಸ್ತುರಿಗಾಗ । ಗರಳವ ಮಾಡಿ ಕೋಪದೊಳು ॥ ೧೨೯ ॥

ರೂಪಿಣಿಯೆಂದೆಂಬ ವೇಶ್ಯೆಯ ಕೈಯೊಳು । ಪಾಪಿಷ್ಠರು ಕೊಟ್ಟು ಕಳುಹೆ ॥
ರೂಪಕಂದರ್ಪನರಿಂಜಯ ಕುವರಗೆ । ರೂಪಜೀವೆಯು ಕಾಣಿಕೆಯ ॥ ೧೩೦ ॥

ಕೊಡಲಾಘ್ರಾಣಿಸಿ ಮೆಚ್ಚಿಯಾ ಸೂಳೆಗೆ । ಉಡುಗೊರೆ ತೊಡವುಗಳಿತ್ತು ॥
ಕಡು ರಾಗದಿಂದಂಗಲೇಪನವನು ಮಾಡೆ । ಒಡಲೊಳು ದಳ್ಳುರಿ ಪುಟ್ಟೆ ॥ ೧೩೧ ॥

ತೃಷೆ ಸಂಜನಿಸಿಯಾ ಕ್ಷಣವೆ ಮೈಯೊಳಗೆಲ್ಲ । ಹಸಿಯ ಬೊಕ್ಕೆಗಳೆದ್ದುವಾಗ ॥
ಅಸಿತಮಸೂರಿಕವೊಡಲೊಡೆದೆದ್ದವು । ತ್ರಸಗಳು ಪುಟ್ಟೆ ಮೊಗದೊಳು ॥ ೧೩೨ ॥

ನೊರೆ ನೆತ್ತರು ನಾಸಿಕದೊಳು ಸುರಿಯಲು । ಮರಳಿದವಾಗ ಲೋಚನವು ॥
ಹೊರಳದೆ ನಾಲಿಗೆ ಮರಣದೊಳರುಹನ । ಸ್ಮರಿಸುತ ಚಿತ್ತದೊಳವನ ॥ ೧೩೩ ॥

ತನುವಿನ ಭಾರವ ಬಿಸುಟು ಸೌಧರ್ಮವೆಂ- । ಬನುಪಮ ಸ್ವರ್ಲೋಕದೊಳಗೆ ॥
ಮಿನುಗುವ ಜಲಕಾಂತವೆಸರ ವಿಮಾನದೊ- । ಳನಿಮಿಷನಾಗಿ ಪುಟ್ಟಿದನು ॥ ೧೩೪ ॥

ಇತ್ತಲು ಗಂಧರ್ವೇಶನು ಕುವರನು । ತುತ್ತಾದ ಜವನಿಗೆಂಬುದನು ॥
ಭೃತ್ಯರಿಂ ಕೇಳಿ ಹೃದಯದೊಳು ಕಡು ನೊಂದು । ಮತ್ತೊಮ್ಮೆ ವಿವರಿಸಿ ಕೇಳಿ ॥ ೧೩೫ ॥

ಕರೆಸಿ ರೂಪಿಣಿಯೆಂಬ ಸರ್ವವಲ್ಲಭೆಯನು । ಪರಿಮಳವೆಲ್ಲಿಯದೆಂದು ॥
ಅರಸು ಕೇಳಲು ಕೈಯ ಮುಗಿದೆಲೆ ಸ್ವಾಮಿ ! ಈ । ಪುರದ ವಿಪ್ರರು ಕರೆದೆನ್ನ ॥ ೧೩೬ ॥

ಪರಿಮಳಮಯವಾದ ಮೃಗಮದವನು ನೀ- । ನರಮಗನಿಗೆ ಕೊಡೆಂದು ॥
ಕರೆದೆನ್ನ ಕರದೊಳು ಕೊಡಲಾಗ ಪಿಡಿತಂದು । ವರ ಕುವರಗೆ ಕೊಟ್ಟೆನೆನಲು ॥ ೧೩೭ ॥

ಇರುಳಿನ ಸಮಯದೊಳಗೆ ಕೇಳಿ ಭೂಭುಜ । ಮೊರೆದೆದ್ದು ಕುಟಿಲದಿ ಕೊಂದ ॥
ನೆರೆ ಚಾಂಡಾಲಮಾನಸ ಹಾರುವರನ್ನು । ಗರಗಸದಿಂ ಕೊರೆ ಕೊರೆದು ॥ ೧೩೮ ॥

ದಿಗುಬಲಿಗಳ ನನ್ನಿಯಿಂ ಬೆಳಗಾಗಲು । ತೆಗೆ ಬಿಗಿಯಿಂ ಕೊಡಿಯೆಂದು ॥
ಜಗದೀಶನು ಸೇವಕರಿಗೆ ಪೇಳ್ವುದ । ದಿಗಿಲನೆಯೊರ್ವನು ಕೇಳಿ ॥ ೧೩೯ ॥

ಭೂರಮಣೀಶನಾಸ್ಥಾನದೊಳಗೆ ಪೇಳ್ದ । ವಾರತೆಯನು ವಿಪ್ರಜನಕೆ ॥
ಸಾರಲು ಬ್ರಾಹ್ಮಣ್ಯವೆಲ್ಲವು ತಮ್ಮಯ । ನಾರಿಮಕ್ಕಳು ಸಹವಾಗಿ ॥ ೧೪೦ ॥

ಇರುಳಿಂದಿರುಳೆ ಕೋಂಟೆಯ ದಾಂಟಿ ಕದ್ದೋಡಿ । ಭರದಿ ವಿಂದ್ಯಾಟವಿ ಪೊಕ್ಕು ॥
ನೆರೆದಿರ್ದ ತಾಪಸರಾಶ್ರಮದೊಳಪೊ- । ಕ್ಕಿರುತಿರ್ದು ಮಿಥ್ಯಾಶಾಸ್ತ್ರದೊಳು ॥ ೧೪೧ ॥

ಕಡು ನಂಬುಗೆ ಪುಟ್ಟಿ ತಾಪಸರೂಪನಾ । ಬಿಡದೆ ತಾವೆಲ್ಲರು ಧರಿಸಿ ॥
ಒಡಲೊಳಗುಪಶಾಂತ ಜನಿಸಿರ್ದು ಕಡೆಯೊಳು । ಮಡಿದು ಸೌಧರ್ಮ ಕಲ್ಪದೊಳು ॥

ಸುರಪತಿ ಸಭೆಯೊಳು ಕರವನು ಜೋಡಿಸಿ । ವರೆದಾಳು ಬೆಸನವ ಮಾಳ್ಪ ॥
ದುರುಳ ಕಿಂಕರ ಕಿಲ್ವಿಷ ನಿರ್ಜ್ಜರರಾಗಿ । ಭರದಿ ಸಂಜನಿಸಿದರವರು ॥ ೧೪೩ ॥

ಸುರಲೋಕದೊಳಿರ್ದು ಸುಖಮುಂಡರಿಂಜಯ । ಚರನಾಯುಷ್ಯದಂತ್ಯದೊಳು ॥
ನರನಾಥ ! ಬಂದು ನಿನ್ನಮಲಗರ್ಭದೊಳೀಗ । ಹರಿಚಂದ್ರನಾಗಿ ಪುಟ್ಟಿದನು ॥ ೧೪೪ ॥

ಕುಮುದ ಮನೋಹರ ಕೀರ್ತಿಯೆ ನಿನ್ನಯ । ರಮಣಿಯರಿಗೆ ಮುಂಪೇಳ್ದ ॥
ಕುಮತವನಾಶ್ರಿತ ಕಿಲ್ವಿಷ ತ್ರಿದಶರು । ಕ್ರಮದಿಂದಿಳಿದು ಬಂದೀಗ ॥ ೧೪೫ ॥

ತೊಳಗುವ ಕಾಯವನಾಂತೊಂದು ಸಾಸಿರ । ಎಳೆವರೆಯದ ಕುಮಾರಕರು ॥
ನಲವಿಂದ ನಿನ್ನ ಗರ್ಭದೊಳು ಸಂಜನಿಸಿದ- । ರೊಲವಿನ ದಾರಕರಾಗಿ ॥ ೧೪೬ ॥

ಎಂದು ಪೇಳಲು ನರನಾಥ ಚಂದ್ರಮ ತನ್ನ । ನಂದನರುಗಳ ಭವಗಳ ॥
ಚಂದದಿಂ ಕೇಳಿದ ಮುನಿನಾಥ ಕಮಲಕಿಂ- । ದಿಂದಿಂದಿರನಾಗೊಪ್ಪಿದನು ॥ ೧೪೭ ॥

ಕುರುಕುಲಾಂಬರ ಭಾನು, ಯಾಚಕ ಸುರಧೇನು । ಗುರುಪಾದಾಬ್ಜಕೆ ಮಧುಸೂನು ॥
ಸುರುಚಿರ ಧೈರ್ಯದೊಳಗೆ ಶ್ರೀಮಣಿ ತಾನು । ದೊರೆ ಜ್ಞಾನಚಂದ್ರನೊಪ್ಪಿದನು ॥ ೧೪೮ ॥

**॥ ಅಂತು ಸಂಧಿ ೨೯ಕ್ಕಂ ಪದ ೩೯೯೫ಕ್ಕಂ ಮಂಗಲಂ ॥**

## ಕಾಂಪಿಲ್ಯ ನಗರದ ಮುತ್ತಿಗೆ.

ಹೊಳೆಯೊಳು ಹರಿಚಂದ್ರ ಮುಳುಗಿಹೋದುದ ಮುನಿ । ಇಳೆಯಾಣ್ಮಗುಸುರ್ದುದಪೇಳ್ವೆ ॥

ಯಮಿಗಣನುತಪಾದ ಅಮರೇಂದ್ರ ಪೂಜಿತ । ಸುಮನೋಬಾಣಾಂಬುಜಸೋಮ ॥
ಸಮವಸರಣ ಕಮಲೆಯಸಾಳ್ದ **ಶಾಂತೀಶ** ! । ನಮಗೆ ಕೊಡಮೃತ ಸುಖವ ॥ ೧ ॥

ಧರಣೀಶ್ವರ ! ಕೇಳು ಮುನ್ನಿನ ವೈರದಿಂ । ನೆರೆದೀ ಕುವರ ಸಾಸಿರವು ॥
ಹರಿಚಂದ್ರ ಕುವರನ ಕೊಲ್ಲಲು ಪಡೆಯದೆ । ಪರಮ ಸ್ನೇಹಿತವನು ಮಾಡಿ ॥ ೨ ॥

ಭರದಿ ವನಕೆ ಕರೆದೊಯ್ದಾ ಕುವರನ । ನವರತ್ನಗಿರಿಯಗ್ರಕೇರಿ ॥
ದರಿಯ ಬಾಗಿಲೊಳು ಗಗನವ ತುಡುಕುವ ಮಾ- । ಮರನೇರಿಸಿ ಕುಮಾರಕನ ॥ ೩ ॥

ಹರಿಚಂದ್ರನವರ ಕಾಪಟ್ಯವನರಿಯದೆ । ವರ ಫಲಗಳ ಕುಯ್ದುಳುಹಿ ॥
ಬರುವೆನೆಂಬನಿತರೊಳಗೆಯಾತನೇರಿದ । ಸರಸಚೂತದ ಕೊನೆಗಡಿಯೆ ॥ ೪ ॥

ನೆರಿಕೆಂದು ಕೊಂಬೆ ಮುರಿಯಲಲ್ಲಿಂ ಬಿರ್ದ್ದ । ಉರಗಲೋಕಂಬರ ಕೊರೆವ ॥
ವರ ನಿಮ್ನವಾದ ಹೊಳೆಯ ಮಧ್ಯದೊಳು ಬಿರ್ದ್ದ । ಭರದಿ ಮುಳುಗುತಲೇಳುತ್ತ ॥ ೫ ॥

ನೆರೆ ಜಾಣ ಪಲವುನಿಸುಗಳಿಂದಲೀಸುತ್ತ । ತೆರೆಯ ತಪ್ಪಿಸುತ ಸುಳಿಗಳು ॥
ಇರುವ ತಾಣವ ಬಿಟ್ಟು ಬರುತಿರಲಾಗೊಂದು । ಮರದ ಬೇರಾ ಕುಮಾರಕನ ॥ ೬ ॥

ನೆರಪಿದ ಪೂರ್ವಾರ್ಜಿತವಾದ ಪುಣ್ಯದಿ । ಚರಣಯುಗಲವನು ತೊಡರೆ ॥
ಅರಮಗ ಜಿನರಾಜನ ಚರಣಾಬ್ಜವ । ಸ್ಮರಿಸುತಲಾ ಬೇರ ಪಿಡಿದು ॥ ೭ ॥

ಕಡು ಬೇಗದಿಂ ಬಂದು ನದಿಯ ತಡಿಯ ಸೇರಿ । ಹಿಡಿದ ಬೇರನು ಬಿಟ್ಟು ಕುವರ ॥
ಬಿಡಮುಚ್ಚರಿಸುತ ಜಿನ ನಾಮಂಗಳ । ಕೆಡುಕರೆಸಗಿದ ಚೇಷ್ಟೆಯನು ॥ ೮ ॥

ನೆನೆವುತಲತಿ ಬೆಂಡಾಗಿಯಶೋಕೆಯ । ಘನವಾದ ಮರದಡಿಯೊಳಗೆ ॥
ನೆನೆಕೆಂದಳಿರ್ಗಳ ಪಾಸಿಯದರ ಮೇಲೆ । ಮನುಜೇಂದ್ರ ಸುತನು ಕುಳ್ಳಿರಲು ॥ ೯ ॥

ಬನದೊಳು ತಿರುಗುತಲಾಗೋರ್ವ ವಣಿಜನು । ಬನದ ಸಿರಿಯ ನೋಡುತಲಿ ॥
ಮಿನುಗುವಸೋಗೆ ಪೆರ್ಮರದಡಿಯೊಳಗಿರ್ದ । ಘನ ಮಹಿಮನನಾತ ಕಂಡು ॥ ೧೦ ॥

ಇವನಾರಿಂತಪ್ಪ ರೂಪಿನ ಚೆನ್ನಿಗ । ದಿವಿಜ ಕುಮಾರನೋ ಮೇಣು ॥
ರವಿ ಈ ಬನದ ಕತ್ತಲೆಯ ಕಳೆಯಲೆಂದು । ಭುವಿಗಿಳಿತಂದು ಕುಳಿತನೋ ॥ ೧೧ ॥

ಸ್ಮರನೆಂಬೆನೆ ಕರ್ಬ್ಬಿಲ್ಲಿಲ್ಲ ಕರದೊಳಿಲ್ಲ । ಹರಿಯೆನೆ ಕೌಸ್ತುಭವಿಲ್ಲ ॥
ಹರನೆಂಬೆನೆ ಹಣೆಯೊಳು ಬಿಸಿಗಣ್ಣಿಲ್ಲ । ದೊರೆಕುವರರೊಳಿಂತಪ್ಪ ॥ ೧೨ ॥

ಚೆಲುವರ ಗಂಡನ ಕಂಡವನಲ್ಲಾನು । ಪಲವು ದೇಶವ ತಿರುಗಿದೆನು ॥
ಎಳೆಯನ ಬಗೆದಾವ ನೋಂಪಿ ನೋಂತರೋ ಸ್ವರ್ಗ- । ದೊಳಗುಂಟೋ ತಾಯಿತಂದೆಗಳು ॥

ತಲೆದೂಗುತ ಕುಮಾರನ ರೂಪಿಗೆ । ನಲವಿಂದ ಬಂದು ವಾಣಿಜ್ಯ ॥
ಫಲಗಳ ಕಾಣಿಕೆಗೊಟ್ಟು ಕೈಮುಗಿದನು । ಕಳಕಳಿಸುವ ಮೊಗದವಗೆ ॥ ೧೪ ॥

ಕುವರ ! ನೀನಾರೆಲ್ಲಿಂದ್ಯೆತಂದೆಯೆಂ- । ದವನು ಕೇಳಲು ಹರಿಚಂದ್ರ ॥
ಸವಿನಯದಿಂ ತಾನು ಬಂದ ವೃತ್ತಾಂತವ । ವಿವರಿಸಿದನು ಶ್ರೇಷ್ಠಿಯೊಡನೆ ॥ ೧೫ ॥

ನೀನಾವದೇಶವಿಲ್ಲಿಗೆ ಬಂದ ಕಾರಣ- । ವೇನೆಂದು ಕುವರನು ಕೇಳೆ ॥
ಸಾನಂದದಿಂ ಗಾಢಾಲಿಂಗನವನು ಮಾಡಿ । ತಾನಿಂತು ನುಡಿದ ವಿನಯದಿ ॥ ೧೬ ॥

ಹರಿಚಂದ್ರ ಕುವರ ! ನೀ ಕೇಳು ಪಾಂಚಾಳವೆಂ- । ಬುರುತರ ದೇಶದೊಳೊಂದು ॥
ವರ ಕಾಂಪಿಲ್ಯ ಪಟ್ಟಣವಿಹುದದನಾಳ್ವ । ಪರಬಲಹರಿಣ ಶಾರ್ದೂಲ ॥ ೧೭ ॥

ಅಧಿಗಮ ಸಮ್ಯಗ್‌ದೃಷ್ಟಿಯು ಶಾಂತನು । ಮದನ ಸಮಾನ ಚೆನ್ನಿಗನು ॥
ಉದಯಾರ್ಕನಿಭತೇಜ ವಿದ್ಯುತ್ಪ್ರಭನೆಂಬ । ಸದಮಲ ನಾಮವಾಂತಿಹನು ॥ ೧೮ ॥

ಸರಸಿಜಾಂಬಕಿ ವಸುಮತಿಯೆಂಬ ಪಟ್ಟ- । ದರಸಿಯಾದಳು ಆಯಕಗೆ ॥
ಹರಿಣಲೋಚನೆಯರು ಮರಿಯಂಚೆ ನಡೆಯರು । ಸುರಸತಿ ಸಮ ಚೆನ್ನೆಯರು ॥ ೧೯ ॥

ಮರಿದುಂಬಿಗುರುಳೆಯರರವಿಂದವದನೇರು । ಸರಸಿಜ ಮೊಗ್ಗೆ ಮೊಲೆಯರು ॥
ತರುಣೀಮಣಿಗಳು ನಂದೆ ಸುನಂದೆ ಪೆ- । ಸರ ಮಕ್ಕಳೀರ್ವರೊಪ್ಪಿದರು ॥ ೨೦ ॥

ಒಂದು ದಿವಸ ಶ್ರೀಪಂಚಮಿ ಬರಲಾ- । ನಂದದಿಂದುಪವಾಸ ಗೈದು ॥
ಕಂದರ್ಪಮದಭಂಜನ ಜಿನರಾಜನ । ಮಂದಿರವನು ತಾವು ಪೊಕ್ಕು ॥ ೨೧ ॥

ಜಿನಪನ ಪೂಜಿಸಿ ಜಿನಮುನಿಗಳ ಪಾದ- । ವನಜಕ್ಕೆ ಮುಗ್ಗಿ ಭಕ್ತಿಯೊಳು ॥
ಕನಕದ ಬಟ್ಟಲೊಳಗೆ ಶೇಷೆಯನಾಂತು । ಜನಕನಿರ್ದೆಡೆಗೈತಂದು ॥ ೨೨ ॥

ಸಿದ್ಧ ಶೇಷೆಯ ನೀಡಲು ವಿದ್ಯುತ್ಪ್ರಭ- । ನೆದ್ದು ಹಸ್ತಗಳನು ತೊಳೆದು ॥
ಬದ್ಧಾಂಜಲಿ ಪುಟನಾಗಿ ಮಸ್ತಕದೊಳು । ಶುದ್ಧ ಮನದೊಳಾಗ ಧರಿಸಿ ॥ ೨೩ ॥

ಜಳಜನೇತ್ರೆಯರ ಮುದ್ದಾಡಿ ತಡಹಿ ಬೆನ್ನ । ಬಳಲಿದಿರೌ ಪಾರಣೆಯ ॥
ಘಳಿಲನೆ ಮಾಡಿ ನೀವೆಂದು ಬೀಳ್ಕೊಟ್ಟಾಗ । ಇಳೆಯಾಣ್ಮ ಮಂತ್ರಿಯ ಕರೆಸಿ ॥ ೨೪ ॥

ಕಿನ್ನರ ಕನ್ಯಾರೂಪಿಗೆ ಸಮನಾದ । ಚೆನ್ನೆಯರೆನ್ನ ಮಕ್ಕಳಿಗೆ ॥
ಉನ್ನತ ಭಾಗ್ಯ ಸತ್ಕೀರ್ತಿವಂತನು ಗು- । ಣೋನ್ನತನಧಿಕ ತೇಜಸ್ವಿ ॥ ೨೫ ॥

ವರನಾವನಾಗುವನೆಂದು ಪೇಳೆಂದಾಗ । ನರನಾಥ ಮಂತ್ರಿಯ ಕೇಳೆ ॥
ಹರಿವಂಶಾಂಬರ ದಿನಮಣಿ ! ಬಿನ್ನಹ । ವರ ವತ್ಸ ಜನಪದದೊಳಗೆ ॥ ೨೬ ॥

ಮೆರೆವ ಕೌಶಂಬಿಪುರದ ವಸುಮತಿಯೆಂ- । ಬರಸನ ಸಾಧಿಸಿ ಬರುತ ॥
ವರ ವೃಷಭಾವರ್ತದ ಶೈಲಾಗ್ರದ । ದರಿಯೊಳು ರಾಜಿಸುತಿರ್ದ ॥ ೨೭ ॥

ಮುನಿರಾಜಕುಂಜರ ಕೀರ್ತಿಧರಾಖ್ಯನೆಂ- । ಬನುಪಮ ಯತಿಯನು ಕಂಡು ॥
ಮನದಕ್ಕರಿಂ ಪೂಜಿಸಿ ಪೊಡಮಟ್ಟೆನು । ಕನಕಾಚಲನಿಭ ಧೀರ ! ॥ ೨೮ ॥

ಜನಸುತ ವಿದ್ಯುತ್ಪ್ರಭಧಾತ್ರೀಶ । ತನುಜೆಯರೀರ್ವರ್ಗೆ ವರನು ॥
ಅನುಪಮಗುಣಿ ಯಾವನೋರ್ವನಾದಪನೆಂದು । ಮುನಿಪನ ನಾ ಬೆಸಗೊಳಲು ॥ ೨೯ ॥

ಅವಧಿಲೋಚನದಿಂದ ವೀಕ್ಷಿಸೆ ಮುನಿರಾಯ । ಸವಿವರದಿಂದೆನ್ನೊಡನೆ ॥
ತವಕದಿಂದಿತು ನುಡಿದನೆಲೆ ಮಂತ್ರೀಶ ! । ಪವಣಿಲ್ಲದೆ ಪರಿತಪ್ಪ ॥ ೩೦ ॥

ಉದಿತೋರ್ಮಿಮಾಲಿನಿ ಕೂಡಿ ಪರಿವ ಸಿಂಧೂ । ನದಿಯುನೀಸುತಲೈತಂದು ॥
ಪದುಳದಿಂ ಕಂಡಿಲ್ಲಿ ನೆಳಲೊಳು ಕುಳಿತಿರ್ದ । ಚದುರನೀ ಕನ್ನಿಕೆಯುಗಕೆ ॥ ೩೧ ॥

ವರನಾಗುವನಿದು ನಿಶ್ಚಯ ನಿನ್ನಯ । ದೊರೆಯ ರಾಜ್ಯವನಾಳುವದಕು ॥
ಅರುಹನು ಆತನೆ ಎಂದು ಯೋಗೀಂದ್ರನು । ಒರೆಯಲಾ ನುಡಿಯನು ಕೇಳಿ ॥ ೩೨ ॥

ಮುನಿಪನ ಕೆಂಬಜ್ಜೆಗೆರಗಿ ಬೀಳ್ಕೊಂಡಾನು । ಮನದಕ್ಕರಿಂ ಬಂದೆಯುದನು ॥
ಅನುಪಮಗುಣೆ ! ನೀ ನಂಬುವುದೆನಲಾ । ಜನನಾಥ ಮಂತ್ರಿಯ ನುಡಿಯ ॥ ೩೩ ॥

ಅವಧಾರಿಸಿ ಎನ್ನ ಕಳುಹಿಸಿದೊಡೆಯಾನು । ತವಕದಿಂ ಬಂದು ಬನದೊಳು ॥
ಕುವರನಿನಿತು ಕಾಲ ಕಾದಿರ್ದನೆನಲಾ- । ಗವನ ನುಡಿಯನು ಕೇಳುತಲಿ ॥ ೩೪ ॥

ಹರಿಚಂದ್ರ ಕುವರನು ಮುಗುಳುನಗೆಯ ನಕ್ಕು । ಹರಿವ ನೀರೊಳು ಮಿಂದು ಜಿನರ ॥
ಚರಣವ ನೆನೆದು ಕದಳಿ ದಾಡಿಮ ದ್ರಾಕ್ಷಿ । ವರ ಫಲದಿಂ ತನ್ನ ಕ್ಷುಧೆಯ ॥ ೩೫ ॥

ಪರಿದೀಡಾಡಿ ಮುಂದಕೆ ತಾನು ನಡೆತಂದು । ವರ ರಾಜ್ಯದ ಸಂಪದವ ॥
ಪರಮ ಲೀಲೆಯೊಳು ನೋಡುತ ಬರುತಿರಲಾಗ । ಹರಿಚಂದ್ರ ದೂರಾಂತರದಿ ॥ ೩೬ ॥

ಮಾರಾಂತು ತಮ್ಮೊಳೊರ್ರೋರ್ವರು ಕಾದುವ । ಶೂರ ಭಟಾಳಿಯ ಕಂಡು ॥
ಕಾರಣಮೇನೆಂದು ವಸುಮಿತ್ರನ ಕು- । ಮಾರ ಕೇಳಲು ವಾಣಿಜ್ಯ ॥ ೩೭ ॥

ಸೌಂದರಾಂಗನೇ ! ಕೇಳೂರ ಹೊರಟು ಬಂದು । ಇಂದಿಗೆಂಟನೆ ದಿನವಾಯ್ತು ॥
ಹಿಂದಣ ವಾರ್ತೆಯನೊಂದನಾನರಿಯೆನು । ಮುಂದಣ ಮರದಡಿಯೊಳಗೆ ॥ ೩೮ ॥

ಬಲು ಗಾಯದಿಂದಲೊರಗಿದ ಭಟರುಗಳ । ಬಳಸಿ ನೋಡುವ ಜನಗಳನು ॥
ಕಲಿಗಳರಸ ! ನಾವು ಕೇಳುವ ಬಾರೆಂದು । ಘಳಿಲನೆಯೊಡಗೊಂಡು ಬಂದು ॥ ೩೯ ॥

ಪುರುಷನೋರ್ವನ ಬೆಸಗೊಂಡರೆಲೆ ಅಣ್ಣ ! । ತರಿಸಂದು ಕಾದುವ ಸ್ಥಿತಿಯ ॥
ತೆರೆದರುಶನವಾಗಿ ನಮ್ಮೊಳು ಪೇಳೆನೆ । ಒರೆದನಾಗವನಿಂತೆಂದು ॥ ೪೦ ॥

ಈ ಪುರದರಸ ವಿದ್ಯುತ್ಪ್ರಭ ತನ್ನಯ । ರೂಪುಳ್ಳ ಸುತೆಯರೀರ್ವರನು ॥
ಚಾಪಲ ನೇತ್ರೆಯರನು ಬೇಡಿ ಕೆಲವರು । ಭೂಪಾಲರಟ್ಟೆ ಮಂತ್ರಿಗಳ ॥ ೪೧ ॥

ಅವರಿಗೆ ಕೊಡಲೊಲ್ಲದೆ ಮುನಿಯಾದೇಶ । ಕುವರಗೆ ಕೊಡಬೇಕೆಂದು ॥
ಇವನಿರುತಿರೆ ನೇಪಾಳ ವಿಷಯನೊಳು । ದಿವಿಜೇಂದ್ರಪುರ ಸಮವಾದ ॥ ೪೨ ॥

ಸುರುಚಿರ ಶ್ರೀಪುರ ರಾಜಿಪುದದನಾಳ್ವ । ದೊರೆ ಸಿಂಹಬಲನಾಗ ತನ್ನ ॥
ವರ ನಂದನ ಶ್ರೀ ವಸುಪಾಲಗೆ ಬೇಡಿ । ಚರರನಟ್ಟಲು ಕೊಡದಿರಲು ॥ ೪೩ ॥

ಉರುತರ ಕೋಪದಿ ಚತುರಂಗ ಬಲವನು । ಭರದಿ ಕೂಟವ ಕೂಡಿಕೊಂಡು ॥
ಹರಿದು ಮೂವಳಸಾಗಿ ಕಾಂಪಿಲ್ಯ ನಗರವ । ಇರುಳೆ ಮುತ್ತಿದರು ಮುತ್ತಿಗೆಯ ॥ ೪೪ ॥

ಅದ ತಾನರಿದು ವಿದ್ಯುತ್ಪ್ರಭ ತನ್ನಯ । ಒದವಿದ ಬಲವನು ಕೂಡಿ ॥
ಅದಟಿಂದಾಳುವೇರಿಯ ಮೇಲಕ್ಕೈತಂದು । ಕದಗಳನಿಕ್ಕಿ ಕಡುಗಲಿಯು ॥ ೪೫ ॥

ಭರದಿಂದೀಗ ಕಾದುವುದು ಕಾಣಿರೆ ಎಂ- । ದೊರೆದ ಭಟನ ಮಾತು ಕೇಳಿ ॥
ಹರಿಚಂದ್ರ ನಸುನಕ್ಕು ಮುಂಗಡೆಯೊಳಗಿರ್ದ । ಕರಿಪತಿಯನು ಕಂಡ ಕಲಿಯು ॥ ೪೬ ॥

ಭರದಿಂದ ಸಿಂಹನಾದವ ಮಾಡಲು ಗಜ। ಹರಿದೊಡೆ ಬೆನ್ನೊಳು ಪೋಗಿ ॥
ದ್ವಿರದನ ಬಾಲವ ಹಿಡಿದು ಹುಂಕ್ಕರಿಸಲು। ಗಿರಿ ಬಿದ್ದಂತಾನೆ ಬೀಳೆ ॥ ೪೭ ॥

ಚರಣದಿಂ ಶುಂಡಿಲ ಮೆಟ್ಟಿ ದಂತವ ಕಿತ್ತು। ನೆರಗಲಿ ಹೆಗಲೊಳಗಿಟ್ಟು ॥
ಕುರಿಯ ಹಿಂಡಿಗೆ ತೋಳ ಪೊಕ್ಕಂತೆ ವೀರರ। ನೆರವಿಗೆಯಾಲುತ ಪೊಕ್ಕು ॥ ೪೮ ॥

ರಥವನು ಕಾಲೊಳೊದೆದು ನುಗ್ಗುಟ್ಟುತ। ಪೃಥುವಿಪರ ಸಿಗಿದಿಡುತ ॥
ಹತಿಸುತ ಲಕ್ಷ ಭಟರ ಕೋಟಿ ಭಟರ್ಗಳ। ಶತ ಚೂರ್ಣವ ಮಾಡಿ ಪಡೆಯ ॥ ೪೯ ॥

ಮದದಂತಿ ದಂತವ ಕಿತ್ತೀಡಾಡುತ। ಕುದುರೆಯ ಗುದ್ದಿ ಕೆಡಹುತ ॥
ಇದಿರಾದ ರಾಜಕುಮಾರರ ಸವಟುತ। ಕದನಲಂಪಟ ಕೋಪದಿಂದ ॥ ೫೦ ॥

ವೀರಭಟರ ಕಾಲಪಿಡಿವುತ ತಿರುಹುತ। ಸಾರಥಿಗಳ ಮೇಲಿಡುತ ॥
ಸಾರಥಿಗಳ ಕಾಲಪಿಡಿದುದ್ದಕಿಡುತಾಗ। ಗಾರು ಮಾಡಿದ ನಿಮಿಷದೊಳು ॥ ೫೧ ॥

ಇಂತಪ್ಪ ಬಲುಗೊಲೆಯನು ಜ್ಞಾನೇಂದುವ। ಸಂತಾನವು ಕೊಲುತಿರಲು ॥
ಭ್ರಾಂತಿಗೊಂಡಾ ಬಲು ಬಲ ನುಡಿದುದು ಕೃ-। ತಾಂತನಲ್ಲದೆ ನರನಲ್ಲ ॥ ೫೨ ॥

ನರರೊಳು ಇಂತಪ್ಪಸಹಾಯ ಶೂರರೀ। ಧರೆಯೊಳು ಕಂಡುದಿಲ್ಲಾವು ॥
ನರರೂಪ ಧರಿಸಿದ ರಾಕ್ಷಸನಿವನೆಂದೀ। ಪರಿದೋಡಿತು ಬಲವೆಲ್ಲ ॥ ೫೩ ॥

ಕೆಲರಂದರು ನರರೂಪಿನ ರಕ್ಕಸ। ಹುಲುಮಾನಸರೆಮ್ಮ ಕೊಂದು ॥
ಫಲವೇನು ಬೇಡ ಬೇಡೆನುತ ದೈನ್ಯೋಕ್ತಿಯಿಂ। ಪಲುಬುತಿಹರು ತಮತಮಗೆ ॥ ೫೪ ॥

ಇದು ವಾರಣ ಹೆಣ, ಇದು ವಾಜಿಯ ಪೆಣ-। ವಿದು ವಾಹಕರಟ್ಟೆಯೆಂದು ॥
ಇದು ಕಾಲಾಳ ಕದಂಬವು ಎಂಬೊಂದು। ಹುದುಗಿದ ಭೇದಗಾಣಿಸಿದ ॥ ೫೫ ॥

ಪರಿಯಿಂದ ಕೊಲುತ ಮುಂದಕೆ ಬರುತಿರಲತ್ತ। ಹರಿಬಲ ತನ್ನ ನಾಯಕರ ॥
ಕರೆದೆಂದನು ಇಂದು ಸುರಿತಾಳ ಲಗ್ಗೆಯ। ಭರದಿಂದ ಮಾಡಿ ನೀವೆಂದು ॥ ೫೬ ॥

ನಿರವಿಸಲಾ ಪಟು ಭಟರುಗಳೆಲ್ಲರು। ತುರಿಹದಿಂ ಸನ್ನದ್ಧರಾಗಿ ॥
ಬರಲು ಪಲವು ನಿಚ್ಚಣಿಕೆಗಳಾಗಲು। ಧರೆಯ ಸಮಾನ ಮಾಡಿಯಗಳ ॥ ೫೭ ॥

ಗಳಗೆ ತಡಿಕೆ ನೆಲಗುಮ್ಮ ಹಲಗೆಗಳ। ತಳಿಗಳ ನಡೆಯಿಸಿಕೊಂಡು ॥
ಬಲು ಹುಲ್ಲ ಹೊರೆಗಳ ಕೋಂಟೆಯುದ್ದಕೆ ಚಾಚಿ। ಹಲಗೆಗಳನು ಮರೆಗೊಂಡು ॥ ೫೮ ॥

ಕುಲಿಲಿಕು ಬಿಬಿ ಬೋ ಬೋಯೆಂದಾಲುತ। ಬಲು ಬಲ ಬಂದು ಕೋಂಟೆಯನು ॥
ಕಲಿತನದಿಂದೇರೆ ವಿದ್ಯುತ್ಪ್ರಭ ಕಂಡು। ಹುಲಿಮುಖದೊಳು ನಿಂದುಕೊಂಡು ॥ ೫೯ ॥

ಬಲ ಕೈ ಬೀಸಲು ಕೋಂಟೆಯನೇರುವ। ಬಲು ನಾಯಕರ ಶಿರಗಳ ॥
ನಿಳುಹುತ ತೆನೆಗಳ ಪಿಡಿದ ಕೈಗಳನಾ-। ಗಳುಕದೆ ಕಡಿದು ಕೆಡಹುತ ॥ ೬೦ ॥

ತಿತ್ತಿಯೊಳಗೆ ಮದ್ದನು ತುಂಬಿ ಕೋಂಟೆಯ । ಹತ್ತುವ ಪಟುಭಟರುಗಳ ॥
ನೆತ್ತಿಯೊಳಗೆ ಹಾಕುತ ಬಲು ಬಲವನು । ಕತ್ತರಿದರಿದು ಕೆಡಹಲು ॥ ೬೧ ॥

ಕರಿಗಳಟ್ಟೆಯ ಮೆಟ್ಟಿ ಹತ್ತೆಂದು ನುಡಿವುತ । ಬರುವ ಬಾಣಗಳ ಒಪ್ಪಿಸುತ ॥
ಹರಿಗೆಯ ತಲೆಗಡ್ಡ ಹಿಡಿವುತ ಹೆಣಗಳ । ಭರದಿಂದ ಮೆಟ್ಟಿ ಹತ್ತುತ್ತ ॥ ೬೨ ॥

ಶಿರವನು ಕೊರೆವುದರಿಯದೋರ್ವೋರ್ವರು । ಕರ ಭುಜಗಳ ಮೆಟ್ಟಿ ಮೆಟ್ಟಿ ॥
ಅರಿಕೆಯ ಭಟರು ಚೋದನರು ವಾಹಕರೆಲ್ಲ । ನೆರೆದು ಬೊಬ್ಬೆಯ ಹೊಡಕೊಳುತ ॥ ೬೩ ॥

ಜೇನಹುಳುವು ಬಂದು ಮುತ್ತಿದಂದದಿ ಬಲು । ಸೇನೆ ಕೋಂಟೆಯನೇರುತಿರಲು ॥
ಏನೆಂಬೆ ಪಟ್ಟಣದೊಳಗಿರ್ದ ಪ್ರಜೆಗಳು । ನಾನಾ ವಿಧದಿ ಕೊಲುವುದ ॥ ೬೪ ॥

ಸೀಸವ ಕಾಸಿ ಕೋಂಟೆಯ ಹತ್ತುವಾಳ್ಗ- । ಳಾ ಶಿರಕೆರೆವರೆಣ್ಣೆಯನು ॥
ಕಾಸಿ ಸುರಿವರು ಮಳಲ್ಗಳ ಹುರಿದಾಗ । ಸೂಸುವರಾಳ್ಗಳ ಮೇಲೆ ॥ ೬೫ ॥

ಉರಗಂಗಳ ಹೆರಿಗೆಗಳ ಕೋಂಟಿಯ । ಭರದಿ ಹತ್ತುವರ ಮೈಮೇಲೆ ॥
ಸುರಿವರು ಕಾದಂಬಲಿಯ ಮೊಗದ ಮೇ- । ಲೆರೆವರು ಎಣ್ಣೆ ವಸ್ತ್ರಗಳ ॥ ೬೬ ॥

ಕತ್ತಿಸಿ ಬರುವರ ಗಡ್ಡ ಮಿಸೆಗಳೆಲ್ಲ । ಹೊತ್ತಿ ಹೋಹಂತೆ ಪಿಡಿವರು ॥
ಕುತ್ತಿಗೆಗಳನು ಕವಲು ಕಡ್ಡಿಗಳಿಂ- । ದೊತ್ತಿ ಕೆಡಹುವರು ಭರದಿ ॥ ೬೭ ॥

ಉರಿಸಿಂಗಿಗಳ ಪೆಟ್ಟಿಗೆಗಳ ಮೇಲಿಡುವರು । ಉರುಳಿಸುವರು ಮೇಲೆ ತೊಲೆಯ ॥
ಶಿರದೊಳು ಹಂದಿದಲೆಯನೆತ್ತಿಡುವರು । ಸುರಿವರು ಸೆಗಣಿಯ ಕಾಸಿ ॥ ೬೮ ॥

ಬಡಿವರು ಮುಳ್ಳು ಬರಲ್ಗಳಿಂ ಮೊಗವನು । ಒಡನೆಯುರಿವ ಪಂಜುಗಳಿಂ ॥
ಸುಡುವರು ಮೈಗಳ ಒನಕೆಗಳನು ಎತ್ತಿ । ಬಡಿವರು ಪೆಂಗಳು ಶಿರವ ॥ ೬೯ ॥

ಕಡಿವರು ತೆನೆಗಳ ಪಿಡಿದೇರುವಾಳ್ಗಳ । ದಡಿ ಗುಂಡಿನಿಂದಲಿಡುವರು ॥
ಕಡುಗಾಯ್ದ ಕಬ್ಬಿಣ ಕಾವಲಿಗಳನು । ಇಡುವರೇರುವರ ತಲೆಯೊಳು ॥ ೭೦ ॥

ಸುಡುವರು ಧಮಧಮವೆನುತಂಬುಗಂಡಿಲಿ । ಗಡಿಯಿಲ್ಲದ ಪೆಟಲುಗಳ ॥
ಇಡುವರು ಜಬರುಜಂಗಿಯ ಫಿರಂಗಿಯ । ಘುಡುಘುಡಿಸುತ ಕೊಲ್ಲುತಿಹರು ॥ ೭೧ ॥

ಇವು ಮೊದಲಾದ ಕೊಲೆಯ ಕೊಲ್ಲುತ್ತಿರಲಾಗ- । ಲವರು ಸೈರಿಸದೆ ಕೊಂಟೆಯನು ॥
ತವಕದಿಂದಿಳಿದು ಪಾಳೆಯವ ಪೊಗುತಲಿತ್ತ । ಜವನಂತೆ ಹರಿಚಂದ್ರ ಬಲವ ॥ ೭೨ ॥

ಗುದ್ದಿ ಕೆಲಂಬರ ಕಾಲೊಳು ಕೋಪದಿಂ । ಒದ್ದು ಕೆಲರ ಗದೆಯಿಂದ ॥
ಮಿದ್ದು ಕೆಲಬರ ಕೊಲುವುದ ಕೋಂಟೆಯ ಮೇ- । ಲಿದ್ದ ವಿದ್ಯುತ್ಪ್ರಭ ಕಂಡು ॥ ೭೩ ॥

ಅತಿ ವಿಸ್ಮಯವನು ಮಾಡುತ ಬಲವನು । ಹರಿಸುತಲೋರ್ವನೆ ಬರುವ ॥
ಕ್ಷಿತಿಯೊಳಗಿವನಾರು ಕಾಲನೋ ದಿವಿಜನೋ । ನುತವೆತ್ತ ಪ್ರಳಯ ಭೈರವನೋ ॥ ೭೪ ॥

ಎನುತ ಸಂಶಯವನು ತಾಳಿಯು ಗಮ್ಮನೆ। ಮನದೊಳಗಿಂತು ನೆನೆದನು ॥
ಮುನಿಭಾಷಿತ ಸತ್ಪುರುಷನಲ್ಲದೆ ಬೇರ-। ವನಿಯೊಳೋರ್ವನಲ್ಲೆಂದು ॥ ೭೫ ॥
ಹರುಷ ಹೃದಯನಾಗಿ ತನ್ನಯ ಚತುರಂಗ। ವರ ಬಲವನು ಕೂಡಿಕೊಟ್ಟು ॥
ಭರದಿಂದ ದಂಡನಾಯಕನ ಕಳುಹೆ ಬಂದು। ಹರಿಚಂದ್ರ ಕುವರನಿಗೆರಗಿ ॥ ೭೬ ॥
ಕರವ ಮುಗಿದು ನಿಂದಿರೆ ಸಿಂಹೋದರ। ಹರಿಚಂದ್ರನಿದಿರು ಪಾಳೆಯವ ॥
ತೊರೆಯ ತಡಿಯು ಬಿಡಿಸೆಂದಪ್ಪಯಿಸಿ। ಧುರ ಧರೆಯೊಳಗೊಪ್ಪುತಿಹನು ॥ ೭೭ ॥
ಪರಬಲ ಗಜ ಹರಿ, ಪಾಡು ಪಂಥದ ನೃಪ। ಶರಧಿಯ ಪೀರ್ವ ವಾಡಬನು ॥
ತರುಣಿಯರುಗಳ ಲೋಚನ ಕೈರವಚಂದ್ರ। ಹರಿಚಂದ್ರ ಕುವರನೊಪ್ಪಿದನು ॥ ೭೮ ॥

**॥ ಅಂತು ಸಂಧಿ ೩೦ಕ್ಕಂ ಪದ ೪೦೭೩ಕ್ಕಂ ಮಂಗಲಂ ॥**

# ಪದ್ಮವ್ಯೂಹ ವಿಜಯ.

ಮೂರಕ್ಷೋಹಿಣಿ ಬಲವನು ಹರಿಚಂದ್ರ। ತೂರಿಯ ಮಾಡಿದುದೊರೆವೆ ॥ ಪ ॥

ಫುಲ್ಲಶರನ ಕಬ್ಬುವಿಲ್ಲ ಮುರಿದು ಮೋಹ। ಮಲ್ಲನ ಗೆಲಿದತಿ ಮಲ್ಲ ॥
ಎಲ್ಲ ಲೋಕಕೆ ವಲ್ಲಭನಾದ **ಶಾಂತೀಶ** !। ಝಲ್ಲಿಸೆಮ್ಮಯ ಕರ್ಮರಜವ ॥ ೧ ॥
ಕಟ್ಟುಕಟ್ಟಳೆಯಿಂದ ಬಿಡಿಸಿ ಪಾಳೆಯವನು। ಕಟ್ಟಾಳು ಸಿಂಹೋದರನು ॥
ತೊಟ್ಟನೆ ನಡೆತಂದು ರಾಯ ಕುವರನಿಗೆ। ಇಟ್ಟು ಪಣೆಯೊಳು ಕರಗಳ ॥ ೨ ॥
ಕಡು ಬೆಡಗಿನೊಳು ನಿಂದಿರೆ ಹರಿಚಂದ್ರನು। ನುಡಿದನು ಎಲೆ ಸಿಂಹೋದರನೇ ! ॥
ಪಡೆಗೂಡಿದಿರಾದ ಸಿಂಹಬಲೇಶನ। ಕಡೆ ಮೊದಲಿಲ್ಲದ ಬಲವ ॥ ೩ ॥
ತರಿದೊಟ್ಟೆ ರಕ್ಕಸ ಭೂತ ಭೇತಾಳರ। ಸೆರವಿಗೌತಣವ ನಾವಿಂದು ॥
ಧುರದೊಳು ಮಾಡಿಸಬೇಕು ಬಲವ ನೀವು। ಇರದೊಡ್ಡಿಯೆಂದಪ್ಪೈಸೆ ॥ ೪ ॥
ಕುವರನ ಸಮ್ಮತದಿಂದಲಿ ಸೇನೆಯ। ಭುವಿಯೊಳು ಗರುಡ ವ್ಯೂಹದೊಳು ॥
ತವಕದಿಂದೊಡ್ಡಿ ನಿಲಿಸಿದನದೆಂತೆನೆ। ಅವಯವದಂತೆ ತೇರುಗಳು ॥ ೫ ॥
ಹರಿಸದಿಂ ನಿಂದರು ಶಿರದಂತೆ ದಳವಾಯಿ। ಇರುತಿರೆ ಕೊಕ್ಕಿನಂದದೊಳು ॥
ಧುರಗಲಿ ಜಯವರ್ಮ ಭೂಭುಜ ನಿಂದನು। ಉರದಂತೆ ಶಚಿವೇಂದ್ರನಿಂದ ॥ ೬ ॥
ರೆಕ್ಕೆಯಂದದಿ ಪಟುಭಟರೆಲ್ಲ ನಿಂದರು। ಮಿಕ್ಕಿನ ಸೇನೆಯಾಗೈದಿ ॥
ಸೊಕ್ಕಿದಾನೆಗಳು ಕುದುರೆಗಳು ಬಳಸಿರೆ। ಗಕ್ಕನತ್ತಲು ಸಿಂಹಬಲನು ॥ ೭ ॥

ಧುರಗಲಿ ದಂಡನಾಯಕನ ಕರೆದು ತಾನು । ದೊರೆರನ್ನ ವೀಳೆಯವಿತ್ತು ॥
ನೆರೆದ ಸೇನೆಯ ಕೂಡಿಕೊಟ್ಟು ನೀ ಹೋಗೆಂ- । ದೊರೆಯಲು ಕಳುಹಿಸಿಕೊಂಡು ॥ ೮ ॥

ದಳವಾಯಿ ನಡೆತಂದು ರಣರಂಗದೊಳು ನಿಂದು । ನಳಿನಾಕಾರದಿ ಬಲವ ॥
ಘಳಿಲನೆ ಒಡ್ಡಿದನೆಂತೆನೆ ಪೇಳುವೆ । ದಳದಂತೆ ಹಯ ನಿಲ್ಲೆ ಸುತ್ತ ॥ ೯ ॥

ಒಳಗಣ ಕಿರುವೆಸಳುಗಳಂತೆ ಭಟರಿರೆ । ದಳವಾಯಿ ಮಂತ್ರೀಶ್ವರರು ॥
ಉಳಿದ ಭೂಭುಜರು ಕೇಸರದಂತೆ ನಿಂದಿರೆ । ಒಳಗಣ ಕರ್ಣಿಕೆಯಂತೆ ॥ ೧೦ ॥

ವಸುಪಾಲನಿರುತಿರೆ ಹರಿಚಂದ್ರ ಕುವರನು । ಮಸಕದಿಂ ವೀರ ಸಿಂಗರವ ॥
ರಸಿಕರ ದೇವ ತಾನನುಗೈದು ಮಣಿಯಿಂ- । ದೆಸೆವ ರಥವನು ಬಂದಡರಿ ॥ ೧೧ ॥

ಬಿರುದಿನ ಕಾಳೆಗಳೊದರಿದವಿಂತೆಂದು । ಹರಿಚಂದ್ರನೇರಿದ ರಥವ ॥
ಅರಿಭೂಪಾಲರು ಬಿಟ್ಟೋಡಿರೋ ನಿಮ್ಮ । ಪುರದತ್ತಲೆಂದಾಗ ಪಲವು ॥ ೧೨ ॥

ಅಸುರ ಬಲವನಮರೇಂದ್ರನು ಪೊಗುವಂತೆ । ಬಿಸರುಹಸಖ ತಮದೊಡ್ಡ ॥
ಆಸವಸದಿಂದವೆ ಪೊಗುವಂತೆ ಸಿಂಹನ । ಶಿಶು ಪೊಗುವಂತಾನೆ ಬಲಕೆ ॥ ೧೩ ॥

ಬಿಸರುಹಾಕಾರಕೆ ಎಸಕದಿಂದಾನೆಯ । ಶಿಶು ಪೊಗುವಂತೆ ಕಾನನಕೆ ॥
ಎಸಕದಿಂ ಕಾಳ್ಗಿಚ್ಚು ಪೊಗುವಂತೆ ಹರಿಚಂದ್ರ । ಮುಸುಕಿದನರಿಬಲದತ್ತ ॥ ೧೪ ॥

ವರ ಮಣಿರಥವ ಗಮ್ಮನೆ ನೂಂಕಿಯಂಬಿನ । ವರಿಸವ ಕರೆದು ಭೋಯೆಂದು ॥
ಸರಸಿಜಾಕಾರದ ಬಲವನೊಬ್ಬುಲ ನೂಡಿ । ತರಿದಿಕ್ಕಿದ ಕುದುರೆಗಳ ॥ ೧೫ ॥

ಅದ ಕಂಡು ಕುಲಿಲಿ ಭೋ ಭೋಯೆಂದಾಲುತ । ಅದಟಿಂಚ ಪಟು ಭಟ ಸೇನೆ ॥
ತ್ರಿದಶಗಿರಿಯ ಮಂಜು ಮುತ್ತುವಂದದಿಯಾ- । ಕದನ ಕರ್ಕಶನನು ಮುತ್ತೆ ॥ ೧೬ ॥

ಕರೆಯಲು ನಿಶಿತ ಮಾರ್ಗಣಗಳ ಸರಿಯನು । ಹರಿಚಂದ್ರ ಕಡಿದೊಂದಂಬಿನೊಳು ॥
ಶರವ ಕಾರ್ಮುಕಕೆ ಸಂಧಾನವ ಮಾಡಿಡೆ । ಕರ ಶಿರ ಹಾರಿ ಬೀಳುವವು ॥ ೧೭ ॥

ಪುಡಿಪುಡಿಯಾಗಿ ಹಾರುವವು ರಥಂಗಳು । ಒಡಲು ಬಗ್ಗಾಬರಿಯಾಗಿ ॥
ಕೆಡುವವು ಹಯ ಕೈಕಾಲು ತುಂಡುಗಳಾಗಿ । ಮಡಿವರು ಬಿರುದಿನ ಭಟರು ॥ ೧೮ ॥

ಶರಗಳು ಹಯ ಗಜ ಕಾಲಾಳಂಗವ । ಭರದಿ ತಟ್ಟುಗಿದು ರಕ್ತದೊಳು ॥
ನೆರೆ ತೊಯ್ದು ಗಗನದೊಳಗೆ ಸರಂತೋರಿದೊ । ಹರಿದಾಡುವ ಮಿಂಚಿನಂತೆ ॥ ೧೯ ॥

ಸತ್ವಸಂಯುತ ಹರಿಚಂದ್ರ ಕಣೆಯ ಬಿಡೆ । ಕತ್ತರಿಸಂಗವ ಭಟರ ॥
ಮುತ್ತುಗ ಮರದ ಮುಗುಳು ಚೆಲ್ಲಿದಂದದಿ । ರಕ್ತ ಕರುಳು ಚೆಲ್ಲಿಹವು ॥ ೨೦ ॥

ಸರಳೊಂದನೆಸೆಯೆ ಕಾಲಾಳು ಲಕ್ಕದ ಮೈಯೊ- । ಳಿರುವವು ಹರಿಯರೆಲಕ್ಕ ॥
ಕರಿ ಪತ್ತು ಸಾಸಿರಂಗದೊಳಂಬು ಶತಶತ । ಭರದಿ ತಾಗಿರುವವೇನೆಂಬೆ ॥ ೨೧ ॥

ಹರಿಚಂದ್ರ ಕುವರ ಗದೆಯನೆತ್ತಿ ಗಜಗಳ । ಶಿರವನಪ್ಪಳಿಸೆಯಾಗೊಡೆದು ॥
ಅರುಣಾಂಬುವೆರಸಿ ಮೌಕ್ತಿಕ ಗಗನವ ಸೇರೆ । ವರೆವರದಿಂದುಡುವೆಂದು ॥ ೨೨ ॥

ಚದುರ ಶ್ರೀ ಹರಿಚಂದ್ರನೆಚ್ಚಪನೆಂದಾಗ । ಬೆದರಿ ವಾಜಿಗಳರಣ್ಯವನು ॥
ಪದುಮಸಖನ ರಥವನು ಸೇರಿ ನಭದೊಳು । ಬೆದರುತ ಚರಿಪವಂದಿಂದ ॥ ೨೩ ॥

ಕುವರನೆಸೆವ ಮಾರ್ಗಣಗಳು ಬಂದೆ- । ಮ್ಮನುತಾಗ ಬಾರದೆಂದೆನುತ ॥
ರವಿ ಶಶಿಗಳು ಬೆರ್ಚಿ ದಕ್ಷಿಣೋತ್ತರವಾಗಿ । ನವರತ್ನ ರಥವ ನೂಂಕುವರು ॥ ೨೪ ॥

ಇಡಲೊಂದಂಬಿನಿಂ ತಲೆ ಕಾಲು ತುಂಡಾಗಿ । ಕೆಡೆವರು ಬೀರಾಳುಗಳು ॥
ನಡು ಶಿರ ತುಂಡಾಗಿ ಬೀಳ್ವದು ಕೆಲಬರು । ಕಡಿ ಖಂಡರಾಗುವರ್ಕೆಲರು ॥ ೨೫ ॥

ಶರವೊಂದ ತೆಗೆದೆಸೆಯಲು ಸಾಲಾಗಿರ್ದ । ಕರಿಗಳಿನ್ನೂರ ತಟ್ಟುಗಿದು ॥
ಹರಿಗಳ ಶಿರಗಳ ಕತ್ತರಿಸಾಲ್ಗಳ । ಕೊರೆದು ಹಾರುವುದು ತತ್ಕ್ಷಣದಿ ॥ ೨೬ ॥

ನಾಗನ ನಾಗನೇರಿದ ಮಾವಟಿಗನ- । ನಾಗೀರ್ವರನೊಂದೆ ಸೂಳು ॥
ತೂಗಿ ಖಡ್ಗದಿ ಪೊಯ್ಯೆಲೆಲು ಇಕ್ಕಡಿಯಾಗಿ । ನಾಗ ಮಾವಟಿಗರು ಕೆಡೆಯೆ ॥ ೨೭ ॥

ಖಂಡೇಯದಿಂ ಹರಿಚಂದ್ರ ಭಟಾಳಿಯ । ಮುಂಡೆಯ ಹೊಡೆಯಲಂಬರಕೆ ॥
ಚಂಡಿಕಾದೇವಿಯಿಟ್ಟಾಡುವ ಮಾಲೆಯ । ಚೆಂಡುಗಳಂತೊಪ್ಪಿದವು ॥ ೨೮ ॥

ಬಲ್ಲಿತಪ್ಪಾ ವಜ್ರಗದೆಯಿಂದ ಬಡಿಯಲು । ನಿಲ್ಲಲಮ್ಮದೆ ಪಟುಭಟರು ॥
ಕಲ್ಲು ತಾಗಿದ ಕಸುಗಾಯಂತೆ ದೆಸೆದೆಸೆ- । ಗೆಲ್ಲರು ಚಲ್ಲವರಿದರು ॥ ೨೯ ॥

ದೊರೆದೊರೆಗಳು ನಿಲ್ಲಲಾರದೆ ಕುವರನ । ಶರಗಳ ಕುರುಪಾಟಗೋಡಿ ॥
ಶಿರವನುಳುಹಿಕೊಂಡು ಗುಮ್ಮನೆಯೊಳಪೊ- । ಕ್ಕಿರುತಿಹರತಿ ಅಂದದೊಳು ॥ ೩೦ ॥

ರಣವೆಲ್ಲ ಪೇಸುವಂದದಿ ಎರಡಕ್ಷೋ- । ಹಿಣಿ ಬಲವನು ಹರಿಚಂದ್ರ ॥
ಕ್ಷಣದೊಳು ನೆಲಕಿಕ್ಕಿ ನೆರಪಿದ ವೀರಾ- । ಗ್ರಣಿ ಯಾರವನಂತೆ ಧರೆಗೆ ॥ ೩೧ ॥

ಶಿರ ಪರಿವಂತೆ ಇಡುತ ಚಕ್ರದಿಂದಾಗ । ಭರದಿಂದ ಶಕ್ತಿಯೊಳಿಡುತ ॥
ತರಿವುತ ಪರಶುಗಳಿಂದಾಲುತ ಧುರ- । ಧರೆಯೊಳು ಬರುತಿರೆ ಕುವರ ॥ ೩೨ ॥

ಹರಿಬಲ ರಾಯನ ದಳಪತಿ ಮೈದುನ । ಹರಿ ಕೇತು ಕೆಕ್ಕಳಗೆಳಲಿ ॥
ಹರಿಯಂತೆ ಗದರಿ ಗರ್ಜಿಸಿ ಮಣಿರಥವನು । ಹರಿಚಂದ್ರಗಿದಿರಾಗಿ ನೂಂಕಿ ॥ ೩೩ ॥

ಒರೆದನೆಲವೊ ! ಜಗದ ಪಂದೆಗಳನು ಕೊಂದು । ಗರುವಿಕೆಯಿಂ ನಿನ್ನ ರಥವ ॥
ಹರಿಸಾಡುವುದೊಳ್ಳಿತೊಳ್ಳಿತು ಧುರದೊಳು । ಶರವೊಂದರಿಂ ನಿನ್ನ ಶಿರವ ॥ ೩೪ ॥

ಕಡಿವೆನೆನುತ ಕಣೆಗಳ ಬಲು ಸರಿಯನು । ಪೊಡವಿಯಾಗಸ ತುಂಬುವಂತೆ ॥
ಬಿಡಲದ ಕಂಡು ಜ್ಞಾನೇಂದುವ ನಂದನ । ಕಡಿದು ಬಿಸುಟನೊಂದು ಶರದಿ ॥ ೩೫ ॥

ಕಾಲೊಳು ಮೇಲಾಳುಗಳ ಜೀವಿತವನು । ಬಾಳ್ಕೈಸಿ ತಿಂಬ ಹೆಮ್ಮೆಯೊಳು ॥
ಖೂಳ ! ನನಗೆ ಇದಿರಾಗಿ ನಡೆದು ಶರ- । ಜಾಲವ ಬಿಡು ಹೆದರುವೆನೇ ? ॥ ೩೬ ॥

ಎನುತ ಶ್ರೀ ಹರಿಚಂದ್ರ ಹರಿಕೇತುವೇರಿದ । ಕನಕರಥವ ಸಾರಥಿಯ ॥
ಕನಲಿ ಖಂಡಿಸಿ ನೀ ಸಾಯದ ಮುನ್ನವೆ । ಬಿನಗು ಸಾಗು ಸಾಗೆಂದೆನಲು ॥ ೩೭ ॥

ನುಡಿದ ನುಡಿಯು ಕೇಳಿ ಹರಿಕೇತು ಪ್ರಳಯದ । ಸಿಡಿಲಂತೆ ಛಿಟಿಛಿಟಿಲೆಂದು ॥
ಒಡನೆ ಮತ್ತೊಂದು ರಥವನೇರಿ ಎಲವೋ । ಹುಡುಗ ! ಕೂಲಿಯ ಜಗಳಕ್ಕೆ ॥ ೩೮ ॥

ಆಸುವ ನೀಡಾಡಿಕೊಳ್ಳಲು ಬೇಡವೆಂದಾಗ । ಹೊಸ ಹೊನ್ನಬರಹದಂಬುಗಳ ॥
ಮುಸಕದಿ ಕಿವಿವರೆ ತೆಗೆದಂಬರವೆಲ್ಲ । ಬೆಸಲೆಯಾದುದೊ ಎನೆ ಸುರಿದ ॥ ೩೯ ॥

ಬರುವ ಕೆಂಗೋಲನು ಹರಿಚಂದ್ರನು ಕಂಡು । ಶರವೊಂದರಿಂದ ತುಂಡಿಕ್ಕಿ ॥
ಕರದಿಂದ ಪುಂಖಾನುಪುಂಖ ಮಾರ್ಗಣಗಳ । ಕರೆಯಲು ಹರಿಕೇತುವಿನ ॥ ೪೦ ॥

ತನುವಿನ ರೋಮಕೂಪದೊಳೆಲ್ಲ ಮುಳುಗಲು । ಘನ ರುಧಿರವು ತುಂಬೆ ರಥವ ॥
ಮೊನೆಯಂಬಿನ ಬಲು ಗಾಯದ ಸೊಕ್ಕಿಂದ । ಮನಹೀನ ಕಂಬವನೊರಗೆ ॥ ೪೧ ॥

ಅದ ಕಂಡು ಜಯಸೇನನೆಂಬ ಪ್ರಧಾನನು । ಹೃದಯಕ್ಕೆ ತಂದು ಮುನಿಸನು ॥
ಕದನಲಂಪಟಗಿದಿರಾಗಿ ರಥವ ನೂಂಕಿ । ಹುದುಗಿದನಂಬಿನ ಹೊದರ ॥ ೪೨ ॥

ನಸುನಕ್ಕು ಹರಿಚಂದ್ರ ಬರುವ ಹಿಳುಕುಗಳ । ಇಸುವಂದದಿಂ ಹರಿಯೆಚ್ಚು ॥
ಉಸುರಿದ ಎಲೊ ! ಹೊಳ್ಳುಗಜ್ಜೆಯ ಹಾರುವ ! । ಎಸುಗೆಯ ಒಪ್ಪೀಕೆಬಹುದೋ ॥

ಸಾಕು ಬಿಲ್ಗಾರಿಕೆ ನಂಟು ಬಂಟುಗಳಿಂದ । ಕಾಕೂಕ್ತಿಯಾಡಿ ಹಣಗಳ ॥
ಬೇಕಾದಷ್ಟು ಸೆಳೆದುಕೊಂಡು ದೊರೆಯೊಳು । ಬಾಕುಳಿವಾಕಗಂಟಿಕ್ಕಿ ॥ ೪೪ ॥

ನಡೆಸು ನೀ ಯೋಗಿತನವ ಹೋಗು ಹೋಗಯ್ಯ । ಕಡುಬು ಕಜ್ಜಾಯವ ತಿಂದು ॥
ಕಡು ಹೆಚ್ಚಿದ ಡೊಳ್ಳುಹೊಟ್ಟೆಯೊಳಂಬುವ । ತೊಡಿಸದೆ ಬಿಡೆನೆಂದೆನುತ ॥ ೪೫ ॥

ಶರವೊಂದ ತೆಗೆದು ಇಡಲು ನಡು ತುಂಡಾಗಿ । ಧರೆಯೊಳು ಬೀಳೆ ರಥವನು ॥
ಹರಿಚಂದ್ರ ಮುಂದಕೆ ನೂಂಕಲು ದಳವಾಯಿ । ಭರದಿಂದ ರಣಸಿಂಹ ಕಂಡು ॥ ೪೬ ॥

ಕಡೆಗಂಗಳಿಗೆ ಕೆಂಪನು ತಂದು ರಥವೇರಿ । ಘುಡುಘುಡಿಸುತ ಸಿಂಹನಂತೆ ॥
ಕೆಡಕಮಾನಸ ಮೂರು ಲಕ್ಷ ರಥವು ಕೂಡಿ । ಪೊಡವಿಯಾಗಸ ತುಂಬುತಂಬ ॥ ೪೭ ॥

ತರಿಗೆಂಡವನಿರುಪೆಗಳು ಮುಸುಕುವಂತೆ । ಭರದಿಂದ ಮೂವಳಸಾಗಿ ॥
ಹರಿಚಂದ್ರ ಮುತ್ತಿ ಭೋ ಭೋ ಎಂದಾಲ್ದು ಬ- । ಲ್ಸರಳ ಸೋನೆಯನು ಸುರಿದರು ॥ ೪೮ ॥

ಕರಿಗಳ ಹಿಂಡನು ಕಂಡ ಕೇಸರಿಯಂತೆ । ಹರಿಚಂದ್ರ ಕೆಕ್ಕಳಗೆಳಲಿ ॥
ಶರಭಂಜಿಯ ತಿರುವಾಯಿಗಂಬನು ಹೂಡಿ । ಕರೆದನು ರಥಿಕರ ಮೇಲೆ ॥ ೪೯ ॥

ತೋರ ಗದೆಯನಾಂತು ರಥವನಿಳಿದು ಬಂದು । ತೇರುಗಳನುಯಪ್ಪಳಿಸೆ ॥
ತೂರಿಯಾದವು ತರಗೆಲೆಯ ರಾಶಿಗಳನು । ವಾರಣ ತುಳಿದ ಮಾರ್ಗದೊಳು ॥ ೫೦ ॥

ನೆರೆಗಲಿ ರಥಗಳ ತೆಗೆದಂಬರಕಾಗಿ । ಭರದಿ ಹೇರಿಸುತಿದಿರಾಗಿ ॥
ಬರುವ ರಥಕೆ ರಥಗಳ ತೆಗೆದಿಡುತಾಗ । ತರಿದೊಡ್ಡಿದ ರಥಿಕರನು ॥ ೫೧ ॥

ಅರೆನಿಮಿಷದೊಳು ರಥಿಕರ ಹಿಂಡುಗಳನು । ಹುರಿದನು ಸರಳಗ್ನಿಯಿಂದ ॥
ಮುರಿದೋಡಿದರಂಬ ಕಂಡ ಕಾಗೆಗಳಂತೆ । ಹರಿಚಂದ್ರನೆಸುಗೆಗೆಯಳ್ಕಿ ॥ ೫೨ ॥

ರಣಸಿಂಹನ ಕಂಡು ರಣ ಭೈರವನಂತೆ । ಕಣೆಗಳ ಸುರುವುತ ರಥವ ॥
ಕ್ಷಣದೊಳು ಮುಂದಕೆ ನೂಂಕಿಂತೆಂದನು । ಬಣಗ ಬೆರತು ಕೊಬ್ಬಿನಿಂದ ॥ ೫೩ ॥

ಉಡುಪಿನ ಸೀರೆಗೆ ದಡಿಗಟ್ಟುವರಂತೆ । ಹುಡುಗ ಕಂಡವರ ಜಗಳಕೆ ॥
ಸಡಗರದಿಂ ಬಂದು ಬರಿದೆ ಸಾಯಲು ಬೇಡ । ನಡೆ ನಡೆ ನಿನ್ನ ಪಟ್ಟಣಕೆ ॥ ೫೪ ॥

ಹೆಣ್ಣುಗಳಾಸೆಯಿಂ ಬಾಯಿ ತೆರೆದುಕೊಂ- । ಡುಣ್ಣದೂರಿಗೆ ಹೋಗಬೇಗ ॥
ಹೆಣ್ಣಿಗೊಡೆಯರು ಬೇರುಂಟಾಶೆಯ ಬಿಟ್ಟು । ತಣ್ಣಗೆ ನಡೆ ನಿನ್ನೂರ್ಗೆ ॥ ೫೫ ॥

ಎಂದಿವು ಮೊದಲಾದ ಕಟಕಿವಾತುಗಳಿಂದ- । ಲಂದು ಮೂದಲಿಸಿ ಕೂರ್ಗಣೆಯ ॥
ಗೊಂದಣವನು ಕೋಪಾಟೋಪದಿ ಹರಿ- । ಚಂದ್ರನ ಮೇಲೆ ತುಳುಕಿದ ॥ ೫೬ ॥

ಕಡುಗಲಿ ಹರಿಚಂದ್ರ ಬರುವ ಮಾರ್ಗಣಗಳ । ಕಡಿದೊಂದಂಬಿನಿಂದಿಂತು ॥
ನುಡಿದನೆಲವೋ ಹೆಣಸಿಂಹ ! ಹೆಣ್ಣುಗಳನು । ಪಡೆವಳನಾದೊಡೆ ನೀನು ॥ ೫೭ ॥

ಸೆಳೆದೊಯ್ದೊಡೆ ನೀ ಪೊತ್ತವೆ ಮಿಾಸೆಯೆಂ- । ದಿಳೆಯಾಣ್ಮಸುತನೊಂದೆ ಶರದಿ ॥
ದಳವಾಯಿ ಹಿಡಿದ ಬಿಲ್ಕೋಲು ಹೊಂದೇರನು । ಇಳುಹಿದನೊಂದು ನಿಮಿಷದಿ ॥ ೫೮ ॥

ಕೆಕ್ಕಳಗೆಳಲಿಯಾ ರಣಸಿಂಹನು ರಣ- । ರಕ್ಕಸನಂತೆಯಾರ್ಭಟಿಸಿ ॥
ಗಕ್ಕನೆಯೊರೆಯಿಂದ ಬಾಳುರ್ಚಿ ಜಡಿವುತ । ಸೊಕ್ಕಿನಿಂದಿಂತು ನುಡಿದನು ॥ ೫೯ ॥

ಇದಿರಾಗೆಲೆ ಹೈದ ! ನಿನ್ನ ತೋಳ್ಬಲ್ಮೆಯ- । ನಿದರೊಳು ಕಾಣಬೇಕೆಂದು ॥
ಒದರಿ ಗರ್ಜಿಸುತಿರೆ ಹರಿಚಂದ್ರ ರಥದಿಂ- ದದಟರ ತಲೆವಣಿಯಿಳಿದು ॥ ೬೦ ॥

ಸ್ಮರಿಸಲು ಪ್ರಜ್ಞಪ್ತಿ ವಿದ್ಯೆಯ ಪೊಳೆವಂದು । ಸುರಚಾಪವನಿಳಿಕೈವ ॥
ತರಣಿಯ ಪಥದಿಂದ 'ಸೂರ್ಯಹಾಸ'ವು ಬಂದು । ದೊರೆಯ ಹಸ್ತವನು ಸಾರಿದವು ॥ ೬೧ ॥

ಜಡಿಯಲು ಖಡ್ಗವ ಹರಿಚಂದ್ರ ಕುವರನು । ಸಿಡಿಲಂತೆ ಛಟಿಛಟಿಲೆನಲು ॥
ಉಡುಪಥದೊಳು ದೇವಾಸುರರೆಲ್ಲರು । ನಡುಗಿ ಝಲ್ಲನೆ ಬೆಮರಿದರು ॥ ೬೨ ॥

ಧುರಧರಣಿಯೊಳಿರ್ದ ದೊರೆದೊರೆಗಳು ಕಣ್ಣ । ತೆರೆಯಲಮ್ಮದೆ ಮುಚ್ಚಿದರು ॥
ಮಿರಿಮಿರಿ ಮಿಂಚುವ ಹೊಳವಿಗೆಯೆಂದೆನೆ । ಒರವೇನೇ ನಾ ಖಡ್ಗದಿರವ ॥ ೬೩ ॥

ಸುರರ ದಾನವರ ಜ್ಯೋತಿಷ್ಕರ ಯಕ್ಷರ । ವರ ವ್ಯಂತರರ ಗೊಂದಣವು ॥
ದೊರೆ ಕುವರನ ಭುಜದಂಡದ ಶಕ್ತಿಯು । ಪರಿಕಿಪೆವೆನುತ ಬಾನದೊಳು ॥ ೬೪ ॥

ನೆರೆದು ನಿಂದಿರೆ ಧರೆಯೊಳು ವರ್ತಿಸುತಿರ್ದ । ನೆರೆಗಲಿಗಳ ತಲೆವಣಿಯು ॥
ಹರಿಚಂದ್ರ, ಕುವರನು ರಣಸಿಂಹರೀರ್ವರು । ಕರವಾಳಗಳ ಮೊನೆಯೊಡ್ಡಿ ॥ ೬೫ ॥

ಹೊಳೆಯುತ ವಿವಿಧ ಗಾಯಕೆಯೋರೋರ್ವರು । ಕಲಿಗಳು ಕುಸಿವುತ್ತೇಳುತ್ತ ॥
ಸುಲಭದಿಂದೆಡಗೈಯೊಳು ತಟ್ಟಿ ಹೊಳೆವುತ । ಛಲದಿಂದ ಪೊಯ್ದಾಡಲವರು ॥ ೬೬ ॥

ಖಣಿ ಖಣಿ ಕಡಿ ಕಡಿ ಝುಲಿ ಝುಲಿ ಘಲಿರೆಂ- । ದಣಸಿ ಹೊಯ್ದಾಡುವ ಪೆಟ್ಟು ॥
ಕ್ಷಣದೊಳು ದಿಕ್ತಟವನು ತುಂಬಿರುತಿರೆ । ರಣಸಿಂಹ ಖಡ್ಗವನೆತ್ತಿ ॥ ೬೭ ॥

ಹರಿಚಂದ್ರನ ನಡುವಿಗೆ ಹೊಯ್ಯೆ ಹರಿಚಂದ್ರ । ಭರದಿ ಮಿಂಚಿನ ವೊಲು ಹೊಳೆದು ॥
ಹರಿಯಾವತಾರವ ತಾಳಿಯಾರ್ಭಟಿಸುತ । ನೆರೆಗಲಿ ಖಡ್ಗವನೆತ್ತಿ ॥ ೬೮ ॥

ಹೊರಚಾರಿಯಿಂ ರಣಸಿಂಹನ ದಕ್ಷಿಣ । ವರ ಭುಜವನು ತಾನು ಹುಯ್ಯೆ ॥
ಹರಿದು ಕೊರೆದು ಎಡದೊಡೆಯ ಪರ್ಯಂತರ । ಪರಿ ತಂದಿಕ್ಕಡಿಯಾಗಿ ಕೆಡೆಯೆ ॥ ೬೯ ॥

ಭಳಿರೆ ! ಭಾಪುರೆ ಭಾಪು, ಹರಿಚಂದ್ರ, ಸುಕುಮಾರ ! । ಕಲಿಗಳಾರಿಗೆ ನಿನ್ನಂತೆ ॥
ಬಲುಗಯ್ಯರೆವಂತಸಹುದಯ್ಯ ಎಂದು ಪೂ- । ಮಳೆ ಗರೆದರು ಸುರಾಸುರರು ॥ ೭೦ ॥

ಇದಿರಾದ ಪಟುಭಟರುಗಳನು ಕೊಲ್ಲುತ್ತ । ಸದೆವುತ ದೊರೆದೊರೆಗಳನು ॥
ಬೆದರಿಸುತಲಿ ಕಾಲಾಳ್ಗಳ ಹರಿಚಂದ್ರ- । ನಪಟನು ಮುಂಬರುತಿರಲು ॥ ೭೧ ॥

ಚರನೋರ್ವ ಪರಿತಂದು ಸಿಂಹಬಲೇಶಗೆ । ಕರವ ಮುಗಿದು ಜೀಯ ನಮ್ಮ ॥
ಹರಿಕೇತು ಜಯಸೇನ ದಳವಾಯಿ ಬಿದ್ದರು । ಮುರಿದೋಡಿತು ಬಲವೆಲ್ಲ ॥ ೭೨ ॥

ಎಂದು ಪೇಳಲು ಸಿಂಹಬಲ ಗದ್ದುಗೆಹೊಯ್ದು । ತಂದು ಕೆಂಪನು ಕಣ್ಣ ಕೊನೆಗೆ ॥
ದಂದಶೂಕನವೊಲು ಮೊರೆದೆದ್ದು ಖಡ್ಗಕೆ । ಅಂದು ಕೈಯಿಡುವ ವೇಳೆಯೊಳು ॥ ೭೩ ॥

ವಸುಪಾಲ ಕುವರ ಕರವ ಮುಗಿದೆಲೆ ಜೀಯ ! । ಬೆಸನ ಪಾಲಿಸು ಈಗವನ ॥
ಹಿಸಿದು ಕೊಲ್ಲುವೆನೊಂದು ಶರದಿಂದಲೊಂದಂ- । ಬಸವಸದಿಂದ ತೂಗಿದನು ॥ ೭೪ ॥

ಘನರಥನೆಂಬ ಗಡಿಯ ಮನ್ನೆಯ ಬಂದು । ಜನಪಾಲಗೆ ಕೈಯ ಮುಗಿದು ॥
ಅನುಮಾನ ಬೇಡ ಈ ಬೆಸನ ನನಗೆ ಕೊಡು । ಇನಿಸು ಬೇಗದಿ ಹಿಂಗಟ್ಟವನ ॥ ೭೫ ॥

ಕಟ್ಟಿ ನಾ ತಂದು ನಿನ್ನಯ ಪಾದಪದ್ಮಕೆ । ತೊಟ್ಟನೆ ಕೆಡಹದಿರ್ದೊಡೆಯು ॥
ಕುಟ್ಟಿಸು ಕೆನ್ನೆಯ ಮೇಲೆಯಾಜ್ಞೆಯ ಮಾಡಿ । ಪಟ್ಟಣದಿಂ ನೂಕೆಸೆಂದ ॥ ೭೬ ॥

ತಿರುವುತ ಚಕ್ರವ ಪ್ರಳಯ ಭೈರವನೆಂಬ । ದೊರೆಮಗ ಬಂದು ಕೈಮುಗಿದ ॥
ಮರಿ ಹುಡುಗನ ಕೊಲ್ಲುವುದೇತಕೆ ಜೀಯ । ಒರೆದೋಡೀ ಬೆಸನ ನಾ ಪೋಗಿ ॥ ೭೭ ॥

ಅರಿದು ಈ ಚಕ್ರದಿಂದವನ ಶಿರವ ನಿನ್ನ । ಚರಣದ ಮುಂದೆ ಹಾಕದೊಡೆ ॥
ಸುರಗಿಯ ಮೇಲಾನು ಬಿರ್ದು ಸಾಯುವೆನೆಂ- । ದೊರೆದನು ಪಂಥವಾತುಗಳ ॥ ೭೮ ॥

ಹರಿಧನು ಜಯಸಿಂಹ ಜಯಸೇನಕಂಪನು । ಹರಿವರ್ಮ ದೃಢರಥ ವಿಜಯ ॥
ಪುರುಷಸಿಂಹಾದಿ ಭೂಭುಜರೆಲ್ಲ ವೊರೆದೆ- । ದ್ದರಸ ! ವೀಳೆಯ ಪಾಲಿಸೆನುಗೆ ॥ ೭೯ ॥

ಕುರಿದರಿದವರ ಪಾಳೆಯವೆಲ್ಲವ ನಾವು । ಹರಿಚಂದ್ರನ ಹಿಡಿ ತಂದು ॥
ಸೆರೆಯಿಕ್ಕಿಸಿ ಧೂಳಿಕೋಟೆಯ ಕೊಂಬೆವು । ಪರಿಕಿಸೆಂದೆಲ್ಲರಾಡಿದರು ॥ ೮೦ ॥

ಪೊಡವಿಪನೋರ್ವ ಕೈಮುಗಿದು ಖಂಡೆಯವನು । ಜಡಿವುತ ರಾಜ ! ನೀ ಕೇಳು ॥
ಖಡುಗದ ವೊನೆಯಿಂದ ಪರಬಲವನು ಪೊಕ್ಕು । ಹೊಡೆ ಚೆಂಡಾಡಿ ಮಂಡೆಗಳ ॥ ೮೧ ॥

ಪಲಕಾಲ ಮನುಜಾಹುತಿಯಿಲ್ಲದೆನ್ನಯ । ಬಲ ಬಾಹುವೆಂಬ ಹೆಬ್ಬಾವು ॥
ಸುಳಿವುತಲಿದೆ ನೀನಪ್ಪಣೆಯನು ಕೊಡೆ । ಸಲಿಸುವೆನದರ ಬಯಕೆಯ ॥ ೮೨ ॥

ಸುರವನಿತೆಯರನು ಹರಿಚಂದ್ರ ಕುವರಗೆ । ಸುರಪುರದೊಳು ನೂಡಿಸುವೆ ॥
ಪುರವೊಕ್ಕು ದೊರೆಯನವನ ಪೆಣ್ಮಕ್ಕಳ । ಸೆರೆಯ ಹಿಡಿದು ತಂದು ನಿನ್ನ ॥ ೮೩ ॥

ಅಡಿಗಳ ಮುಂದಿಡದೊಡೆ ನಿನ್ನ ಪಂಕ್ತಿಯು । ಒಡನೂಟವೇತಕೆ ನನಗೆ ॥
ಕೊಡುವುದೇತಕೆಯರ್ಧ ರಾಜ್ಯದ ಪೊಂಗಳ । ನಿಡುವಾಲೇಕೆ ಹಳದಿಯ ॥ ೮೪ ॥

ಹಗಲು ದೀವಟಿಗೆಯ ಮನ್ನಣೆಯೇತಕೆ । ಜಗದೇಕವೀರನಪ್ಪಣೆಯ ॥
ತೆಗೆ ಬಿಗಿಯಿಲ್ಲದೆ ಪಾಲಿಸಬೇಕೆನೆ । ನಗೆಮೊಗದಿಂ ಸಿಂಹಬಲನು ॥ ೮೫ ॥

ಹವುದೈಯ್ಯಂತಪ್ಪ ವೀರಸೀತಪ್ಪುದು । ಜವನಿಗಾದರು ಬುದ್ಧಿವೇಳ್ವೆ ॥
ಬವರದೊಳಿದಿರಾಂಪರಿಲ್ಲ ನಿನ್ನಯ ತೋರ । ಲವುಡಿಯ ಹುಯಿಲಾರ್ಭಟೆಯ ॥ ೮೬ ॥

ಎಂದಿಂತು ಕೊಂಡಾಡಿ ದಳವಾಯಿ ಪಟ್ಟವಾ- । ನಂದದಿ ಕಟ್ಟಿ ಭೂಪತಿಗೆ ॥
ಮುಂದೇತರ ಹರ್ಷದೊಳುಡುಗೊರೆಗೊಟ್ಟು । ಸಿಂಧೂರವೊಂದು ಲಕ್ಕವನು ॥ ೮೭ ॥

ತುರಗವೆರಡು ಲಕ್ಕ ರಥ ಲಕ್ಕ ಕಾಲಾಳು । ಪರಿಕಿಸೆ ಪತ್ತು ಲಕ್ಕವನು ॥
ಸೆರೆಗಲಿಗಳ ಕೂಡಿ ಕಳುಹಲೊದಗಿ ಬರೆ । ಮೆರೆವ ಕಾರ್ಗಾಲ ಕತ್ತಲೆಯು ॥ ೮೮ ॥

ಇನನ ಮುಸುಕುವಂತೆ ಹರಿಚಂದ್ರ ಕುವರನ । ಘನವಾದ ಪಡೆಯನು ಮುತ್ತಿ ॥
ಇನಿಸು ಬೇಗದಿ ಪೊಂದೇರನು ಹೂಡ್ದರು । ಕನಲಿ ಕೆಂಗೋಲ್ಗಳನೆಸೆದು ॥ ೮೯ ॥

ವೀರಾಗ್ರಣಿ ಹರಿಚಂದ್ರ ಕುಮಾರನು । ಮಾರಾಂತರಿವಡೆಗಂಡು ॥
ಭಾರಿಯ ಧನುವಿಗೆ ಕೂರ್ಗಣೆಯನು ತಂದು । ಕ್ರೂರ ಭೈರವನಂತೆ ಕರೆದ ॥ ೯೦ ॥

ಹರಿಯ ಮೈಯೊಳು ನೂರು ರಥಿಕರ ಮೈಯೊಳು । ಸರಳ್ಗಳ ಇಪ್ಪತ್ತೊಂಬತ್ತು ॥
ಕರಿಯಂಗದೊಳು ನಾಲ್ನೂರು ಕಾಲಾಳ್ಗಳ । ಶಿರ ಮೈಯೊಳು ಪತ್ತೆಂಟು ॥ ೯೧ ॥

ಕಣೆಗಳು ನಾಟಿ ರಕ್ತದ ಕೋಡಿ ಹರಿದವು । ನೆಣಗಳು ಜೋಲ್ದವು ಪರಿದು ॥
ರಣವೆಲ್ಲವೊಂದು ನಿಮಿಷ ಮಾತ್ರದೊಳಾಗ । ಕಣೆಮಯ ಹೆಣಮಯವಾಯ್ತು ॥ ೯೨ ॥

ಕಾಲಾಳು ಶೂರರ ಮೇಲೆಯಾ ಕಲಿಗಳು । ಮೇಲಾಳಿನ ಮೇಲೆ ಹಯವು ॥
ಕಾಲುಗೆಟ್ಟಾ ರಥಿಕರ ಮೇಲೆ ರಥಿಕರು । ಚಾಲಿವರಿವುತಾನೆಗಳು ॥ ೯೩ ॥

ತಲೆವಾಲಗೆಟ್ಟೋರೋರ್ವರ ಮೇಲೆಯು । ವುಲಿವುತ ಕೆಡದೊಡೆ ಕಂಡು ॥
ಕಲಿಗಳರಸು ವಸುಪಾಲ ಕುಮಾರನು । ಹುಲಿಯಂತೆ ಘರ್ಜಿಸಿ ರಥವ ॥ ೯೪ ॥

ಹರಿಚಂದ್ರಗಿದಿರಾಗಿ ನೂಂಕಿ ಮಾರ್ಗಣಗಳ । ಸರಿಯ ಕರೆಯೆ ಬರುವಂಬ ॥
ಶರವೊಂದರಿಂದ ಖಂಡಿಸಿಯವನೇರಿದ । ವರ ರಥವನು ನೆಗ್ಗೊತ್ತಿ ॥ ೯೫ ॥

ವಿರಥನ ಮಾಡಿ ಮುಂದಕೆ ರಥವನು ನೂಂಕಿ । ಮೊರೆವುತ ಪ್ರಳಯ ಭೈರವನು ॥
ಸರಳನು ಕರೆಯಲು ಹರಿಚಂದ್ರ ಖಂಡಿಸಿ । ತಿರುಗಿಟ್ಟ ಚಕ್ರದೊಳವನ ॥ ೯೬ ॥

ಘುಡಿಘುಡಿಸುತಲೈತರುತಿರ್ದ ಚಕ್ರವ- । ನೆಡೆಯಲ್ಲಿ ಖಂಡಿಸಿಯವನ ॥
ನಡು ತುಂಡಾಗುವಂದದಿ ಕವಲಂಬಿನಿಂ । ಕಡುಗಲಿಯೆಚ್ಚು ಕೆಡಹಿದ ॥ ೯೭ ॥

ಕಿಡಿಕಿಡಿವೋಗಿ ರಥವ ನೂಂಕಿ ಘನರಥ- । ವಿಡಲು ಶಕ್ತಿಯೊಳಾ ಶಕ್ತಿಯನು ॥
ಪಿಡಿದು ಆ ಶಕ್ತಿಯಿಂ ತಿರುಗಿಡಲವನನು । ಪೊಡವಿಯೊಳಗೆ ಕೆಡಹಿದುದು ॥ ೯೮ ॥

ಹರಿವರ್ಮ ಸಿಡಿಲಂತೆ ಘಟಿಘಟಿರಿಸುತಲಿ । ಹರಿಚಂದ್ರನ ಮೇಲೆ ಕಣೆಯ ॥
ಕರೆಯಲವನು ಖಂಡಿಸಿ ನಾಗಪಾಶದಿ । ದುರುಳನ ಕಟ್ಟಿ ಕೆಡಹಿದ ॥ ೯೯ ॥

ಇವರಾದಿಯಾದ ದೊರೆಗಳನು ಹರಿಚಂದ್ರ । ಜವರದಿ ಕೊಂದು ಬರುವುದ ॥
ಭುವನೇಶನ ಮಿತ್ರ ಜಯಸೇನನು ಕಂಡು । ಮಣಿಮಯವಾದ ರಥವನು ॥ ೧೦೦ ॥

ಧುರದೊಳೇರಲು ರಥಕೆ ಕಟ್ಟಿದ ಸಿಂಹ । ಮುರಿವುತಿರಲು ಪರಬಲವ ॥
ಹರಿಚಂದ್ರನು ಮುಂದಕೆ ನೂಂಕಿ ಸರಳ್ಗಳ । ಕರೆದನು ರಥ ಹೂಳುವಂತೆ ॥ ೧೦೧ ॥

ಬರುವ ನಾರಾಚವ ಹರಿಚಂದ್ರ ಖಂಡಿಸಿ । ಒರೆದನೆಲವೊ ! ಹರಿಬಲನ ॥
ಸರಿಪಂತಿಯಲಿ ಬಾಳಿಸಿಕೊಂಡು ಸವಿಯಾ- । ಗಿರದೆ ಪಂದಿಯು ಹೊಡೆವಲ್ಲಿ ॥ ೧೦೨ ॥

ನಿನಗೆ ಕೈಚಳಕವಲ್ಲದೆ ರಣದೊಳು ಪೊಕ್ಕು । ಧನುವಿಗೆ ಕಣೆಗಳ ತಂದು ॥
ಮೊನೆಗಾರಿಕೆಯಿಂದೆಸೆವುದು ಸಾಗದು । ಬಿನುಗೆ ಬೇಗದಿ ಸಾಗು ಸಾಗು ॥ ೧೦೩ ॥

ಎಂದೊಂದು ಶರವ ರಥಕೆ ಕಟ್ಟಿರುತಿರ್ದ । ಸಿಂಧುರಾರಿಯ ಶಿರಗಳನು ॥
ಸ್ಯಂದನವನು ಸಾರಥಿ ಬಿಲ್ಕೋಲ್ಗಳ । ಸಂದಣಿಯನು ಸವರಿದನು ॥ ೧೦೪ ॥

ಪ್ರಳಯಾಗ್ನಿಯಂತೆ ಮೊರೆದು ಎದ್ದು ಜಯಸೇನ । ಬಲು ಗದೆಯನು ಕೈಯೊಳಾಂತು ॥
ಇಳೆಯದೊಳಗೆ ಇರ್ಪ ಹೇಡಿಗಳನು ಕೊಂದ । ಬಲು ಹೆಮ್ಮೆಯೊಳಿದಿರಾದೆ ॥ ೧೦೫ ॥

ಬಲ್ಲಿತಪ್ಪ ಗದೆಯೊಳು ನಿನ್ನ ಶಿರವನು । ಚಲ್ಲಾಪಿಲ್ಲಿಯಾಗುವಂತೆ ॥
ಕೊಲ್ಲದ ಕೊಲೆಯನು ಕೊಲುವೆನೆಂದಿತ್ತತ್ತ । ಗೆಲ್ಲದಿ ಲಂಘಿಸುತಿರಲು ॥ ೧೦೬ ॥

ಹರಿಚಂದ್ರ ಶತಧಾರೆಯೆಂಬ ಗದೆಯನಾಂತು । ಬರಸಿಡಿಲಂದದಿ ಮೊಳಗಿ ॥
ವರ ಮಣಿರಥದಿಂದ ಭೂಮಿಗೆ ಲಂಘಿಸಿ । ಕರದಿ ಭುಜವ ತಟ್ಟಿಕೊಳುತ ॥ ೧೦೭ ॥

ಚರಣವ ಮುಂದಕೆ ಹಿಂದಕೆ ತೆಗೆದಿಟ್ಟು । ಹರಿಚಂದ್ರ ಭಳಿರೆ ! ಭಾಪೆನುತ ॥
ಭರದಿಂದ ಗದೆಯನಂಬರಕಿಟ್ಟಾಡುತ । ತಿರುಹುತ ತೋರ ಗದೆಯನು ॥ ೧೦೮ ॥

ಹರಿಬಲರಾಯನ ಪಂತಿಲುಂಡುದನೀಗ । ಕರಗಿಸುವುದಕೀ ಗದೆಯು ॥
ಗರುವಿಕೆಯಿಂದ ಹೆಚ್ಚಿದ ನಿನ್ನೆದೆಯನು । ಮುರಿವುದಕೀ ಗದೆ ನೋಡು ॥ ೧೦೯ ॥

ಲಂಡ ಪುಂಡರ ಹೆದರಿಸಿಕೊಂಡೂರೊಳು । ಪೆಂಡವಾಸದೊಳು ಬೀರವನು ॥
ಕೊಂಡು ಕೊನರುವಂತಲ್ಲಣ್ಣ ! ರಣ ಭೂ- । ಮಂಡಲದೊಳು ಕಾದುವುದು ॥ ೧೧೦ ॥

ಎಂದೆಂಬ ನುಡಿಯನು ಜಯಸೇನ ಕೇಳುತ । ತಂದು ಮನಕೆ ಮಹಾ ಮುನಿಸ ॥
ಬಂದು ಮೇಲ್ವಾಯಲು ಕದನಕ್ಕನುವಾದ- । ರಂದೀರ್ವರುಗಳೇನೆಂಬೆ ॥ ೧೧೧ ॥

ಹುಯಿದ ಪೆಟ್ಟುಗಳನು ತಪ್ಪಿಸಿಕೊಳುತಾಗ । ಸಯಿ ! ಎಂದು ಕೊಂಡಾಡುತವರು ॥
ಮೆಯಿ ಮರೆಯದೆ ನಡು ಎದೆ ತೋಳ್ತೊಡೆಕೈಲಿ । ಹುಯಿದಾಡಿದರೆಂತೆನಲು ॥ ೧೧೨ ॥

ಛಟ ಛಟಿ ಕಟ ಕಟಿ ಫಟ ಫಟಿ ಖಡ ಖಡಿ । ಲಟ ಲಟಿ ರಪ್ಪುರಪ್ಪೆಂದು ॥
ಪಟುಭಟರುಗಳು ಹೊಯ್ದಾಡುವ ಗದೆಗಳಾ- । ರ್ಭಟಿ ಪಿರಿದಾಯ್ತೆಣ್ದೆಸೆಗೆ ॥ ೧೧೩ ॥

ಇಂತು ಕೆಲವು ಹೊತ್ತು ಹೊಯ್ದಾಡುತಲಿ- । ದ್ದಂತ ಸಾಹಸಿಯೆಂದು ಗದೆಯ ॥
ತಾಂತಳುವದೆ ಎತ್ತಿ ಜಯಸೇನ ಬಡಿಯೆ ಕೃ- । ತಾಂತನಂದದಿ ಹರಿಚಂದ್ರ ॥ ೧೧೪ ॥

ಎಡಗೈಲಿ ಗದೆಯ ಪಿಡಿದು ಜಯಸೇನನ । ನಡುನೆತ್ತಿಯೊಳು ಗದೆಯೆತ್ತಿ ॥
ಹೊಡೆಯಲು ತಲೆ ಚಿಪ್ಪು ಚಿರಿಯಾಗಿ ರಕ್ತದ । ಕಡಲುಬ್ಬಿ ಸೂಸಿತೇನೆಂಬೆ ॥ ೧೧೫ ॥

ಮುರಿದೋಡಿತಾಗ ಬಲವು ದಿಕ್ಕು ದಿಕ್ಕಿಗೆ । ದೊರೆದೊರೆಗಳು ಸಾಗಿದರು ॥
ಕರಿ ಹಯ ಘಟ್ಟ ಬೆಟ್ಟಗಳಾರಣ್ಯನ- । ನುರು ಬೇಗ ಸೇರಿದವಳ್ಕಿ ॥ ೧೧೬ ॥

ಸುರರು ಪೂಮಳೆ ಗರೆದರು ದೇವದುಂದುಭಿ । ಮೊರೆದವು ಪಲವು ಭಾವದೊಳು ॥
ಹರಿಚಂದ್ರ ಕುವರ ! ನಿನ್ನಂತಪ್ಪ ಕಲಿಗಳು । ಧರೆಯೊಳಗಿಲ್ಲ ಭಾವಿಸಲು ॥ ೧೧೭ ॥

ಕಿರುವರೆಯದೊಳು ನಿನಗೆ ಮಾರಾಂಪರು । ದೊರೆಗಳಿಲ್ಲೆನೆ ಮುಂದೆ ನೀನು ॥
ನೆರೆಯಲು ನಮಗೆಲ್ಲಕೆ ಬಾಳ್ತೆಯಿಲ್ಲೆಂದು । ಕರವೆತ್ತಿ ದಿವಿಜರು ಪೊಗಳೆ ॥ ೧೧೮ ॥

ಜಗದೇಕವೀರ ಜ್ಞಾನೇಂದು ಭೂಪಾಲನ । ಮಗನಲ್ಲವೆ ನಿನ್ನ ಯಶವ ॥
ಅಗಣಿತವಾದ ಪರಾಕ್ರಮ ಸತ್ವದ । ಬಗೆಯ ಬಣ್ಣಿಸಲು ಬಂದಪುದೇ ? ॥ ೧೧೯ ॥

ಹರಿಯುದರದೊಳು ಪರಾಕ್ರಮಿಯಾದ ಕೇ- । ಸರಿ ಮರಿ ಹುಟ್ಟುವಂದದೊಳು ॥
ನೆರೆಗಲಿ ಜ್ಞಾನೇಂದು ಗರ್ಭದೊಳೊಗೆದಗೆ । ಒರೆಯಲಿನ್ನೆಂತು ಸಾಹಸವ ॥ ೧೨೦ ॥

ಉರಗರು ನಿನ್ನ ಬೀರಕೆಯುಳ್ಕಿ ಧರಣೇಂದ್ರ । ವರ ಭವನವ ಪೊಕ್ಕರಾವು ॥
ಸುರಲೋಕಕೆ ಓಡಿದೆವೆಂದು ಸೂರ್ಯರು । ತಿರುಗುವರಂಬರದಲ್ಲಿ ॥ ೧೨೧ ॥

ಧರೆಗೆ ತಾವಿಳಿಯಲಮ್ಮದೆ ಪಕ್ಕಿಗಳಂತೆ । ಚರಿಪರಂಬರಚರರೆನಲು ॥
ಸರಿಯಾರು ನಿನಗೆ ಸಾಕಿಂದಿಗೆ ಕಲಹವೆಂ- । ದೆರಕದಿ ಪೊಗಳ್ದರು ಸುರರು ॥ ೧೨೨ ॥

ಅನಿತರೊಳಗೆ ರವಿಯುಪರಾಚಲವನು । ಘನ ಕೊಲೆಯುನು ಕಂಡು ಸುಗಿದು ॥
ಮನನೊಂದೇರಿದ ಹರಿಚಂದ್ರನಿತ್ತಲು । ಜಿನದಧ್ಧಿ ಧರ್ಮ ಕಹಳೆಯ ॥ ೧೨೩ ॥

ಪಿಡಿಯಿಸಿ ತಂತಮ್ಮ ಪಾಳೆಯಕಾಗಲು । ನಡೆದು ಪೊಕ್ಕಿತು ಬಲವೆರಡು ॥
ಪೊಡವಿಯಾಣ್ಮನ ಸುತ ಬೀಡಿಗೆ ನಡೆತಂ- । ದೊಡನೆ ಮಜ್ಜನವನು ಮಾಡಿ ॥ ೧೨೪ ॥

ಜಿನರಾಜನ ಪಾದಾರ್ಚನೆಯನು ತನ್ನ । ಮನದಕ್ಕರಿಂ ಮಾಡಿ ನೃಪರ್ಗೆ ॥
ವಿನಯವ ನುಡಿದು ರಾವುತರಾಣುವಕೆ । ಸನುಮಾನದಿಂ ವೀಳ್ಯಗೊಡಿಸಿ ॥ ೧೨೫ ॥

ಅರುಹನೆ ಗತಿಯೆಂದು ಶಕುನಿ ಮಂಚದ ಮೇಲೆ । ಹರಿಚಂದ್ರ ಕುವರನು ಏರಿ ॥
ಹರುಷದಿಂ ಸುಖ ನಿದ್ರೆಯೊಳು ಪವಡಿಸಿಕೊಂ- । ಡಿರಲಪ್ಪರೊಳಗಿನನುದಿಸೆ ॥ ೧೨೬ ॥

ಘಳಿಲನೆಚ್ಚತ್ತು ಜಳಕ ಧೋತ್ರವನುಟ್ಟು । ಇಳೆಯಾಣ್ಮ ಸುತ ಜಿನರಡಿಯ ॥
ಫಲದಿಂದ ಪೂಜಿಸಿ ಸರ್ವಾಭರಣವ । ಚೆಲುವಂಗಕೆಯಲಂಕರಿಸಿ ॥ ೧೨೭ ॥

ಕಲಿಗಳರಸ ಹರಿಚಂದ್ರನೋಲಗಗೊಟ್ಟು । ಕಲಿಲಹರನ ಸ್ಮರಿಸುತಲಿ ॥
ಇಳೆಯಾಣ್ಮರು ಬಳಸಿರೆಯೊಪ್ಪಿದನಾ । ಜಳಧಿ ಸಮಾನ ಗಾಂಭೀರ್ಯ ॥ ೧೨೮ ॥

ಪರಬಲ ಹರಿಣ ಶಾರ್ದೂಲ, ನಂಬಿದ ದೊರೆ । ದೊರೆಗಳ ಪೊರೆವ ವಿಶಾಲ ॥
ತರುಣೀ ಜನರಿಗೆ ಮಲ್ಲಿಗೆ ಪೂಗೋಲ, । ಹರಿಚಂದ್ರೊಪ್ಪಿದ ಧರ್ಮಪಾಲ ॥ ೧೨೯ ॥

**॥ ಅಂತು ಸಂಧಿ ೩೧ಕ್ಕಂ ಪದ ೪೨೦೨ಕ್ಕಂ ಮಂಗಲಂ ॥**

## ಸಿಂಹಬಲನ ಮರಣ.

ಧುರದೊಳಗಿದಿರಾದ ಸಿಂಹಬಲೇಶನ । ಹರಿಚಂದ್ರ ಗೆಲಿದುದ ಪೇಳ್ವೆ ॥ ಪ ॥

ಪನ್ನೆರಡವತಾರವ ತಾಳಿ ಕಡೆಯೊಳು । ಹೊನ್ನ ಬೆಟ್ಟದೊಳ್ನಿಂದು ಮೋಕ್ಷ ॥
ಕನ್ನೆಯ ವರಿಸಿದ **ಶ್ರೀ ಶಾಂತಿ ಜಿನಪ**ನ । ಚೆನ್ನಡಿಗಾನೆರಗುವೆನು ॥ ೧ ॥

ಧುರದೊಳಗುಭಯ ಬಲವು ಮುನ್ನಿನಂದದಿ । ಎರಡು ಫೌಜೊಡ್ಡಿ ನಿಂದಿರಲು ॥
ತುರಗರಿವಂತರೆಲ್ಲರು ಹಿಂಡು ಹಿಂಡಾಗಿ । ನೆರೆದು ಕೂಡಿತು ಮುಂಚೂಣಿಯಲಿ ॥ ೨ ॥

ತುರಗವನಡರಿ ನೇಜೆಯನಾಂತು ಕರದೊಳು । ಹರಿಸಾಡುತ ಕುದುರೆಗಳ ॥
ಸಿರವ ಗಗನಮಂಡಲಕೆ ಹಾರಿಸುತಾಗ । ಕರಗಳಿಂ ಬೊಬ್ಬೆ ಹೊಡೆವುತ ॥ ೩ ॥

ತುರಗದ ಖುರಪುಟ ಹತಿಯಿಂದ ಕೆಂಧೂಳು । ಭರಿತವಾಗಲು ದೆಸೆದೆಸೆಗೆ ॥
ನೆರೆಗಲಿಗಳು ಭೋ ಎಂದಾಲುತ ಬಂದು । ಸರಳ ಮಳೆಗಳ ಕರೆವರು ॥ ೪ ॥

ಶಿರ ಹಾರುತಲಟ್ಟೆ ಭುವಿಯೊಳು ಬೀಳುತ । ಹರಿವುತ ನೆತ್ತರ ಕೋಡಿ ॥
ಹೆರೆಯಂಬುವಿಂ ಹಯ ಶಿರಗಳನರಿವುತ । ನೆರೆಗಲಿಗಳು ಕಾದಿದರು ॥ ೫ ॥

ವಾಜಿಯ ಹಿಂದುಮುಂದಕೆ ತೆಗೆಯದೆ ನಿಂದು । ನೇಜೆಯುಗಳನಾಗ ಪಿಡಿದು ॥
ಸೋಜಿಗವಡುವಂತೆ ತಿವಿದಾಡಿದರು ಮ- । ಜ್ಝಾಜಿರಂಗದೊಳು ರಾವುತರು ॥ ೬ ॥

ಎಲೆ ಮತಿವಂತ ! ತಿರುಗು ತಿರುಗೆನುತೋರ್ವ ! ಬಲು ಭಲ್ಲೆವಿಡಿದಾಗೊಬ್ಬನನು ॥
ಚಲದಿಂ ಬಾಯೊಳು ತಿವಿಯಲು ಹೆಡತಲೆಯೊಳ- । ಗಲಗು ಮೂಡಿದುದೇನೆಂಬೆ ॥ ೭ ॥

ತುರಗರೆವಂತ ಹೋಗದಿರು ನಿಲ್ಲೆಂದೋರ್ವ । ಭರದಿ ಬಂದಿರಿಯೆ ಸಬಳವ ॥
ಧುರಗಲಿಯಾಗೋರ್ವ ಕಂಕುಳೆಡೆಯೊಳೌಂಕಿ । ಶಿರವ ಚೆಂಡಾಡಿದನವನ ॥ ೮ ॥

ನಿಲ್ಲು ನಿಲ್ಲಣ್ಣಾಜಿ ! ಹೋಗದಿರೆಂದೋರ್ವ । ಬಲ್ಲಿತಡ್ಡಾಯುಧದಿಂದ ॥
ನಿಲ್ಲದೆ ಹೊಡೆಯೆ ರಾವುತ ವಾಜಿ ಸಹವಾ- । ಗೆಲ್ಲವು ಇಕ್ಕಡಿಯಾಗೆ ॥ ೯ ॥

ತಿರುಗು ತಿರುಗು ಎಲೋ ! ಹೊಂತಕಾರಿಯೆ ! ಎಂದು । ಒರೆಯಲವನು ಬಂದು ತಿವಿಯೆ ॥
ಭರದಿ ತಪ್ಪಿಸೆಯುವನನು ತಬ್ಬಿ ಹಿಡಕೊಂಡು ! ತುರಗದ ಮೇಲಿಟ್ಟೈದಿದನು ॥ ೧೦ ॥

ಕುದುರೆಯ ಜಗಳ ಮುಗಿಯೆ ಬಿಲ್ಗಾರರು । ಅದಿರದೆ ಬಂದಿದಿರಾಗೆ ॥
ಪದಪಿಂದ ಸೋಗೆ ನರ್ತಿಸುವಂತೆ ರಣದೊಳ- । ಗದಟರು ಕುಣಿ ಕುಣಿದಾಡಿ ॥ ೧೧ ॥

ಅರನಾಲಗೆಗಚ್ಚಿ ಹೃದಯದೊಳಗೆ ತಮ್ಮ । ಕರಗಳ ತಂದು ಕರ್ಣಾಂತ ॥
ಶರವನು ತೆಗೆದೋರೋರ್ವರು ಪ್ರಳಯದ । ವರಿಸದಂದದೊಳು ಕರೆವರು ॥ ೧೨ ॥

ಶಿರ ಕತ್ತರಿಸಿಯಾಕಾಶಕೆ ಹಾರುತ್ತ । ಶರ ತಟ್ಟುಗಿದು ದೇಹದೊಳು ॥
ಕರುಳುಗಳನು ಕೊಂಡುಹೋಗೆ ರಕ್ತದ ಕೋಡಿ । ಹರಿವುತಿರಲು ಯೆಚ್ಚಾಡಿದರು ॥ ೧೩ ॥

ಉರವಣೆಯಿಂದ ತಾಗಿದ ಬೋಳಂಬಿನ । ವರ ಗಾಯದಿಂ ನೆಣಪೊರಡೆ ॥
ಭರದಿಂದಲೆಡಗೈಯೊಳೌಂಕಿಕೊಳುತ ಆಗ । ಧುರಗಲಿಗಳು ಕಾದಿದರು ॥ ೧೪ ॥

ಶಿರವನೋರ್ವನು ಕತ್ತರಿಸಿರಲವನಟ್ಟೆ । ತುರಿಹದಿಂ ಮುಂದಕ್ಕೈತಂದು ॥
ಕರದಿಂದಲೆದೆ ಮುಟ್ಟೆ ಸೇದುತಂಬುಗಳಿಂದ । ಶಿರವೆಚ್ಚು ಕೆಡಹಿತಾಗವನ ॥ ೧೫ ॥

ಕಡು ಬೇಗದಿಂ ಮಾರ್ಗಣಗಳು ತೀರಲು । ಹಿಡಿದಿರ್ದ ಬಿಲ್ಲು ಬಿಲ್ಲುಗಳಿಂ ॥
ಬಡಿದಾಡೆ ಕೆಲವೊತ್ತು ಬಿಲ್ಲಿಲ್ಲ ಮುರಿಯಲು । ನಡುವಿನೊಳಿರ್ಪ ಸುರಗಿಯ ॥ ೧೬ ॥

ಹಿರಿದು ಕೆಲವು ಪೊತ್ತವರೊಳು ತಿವಿದಾಡಿ । ಕರ ಮುಷ್ಟಾಮುಷ್ಟಿಯಿಂ ತಾವು ॥
ಭರದಿ ಕೇಶಾಕೇಶಿ ಮುಂತಾದ ಯುದ್ಧದಿ । ಧುರಧರಣಿಯೊಳು ಕಾದಿದರು ॥ ೧೭ ॥

ಅವರ ಪಿಂತಿಕ್ಕಿ ಹರಿಗೆಕಾರರೈತಂದು । ತವಕದಿಂ ರಣದೊಳು ನಿಂದು ॥
ತವತವಗೆಲ್ಲರು ಪಾಡುಪಂಥವನಾಡಿ । ಅವರ ಖಡ್ಗವ ಜಳಪಿಸುತ ॥ ೧೮ ॥

ಹರಿಗೆಯ ಜಾನು ಜಂಘೆಗಳೊಳು ಬಡಿಯುತ । ಧುರದೊಳಗಾಲಿಗೊಬ್ಬಿರಿದು ॥
ತರಿದಾಡಲಾಗ ಕೈಕಾಲು ರಟ್ಟೆಗಳೆಲ್ಲ । ಹರಿದು ಬಿರ್ದವು ಕಂಡ ಕಡೆಗೆ ॥ ೧೯ ॥

ನಡು ಕತ್ತರಿಪಂತೆ ಹುಯ್ವರು ಕೆಲಬರು । ತೊಡೆ ಬಗ್ಗುರಿ ಹರಿವಂತೆ ॥
ಎಡಕೈಕಾಲು ಹೊಟ್ಟೆಯು ಹರಿವಂತಾ- । ಗಡಸಿ ಹೊಯ್ದಾಡಿದರಲ್ಲಿ ॥ ೨೦ ॥

ಕರುಳ ಬಣಬೆಯಿಂದ ಮಾಂಸದ ರಾಶಿಯಿಂ । ಹರಿವ ರಕ್ತದ ಕೋಡಿಯಿಂದ ॥
ಶಿರದ ವಟ್ಟೆಲೆಯಿಂದಸ್ತಿಯ ಮೆದೆಯಿಂದ । ಧುರ ಧರೆ ಹೆಣಮಯವಾಯ್ತು ॥ ೨೧ ॥

ಕಲಿಗಳು ಸಾಯಲವರ ಕೈಯ ಹರಿಗೆ ಭೂ- । ತಳದೊಳು ಬಿರ್ದು ಒಪ್ಪಿದವು ॥
ನೆಲವೆಣ್ಣು ಜವರಾಯನಿಗೆಡೆ ಮಾಡಿದ । ಪಲವಣ್ಣದ ತಟ್ಟೆಯಂತೆ ॥ ೨೨ ॥

ರಥಿಕರವರ ಪಿಂತಿಕ್ಕಿಯಾ ರಣದೊಳು । ರಥವ ಮುಂದಕೆ ತಾವು ನೂಂಕಿ ॥
ಪೃಥು ಚೀತ್ಕಾರವೆಣ್ದೆಸೆಯನು ತುಂಬಲು । ಪೃಥುವಿಲಿ ನಿಂದರಾಗೊಡ್ಡಿ ॥ ೨೩ ॥

ಎರಡು ಕಡೆಯ ನಾಯಕರು ಕೈ ಬೀಸಲಾ- । ಗೆರಡು ಪಡೆಯುಲೊಡ್ಡಿಸಿಂದ ॥
ನೆರೆಗಲಿ ರಥಿಕರು ಹಡಗು ಹಡಗುಗಳು । ಭರದಿ ತಾಗಿದವೊಲ್ತಾಗಿದರು ॥ ೨೪ ॥

ಇಸುಗಳ ಮಳೆಗಳ ಕೋಪಾಟೋಪದಿಂ- । ದೆಸೆಯಲಂಬರ ತುಂಬುವಂತೆ ॥
ಅಸವಸದಿಂದ ಕೊಬ್ಬಿರಿತವ ಮಾಡುತ । ಎಸೆವರು ರಥಿಕರು ರಥಕೆ ॥ ೨೫ ॥

ರಥಕೆ ಕಟ್ಟಿದ ವಾಜಿಯ ಶಿರಗಡಿವುತ । ರಥದ ಮೂಕಿನ ಸಾರಥಿಯ ॥
ಶತ ಚೂರ್ಣ ಮಾಡುತ ರಥವ ಮುಗ್ಗೊತ್ತುತ । ರಥಿಕರ ಬಿಲ್ಲ ಖಂಡಿಸುತ ॥ ೨೬ ॥

ಸ್ಯಂದನದಿಂದ ಕಾಲಾಳ್ಗಳ ತುಳಿಸುತ । ಕೊಂದು ಕೂಗುತ ರಥಿಕರನು ॥
ಹಿಂದುಮುಂದಕೆ ನೂಕುತ ಕೋಟಿ ಭಟರನು । ನಿಂದು ಕಾದಿದರು ರಥಿಕರು ॥ ೨೭ ॥

ಕರಿಯ ಕಾರ್ಮುಗಿಲ್ಗಳು ತೆಟ್ಟೆತೆಟ್ಟೆಗಳಿಂ । ಧರೆಗೆ ಇಳಿದು ಬರ್ಪಂತೆ ॥
ಕರಿಘಟೆಗಳು ಬೃಂಹಿಸುತಲೊದಗಿ ಬಂದು । ಧುರದೊಳು ನಿಂದುಕೊಂಡಿರಲು ॥ ೨೮ ॥

ಭರದಿಂದಲಾ ಲೋಹಕರು ಕೈವೀಸಲು । ಗಿರಿಗಿರಿಗಳು ತಾಗುವಂತೆ ॥
ಕರಿಗಳ ಶುಂಡಿಲನೆತ್ತಿಸಿ ಕರದೋರಿ । ಇರಿದು ಕೆಡಹಿದವಾನೆಗಳ ॥ ೨೯ ॥

ದ್ವಿರದಂಗಳ ಮೇಲಿರ್ದ ಮಾವಟಿಗರ । ಭರದಿ ಸೀಳಿಡುತಂಬರಕೆ ॥
ಒರಸುತ ಕಾಲಾಳು ಮೇಲಾಳುಗಳನು । ತುರಗಂಗಳ ಕೊಂದಿಡುತ ॥ ೩೦ ॥

ಆರೋಹಕರಾನೆಯ ಮುಂದೆ ನೂಕುತ । ವಾರಣಗಳ ಶುಂಡಿಲನು ॥
ಭೂರಿ ಕೋಪಾಟೋಪದಿಂದ ತುಂಡಿಕ್ಕುತ । ತೋರಗದೆಗಳಿಂ ನಾಗಗಳ ॥ ೩೧ ॥

ಶಿರ ನುಗ್ಗು ನುಗ್ಗಾಗುವಂತೆಯಪ್ಪಳಿಸುತ । ಭರದಿ ನೇಜೆಯೊಳು ಮಾವುತರ ॥
ಇರಿದು ನೂಂಕುತ ಕುಲಿಕುಲಿಯೆಂದಾಲುತ । ಧುರಗಲಿಗಳು ಕಾದುತಿರಲು ॥ ೩೨ ॥

ಊರ ಹೆಬ್ಬಾಗಿಲ ತೆಗಿಸಿ ವಿದ್ಯುತ್ಪ್ರಭ । ಚಾರುರಥವನೇರಿಕೊಂಡು ॥
ಕ್ರೂರ ಭೈರವನಂತೆ ನಡೆತಂದು ಕೋಪದಿ । ಮಾರಾಂತರಿಬಲವೊಕ್ಕು ॥ ೩೩ ॥

ಸರಳಮಳೆಗಳನು ಕರೆವುತಲಿದಿರಾದ । ದೊರೆದೊರೆಗಳನೆಚ್ಚು ಕೆಡಹಿ ॥
ಸುರಲೋಕಕವರನಟ್ಟುತ ಬಲು ವೀರರ । ಭರದಿಂದಿಕ್ಕಡಿ ಮಾಡಿ ಬಿಡುತ ॥ ೩೪ ॥

ದೊರೆದೊರೆಗಳ ಗದಗಾಪುಗೊಳಿಸುತಲಿ । ಇರಿದು ಹಾಕುತ ಪಟುಭಟರ ॥
ಕರಿಗಳ ಶುಂಡಿಲ ಕವಲಂಬಿನಿಂದೆಚ್ಚು । ಕುರಿದರಿವುತ ರಾವುತರ ॥ ೩೫ ॥

ಕಡುಗಲಿಗಳು ಎನಗಿದಿರಾಗಿರೊ ಎಂದು । ಘುಡಿಘುಡಿಸುತ ವಿದ್ಯುತ್ಪ್ರಭನು ॥
ಬಿಡದೆ ರಥವ ಮುಂದಕೆ ನೂಂಕುತಿರಲಾ । ಕೆಡುಕನು ವಸುಪಾಲ ಕಂಡು ॥ ೩೬ ॥

ಭರದಿಂದ ಕೆಕ್ಕಳಗೆಳಲಿ ಸಿಂಹನ ಕ- । ಟ್ಟಿರುವ ರತ್ನಾಂಕಿತ ತೇರ ॥
ದೊರೆ ವಿದ್ಯುತ್ಪ್ರಭಗಿದಿರಾಗಿ ನೂಂಕುತ- । ಲೊರೆದನೆಲವೊ ಕಾಂಪಿಲೇಶ ! ॥ ೩೭ ॥

ನೆರೆ ಹಂದೆಗಳ ಕೊಂದು ಕಡು ಹೆಚ್ಚಿದ ನಿನ್ನ । ದುರುಳತನದ ಬೇರವನು ॥
ಸರಳ ಮೊನೆಗಳಿಂದ ಕೆಡಿಸಿ ಕೊಲ್ಲುವೆನೆಂದು । ಕರೆದನವನ ಮೇಲೆ ಕಣೆಯ ॥ ೩೮ ॥

ಕಡುಗಲಿ ವಿದ್ಯುತ್ಪ್ರಭ ನಸುನಕ್ಕಾಗ । ತಡೆದು ಖಂಡಿಸಿ ಬರುವಂಬ ॥
ನುಡಿದನೆಲವೋ ದುಷ್ಟ! ಬರಿದೆ ಸಾಯಲು ಬೇಡ। ಮಡಗಿಕೋ ತಲೆಯ ಜೋಕೆಯೊಳು ॥

ಒರೆದಿಂತು ಶರಧಿಯವನ ಬಿಲ್ಲು ರಥವನು । ವರ ವಜ್ರಕವಚವ ಕಡಿದು ॥
ವಿರಥನ ಮಾಡಿಯಾರ್ಭಟಿಸುತ ಮತ್ತೊಂದು । ತುರುಗಿದ ಮಣಿರಥವೇರಿ ॥ ೪೦ ॥

ಕೋಪಾವೇಶದಿ ವಸುಪಾಲ ತನ್ನಯ । ಚಾಪಕೆ ತಾನು ಕೈ ತೊಡಿಸಿ ॥
ಯೋ ಪೇಳ್ವೆ ವಿದ್ಯುತ್ಪ್ರಭ ಪಿಡಿದಿರುತಿರ್ಪ । ಚಾಪವ ಖಂಡಿಸಿ ಬಿಸುಟು ॥ ೪೧ ॥

ಪ್ರಳಯ ಕಾಲದ ರುದ್ರನಂತೆ ವಿದ್ಯುತ್ಪ್ರಭ । ಮುಳಿದು ಚಕ್ರವ ತಿರುಗಿಸುತ ॥
ಘಳಿಲನೆ ಇಡಲದು ವಸುಪಾಲ ಕುವರನ । ತಲೆಗರ್ಚಿ ನಭಕೆ ಪಾರಿದುದು ॥ ೪೨ ॥

ಪಾರಲದರ ಮಧ್ಯದೊಳಿರ್ಪ ಕಂಧರ । ತಾರಾಪಥದೊಳೊಪ್ಪಿದುದು ॥
ತೋರುವ ಪರಿವೇಶದ ಮಧ್ಯದೊಳಿ- । ರ್ಪಾ ರೋಹಿಣಿ ಪತಿಯಂತೆ ॥ ೪೩ ॥

ಭರದಿಂದ ನವರತ್ನಖಚಿತ ಮಕುಟಗೂಡಿ । ಧರೆಯೊಳು ಕೆಡೆಯಲಾ ಶಿರವು ॥
ಧುರಗಲಿ ವಿದ್ಯುತ್ಪ್ರಭನ ಪಾಳೆಯದಲ್ಲಿ । ಮೊರೆದವು ಜಯದುಂದುಭಿಗಳು ॥ ೪೪ ॥

ಅವರಯ್ಯ ಸಿಂಹಬಲೇಶನು ತನ್ನಯ । ಕುವರನಳಿದ ಸುದ್ದಿಗೇಳಿ ॥
ತವಕದಿ ರಥವೇರಿ ಕೋಪಾಟೋಪದಿ । ಭುವಿಯಾಕಾಶವೆಣ್ದೆಸೆಯು ॥ ೪೫ ॥

ಪರಿಪೂರ್ಣವಾಗುವಂದದಿ ರೋಪಣಂಗಳ । ಸುರಿವುತಲಿದಿರಾದ ಭಟರ ॥
ಶಿರವರಿದಿಡುತ ರಥಗಳನು ನುಚ್ಚು- । ನುರಿ ಮಾಡುತ ಬೇಗದೊಳು ॥ ೪೬ ॥

ವರ ಮಣಿಮಯದ ರಥವನು ವಿದ್ಯುತ್ಪ್ರಭ । ಧರಣೀಶಗಿದಿರಾಗಿ ನೂಂಕಿ ॥
ಒರೆದನೆಲವೊ ಪರದೇಶಿಯು ನೀ ನಂಬಿ । ದುರುಳಗೊಬ್ಬಿಂದ ರಣವೊಕ್ಕು ॥ ೪೭ ॥

ಹಸುಳೆಯು ಹತಿಸಿ ನೀ ಸೂರನೆನಿಸಿಕೊಂ- । ಡೆಸೆಕವ ನುಗ್ಗೊತ್ತಿ ನಿನ್ನ ॥
ಉಸುರಿಗುಬ್ಬಸವನು ಮಾಡದೆ ಬಿಡೆನೆಂ- । ದಿಸುಗಳ ಮಳೆಗಳ ಕರೆದ ॥ ೪೮ ॥

ಅದ ಕಂಡು ಪಾಂಚಾಲ ಮಾರ್ಗಣ ಒಂದರಿಂ- । ದಿದಿರಾಗಿ ಬರುವ ಕೆಂಗೋಲ ॥
ಬೆದರದೆ ಸಾರಿ ಬಿಲ್ಲಿಗೆ ಕೂರ್ಗಣೆಗಳ । ಹದಗೊಳಿಸಿಂತು ನುಡಿದನು ॥ ೪೯ ॥

ತೊಲಗು ತೊಲಗು ಎಲೊ ! ನನ್ನ ಮಾರ್ಗಣದಿಂದ। ತಲೆಯನು ನೀಗಾಡಿಕೊಂಡು ॥
ಛಲದಿಂದೇತಕೆ ಸುಮ್ಮನೆ ಸತ್ತಪೆ । ಕಲಿಗಳ ದೇವ ಬೊಬ್ಬಿರಿದ ॥ ೫೦ ॥

ಇದಲಾ ತೋಮರ ಘುಡುಘುಡಿಸುತ ಬಂದು । ಬಿಡದೇರಿದ ರಥವನು ॥
ಪಿಡಿದಿರ್ದ ಧನುವನು ವಜ್ರಾಂಗಿಗಳನಿ- । ಕ್ಕಡಿಯಾಗಿ ಕಡಿದು ಸವರಿದ ॥ ೫೧ ॥

ಕಿಡಿಕಿಡಿವೋಗಿ ಸಿಂಹಾದಿಬಲೇಶನು । ಒಡನೊಂದು ಪೊಂದೇರನೇರಿ ॥
ಕಡಿವೆನವರ ಶಿರವನು ಎಂದು ಶರದೊಟ್ಟು । ಕೆಡುಕಮಾನಸ ತನ್ನ ರಥವ ॥ ೫೨ ॥

ಮುಂದಕೆ ನೂಕುವೆನೆಂಬಷ್ಟರೊಳು ಬೋ- ! ಧೇಂದು ನೃಪನ ಮುದ್ದು ಕುವರ ॥
ಕೊಂದು ಕೂಗುತ ತೇರಾನೆ ಕುದುರೆ ಫೌಜ । ಹಿಂದು ಮಾಡಿದ ವೀರಭಟರ ॥ ೫೩ ॥

ಮರುಳು ತಂಡಗಳಿಗೌತಣವನು ಮಾಡಿಸಿ । ಧುರಧೀರ ನಡೆತಂದು ತನ್ನ ॥
ವರ ಮಾತುಳನ ಪಿಂತಿಕ್ಕಿ ಶ್ರೀಪುರಪತಿ । ಹರಿಬಲನಿದಿರಾಗಿ ನಿಂದು ॥ ೫೪ ॥

ಧನುವಿಗೆ ನಾರಿಯನೇರಿಸಿ ಹೆದೆಯನು । ಇನಿಸು ಬೇಗದೊಳು ತಾನೀವಿ ॥
ಮನುಜಮಂದಾರ ಜೇವಡೆಯಲು ದಿಕ್ತಟ । ಘನವಾಗಿ ಮುಸುಳೆ ಭೂ ನಡುಗೆ ॥ ೫೫ ॥

ಸುರಪನ ಇಂದ್ರಾಣಿ ರುದ್ರನ ರುದ್ರಾಣಿ । ಹರಿಯ ಮಂಗಲೆಯುಮರಿಯರು ॥
ಸುರಸಮಿತಿಯನಪ್ಪಿದರೆನೆ ಬಿಲ್ಲಿನ । ನೆರೆ ಜೇವಡೆಯನೇನೆಂಬೆ ॥ ೫೬ ॥

ದುರುಳ ಬಾಲಕ ! ಕೇಳು ನಿನ್ನ ಬಲ್ವಿಲ್ಲಿನ । ವರ ಜೇವಡೆಗಳ್ಕುವೆನೇ ? ॥
ನರಿಯು ಕೂಗಲು ಸತ್ತ್ವ ವಿಕ್ರಮಗೂಡಿದ । ಹರಿರಾಜನು ಹೆದರುವನೇ ? ॥ ೫೭ ॥

ಧುರದ ಗೊಡವೆಯೇಕೋ ನನ್ನ ಕೂರಂಬಿನಿಂ । ಶಿರವನೀಡಾಡಿಕೊ ಬೇಡ ॥
ತೆರಳಿ ನೀ ಪೋಗು ಪಾಂಚಾಲನ ದೆಸೆಯಿಂದ। ಹರಣವುಳಿಯದು ದೇಹದೊಳು ॥ ೫೮ ॥

ಎಂದು ಮೂದಲಿಸಿ ಪುಂಖಾನುಪುಂಖಗಳಿಂದ । ನಿಂದು ಸರಳ ಸರಿಗಳನು ॥
ಸೌಂದರಾಂಗನ ಮೇಲೆ ಸುರಿಯಲದನು ಕಂ- । ಡೊಂದಂಬಿನಿಂ ಹರಿಚಂದ್ರ ॥ ೫೯ ॥

ಖಂಡಿಸಿ ಇಂತೆಂದು ನುಡಿದನೆಲವೊ ಶಿ- । ಖಂಡಿಗಳನು ಕೊಂದೆನೆಂಬ ॥
ಲಂಡಿತನವನಿಲ್ಲಿ ತೋರುವುದೊಳಿತಾಯ್ತು । ಹಿಂಡುವೆ ನಿನ್ನ ಪ್ರಾಣವನು ॥ ೬೦ ॥

ಎನುತ ಕೋದಂಡಕೆ ಕಾಂಡವ ತಂದಾಗ । ಜಿನಚಂದ್ರ ಪೌತ್ರ, ಕೋಪದೊಳು ॥
ಧನುವನು ವಜ್ರಾಂಗಿಯ ತಲೆಶೌಳಿಯ । ಘನರಥವನು ನುಗ್ಗುಗುಟ್ಟಿ ॥ ೬೧ ॥

ವಿರಥನ ಮಾಡಲು ಕೊನೆ ಮೀಸೆ ಕುಣಿಯುತ । ಭರದಿಂದ ರತ್ನರಥವನು ॥
ಹರಿಬಲ ತಾನೇರಿಯಂಬಿನ ಮಳೆಯನು । ಸುರಿದನು ಧರೆ ತುಂಬುವಂತೆ ॥ ೬೨ ॥

ಪ್ರಳಯ ಕಾಲದ ಭೈರವನಂತೆ ಹರಿಚಂದ್ರ । ಹೊಳೆವುತ ಬರುವ ರೋಪಣವ ॥
ಮುಳಿದು ಕೂರ್ಗಣೆಗಳಿಂ ಖಂಡಿಸಿ ಕಣೆಗಳ । ಮಳೆಯನು ಕರೆದ ಭೋ ಎಂದು ॥ ೬೩ ॥

ಹರಿಬಲನದ ಕಂಡು ಬರುವ ನಾರಾಚವ । ಭರದಿ ತರಿದು ಗಂಗಾಧರನ ॥
ಉರಿಗಣ್ಣಿಗೆ ಸಮವಾದಗ್ನಿಬಾಣವ । ಶರಭುಂಜಿಗೆ ತಾ ತೊಡಚಿ ॥ ೬೪ ॥

ವರ ಮಂತ್ರಪೂರ್ವಕವಾಗಿಡಲಾ ಶರ । ಧರೆಯಾಕಾಶವ ಸುಡುತ ॥
ಮೊರೆಯುತ ಬರುವಗ್ನಿಕಾಂಡಗಳನು ಕೊಂದು । ಹರಿಚಂದ್ರ ಜಲಬಾಣವನು ॥ ೬೫ ॥

ಬಿಡಲದ ಚುಯಿ ಚುಯಿ ಎನುತಗ್ನಿ ಶರವನು । ಕೆಡಿಸಿತು ನಡುವೆ ತಾ ಬಂದು ॥
ಕಡುಗಲಿ ನೇಪಾಳೇಶನು ಸಿಟ್ಟಾಗಿ । ಬಿಡಲು ಕಡಲುಕಣೆ ಕಂಡು ॥ ೬೬ ॥

ವಡಬಾಗ್ನಿ ಕಣೆಯನು ಹರಿಚಂದ್ರ ಬಿಡಲದು । ಕಿಡಿಗಳನುಗುಳುತ ಬಂದು ॥
ಕುಡಿದಬ್ಧಿಬಾಣವ ಕೆಡಿಸಲು ಹರಿಬಲ । ಕಡೆಗಣ್ಣಿನೊಳು ಕೆಂಪನಾಂತು ॥ ೬೭ ॥

ಹರಿಚಂದ್ರ ! ನಿನ್ನಯ ದೈವವ ನೆನೆಯೆಂದು । ಗಿರಿನಾರಾಚವ ಬಿಡಲು ॥
ಮೊರೆವುತ ಬರಲದು ಹರಿಚಂದ್ರನದ ಕಂಡು । ಭರದಿ ವಜ್ರದ ಕೊಡಲಿಡಲು ॥ ೬೮ ॥

ಅತಿ ವೇಗದಿಂ ಬಂದು ಶೈಲಮಾರ್ಗಣವನು । ಶತಚೂರ್ಣವ ಮಾಡಿ ಬಿಡಲು ॥
ಮತಿಹೀನ ಹರಿಬಲ ಬೆದೆಬೆದೆ ಬೇವುತ । ಸತತ ಗರಳವನು ಸುರಿವ ॥ ೬೯ ॥

ಉರಗ ಬಾಣವ ಬಿಡಲದು ಫೂತ್ಕರಿಸುತ । ಧರೆಯನಪ್ಪಳಿಸುತ ಹೆಡೆಯಿಂ ॥
ಬರುತಿರೆ ಹರಿಚಂದ್ರ ಗರುಡ ಬಾಣವ ಬಿಡೆ। ತುರಿಹದಿಂ ಬಂದು ಸೀಳಿದುದು ॥ ೭೦ ॥

ಕಡೆಗಾಲದ ಮೃಡನಂತೆ ಶ್ರೀ ಹರಿಚಂದ್ರ । ಘುಡಿಘುಡಿಸುತ ಮುನಿಸಿಂದ ॥
ತೊಡವೆನಿವನ ಹಣೆಯಕ್ಕರಗಳ ಬೇಗ । ಕಡೆಮೊನೆಯಾದಂಬಿನಿಂದ ॥ ೭೧ ॥

ಎಂದು ಕೋದಂಡಕೆ ಕವಲಂಬುವ ತಂ- । ದೆಂದನೆಲೇ ಹರಿಬಲನೇ ! ॥
ಮಂದಿರದೊಳಗಿರ್ದ ದೈವವ ನೆನೆಯೆಂದು । ಕಂದರ್ಪರೂಪ ಕೂರ್ಗಣೆಯು ॥ ೭೨ ॥

ಬಿಡಲದು ಛಟಿಛಟಿಲೆಂದಾರ್ಭಟಿಸುತ । ನಡೆತಂದು ಬೇಗ ಶ್ರೀಪುರದ ॥
ಒಡೆಯನ ಶಿರವ ಕತ್ತರಿಸಿಯಾಕಾಶಕೆ । ತಡೆಯದೆ ಕೊಂಡು ಪಾರಿದುದು ॥ ೭೩ ॥

ಸುರರೆಲ್ಲ ಗಗನಾಂಗಣದೊಳು ನಿಂದಾಗ । ಹರಿಚಂದ್ರ ಕುವರ ! ನಿನ್ನಂತ ॥
ಧುರಗಲಿಗಳ ಕಂಡುದಿಲ್ಲೆಂದು ತಮ್ಮಯ । ಕರಗಳನೆತ್ತಿ ಕೊಂಡಾಡೆ ॥ ೭೪ ॥

ಸುರದುಂದುಭಿ ಮೊಳಗಿದವಾಗಸದೊಳು । ಸುರಿದರು ಸುರರು ಪೂಮಳೆಯ ॥
ಇರಲಿತ್ತ ವಿದ್ಯುತ್ಪ್ರಭನ ಕಟಕದೊಳು । ಮೊರೆದವು ಜಯ ಭೇರಿಗಳು ॥ ೭೫ ॥

ದೊರೆ ಪಾಂಚಾಲನಭಯಘೋಷಣೆಯನು । ತುರಿಹದಿಂ ರಣದೊಳು ಪ್ರೇಯ್ಸಿ ॥
ಕರಿಯ ಮಸ್ತಕವೇರಿ ರಣವನು ಶೋಧಿಸಿ । ಬರುವಾಗ ನೇಪಾಳೇಶ್ವರನ ॥ ೭೬ ॥

ನೊಣ ಮುತ್ತುತ ಬಿದ್ದಿರ್ದ ಶವವ ಕಂಡು । ಕ್ಷಣಮಾತ್ರದಿ ಶ್ರೀಪುರೇಶ ॥
ರಣದೊಳು ಛಲದಿಂದ ಕಾದಿಯುಃ ಸತ್ತನು । ಹೆಣನೆಂದೆನಿಸಿತವನಂಗ ॥ ೭೭ ॥

ಸುರಿವ ರಕುತದಿಂದ ಮಾಂಸದಿಂ ಮಿದುಳಿಂದ । ಪರಿದು ಜೋಲುವ ನರದಿಂದ ॥
ಮುರಿದು ಬಿದ್ದಿರ್ದ ಎಲುಗಳ ರಾಶಿಗಳಿಂದ । ಸುರಿವಮೇಧ್ಯದ ಹೊಲಸಿಂದ ॥ ೭೮ ॥

ಅಶುಚಿಯಾಗಿರುವಟ್ಟೆಗಳು ಬಿದ್ದಿರೆ ಕಂಡು । ವಸುಧೇಶ ಮನದಿ ಕೊಕ್ಕರಿಸಿ ॥
ಮುಸುಕಿದ ಕಾಮಿನಿಯರ ಮೋಹದಿಂದಾನು । ಪಿಶುನ ರಾಗದ್ವೇಷದಿಂದ ॥ ೭೯ ॥

ಕರುಣ ರಹಿತನಾಗಿ ನಾನಾ ಪ್ರಾಣಿಯ । ತ್ವರಿತದೊಟ್ಟಿದೆನಕಟಕಟ ! ॥
ದುರಿತವನಾರ್ಜಿಸಿ ನೆರೆ ದುಃಖಕೆ ನಾನು । ವರ ಭಾಜನನಾದೆ ನಾಳೆ ॥ ೮೦ ॥

ತಿರಿಕದಿ ಬಹುವಿಧ ಯೋನಿಯೊಳೋರ್ವನೆ । ತಿರುಗುತ ನೋವನುಂಬಾಗ ॥
ಸಿರಿರಾಜ್ಯ ಭಂಡಾರ ಪುತ್ರ ಕಲತ್ರಾದಿ । ಪರಿಜನ ಚತುರಂಗ ಸೇನೆ ॥ ೮೧ ॥

ಭರದಿ ಒದಗಿ ಬಂದು ಬಿಡಿಸವು ಎನ್ನಯ । ಹರಿಸದಿಂ ತಾ ಮಾಡಿಕೊಂಡ ॥
ವರ ದಾನಧರ್ಮಗಳಲ್ಲದೆ ಬೇರಿಲ್ಲ । ಪರಮ ಸುಖವನೀವ ವಸ್ತು ॥ ೮೨ ॥

ಎಂದು ಚಿಂತಿಸಿ ಮನದೊಳಗೆ ವಿರಕ್ತಿಯ । ತಂದು ಮಂತ್ರೀಶನ ಕರೆಸಿ ॥
ಚಂದನಾಗರು ಕರ್ಪೂರ ಮುಂತಾಗಿರ್ದ । ಬಂಧುರ ವಸ್ತುಗಳಿಂದ ॥ ೮೩ ॥

ಹರಿಬಲ ಮೊದಲಾದ ದೊರೆಗಳ ಶಬಗಳ । ಭರದಿಂದ ದಹಿಸೆಂದು ಬೆಸಸಿ ॥
ಹರಿಸದಿಂ ಕುವರನ ಬಳಿಗೈದಿ ವಸುಮಿತ್ರ । ಒರೆದನು ಮುನಿ ಮುಂಪೇಳ್ದ ॥ ೮೪ ॥

ದೊರೆಯಾವೇಶ ಪುರುಷ ಈತನ ನಾಮ । ಹರಿಚಂದ್ರನಿವ ಹೊಳೆಯೊಳಗೆ ॥
ತೆರೆಯ ಹೊಯ್ಲೊಳು ಮುಳುಗುತಲೇಳುತ ಬಂದು । ಮರದ ಬೇರನು ಈತ ಪಡೆದು ॥

ಇರದೆ ಮೇಲಕೆ ಬಂದೊಂದು ಕಂಕೇಲಿಯ । ಮರದಡಿಯೊಳು ಕುಳಿತಿರಲು ॥
ತಿರುಗುತಲಿರ್ದಲ್ಲಿಗೆ ಬಂದು ತಾ ಕಂಡು । ಕರತಂದೆನೆಂದಾತ ಪೇಳೆ ॥ ೮೬ ॥

ಜನಿತಾನಂದದಿ ರೋಮಾಂಚಿತನಾಗಿ । ತನುವೊಡೆವಂತಮರ್ದಪ್ಪಿ ॥
ವಿನಯೋಪಚಾರವನಾಡಿ ಮತ್ತಮರ್ದಪ್ಪಿ- । ಯನಘನೇ ! ನಮ್ಮ ಪಟ್ಟಣಕೆ ॥ ೮೭ ॥

ಬರುವುದು ನೀನೆಂದು ಪ್ರಾರ್ಥಿಸಿಯೊಡಗೊಂಡು । ಪುರವನು ಪೊಕ್ಕು ಬೀದಿಯೊಳು ॥
ಬರುತಿರೆಯಬಲಾನೀಕವೆಲ್ಲವು ಕಂಡು । ಒರೆದರು ತಂತಮ್ಮೊಳಿಂತು ॥ ೮೮ ॥

ರವಿಸಮತೇಜನೀ ಮಾರಾಕಾರನು । ಇವನೇ ಶ್ರೀಪುರದಧಿಪತಿಯ ॥
ತವಕದಿಂ ಕೊಂದಸಹಾಯ ಪರಾಕ್ರಮಿ । ಇವನೇ ಸುನಂದೆ ನಂದೆಯರ್ಗೆ ॥ ೮೯ ॥

ಒಡೆಯನು ಈತನೇ ಇವನನು ತಕ್ಕೈಸಿ । ಬಿಡದೆ ಚುಂಬನವಿತ್ತು ನೆರೆವ ॥
ಮಡದಿಯ ಭಾಗ್ಯಕೆ ಸರಿಯುಂಟೆ ಎಂದಾಗ । ನುಡಿವ ಸ್ತ್ರೀಯರ ಸವಿವಾತ ॥ ೯೦ ॥

ಹರಿಚಂದ್ರ ಕುವರನು ಕೇಳುತ ನಲ್ಮೆಯಿಂ । ದರಹಸಿತಾನನನಾಗಿ ॥
ಹರಿಸದಿಂದರಮನೆಯೊಗಲು ಪಾಂಚಾಲೇಶ । ತರಳೆವೆಂಗಳ ಕೈಯಿಂದ ॥ ೯೧ ॥

ಮಘಮಘಿಸುವ ಕಮ್ಮೆಣ್ಣೆಯನೊತ್ತಿಸಿ । ಸುಗುಣರರಸಗೆ ಮಜ್ಜನವ ॥
ಮುಗುದೆಯರಿಂ ಮಾಡಿಸಿ ವಸ್ತ್ರಾಭರಣವ- । ನಗಣಿತಪುಣ್ಯಗೆ ತೊಡಿಸಿ ॥ ೯೨ ॥

ಹರಿಸದಿಂದವೆ ಸಹ ಭೋಜನವನು ಮಾಡಿ- । ಯಿರುತಿರಲೊಂದಾನೊಂದು ॥
ವರ ಶುಭದಿನದೊಳು ಲಗ್ನವ ನಿಶ್ಚೈಸಿ । ದೊರೆರನ್ನ ವಿದ್ಯುತ್ಪ್ರಭನು ॥ ೯೩ ॥

ಮದುವೆಯ ಮಂಟಪವನು ಸಿಂಗರಗೈಸಿ । ಚದುರಿಂದ ಬೀದಿ ಬೀದಿಯೊಳು ॥
ಉದಯಾಚಲಗಳು ಬಂದು ನಿಂದಂದದಿ । ಉದಯದೋರಿದವಾಗ ಕುರುಜು ॥ ೯೪ ॥

ತಳಿಗೆದೋರಣ ಬಟ್ಟಲು ಗಿಂಡಿದೋರಣ । ತಳಿರ ತೋರಣಗಳಲ್ಲಲ್ಲಿ ॥
ಪೊಳೆದವು ಜ್ಯೋತಿರ್ಲೋಕವ ನಗುತ ತಾ । ಪೊಳಲೊಳಗೆಲ್ಲಿ ನೋಡಿದರು ॥ ೯೫ ॥

ಕಸ್ತೂರಿ ಸಾರಣೆ ಕುಂಕುಮ ಕಾರಣೆ । ಮುತ್ತಿನ ರಂಗವಲ್ಲಿಗಳು ॥
ಚಿತ್ರದಿಂ ಮೆರೆದವು ನೋಳ್ಪರ ಕಣ್ಣ । ಚಿತ್ತವ ಸೆರೆಗೈವುತಾಗ ॥ ೯೬ ॥

ವಸಗೆವರೆಗಳು ಮೊಳಗಿದವಾಗಲ್ಲಲ್ಲಿ । ಶಶಿಮುಖಿಯರು ನರ್ತಿಪರು ॥
ವಸಗೆಗೆ ಮರುಳುಗೊಂಡಂದದಿ ಪುರವೆ- । ಲ್ಲಸವಸದಿಂದ ನಲಿದುದು ॥ ೯೭ ॥

ಅರಮನೆಯೊಳಗತ್ತ ತರುಣೀಮಣಿಗಳ್ಗೆ । ಪರಿಮಳದೆಣ್ಣೆಯನೊತ್ತಿ ॥
ವರ ತೀರ್ಥಾಂಬುವಿಂ ಸ್ನಾನವ ಮಾಡಿಸಿ । ಸಿರಿವೆತ್ತು ಸಿಂಗರಿಸಿದರು ॥ ೯೮ ॥

ಹರಿಚಂದ್ರ ಕುವರಗೆ ಮಂತ್ರಿಯ ಮನೆಯಲ್ಲಿ । ಪರಿಮಳಮಯವಾದೆಣ್ಣೆಯನು ॥
ತರಳೆವೆಂಗಳು ಶೋಭನವನು ಪಾಡುತ । ಹರಿಸದಿಂದೊತ್ತಿದರಾಗ ॥ ೯೯ ॥

ವರ ತೀರ್ಥಜಲದಿಂ ಮಜ್ಜನವನು ಮಾಡಿಸಿ । ಎರಕದಿಂ ಸಿಂಗರದೊಟ್ಟು ॥
ಹರಿಚಂದ್ರನಿರಲಿತ್ತ ಪಲ್ಲಕ್ಕಿಯೇರಿಸಿ । ತರುಣಿಯರುಗಳೊಡಗೊಂಡು ॥ ೧೦೦ ॥

ಧಾರಾಗೃಹಕೆ ವಿದ್ಯುತ್ಪ್ರಭ ನಡೆತಂದು । ನಾರಿ ಸೀಮಂತಮಣಿಗಳ ॥
ತೋರಮುತ್ತಿನ ಮೆಟ್ಟಕ್ಕಿಯ ಗೂಡೆಲಿ । ಚಾರುವೈಭವದೊಳು ನಿಲಿಸಿ ॥ ೧೦೧ ॥

ಕರಿಯ ಮಸ್ತಕವೇರಿ ಹರಿಚಂದ್ರನಿತ್ತಲು । ಪುರದೊಳು ಮೆರವಣಿಯಾಗಿ ॥
ವರ ಧಾರಾಗೃಹದತ್ತ ನಡೆತಂದು ಆನೆಯ । ಶಿರದಿಂದಿಳಿದು ಮೌಕ್ತಿಕದ ॥ ೧೦೨ ॥

ಮೆಟ್ಟಕ್ಕಿಗೂಡೆಯ ಮೆಟ್ಟಿ ತಾ ನಿಲಲಾಗ । ತೊಟ್ಟನೆ ಜಾರಿತು ತೆರೆಯು ॥
ಇಟ್ಟರೋದುತ ಮಂಗಳಾಕ್ಷತೆಯನು ಸಂ- । ತುಷ್ಟಮನದಿ ಬ್ರಾಹ್ಮಣರು ॥ ೧೦೩ ॥

ದೊರೆ ವಿದ್ಯುತ್ಪ್ರಭ ಹೊನ್ನಗಿಂಡಿಯನೆತ್ತಿ । ಮೊರೆವ ವಾದ್ಯದ ಗಲಭೆಯೊಳು ॥
ಮುರುಕದಿಂ ಧಾರೆಯ ವರ ಕನ್ನಿಕೆಯರ । ಹರಿಚಂದ್ರ ಸುಕುಮಾರಗಿತ್ತ ॥ ೧೦೪ ॥

ಸರಸಿಜಲೋಚನೆಯರು ಸಹ ಹರಿಚಂದ್ರ- । ನೆರಕದಿಂ ಹವನವ ಮಾಡೆ ॥
ಹರುಷದಿಂ ಬಲಗೊಂಡು ಪೂರ್ಣಾಹುತಿಗೊಟ್ಟು । ಮೆರೆವ ಹಸೆಯ ಜಗಲಿಯೊಳು ॥

ಗಿರಿಜೆ ಗಂಗೆಯರ ನಡುವೆಯೋಲಗಗೊಟ್ಟು । ಪರಮೇಶ್ವರನಿರುವಂತೆ ॥
ಹರಿಚಂದ್ರ ಹಸೆಯೊಳು ನಂದೆ ಸುನಂದೆಯು । ವೆರಸಿ ಕುಳಿತನು ಗಾಡಿಯೊಳು ॥ ೧೦೬ ॥

ಎಳೆವೆಂಗಳಾರತಿಯನು ದಂಪತಿಗಳ್ಗೆ । ನಲವಿನಿಂದೆತ್ತೆ ಭೂಭುಜನು ॥
ಗೆಲುವಿಂದ ದಾನದಕ್ಷಿಣೆಯ ಯಾಚಕರಿಗೆ । ಅಲಸದೆ ಕೊಟ್ಟನುತ್ಸಹದಿ ॥ ೧೦೭ ॥

ದಿನಚತುರ್ಥದೊಳಾಗ ನಾಗವಲ್ಲಿಯ ವಿಧಿ- । ಯನುಪಮ ಕಂಬ ಬಲಿಯನು ॥
ಮನವನುರಾಗದಿ ನಡೆಯಿಸೆ ಹರಿಚಂದ್ರ । ವನಿತಾಮಣಿಗಳೊಡಗೂಡಿ ॥ ೧೦೮ ॥

ಸ್ಮರಕುವರನು ರತಿ-ಮೋಹಿನಿಯರು ಕೂಡಿ । ಇರುವಂತೆ ಸುಖ ವಿನೋದದೊಳು ॥
ಪರಮ ಸುಖಾಬ್ಧಿಯೊಳೋಲಾಡುತಿರಲಾ- । ಗಿರುತಿರ್ದಸೇನ ಬಣ್ಣಿಪೆನು ॥ ೧೦೯ ॥

ಪರಬಲ ಮೇಘ ಜಂಝಾನಿಲ, ಎರಗಿಪ । ದೊರೆಗಳಿಗೆ ಚಿಂತಾಮಣಿಯು ॥
ಅರುಹನ ಪಾದೇಂದೀವರ ಮರಿದುಂಬಿ । ಹರಿಚಂದ್ರ ಕುವರನೊಪ್ಪಿದನು ॥ ೧೧೦ ॥

**॥ ಅಂತು ಸಂಧಿ ೩೨ಕ್ಕಂ ಪದ ೪೩೧೨ಕ್ಕಂ ಮಂಗಲಂ ॥**

# ಪುಷ್ಪಮಾಲಾ ಪರಿಣಯು.

ಕರಿಕ ಬೇಡರಸೋಡಿಸಿ ಪುಷ್ಪಮಾಲೆಯಃ। ಹರಿಚಂದ್ರ ವರಿಸಿದುದುಸುರ್ವೆ ॥ ಪ ॥

ಹರಿಯುರಗೇಂದ್ರ ವಂದಿತ ದಿವ್ಯ ಶ್ರೀಪಾದ। ದುರಿತ ಗೋತ್ರಕೆ ಗಿರಿಕಂಠ ॥
ಸ್ಮರ ಸಾಮಜ ಕಂಠೀರವ **ಶಾಂತೀಶ** !। ಪರಿಪಡಿಸೆಮ್ಮ ವೃಜಿನವ ॥ ೧ ॥

ಜನನಾಥ ಚಂದ್ರಮ ಜ್ಞಾನೇಂದು ! ನೀ ಕೇಳು। ಹರಿಚಂದ್ರ ಕುವರನಾಗತ್ತ ॥
ತರುಣಿ ಸುನಂದೆ ನಂದೆಯರ ಸಂಗಡ ಸುಖ-। ವಿರುತಿರಲೊಂದು ದಿನದೊಳು ॥ ೨ ॥

ಜನಪ ವಿದ್ಯುತ್ಪ್ರಭ ಹಸನಪ್ಪ ದಿನದೊಳು। ಮಿನುಗುವ ಹರಿವಿಷ್ಟರದೊಳು ॥
ಮನದಕ್ಕರಿಂ ಹರಿಚಂದ್ರನ ಕುಳ್ಳಿರಿಸಿ। ಘನ ರತ್ನಖಚಿತ ಮುಕುಟವ ॥ ೩ ॥

ಶಿರದೊಳಗಿಡೆ ಕೋಟಿ ವಾದ್ಯದ ರಭಸವು। ಧರೆಯನು ತೆಕ್ಕನೆ ತೀವಿ ॥
ತರುಣಿಯರುಗಳು ನರ್ತಿಸೆ ಕಾಂಪಿಲ್ಯೇಶ। ಒರೆದನಿಂತೆಂದು ಸಭೆಯೊಳು ॥ ೪ ॥

ಹರಿಚಂದಿರ ಕುಮಾರಕ ! ನೀ ಕೇಳು। ತರುಣಿಯರೆನ್ನ ಸುತೆಯರ್ಗೆ ॥
ಎರೆಯ ನೀನಾದ ಮೇಲೀ ಪಾಂಚಾಲವೆಂ-। ಬುರುತರ ದೇಶಕು ನೀನೆ ॥ ೫ ॥

ಒಡೆಯನಾಗಾನು ದ್ವಾದಶ ವಿಧ ತಪವೆಂಬ। ಪೊಡವಿಯನಾಳ್ದು ನಿರ್ವಾಣ ॥
ಮಡದಿಯನಾಳುವೆನೆಂದುಸುರಿದನಾಗ। ಪೊಡವಿಪರೆಲ್ಲರ ಮುಂದೆ ॥ ೬ ॥

ಹರಿಚಂದ್ರ ಕುವರನ ನೊಸಲೊಳು ಪಟ್ಟವ। ಹರಿಷೋತ್ಕರದಿಂದ ಕಟ್ಟಿ ॥
ಮುರುಕದಿಂದಪೆಯಾಲಿಂಗನವನು ಮಾಡಿ। ತುರಿಹದಿಂ ಕಳುಹಿಸಿಕೊಂಡು ॥ ೭ ॥

ವಿನಯ ವಚನದಿಂದೆ ಬಂಧುಗಳಿಗೆ ಪೇಳಿ। ಇನಿಸು ಬೇಗದಿ ನಮ್ಮ ಬಳಿಗೆ ॥
ಜನಪತಿ ನಡೆತಂದು ತಪವನು ತಾಳೀಗ। ಮುನಿಗಳಾದರು ತಾವೀಗ ॥ ೮ ॥

ಜಿನಚಂದ್ರ ಮುನಿಯಿಂತು ಜ್ಞಾನಚಂದ್ರಮುನೀಗೆ। ವಿನಯದಿಂ ತೋರಲು ಕಂಡು ॥
ಜನಪ ಮುಂತಾದ ಭವ್ಯೋತ್ತಮರೆಲ್ಲರು। ಮುನಿಪತಿ ಪದಕೆರಗಿದರು ॥ ೯ ॥

ಅಕ್ಕಟ ! ವಿದ್ಯುತ್ಪ್ರಭನಿನಿತು ಕಾಲ। ಮಕ್ಕಳಿಲ್ಲದೆ ರಾಜ್ಯದೊಳು ॥
ನಿಕ್ಕಿರ್ದನದು ಕಾರಣವಿಾಗ ರಾಜ್ಯವ। ಗಕ್ಕನೆ ತೃಣಕೆಣೆಗಂಡು ॥ ೧೦ ॥

ತನ್ನಳಿಯಗೆ ಪಾಂಚಾಲದೇಶವ ಕೊಟ್ಟು। ಚೆನ್ನಿಗನಿಲ್ಲಿಗೈತಂದು ॥
ಸನ್ನುತ ದೀಕ್ಷೆಯ ಕೈಕೊಂಡನೆಂದಾಗ। ವರ್ಣಿಸು ತಾ ಸಭೆಯಲ್ಲಿ ॥ ೧೧ ॥

ಧರಣೀಧರ ಜ್ಞಾನಚಂದ್ರಮ ! ಕೇಳತ್ತ। ದೊರೆದನ್ನ ವಿದ್ಯುತ್ಪ್ರಭನ ॥
ಸರಸಿಜಾಕ್ಷಿಯರು ಸಾಸಿರದೈನೂರಾ-। ದರಸಿಯರ್ರೈವರ್ಮಂತ್ರಿಗಳು ॥ ೧೨ ॥

ವಸುಶತಸಂಖ್ಯಾನ್ವಿತ ಭೂಪಾಲ- । ರಸವೃಶ ವೈರಾಗ್ಯದಿಂದ ॥
ಕುಸುಮಸಾಯಕ ಮರ್ದ್ದನ ಜಯ ಜಿನರಲ್ಲಿ । ಹಸನಪ್ಪ ದೀಕ್ಷೆಯ ಧರಿಸಿ ॥ ೧೩ ॥

ಇರುತಿರಲಿತ್ತ ಕಾಂಪಿಲ್ಯ ನಗರದೊಳು । ಮರುಗುವ ಪ್ರಜೆಯ ಸಂತೈಸಿ ॥
ದೊರೆದೊರೆಗಳಿಗೆ ಸಂತೋಷವ ಪುಟ್ಟಿಸಿ । ಮರುಗಿಯುಮ್ಮಳಿಸುವ ತನ್ನ ॥ ೧೪ ॥

ವಲ್ಲಭೆಯರುಗಳ ದುಃಖವ ಮೃದುವಾದ । ಸಲ್ಲಾಪದಿಂ ಪರಿಹರಿಸಿ ॥
ಚಲ್ಲೆಗಂಗಳ ಚೆಲುವೆಯರೊಳು ಸುಖದಿ ಭೂ- । ವಲ್ಲಭನಿರುತಿರ್ದನಲ್ಲಿ ॥ ೧೫ ॥

ಕರೆತಂದ ವಸುಮಿತ್ರನೆಂಬ ವಾಣಿಜ್ಯಗೆ । ಹರಿಚಂದ್ರನುಡುಗೊರೆಯಿತ್ತು ॥
ಹರುಷದಿಂದವೆ ರಾಜ್ಯ ಶ್ರೇಷ್ಠಿ ಪಟ್ಟವ ಕಟ್ಟಿ । ದೊರೆ ಸುಖದೊಳಗಿರುತಿರಲು ॥ ೧೬ ॥

ಕಡು ಬೇಗದಿಂ ನಡೆತಂದೋರ್ವ ಸೇವಕ । ಪೊಡವಿಪ ಹರಿಚಂದ್ರಗೆರಗಿ ॥
ನುಡಿದನೆಲೇ ರಾಜಕುವರರ ತಲೆವಣಿ ! । ಪೊಡವಿಗಗ್ಗಳ ನೇಪಾಳ ॥ ೧೭ ॥

ಸುರುಚಿರ ಜನಪದ ಸ್ಮರನಾಡಂಬೊಲವಂತೆ । ಸಿರಿಯರಮನೆಯಂತೊಪ್ಪಿಹುದು ॥
ಸುರರಾಜನಮರಾವತಿಯನು ಜರೆವುತ । ಅರಸ ! ಶ್ರೀಪುರವೊಪ್ಪಿಹುದು ॥ ೧೮ ॥

ಸುರಮಂತ್ರಿಗೆ ಸಮನಾದ ಭೈರವಮಂತ್ರಿ । ಯಿರುತಿರ್ಪನಾ ಪುರದಲ್ಲಿ ॥
ನರನಾಥ ಚಂದ್ರಮ ! ನಿನ್ನಲ್ಲಿಗೆ ಈಗ । ತುರಿಹದಿಂದಟ್ಟಿದನೆಂದು ॥ ೧೯ ॥

ಉಡುಗೊರೆಯನು ಕಾಣಿಕೆಗೊಟ್ಟದರ ಮೇಲೆ । ಮಡಗಿದ ಮುದ್ರೆವೆರಸಿದ ॥
ಕಡೆಯಾಣಿ ಕರಡಿಗೆಯೊಳಗಿರ್ದೋಲೆಯ । ಪೊಡವಿಯಾಲಿಂಗನಗೈದು ॥ ೨೦ ॥

ಕುವರನು ರಾಯಸದವನ ಮೊಗವ ನೋಡಿ । ಸುವಿವೇಕಿ ಓಲೆಯನಾಂತು ॥
ತವೆ ಬೆಚ್ಚದೆ ಗದ್ಗದಕಂಠನಾಗದೆ । ತವಕಗೊಳ್ಳದೆ ನಿದಾನದೊಳು ॥ ೨೧ ॥

ಮೃದುಮಧುರೋಕ್ತಿಯಿಂ ಸಭೆಯೆಲ್ಲ ಕೇಳ್ವಂತೆ । ಚದುರರ ದೇವನ ಮುಂದೆ ॥
ಅದಿರದೆ ಓಲೆಯ ಸದ್ರನೆ ಹಿರಿದಾಗ । ಮುದದಿಂದಲೋದಿದನಿಂತು ॥ ೨೨ ॥

ಸ್ವಸ್ತಿಶ್ರೀಮನ್ಮಹಾರಾಜಾಧಿರಾಜ ಸು- । ರಸ್ತೋಮ ಮಕುಟದೊಳೆಸೆವ ॥
ವಿಸ್ತೀರ್ಣ ನಾನಾ ರತ್ನಂಗಳ ಗ- । ಭಸ್ತಿ ವ್ಯಾಪಿತ ದಿವ್ಯ ಚರಣ ॥ ೨೩ ॥

ಕುರುವಂಶ ಕೂಪಾರವರ್ಧನ ಕುಮುದ ಶ್ರೀ । ವರ ಶಾಂತಿ ಜಿನರ ಸಂತಾನ ॥
ಶರಧಿಯ ಪೆರ್ಚ್ಚಿಪ ಕಮಲ ಶ್ರೀ ಜ್ಞಾನೇಂದು । ವರ ನಾಥ ಗರ್ಭಾಂಬುಧಿಯೆ ! ॥ ೨೪ ॥

ರಾಜರಾಜಾಧೀಶ ವಂದಿತ ಶ್ರೀಪಾದ । ಭೂಜಾಯೆ ವಲ್ಲಭ ಶಾಂತ ॥
ರಾಜೀವವದನೆಯರಿಗೆ ಮಕರಧ್ವಜ । ಶ್ರೀ ಜೈನಾಂಬರದ್ಯುಮಣಿ ॥ ೨೫ ॥

ಹರಿಚಂದ್ರ ಕುವರನ ಪಾದಾರವಿಂದಕೆ । ವರ ಭೈರವ ಮಂತ್ರೀಶ ॥
ಎರಗಿ ಸಾಷ್ಟಾಂಗದಿ ಮಾಡುವ ಬಿನ್ನಹ । ಅರಿಸುವ ಮತ್ತಪ್ಪ ಕಾರ್ಯ ॥ ೨೬ ॥

ಬರಿದೆ ಜಗಳವನು ಶ್ರೀಪುರಾಧೀಶ್ವರ । ಹರಿಬಲ ವಸುಪಾಲನೆಸಗಿ ॥
ಮರಣವಡೆದರಾ ಪುರಕರಸಿಲ್ಲದೆ । ಕರಿ ಮುಸುಡಿನ ಬೇಡನೊಡೆಯ ॥ ೨೭ ॥

ಕಡು ಬೇಗದಿ ಕೂಡಿಕೊಂಡು ಪುಳಿಂದೇಶ । ಒಡನೆ ಮೂವಳಸಿ ಕೋಂಟೆಯನು ॥
ಬಿಡದೆ ಮುತ್ತಿಗೆ ಹಾಕಿಯುಪಸರ್ಗವನಾ । ಕೆಡುಕನು ಮಾಡುತಲಹನೆ ॥ ೨೮ ॥

ತೊಲಗಿಸಿ ಮುತ್ತಿಗೆಯನು ಈ ನಗರಿಗೆ । ಎರೆಯನಾಗೆಮ್ಮೆಲ್ಲರನು ॥
ಪರಿರಕ್ಷಣವ ಮಾಡುವುದು ಶ್ರೀ ಶಾಂತೀ- । ಶ್ವರ ! ನಮೋಸ್ತುತೇ ಸ್ವಾಹಾ ॥ ೨೯ ॥

ಎಂದು ರಾಯಸದವನೋದೆ ಜ್ಞಾನೇಂದುವ । ನಂದನನೋಲೆಯೊಕ್ಕಣೆಯ ॥
ಅಂದು ತಾ ಕೇಳಿ ಸಿಡಿಲ ಧ್ವನಿ ಕೇಳ್ದ ಮೃ- । ಗೇಂದ್ರನಂದದಿ ಘರ್ಜಿಸುತ ॥ ೩೦ ॥

ಅಡವಿಯ ಗೆಡ್ಡೆಗೆಣಸು ತಿಂದು ತನ್ನಯ । ಒಡಲ ಹೊರದುಕೊಂಡಿರದೆ ॥
ಜಡ ಶಬರರ ಕೂಡಿಕೊಂಡು ನಡೆದು ಬಂದು । ಕೆಡುಕ ಮುತ್ತಿದನೆ ಕೋಂಟೆಯನು ॥ ೩೧ ॥

ಕರಿಕವಣ್ಣದ ಬೇಡ ಪಡೆಯೆಂಬಡವಿಗೆನ್ನ । ಶರವಹ್ನಿಯನು ನಾನು ಹಾಕಿ ॥
ಭರದಿಂದ ಸುಡದೆ ಬಿಟ್ಟಪೆನೆ ಎಂದೆನುತಾಗ । ದೊರೆ ರಣಭೇರಿಯ ಪೊಯಿಸಿ ॥ ೩೨ ॥

ಚತುರಂಗ ಬಲವನು ಕೂಡಿ ಸುದಿನದೊಳು । ಕ್ಷಿತಿಪನೂರನು ಪೊರಮಟ್ಟು ॥
ಅತಿಶಯವನು ನೇಪಾಳ ದೇಶದ ಭಾಗ್ಯ । ವಿತತಿಯ ನೋಡುತ ಬರುತ ॥ ೩೩ ॥

ಕಡು ರಮ್ಯವಾದ ಶ್ರೀಪುರದೊತ್ತಿಗೆ ಬಂದು । ಪೊಡವಿಪ ಬೀಡನು ಬಿಡಿಸಿ ॥
ಪಡೆಗೆ ಕೈವೀಸಲು ಪಟುಭಟರೈತಂದು । ತುಡುಕಿದರ್ಮಲ್ಲಯುದ್ಧವನು ॥ ೩೪ ॥

ಕುಡಿಮಿಂಚಿನ ಬೆಡಗನು ಪಳಿವುತಲಿರ್ಪ । ಕಡಿತಲೆಗಾರರು ಬಾಳ ॥
ಜಡಿವುತ ಕಾಡಬೇಡರ ಧುರಧರೆಯೊಳು । ಕಡಿ ಖಂಡಗಳ ಮಾಡಿದರು ॥ ೩೫ ॥

ಸಿರ ಹಾರಿ ನೆಲಕೆ ಬೀಳುತ ನೆತ್ತರಕೋಡಿ । ಹರಿವುತ ಕೈಕಾಲುಗಳು ॥
ಭರದಿಂದ ಖಂಡಿಸಿ ಹಾರುತಾಕಾಶಕೆ । ಧರೆಯೊಳು ಬೀಳುತ ಮುಂಡ ॥ ೩೬ ॥

ಇರುತಿರೆ ಬೇಡರ ಪಡೆ ಕಂಡು ಭಯದಿಂದ । ಮುರಿದೋಡಿತು ಭಾಸ್ಕರನ ॥
ಕಿರಣವ ಕಂಡ ಗಾಢಾಂಧಕಾರವು ದೆಸೆ- । ಗಿರದೋಡುವ ಮಾಳ್ಕೆಯೊಳು ॥ ೩೭ ॥

ಹಿಡಿದು ಬಿಲ್ಲೀಶನ ಹಿಂಗಟ್ಟನು ಕಟ್ಟಿ । ಕಡು ಬೇಗದಿಂ ಪಡೆವಳನು ॥
ಪೊಡವೀಶನ ಮುಂದಿರಿಸಲು ಬಿಲ್ಲೀಶ । ಗಡಗುಟ್ಟಿ ನಡುಗಿ ಬೇಗದೊಳು ॥ ೩೮ ॥

ಹರಿಚಂದ್ರ ಕುವರನ ತಳಿರಡಿಗಳ ಮೇಲೆ । ಶಿರವ ಮಡಗಿಯಡ್ಡಗೆಡೆಯೆ ॥
ಭರದಿಂದ ಕಟ್ಟನು ಬಿಡಿಸಿ ನಿಸ್ಸರ್ಭಕ ! ಕರುಣ ಹೃದಯನು ತಾನಾಗಿ ॥ ೩೯ ॥

ಏಳೇಳಂಜದಿರಂಜದಿರೆನುತಾಗ । ಕಾಳಾಹಿಯಂತವನಿಯೊಳು ॥
ನೀಳನೆ ಬಿದ್ದಿರ್ದ ಶಬರೇಶನ ಎತ್ತಿ । ವೀಳೆಯಗೊಡಿಸಿ ಕರ್ಪುರದ ॥ ೪೦ ॥

ವಿನಯವ ನುಡಿದು ಕಾಳಗವ ವಿಸರ್ಜಿಸಿ । ಮನುಜೇಶನಭಯಘೋಷಣೆಯ ॥
ಘನವಾಗಿ ಪೊಯಿಸೆ ತನ್ನಯ ಪಟುಭಟರಿಗೆ । ಕನಕಾಭರಣವನಿತ್ತು ॥ ೪೧ ॥

ಹರಿಸದೊಳಗೆ ಇರುತಿರಲತ್ತಲಿತ್ತ ಶ್ರೀ- । ಪುರದ ಕೋಂಟೆಯ ಮೇಲಿರ್ದ ॥
ನೆರೆಗಲಿ ಭೈರವೇಶ್ವರ ಮಂತ್ರಿಯು ಕಂಡು । ಪರಿವಾರದೊಳಗಿಂತು ನುಡಿದ ॥ ೪೨ ॥

ಧುರದೊಳು ಶಬರನಾಯಕರ ಗೆಲ್ದಾತನು । ಹರಿಚಂದ್ರನಾಗಲುವೇಳ್ಕು ॥
ಧರಣಿಯೊಳಿಂತಪ್ಪಸಹಾಯ ಶೂರನ । ಪರಿಕಿಸಲಿಲ್ಲಕಟಕಟ ! ॥ ೪೩ ॥

ಎನುತಾಗ ಭೈರವ ಮಂತ್ರೀಶ ಪುರವನು । ಅನುಮತದಿಂದ ಶೃಂಗರಿಸಿ ॥
ಕನಕನಿರ್ಮಿತವಾದೂರ ಹೆಬ್ಬಾಗಿಲ । ಘನ ಪಡಿಗಳನಾಗ ತೆರೆದು ॥ ೪೪ ॥

ಮೊಳಗೆ ಕೋಟಾಕೋಟಿ ವಾದ್ಯದ ರಭಸವು । ಪೊಳಲ ಜರನು ಪೊಡಬರಲು ॥
ಘಳಿಲನೆ ಊರನು ಹೊರವಂಟಿದಿರು ಬಂದು । ಇಳೆಯಾಣ್ಮನ ಕಂಡೆರಗಿ ॥ ೪೫ ॥

ಎಲೆ ಭೂಪಾಲರ ತಲೆವಣಿ ! ಬಿನ್ನಹ । ಛಲದಿಂದ ಸಿಂಹಬಲೇಶ ॥
ನಿಲಯವನೈದಿದ ನಿನ್ನೊಡನೆಯು ಕಾದಿ । ಕಲಿ ವಸುಪಾಲನು ಸತ್ತು ॥ ೪೬ ॥

ಈ ನಗರಿಗೆ ರಾಜ್ಯರೊಡೆಯರಿಲ್ಲದರಿಂದ । ಮಾನವೇಶ್ವರ ! ನೀನು ಬಂದು ॥
ಭಾನುವಿಕ್ರಮಜಸದಿಂ ಪರಿಪಾಲಿಸು । ಸೂನುಗಳಂತೆ ಪ್ರಜೆಗಳನು ॥ ೪೭ ॥

ಒಡೆಯ ನೀನಾಗಿ ನಡೆಸಿಕೊಂಡೆಮ್ಮೆಲ್ಲರ । ಪೊಡವಿಪ ! ನಿನ್ನ ಸೇವೆಯನು ॥
ಬಿಡದೆ ಮಾಡಿಸಿಕೊ ಎಂದೆನುತಾಗ ಪ್ರಾರ್ಥಿಸಿ। ಒಡಗೊಂಡಾ ಪುರವನು ಪೊಗಲು ॥ ೪೮ ॥

ಬಿಡದೆ ನೀಡುಂ ನೋಡುವ ನಾರಿಯರಿಂದ । ಪೊಡೆವ ಭೇರಿಯ ರವದಿಂದ ॥
ಸಡಗರದಿಂದಲಾಡುವ ಗಣಿಕೆಯರಿಂ- । ದಿಡುವ ನಿವಾಳಿಗಳಿಂದ ॥ ೪೯ ॥

ಅಡಿಗಡಿಗಾತನ ಬಿರುದಾವಳಿಗಳ । ಬಿಡದೆಯುಗ್ಘಡಿಸುವರಿಂದ ॥
ಇಡುವ ಕುಲಾಂಗನೆಯರ ಶೇಷೆಗಳಿಂದ । ಕಡು ಸೊಗಯಿಸುವಾ ಪುರದ ॥ ೫೦ ॥

ಮುದುಕದಿಂ ಚೆನ್ನಿಗರರಸ ಶ್ರೀ ಹರಿಚಂದ್ರ । ಬೆರೆಕೆವರಲ ಸೌಧಗಳ ॥
ಮುರಿದು ನಿಟ್ಟಿಸುತ ಬರುತ ಬರುತಾಗೊಂದ । ಅರುಹನ ಗೃಹವನು ಕಂಡು ॥ ೫೧ ॥

ವಾರಣದಿಂದಲಿಳಿದು ಗಂಧಮಿಶ್ರಿತ । ವಾರಿಯಿಂ ಮಜ್ಜನಗೈದು ॥
ಚಾರುದುಕೂಲವ ಪೊದೆದು ವಿಡಾಯದಿ । ಮಾರಾರಿ ಗೃಹವನು ಪೊಕ್ಕು ॥ ೫೨ ॥

ಹರುಷದೊಳಗೆ ಮೂಮೆ ಬಲವಂದು ಸಾಷ್ಟಾಂಗ- । ವೆರಗಿ ದಿವ್ಯಾರ್ಚನೆಯಿಂದ ॥
ಅರುಹನ ಪಾದಪೂಜೆಯ ಮಾಡಿ ಭಕ್ತಿಯಿಂ । ಕರಗಳ ಮುಗಿದು ನುತಿಸಿದ ॥ ೫೩ ॥

## ॥ ದರ್ಶನ ಸ್ತೋತ್ರ ॥

ದುರಿತಾರಣ್ಯ ದಾವಾನಲ, ಕೇವಲ । ವರ ಬೋಧ, ಸುರುಚಿರ ಶಾಂತ ॥
ಕರುಣಾರ್ಣವಸಿಂಧು, ವರ ಭವ್ಯಜನ ಬಂಧು, । ನಿರಘ ನಿರ್ಮಲ ನಿತ್ಯಾನಂದ ॥

ನರಕ ತಿರ್ಯಗ್ದೇವ ನಾರಕಗತಿಯೆಂಬ । ಶರಧಿಯ ಸುಳಿಯೊಳು ಸಿಲುಕಿ ॥
ದುರಿತದಿಂದೇಳುತ ಮುಳುಗುತಲಿರುವೆನ್ನ । ಪರಿರಕ್ಷಿಸು ಜಿನನಾಥ ! ॥ ೫೫ ॥

ಮನೆ ಮಂದಿ ಮಕ್ಕಳು, ಧನ ಕನಕಂಗಳು । ವನಿತೆಯರು ಬಂಧು ಜನಗಳು ॥
ಇನಿತು ಕಾಲಂಬರ ನನ್ನದೆಂದೇ ಕೆಟ್ಟೆ- । ನನಘ ! ರಕ್ಷಿಸು ಜಿನನಾಥ ! ॥ ೫೬ ॥

ದಾನಧರ್ಮಗಳನು ನೋಂಪಿ ಪೂಜೆಗಳನು । ಪೀನಲೋಭದಿ ಮಾಡದಾನು ॥
ನಾನಾ ದುಃಖವ ಭವಭವದೊಳಗುಂಡೆ । ನೀನು ರಕ್ಷಿಸು ಜಿನನಾಥ ! ॥ ೫೭ ॥

ಕೊಲೆ ಹುಸಿ ಕಳವು ಪರಾಂಗನೆಯತಿಕಾಂಕ್ಷೆ । ಸಲೆ ಸಪ್ತವ್ಯಸನಕೆ ಸಿಲುಕಿ ॥
ಪಲವು ಕಾಲವು ನೊಂದೆಯುವ ಕೆಡಿಸೆನ್ನನು । ಸಲಹೋ ಸದ್ಗುರು ಜಿನನಾಥ ! ॥ ೫೮ ॥

ಎಂದಿವು ಮೊದಲಾದ ಪಲವು ನುಡಿಗಳಿಂದ । ಕಂದರ್ಪವಿಜಯನ ಪೊಗಳಿ ॥
ಬಂದು ಮುಂದಣ ಮಣಿಮಯ ಮಂಡಪದೊಳು । ಚಂದದಿಂದೋಲಗಗೊಟ್ಟು ॥ ೫೯ ॥

ದೊರೆಮಗ ಕುಳಿತಿರೆ ಭೈರವ ಮಂತ್ರೀಶ । ದೊರೆದೊರೆಗಳು ಪರಿಜನರು ॥
ಪುರಜನಂಗಳು ಪುರೋಹಿತರುಗಳೆಲ್ಲ । ನೆರೆದಾಗ ಶುಭ ಮುಹೂರ್ತದೊಳು ॥ ೬೦ ॥

ಜಿನಪತಿಗಭಿಷೇಕ ಪೂಜೆಯುನೆಸಗಿಸಿ । ಮನದನುರಾಗದಿಂದೆಲ್ಲ ॥
ಜನಪತಿಸುತನ ಭೈರವಮಂತ್ರಿಯೊಡಗೊಂಡು । ಘನ ವಾದ್ಯ ರಭಸದೇಳ್ಗೆಯೊಳು ॥ ೬೧ ॥

ಚಿತ್ತಾಪಹಾರಿಯೆಂದೆಂಬ ಪೆಸರನುಳ್ಳ । ಮುತ್ತಿನ ಚಾವಡಿಯೊಳಗೆ ॥
ಉತ್ತುಂಗ ಸಿಂಹವಿಷ್ಟರದೊಳು ಕುಳ್ಳಿರಿಸಿ । ಬಿತ್ತರದಿಂದಲಮಾತ್ಯ ॥ ೬೨ ॥

ನಾನಾ ರತ್ನಾಂಕಿತ ದಿವ್ಯ ಮುಕುಟವ । ಭೂನಾಥಸುತನ ಮೌಲಿಯೊಳು ॥
ಸಾನಂದದಿಂ ದೊರೆದೊರೆಗಳು ಸಹವಾಗಿ । ತಾನಿಕ್ಕಿದನು ಸಂಭ್ರಮದಿ ॥ ೬೩ ॥

ವರ ಸಾಮ್ರಾಜ್ಯ ಪಟ್ಟವ ಕಟ್ಟಿ ವಾದ್ಯವು । ಮೊರೆದವು ದಾಂಧಣರೆಂದು ॥
ಸುರ ಮಂತ್ರಿ ಸಮ ಭೈರವ ಮಂತ್ರಿ ದೊರೆಗಳು । ಎರಕದಿಂ ಕಾಣಿಕೆಯಿಕ್ಕಿ ॥ ೬೪ ॥

ಕರವೆತ್ತಿ ಹರಿಚಂದ್ರನ ಗುಣ ಕಥನವ । ಒರೆದರು ಭಟ್ಟ ಪಾಠಕರು ॥
ದೊರೆಗಳು ಕೈಕಟ್ಟಿ ನಿಂದು ಓಲಗಿಸುತ । ಇರುತಿರಲಿತ್ತರದಲ್ಲಿ ॥ ೬೫ ॥

ಸುರಗಣಿಕೆಯರಿಗೆ ವಿಾಟಿದ ಗಣಿಕೇರು । ದೊರೆ ಕುವರನ ಮುಂದೆ ನಟಿಸೆ ॥
ಹರಿಚಂದ್ರನಿಂತಪ್ಪ ಭಾಗ್ಯವ ತಾ ಕಂಡು । ಶಿರದೂಗುತ ಚೋದ್ಯಬಟ್ಟು ॥ ೬೬ ॥

ಹರಿಬಲೇಶನು ಮುನ್ನಲರಿಯದೆ ಸೊಕ್ಕಿನಿಂ । ಧುರದೊಳಳಿದನಕಟಕಟ ! ॥
ದುರುಳತನದ ಕೊಬ್ಬೇನೇನ ಮಾಡದೆಂ- । ದರಮಗ ಮನದೊಳು ನೆನೆದ ॥ ೬೭ ॥

ಸುರಸತಿ ಸಮರೂಪಿನ ಪುಷ್ಪಮಾಲೆಯ । ವರ ನಿಜ ಸುತೆಯು ಮಂತ್ರೀಶ ॥
ದೊರೆದೊರೆಗಳು ಬಂಧು ಬಳಗಗ್ನಿಸಾಕ್ಷಿಯಿಂ । ಹರಿಚಂದ್ರಗೆ ಧಾರೆಯೆರೆಯೆ ॥ ೬೮ ॥

ಶುಭ ಲಕ್ಷಣಾಂಗನು ಸುಜನೈಕಬಾಂಧವ । ಪ್ರಭುಕುಲ ಶಿಖರಿ ಶೇಖರನು ॥
ಅಭಿನವ ರತಿಸ್ಮರರಿಪ್ಪಂತೆ ಹರಿಚಂದ್ರ । ಇಭಯಾನೆ ಪುಷ್ಪಮಾಲೆಯೊಳು ॥ ೬೯ ॥

ಸರಸ ವಿನೋದದೊಳಗೆ ಪೊತ್ತುಗಳೆಯುತ । ಸುರಪತಿ ವೈಭವದಿಂದ ॥
ಇರುತಿರ್ದೊಂದಾನೊಂದು ರಾತ್ರಿಯೊಳು ತಾ । ಅರಸಂಚೆತೂಲ ತಲ್ಪದೊಳು ॥ ೭೦ ॥

ವನಿತಾರತ್ನಳ ದುಂಡುತೋಳತಕ್ಕೆಗಳೊಳು । ಮಲಗಿರೆ ಸುಖ ನಿದ್ರೆಯೊಳು ॥
ಇನಿಸು ಬೇಗದಿ ಬೆಳಗುಂಜಾವದೊಳೊಂದು । ಕನಸು ಕಂಡನು ನಿನ್ನ ಕುವರ ॥ ೭೧ ॥

ನಿನ್ನಯ ಪ್ರಾಣೇಶ್ವರಿಯನುಮತಿದೇವಿ । ತನ್ನ ಕಂಡನ ಅಗಲ್ಕೆಯೊಳು ॥
ಉನ್ನತ ಶೋಕಾಕುಲೆಯಾಗಿ ಮೂರ್ಛೆಯ । ಕನ್ನೆಯು ತಾಳಿರೆ ಕಂಡು ॥ ೭೨ ॥

ಜನನಾಥ ! ನೀನು ಚಿಂತೆಯೊಳು ನಿನ್ನಯ ಪ್ರಾಣ- । ವನಿತೆಯ ತಲೆದೆಸೆಯೊಳಗೆ ॥
ಮಿನುಗುವ ವ್ಯಜನವ ಬೀಸುತ ಮೂರ್ಛೆಯ । ಪನಿನೀರು ಮೊದಲಾದುದರಿಂ ॥ ೭೩ ॥

ತಿಳುಹುವ ಸ್ವಪ್ನವ ನಿನ್ನಯ ಕಂದನು । ಘಳಿಲನೆ ಕಂಡೆಚ್ಚತ್ತು ॥
ಕಲಿಲಾರಿ ಜಿನರಾಜ ಮಲ್ಲಿನ ಸ್ಮರಿಸುತ । ಮುಳುಗಿ ಚಿಂತೆಯೊಳಿಂತು ನೆನೆದ ॥ ೭೪ ॥

ಹಿಂದೆ ನಾನೆಸಗಿದ ಪಾಪದಿಂ ಬೆನ್ನೊಳು । ಬಂದವರೆನಗೆ ಮುಳಿದರು ॥
ತಂದೆತಾಯಿಗಳನು ಬಂಧುಗಳಗಲಿದೆ । ಎಂದಿಂತು ಮಮ್ಮಲ ಮರುಗಿ ॥ ೭೫ ॥

ಜನನಿ ಜನಕರನು ಕಾಣುವೆನೆಂದಾಗ । ಜಿನರಿಗೆ ಪೂಜೆಯ ಮಾಡಿ ॥
ಮನದಭಿಪ್ರಾಯವ ಭೈರವ ಮಂತ್ರಿಗೆ । ಇನಿಸು ಉಳಿಯದಂತೆ ಪೇಳಿ ॥ ೭೬ ॥

ಅರಮಗ ಚದುರಂಗ ಬಲಗೂಡಿಯೂರನು । ಹೊರ ಹೊಂಟು ಶುಭದಿನದೊಳಗೆ ॥
ಧರೆಯ ಸಾಧಿಸಲೆಂದುತ್ತರ ಮುಖವಾಗಿ । ತೆರಳಿ ತನಗೆ ಇದಿರಾದ ॥ ೭೭ ॥

ದೊರೆಗಳ ಕೋಂಟೆಯ ಲಗ್ಗೆಯ ಮಾಡುತ । ಶಿರಗಳ ಚೆಂಡಾಡಿ ನೃಪರ ॥
ಭರದಿಂದವರ ಸುತರಿಗೆ ಪಟ್ಟವ ಕಟ್ಟಿ । ವರ ವಸ್ತು ಕಪ್ಪವ ಕೊಂಡು ॥ ೭೮ ॥

ಎರಗಿದ ದೊರೆದೊರೆಗಳಿಗೆ ನಂಬುಗೆಗೊಟ್ಟು । ಇರದವರಿತ್ತ ಗಜಾದಿ ॥
ವರ ವಸ್ತುಗಾಣಿಕೆಗೊಂಡನು ಕೆಲಬರು । ದೊರೆಗಳು ಕಂಡು ಕುವರನ ॥ ೭೯ ॥

ಸುರಸತಿಯರ ರೂಪನಿಳಿಕೈವ ರೂಪಿನ । ವರ ಸುತೆಯರ ತಂದು ತಂದು ॥
ಹರಿಚಂದ್ರಗೆ ಮದುವೆಯ ಮಾಡಿ ತಮ್ಮಯ । ಪುರಿಗಾಗಿ ತೆರಳಿದರತ್ತ ॥ ೮೦ ॥

ಹುರುಮುಂಜಿ ಕನ್ನೋಜಿ ಮಾಳವ ಗುರ್ಜರ । ತುರುಕ ಹಮ್ಮೀರ ಕುಂತಳವ ॥
ವರ ಭೋಜ ಲಾಟ ಚೇರಾದಿ ದೇಶದೊಳಿರ್ದ । ದೊರೆಗಳ ಕಾಣಿಸಿಕೊಳುತ ॥ ೮೧ ॥

ಶ್ರೀಪುರದೊತ್ತಿಲಿ ಹೊರ ಬೀಡ ಬಿಡಿಸಿ ತ- । ನ್ನೋಪಳ ಕರೆಯಿಸಿಕೊಂಡು ॥
ಆ ಪುರವನು ಭೈರವ ಮಂತ್ರಿ ವಶ ಮಾಡಿ । ತಾ ಪೇಳಿ ವಿನಯ ವಚನವ ॥ ೮೨ ॥

ಮೊಳಗೆ ವಾದ್ಯಗಳು ದಿಗ್ಗಜ ಶಿರವದುರ್ವಂತೆ। ಇಳೆಯಾಣ್ಮ ಸುತ ಬರೆ ಬರುತ ॥
ಕಳಿದಾದೇಶವ ಪರ್ಜನ್ಯಾವರ್ತ-। ಚಲದಗ್ರದೊಳು ಬೀಡ ಬಿಟ್ಟು ॥ ೮೩ ॥

ಅರಸಿ ನಂದೆಯ ಸುನಂದೆಯರ ಕರೆಯಿಸಿ। ಪರದನು ವಸುಮಿತ್ರನನು ॥
ಬರಿಸೆ ನೀನೀಗಲೆ ಕಾಂಪಿಲ್ಯ ನಗರವ। ಪರಿಪಾಲಿಸುವುದೆಂದೆನುತ ॥ ೮೪ ॥

ವರ ಮಂತ್ರಿ ಪದವಿಯನಿತ್ತಾಗ ಬೀಳ್ಕೊಂಡು। ಭರದಿ ಜಲಾವರ್ತಗಿರಿಯ ॥
ಮೆರೆವ ಶಿಖರದಿಂದಿಳಿತಂದು ಸಿನ್ನಯ। ಉರುತರ ದೇಶದೈಸಿರಿಯ ॥ ೮೫ ॥

ನೋಡುತ ಬಂದು ರಾರಾಜಿಪ ವನದೊಳು। ಬೀಡನು ಬಿಡಿಸಿಸುವರೆಯ ॥
ಕಾಡಿಗೆಗಣ್ಣ ಕಾಮಿನಿಯರ ಸಂಗಡ। ಕೂಡಿ ಸುಖದೊಳಿರುತಹನೆ ॥ ೮೬ ॥

ಎಂದು ಶ್ರೀ ಜಿನಚಂದ್ರ ಮುನಿರಾಜ ಬೆಸಸಲಾ-। ನಂದವನೈದಿ ಜ್ಞಾನೇಂದು ॥
ಮಂದೇತರ ಹರ್ಷದಿ ಜಿನಚಂದ್ರ ಪಾ-। ದೇಂದೀವರಕಳಿಯಾದ ॥ ೮೭ ॥

ಮೂಲೋಕಭರಿತ ಯಶಸ್ವಿ, ಸದ್ಧರ್ಮವ। ಪಾಲಿಪ ಭವ್ಯವರೇಣ್ಯ ॥
ಮೇಲಪ್ಪ ಪರಮನ ನೆನೆವುತ ಜ್ಞಾನೇಂದು। ಬಾಲಾರ್ಕತೇಜನೊಪ್ಪಿದನು ॥ ೮೮ ॥

**॥ ಅಂತು ಸಂಧಿ ೩೩ಕ್ಕಂ ಪದ ೪೪೦ಂಕ್ಕಂ ಮಂಗಲಂ ॥**

# ಕುಮಾರರ ದೀಕ್ಷೆ.

ಜ್ಞಾನಚಂದ್ರಮುನಸಾವಿರ ಮಂದಿ ಮಕ್ಕಳು। ಜೈನದೀಕ್ಷೆಯನಾಂತುದೊರೆವೆ ॥ಪ॥

ಥಳಥಳಗುಟ್ಟಿತೊಳಗುವ ಚಿನ್ಮಯರೂಪ। ಕಳ ಕರ್ಮ ಭಂಜನ ಶಾಂತ ॥
ಬೆಳಗೆಮ್ಮ ಹೃದಯುವ ಮಣಿದೀಪದೊಲುಮೋಕ್ಷ। ನಿಳಯ **ಶ್ರೀ ಶಾಂತಿ ಜಿನೇಂದ್ರ!** ॥ ೧ ॥

ಅಂದಾ ಸಭೆಯೆಲ್ಲ ನಲಿದುದು ಜ್ಞಾನೇಂದು। ನಂದನ ಬಂದುದ ಕೇಳಿ ॥
ಹಿಂದಣ ಭವಗಳ ಸಾಸಿರ ಕುವರರು। ಚಂದದಿಂ ತಿಳಿದು ತಾವಾಗ ॥ ೨ ॥

ಜಿನ ಜಿನ ! ಭವಬದ್ಧ ವೈರದಿಂ ಅಣ್ಣನೆಂ-। ದಿನಿಸು ಲೆಕ್ಕಿಸದೆ ಮುನಿದೆವು ॥
ಜನಜನಿತವುಮಾಯಿತೆಮ್ಮಪಕೀರ್ತಿಯು। ಘನ ದುರಿತವ ನೆರಪಿದೆವು ॥ ೩ ॥

ಇಂತಪ್ಪ ಪಾಪಾಪಕೀರ್ತಿಯ ಕೆಡಿಸಿ ಶ್ರೀ। ಕಾಂತೆಯುರರಸಪ್ಪಡಾವು ॥
ಕಂತುಮರ್ದನ ಜಿನದೀಕ್ಷೆಯಿಂದಲ್ಲದೆ। ಯೆಂತಾವು ಕೆಡಿಸಲಶಕ್ಯ ॥ ೪ ॥

ಎಂದು ತಾವೆಲ್ಲರು ನೆನೆದು ಯೋಚಿಸಿ ಜ್ಞಾ-। ನೇಂದು ಸಮೀಪಕ್ಕೈತಂದು ॥
ಮಂದಸ್ಮಿತ ತಳಿರಡಿಗಳಿಗೆರಗಿ ಇಂ-। ತೆಂದು ನುಡಿದರೆಲೆ ಜೀಯು ! ॥ ೫ ॥

ಕೊಡು ಬೆಸನವನು ಮನ್ಮಥ ಕಡು ಸೊಕ್ಕಿನಿಂ। ಪೊಡವಿ ಜನರ ಕೊಲ್ಲುತಹನೆ ॥
ಹಿಡಿದಾತನ ಕರ್ಬಿಲ್ಲನು ಪುಡಿ ಮಾಡಿ। ಕೆಡಹಿ ಮುಂದಲೆಯನು ಕೊಯ್ದು ॥ ೬ ॥

ಆರಿಗೂ ಸಾಧ್ಯಮಲ್ಲದ ಮೋಕ್ಷದುರ್ಗವ। ಸೂರೆಗೊಳಲು ಬೇಕು ಸ್ವಾಮಿ ! ॥
ಕಾರುಣ್ಯದಿಂದಲಪ್ಪಣೆಯ ಪಾಲಿಪುದೆಂದು। ಪಾಠಕರಾಗಡಿವಿಡಿಯೆ ॥ ೭ ॥

ಸಕಲ ಪ್ರೌಢಿಗೆ ತೌರಲ್ಲವೆ ಜ್ಞಾನೇಂದು। ಯುಕುತಿ ಮಾತುಗಳನು ಕೇಳಿ ॥
ಪ್ರಕಟಿಸದಿವರು ದೀಕ್ಷೆಯ ಕಾರ್ಯವನಿಂತು। ಅಕಲಂಕರಾಡಿದರೆಂದು ॥ ೮ ॥

ತನಯರ ಮುದ್ದಾಡಿ ಎಳೆವರೆಯದೊಳಿಂತು। ಮುನಿ ಮಾರ್ಗವನು ತಳೆವುದು ॥
ಅನುಚಿತ ಕೆಲವು ದಿವಸ ಸಂಸಾರದ। ಘನ ಸುಖವನು ಉಂಡು ಬಳಿಕ ॥ ೯ ॥

ಜಿನದೀಕ್ಷೆಯ ನಾವೆಲ್ಲರು ಸಹವಾಗಿ। ಮನದಕ್ಕರಿಂ ಕೈಕೊಂಬ ॥
ತನುಜರುಗಳಿರ ! ಈಗಲೆ ನೀವು ಪೋಗಲು। ಮನೆಭಿನ್ನವಾಗದೇ ಎನ್ನ ? ॥ ೧೦ ॥

ಇನಿಸು ದಿವಸ ಪರಿಯಂತರ ಸಂತತಿ। ತನಯರನಾ ಕೂಡಿಕೊಂಡು ॥
ಬಿನದದಿಂದಲೆ ಭೋಜನ ಮಾಳ್ಪೆ ಸೀವೈದೆ। ಮನಸೆಂತು ಸೈರಿಪುದೆನ್ನ ॥ ೧೧ ॥

ಸಕಲೈಶ್ವರ್ಯವನನುಭವಿಸುವರಾರು ?। ಪ್ರಕಟಿಸೆ ಪೆಸರುಗಳ್ವಿಡಿದು ॥
ಸುಕುಮಾರರಿರ ! ಬನ್ನಿಂದಾರ ಕರೆವೆನು। ಯುಕುತಿಯಲ್ಲಿನ್ನನು ಬಿಟ್ಟು ॥ ೧೨ ॥

ಹೋಗುವುದೆನ್ನಯ ಕಂದಗಳಿರ ! ಎಂದು। ಭೂಗಧಿನಾಥನು ಪೇಳಿ ॥
ರಾಗದಿಂ ಗಲ್ಲವ ಪಿಡಿದು ಮುಂಡಾಡುತ। ಬೇಗದಿಂದಮರ್ದಪ್ಪಿದನು ॥ ೧೩ ॥

ಸಾಸಿರ ಮಂದಿ ಕುಮಾರರು ತಂದೆಯ। ಕೇಸಡಿಗಳ ಮೇಲೆ ಬಿದ್ದು ॥
ಸೂಸುತ ಕಣ್ಬನಿಗಳ ಜನಕನ ಕೂಡೆ। ಭಾಷಿಸಿದರು ಇಂತೆಂದು ॥ ೧೪ ॥

ತಿರಿಕಾದಿ ಬಹು ಗತಿಗಳೊಳು ದುಃಖವನುಂಡು। ವರ ಜನ್ಮವ ಪಡೆದಿನ್ನು ॥
ತರುಣಿಯರಾದಿ ಪರಿಗ್ರಹದೊಳು ಸಿಕ್ಕಿ। ನೆರಪಿಕೊಂಡಘ ಸಂತತಿಯ ॥ ೧೫ ॥

ನರಕಕಾಯುಷ್ಯವ ಕಟ್ಟಿಕೊಂಡದರೊಳು। ನೆರೆ ದುಃಖವುಂಬುದುಚಿತವೇ ? ॥
ಕುರಿಯಾದ ಭವ ಮೊದಲಾಗಿ ಇನಿತು ಕಾಲ। ಶರಧಿಯಂತಪ್ಪ ದುಃಖವನು ॥ ೧೬ ॥

ಅರಿಕೆಯಿಲ್ಲದೆ ಉಂಡುದು ಸಾಲದೆ ಜೀಯ !। ವರ ಕೃಪಾಲುವೆ ! ನಮ್ಮೆಲ್ಲರನು ॥
ಪರಮ ದೀಕ್ಷೆಗೆ ಕಳುಹಿಸಿಕೊಡಬೇಕೆಂದು। ಒರೆದ ಮಕ್ಕಳ ಮಾತು ಕೇಳಿ ॥ ೧೭ ॥

ಘುಳಿಘುಳಿಸುತ ಕಣ್ಬನಿಗಳು ರಾಯನ। ನಳಿನನೇತ್ರದೊಳಾಗುಣ್ಮೆ ॥
ತೊಳೆದವು ಕುವರರಂಗವ 'ನೆನೆಸುತರಲ್ಲಿ। ಬಲು ಮೋಹವಲ್ತೆ ಪೆತ್ತರಿಗೆ' ॥ ೧೮ ॥

ಮನವೊಲ್ಲದ ಮನದೊಳು ಸುಮ್ಮನಿರಲಾ-। ಗನುಬಟ್ಟನೆಂದು ಬೀಳ್ಕೊಂಡು ॥
ಜನನಿಯರೆಡೆಗೈದಿಯಮ್ಮಾಜಿಯರಿರೆ ! ಎಮ್ಮ। ಜಿನದೀಕ್ಷೆಗೆ ಕಳುಪೆನಲು ॥ ೧೯ ॥

ಸಿಡಿಲ ದನಿಯ ಕೇಳ್ದ ಪೆಣ್ಣಂಚೆಗಳಂತೆ । ಹಡಗೊಡೆದ ಶೆಟ್ಟಿಯಂತೆ ॥
ಕಡು ಹಂದೆಯ ಪಾವಡರ್ದಂತೆ ಮಕ್ಕಳ । ನುಡಿಗೇಳಿಯೇವೆಂದೆನುತ ॥ ೧೧ ॥

ಮನಗುಂದಿ ಮುರ್ಚ್ಛಿತರಾಗಿ ಭೂಮಿಯೊಳಾಗ । ವನಿತಾಮಣಿಗಳು ಕೆಡೆದು ॥
ಇನಿಸು ಪೊತ್ತಿನೊಳೆದ್ದು ಬಟ್ಟಾಡುತಿರಲಶ್ರು । ತನುಜರ ಬಂದು ತಕ್ಕೈಸಿ ॥ ೧೨ ॥

ಗಲ್ಲವ ಪಿಡಿದಲುಗುತ ಬಾಯೊಳು ಬಾಯ । ಚಲ್ಲಿಗಂಗಳೆಯರಾಗಿಟ್ಟು ॥
ನಿಲ್ಲದೆ ಮುತ್ತು ಕೊಡುತ ಎಲೆ ತನಯರಿ ! । ಕೊಲ್ಲದ ಕೊಲೆಯ ಕೊಲ್ಲುವರೆ ॥ ೧೩ ॥

ಮರುಜವಳಿಯ ಗಡ್ಡೆಯಂತೆಯೋರೋರ್ವರು । ಇರುತಿರಿ ನಮ್ಮ ನೀವೀಗ ॥
ತೊರೆದು ಹೋದೊಡೆ ನಿಮ್ಮಯ ಕೂಡೆ ನಮ್ಮಯ । ಹರಣ ಬಾರದೆ ಇಲ್ಲುಳಿಯದು ॥

ಹಡದೊಡಲಿಗೆ ದಳ್ಳುರಿಯಿಕ್ಕಿ ಪೋಪುದು । ನಡೆಯಲ್ಲ ಜಿನದೀಕ್ಷೆಯನು ॥
ಪಡೆದೊಡೆ ಫಲವಿಲ್ಲ ಮಾವಾಜಿ ಮುನಿರಾಯ । ಕೊಡನು ದೀಕ್ಷೆಯ ನಿಮಗೀಗ ॥ ೧೪ ॥

ಹನ್ನೊಂದು ಹನ್ನೆರಡು ಪತ್ತು ವರುಷದ । ಚೆನ್ನಿಗರಿಗೆ ನಿಮಗೀಗ ॥
ನನ್ನಿಯಿಂ ಸಲ್ಲದು ಮುಂದಕೆ ದೀಕ್ಷೆಯ । ಚೆನ್ನಾಗಿ ಧರಿಸಲು ಬಹುದು ॥ ೧೫ ॥

ಒಂದು ದಿವಸವಾದರು ನಿಮ್ಮ ಶೃಂಗಾರ- । ವನ್ನು ಕಂಡುದುದಿಲ್ಲ ನಾವು ॥
ಚಂದದಿಂದೋದುವ ಹಸುಮಕ್ಕಳನೀಗ । ನಿಂದು ಕೈಲುಣಿಸುತಾನೆತ್ತೆ ॥ ೧೬ ॥

ಕುದುರೆಯ ಕುಣಿಸಾಡುತ ಬೀದಿಲಿ ಬರ್ಪ । ಚದುರತನವ ಕಂಡುದಿಲ್ಲ ॥
ಮುದದಿಂದ ಸಾಧನೆಯಾಡುವ ಕುವರರ್ಗೆ । ಹದನಲ್ಲ ದೀಕ್ಷೆವಡೆವರೆ ॥ ೧೭ ॥

ಉಂಡುಟ್ಟಾಡಿಕೊಂಡಿರುವ ಹರೆಯದೊಳು । ಮಂಡೆಯ ಕೀಳಿಸಿಕೊಂಡು ॥
ಪುಂಡರೀಕಗಳು ಸಿಂಹಗಳಿರ್ದ ತಾಣದಿ । ಸುಂಡಿಸಿರುವ ಕಾಲವಲ್ಲ ॥ ೧೮ ॥

ಉರಗನ ತಲೆವಣಿಯನು ತರಬಹುದೊಮ್ಮೆ । ಹರಿಯ ಮೀಸೆಯ ಕೀಳಬಹುದು ॥
ಪರಮ ಜೈನೀಯ ದೀಕ್ಷೆಯ ಧರಿಸುವುದು । ಧರೆಯೊಳಗಾರಿಗೆ ಶಕ್ಯ ॥ ೧೯ ॥

ಅಸಿಯ ಧಾರೆಯ ಮೇಲೆ ನಡೆಯಲು ಬಹುದೊಮ್ಮೆ । ಋಷಿ ಮಾರ್ಗದಲಿ ನಡೆಯುವುದು ॥
ಸಸಿನವಲ್ಲವು ಮಕ್ಕಳಿರ ! ಬೇಡವು ಎಂದು । ಶಶಿವದನೆಯರುಮ್ಮಳಿಪರು ॥ ೨೦ ॥

ಮದುವೆಯಾಗುವುದ ಕಂಡೆವೆ ನಿಮಗೆ ನಿಮ್ಮ । ಸುದತಿಯರುಗಳ ಕೈಯಿಂದ ॥
ಚದುರಿಂದಲುಣಲಿಕ್ಕಿಸಿ ವೀಳೆಯಗಳ । ಮುದದಿಂದ ಕೊಡುವ ಬೆಡಗನು ॥ ೨೧ ॥

ಕಂಡೆವೆ ಸರಸಿಯೊಳಗೆ ನೀವು ನಿಮ್ಮಯ । ಪೆಂಡಿರೊಳ್ನೀರಾಡುವಾಗ ॥
ಕೊಂಡು ಬಂದಿತ್ತಿವೆ ಪರಿಮಳ ದ್ರವ್ಯವ । ಗಂಡು ಮಕ್ಕಳ ನೀವು ಪಡೆಯೆ ॥ ೨೨ ॥

ಎತ್ತಿ ಮುಂಡಾಡಿ ಮುದ್ದಿಸಿದೆವೆ ನಿಮ್ಮನು । ಹೆತ್ತ ಹೊಟ್ಟೆಯೊಳು ದಳ್ಳುರಿಯ ॥
ಹತ್ತಿಸುವುದೆ ಎಂದು ಹಲುಬಲು ನಯನದಿಂ । ಮುತ್ತಿನಂತೊಗುವ ಕಣ್ಬನಿಗಳು ॥ ೨೩ ॥

ಎಣ್ಣೆ ಕರ್ಪೂರವನು ಬಟ್ಟಲೊಳಗೆ ತೀವಿ- । ಯಣ್ಣಂದಿರಿಗಿತ್ತೆಮಗೆ ॥
ಕಣ್ಣುಮುಚ್ಚಿದ ಮೇಲೊಂದಾವು ನಿಮ್ಮಯ । ಬಣ್ಣಿಪ ಕಾರ್ಯವನೆಸಗಿ ॥ ೩೪ ॥

ಅನಿತರಮೇಲಲ್ಲದೆ ನಾವು ಬಿಡುವೆವೆ । ತನುಜರೆ ಪ್ರಾಣ ಹೆತ್ತರಿಗೆ ॥
ಮನವನಾವೆಂತು ಪಿಡಿವೆವು ನಿಮ್ಮನು ಬಿಟ್ಟು । ತನುಜರಿರ ! ಹಾ ಹಾ ಎಂದು ॥ ೩೫ ॥

ಪಲುಬುವ ಜನನಿಯರುಗಳ ಪಾದಕೆ ಬಿದ್ದು । ಎಲೆ ತಾಯಿಗಳಿರ ! ಈ ಜನ್ಮ ॥
ಜಲಧಿಲಿ ಮುಳುಗಾಡಿ ದುಃಖಮುಂಡವರೆಲ್ಲ । ಕಲಿಲಾರಿ ನಿಮ್ಮ ಮಾವಾಜಿ ॥ ೩೬ ॥

ಮುನಿ ಪೇಳ್ದುದ ಕಿವಿಯಾರೆ ಕೇಳ್ದಿವಿನ್ನೇಕೆ । ಜನನಿಯರುಗಳಿರ ! ನಿಮಗೆ ॥
ಅನುಮಾನವೇತಕೆ ನಿಮ್ಮೊಡಲೊಳು ನಾವು । ಜನಿಸಲಿಲ್ಲೆಂದು ನೆನೆಯಿರಿ ॥ ೩೭ ॥

ಅಮ್ಮಾಜಿಯರ ! ಬಿಡಿ ನೀವು ಬಹು ದುಃಖವ । ಕರ್ಮಗಣೆಯಗಾವು ಸಿಕ್ಕಿ ॥
ಘರ್ಮ್ಮ ಮುಂತಾಗಿರ್ದ ನರಕಾದಿ ದುಃಖವ । ಬ್ರಹ್ಮಾಂಡಕಾಲವುಣುವೆವೇ ? ॥ ೩೮ ॥

ಎಂದಿವು ಮೊದಲಾದ ಪಲವು ಯುಕ್ತಿಗಳಿಂದ । ನಂದನರುಗಳು ತಾಯಿಗಳ ॥
ಅಂದು ತಿಳಿಪುತಿರೆ ಕರಿಚರದೇವ ಮೃ- । ಗೇಂದ್ರಾಸನ ನಡು ನಡುಗೆ ॥ ೩೯ ॥

ಅವಧಿಯಿಂ ತಿಳಿದು ನಮ್ಮೊಡೆಯನ ಕುವರರು । ಭವನಾಶಕ ದೀಕ್ಷೆಯನು ॥
ಸುವಿವೇಕಿಗಳು ಧರಿಸಬೇಕೆನುತೀಗ । ತವಕದಿಂ ತಾಯ್ಗಳಡಿಯನು ॥ ೪೦ ॥

ಪಿಡಿದು ಪ್ರಾರ್ಥಿಸುತಹರೆ ನಾ ಪೋಗಿ ನ- । ಮ್ಮೊಡತಿಯರುಗಳಿಗೆ ತಿಳುಪಿ ॥
ಕೊಡಿಸಿ ದೀಕ್ಷೆಯ ಬರುವೆನು ಎಂದು ತನ್ನಯ । ಮಡದೀರ ನಾಲ್ಕು ಸಾಸಿರವ ॥ ೪೧ ॥

ಒಡಗೊಂಡು ಸಕಲ ದೇವರ್ಕಳು ಸಹವಾಗಿ । ಗಡಣದಿಂ ಪುಷ್ಪಕವೇರಿ ॥
ನಡೆತಂದು ಜಿನಚಂದ್ರ ಯತಿರಾಜನ ತಳಿ- । ರಡಿಗಳಿಗಾನತನಾಗಿ ॥ ೪೨ ॥

ಮುನಿಜನಂಗಳಿಗೆ ವೃದ್ಧಾನುಕ್ರಮದಿಂ- । ದನಿಮಿಷೆಯರುಗಳು ಕೂಡಿ ॥
ಘನ ಭಕ್ತಿಯಿಂದ ವಂದಿಸಿ ಜ್ಞಾನಚಂದ್ರನ । ಮಿನುಗುವ ಚರಣಕೆ ಮುಗ್ಗಿ ॥ ೪೩ ॥

ವನಿತಾಮಣಿಗಳು ಕುವರರಿರ್ದೆಡೆಗಾಗ । ತನುಕಾಂತಿ ಬೆಳಗುತ ಬಂದು ॥
ಜನನಿಯರುಗಳಿರ ! ನಿಮಗೇಕುಮ್ಮಳ । ತನಯರ್ಕಳಾರು ನೀವಾರು ? ॥ ೪೪ ॥

ಕಾಲವನಾದಿಯು ಕರ್ಮವನಾದಿಯು । ಬಾಲೆಯರಿರ ! ಜೀವನವು ॥
ಆಲೋಚಿಸಲಾನಾದಿಯೆಂದೊಡೆಯಿನ್ನು । ಬಾಲಕರಾರು ನೀವಾರು ॥ ೪೫ ॥

ಎಷ್ಟು ಜನ್ಮದೊಳು ಪುರುಷರಾಗಿಲ್ಲ ಮ- । ತ್ತೆಷ್ಟು ಜನ್ಮದೊಳು ನಾರಿಯರು ॥
ಎಷ್ಟು ಜನ್ಮದೊಳು ಮಕ್ಕಳು ತಾಯಿಗಳಾಗಿ । ಹುಟ್ಟಲಿಲ್ಲವು ಮೋಹದಿಂದ ॥ ೪೬ ॥

ವಿವರಿಸಿ ನೋಡಲೆಷ್ಟೆಷ್ಟು ಜನ್ಮದಿ ಬಂದ । ಕುವರರುಗಳ ನೆನೆನೆನೆದು ॥
ತವೆ ಶೋಕಿಸುವಿರೆ ಬೇಡವಮ್ಮಾಜಿರೆ ! । ಕುವರರುಗಳ ಮೇಲಣಾಸೆ ॥ ೪೭ ॥

ಹಿರಿಯ ಕುಮಾರಕನಾಗಿರ್ದ ಮೇಲಿನ್ನು । ತೊರೆವುದೀ ಕುವರರಾಶಿಯನು ॥
ಪರಿಕಿಸಲಿಲ್ಲ ಸೊಸೆಯರೆಂದರೆ ನೋಡಿ । ಮೆರೆವ ಪುತ್ಥಳಿಗಳೆಂದದೊಳು ॥ ೪೮ ॥

ಸಾಲಾಗಿ ನಿಂದುಕೊಂಡಿರುವರು ಇವರೆನ್ನ । ಸೋಲಿಸಿದಮರೀ ಜನರು ॥
ಸಾಲದೇ ಈ ಸೊಸೆಯರು ನಿಮ್ಮ ಸೇವೆಯ । ಲೀಲೆಯಿಂ ಸತತ ಮಾಡುವರು ॥ ೪೯ ॥

ಎಂದು ನುಡಿದ ನಿರ್ಜರನ ನುಡಿಯ ಕೇಳಿ । ಬೆಂದು ಬೆಕ್ಕಸ ಬೆರಗಾಗಿ ॥
ಸೌಂದರಿಯರು ದುಃಖವ ಬಿಟ್ಟು ಇವನಾ- । ರೆಂದು ನೋಡುತಲಿರಲಾಗ ॥ ೫೦ ॥

ಜನನಿಯರುಗಳಿರ ! ಇವನಾರೆಂದಿರೆ । ವನಕರಿಯಾಗಿ ನಾ ಮುನ್ನ ॥
ಜನಿಸಿದ ತೃಷೆಯಿಂದ ನೀರಿಗಾಟಿಸಿ ಬಂದು । ಘನವಾದ ಹೊಳೆಯೆಣ್ಣೆಯೊಳು ॥ ೫೧ ॥

ಸಿಲುಕಿ ನಾ ಬಿರ್ದು ಸಾಯುತಲಿರೆ ಜ್ಞಾನೇಂದು । ಸಲೆ ಕೃಪಾಲನು ಎನ್ನ ತೆಗೆದು ॥
ಜಲದಿಂದ ಮೈಯ ತೊಳಸಿ ಪಂಚಪದವನು । ಒಲಿದು ಪೇಳಿದ ಕಾರಣದಿಂ ॥ ೫೨ ॥

ತೊಳಗುವ ಪಂಚಮ ದಿವಿಯೊಳು ತಾ ಪುಟ್ಟಿ । ಫಲವ ಪಡೆದೆನಿಂತಪ್ಪ ॥
ಚೆಲುವೆಯರುಗಳಿರ ! ನಿಮಗೆ ನಾನದರಿಂ ಮೊ- । ದಲು ಪುಟ್ಟಿದ ಮಗನಾದೆ ॥ ೫೩ ॥

ಎಂದು ನುಡಿದು ದುಃಖದೊಳೋಲಾಡುವ । ಸೌಂದರಿಯರಿಗೆ ಸಂತಸವ ॥
ಅಂದು ಪುಟ್ಟಿಸಿ ದೇವ ಕುವರರನೊಡಗೊಂಡು । ಬಂದನು ಮುನಿ ಸಭೆಗಾಗಿ ॥ ೫೪ ॥

ಸಾಸಿರ ಕುವರರು ಜಿನಚಂದ್ರ ಮುನಿಪನ । ಕೇಸಡಿಗಳ ಪೂಜೆ ಮಾಡಿ ॥
ಸೂಸುವ ಭಕ್ತಿಯಿಂ ಪೊಡಮಟ್ಟು ಮುನಿಗಣಾ- । ಧೀಶನೆ ! ಎಮ್ಮ ಬಿನ್ನಪವ ॥ ೫೫ ॥

ಲಾಲಿಸೋರಾಟಳದಗ್ರದ ಕಳಸಗ- । ಳ್ಹಾಲದಂದದಿ ತಿರ್‍ರನಾವು ॥
ಜಾಲ ಸಂಸಾರದೊಳಗೆ ಬಂದು ನೊಂದೆವು । ಪಾಲಿಸು ದೀಕ್ಷೆಯನಿತ್ತು ॥ ೫೬ ॥

ನೊಂದೆವು ಕರ್ಮಾವರ್ತದೊಳಗೆ ಸಿಕ್ಕಿ । ಬಂದೆವು ಬಹು ಯೋನಿಗಳೊಳು ॥
ತಂದೆವು ಹುಯ್ಯಲಾ ಹುಯ್ಯಲ ತೊಲಗಿಸಿ । ಯಿಂದು ಮಾಳ್ಪುದು ನಿಮ್ಮಂದವನು ॥ ೫೭ ॥

ಮೋಹಿನಿ ಕರ್ಮದ ಬೇರ ಕಿತ್ತಲ್ಲದೆ । ಹೋಹವು ಉಳಿದ ಕರ್ಮಗಳು ॥
ದೇಹಿಗಳಿಗೆ ಯವ ಕೆಡಿಸಬೇಕಾದ । ಮಹಾ ತಪದಿಂದಾಗಬೇಕು ॥ ೫೮ ॥

ಅದರಿಂದ ಪರಮ ನಿರ್ವಾಣ ಕಾರಣಮಾದ । ಸದಮಲ ಜೈನ ದೀಕ್ಷೆಯನು ॥
ಸದಯಾಲು ! ಕೊಡುವುದು ಎಂದು ಮುನೀಂದ್ರನ । ಪದಪದ್ಮಕೆ ಮುಗ್ಗಿದರು ॥ ೫೯ ॥

ಕಿರುವರೆಯವು ಇನ್ನು ನಾಲ್ಕು ಕಾಲದ ಮೇಲೆ । ಧರಿಸಬಹುದು ದೀಕ್ಷೆಯೆಂದು ॥
ಗುರುರಾಯನವರ ಚಿತ್ತವ ಸೋಡಬೇಕೆಂದು । ಒರೆಯಲಾ ನುಡಿಯನು ಕೇಳಿ ॥ ೬೦ ॥

ಕಿರಿದಾದೊಡೆ ಕಿಡಿ ಸುಡದೆ ಕಾನನವನು । ನುರಿ ಸಿಂಹನಾದೊಡೆ ಗಜವ ॥
ತರಿದೊಟ್ಟದೆ ದೀವಿಗೆ ಸಣ್ಣನಾದೊಡೆ । ಮುರಿಯದೆ ಕತ್ತಲೆ ಹಿಂಡ ॥ ೬೧ ॥

ಕುಲಿಶಾಯುಧ ಚಿಕ್ಕದಾದೊಡೆಯುದಕೇನು । ಬಲು ಬೆಟ್ಟವ ಚೂರ್ಣಿಸದೇ ॥
ಎಲೆ ದೇವ ! ನಾವು ಚಿಕ್ಕವರಾದೊಡೆಯೇನು । ಕಲಿಲಾರಣ್ಯವ ಸುಡೆವೇ ? ॥ ೬೨ ॥

ತೊಳಗುವ ಮೋಕ್ಷ ದುರ್ಗವ ಸೂರೆಗೊಳದೊಡೆ । ಇಳೆಯಾಣ್ಮ ಜ್ಞಾನೇಂದು ಸುತರೇ ?
ಎಲೆ ಸ್ವಾಮಿ ! ನಿನ್ನ ಮೊಮ್ಮಕ್ಕಳು ನಾವೆಲ್ಲ । ಬಲು ದೀಕ್ಷೆಯ ಕೊಟ್ಟು ನೋಡು ॥ ೬೩ ॥

ಎನುತೊಮ್ಮೆಯೆಲ್ಲರು ಸಾಷ್ಟಾಂಗವೆರಗಲು । ಮುನಿಯೆಂದಯೇಳಿಯದಕ್ಕೆ ॥
ಎನಲೆಲ್ಲರಿದ್ದರು ಸುರಭೇರಿ ದಿಮಿಕೆಂದು । ಘನವಾಗಿ ಮೊಳಗಿದವಲ್ಲಿ ॥ ೬೪ ॥

ಅಮರಿಯರುಗಳು ನಲ್ಮೆಯಿಂ ನಟಿಸುತ್ತಿರ- । ಲಮಿತತೇಜನು ಮುಡೆ ಸುತ್ತಿ ॥
ಗಮಕದಿಂ ತನ್ನ ವಲ್ಲಭೆಯರು ಸಹವಾ- । ಗಮರೀಶೋತ್ತರಮುಖವಾಗಿ ॥ ೬೫ ॥

ಇತ್ತರದೊಳಗಾಗ್ಯೆನೂರ್ಕೈಸೂರು । ಮುತ್ತಿನ ಚೌಕ ಸ್ವಸ್ತಿಕವ ॥
ವೃತ್ತ ಕಾಚಿಯರು ಶೋಭನಗಳ ಪಾಡಲು । ಅಳ್ತಿಯಿಂದಲಿ ತುಂಬಿದರು ॥ ೬೬ ॥

ಬಗೆ ಬಗೆ ರಂಗವಲ್ಲಿಯ ನವರತ್ನದಿಂ । ಸೊಗಸಿಂದಲಿಕ್ಕೆ ದೇವಿಯರು ॥
ಮಘಮಘಿಸುವ ಪುಷ್ಪವಲ್ಲಿಯ ರಚಿಸಲು । ಸುಗುಣಿಯು ಶುಭ ಲಗ್ನದೊಳು ॥ ೬೭ ॥

ಜ್ಞಾನೇಂದು ದೊರೆಗಳು ಶ್ರಾವಕರೊಡಗೂಡಿ । ಸಾನುರಾಗದಿ ನಿರ್ಜರನು ॥
ಏನ ಪೇಳುವೆ ಸಾಸಿರ ಮಂದಿ ಕುವರರ । ತಾನೊಡಗೊಂಡುತ್ಸಹದಿ ॥ ೬೮ ॥

ಗೆಲವಿನಿಂ ಬಂದುತ್ತರ ಪೂರ್ವ ಮುಖವಾಗಿ । ಚೆಲುವರು ಸ್ವಸ್ತಿಕದೊಳಗೆ ॥
ಬಲಗಾಲು ಮುಂದಾಗಿ ಕಾಳ್ಗಿರಿಸಿಯಾ ದೇವ । ಜಲ ಗಂಧಾದಿ ವಸ್ತುಗಳಿಂ ॥ ೬೯ ॥

ಹಸ್ತ ಶುದ್ಧಿಯ ಮಾಡಿಸಿ ರತ್ನತ್ರಯ । ವಿಸ್ತೀರ್ಣ ಯಂತ್ರವ ಬರೆದು ॥
ಸ್ವಸ್ತಿಕವನು ನಾಲ್ಕುದಿಕ್ಕಿಲಿ ರಚಿಸಿ ಪ್ರ- ಶಸ್ತ ಮೌಕ್ತಿಕವನು ತುಂಬಿ ॥ ೭೦ ॥

ವರ ಫಲಗಳನವರುಪರಿಮದೊಳಗಿಟ್ಟು । ಪರಿಮಳ ಗಂಧಾಕ್ಷತೆಯ ॥
ಸುರನರ್ಚನೆಗೈದು ಜಯ ಜಯ ಜಯತೆಂದು । ಕರಗಳ ಮುಗಿದು ನಿಂದಿರಲು ॥ ೭೧ ॥

ಗಲಭೆ ನಿಂದುದು ಜಿನಚಂದ್ರ ಯೋಗೀಶ್ವರ । ಜಲಧಿಯಂದದ ಗಂಭೀರದೊಳು ॥
ಒಳುನುಡಿಯಿಂ ಮೋಕ್ಷ ಶಾಸ್ತ್ರೋಪದೇಶವ । ಕಲಿಲಾರಿ ಮುನಿನಾಥ ಮಾಡಿ ॥ ೭೨ ॥

ಎಲೆ ಭವ್ಯರಿರ ! ಸಂಸಾರಾಂಬು ನಿಧಿಯೊಳು । ಮುಳುಗಿಸುತೇಳಿಸುತಿರ್ಪ ॥
ಬಲು ಮಿಥ್ಯಾತ್ವದಿ ಪದಿನಾಲ್ಕು ಗ್ರಂಥವ । ಹೊಲವಾದಿ ಪತ್ತು ಗ್ರಂಥವನು ॥ ೭೩ ॥

ತಿಲಮಾತ್ರವಿಲ್ಲದಂದದಿ ಪರಿದೀಡಾಡಿ । ಒಲಿದು ಮೋಕ್ಷವ ತಾನು ಕೊಡುವ ॥
ಮಲ ವಿರಹಿತ ನಿರ್ಗ್ರಂಥ ವೇಷವು ತಾನೆ । ಸಲೆ ಬೇರಿಲ್ಲಿದರಿಂದ ॥ ೭೪ ॥

ಐದು ತೆರದ ವ್ರತವಾರಾವಶ್ಯಕ- । ವೈದು ಸಮಿತಿಗಾರು ಮಾಳ್ಪ ॥
ಐದು ತೆರದಮಿಂದ್ರಿಯ ನಿಗ್ರಹಿಪುದು । ಮೈಗೆ ಸುಖವನು ಬಯಸದೆ ॥ ೭೫ ॥

ಮುನಿಗಳ್ಗೆ ಲೋಚ ಶೀತಾತಪ ಮಳೆಯೊಳು। ತನುದಂಡನೆಗೆಯುಡದುದು ॥
ಘನ ಪಾಪ ತನು ಶೃಂಗಾರ ತ್ಯಜನಕಾಗಿ। ಮುನಿಗಳ್ಗೆ ಸ್ನಾನ ವರ್ಜಿತವು ॥ ೭೬ ॥

ನೆಲವಕ್ಕೆಯು ದೇಹದಾಶೆಯಿಲ್ಲದುದಕ್ಕೆ। ಸುಲಿಯದಿರುವುದು ಪಲ್ಗಳನು ॥
ಚೆಲುವಿಕೆಗಾಗಿ ನಿಂದುಂಬುದಾಹಾರವು। ಸಲೆ ಪೆರ್ಚಬಾರದೆಂಬುದಕೆ ॥ ೭೭ ॥

ಉಡುಗಿಸುವುದಕೆ ಯಿಂದ್ರಿಯಗಳೇಕಭುಕ್ತವು। ಬಿಡದೀ ಇಪ್ಪತ್ತೆಂಟು ॥
ಕಡು ದೊಡ್ಡ ಮೂಲಗುಣಗಳು ಭವಾಬ್ಧಿಯ। ಕಡೆಯ ದಾಂಟಿಪವು ಪೊರ್ದಿದರ ॥ ೭೮ ॥

ಪಲವು ಜೀವಂಗಳ ಪಾಲಿಸುವುದಕಾಗಿ। ಎಲೆ ಭವ್ಯರೇ ! ಕುಂಚ ಬೇಕು ॥
ಒಲಿದಂಗ ಶುದ್ಧಿಗೈವುದಕೆ ಕಮಂಡಲ। ಸಲೆ ಬೇಕು ಯತಿಗಳ್ಗಾವಾಗ ॥ ೭೯ ॥

ಇಂತಪ್ಪ ಯತಿ ಭೇದ ಪತ್ತು ತೆರದಿ ಯೋ-। ರಂತೆ ರಾಜಿಪ ಧರ್ಮವನು ॥
ಸಂತೋಷದಿಂದ ಲಾಲಿಪುದು ನಾನೊರೆವೆನು। ಮುಂತೆ ಮೋಕ್ಷವ ಕೊಡುತಿರ್ಪ ॥ ೮೦ ॥

ಉತ್ತಮ ಕ್ಷಮೆ ಮಾರ್ದವಾರ್ಜವ ಶೌಚವು। ಉತ್ತಮ ಸತ್ಯ ಸಂಯಮವು ॥
ಉತ್ತಮ ತಪ ತ್ಯಾಗಾಕಿಂಚನ್ಯ ಬ್ರಹ್ಮವು। ಪತ್ತಿವು ದಶಧರ್ಮಗಳು ॥ ೮೧ ॥

ಒರೆವೆನೀ ನಿರ್ಮಲ ಧರ್ಮಕೆ ಟೀಕನು ! ತೆರೆದರ್ಶನವಾಗಿ ನೀವು ॥
ಸ್ಥಿರ ಚಿತ್ತದಿಂದ ಲಾಲಿಸುವುದು ಮೋಕ್ಷದ। ತರುಣಿಯ ಮನದನ್ನರಿರ ! ॥ ೮೨ ॥

ಬಯಿದೊಡೆ ಪುಯಿದನೆ ಪುಯಿದೊಡೆ ಯಿರಿದನೆ। ಕಯಿದುಗೊಂಡಿರಿಯೆ ಕೊಂದಪನೆ॥
ಮಯಿಗೆ ಸಾವಲ್ಲದೆ ಕೊಂದೊಡೆ ನನ್ನ ಚಿ-। ನ್ಮಯಗೆ ಕೊಂಪನೆ ಮೂರತ್ನವನು ॥ ೮೩ ॥

ಸೆಳೆದುಕೊಂಡನೆ ನನ್ನ ಪೂರ್ವೋಪಾರ್ಜಿತ। ಕಲಿಲದಿಂದಿಂತಾಯಿತೆಂದು ॥
ಸಲೆ ಸೈರಿಸುವ**ದುತ್ತಮ ಕ್ಷಮೆ**ಯೆಂದೆಂಬ। ವಿಲಸಿತ ಮೊದಲದು ಧರ್ಮ ॥ ೮೪ ॥

ಸಿರಿ ಜಾತಿ ಕುಲ ಶಾಸ್ತ್ರ ಬಲ ರೂಪಶೀಲವು। ಪರಿಪರಿ ದಾನ ಪೂಜೆಗಳ ॥
ನೆರೆ ಬಲ್ಲಿದನೆಂಬ ಗರ್ವವ ಬಿಡುವುದು। ಪರಿಭವಿಸಿದರಿವರೆನ್ನ ॥ ೮೫ ॥

ಎನುತ ಕ್ರೋಧಾದಿ ಕಷಾಯವನೆತ್ತದೆ। ಮನದಲ್ಲಿ ಮೃದುವ ತಳೆವುದು ॥
ವಿನಯ ಜನರೊಳು ಮೃದುತ್ವವ ನುಡಿವುದು। ಘನ **ಮಾರ್ದವ** ಧರ್ಮವಿದು ॥ ೮೬ ॥

ಆವ ಜೀವಗಳೊಳು ತ್ರಿಕರಣ ಶುದ್ಧಿಯಿಂ। ತೀವಿದ ಕಪಟವ ಬಿಟ್ಟು ॥
ಭಾವಶುದ್ಧಿಯೊಳು ನಡೆವು**ದಾರ್ಜವ**ವೆಂಬ। ಪಾವನ ಧರ್ಮ ಮೂರನೆದು ॥ ೮೭ ॥

ಧನ ಕನಕಾದಿ ವಸ್ತುಗಳೊಳು ಲೋಭವ। ಕನಸು ಮನಸಿನೊಳೆಸಗದೆ ॥
ಘನ ಚಾರಿತ್ರ ಗುಣದಿ ಕೂಡಿ ನಡೆವುದು। ಅನುಪಮ **ಶೌಚ** ಧರ್ಮವಿದು ॥ ೮೮ ॥

ಸಕಲ ಜೀವಂಗಳ ಬದುಕು ಪ್ರಾಣಗಳಿಗೆ। ಸಕಲ ವಸ್ತುಗಳ ಮೋಹದೊಳು ॥
ಸಖತನವನು ಮಾಡಿ ಹುಸಿದು ಕೆಡಿಸದ-। ದಕಲಂಕ **ಸತ್ಯ** ಧರ್ಮವಿದು ॥ ೮೯ ॥

ಪಲವು ಜೀವಗಳನು ತ್ರಿಕರಣ ಶುದ್ಧಿಯಿಂ । ಸಲೆ ನೋಯಿಸದೆ ವ್ರತದಿಂದ ॥
ಬಲಿದಿಂದ್ರಿಯಗಳನು ನಡೆವುದಾದಾರನೆ । ಬಲು **ಸಂಯಮ**ವೆಂಬ ಧರ್ಮ ॥ ೯೦ ॥

ತೊರೆದು ವಿಷಯಗಳ ತನುವಿನ ಮೋಹವ । ಪರಮಾತ್ಮ ಧ್ಯಾನಾಧ್ಯಯನದಿ ॥
ಉರುತರ ದ್ವಾದಶ ತಪದೊಳಾಚರಿಪುದು । ವರ **ತಪ**ವೆಂಬ ಧರ್ಮವಿದು ॥ ೯೧ ॥

ಶತ ಸಾಸಿರ ನದಿಗಳು ಸಮುದ್ರವ ಕೂಡೆ । ಮಿಕವಲ್ಲದ ಕಾಷ್ಠಗಳು ॥
ಸತತ ಕಿಚ್ಚಿನೊಳಿಕ್ಕೆ ತಣಿಯದಂದದೊಳೀಗೆ- । ನಿತು ಪರಿಗ್ರಹ ಬಿಡವಡರಿ ॥ ೯೨ ॥

ಆಸೆ ಹೆಚ್ಚುವದೆಂದು ತಾನು ವಿಚಾರಿಸಿ । ಘಾಸಿ ಮಾಡುವ ಪರಿಗ್ರಹವ ॥
ಈಸುಳಿಯದವೊಲು ಬಿಸುಟು ಬಿಡುವುದದು । ಭಾಸಿಪ **ತ್ಯಾಗ** ಧರ್ಮವಿದು ॥ ೯೩ ॥

ಜನನಿ ಜನಕ ಬಂಧು ಪುತ್ರಕಲತ್ರಾದಿ । ತನುವಿನ ಮೋಹವ ಬಿಟ್ಟು ॥
ಮನಸಿಜನನು ಗೆದ್ದು ಪರಮನ ನೆನೆವುದು । ಮಿನುಗು**ವಾಕಿಂಚನ್ಯ** ಧರ್ಮ ॥ ೯೪ ॥

ರಸ ರಕ್ತ ಮಾಂಸ ಮಿದುಳುಯಸ್ಥಿ ಮಜ್ಜವು । ಕಿಸುಕುಳ ಶುಕ್ರ ವಿಣ್ಮೂತ್ರ ॥
ರಸಿಕೆ ಕೀವುಗಳು ತುಂಬಿರ್ದ ಸ್ತ್ರೀ ಬೊಂಬೆಗೆ । ವ್ಯಸನಿಯಾಗದೆ ಹೇಸಿ ತೊರೆದು ॥ ೯೫ ॥

ಇನ್ನೂರ ಪದಿನಾರು ಭೇದವ ತಾನುಳ್ಳ । ಸನ್ನುತ ಬ್ರಹ್ಮಚರ್ಯದೊಳು ॥
ತಾನ್ನೆರೆ ನಡೆವುದು **ಬ್ರಹ್ಮಚರ್ಯ**ವು ಎಂ- । ಬುನ್ನತ ಹತ್ತನೆ ಧರ್ಮ ॥ ೯೬ ॥

ಇವರೊಳು ಚೆನ್ನಾಗಿ ನಡೆಯಲು ಪಂಚಮ । ಭವಗಳ ಕೆಡಿಸಿ ಕೈವಲ್ಯ ॥
ಯುವತಿಯ ತೋಳತೆಕ್ಕೆಯೊಳು ಮಲಗಿಕೊಂಡು । ತವೆ ಸುಖವನುಭವಿಸುವರು ॥ ೯೭ ॥

ಉಪದೇಶ ಸಾಕಿನ್ನು ನೀವು ನಿಮ್ಮಯ ಚೆಲ್ವ । ವಪು ಭೂಷಿತ ತೊಡವುಗಳ ॥
ಅಪಗತವನು ಮಾಡಿ ರಾಜಮಾರ್ಗವ ಬಿಟ್ಟು । ತಪಸಿ ವೇಷವ ತಾಳಿರೆಂದ ॥ ೯೮ ॥

ಅದಕೆಲ್ಲ 'ಇಚ್ಛಾಮಿ ಇಚ್ಛಾಮಿ' ಎಂದೆನೆ । ತ್ರಿದಶನು ಪರಿವಾಣವಿಡಿಯೆ ॥
ಮುದದಿ ಕರದೊಳಿರ್ದಕ್ಷತೆ ಫಲಗಳ । ಬಿದುರಿದರವರು ನಲ್ಮೆಯೊಳು ॥ ೯೯ ॥

ಕುರುಹನಟ್ಟಿದಪರೋ ಮೋಕ್ಷಾಂಗನೆಗೆನೆ । ಬೆರಳೊಳಗಿರ್ದುಂಗುರಗಳ ॥
ಎರಕದಿಂ ತೆಗೆದೀಡಾಡಿದರವರಂತೆ । ತೊರೆದವರಾರೋ ಸಂಪದವ ॥ ೧೦೦ ॥

ಹಾರವ ಹರಿದೀಡಾಡಲು ನೆಲದೊಳು । ತೋರಮುತ್ತುಗಳೊಪ್ಪಿದವು ॥
ತಾರಾಲೋಕವೆ ಧರೆಗಿಳಿತಂದಂತೆ । ತೋರಿತು ನೋಟದ ಜನಕೆ ॥ ೧೦೧ ॥

ಪದಕಂಗಳ ತೆಗೆದೀಡಾಡೆ ತಾಲಿಗ- । ಳದರ ಮಧ್ಯದೊಳು ತೋರಿದವು ॥
ಉದಯಾರ್ಕ ಬಿಂಬಕೆ ಗುಡಿಗಟ್ಟಿದಂದದಿ । ಗದಗದಿಸುತ ಬೆಳಗಿದವು ॥ ೧೦೨ ॥

ಕಂಕಣಗಳ ತೆಗೆದಿಟ್ಟರು ಕುವರರು । ಮುಂಕೊಂಡು ಬರುವ ಯಮುನಿಗೆ ॥
ಶಂಕಿಸದಿಟ್ಟ ಪಾರುಂಬಳಿಯೋ ಎನೆ । ಕಂಕಣ ಪರಿದವು ದೆಸೆಗೆ ॥ ೧೦೩ ॥

ಕಡೆಯಾಣಿಯುಡಿದಾರಗಳನಾಗ ತೆಗೆದಿಡೆ । ಒಡನೆ ಪೋದವು ದೆಸೆದೆಸೆಗೆ ॥
ಕಡು ದೊಡ್ಡ ಮೋಹಸರ್ಪಂಗಳ ಕೈಯೊಳು । ಪಿಡಿದಿರುವರೋ ಎಂಬಂತೆ ॥ ೧೦೪ ॥

ಕಸ್ತೂರಿ ತಿಲಕವ ತೊಡೆದರು ಚಂದ್ರನ । ಪತ್ತಿದ ಕರೆಯುದ್ದುವಂತೆ ॥
ಮುತ್ತಿನ ಯಜ್ಞಸೂತ್ರವ ಪರಿದಿಟ್ಟರು । ಕಿತ್ತರು ಕಂಠಸರಗಳ ॥ ೧೦೫ ॥

ಸರಪಣಿ ಚೌಕುಳಿ ಕಡಗ ಬಾವಲಿ ಒಂಟಿ । ವರ ಬಾಹುಪುರಿ ಭುಜಕೀರ್ತಿ ॥
ಚರಣ ಸರವು ಮುಂತಾದಾಭರಣವ । ಪರಿದೀಡಾಡಿದರವರು ॥ ೧೦೬ ॥

ವಸನಗಳನು ತೆಗೆದೀಡಾಡಲವರಂತೆ । ಎಸೆದವು ಬೆಳ್ಮುಗಿಲೊಡ್ಡು ॥
ದಶ ದಿಕ್ಕಿಗೆ ಪರಿಯಲು ಸೂರ್ಯನ ಬಿಂಬ । ಎಸಕದಿಂ ತೋರುವಂತಿಹವು ॥ ೧೦೭ ॥

ಸುತ್ತಿದ ಚಿಮ್ಮುರಿಗಳ ತೆಗೆದೀಡಾಡೆ । ನೆತ್ತಿಯಿಂದಿಳಿದ ಕುಂತಳವು ॥
ಕತ್ತಲೆಯಂತೆ ತಮಾಲದ ಹೊದರನು । ಅಳ್ತಿಯಿಂದಲೆ ನಗುತಿಹವು ॥ ೧೦೮ ॥

ಕುವರರು ಕೇಶವ ಪರಿದೀಡಾಡುವೆವೆಂದು । ತವಕದಿಂ ಕೈಯಿಡೆ ಶಿರಕೆ ॥
ಭುವಿಯೊಳು ಬಿರ್ದು ಹೊರಳಿ ಮೂರ್ಛೆ ಹೋದರು । ತವೆ ಕೆಟ್ಟೆವೆಂದು ತಾಯಿಗಳು ॥

ಮರಮಾನಿಸನೋ ಎಂಬಂತೆ ಧೈರ್ಯವು ಗುಂದಿ । ನರನಾಥ ಚಿಂತೆಯೊಳ್ಮುಳುಗಿ ॥
ಬೆರಗಾಗಿ ನಿಂದು ಕಣ್ಣೆವೆಯನು ಹಳಚದೆ । ದುರುದುರು ನೋಡುತಲಿರ್ದ ॥ ೧೧೦ ॥

ನಿಟ್ಟಿಸುತಿರ್ದ ನೋಟಕರ ನಯನದೊಳು । ಕಟ್ಟಾಣಿ ಮುತ್ತುಗಳಂತೆ ॥
ಬಟ್ಟಾಡುತಿರ್ದವಶ್ರುಗಳೆನೆ ಹೆತ್ತರು । ಹೊಟ್ಟೆವಿಡಿದು ಸೈರಿಪರೇ ? ॥ ೧೧೧ ॥

ಜನನಿ ಜನಕರು ಶೋಕಿಸುತಿರೆ ಕುವರರು । ಮನಗುಂದಿದರೆ ಮೊಗದೊಳು ॥
ಇನಿಸಾದರು ಕಂದಿ ಕುಂದಿ ಕೊರಗಿತಿಲ್ಲ । ಜಿನ ಜಿನ ! ಧೈರ್ಯವೆಯವರ ॥ ೧೧೨ ॥

ಆಸೆಯ ಪರಿವಂತೆ ಕರ್ಮದ ಬೇರನು । ಈಸುಳಿಯದೆ ಕೀಳುವಂತೆ ॥
ಸಾಸಿಗತನದಿಂದ ಜಿನರ ನೆನೆದು ತಮ್ಮ । ಕೇಶವ ಪರಿದೀಡಾಡಿದರು ॥ ೧೧೩ ॥

ವಸನದೊಳಗೆ ಕಟ್ಟಿದ ರನ್ನದಂಡದಿ । ಎಸೆದಿರ್ದರವರು ಮುನ್ನಿನೊಳು ॥
ವಸನ ತೊಲಗಲು ರನ್ನದ ಕಾಂತಿ ಪೊಳೆವಂತೆ । ಋಷಿರಾಯರಂಗ ಪೊಳೆದುದು ॥ ೧೧೪ ॥

ಕುವರರು ಚೆಲ್ಲಿದಾಭರಣದ ರಾಶಿಯು । ಭುವಿಯೊಳು ತೊಳತೊಳಗಿದವು ॥
ಭುವನಥಿಯನು ಕುಂಭಜನೀಂಟೆಯುದರೊಳು । ತವೆ ತೋರ್ಪ ಮಣಿ ರಾಶಿಯಂತೆ ॥

ಸುರರು ಪೂಮಳೆಯ ಗರೆದರಾಗಸದೊಳು । ಸುರ ಭೇರಿ ಕೋಟಿ ಮೊರೆದವು ॥
ಸುರರಾಗಸದಲ್ಲಿ ನಿಂದು ಕೈಗಳನೆತ್ತಿ । ಗುರುರಾಯರ ಕೊಂಡಾಡಿದರು ॥ ೧೧೬ ॥

ಪಲವು ಚಂದ್ರರುಗಳು ತಮ್ಮ ಪುಷ್ಪಕದಿಂ- । ದಿಳಿದು ಬರುವ ಗಾಡಿಯಿಂದ ॥
ಪೊಳೆವ ಮುತ್ತಿನ ಚೌಕದಿಂದೊಡ್ಡು ಋಷಿಗಳ । ನಲವಿನಿಂ ಗುರುವಿಗೆರಗಲು ॥ ೧೧೭ ॥

ಎರಗಿದ ನೂತನ ಋಷಿಯರ್ಗೆ ಯತಿಪನು । ಮರಳಿ 'ನಮೋಸ್ತು' ತಾನೆಂದು ॥
ಹರುಷದಿಂದುಪಕರಣಂಗಳ ಪಾಲಿಸೆ । ತರಳ ಮುನಿಗಳಾಂತರೊಸೆದು ॥ ೧೧೮ ॥

ಕುಂಚವ ಪಿಡಿದರು ಸರಸದಿಂ ತಪವೆಣ್ಣ । ಮಿಂಚಿನ ಕುರುಳ್ವಿಡಿವಂತೆ ॥
ಕುಂಚಗಳೆಸೆದವು ಹಸ್ತಪದ್ಮಕೆ ಬಂ- । ದುಂಚಮಧುಪಗಳೆಂಬಂತೆ ॥ ೧೧೯ ॥

ಪಳುಕಿನ ಬಟ್ಟ ಕಮಂಡಲು ಪಿಡಿಯಲು । ಪೊಳೆದವು ಕೈಲಿ ಋಷಿಗಳ ॥
ಕಳಹಂಸಗಳ ಸಮೂಹವೆ ನಡೆತಂದು । ನಳಿನಗಳನು ಸೇರಿದಂತೆ ॥ ೧೨೦ ॥

ಅವರವರುಗಳ ಪೂರ್ವದ ನಾಮಗಳಿಂದ- । ಲವರವರುಗಳ್ವೆಸರ್ಗೊಂಡು ॥
ದಿವಿಜೇಂದ್ರವಂದಿತ ಜಿನಚಂದ್ರ ಯೋಗೀಂದ್ರ । ಸವಿನಯದೊಳಗಿಂತು ಕರೆದ ॥ ೧೨೧ ॥

ಮುನಿಚಂದ್ರ ಯೋಗಿ ವಜ್ರಾಯುಧ ಸಂಯಮಿ । ಕನಕ ಚಂದಿರ ಮುಮುಕ್ಷು ॥
ಜಿನಚಂದ್ರ ಯೋಗಿ, ಧರ್ಮಾದಿ ಚಂದಿರ ಯೋಗಿ । ಘನಚಂದ್ರ ಶ್ರೀಚಂದ್ರ ಯೋಗಿ ॥
ಸುರಕೀರ್ತಿ ಯೋಗಿ ಬಾ ಜಯಕೀರ್ತಿ ಯೋಗಿ ಬಾ । ಹರಿವರ್ಮ ಯೋಗಿ ಬಾರೆಂದು ॥
ಹರುಷದಿಂ ಸಭೆ ಕೇಳುವಂದದಿ ಜಿನಚಂದ್ರ । ಗುರುಜನಾರಾಧ್ಯನು ಕರೆದ ॥ ೧೨೩ ॥

ಸಾಸಿರ ಮಂದಿ ನೂತನವಾದ ಯತಿಗ- । ಳಾ ಸಂಯಮಿಯ ಬೀಳ್ಕೊಂಡು ॥
ಸೂಸುವ ಶಾಂತರಸದೊಳು ಮುನಿಗಳಿ- । ಲ್ಲಾ ಸಭೆಯನು ಬಂದು ಪೊಕ್ಕು ॥ ೧೨೪ ॥

ಎರಗಲು ಯಮಿಗಳ್ಗೆ ಪ್ರತಿವಂದನೆಯನು । ತರುಣ ಋಷಿಯರಿಗೆ ಕೊಡಲು ॥
ಹರುಷದಿಂ ಸಾಲಾಗಿ ಕುಳಿತರು ಕರಿಚರ । ಸುರ ನಿಜದೇವಿಯರ್ವೆರಸು ॥ ೧೨೫ ॥

ನಡೆತಂದು ನೂತನ ಋಷಿಗಳ ನಿಕರಕ್ಕೆ । ಪೊಡವಡಲವರು ಶಾಂತದೊಳು ॥
ತಡೆಯದೆ ಸದ್ಧರ್ಮ ವೃದ್ಧಿರಸ್ತೆಂದಾಗ । ಬಿಡುಗಣ್ಣನ ಹರಸಿದರು ॥ ೧೨೬ ॥

ದೊರೆದೊರೆಗಳು ಸಹ ಜ್ಞಾನೇಂದುವೆರಗಲು । ಪರಮಾತ್ಮ ಸಿದ್ಧಿರಸ್ತೆಂದು ॥
ಪರಸಿ ಮತ್ತುಳಿದರ್ಗೆ ಕೇಡಿಲ್ಲದೈಸಿರಿ । ದೊರಕಲಿ ನಿಮಗೆಂದರವರು ॥ ೧೨೭ ॥

ಅನುಮತಿ ಮೊದಲಾದ ಪದಿನೈದು ಸಾಸಿರಿ । ವನಿತೆಯರುಗಳು ಪ್ರೀತಿಯೊಳು ॥
ವಿನಮಿತರಾಗಲು ಪುರುಷ ಜನ್ಮವನಾಂತು । ಜನಿಸಿ ಮೋಕ್ಷದೊಳೆಂದರವರು ॥ ೧೨೮ ॥

ತರುಣ ಸಂಯಮಿಗಳು ಬಿಟ್ಟಾಭರಣ ವಸ್ತ್ರ । ಕುರುಳುಗಳನು ಸುರರೊಯ್ದು ॥
ಶರನಿಧಿಯೊಳು ಬಿಟ್ಟವರ ನಿಸ್ಪೃಹತೆಯ । ಕರವೆತ್ತಿ ಪೊಗಳ್ದರರ್ತಿಯೊಳು ॥ ೧೨೯ ॥

ಪೊಳೆವ ಕಾಯದ ಚೆನ್ನಿಗರೆಳೆವರೆಯದಿ । ತಳೆದರು ತಪವಿವರಂತೆ ॥
ಬಲು ಧೀರರಾರೆಂದು ತೆಕ್ಕೆ ತೆಕ್ಕೆಲಿ ನಿಂದು । ನಲವಿನಿಂ ಪೊಗಳ್ದರು ಸುರರು ॥ ೧೩೦ ॥

ವಕ್ಕಳ ಭತ್ತ ಸಿಕ್ಕಿದರೆ ಸಾಕದ ತಿಂದು । ಸೊಕ್ಕುವುದಲ್ಲದೆ ಬಿಡರು ॥
ಸಕ್ಕರೆವಿಲ್ಲನ ಸಮದ ಚೆನ್ನಿಗರಂತೆ । ಗಕ್ಕನೆ ತೊರೆದವರಾರೋ ? ॥ ೧೩೧ ॥

ತಲೆ ಕೈ ಕಾಲು ಕಂಪಿತ ಮುಪ್ಪಿನವರ್ಗಳು । ಚೆಲುವೆಯೆಂದರೆ ಬಾಯ ಬಿಟ್ಟು ॥
ನಲಿವರು ಇಂತಪ್ಪ ಹರೆಯದ ಕುವರರು । ಗೆಲಿದುದು ಹೆಚ್ಚು ಮನ್ಮಥನ ॥ ೧೩೨ ॥

ಮುರುಟಾದ ಕರಿಕಾಂಗವ ನೀಟು ಮಾಡುತ । ಬೆರತು ಮೆರೆವರುಂಟಿಳೆಯೊಳು ॥
ಸುರಸುರ ತರುಣೀರು ಮೋಹಿಪ ರೂಪಿನ । ತರುಣರು ತೊರೆದುದು ಹೆಚ್ಚು ॥ ೧೩೩ ॥

ಕೋಲ ಕರದೊಳಾಂತು ಬಗ್ಗಿ ನಡೆವುತಿರ್ದು । ಲೋಲಾಕ್ಷಿಯೆಂದರೆ ಶಿರವ ॥
ಮೇಲೆತ್ತಿ ನೋಳ್ಪರಲ್ಲದೆ ಇವರಂದದಿ । ಪೂಲಕೇಸರಿಗಂಡರಾರು ॥ ೧೩೪ ॥

ದೊರೆಯಿತ್ತ ಬಾರೆನೆ ಸಾಕೆಂದು ಕೆಲಬರು । ಬೆರತು ಸಾವವರುಂಟಿಳೆಯೊಳು ॥
ಧರಣೀಶನ ಮಕ್ಕಳಾಗಿ ಈ ಸಿರಿಯನು । ತೊರೆದೊಸೆದುದು ಹೆಚ್ಚು ತಪವ ॥ ೧೩೫ ॥

ಉಡುವರೊಂದರಿವೆಯಿಲ್ಲದೆ ನಾಲ್ಕು ದಿನಕೊಮ್ಮೆ । ಕುಡಿಯುತ ಸಪ್ಪೆಯಂಬಲಿಯ ॥
ಬೆಡಗು ಮಾಡುತ ತಿರುಗುವರುಂಟು ಇವರಂತೆ । ಒಡನೆ ತೊರೆದರಾರು ಸಿರಿಯ ॥ ೧೩೬ ॥

ಕೊಳೆಗಣ್ಣನುಳ್ಳ ಮೂಗಿನ ಚೀರುವಾಯಿನ । ಹೊಲಸು ನಾರುವ ನಾರಿಯರಿಗೆ ॥
ಸಲೆ ಸೋತು ಮರುಳಾಗಿರುವರುಂಟಿವರಂತೆ । ತುಳಿದವರಾರು ಮೋಹವನು ॥ ೧೩೭ ॥

ಜ್ಞಾನಚಂದ್ರನ ಕುಮಾರಕರಾದ ಮೇಲಿನ್ನು । ಜ್ಞಾನಿಗಳೆಂಬುದೇನರಿದೇ ॥
ಹೀನ ಕರ್ಮವ ಸುಟ್ಟು ಮೋಕ್ಷವ ಪಡೆವುದು । ತಾನೇನಿವರಿಗಚ್ಚರಿಯೇ ? ॥ ೧೩೮ ॥

ಎನುತಲ್ಲಲ್ಲಿ ವಿದ್ವಾಂಸರು ಕವಿಗಳು । ಜನಪರು ಶ್ರಾವಕರೆಲ್ಲ ॥
ಮನದ ಪ್ರೀತಿಗಳಿಂದ ತರುಣ ಸಂಯಮಿಗಳ । ಘನತೆಯ ಕೊಂಡಾಡಿದರು ॥ ೧೩೯ ॥

ಕರಿಚರದೇವ ವಂದಿಸಿ ಯತಿನಿಕರಕ್ಕೆ । ದೊರೆರನ್ನ ಜ್ಞಾನಚಂದ್ರಮಗೆ ॥
ಎರಗಿಯುವನ ತರುಣಿಯರ್ಗೆ ವಿನಯ ಮಾಡಿ । ತೆರಳಿದ ತನ್ನ ಮಂದಿರಕೆ ॥ ೧೪೦ ॥

ತನಯರು ಸಾಸಿರ ಮುನಿಗಳಾದರು ಎಂದು । ಮನದೊಳು ಮಮ್ಮಲ ಮರುಗಿ ॥
ತನುಜ ಬಂದನು ಎಂಬ ಸಂತೋಷವನು ತಾಳಿ । ಜನಪತಿ ಮುನಿಗಳಿಗೆರಗಿ ॥ ೧೪೧ ॥

ವೃದ್ಧಾನುಕ್ರಮದಿಂದ ಮುನಿಗಳ ನಿಕರಕ್ಕೆ । ಬದ್ಧಾಂಜಲಿ ಪುಟನಾಗಿ ॥
ಸದ್ಧರ್ಮವೆ ಶರಣೆನುನತ ತಾ ಬೀಳ್ಕೊಂಡು । ಮುದ್ದಿನ ಕುವರನಿರ್ದೆಡೆಗೆ ॥ ೧೪೨ ॥

ಅನುಮತಿ ಸಹವಾಗಿ ರತ್ನವಿಮಾನವ । ಜನತಾಧೀಶ್ವರನೇರಿ ॥
ಮನದಕ್ಕರಿಂದಂತರಿಕ್ಷದೊಳಗೆ ಬರೆ । ಘನ ವಿಮಾನದ ರತ್ನಾಂಶು ॥ ೧೪೩ ॥

ಧಾರುಣಿಯಂಬರ ದಿಗ್ವಳಯಂಗಳ । ದೂರಾಂತರದಿಂದ ಮುಸುಕೆ ॥
ಚಾರುಕೌತುಕವಿದೇನೆಂದು ಹರಿಚಂದ್ರ । ಶೂರರ ತಲೆವಣಿ ನೋಡಿ ॥ ೧೪೪ ॥

ತಂದೆಯು ಬರವಾಗಬೇಕೆಂದು ಮನದೊಳಾ- । ನಂದವನ್ನೈದೆ ರೋಮಾಳಿ ॥
ಅಂದು ಕಂಟಕಿತವಾಗಿರಲಪ್ಪರೊಳಗೈ- । ತಂದನು ಬನಕೆ ಜ್ಞಾನೇಂದು ॥ ೧೪೫ ॥

ವಿನಯದೊಳಿದಿರೆದ್ದು ಹೊನ್ನ ಜಾಳಿಗೆಗಳ । ಘನವಾಗಿ ಇಡುತೆಡಬಲಕೆ ॥
ಮನ ಬಂದಂತೆ ಪಟ್ಟೆಯ ನಿವಾಳಿಯ । ಜನಕನ ಮುಂದೆ ಈಡಾಡಿ ॥ ೧೪೬ ॥

ಸಡಗರದಿಂ ಚಿನ್ನ ಬೆಳ್ಳಿಯ ಪೂವನು । ಪೊಡವಿಪನಡಿಯ ಮೇಲಿಕ್ಕಿ ॥
ಕಡು ಭಕ್ತಿಯಿಂದೆರಗಲು ಸುತನಮರ್ದಪ್ಪಿ । ತಡಹಿ ಮುದ್ದಿಸಿ ಗಲ್ಲವಲುಗಿ ॥ ೧೪೭ ॥

ಆನಂದಾಶ್ರುವಿಂ ಕಂದನ ಮೀಯಿಸಿ । ಮಾನವೇಶ್ವರ ಮುಂಡಾಡಿ ॥
ನಾನಾ ತೆರದ ಪರಕೆಯಿಂದ ಪರಸುತ । ಸೂನುವ ನೋಡುತಲಿರಲು ॥ ೧೪೮ ॥

ಜನನಿಗೆ ನವರತ್ನ ಕೀಲಿಸಿ ರಾಜಿಪ । ಜಿನಬಿಂಬನಿತ್ತು ಕಾಣಿಕೆಯ ॥
ಅನುನಯದಿಂದ ಪಾದಕೆ ಎರಗಲು ತನ್ನ । ತನಯನ ಬಿಗಿಬಿಗಿದಪ್ಪಿ ॥ ೧೪೯ ॥

ಜನಿತಾನಂದಾಶ್ರುವಿಂದ ತೊಳೆದು ಮೈಯ । ವನಿತೆ ಪಲವು ಪರಕೆಗಳ ॥
ಮನಮುಟ್ಟೆ ಪರಸುತ ಎಡದ ತೊಡೆಯ ಮೇಲೆ । ತನಯನ ಕುಳ್ಳಿರಿಸಿಕೊಂಡು ॥ ೧೫೦ ॥

ಅಡಿಗಡಿಗಮರ್ದಪ್ಪಿ ಮುದ್ದಿಸಿ ಗಲ್ಲವ । ಪಿಡಿದಲುಗುತ ಬೆನ್ನ ತಾನು ॥
ಎಡಗೈಯಿಂದಲಿ ಮೋಹದಿ ತಡುವುತ । ನುಡಿದಳೆನ್ನಯ ಮುದ್ದು ಕಂದ ! ॥ ೧೫೧ ॥

ಪರದೇಶಿಗಳ ನವಿರ್ಮಾರ್ವರ ನೀ ಮಾಡಿ । ದುರುಳ ಬಾಧೆಗೆ ನೀನು ಸಿಲುಕಿ ॥
ಪರದೇಶದೊಳು ನೀನೋರ್ವನೆ ತೊಳಲುತ । ಚರಿಸಿದೆ ನಮ್ಮನು ಬಿಟ್ಟು ॥ ೧೫೨ ॥

ತನುಜ ! ಕೇಳ್ಮೈದಾಯಿಗರು ಪಲವಂದದಿ । ಘನವಾಗಿ ಮುನಿದೊಡೆ ನಿನ್ನ ॥
ಅನುಪಮ ಪುಣ್ಯದೇಳಿಗೆಯ ನಾನೇನೆಂಬೆ । ಜನಪರನೇಕರ ಗೆಲಿದು ॥ ೧೫೩ ॥

ಪಲವು ದೇಶಂಗಳನಿರದೊತ್ತಿ ಸಾಧಿಸಿ । ಪಲವು ಕನ್ನಿಕೆಯರ ಒಲಿಸಿ ॥
ಪಲವು ದೊರೆಗಳ ನಿನ್ನಯ ಪಾದಕೆರಗಿಸಿ । ಪಲವು ಕಪ್ಪಗಳನ್ನು ಕೊಂಡು ॥ ೧೫೪ ॥

ನೀನೈದಿದೆಯೆಂದು ಜನನೀ ಜನಕರಾ- । ಗಾನಂದವ ತಾಳಿರಲು ॥
ಸಾನುರಾಗದಿ ತಾಯ ತೊಡೆಯಿಂದಿಳಿದನು । ಮಾನವೇಶ್ವರನ ಬಳಿಯೊಳು ॥ ೧೫೫ ॥

ಕುಳ್ಳಿರಲಾವೇಳೆಯದೊಳು ಹರಿಚಂದ್ರನ । ಲಲನೆಯರುಗಳೈತಂದು ॥
ಮಲಯಜ ವೀಣೆ ಕತ್ತುರಿಯ ಕಾಣಿಕೆಯಿಕ್ಕಿ । ತಳಿರಡಿಗೆರಗೆ ರಾಜೇಂದ್ರ ॥ ೧೫೬ ॥

ಪರಸಲು ಹರಕೆಯ ಶಿರಸಾವಹಿಸಿಕೊಂಡು । ಹರುಷದಿ ನಡೆದು ಬಂದಾಗ ॥
ವರ ವಸ್ತು ಕಾಣಿಕೆಯಿತ್ತು ತಮ್ಮತ್ತೆಗೆ । ಎರಗಿದರತಿ ಸಂಭ್ರಮದಿ ॥ ೧೫೭ ॥

ಅಡಿಗೆರಗಿದ ಸೊಸೆಯರ ಮಸ್ತಕವನು । ಪಿಡಿದೆತ್ತಿ ಸಕಲೋರ್ವರೆಯ ॥
ಬಿಡದೆಯಾಳುವ ಚೆಲ್ವ ಹಲವು ಕುಮಾರರ । ಪಡೆದು ವಜ್ರದ ಓಲೆಯಿಟ್ಟು ॥ ೧೫೮ ॥

ವರ ಮುತ್ತೈದೆಯರುಗಳಾಗಿ ನಿಮ್ಮಯ । ಪುರುಷನೊಳಗೆಯನುದಿನವು ॥
ವರ ಸುಖದೊಳಗಿರಿ ಎಂದಿವು ಮೊದಲಾದ । ಹರಕೆ ಕೋಟಿಗಳನು ಪರಸಿ ॥ ೧೫೯ ॥

ಜನನಾಥನಾಗ ಮಹೋತ್ಸಹದಿಂ ತನ್ನ। ತನಯುನನೊಡಗೊಂಡು ಮುದದಿ ॥
ನಕಪುರವ ಪೊಕ್ಕು ರಾಜಬೀದಿಯೊಳಾಗ। ದಿನಕರಯುಗಲಗಳಂತೆ ॥ ೧೬೦ ॥
ರುತಿರೆ ಕೋಟಿ ವಾದ್ಯದ ರಭಸಗಳಿಂದ। ತರುಣಿವೆಣ್ಣುಗಳು ನರ್ತಿಸಲು ॥
ರವೆತ್ತಿ ಪಾಠಕನಿಕರ ಕೊಂಡಾಡಲು। ದೊರೆ ಬಂದು ಪೊಕ್ಕರಮನೆಯ ॥ ೧೬೧ ॥
ಪುರಜನ ಪರಿಜನ ಬಂಧು ಜನಂಗಳ್ಗೆ। ದೊರೆದೊರೆಗಳಿಗೆ ಮನ್ನೆಯರ್ಗೆ ॥
ರುಷದಿಂದಿತ್ತುಡುಗೊರೆಗಳ ಬೀಳ್ಕೊಡೆ। ಹರಿಚಂದ್ರನಧಿಕ ಲೀಲೆಯೊಳು ॥ ೧೬೨ ॥
ರ ಮಾತಾಪಿತೃಗಳ ಮನಕೆ ಸಂತಸವನು। ನೆರೆ ಪುಟ್ಟಿಸುತಿರುತಿರಲು ॥
ರುಪೂಜೆ ಜಿನಪೂಜೆಗಳನಾವಾಗಲು। ದೊರೆರನ್ನ ಮಾಡುತೊಪ್ಪಿದನು ॥ ೧೬೩ ॥
ರಣೀಶ ಮಕುಟ ಚೂಡಾಮಣಿ, ಜಿನಮತ। ಸರಸೀರುಹಕೆ ಬಾಲತರಣಿ ॥
ರೆದು ಯಾಚಕರಿಗೆ ಕೊಡುವ ಚಿಂತಾಮಣಿ। ದೊರೆ ಜ್ಞಾನಚಂದ್ರನೊಪ್ಪಿದನು ॥ ೧೬೪ ॥

**॥ ಅಂತು ಸಂಧಿ ೩೪ಕ್ಕಂ ಪದ ೪೫೬೪ಕ್ಕಂ ಮಂಗಲಂ ॥**

# ಮಲ್ಲಯುದ್ಧ.

ವೇತಾಳನ ಮಲ್ಲಯುದ್ಧದಿ ಜ್ಞಾನೇಂದು। ತಾತಳುವದೆ ಗೆಲ್ದುದುಸುರ್ವೆ ॥ ಪ ॥
ಶುಂಭದ್ಗಂಭೀರಾಂಬೋಧಿಯಂದದಿಂ। ಪೊಂಬೆಟ್ಟದೊಳುಮಿಂದೆಸೆವ ॥
ಜಂಭಭೇದ್ಯಾರಾಧಿತ **ಶಾಂತಿ ಜಿನಪ**ನ। ಕೆಂಬಜ್ಜೆಗಾನೆರಗುವೆನು ॥ ೧ ॥
ಸುರಪ ಜಯಂತನ ಹರಿಯೈಸರನನು। ಹರ ಸಖನಳಕೂಬರನ ॥
ರಕದಿಂ ಮುದ್ದಿಸುವಂತೆ ಜ್ಞಾನೇಂದು ತಾ। ಹರಿಚಂದ್ರನ ಮುದ್ದಿಟ್ಟ ॥ ೨ ॥
ಚರಿತೆ ಪುರಾಣವ ಹೇಳುತ ಕೇಳುತ। ವರ ದಾನಗೊಡುತ ಮುನಿಗಳ್ಗೆ ॥
ಇರುತಿರಲೊಂದಾನೊಂದು ದಿವಸದೊಳು। ನರಸಿಂಹ ಮಂತ್ರೀಶ್ವರನ ॥ ೩ ॥
ಅರಸಿ ಸುಭದ್ರೆಯ ವರ ಪುತ್ರಿ ಮನ್ಮಥ-। ನರಸಿಯ ಜರೆವ ಸ್ವರೂಪೆ ॥
ಸರಸಿಜಲೋಚನೆ ಹರಿಮಧ್ಯೆ ಗುರುಕುಚೆ। ವರ ರತ್ನಾವಳಿಯೊಂದು ದಿವಸ ॥ ೪ ॥
ಇನಸಂತೆ ಪೊಳೆವ ಸೌಧವನೇರಿ ಪುರವನು। ಮನದಕ್ಕರಿಂ ನೋಡುತಿರಲು ॥
ಕನಕಾದ್ರಿಯಂತೆ ಪೊಳೆವುತಲಿ ಇರುತಿರ್ದ। ಮನುಜೇಶ್ವರ ನಂದನನ ॥ ೫ ॥
ಹರಿಚಂದ್ರ ಕುವರನ ಮೇಲೆಯವಳ ದೃಷ್ಟಿ। ಹರಿಯಲು ನೀಡುಂ ನೋಡಿ ॥
ಅರಲಶರಕೆ ಗುರಿ ಮಾಡಿ ತನ್ನಂಗವ। ಹರಿನೀಲಕುಟ್ಟಿಮದಲ್ಲಿ ॥ ೬ ॥

ಪೊರಳುವ ಸುತೆಯನು ಕಂಡಿಂತೆಂದನು । ನರಸಿಂಹನೆಲೆ ರತ್ನಮಾಲೆ ! ॥
ಸರಸಿಜನಂತಿರ್ದ ಮೊಗವೇಕೆ ಕಂದಿತು । ಸೊರಗಿತೇತಕೆ ತನುಲತೆಯು ॥ ೭ ॥

ತಳುವದೆ ಪೇಳೆಂದು ಕೀರಿ ಕೇಳಿದೊಡಾ । ಚೆಲುವೆಯು ನಾಣ್ಚಿ ಮೌನದೊಳು ॥
ತಲೆವಾಗಿರುತಿರೆ ಕೆಲದೊಳು ನಿಂತಿರ್ದ । ಕೆಳದಿಯಿಂತೆಂದು ನುಡಿದಳು ॥ ೮ ॥

ಹರಿಯನಡರಿ ಹರಿಚಂದ್ರ ಕುಮಾರನು । ಹರುಷದೊಳಗೆ ಬೀದಿಯೊಳು ॥
ಹರಿಸಾಡುತ ಪೋಗುತಿರಲೀ ಹರಿಮಧ್ಯೆ । ಹಿರಿದು ಸಿಟ್ಟಿಸಿ ನೋಡಿಯವನ ॥ ೯ ॥

ಕಾಯಜನಂಬಿಗೆ ಗುರಿಯಾಗಿ ವಿರಹದಿ । ತೋಯಜಗಂಧಿ ಭೂಮಿಯೊಳು ॥
ದಾಯಗೆಟ್ಟೀಗ ಬಿದ್ದಳು ಎಂದು ಮಂತ್ರಿಗೆ । ವೈಯಾರದಿಂ ಪೇಳಿದಳು ॥ ೧೦ ॥

ಆ ನುಡಿಯನು ಕೇಳಿ ನರಸಿಂಹಾಮಾತ್ಯನು । ಮಾನವೇಂದ್ರನ ಸಭೆಗೈದಿ ॥
ಆನತನಾಗಿ ಕೈಮುಗಿದರಸಿನೊಳಾಗ । ತಾನಿಂತೆಂದು ನುಡಿದನು ॥ ೧೧ ॥

ಎಲೆ ಧರಣೀಶ ಚೂಡಾಮಣಿ ! ಬಿನ್ನಹ । ಮಳಯಜಗಂಧಿಸ್ವರೂಪೆ ॥
ನಳಿತೋಳಭಾವಕಿ ಸುಳಿಗುರುಳಬಲೆಯು । ಅರವಿಂದಾನನೆ ರತ್ನಾವಳಿಯು ॥ ೧೨ ॥

ಹರಿಚಂದ್ರ ಕುವರಗೆ ಮದುವೆಯ ದೇವರು । ಹರಿಷದಿಂ ಮಾಡಬೇಕೆನಲು ॥
ದೊರೆರನ್ನ ಜ್ಞಾನೇಂದು ಕೇಳಿ ಜೋಯಿಸರನ್ನು । ಕರೆಯಿಸಿ ಶುಭ ಲಗ್ನವನು ॥ ೧೩ ॥

ಎರಕದಿಂ ಕೇಳಲು ಎಲೆ ನರನಾಥನೆ ! । ಗುರುಪಂಚಮಿಯ ದಿನ ಶುಭವು ॥
ಕರಣವು ಒಳ್ಳಿತು ಕಲ್ಯಾಣದಾಯಕ । ವರ ಶುಭಯೋಗವು ಆಹುದು ॥ ೧೪ ॥

ಪರಿಕಿಸೆ ತಾರೆಯು ಶುಭ ತಾರೆಯೆಂದಾಗ । ವರ ಪಂಚಾಂಗ ಶುದ್ಧಿಯನು ॥
ಒರೆಯಲು ರಾಜೇಂದ್ರ, ಗುಡಿ ತೋರಣಗಳಿಂ । ಪುರವನು ಸಿಂಗರಗೈಸಿ ॥ ೧೫ ॥

ಕೋಟಿ ವಾದ್ಯಗಳಾಗ ಧಿಂ ಧಿಮಿ ಎನುತ ಸ- । ಘಾಟಿಕೆಯೊಳು ಭೋರ್ಮೊರೆಯೆ ॥
ಪಾತಕ ಕೋಟಿ ಕೈಯೆತ್ತಿ ಕೊಂಡಾಡಲು । ಮಾಟುಗಾರಿಕೆಯಿಂ ನರ್ತನವ ॥ ೧೬ ॥

ಪಣ್ಣೆ ಪಣ್ಣೆಯೊಳಲ್ಲಲ್ಲಿ ನಿಂದಾಗಳೆ । ವೆಣ್ಣುಗಳಾಡುತಲಿರಲು ॥
ಹುಣ್ಣಿಮೆ ಚಂದ್ರನ ಕಾಂತಿಯಿಂ ಮಿಗಿಲಾಗಿ । ಪಣ್ಣಿರೆ ಹಗಲು ಬತ್ತಿಗಳು ॥ ೧೭ ॥

ತರುಣಿಯರ್ಧವಲ ಶೋಭನಗಳ ಸ್ವರವೆತ್ತಿ । ಕರ ಕೌಶಲದಿ ಪಾಡುತಿರಲು ॥
ಹರಿಚಂದ್ರ ಕುವರಗೆ ರತ್ನಾವಳಿಯನು । ದೊರೆ ಬಂಧು ಬಳಗದ ಮುಂದೆ ॥ ೧೮ ॥

ನರಸಿಂಹನಗ್ನಿಸಾಕ್ಷಿಯೊಳು ಕೈಧಾರೆಯ । ಮರಕತ ಗಿಂಡಿಯನೆತ್ತಿ ॥
ಹರಿಸದಿಂದೆರೆಯಲು ಭೇರೀರವದಿಂದ । ಭರಿತವಾಯಿತು ದಶದಿಕ್ಕು ॥ ೧೯ ॥

ದಂಪತಿಗಳು ಸುಖದಿಂದಿರುತಿರಲಿತ್ತ । ಪೆಂಪಿನಿಂ ಜ್ಞಾನಚಂದ್ರಮನು ॥
ಸೊಂಪುವೆತ್ತಲು ಭೂರಿದಾನವ ಕೊಟ್ಟು ನಿ- । ಳಿಂಪೇಂದ್ರನಂತೊಪ್ಪಿದನು ॥ ೨೦ ॥

ಒಂದಾನೊಂದು ಪಗಲು ಜ್ಞಾನಚಂದ್ರನು। ಬಂದು ಚಿತ್ರದ ಚಾವಡಿಯೊಳು ॥
ವೃಂದಾರಕೇಶ್ವರ ವೈಭವದೊಳು ಮೃ-। ಗೇಂದ್ರಾಸನದೊಳು ಕುಳ್ಳಿರಲು ॥ ೧೧ ॥

ಮೊರೆದವಾ ವೇಳೆಯದೊಳು ವಾದ್ಯಂಗಳು। ದೊರೆದೊರೆಗಳು ಮಂತ್ರಿಗಳು ॥
ಕರಣೀಕ ಸಾಮಂತ ಮಂಡಳಾಧೀಶರು। ಕರಗಳ ಮುಗಿದು ನಿಂದಿರಲು ॥ ೧೨ ॥

ಊರ್ವಶಿ ರಂಭೆ ತಿಲೋತ್ತಮೆಗೆಣೆಯಾದ। ಸರ್ವ ವಲ್ಲಭೆಯರು ಬೆಡಗಿಂ ॥
ಪುರ್ವಿನ ಕೊನೆಯಿಂದ ವಿಟರ ಸೋಲಿಸುತಾ-। ಗುರ್ವಿಪತಿಯ ಮುಂದೆ ನಟಿಸೆ ॥ ೧೩ ॥

ಆ ಎಂದು ರಕ್ತಕಂಠದೊಳು ಸ್ವರಗಳೆತ್ತಿ। ಗಾಯಕಜನ ಪಾಡುತಿರಲು ॥
ರಾಯರದೇವ ಕೇಳುತ ಕಿವಿಗೊಟ್ಟು ವಿ-। ಡಾಯದಿಂ ಕುಳಿತುಕೊಂಡಿರಲು ॥ ೧೪ ॥

ಮುತ್ತಿನ ಮಣಿಯಂತೆ ಸುತ್ತಿದ ಮುಂಡಾಸು। ಕತ್ತರಿಸಿದ ಕೊನೆ ಮೀಸೆ ॥
ಒತ್ತಿದ ಪನ್ನೆ ಬವರಿಗಡ್ಡ ಕೊರಳೊಳು। ಸುತ್ತಿದ ಯಜ್ಞೋಪವೀತ ॥ ೧೫ ॥

ಮುರುಕದಿಂ ತೊಟ್ಟು ರಾಜಿಸುವ ಜೋಡಂಗಿಯ। ಮಿರುಗೆ ಪೊದೆದ ಶಲ್ಲೆಯವು ॥
ಬೆರಳೊಳಗಳವಟ್ಟ ರತ್ನಮುದ್ರಿಕೆಗಳು। ಸ್ಮರನಾಕಾರದೊಳೋರ್ವ ॥ ೧೬ ॥

ವರದತ್ತನೆಂಬ ಪೆಸರನುಳ್ಳ ಪರದನು। ಮನುಜೇಂದ್ರನ ಸಭೆಗೈದಿ ॥
ಘನ ರತ್ನಂಗಳ ಕಾಣಿಕೆಯನು ಕೊಟ್ಟು। ಕನಕಪುರಾಧಿನಾಯಕಗೆ ॥ ೧೭ ॥

ಕರಗಳ ಮುಗಿದು ನಿಂದಿರಲು ರಾಜೇಂದ್ರನು। ಪರದನ ಮೊಗವನು ನೋಡಿ ॥
ಬರವೆಲ್ಲಿಂದ ವಣಿಜ ! ಇತ್ತಬಾರೆಂ-। ದರಸ ಪೇಳಲು ಬಂದು ಕುಳಿತ ॥ ೧೮ ॥

ಆರೈದು ನೋಡಿ ನಿನ್ನಯ ಗಮನವು ಬಹು। ದೂರಾಂತರವನು ಈಗ ॥
ತೋರಿಸುತಿದೆ ಏನೇನತಿಶಯಗಳ। ಚಾರು ಕೌತುಕವನು ಕಂಡೆ ॥ ೧೯ ॥

ಎಂದು ಭೂಭುಜ ಬೆಸಗೊಳೆ ಎದ್ದು ನಿಂದಾಗ। ತಂದು ನೊಸಲಿಗೆ ಕರಗಳ ॥
ಮಂದಸ್ಮಿತದಿಂದ ಬಿನ್ನವಿಸಿದನಿಂತು। ಚಂದದಿ ಸಭೆ ಕೇಳುವಂತೆ ॥ ೨೦ ॥

ಅರಿರಾಯಗಿರಿ ವಜ್ರದಂಡನೆ ! ಬಿನ್ನಹ। ಸುರುಚಿರ ವತ್ಸದೇಶದೊಳು ॥
ಪರಿರಂಜಿಪ ರೋರುಕಪುರ ವನದಲ್ಲಿ। ಗುರು ಜಿನಚಂದ್ರಮ ತನಗೆ ॥ ೨೧ ॥

ಪರಮಾಯುಷ್ಯವು ಒಂದು ತಿಂಗಳು ಎಂದು। ವರ ಬೋಧದಿಂದವೆ ತಿಳಿದು ॥
ಒರೆದನು ತನ್ನ ಶಿಷ್ಯಾಳಿಗೆ ಭವ್ಯರ್ಗೆ। ಪರಮ ಧರ್ಮೋಪದೇಶವನು ॥ ೨೨ ॥

ಮಾಡುತ ಸಕಲ ಜೀವಂಗಳೊಳಗೆ ಕೃಪೆ-। ಗೂಡಿ ಸದ್ಧರ್ಮವ ನೀವು ॥
ನೋಡಿ ರಕ್ಷಿಸಿ ಧ್ಯಾನಾಧ್ಯಯನಂಗಳ। ಮಾಡುವುದಾವಾಗ ನಮಗೆ ॥ ೨೩ ॥

ಪರಮಾಯುಷ್ಯವು ಪಕ್ಷದ್ವಯಮುಂಟು। ಪಿರಿತು ಶಮತೆ ನಿಮಗೆಮಗೆ ॥
ಇರಲಿ ಎಂದಾ ಮುನಿ ಸಕಲ ಸನ್ಯಸನವ। ಪರಮೋತ್ಸಹದಿ ಕೈಕೊಂಡು ॥ ೨೪ ॥

ಪರಮಾಪ್ತಭಾವನೆಯಿಂದಿರುತಹನೆಂ- । ದೊರೆಯಲು ಜ್ಞಾನೇಂದು ಕೇಳಿ ॥
ಕೊರಗಿ ಚಿಂತಿಸಿ ದುಃಖವ ತಾಳಿ ಮನದಲ್ಲಿ। ಹೊರಗಾಣಿಸದೆ ಧೈರ್ಯವಿಡಿದು ॥ ೩೫ ॥

ಜನನಾಥ ಪರದಗೆ ಮಣಿಭೂಣಷವಿತ್ತು । ಮನದಕ್ಕರಿಂದವೆ ತನ್ನ ॥
ತನಯುನ ಕರಿಸಿ ಎಲೆ ಹರಿಚಂದ್ರನೆ ! । ಕನಕಪುರವ ರಕ್ಷಿಸೆಂದು ॥ ೩೬ ॥

ಒರೆದು ತಾ ಕನಕವಿಮಾನವ ಜ್ಞಾನೇಂದು। ಪರಿಜನ ಬರೆಯೊಡನೈದಿ ॥
ಸುರವರ್ತ್ಮಕಡರಿ ರೋರುಕಪುರ ವರಕಾಗಿ। ತುರಿಹದಿಂದವೆ ನಡೆತಂದು ॥ ೩೭ ॥

ಇಳಿದು ರತ್ನದ ಪುಷ್ಪಕವನು ಒಳವೊಕ್ಕು । ಬಳಸಿರ್ದ ಮುನಿಮಧ್ಯದೊಳು ॥
ಖಳಕರ್ಮದೂರನ ಜಿನಚಂದ್ರ ಮುನಿಪನ। ಪೊಳೆವ ದಿವ್ಯಾಂಗವ ಕಂಡು ॥ ೩೮ ॥

ಬಲವಂದು ಮೂರುಮೆ ಮುನೀಶನ ತಳಿರಡಿ- । ಗಲಘು ಭಕ್ತಿಗಳಿಂದಲೆರಗಿ ॥
ಜಲ ಗಂಧಾದಿಗಳಿಂದ ಪೂಜಿಸಿದನು। ಚೆಲುವರ ದೇವ ಜ್ಞಾನೇಂದು ॥ ೩೯ ॥

ಪರಮಾತ್ಮನ ಸ್ವರೂಪವ ಮುನಿಗಳು । ಮುರುಕದಿಂ ಪೇಳುತಲಿರಲು ॥
ಪರಮ ಸಿದ್ಧಾಂತವ ಪಠಿಸುವ ಘೋಷಣ । ಪರಿಪೂರ್ಣವಾಗಿ ತುಂಬಿರಲು ॥ ೪೦ ॥

ಜಿನಚಂದ್ರ ಮುನಿರಾಜ ಪಲ್ಯಂಕಾಸನದೊಳಾ- । ಗನುಪಮ ಸುಜ್ಞಾನಿ ಕುಳಿತು ॥
ಮನವನು ಪೂರ್ವಿನ ಜವಳಿ ಕೊನೆಯೊಳಿಟ್ಟು । ನೆನೆವುತಲಾಗ ಪರಮನ ॥ ೪೧ ॥

ತನು ತನ್ನದಲ್ಲೆಂದು ಭಾವಿಸಿ ಚೌವ್ವೀಸ। ಘನ ಪರಿಗ್ರಹವನು ತೊರೆದು ॥
ಮುನಿನಾಥನಿರಲಾಗ ರೋರುಕಪುರಪತಿ । ಇನಿಸು ಬೇಗದಿ ನಡೆತಂದು ॥ ೪೨ ॥

ಮಾರಮದಾಪಹರಣ ಜತಿರಾಯನ। ಚಾರುಚರಣಯುಗಕೆರಗಿ ॥
ಆರಾಧಿಸಿ ಜಲ ಗಂಧಾದಿಗಳಿಂದ। ವೀರಾಗ್ರಣಿಯನು ಕಂಡು ॥ ೪೩ ॥

ವಿನಯದಿಂ ವಿನಮಿತನಾಗಿಯಾಲಿಂಗಿಸಿ । ಮನದನುರಾಗದಿ ತಾವು ॥
ಮುನಿಪನ ಸೇವೆಯನಿಪ್ಪತ್ತೆರಡು ದಿನ। ಘನವಾಗಿ ಮಾಡುತಲಿರಲು ॥ ೪೪ ॥

ಆ ವೇಳೆಯೊಳು ಜಿನಚಂದ್ರ ಮುನೀಂದ್ರನು । ತೀವಿದ ಶಾಂತತೆಯಿಂದ ॥
ಪಾವನ ನಿಶ್ಚಯ ರತ್ನತ್ರಯಗಳ। ಸಾವಧಾನದೊಳು ಸಾಧಿಸುತ ॥ ೪೫ ॥

ಆರಾಧನಾ ಚತುಷ್ಟಯಾತ್ಮಕನಾಗಿ। ವೀರಶಯ್ಯಾರೂಢದಿಂದ ॥
ಧೀರನು ಪಂಚಪದಗಳ ನೆನೆವುತ ಶ- । ರೀರವ ಬಿಸುಟು ಏಳನೆಯ ॥ ೪೬ ॥

ಉರುತರ ಸುಖವೀವ ಲಾಂತವ ಕಲ್ಪದ। ವರ ಉಪಪಾದದೊಳ್ಜನಿಸಿ ॥
ಪರಿಯಾಪ್ತಿಯನಂತರ್ಮುಹೂರ್ತದೊಳು ತಾನು। ಧರಿಸಲು ಉಪಪಾದವೊಂದು ॥ ೪೭ ॥

ಒರಗಿಕೊಂಬುದಕೆ ಲೋಡಾಗಲು ಮತ್ತೊಂದು । ಮಿರುಗುವ ಗದ್ದುಗೆಯಾಗೆ ॥
ಪರಿಪೂರ್ಣ ಯೌವನಾರೂಢನು ಪಂಚಮ । ವರ ಹಸ್ತದುನ್ನತ ಕಾಯ ॥ ೪೮ ॥

ಹದಿನಾಲ್ಕು ಸಾಗರ ಪರಮಾಯುಷ್ಯನು । ಒದವಿದ ರೂಪು ವಿಚಾರಿ ॥
ಉದಯಾರ್ಕಸಮ ಕಾಯದ ಕಾಂತಿಯುಳ್ಳನು । ಪದುಮಲೇಶ್ಯದ ಪರಿಣಾಮಿ ॥ ೪೯ ॥

ಇನ್ನೂರಪತ್ತು ದಿವಸಕೊಮ್ಮೆ ಉಚ್ಛ್ವಾಸಿ । ಸನ್ನುತ ನಿಃಶ್ವಾಸಮನಿತೆ ॥
ನನ್ನಿಯಿಂ ಪದಿನಾಲ್ಕು ಸಾಸಿರಬ್ದಕೆಯೊಮ್ಮೆ । ಉನ್ನತ ಮಾನಸಾಹಾರಿ ॥ ೫೦ ॥

ಮೂರನೆ ನಾರಕ ತೊಟ್ಟುತಾನೇರುವ । ಚಾರು ವಿಮಾನದ ಧ್ವಜವ ॥
ರಾರಾಜಿಪ ದಂಡ ಪರಿಯಂತರಲಾ । ವೀರನರಿಯುವ ಶಕ್ತಿಯುಂಟು ॥ ೫೧ ॥

ನರಕ ಮೂರನೆಯ ಕ್ಷೇತ್ರದೊಳುಗುರ್ವಿಪ । ಭರದಿ ಕಿತ್ತಿಡುವ ಸಾಮರ್ಥ್ಯ ॥
ಪರಿಕಿಸಲಾ ದೇವೋತ್ತಮಗುಂಟೆನೆ । ಒರೆವೆನವನ ಪುಣ್ಯವನು ॥ ೫೨ ॥

ವರ ಸಹಜಾಂಬರ ಭೂಷಣ ಸ್ರಗ್ಧಾರಿ । ನಿರುಪಮ ದಿವ್ಯ ಶರೀರಿ ॥
ಸುರ ಸಿಂಹಧ್ವಜ ನಾಮುವನಾಂತಾ- । ಗಿರುತಿರೆ ದೇವದುಂದುಭಿಯು ॥ ೫೩ ॥

ಮೊಳಗಿದವಾಗ ದೇವರ್ಕಳು ಪುಷ್ಪದ । ಮಳೆಗಳ ಕರೆದರರ್ತಿಯೊಳು ॥
ನಲಿದಾಡಲು ಸುರ ನರ್ತಕಿ ಜನಗಳು । ಬಳಸಿರೆ ವೃದ್ಧ ತ್ರಿದಶರು ॥ ೫೪ ॥

ಸುರ ನಾರಿಯರು ಮಂಗಲ ಗೀತವ ಪಾಡೆ । ಸುರಸತಿಯರು ಸೇಸೆಯಿಡಲು ॥
ಸುರ ತರುಣಿಯರು ಚಾಮರಗಳ ಢಾಳಿಸೆ । ಸುರರೆಲ್ಲ ಜಯ ಜಯವೆನಲು ॥ ೫೫ ॥

ಇದು ತಾನಾವ ಲೋಕವು ಭಾವಿಸಿ ನೋಡೆ । ಸುದತಿ ಜನಗಳಿವರಾರು ॥
ಇದಿರಲ್ಲಿ ಕರಗಳ ಜೋಡಿಸಿ ನಿಂದಿರ್ಪ । ತ್ರಿದಶರಾರೆಂದೆನುತಾಗ ॥ ೫೬ ॥

ಅವಧಿಲೋಚನದಿಂದೀಕ್ಷಿಸಿಯಾ ದೇವ । ದಿವಿಯಿದು ಲಾಂತವವಿವರು ॥
ಸುವಿವೇಕಿ ವೃದ್ಧ ದೇವರ್ಕಳು ಇವರೀಗ । ದಿವಿಜರಿವರು ಸ್ವಕಿಂಕರರು ॥ ೫೭ ॥

ಇವರೆನ್ನ ಸತಿಯರು ಇವರು ಸೇವಕಿಯರು । ಇವರು ವಾಹನರೆಂದು ತಿಳಿದು ॥
ವಿವರಿಸೆ ತಪದ ಮಹಿಮೆಯಿಂದಲಿಂತಪ್ಪ । ವಿರಳದ ಭಾಗ್ಯೋನ್ನತಿಯು ॥ ೫೮ ॥

ದೊರಕಿತು ನಾನಿನ್ನು ಜಿನರ ಸದ್ಧರ್ಮವ । ಮರೆಯಲು ಬಾರದು ಎಂದು ॥
ಸುರ ಸಿಂಹಧ್ವಜನೆದ್ದು ನಡೆತಂದು ಪರಿಮಳ । ವರ ಜಲ ತೀವಿದ ಕೊಳನ ॥ ೫೯ ॥

ಕಡು ಹರ್ಷದಿ ಪೊಕ್ಕು ಮಜ್ಜನವನು ಮಾಡಿ । ಅಡಿಯಿಟ್ಟು ಜಿನಪನ ಗೃಹಕೆ ॥
ಬಿಡದೆ ನುತಿಸುತ ಮೂಸೂಳು ತಾ ಬಲವಂದು । ಮುರವೈರಿ ಮುದಮರ್ಧಿಸಿದ ॥ ೬೦ ॥

ಜಿನರಾಜನಿಗೆ ಸಾಷ್ಟಾಂಗವೆರಗಿ ಮತ್ತೆ । ಜಿನಪನ ಪೂಜೆಯ ಮಾಡಿ ॥
ಘನವಾಗಿ ನುತಿಗೈದು ಲಾಂತವದಿವಿಯೊಳು । ಮಿಸುಗುವ ಜೈನ ವಸತಿಯ ॥ ೬೧ ॥

ಹರಿಸದೊಳಗೆ ಪೊಕ್ಕು ಜಿನಪನ ಪೂಜಿಸಿ । ಸಿರದೊಳು ಸಿದ್ಧಶೇಷೆಯನು ॥
ಧರಿಸಿ ತಾ ಮುದದಿಂದ ಸುರ ಸಭೆಗೈತಂದು । ಹರಿಪೀಠದೊಳು ಕುಳಿತಿರಲು ॥ ೬೨ ॥

ಮಂದರಗಿರಿ ಸಮ ಧೈರ್ಯನಿತ್ತಲು ಜ್ಞಾ-। ನೇಂದು ವನದೊಳು ಮುನಿಗಳ ॥
ವೃಂದದೊಡನೆಯುಪವಾಸವ ಮಾಡುತ। ಸೌಂದರಾಂಗನು ಇರ್ಪುದನು ॥ ೬೩ ॥

ತಿಳಿದು ನಿಳಿಂಪನು ನವರತ್ನಮಯವಾದ। ಪೊಳೆವ ವಿಮಾನವ ತನ್ನ ॥
ನಳಿನಾಂಬಕಿಯರು ಸಹವಾಗಿ ಜಿಡವೇರಿ। ತುಳುಕುವ ದೇಹಕಾಂತಿಯನು ॥ ೬೪ ॥

ಬನಕವತರಿಸಿಯಾ ವೃಂದಾರಕನಾಗ। ಮುನಿ ನಿಕರಕೆ ಶಿರಬಾಗಿ ॥
ಇನಿಸು ಬೇಗದಿ ತನ್ನ ನಿಜಸುತನೆಡೆಗೈದಿ। ಮನ ಮುರುಕದಿ ಬಿಗಿಯಪ್ಪಿ ॥ ೬೫ ॥

ಕರದಿಂದ ಬೆನ್ನನು ತಡಹುತ ಮುನ್ನಿನ। ನೆರೆ ಮೋಹದಿಂದೆಲೆ ಕಂದ ! ॥
ಮುರುಕದಿಂದಲಿ ಕೇಳು ಹಿಂದಣ ಭವದೊಳು। ದೊರೆ ! ನಿನ್ನ ಪಿತ ಜಿನಚಂದ್ರ ॥ ೬೬ ॥

ಪಾವನ ತಪದೊಳಗಾಚರಿಸುತಲಿರ್ದು। ಜೀವಿತಾಂತ್ಯದೊಳು ಏಳನೆಯ ॥
ತೀವಿದ ಸುಖನಿವಾಸ ಲಾಂತವ ದಿವಿಯೊಳು। ದೇವ ಮಹರ್ದಿಕನಾದೆ ॥ ೬೭ ॥

ನಿಜ ವಂಶಪಾರಂಪರೆಯಿಂದಲು ಬಂದ। ವೃಜನಾರಿ ಜೈನ ಧರ್ಮವನು ॥
ಸುಜನೈಕಬಾಂಧವ ಜಗದೊಳು ಪಸರಿಸಿ। ತ್ರಿಜಗದೊಳಗೆ ಕೀರ್ತಿಯನು ॥ ೬೮ ॥

ಹರಹು ನೀನೆಂದು ಮುಂಡಾಡುತ ಮುದ್ದಿಸಿ। ಮರಳಿ ಮರಳಿ ಬಿಗಿಯಪ್ಪಿ ॥
ಸುರ ಸಿಂಹಧ್ವಜನೆಂದನೆನ್ನಯ ಕಂದನೆ !। ಮುರುಕದಿ ನೆನೆ ಈ ಲೋಕದೊಳು ॥ ೬೯ ॥

ಅನುಪತ್ಯ ಬಂದಾಗ ನಾನು ನಡೆದು ಬಂದು। ಇನಿಸು ಬೇಗದಿ ಪರಿಹರಿಸಿ ॥
ಎನುತಾಗ ಜ್ಯೋತಿಪ್ರಭೆಯೆಂಬ ಹಾರವ। ಕನಕದಂಡೆಯುದ ಚಾಮರವ ॥ ೭೦ ॥

ತೋರಮುತ್ತಿನ ಮಣಿ ನಕ್ಷತ್ರ ಮಾಲೆಯು। ಹೀರ ಕಂಕಣಯುಗಲವನು ॥
ಚಾರುಕಿರೀಟವ ಕಾಮವಿಮಾನವ। ಸೂರಿದ ಹಾಸ ಖಡ್ಗವನು ॥ ೭೧ ॥

ಇವು ಮೊದಲಾದ ಪಲವು ದಿವ್ಯ ವಸ್ತುವ। ವಿನಯದಿಂದಲಿ ಕುವರನಿಗೆ ॥
ದಿವಿಜನ ಪ್ರಾರ್ಥಿಸಿ ತಾನಿತ್ತು ಬೀಳ್ಕೊಂಡು। ದಿವಿಜಲೋಕಕೆ ಪೋದನಿತ್ತ ॥ ೭೨ ॥

ದೇವನ ಪುಣ್ಯಾತಿಶಯವನು ನಿಟ್ಟಿಸಿ। ಶ್ರಾವಕರಿಂತು ನುಡಿದರು ॥
ಪಾವನ ಧರ್ಮವ ನಂಬಿದ ಮನುಜರ್ಗೆ। ದೇವತ್ವವೇನಗ್ಗಳವೇ ॥ ೭೩ ॥

ಪರಮ ಧರ್ಮವನೀವ ನಿರ್ವಾಣವಹುದೆಂದು। ವರ ಧರ್ಮವ ಭವ್ಯ ಜನರು ॥
ಅರಿದಾಂತರಲ್ಲಿ ಕೆಲಬರು ಭೂಪಾಲರು। ಧರಿಸಿದರಮಲ ದೀಕ್ಷೆಯನು ॥ ೭೪ ॥

ಪಾರಣೆ ದಿನದೊಳು ಯತಿಗಳ್ಗೆ ವಂದಿಸಿ। ಭೂರಮಣೇಶನಿಂತೆಂದು ॥
ಕಾರುಣ್ಯಮಾಳ್ಪುದು ನಿಮ್ಮ ಶೇಷಾನ್ನವ। ಭೂರಿಯೌಪಾಸಕರ್ವೆರಸಿ ॥ ೭೫ ॥

ಹರುಷದಿಂದುಂಬ ಭಾಗ್ಯವದೆಂದೆನೆ ನೃಪ। ಗುರುಜನ ಮುಗುಳ್ನಗೆಯಿಡಲು ॥
ಅರಿತದ ಜ್ಞಾನೇಂದು ನೃಪ ದಾನಶಾಲೆಲಿ। ತುರಿಹದಿಂದೆಡೆ ಮಾಡಿಸಿದನು ॥ ೭೬ ॥

ಚಿನ್ನದಿಂದವೆ ಮಾಡಿಸಿದ್ದೈದು ಸಾಸಿರ । ಉನ್ನತ ಕಾಲುಮಣೆಗಳ ॥
ಚೆನ್ನಿಗರೆರೆಯನು ಸಾಲಾಗಿ ಮಡಗಿಸಿ । ಹೊನ್ನಡ್ಡಣೆಗಳನಿರಿಸಿ ॥ ೭೭ ॥

ಇನಬಿಂಬಗಳು ಇಳಿದು ಬಂದು ಸಾಲಾಗಿ । ಮಿನಿ ಮಿನಿ ಮಿನುಗುತ ನಿಂದು ॥
ಮುನಿಗಳ ನೋಳ್ಪವೊ ಎಂದೆನೆ ಇರಿಸಿದ । ಕನಕದ ಪಾತ್ರೆಯೊಪ್ಪಿದವು ॥ ೭೮ ॥

ಭಾಮರಿಯಿಟ್ಟಾಗ ಮುನಿಗಣ ಬಿಜಮಾಡೆ । ಭೂಮಿಪಾಲಕ ತಾನೆ ನಿಲಿಸಿ ॥
ಹೇಮಾಚಲಗಳ ರವಿ ಬಲಗೊಂಬಂತೆ । ಮೂಮೆ ಪ್ರದಕ್ಷಿಣೆ ಬಂದು ॥ ೭೯ ॥

ಉದಕ ಶುದ್ಧಿಯನಿತ್ತು ಒಡಗೊಂಡರಸ ಬಂದು । ಪದಕಮಲಗಳನು ತೊಳೆದು ॥
ಹದಗೊಳಿಸಿ ಕಣ್ಣು ಮೂಗಿಗಾ ಜಲವನು । ಮದದೂರರಾಗೊಳಹೊಕ್ಕು ॥ ೮೦ ॥

ಕನಕವಿಷ್ಟರದೊಳು ವಿಜಮಾಡಿರಲಾಗ । ಕನಕಪುರಾಧಿನಾಯಕನು ॥
ಘನ ಭಕ್ತಿಯಿಂ ತಳಿರಡಿಗಳ ಪೂಜಿಸಿ । ಮನದಕ್ಕರಿಂ 'ನಮೋ' ಎನಲು ॥ ೮೧ ॥

ಮುನಿಜನಗಳಿಗೆ ಕೈಲೆತ್ತುವುದಕೆಯಾಗ- । ಲನುವಾಗಿ ಪಂಚ ಸಹಸ್ರ ॥
ಜನಪರು ಶ್ರಾವಕರುಗಳು ಬಂದಲ್ಲಲ್ಲಿ । ಮುನಿಗಳೊತ್ತಿಲಿ ನಿಂದಿಹರು ॥ ೮೨ ॥

ಅನ್ನಪಾನಂಗಳ ಶೋಧಿಸಿಕೊಂಡು ಗು- । ಣೋನ್ನತ ಸಿದ್ಧಭಕ್ತಿಯನು ॥
ಬಿನ್ನಾಣದಿಂ ಪೇಳೆ ಜಯಘಂಟೆ ಧಣಧಣ- । ರೆನ್ನುತ ಮೊಳಗಿದವಾಗ ॥ ೮೩ ॥

ತಂದು ತಂದಾಗ ಶ್ರಾವಕರು ಕೊಡುತಲಿರೆ । ಯಿಂದರಸನ ಪಾಣಿಗಳಿಗೆ ॥
ಅಂದೆತ್ತಲು ರಾಯನು ಮುನಿಗಳಿಗಾ- । ನಂದದಿಂ ಕೊಂಡರೇನೆಂಬೆ ॥ ೮೪ ॥

ಅತಿರಸವನು ಶರ್ಕರೆ ಫೇಣಿಗಳನು । ಯತಿಗಳ ಹಸ್ತಕಿಕ್ಕುವನು ॥
ಅತಿಶಯದಿಂ ಕೊಳೆ ಶರ್ಕರೆ ಪಾನವ । ಮತಿವಂತರಿಗೆ ಕೊಡುವನು ॥ ೮೫ ॥

ಕಜ್ಜಾಯವನು ಕೊಂಡು ದಣಿಯಲು ಯತಿಗಳು । ಸಜ್ಜಿಗೆ ಪಾಯಸವಾದಿ ॥
ಸಜ್ಜಾದ ಪಾಯಸಗಳಿಗೆ ಸಕ್ಕರೆ ಹಾಕಿ । ಪಜ್ಜಳಿಸುತ ಮಗಮಗಿಪ ॥ ೮೬ ॥

ಘೃತ ಮಿಶ್ರಿತ ಮಾಡಿಯತ್ಯಂತ ಭಕ್ತಿಯಿಂ । ಯತಿಗಳ ಪಾಣಿಗೆ ನೀಡೆ ॥
ಯತಿನಾಥರುಂಡು ಘರ್ರನೆ ತೇಗಿದರು ಭೂ- । ಪತಿಯ ಭಕ್ತಿಗೆ ತಾವು ಮೆಚ್ಚಿ ॥ ೮೭ ॥

ಹಲಸಿನ ಪಣ್ಗಳ ಬಾಳೆಯ ಪಣ್ಗಳ । ಪಲಬಗೆಯಾಮ್ರಪಣ್ಣುಗಳ ॥
ಕಲಸಿ ತುಪ್ಪದೊಳು ವಿನಯದಿಂದ ಯತಿಗಳ । ಚೆಲುವ ಹಸ್ತಕೆ ನೀಡುವನು ॥ ೮೮ ॥

ಶಾಳಿಕಾರನು ಚಂದಕದ್ದಂತೆ ಜ್ಞಾನೇಂದು । ಲೀಲೆಯಿಂ ಯತಿಗಳಿಗೆಲ್ಲ ॥
ಪೇಳುವೆನೇನತಿ ಚಮತ್ಕಾರದೊಳಾಗ । ಮೇಳೈಸಿ ತೋವೆಯನ್ನವನು ॥ ೮೯ ॥

ಪಾಣಿಗಳೊಳಗಿಕ್ಕಿಕೊಂಡು ಬರುವ ಮತ್ತೆ । ಪಾನ ಪಳಿದ್ಯವೆತ್ತುವನು ॥
ಮೌನದಿಂ ಸಾಕೆಂದರು ನಿಲ್ಲದೆ ಮತ್ತೆ । ತಾನೆತ್ತುವ ತುಪ್ಪವೆರಸಿ ॥ ೯೦ ॥

ಚಿಲುಪಾಲು ಬಟ್ಟವಾಲೆಣ್ಣವಾಲುಗಳನು । ಚೆಲುವರರಸ ಮುನಿಗಳಿಗೆ ॥
ಬಲುಹಿಂದ ಸಮನಿಸಿ ಸಮನಿಸಿಯೆತ್ತುವ । ನಲಿದು ನಲಿದು ಮತ್ತೆ ಮತ್ತೆ ॥ ೯೧

ಎಮ್ಮೆಯ ಘಟ್ಟಿ ಮೊಸರ ಕೆನೆವೆರಸಿದ । ಕಮ್ಮಗಳವೆಯನ್ನಗಲಿಸೆ ॥
ಸುಮ್ಮಾನದಿಂದೆತ್ತುವನೊಲ್ಲೆವೆಂದರೆ । ದಮ್ಮಯ್ಯಯೆಂದಿಕ್ಕುವನು ॥ ೯೨

ಅರಸನ ಭಯ ಭಕ್ತಿ ವಿನೋಕ್ತಿಯ ಕೇಳಿ । ಗುರುರಾಯ ದಾಕ್ಷಿಣ್ಯದೊಳು ॥
ಪರಿಪೂರ್ಣವಾಗಿದ್ದರು ಮಿರಲಾರದೆ । ಕಿರಿದು ಕಿರಿದು ಭುಂಜಿಪರು ॥ ೯೩

ಕಡೆಯೊಳು ತವರಾಜ ಶರ್ಕರ ಪಾನವ । ಬಿಡದೆತ್ತಿಯುಷ್ಣೋದಕವ ॥
ಪೊಡವಿಪನೆತ್ತಿ ಪಾಣಿಗೆ ಲವಂಗವ । ಪುಡಿಯನು ಮೊಗಶುದ್ಧಿಗಿತ್ತು ॥ ೯೪

ಮುಗುಳಿಯೆ ಕಂಠ ಶುದ್ಧಿಗೆ ಬಿಸಿ ನೀರನು । ತೆಗೆದುಕೊಂಡಾ ಮುನಿಗಣವು ॥
ಮುಗುಳೆಂಬ ಮರ್ದನ ಜಿನನ ನೆನೆದು ಮತ್ತೆ । ಪೊಗಳ್ದಕ್ಷಯ ದಾನ ಫಲಮಂ ॥ ೯೫

ಕಡು ಭಕ್ತಿಯಿಂ ಪಂಚಮುಷ್ಟಿಯಿಂ ಜ್ಞಾನೇಂದು । ಬಿಡದೆ ನಮೋಸ್ತುವ ಮಾಡಿ ॥
ಪೊಡವಿಯುಳಿದು ಕಡೆಯೊಳು ಮುಪ್ಪೊಡವಿಯ- । ನೊಡನೆ ನೀನಾಳೆಂದು ಪರಸಿ ॥ ೯೬

ಪಾರಣೆ ವೇಳೆಯಾಯ್ತೆಂದಾಗ ಮುನಿಗಳು । ಭೂರಮಣೇಶಗೆ ಪೇಳೆ ॥
ಧಾರುಣೀಶ್ವರರೊಡಗೊಂಡು ರಾಜೇಂದ್ರನು । ಭೂರಿಯೌಪಾಸಕರ್ವೆರಸು ॥ ೯೭

ಒಂದೇ ಪಂಕ್ತಿಯೊಳಾರೋಗಣೆಯನು ಮಾಡಿ । ವೃಂದಾರಕನ ನೆನೆವುತ ॥
ಸೌಂದರಾಂಗನು ಮುನಿಗಳಿಗಾನತನಾಗಿ । ಚಂದದಿಂ ಕುಳಿತುಕೊಂಡಿರಲು ॥ ೯೮

ಆ ಸಮಯದೊಳು ರೋರುಕಪುರೇಶನು । ಸೂಸುತ ಮುಗುಳುನಗೆಯನು ॥
ವಾಸವ ಸದೃಶಗೆರಗಿಯಿಂತೆಂದನು । ಶ್ರೀ ಸುರಗಿರಿಯೊಳು ಮೆರೆವ ॥ ೯೯

ಸಾಸಿರ ಕೂಟದ ಮಣಿಮಯ ಚೈತ್ಯಾ- । ವಾಸದ ಮುಂಭಾಗದೊಳು ॥
ನೇಸರಹಬೆ ಪೋಗಲವಕಾಶವಿಲ್ಲದ । ಭಾಸುರಾರಣ್ಯದೊಳೋರ್ವ ॥ ೧೦೦

ಕಡು ಭಯಂಕರ ಮೂರ್ತಿ ಕಾಳರಕ್ಕಸನಿರ್ಪ । ಪೊಡವಿಯ ಜನಗಳರಿಯದೆ ॥
ಅಡಿಯಿಡಲಾ ವನಕವರನು ಕಾಣುತ । ಕೆಡುಕ ಮುನಿಸ ತಂದು ಮನಕೆ ॥ ೧೦೧

ಘುಡಿಘುಡಿಸುತ ನಡುನಡುಗುತ ಕರದಿಂದ । ಪೊಡವಿಯ ಪುಯ್ವಪ್ಪಳಿಸುತ ॥
ಬಡಿವನು ದಾಣೆಯಿಂದದರಿಂದ ನಭವನು । ತುಡುಕುವ ಜಿನಗೃಹಕ್ಕೈದಿ ॥ ೧೦೨

ಜಿನಪನ ಪೂಜೆಯ ಮಾಡಲು ಪಡೆಯದೆ । ಘನ ಭೀತರಾಗಿ ಶ್ರಾವಕರು ॥
ಮನದೊಳು ಮರುಗುತ ಕುದಿವುತಲಿರ್ದರು । ಜನನಾಥ ಚಂದ್ರಮನೆನಲು ॥ ೧೦೩

ವಿನಯಾನ್ವಿತ ಜಯವರ್ಮನ ನುಡಿಗೇಳಿ । ಕನಕಪುರಾಧಿನಾಯಕನು ॥
ಮುನಿಗಣದಡಿಗಳ್ಗೆ ಚಾಚಿ ತನ್ನಳಕವ । ಘನ ಭಕ್ತಿಯೊಳು ಬೀಳ್ಕೊಂಡು ॥ ೧೦೪

ರತ್ನವಿಮಾನವನಾತುರದಿಂದೇರಿ । ಚೆನ್ನಿಗನಾಕಾಶದೊಳಗೆ ॥
ಉನ್ನತ ಸುರಗಿರಿ ಶಿಖರದ ಮೇಲಿರ್ದ । ಸನ್ನುತ ಜಿನಪನ ಗೃಹದ ॥ ೧೦೫ ॥

ಮುಂದೆ ರಾರಾಜಿಪ ನಂದನವನಕಾಗಿ । ಬಂದು ವಿಮಾನವನಿಳಿದು ॥
ಸೌಂದರಾಂಗನು ಜ್ಞಾನೇಂದು ವನವ ಪೊ- । ಕ್ಕಂದು ತಾ ಬರುತಿರಲವನ ॥ ೧೦೬ ॥

ಕಿಂಕರ ಜನವನು ಕಂಡಾ ರಕ್ಕಸ । ಭೋಂಕನೈತಂದು ನುಡಿದನು ॥
ಶಂಕಿಸದಿವರಾರೋ ವನದೊಳು ಬರುವರು । ನೂಂಕಿರೊ ಕತ್ತನು ಪಿಡಿದು ॥ ೧೦೭ ॥

ನಾನಿರ್ದ ವನವೆಂದು ಹೆದರದೆ ಬರುತಿರ್ದ । ಮಾನವರುಗಳಗ್ಗಳವ ॥
ಏನ ಪೇಳುವೆ ನನ್ನ ಪೌರುಷಕಳುಕದ । ಹೀನ ನರನ ಕಟ್ಟಿ ಕೆಡಹಿ ॥ ೧೦೮ ॥

ಹೊಸೆಯಿರೋ ಕಾಲೊಳು ಹಂಜಿಯ ಹೊಸೆವಂತೆ । ಎಸೆಯಿರೊ ತಲೆ ಪರಿವಂತೆ ॥
ಹೆಸೆಹಿರೋ ಹತ್ತಿಯ ಹೆಸೆವಂತೆ ದುಷ್ಟನ । ಕುಸುರಿಂದರಿಯಿರೊ ಬಾಳುಗಳಿಂ ॥ ೧೦೯ ॥

ಬಿಸಿಯ ರಕುತವನು ಕುಡಿಯಿರೋ ಎಂದಾಗ । ಮುಸಿ ಮುಸುಡನು ಗದೆವಿಡಿದು ॥
ಕುಸುಕಿರುವುತ ಗುಡುಗುಡಿಸುತ ನುಡಿವುದ । ವಸುಧಾಧೀಶ್ವರ ಕೇಳಿ ॥ ೧೧೦ ॥

ಮನಕೆ ಮುನಿಸ ತಂದು ಎಲವೊ ಪಿಶಾಚನೆ ! । ಶುನಕನು ಚಂದ್ರನ ಕಂಡು ॥
ಘನವಾಗಿ ಬಗುಳುವಂದದಿ ನೀ ಗಳುಪಿದೆ । ನಿನಗೆ ಪೌರುಷವುಂಟೊಡೆಯು ॥ ೧೧೧ ॥

ನನಗಿದಿರಾಗೆಲೋ ನಿನ್ನನು ಧರೆಯೊಳು । ಧನುಜರು ಮೆಚ್ಚುವಂದದೊಳು ॥
ಇನಿಸು ಬೇಗದೊಳಪ್ಪಳಿಸಿ ಹಾಕುವೆನೆಂದು । ಮನುಜೇಶ ನುಡಿಯಲಾ ನುಡಿಯ ॥

ಅಸುರನು ಕೇಳಿ ಮಿಡಿಮಿಡಿ ಮಿಡುಕುತ । ಹೊಸೆವುತ ತನ್ನ ಮೀಸೆಯನು ॥
ಉಸುರಿಗುಬ್ಬಸವ ಮಾಡದೆ ನಿನ್ನ ಬಿಡೆನೆಂದು । ಮುಸಲ ತಿರುಪುತ ಕೋಪದೊಳು ॥

ಧರೆಯಾಕಾಶವ ಪಟ್ಟುಗೊಳುತಲಿರ್ದ । ಕರಿಕಾಂಗದ ಕೆಂಗಣ್ಣ ॥
ಹೆರೆಯಾಕಾರದ ಕೋರದಾಡೆಯನುಳ್ಳ । ಹರಿಯುಂದದ ಮುಸುಡುಗಳ ॥ ೧೧೪ ॥

ಕರಭೀಕರ ಮೂರ್ತಿ ಹೂಂಕರಿಸುತ ತಾನು । ಮರನೊಂದ ಹೆಗಲೊಳಗಿಟ್ಟು ॥
ಮೊರೆವುತ ಬಂದು ಜ್ಞಾನೇಂದು ಕುಮಾರನ । ಭರದಿಂದ ಬಡಿಯಲು ನೃಪತಿ ॥ ೧೧೫ ॥

ಕಡು ಬೇಗದಿಂದ ಹೊಳೆದು ಕಂಕುಳೊಳಾಂಕಿ । ಹಿಡಿದ ಕರದ ಮೇಲೆ ಗುದ್ದೆ ॥
ಕೊಡಹಿಕೊಳುತ ರಕ್ಕಸ ಮಲ್ಲಯುದ್ಧಕೆ । ತೊಡಗಿದ ಮರವನು ಬಿಟ್ಟು ॥ ೧೧೬ ॥

ಎಡಗಾಲಿಂದೆತ್ತಿ ಗೈರಿಕೆ ಧೂಳನು । ಒಡನೆ ಕರದೊಳು ತಾವಾಂತು ॥
ತೊಡೆದುಕೊಳ್ಳುತ ಮೈಗೆ ಭುಜವನಾಸ್ಫಾಳಿಸಿ । ತೊಡೆಯ ತಟ್ಟುತನೆಡಗಾಲ ॥ ೧೧೭ ॥

ಮುಂದಕೆ ನೀಡುತ ಬಲದ ಚರಣವನು । ಹಿಂದಕೆ ತೆಗೆದು ಮಡುಗುತ ॥
ಮಂದರಗಿರಿ ನೀಲಗಿರಿಗಳೆರಡುಗಳು ! ಚಂದದಿಂ ಹೋರಾಡುವಂದದೊಳು ॥ ೧೧೮ ॥

ಪೊಣ್ಣ ಪೊಣ್ಣನೆಯಿತ್ತತ್ತಲು ನೆಗೆವುತ । ಬಣ್ಣಿಸಿ ಭಳಿರೆ ಭಾಪೆನುತ ॥
ಮಣ್ಣ ತೆಗೆದು ಅಡಿಗಡಿಗೆ ಮೈದೊಡೆವುತ । ತಿಣ್ಣನೆ ನಗುತುಬ್ಬುತಲಿ ॥ ೧೧೯ ॥

ಬನವೆಯುಂಕದ ಕಣವಾಗಲು ನಿರ್ಜ್ಜರ । ಧನುಜ ಮಿಗಂಗಳ ನೋಳ್ಪ ॥
ಮನುಜೇಶ ಸಭೆಯಾಗೆ ದೈತ್ಯನು ಭೂಭುಜ । ಘನ ಜಗಜಟ್ಟಿಗಳಾಗೆ ॥ ೧೨೦ ॥

ತೀವಿ ಗಾಯವ ತಪ್ಪಿಸಿ ಹೊಡೆದಾಡುತ । ಪವಿಯಂತೆ ಗಜರಿ ಘರ್ಜ್ಜಿಸುತ ॥
ತವಕದಿಂ ಕುಸಿವುತ ಹಿಂದಕೆ ಚಿಗಿವುತ- । ಲವರು ತೋಳೊಳು ತೋಳ ತೊಡರಿ ॥ ೧೨೧ ॥

ದಂಡೆಗಳನು ಒತ್ತಿಯಾಡಿದರವರು ವೇ- । ತಂಡಗಳ್ಸುಂಡಿಲ ಸುತ್ತಿ ॥
ಲಂಡತನದಿ ರದನದೊಳು ರದನವಿಟ್ಟು । ಮಂಡಲದೊಳು ಹೆಣಗುವೊಲು ॥ ೧೨೨ ॥

ಗೋರಿ ಕಲ್ಲುಗಳೆಲ್ಲ ತುಳಿದಾಟದೊಳಾಗ । ತೂರಿಗಳಾಗಿ ಕಿಡಿಗಳು ॥
ಹಾರುತಿರಲು ಕೆಂಡದೋಕುಳಿಗಳನಾಗ । ಧೀರರು ಮಾಳ್ಪಂತಿಹುದು ॥ ೧೨೩ ॥

ದಂಡೆಯನೊತ್ತುತ ಗುಹ್ಯಕನನು ಭೂ- । ಮಂಡಳೇಶ್ವರ ನೂರು ಮಾರು ॥
ಕೊಂಡು ಹಿಂದಕೆ ನೂಕುವ ವೇತಾಳನು । ಗುಂಡನು ನೂಕುವಂದದೊಳು ॥ ೧೨೪ ॥

ವಸುದೇಶನ ಹಿಂದಕೆ ನೂಂಕಲಾರದೆ । ಅಸುರನು ಹುಯಿವುತಳ್ಳೆಯನು ॥
ಉಸಿರನು ಹಿಂದಕೆ ಮುಂದಕೆ ತೆಗೆವುತ । ಶಶಿನಕೆ ತಂದು ನಿಲ್ಲಿಸುವ ॥ ೧೨೫ ॥

ಅವುಕಿದರ್ಕುಸಿವರು, ಕುಸಿದರೆತ್ತುವರಿಂತು । ತವಕದಿಂ ಹೋರಾಡುತಿರಲು ॥
ಭುವನೇಶ ರಟ್ಟೆಗಳನು ಪಿಡಿದೌಕಲು । ತವಕದಿಂದಲಿ ಹೌವೆನುತ ॥ ೧೨೬ ॥

ಧನುಜನು ಕೆಡೆಯಲು ಭೂಮಿಯೊಳ್ ಜ್ಞಾನೇಂದು । ಇನಿಸು ಬೇಗದಿ ಎತ್ತಿ ಪಿಡಿವ ॥
ಧನುಜನು ಮನುಜೇಶನು ಇಂತು ಕೆಲಬೊತ್ತು । ಘನವಾಗಿ ಕಾದಿಯಾಡಿದರು ॥ ೧೨೭ ॥

ಭಳಿರೆ ! ತಪ್ಪಲ್ಲ ಮನುಜರೊಳಗಿಂತಪ್ಪ । ಕಲಿಗಳ ಕಂಡುದಿಲ್ಲೆಂದು ॥
ನಲಿವುತ ಬಂದು ರಕ್ಕಸ ರಾಜೇಂದ್ರನ । ಬಲು ಭುಜವನು ತನ್ನ ಭುಜದಿ ॥ ೧೨೮ ॥

ಅಣಿಯಲು ಉಕ್ಕಿನ ಗಿರಿಯನು ತಾಗಿದ । ತೃಣಕೃತ ಬೊಂಬೆಯಂದದೊಳು ॥
ನೆಣವು ಮೇಲಕೆ ಹೊರವಂಟು ರಕುತ ಸೂಸೆ । ಕ್ಷಣದೊಳು ಹಿಮ್ಮೆಟ್ಟಿದನು ॥ ೧೨೯ ॥

ದೊರೆ ವಜ್ರಮುಷ್ಟಿಯಿಂ ಧನುಜನ ಶಿರವನು । ಭರದಿ ಸಾಣಿಯೆ ಕಡು ನೊಂದು ॥
ಕಿರಿವುತ ಕಪಿಯಂತೆ ಪಲ್ಗಳ ಕರದಿಂದ । ಶಿರವ ತಡಹಿಕೊಂಬ ಧನುಜ ॥ ೧೩೦ ॥

ಕಡು ಕೋಪದಿಂ ರಕ್ಕಸ ವಜ್ರಮುಷ್ಟಿಯಿಂ । ಪೊಡವಿಪನೆದೆಯೊಳು ತಿವಿಯೆ ॥
ಒಡೆಯಲು ಕೈಗೊಡಹುತಲುಪ್ಪುಪ್ಪೆಂದು । ಒಡನೆ ಬಾಯಿಗೆ ತಂದುರುಹುವ ॥ ೧೩೧ ॥

ಧನುಜನು ವಜ್ರಮುಷ್ಟಿಯ ಮಾಡಿ ತಿವಿಯಲ । ಮನುಜೇಶ ಹೊಡೆದು ಮತ್ತವನ ॥
ಘನವಾಗಿ ತಿವಿಯಲು ಹೊಡೆವುತ ರಕ್ಕಸ । ಇಳೆಯಾಣ್ಮನನು ತಿವಿದನು ॥ ೧೩೨ ॥

ಈ ರೀತಿಯಲಿ ಕಾದುತಿರಲು ರಾಜೇಂದ್ರನು । ಸೇರಿಯುವನ ಸಮೀಪವನು ॥
ಶೂರನು ತಾಟುಗಾಲನು ಹುಯ್ದು ಕೆಡಹಲು । ಬೇರುವರಿದ ಮರದಂತೆ ॥ ೧೩೩ ॥

ಧರೆಯೊಳು ಕೆಡೆವಂತೆ ರಕ್ಕಸ ಕೆಡೆಯಲು । ಮರುಳು ತಂಡಗಳೆಲ್ಲ ನಡುಗಿ ॥
ಇರಲಮ್ಮದೆ ದಿಕ್ಕು ದಿಕ್ಕಿಗೆ ಕೆಡೆ ಬಿದ್ದು । ಬಿರಿತೋಡಿದವೇನೆಂಬೆ ॥ ೧೩೪ ॥

ಕಿಡಿ ಕಿಡಿ ಕಾರುತ ರಕ್ಕಸನೈತಂದು । ಪೊಡವಿಪತಿಯ ಸುತ್ತಿಕೊಂಡು ॥
ಕೆಡಹಿ ಮೇಲಾಗಲು ತಪ್ಪಲ್ಲ ವೇತಾಳ । ಕಡುಗಲಿಯಹುದು ನೀನೆಂದು ॥ ೧೩೫ ॥

ದೊರೆರನ್ನ ತನ್ನಯೆದೆಯ ಮೇಲಕೆ ಚಿಮ್ಮೆ । ಗಿರಿಯೊಳು ಹೊಡೆದ ಕಂದುಕವು ॥
ಭರದಿ ಮೇಲಕೆ ಪುಟನೆಗೆವಂತೆ ವೇತಾಳ- । ನರು ಮೂರು ನೆಗೆದು ಕೆಡೆದನು ॥ ೧೩೬ ॥

ಅರಮಗನವನ ಕೆಳಗು ತಾ ಮಾಡುತ । ಉರದೊಳು ಮುಷ್ಟಿಯಿಂ ತಿವಿಯೆ ॥
ಭರದಿಂದ ರಕ್ಕಸನಡಿ ಮೇಲಾಗುತ । ಉರುಳಿಯಾಡಿದರಂತವರು ॥ ೧೩೭ ॥

ರಾಕ್ಷಸ ಕಡು ಕೋಪದಿಂ ಕುವರನ ಎತ್ತಿ । ಕಕ್ಷದೊಳಮರಿಸೆಯೌಂಕಿ ॥
ದಕ್ಷತನದಿ ಉಕ್ಕಿನ ಬೊಂಬೆಯೌಕಿದ । ವೃಕ್ಷದ ಬೊಂಬೆಯಂದದೊಳು ॥ ೧೩೮ ॥

ಸಿಡಿಮಿಡಿಗೊಳುತಿರೆ ರಕ್ಕಸನರಸನು । ಒಡನೆ ಜಗುಳಿ ಗುಹ್ಯಕನ ॥
ಜಡೆಯನು ಪಿಡಿದೌಂಕುತ ಮೇಲಕೆತ್ತುತ । ಪೊಡವಿಯೊಳೆತ್ತಿ ಬಿಸುಟನು ॥ ೧೩೯ ॥

ಪಿರಿದಪ್ಪಕೋಪದಿಂ ಧನುಜನು ಧನುವಾಂತು । ಸರಳ ಮಳೆಯನು ಕರೆಯಲು ॥
ನೆರಿಗಲಿ ಬರುವ ಬಾಣಂಗಳ ನಿವಹವ । ತರಿದನು ಒಂದಂಬಿನಿಂದ ॥ ೧೪೦ ॥

ಅದ ಕಂಡು ದಾನವೇಶ್ವರ ಗದೆಗೊಂಡಾಗ । ಅದಟನು ಬೀಸಿ ಒಗೆಯಲು ॥
ಬೆದರದೆ ತಪ್ಪಿಸಿ ನಡುವಿಗೆ ಖಡ್ಗದಿಂ । ಕದನಕಂಠೀರವ ಪೊಯ್ಯೆ ॥ ೧೪೧ ॥

ನಡು ಕತ್ತರಿಸಿ ತುಂಡೆರಡಾಗಿ ಬೀಳಲು । ಒಡನೆ ರಕ್ಕಸ ರೂಪೆರಡ ॥
ಪಡೆ, ಭೋ ಎಂದಾಲುತ ಬಂದು ಮುಸುಕಲು । ಕಡಿದನು ನಾಲ್ಕು ತುಂಡಾಗಿ ॥ ೧೪೨ ॥

ಧರೆಯೊಳು ನಾಲ್ಕು ತುಂಡಾಗಿ ಬೀಳಲು ದೈತ್ಯ । ತುರಿಹದಿಂ ನಾಲ್ಕು ರೂಪುಗಳ ॥
ಧರಿಸೆ ಸರಳುಗಳ ಮಳೆಯನು ಸುರಿಯಲು । ದೊರೆ ಎಂಟು ತುಂಡಾಗಿ ಕಡಿದ ॥ ೧೪೩ ॥

ತುಂಡುಗಳೆಂಟಾಗಿ ಧರೆಯೊಳು ಕೆಡೆದಾಗ । ಮುಂಡವೀರೆಂಟುರೂಪಾಂತ ॥
ದಂಡವಿಡಿದು ಭೋ ಭೋಯೆಂದಾಲುತ । ಲಂಡತನದಿ ಈರೆಂಟು ॥ ೧೪೪ ॥

ವೇತಾಳಗಳಾಗಿ ಜ್ಞಾನಚಂದ್ರಮನನು । ಭೂತಗಳೆಲ್ಲವು ಮುತ್ತೆ ॥
ಭೂತಳೇಶ್ವರನು ಕಡಿಯಲು ಕೋಪದಿ ಮ- । ತ್ತೀ ತೆರದೊಳು ಹೆಚ್ಚುತಲಿ ॥ ೧೪೫ ॥

ಅಸುರರೂಪಾಂತು ಧನುಜ ಬರಲದ ಕಂಡು । ವಸುಧೇಶನಿದು ಮಾಯೆಯೆಂದು ॥
ಪೆಸರಾದ ಪರವಿದ್ಯಾಚ್ಛೇದಿನಿಯೆಂದೆಂ- । ಬಿಸುವಿಂದ ಮಂತ್ರಿಸಿಯಿಡಲು ॥ ೧೪೬ ॥

ಧನುಜನ ಮಾಯೆಯ ರೂಪೆಲ್ಲ ಬಯಲಾಗೆ । ಮುನಿಸ ಮನಕೆ ತಂದಸುರನು ॥
ಮನುಜ ! ಕೇಳೆಲೊ ನನ್ನ ಬನದ ಸೀಮೆಯು ಬಿಟ್ಟು । ಇನಿಸು ಬೇಗದಿ ಪೋಗದಿರಲು ॥
ಇಂದಿನ ದಿನದೊಳು ಸುರಗಿಯು ಮೊನೆಯಿಂದ । ತುಂದಿಲ ಸೀಳಿ ಕರುಳನು ॥
ಸುಂದರಾಂಗಿಯರ ಕಂಠದೊಳು ಸುತ್ತದೆ ಬಿಡೆ- । ನೆಂದು ಕೋಪದಿ ದೈತ್ಯ ಮುನಿದು ॥
ಮೊರೆವುತ ನಡೆತಂದು ಲಂಘಿಸಿ ತನ್ನಯು । ಸುರಗಿಯಿಂದಿರಿಯೆ ಜ್ಞಾನೇಂದು ॥
ನೆರೆಗಲಿ ವಾಮಕರದಿ ಪಾರು ಹೊಡೆದಾಗ । ತಿರುವುತ ಭೈರವ ಗದೆಯ ॥ ೧೪೯ ॥
ಅವನಂಗ ನುಗ್ಗೇಳುವಂತೆ ಕಡಿವೆನೆಂದು । ಭುವನೇಶ ಗದೆಯೆತ್ತುವಾಗ ॥
ತವಕದಿಂ ಗುಹ್ಯಕನು ನೃಪನ ಬೀರವ ಕಂಡು । ಭುವನವಲ್ಲಭ ! ಹೋ ಹೋ ನಿಲ್ಲು ॥
ಹವಣಿಸು ಕೋಪಾಟೋಪವ ಮನುಜೇಂದ್ರ ! । ರವಿಸಮತೇಜ ಕೃಪಾಲ ! ॥
ಭುವನೈಕವೀರ ! ನಿನ್ನಯ ಕೋಪಕೆ ನಾನು । ಹವಣೇ ಬಂಟರ ತಲೆವಣಿಯೆ ! ॥ ೧೫೧ ॥
ನಿನ್ನಂಗವು ಸೋಂಕೆ ನನ್ನ ಶರೀರವು । ನನ್ನಿಯಿಂ ಪಾವನವಾಯ್ತು ॥
ಸನ್ನುತ ಸಿದ್ಧರಸವ ಸೋಂಕಿದ ಲೋಹ । ಉನ್ನತ ಮಿಸುನಿಯಪ್ಪಂತೆ ॥ ೧೫೨ ॥
ಉರಗೇಂದ್ರ ದೇವೇಂದ್ರ ನಿನ್ನಯ ಬೀರಕೆ । ಸರಿಯಲ್ಲವೆನೆ ಲೋಕದೊಳು ॥
ನರಜರು ತೃಣಗಳು ನಿನ್ನ ಪಾದದ ಕಿರು- । ವೆರಳ ಹೋಲುವರೆ ಮಹಾತ್ಮಾ ! ॥ ೧೫೩ ॥
ಎಂದು ರಕ್ಕಸ ನಾನಾ ತೆರದಿಂದ ಭೂ- । ಪೇಂದ್ರನ ಕೊಂಡಾಡಿ ಕೊನರೆ ॥
ಮಂದಸ್ಮಿತದಿಯಾನಂದವ ತಾಳಿ ಜ್ಞಾ- । ನೇಂದು ಭೂಭುಜ ರಾಜಿಸಿದ ॥ ೧೫೪ ॥
ಕುಂಡಲ ಮಂಡಿತ ಮಂಡಲೇಶ್ವರನತ । ಪುಂಡರೀಕಾಯತನೇತ್ರ ॥
ಶುಂಡಾಲ ಸಮದಾನಿ ಜ್ಞಾನೇಂದುವೊಪ್ಪಿದ । ಖಂಡಿತಾರಾತಿಮಂಡಲನು ॥ ೧೫೫ ॥

**॥ ಅಂತು ಸಂಧಿ ೩೫ಕ್ಕಂ ಪದ ೪೭೧೯ಕ್ಕಂ ಮಂಗಲಂ ॥**

## ಬೇತಾಳನ ಭವಾವಳಿ.

ಜ್ಞಾನೇಂದುವೊಡನೆ ರಕ್ಕಸ ತನ್ನ ಮೊದಲಿನ । ಹೀನಭವವ ಪೇಳ್ದುದೊರೆವೆ ॥ಪ॥
ಘಾತಿಯ ತೆರೆ ಜಾರೆ ಸಮವಸರಣದಲ್ಲಿ । ಸಾತೋದರಿ ಮುಕ್ತಿರಮೆಯ ॥
ಪ್ರೀತಿಯಿಂ ಕೈಗೂಡಿಸಿಕೊಂಡ **ಶಾಂತೀಶ** ! । ಜ್ಯೋತಿಯಾಗೆನ್ನಘತಮಕೆ ॥ ೧ ॥
ದುರಿತೇಭ ಕಂಠೀರವ ಕೃಪಾಂಬುಧಿ । ಮರೆಹೊಕ್ಕರ ಕಾವ ದೇವ ॥
ದೊರೆರನ್ನ ಜ್ಞಾನೇಂದು ! ನನ್ನ ಬಿನ್ನಹವನು । ಪರ ಚಿತ್ತವಿಲ್ಲದಾಲಿಪುದು ॥ ೨ ॥

ಉರಗಲೋಕದೊಳು ಸುವರ್ಣವೆಂದೆನಿಸುವ । ನೆರೆವ ಮೂರನೆಯ ಕುಲದೊಳು ॥
ದೊರೆ ! ಕೇಳು ಪಳಿತೋಪಮದ ಜೀವಿತಮುಳ್ಳ- । ದರ ವೇಣು ಕುವರವೆಂದೆಂಬ ॥ ೩ ॥

ಸುರುಚಿರ ನಾಮವನಾಂತು ನಾನಿರುತಿರೆ । ವರ ಸಿತ ಫಾಲ್ಗುಣ ಮಾಸ ॥
ಬರಲಾ ನಂದೀಶ್ವರದಷ್ಟಮಿಯೊಳು । ಮೆರೆಯುವ ಸಾಸಿರಕೂಟ ॥ ೪ ॥

ಜಿನಗೃಹವನು ಪೊಕ್ಕತ್ಯಂತ ಭಕ್ತಿಯಿಂ । ಜಿನಬಿಂಬಗಳ ಸೂರೆಂಟ ॥
ಮನಮುಟ್ಟಿ ನುತಿಗೈದು ಪೂಜೆಯ ಮಾಳ್ಪಾಗ । ಮನಸಿಜಮರ್ದನನೋರ್ವ ॥ ೫ ॥

ಮುನಿರಾಜ ಕುಂಜರನಿಲ್ಲಿಗೆ ನಡೆತಂದು । ಜಿನರಿಗೆರಗಿ ಕೊಂಡಾಡಿ ॥
ಮಿನುಗುವ ಮುಂದಣ ರನ್ನಮಂಟಪದೊಳ- । ಗನುಪಮ ಪಳುಕಿನರೆಯೊಳು ॥ ೬ ॥

ಓಲಗಗೊಟ್ಟಿರ್ದ ಯಮಧರ ಮುನಿಪಗೆ । ಲೀಲೆಯಿಂ ವಂದಿಸಿ ನಾನು ॥
ಕೇಳಿದೆನೆನಗಾಯುವಿನ್ನೆಷ್ಟು ದಿನಮುಂಟು । ಮೇಲಾನೆಲ್ಲಿ ಪುಟ್ಟುವೆನು ॥ ೭ ॥

ಕಳೆದೆನ್ನ ಭವಗಳ ನಿರವಿಸಬೇಕೆನೆ । ನಳಿನಾಸ್ತ್ರ ಮದದೂರ ಯಮಿಯು ॥
ಗಳಿಲನಿಂತೆಂದು ನಿರೂಪಣಗೊಟ್ಟನೀ । ಪೊಳೆವ ಬಸದಿ ಮುಂಭಾಗದೊಳು ॥ ೮ ॥

ಕಾನನಮುಂಟಲ್ಲಿ ನೀನಿರೆ ನಿನ್ನ ಬಂ- । ದಾನದೆ ಜಯಸಿದ ನೃಪಗೆ ॥
ಸೂನು ನೀನಾಗುವೆ ನಿನ್ನಾಯುಷ್ಯವು । ಹಾನಿ ಮುಂದರುದಿಂಗಳಿಗೆ ॥ ೯ ॥

ಎಲೆ ದೇವನೆ ! ನೀನು ಪೂರ್ವದ ಭವದಲ್ಲಿ । ವಿಲಸಿತ ಸಾಲಿಗ್ರಾಮದೊಳು ॥
ನೆಲೆವಾಳಿಗನಾಗಿ ಶಿವಶರ್ಮವೆಸರಾಂತು । ಬಲವಿಪ್ರನಾಗಿರುತಿರಲು ॥ ೧೦ ॥

ಬಳಲಿದ ಮುನಿಪನ ದೇಹದ ಬೆಮರಿನ । ಬಲು ವಾಸನೆ ಗಾಳಿಯಿಂದ ॥
ಗಳಿಲನೆ ನಿನ್ನ ಮೊಗಕೆ ಬಂದು ತೀಡಲು । ಪಳಿದು ಮುನಿಯ ಕೋಪದಿಂದ ॥ ೧೧ ॥

ಊರಿಂದ ನಿನ್ನ ಬಂಟರ ಕೈ ತಗುಳಿಸಿ- । ಯಾರಣ್ಯ ಕಟ್ಟಿದ ಫಲದಿ ॥
ಮೂರನೆ ದಿನದೊಳು ನಿನ್ನಯ ಮಂದಿರ- । ಕೋರಂತೆಯುಗ್ಗಿ ಪಿಡಿಯಲು ॥ ೧೨ ॥

ಘಳಿಲನೆ ನೀ ಕೆಡಿಸುವೆನೆಂದದರೊಳು ಬಿ- । ರ್ದಳಿದು ಯಮನ ದಿಕ್ಕಿನೊಳು ॥
ಜಲನಿಧಿಯುಂಟು ಅದರ ಸಮೀಪದ । ಮಲಯಾಚಲದಗ್ರದೊಳು ॥ ೧೩ ॥

ಸಲೆ ರಾರಾಜಿಪರಣ್ಯದೊಳಗೆ ನೀನು । ಮಲಯ ಭೂಷಣವೆಂದೆಂಬ ॥
ಚೆಲುವಾದ ಮತ್ತಗಜೇಂದ್ರನಾಗಿರುವಾಗ । ಕಲಿಲೋದಯದಿಂದ ನೀನು ॥ ೧೪ ॥

ಕರಿಣಿಯೊಡನೆ ಕ್ರೀಡಿಸುತಿರೆ ಮತ್ತೊಂದು । ದ್ವಿರದ ನಿನ್ನನು ಕಂಡು ಭರದಿ ॥
ಇರಿದು ಹಾಕುವ ಕೋಪವ ಮನದೊಳು ತಾಳಿ । ಇರುತಿರೆ ಮಲೆವುತ ನಿಚ್ಚ ॥ ೧೫ ॥

ಕರ ಸೊಗಯಿಪ ಶೈಲದ ಶಿಖರಾಗ್ರದ । ಧರೆಯೊಳು ಪಿಡಿವೊಂದಾಗಿ ॥
ಹರಿಷದಿ ನೀ ಕ್ರೀಡಿಸುತಿರೆ ಮುನ್ನಿನ । ದ್ವಿರದನು ಕಂಡು ಕೋಪದೊಳು ॥ ೧೬ ॥

ಕಿಡಿ ಕಿಡಿಯಾಗಿ ಭುಸ್ಸೆಂದು ಭೋರ್ಭೋರೆವುತ। ಪೊಡವಿಯ ಬಡಿದು ಶುಂಡಿಲದಿಂ ॥
ಕಿಡಿ ಹಾರುತ ದಾಡೆಗಳೊಳು ಭರದಿಂದ। ಗಿಡಗಳ ಕಿತ್ತೀಡಾಡುತಲಿ ॥ ೧೭ ॥

ಕಡು ಬೇಗದಿಂ ಬಂದು ನಿನ್ನನು ತಿವಿಯಲು। ಕೆಡೆದಾ ಗುಹೆಯ ಜರಿಯೊಳು ॥
ಒಡನೆ ಬೀಳಲು ನಿನ್ನಂಗವು ನುಚ್ಚಾಗೆ। ಮಡಿದು ನೀನಾ ವೇಳೆಯೊಳು ॥ ೧೮ ॥

ಆನೆಯ ತನುವಿನ ದೆಸೆಯಿಂದಲಿ ಮತ್ತೆ। ನೀನೀ ಭರತದೊಳಿರುವ ॥
ಪೀನ ಮಹಾ ನೀಲಗಿರಿಯೊಳು ಶೋಭಿಪ। ಕಾನನದೊಳು ರಂಜಿಸುವ ॥ ೧೯ ॥

ಕಡು ದೊಡ್ಡ ಕೂಪದ ಜಲದೊಳು ಮೀನಿನ। ಒಡಲೊಳು ಪುಟ್ಟಲಾ ಮೀನು ॥
ಕೆಡುಕ ಧೀವರ ಬಂದು ಬಲೆಯ ಬೇಗದಿ ಬೀಸಿ। ಹಿಡಿದು ತಂದಾ ಗರ್ಭಿಣಿಯ ॥ ೨೦ ॥

ಉರಿವಗ್ನಿಯೊಳಗಿಕ್ಕೆ ಸಿಡಿದು ನೀ ಸತ್ತಲ್ಲಿ। ಭರತದ ಸೌರಾಷ್ಟ್ರದೊಳು ॥
ಗಿರಿ ನಗರಿಯ ತೆಂಕಣದೆಸೆಯೊಳಗಿರ್ದ। ಸರಸಾಮ್ರ ತರುವಿನಡಿಯೊಳು ॥ ೨೧ ॥

ಬಿಲ್ಲನಾಯಕ ಮಗನಿರುತಿಹನಾತನ। ವಲ್ಲಭೆ ಶಬರಿ ಬಸಿರೊಳು ॥
ನಿಲ್ಲದೆ ಪುಟ್ಟಿದೆ ರಮ್ಯಕವೆಸರಾಂತು। ಕ್ಷುಲ್ಲಕನತಿ ಪಾಪಿಯಾಗಿ ॥ ೨೨ ॥

ಜನಿಸಿತವನ ದೇಹದೊಳೌದುಂಬರ। ಘನ ಕೋಷ್ಠವು ಕರ್ಮವಶದಿ ॥
ಇನಿಸು ಬೇಗದಿ ಪುಳುಗಳು ಪಾಪಿಷ್ಠನ। ತನುವಿನೊಳಗೆ ಪುಟ್ಟಿದವು ॥ ೨೩ ॥

ಒಡಲೆಲ್ಲ ಒಡೆದಾಗ ಕೀವು ರಕುತಗಳು। ಬಿಡದೆ ಸುರಿವವು ದುರ್ಗಂಧ ॥
ಕಡು ಬೇಗದಿಂ ಮನೆಯೆಲ್ಲವು ತುಂಬಲು। ಪಡುಕೆಯ ನಾತಕೆ ಪೇಸಿ ॥ ೨೪ ॥

ಮನೆಯಿಂದ ಪೊರಮಡಿಸಲು ದಿಗ್ದೆಸೆಗಳ। ಇನಿಸು ಕಾಣದೆ ತೊಲಗುತಲಿ ॥
ಘನವಾದ ವಿಪಿನದೊಳಗೆ ಬರುತಿರಲಾಗ। ಕನಲುತಲೊಂದು ಹೆಬ್ಬುಲಿಯು ॥ ೨೫ ॥

ಅತಿ ವೇಗದಿಂ ಬಂದು ಮುರಿದು ನುಂಗಲು ಸತ್ತು। ಸತತ ದುಃಖವನೀವುತಿರುವ ॥
ಪ್ರಥಮ ನರಕವೊಕ್ಕು ಸಾಗರಾಯುಷ್ಯವು। ಹತಿಸುವಂಬರ ದುಃಖವುಂಡು ॥ ೨೬ ॥

ನರಕದಿಂ ಬಂದೀ ಭರತದೊಳೊಪ್ಪುವ। ಕರ ಶೋಭಿಪ ಸುರಮ್ಯದೊಳು ॥
ಮೆರೆವ ಪೌದನಪುರದೊಳು ಜಿತರಂಗನೆಂ-। ಬುರುತರ ದ್ವಿಜನಿಹನವಗೆ ॥ ೨೭ ॥

ಸುದತಿ ತ್ರಿಪುರೆಯಿಹಳವಳಿಗೆ ನೀನಾ-। ಗುದಿಸಿದ್ದೆ ಕಾಪಿಲನಾಗಿ ॥
ಕದನ ಪ್ರೀತನು ಸಪ್ತವ್ಯಸನದೊಳು। ಹುದುಗಿ ಧೂರ್ತರ ಕೂಡಿಕೊಂಡು ॥ ೨೮ ॥

ಮನೆ ಮನೆಗಳವೊಕ್ಕು ಕಳುತಿರೆಯಂದ ಕೇಳಿ। ಜನಪ ಕೋಪಿಸಿ ತಳಾರರಿಗೆ ॥
ಇನಿಸು ಬೇಗದಿ ಪೊರಮಡಿಸೆನೆಯವನಾಗ। ಕನಲಿ ಕೋಪದಿ ನೂಂಕಿ ಕಳೆಯೆ ॥ ೨೯ ॥

ನೃಪತಿಯ ದೆಸೆಯಿಂದ ಕಡು ಭಂಗವನ್ನೆದಿ। ಸ್ವಪಿತೃಬಂಧುಗಳಗಲ್ಕೆಯೊಳು ॥
ಕುಪಿತಮಾನಸನಾಗರಣ್ಯವನು ಪೊ-। ಕ್ಕುಪವಾಸದಿಂ ಬರುತಿರಲು ॥ ೩೦ ॥

ಮಾರಮದಾಪಹರಣ ಸುವ್ರತರೆಂಬ। ಧೀರ ಮುನೀಶನ ನೀನು ॥
ದೂರಾಂತರದಿಂದ ಕಂಡಲ್ಲಿಗೈತಂದು। ಚಾರುಪಾದಕೆ ಬಿದ್ದು ಮುನಿಯ ॥ ೩೧ ॥

ಪರಮ ಧರ್ಮವ ಕೇಳಿ ಹಿಂದಣ ಭವಗಳ। ನಿರವಿಸಲಾ ಮುನಿರಾಯ ॥
ಕೊರಗಿ ನೀ ಮನದಲ್ಲಿ ಶಿವಶರ್ಮನಾದಂದು। ವರ ಗುರುಗಳ ನಿಂದಿಸಿದ ॥ ೩೨ ॥

ದುರಿತದಿಂದಿಂತಪ್ಪ ದುಃಖವ ನಾನುಂಡೆ। ಕರುಣಾಳು ! ನನಗೆ ನಿಮ್ಮಂಥ ॥
ವರ ರೂಪ ಪಾಲಿಸಬೇಕೆಂದು ಪ್ರಾರ್ಥಿಸಿ। ಧರಿಸಿದೆ ಜಿನದೀಕ್ಷೆಯನು ॥ ೩೩ ॥

ಅಗಣಿತ ತಪವನು ಗುರುವಿನ ಬಳಿಯಲ್ಲಿ। ಸೊಗಸಿಂದ ಮಾಡುತಲಿರಲು ॥
ಗಗಣಾಂಗಣದೊಳು ದೈತ್ಯ ವಿಮಾನವು। ಧಗಧಗಿಸುತ ಪೋಗುತಿರಲು ॥ ೩೪ ॥

ಅದ ಕಂಡು ತನ್ನೀ ತಪದ ಮಹಿಮೆಯಿಂದ। ಪದುಳದಿ ಮುಂದಣ ಭವಕೆ ॥
ಸದಮಲಮಾಗಿರ್ದಿಂತಪ್ಪೈಸಿರಿಯೊಳ-। ಗುದಯಿಸಿದರೆ ಸಾಕೆನುತ ॥ ೩೫ ॥

ನೀನತಿ ಮಮತೆಯಿಂ ಬಿಡದೆ ನಿದಾನವ। ಮಾನಸದೊಳಗಿಂಬಿಟ್ಟು ॥
ಪೀನತಪವನಾಚರಿಸುತ ಕಡೆಯೊಳು। ಮಾನಿತ ದರ್ಶನವಳಿದು ॥ ೩೬ ॥

ತುರಿತದೊಳಗೆ ದೇಹವ ಬಿಟ್ಟೈತಂ-। ದುರಗಭವನದೊಳು ಮೆರೆವ ॥
ವರ ಸೌಪರ್ಣದ ಕುಲದೊಳು ವೇಣು ಕುವರನೆಂ-। ಬುರುತರ ದೇವ ನೀನಾಗೆ ॥ ೩೭ ॥

ಎಂದು ಶ್ರೀಯಮಧರ ಮುನಿಕುಲತಿಲಕ-। ನಂದು ನಿರೂಪವ ಕೊಡಲು ॥
ತಂದು ಕರಗಳ ನೊಸಲಿಗೆ ನಾ ಬೀಳ್ಕೊಂಡು। ಬಂದೀ ವನದೊಳಂದಿಂದ ॥ ೩೮ ॥

ಕಾರಣ ಪುರುಷನ ಬರವನು ಕಾದಿರ್ದು। ಚಾರು ಸುಗುಣಗಣಾಭರಣ ! ॥
ಧೀರರ ದೇವ ! ನಿನ್ನನು ಕಂಡೆ ಮಜ್ಜನ್ಮ। ಪರಮ ಪವಿತ್ರವಾಯ್ತೆಂದು ॥ ೩೯ ॥

ಧನುಜನಿಂತೆಂದು ನುಡಿದ ನುಡಿಗಳನಾ। ಮನುಜೇಶ ಕೇಳಿ ಸಂತಸವ ॥
ಮನದೊಳು ತಾಳಿ ಶ್ರೀ ಜಿನಪತಿ ನಿಳಯಕೆ। ಕನಕಪುರೇಶನೈತಂದು ॥ ೪೦ ॥

ಕಡು ಭಕ್ತಿಯಿಂ ಮೂಮೆ ಬಲವಂದು ರಾಜೇಂದ್ರ। ಪೊಡಮಟ್ಟು ಜಿನನಿದಿರೊಳಗೆ ॥
ಸಡಗರದಿಂದ ಭಾಳದೊಳು ಕೈಗಳನಿಟ್ಟು। ಪೊಡವಿಪ ನುತಿಸಿದನಿಂತು ॥ ೪೧ ॥

ಜಯ ಜಯ ಭವಸಾಗರೋತ್ತಾರಣ ಪೋತ !। ಜಯ ಭವ್ಯಕೃತ ಸ್ತೋತ್ರವ್ರಾತ ! ॥
ಜಯ ಭಕ್ತಜನ ಚಿತ್ತಾಂಭೋರುಹ ಮಿತ್ರ !। ಜಯ ಜಯ ಭುವನೈಕ ಪಾತ್ರ ! ॥

ಜಯ ಮಾರದೂರ ಕೃಪಾಪರನಘಹರ !। ಜಯ ಮುಕ್ತಿ ಕಾಮಿನಿ ನೀರ ! ॥
ಜಯ ಪುಣ್ಯಾಂಬುಪೂರಿತ ದಿವ್ಯಕಾಸಾರ !। ಜಯ ಧೀರ ತ್ರಿಜಗತ್ಸಾರ ! ॥ ೪೨ ॥

ಜಯ ಗುಣಾರ್ಣವವೇಲ, ತ್ರೈಲೋಕ್ಯಪ್ರತಿಪಾಲ !। ಜಯ ನತ ಸುರಪತಿ ಜಾಲ ! ॥
ಜಯ ಕರ್ಮಠಕರ್ಮಾರಂಭವನ ವ್ಯಾಲ !। ಜಯ ಭುವನೈಕ ವಿಶಾಲ ! ॥ ೪೪ ॥

ಜಯ ರತ್ನತ್ರಯ ಭರಿತಾಮಲಕೋಶ ! । ಜಯ ಜಯಾಶಾಪಾಶನಾಶ ! ॥
ಜಯ ಶ್ರೀದರಚಿತ ಸಮವಸರಣಾಧೀಶ ! । ಜಯ ಪಾಪನಾಶ ಸರ್ವೇಶ ! ॥ ೪೫ ॥

ಜಯ ಜಿನಮತಕುವಲಯ ವಿಕಸನಕಿಂದು । ಜಯ ಜಯಾನಾಥ ಸ್ವಬಂಧು ! ॥
ಜಯ ಕೇವಲಜ್ಞಾನಪೂರಿತಾಮಲಸಿಂಧು ! । ಜಯ ರಕ್ಷಿಸು ಜಿನನೆಂದು ॥ ೪೬ ॥

ಶತಮುಖಪೂಜಿತ ನೂರೆಂಟು ಬಿಂಬವ । ನುತಿಸಿ ಪೂಜಿಸಿ ಬೀಳ್ಕೊಂಡು ॥
ನುತವೆತ್ತು ಮಣಿಮಯ ಮಂಟಪಕೈತಂದು । ಕ್ಷಿತಿಪತಿ ಕುಳಿತಿರಲಾಗ ॥ ೪೭ ॥

ಮೇದಿನೀಶ್ವರಗಾ ವೇಣು ಕುಮಾರನು । ದ್ವಾದಶ ಯೋಜನ ಕೇಳ್ವ ॥
ನಾದವನುಳ್ಳ ದುಂದುಭಿಯುಗಲವನಾ- । ಗಾದರದಿಂದಿತ್ತು ಮತ್ತೆ ॥ ೪೮ ॥

ಓಮಕರಪಾಸವ ಕಾಮಕರಂಡವ । ದ್ಯುಮಣಿಹಾಸವನಗ್ನಿ ಶರವ ॥
ಸುಮನಬಾಣಗೆ ಸಮ ಜ್ಞಾನೇಂದು ನೃಪನಿಗೆ । ಮಮತೆಯಿಂದಿತ್ತನಾ ದೇವ ॥ ೪೯ ॥

ಇಂದಿಗಾರನೆಯ ತಿಂಗಳಿಗಾನೈತಂದು । ಸೌಂದರಾಂಗನೆ ! ಕೇಳು ನಿನಗೆ ॥
ಕಂದನಾಗುವೆನೆಂದಡಿಗೆರಗಮರ್ದಪ್ಪಿ । ಯಂದು ಬೀಳ್ಕೊಂಡಾ ದೇವ ॥ ೫೦ ॥

ಉರಗಲೋಕಕೆ ಪೋಗಲವನತ್ತಸಿತ್ತಲು । ನೆರೆ ಜಾಣನಧಿಕ ಲೀಲೆಯೊಳು ॥
ಪರಿಕಿಸುತಾ ರಾಜ್ಯದ ಸಂಪದವನು । ಹರುಷದಿಂದವೆ ಕುಳಿತಿರಲು ॥ ೫೧ ॥

ದೊರೆರನ್ನ ಜ್ಞಾನೇಂದು ಓಲಗಗೊಟ್ಟಾ- । ಗಿರುತಿರಲಿತ್ತ ಮತ್ತತ್ತ ॥
ಪುರಜನವೆಲ್ಲವು ಧನುಜನ ಭಯವಿಂದು । ಹರಿದುದು ಜ್ಞಾನೇಂದುವಿಂದ ॥ ೫೨ ॥

ಎನುತ ಶುಚಿಭೂರ್ತರಾಗಿ ದುಗುಲವುಟ್ಟು । ಮಿನುಗುವಾಭರಣವ ತೊಟ್ಟು ॥
ಅನುರಾಗದಿಂ ಪೂಜಾದ್ರವ್ಯವಾಂತಾಗ । ಜನಪತಿ ಜಯವರ್ಮನೊಡನೆ ॥ ೫೩ ॥

ಪರಿತೋಷದಿಂದವೆ ನಡೆತಂದು ಸಾಸಿರ । ವರ ಜಿನಗೇಹವ ಪೊಕ್ಕು ॥
ನೆರೆ ಜಿನಬಿಂಬವ ನೂರೆಂಟ ಪೂಜಿಸಿ । ಕರದಿಂದ ನುತಿಗೈದು ಬಂದು ॥ ೫೪ ॥

ಕನಕಪುರೇಶನ ಕಂಡು ಕರಾಂಜಲಿ । ವಿನಯದಿಂ ಮುಗಿದು ಕೊಂಡಾಡಿ ॥
ಕನಕಾಭ ಭವ್ಯ ದೇಹದ ಚೆಲುವಿಕೆಯನು । ಜನಗಳು ನೋಡುತಲಿರಲು ॥ ೫೫ ॥

ಚರಣ ತಲವು ಕೆಂಪಿಂದಲತಿಕೆಯನು । ಮೆರೆವ ಮೇಗಾಲಿಂ ಶಕ್ತಿಯನು ॥
ಕಿರುದೊಡೆಯಿಂದ ಮದನನ ಬತ್ತಳಿಕೆಯ । ವರ ಗೂಢ ಗುಲ್ಫಗಳಿಂದ ॥ ೫೬ ॥

ಸ್ಮರರಾಜ ಪಿಡಿದಿರ್ದ ಹೊನ್ನಂಡೆಯುಡಿಯನು । ಕರ ಚೆಲುವಾದ ನುಣ್ದೊಡೆಯಿಂ ॥
ವರ ಕದಳಿಯ ಕಂಭಯುಗಲವ ಜಘನವು । ಪರಿಕಿಸೆ ಮಳಲಗುಪ್ಪೆಯನು ॥ ೫೭ ॥

ವರ ತ್ರಿವಳಿಗಳು ಹರಿಯ ಸೂನು ಓದಿಲಿ । ಬರೆವ ಮುಗ್ಗಿಯ ಮೂರೇಖೆಯನು ॥
ತರುಣಿಯ ನಡುಕದಂದುರು ನಡುವನು । ವರ ನಾಭಿ ವೃತ್ತ ಸರಸಿಯ ॥ ೫೮ ॥

ರೋಮಾಳಿಯಸಿತೋತ್ಪಲ ಸಣ್ಣ ನಾಳವ। ಹೇಮ ಕಳಶವ ಕುಚಗಳು ॥
ನೇಮದಿಂ ಶಂಖವ ಕೊರಳು ಪಾಶವ ತೋಳು। ಸೋಮವೆರೆಯ ಚೆಂದುಟಿಯ ॥ ೫೯ ॥

ಕುಲಿಶವ ರದನವು ಬೆಳ್ಳಿಲೆ ಹೊಳಪನು। ಚೆಲುವಾದ ಗಂಡ ಮಂಡಲವು ॥
ಪೊಳೆವ ನಾಸಿಕ ಸಂಪಗೆ ಬಿರಿ ಮುಗುಳನು। ವಿಲಸಿತ ನೇತ್ರ ಯುಗಲವು ॥ ೬೦ ॥

ಅರವಿಂದದೆಸಳನು, ನಿಂಬಪತ್ರವ ಪುರ್ವು। ಮೆರೆವ ನಿಟಿಲವರೆವೆರೆಯ ॥
ಸ್ಮರ ಪಿಡಿದಿರ್ದ ಸಿಂಗಾಡಿಯ ಶ್ರುತಿಗಳು। ವರ ದುಂಬಿವಿಂಡ ಕುಂತಳವು ॥ ೬೧ ॥

ಪರಿಪೂರ್ಣ ಶಶಿಯನು ಮೊಗ ಗೆದ್ದು ರಾಜಿಪ। ಸುರಸತಿಯರ ಸಮರೂಪೆ ॥
ವರ ಶ್ರೀ ಜಿನದತ್ತ ವೈಶ್ಯ ಕುಲೇಶಗು। ವರ ಬಂಧುಮತಿಗುದಯಿಸಿದ ॥ ೬೨ ॥

ಸ್ಮರಕರಿ ಸಮಯಾನೆ ಜಿತರಂಭಾದೇವಿಯು। ಸ್ಮರನಿಭ ಜ್ಞಾನೇಂದು ನೃಪನ ॥
ಪರಿಪೂರ್ಣವಾದ ಸೌಂದರ್ಯಾಂಗವ ಕಂಡು। ನೆರೆ ಸೋತು ಮನ್ಮಥ ಶರಕೆ ॥ ೬೩ ॥

ಗುರಿಯಾಗಿ ಭವನಕೆ ನಡೆತಂದು ವಿರಹದಿ। ವರ ನೀಲಕುಟ್ಟಿಮದಲ್ಲಿ ॥
ಪೊರಳುವ ತರುಣಿಯ ತಾಮರೆಯೆಸಳಿನ। ಮೆರೆವ ಹಾಸಿಗೆಯೊಳಾಳಿಯರು ॥ ೬೪ ॥

ಮಲಗಿಸಿ ಮಲಯಜ ಕರ್ಪೂರಗೂಡಿದ। ವಿಲಸಿತ ಗಂಧವ ತಿಗುರೆ ॥
ಘಳಿಲನೆಯುರಿಯೆದ್ದು ಹಾ ಕೆಟ್ಟೆ ಹಾ ಬೆಂದೆ !। ಸಲಹಿರೋ ಸಾಯದ ಮುನ್ನ ॥ ೬೫ ॥

ಕಳವಳದಿಂದ ಸುವರ್ಣ ಬರಿಜ ಕಂಡು। ಇಳೆಯಾಣ್ಮ ಜ್ಞಾನೇಂದುವೆಂದೆ ॥
ಘಳಿಲನೆ ಬಂದಾಲಿಂಗಿಸಿ ಚುಂಬಿಸಿ। ಬಲು ಲಲ್ಲೆಗರೆದು ಮುದ್ದಿಸುತ ॥ ೬೬ ॥

ಹರಣವಳಿದು ಹೋಗುವದೆ ಬೇಡ ದಮ್ಮಯ್ಯ !। ಪರಿರಂಭಣ ಬೇಟಗಳಿಂ ॥
ಸರಸ ಸಲ್ಲಾಪದಿ ಮುಂಡಾಡಿ ನೆರೆಯೆನ್ನ। ಕರುಣ ಹೃದಯ ! ರಕ್ಷಿಸೆಂದು ॥ ೬೭ ॥

ಚರಣಕೆರಗಿ ಕಾತರಿಸುವ ಸುತೆಯನು। ಪರದ ಶ್ರೀ ಜಿನದತ್ತ ಕಂಡು ॥
ತರುಣಿಯಾಳಿಯರನು ಬೆಸಗೊಳಲವರಾ-। ಗೊರೆದರು ತದ್ವೃತ್ತಕವ ॥ ೬೮ ॥

ಇನಿಸು ಬೇಗದಿ ಕೇಳಿ ಜಿನದತ್ತ ಮನನೊಂದು। ತನುಜೆ ನೊಂದಪಳೆಂದೆನುತ ॥
ಜನಪತಿ ಬಳಿಗೈದಿ ಕೇಳೆಲೆ ಜಯವರ್ಮ !। ಕನಕಪುರಾಧಿನಾಯಕನ ॥ ೬೯ ॥

ತನುಜೆಯೆನ್ನಯ ಸುತೆ ಜಿತರಂಭೆ ಕಡು ಸೋತು। ಮನಸಿಜ ಬಾಣಹತಿಯೊಳು ॥
ಘನವಾದ ತಾಪದಿ ಭೂಮಿಯೊಳಗೆ ಬಿದ್ದು। ಮನುಜೇಶ ! ಹೊರಳುತಲಹಳೆ ॥ ೭೦ ॥

ಸಾಯದ ಮುನ್ನವೇ ಮದುವೆಯ ಮಾಡೆಂದು। ರಾಯನೆ ! ಪೇಳಲು ಕೇಳಿ ॥
ಕಾಯಜಸಂಕಾಶ ಜ್ಞಾನೇಂದುವೆಡೆಗೈದಿ। ವೈಯಾರದಿಂದಿಂತು ನುಡಿದು ॥ ೭೧ ॥

ಕನಕಪುರೇಶನೇ ! ನೀ ಕೇಳು ನಮ್ಮಾ। ಜಿನದತ್ತನ ಸುಕುಮಾರಿ ॥
ವನಿತಾಮಣಿ ಜಿತರಂಭೆ ನಿಮ್ಮಯ ದಿವ್ಯ। ಕನಕಚ್ಛವಿರೂಪಗಂಡು ॥ ೭೨ ॥

ಸುರಭಿ ಸಾಯಕನ ಪೂಸರಗಳಿಂ ಕಡು ನೊಂದು । ಹೊರಳುವ ತರಳಾಂಬಕಿಯ ॥
ಕರುಣ ಹೃದಯದಿಂದ ಕಾದು ನಿಮ್ಮಯ ಮೃದು । ಚರಣಸೇವೆಯನವಳಿಂದ ॥ ೭೩ ॥

ಬೆಡಗಿಂದಲೆ ನೀ ಮಾಡಿಸಿಕೋ ಎನೆ। ಪೊಡವಿಪ ಮುಗುಳ್ನಗೆಯಿಡಲು ॥
ಒಡಬಟ್ಟ ಜ್ಞಾನೇಂದುವ ಜಯವರ್ಮನು । ಒಡಗೊಂಡು ಬಂದು ಸಂಭ್ರಮದಿ ॥ ೭೪ ॥

ಅರಮನೆಯನು ಪೊಕ್ಕು ಸುಖದೊಳಗಿರುತಿರೆ । ವರ ವಿದ್ಯಾದೇವತೆಯಿಂದ ॥
ಕರೆಯಿಸೆ ಬಂದರು ಅನುಮತಿ ಮೊದಲಾದ। ತರುಣಿಯರೆಲ್ಲ ಲೀಲೆಯೊಳು ॥ ೭೫ ॥

ಕರೆಯಿಸಿ ಜೋಯಿಸರುಗಳನು ಜಿನದತ್ತ । ವರ ಪಂಚಾಂಗ ಶುದ್ಧಿಯನು ॥
ಎರಕದಿಂ ಕೇಳಿಯವರಿಗುಡುಗೊರೆಯಿತ್ತು । ಪರಿಣಯ ಗೃಹವ ಮಾಡಿಸಿದ ॥ ೭೬ ॥

ಪರಿಣಯ ಗೃಹದೊಳು ಪಂಚರತ್ನಂಗಳ । ಮೆರೆವ ಹಸೆಯ ಜಗುಲಿಯನು ॥
ವಿರಚಿಸಿ ಇಂದ್ರಗೋಪದ ಪಟ್ಟೆ ಸುರುಳಿಂದ । ಕರ ಚೆಲುವಿನ ಮೇಲುಕಟ್ಟು ॥ ೭೭ ॥

ಕಟ್ಟಿಸಿ ಧೂಪಘಟದೊಳು ಧೂಪಂಗಳ- । ನಿಟ್ಟರೆ ಧೂಮವೆಣ್ದೆಸೆಯ ॥
ತೊಟ್ಟನೆ ವ್ಯಾಪಿಸೆ ತುಂಬಿವಿಂಡುಗಳು ಸಾ- । ಲಿಟ್ಟವು ಪುರದೊಳಲ್ಲಲ್ಲಿ ॥ ೭೮ ॥

ಮೊಳಗಿದವಾಗ ಕೋಟಾಕೋಟಿ ವಾದ್ಯವು । ಬೆಲೆವೆಣ್ಣುಗಳು ನರ್ತಿಪರು ॥
ಪೊಳಲೊಳಗಲ್ಲಲ್ಲಿ ಧವಳ ಶೋಭನಗಳ। ಎಳೆನೆಂಗಳು ಪಾಡುವರು ॥ ೭೯ ॥

ಜಿನದತ್ತನನುಮತದಿಂ ಜಿತರಂಭೆಯ । ಮಿನುಗುವ ಮಸ್ತಕದಲ್ಲಿ ॥
ವನಿತೆಯರುಗಳು ಕಮ್ಮೆಣ್ಣೆಯನೊತ್ತಲು । ದನಿದೋರುತಲಿ ಕಂಕಣವನು ॥ ೮೦ ॥

ದೊರೆರನ್ನ ಜ್ಞಾನಚಂದ್ರನಿಗಿತ್ತ ರೋರುಕ । ಪುರಪತಿಯರಮನೆಯೊಳಗೆ ॥
ಪರಿಮಳಮಯವಾದ ತಿಲಜವ ಶಿರದೊಳು । ಗುರುಕುಚೆಯರು ತಿಗುರಿದರು ॥ ೮೧ ॥

ವಸನೆ ವರೆಗಳು ಕೋಟಿಗಳು ಮೊಳಗಿದವು । ಶಶಿಮುಖಿಯರು ತೀರ್ಥಜಲವ ॥
ವಸುಘಟದೊಳು ತೀವಿ ಮಜ್ಜನವನು ಗೈಸಿ । ಪಸದನದಿಂದಲಂಕರಿಸಿ ॥ ೮೨ ॥

ಜಿತರಂಭೆಗೆ ತೀರ್ಥೋದಕದಿಂದಾಗ। ಸತಿಯರು ಸ್ನಾನವನೆಸಗಿ ॥
ನುತವೆತ್ತ ಚಿನ್ನದ ಸರಿಗೆಯ ಸೀರೆಯ । ಅತಿಶಯದಿಂದುಡಿಸಿದರು ॥ ೮೩ ॥

ವನಿತೆಯ ಪಾದಾಂಬುಜಯುಗಲದೊಳಾಗ। ಮಿನುಗುವ ನೂಪುರವಿಟ್ಟು ॥
ಅನುಗೊಳಿಸಿ ಪಿಲ್ಲಿ ಮೆಂಟಿಕೆ ರಾಜಿಪ । ಕನಕದ ಕಾಲುಂಗುರವ ॥ ೮೪ ॥

ಚರಣದೊಳಗೆ ಚಿನ್ನದ ಕಾಲಸರವನು । ತರುಣಿಯರುಗಳಳವಡಿಸಿ ॥
ಬೆರಕೆವರಲ ಕಾಂಚಿಯ ಕಟಿತಟದೊಳು । ಗುರುಕುಚೆಯರು ಸೇರಿಸಿದರು ॥ ೮೫ ॥

ಯುವತಿರನ್ನಳ ಕರಯುಗದೊಳು ತೊಳಗುವ । ಪವಿಮಯ ಪಿಂಡಿಗಂಕಣವ ॥
ನವಶಾತಕುಂಭದ ತೋಳಬಳೆಯನಾಗ । ಹವಣಿಸಿದರು ತೋಳೊಳಗೆ ॥ ೮೬ ॥

ತೋರಮುತ್ತಿನ ಕಂಠಮಾಲೆಯ ಕೊರಳೊಳು । ಸೇರಿಸಿ ಮುತ್ತಿನಿಂ ಸಮೆದ ॥
ತಾರಾಹಾರವ ಪಂಚ ಶರಂಗಳ । ನೇರಾಣಿ ಬಣ್ಣ ಸರವನು ॥ ೮೭ ॥

ಕೊರಳೊಳಗಳವಡಿಸಿಯು ತೋರಮುತ್ತಿನ । ಮೆರೆವ ಮೂಗುತಿ ನಾಸಿಕದೊಳು ॥
ಕರ ಚೆಲುವಿಂದ ಸೇರಿಸಿ ಕರ್ಣಯುಗದೊಳು । ಹರಳೋಲೆಯನಿಕ್ಕಿದರು ॥ ೮೮ ॥

ಹೊನ್ನೂವುವೆಂತೆಯ ಬಾವಲಿಗಳನಿಕ್ಕಿ । ಸನ್ನುತ ತಿಲಕವ ತಿದ್ದಿ ॥
ಚೆನ್ನೆಯ ಕುಚದೊಳು ಕಸ್ತೂರಿ ರಸದಿಂದ । ಚೆನ್ನಾಗಿ ಶತಪತ್ರ ಬರೆದು ॥ ೮೯ ॥

ಥಳಥಳಿಸುವ ಗಂಡಮಂಡಲಯುಗದೊಳು । ವಿಲಸಿತ ಕಸ್ತೂರಿ ಜಲದಿ ॥
ಪೊಳೆವ ಮಕರಿಕಾ ಪತ್ರವನು ಚೆಲ್ವಿಂದಾಗ । ಕೆಳದಿಯರುಗಳು ಬರೆದರು ॥ ೯೦ ॥

ನೊಸಲೊಳು ರಾಜಿಪ ಮುತ್ತಿನ ಬೊಟ್ಟನು । ಕುಶಲದಿಂ ಕಟ್ಟಿ ವಿಸುನಿಯ ॥
ನೊಸಲ ಪಟ್ಟವ ಕಟ್ಟಿ ಕಾರ್ಮುಗಿಲಂದದ । ವಿಸುವ ತುರುಂಬನು ರಚಿಸಿ ॥ ೯೧ ॥

ಪರಿಮಳಮಯವಾದ ಪೂಮಾಲೆಯನು ಸೂಡಿ । ಸುರುಚಿರವಾದ ಕಜ್ಜಳವ ॥
ಸರಸಿಜಲೋಚನಕೆಚ್ಚಿ ಸೋಗೆಯ ತಿದ್ದಿ । ವರ ಮೌಕ್ತಿಕದ ತೊಂಡಿಲನು ॥ ೯೨ ॥

ಸಿರಿಮುಡಿಯೊಳಗಳವಡಿಸಿ ರಾಜಿಸಿದಳು । ಸಿರಿದೇವಿಯೋ ಎಂಬಂತೆ ॥
ತರಳೆಯರಿತ್ತ ಸಿಂಗರವಾಗಿ ಹರುಷದಿ । ಮೊರೆವ ವಾದ್ಯದ ಗಲಭೆಯೊಳು ॥ ೯೩ ॥

ಸಡಗರದಿಂದ ಕನ್ನಡಿ ಕಲಶಂಗಳ । ಪಿಡಿದ ತಳೆಯೆ ನೆಳಲೊಳಗೆ ॥
ನಡೆಮುಡಿ ಸಹವಾಗಿ ಶೋಭನ ಧವಳದ । ಬಿಡದೆ ಪಾಡುತ ಕೇರಿಗಳೊಳು ॥ ೯೪ ॥

ಮನೆ ಮನೆ ತಪ್ಪದೆ ಚಿನ್ನದ ಬೆಳ್ಳಿಯ । ಘನವಾದ ಭಾಜನದೊಳಗೆ ॥
ಮಿನುಗುವ ಕಮ್ಮೆಣ್ಣೆಯಿರೆ ಮೊಗೆ ಮೊಗೆದಾಗ । ವನಿತೆಯರಿತ್ತರರ್ತಿಯೊಳು ॥ ೯೫ ॥

ಚಿನ್ನದ ಬಟ್ಟಲೊಳಗೆ ತುಂಬಿ ಕುಂಕುಮ । ಪನ್ನೆ ಕರ್ಪೂರ ಕತ್ತುರಿಯ ॥
ಚೆನ್ನೆಯರಿತ್ತರಾ ಪುರದ ಭಾಮಿನಿಯರ್ಗೆ । ರನ್ನದಾರತಿಗಳ್ವೆರಸು ॥ ೯೬ ॥

ಬರೆಹದ ಪಾಪ್ಪಳಿ ಮಂಜಿಷ್ಟೆ ಚೌಪುಲ್ಲಿ । ಮೆರೆವಷ್ಟಗೊಳ ಚಂದ್ರಗಾವಿ ॥
ಕರಿಯ ಉದಯರಾಗ ಮುಂತಾದ ಜವಳಿಯ । ಪುರದ ಬಾಲೆಯರ್ಗೆ ತಿದ್ದಿದರು ॥ ೯೭ ॥

ಹಸಿಯಡಕೆಯ ಜಂಬೀರವ ಚೂತವ । ಪೊಸಬಕ್ಕೆ ಕರಕ ಮಾದಲವ ॥
ನಸುಗೆಂಪಿನ ಕದಳಿಯ ಜಂಬು ನಾರಂಗ । ಎಸೆವ ಖರ್ಜೂರ ಮುಂತಾದ ॥ ೯೮ ॥

ವರ ಫಲಗಳ ಪುರವನಿತೆಯರಿಗೆ ಬೀರು । ತೆರೆ ತಿರಿ ಜಯವರ್ಮ ನೃಪನ ॥
ಅರಮನೆಯೊಳಗೆ ಕೋಟಾಕೋಟಿ ವಾದ್ಯವು । ಮೊರೆದವು 'ತೋಧಿಗ'ಮೆಂದು ॥ ೯೯ ॥

ಕಳಶಕನ್ನಡಿಯ ಕನ್ನಿಕೆಯರು ಮುಂದಾಂತು । ಗೆಲವಿಂದ ಬರೆಯೈರಣೆಯ ॥
ನಿಳಯಕೆ ತಂದು ಕೆಲನು ಪೂಜೆಯ ಮಾಡಿ । ಚೆಲುವೆಯರಿರುತಿರಲಿತ್ತ ॥ ೧೦೦ ॥

ಮುತ್ತಿನ ಪಲ್ಲಕ್ಕಿಯನೇರಿ ಜಿತರಂಭೆ। ವೃತ್ತಕುಚೆಯರೊಗ್ಗಿನೊಳು ॥
ಬಿತ್ತರದಿಂ ಧಾರಾಗೃಹಕೈತರೆ। ಮತ್ತೆ ಗಂಡಿನ ಮನೆಯವರು ॥ ೧೦೧ ॥

ಅರಸಿನ ಜೀರಿಗೆ ಸಿದ್ಧಾರ್ಥ ಮೆಂಥೆಯು। ಕರಿಯ ಹೆಸರು ಎಳ್ಳು ಚಣಗ ॥
ಹರಿಮಂಥ ತೊಗರಿ ಕಲ್ಲುಪ್ಪು ಲವಂಗವು। ವರ ಜಾಯಿಫಲ ಹಪ್ಪಳವು ॥ ೧೦೨ ॥

ಬಿಳಿಯ ಬೆಲ್ಲವು ಮೋರುಂಡೆ ಎಳ್ಳುಂಡೆಯು। ಕಳಮೆಯಕ್ಕಿಯು ಸಬ್ಬಸೀಗೆ ॥
ಬಿಳಿಯೆಲೆಯಡಕೆ ಓಲೆಯ ತೊಡು ಸಿಂಧೂರು। ಪೊಳೆವ ಕರ್ಪೂರ ಕತ್ತುರಿಯು ॥ ೧೦೩ ॥

ರಸಧಾಳಿಯ ಕಬ್ಬು ಫಲಗಳು ಮುಂತಾದ। ಹಸನಾದ ವಸ್ತು ಕಾರವನು ॥
ಶಶಿಮುಖಿಯರು ಚಿನ್ನ ಬೆಳ್ಳಿ ತಟ್ಟೆಗಳೊಳು। ಕುಶಲದೊಳಗೆ ತುಂಬಿಕೊಂಡು ॥ ೧೦೪ ॥

ಹರುಷದೊಳಗೆ ಶೋಭನ ಧವಳಂಗಳ। ತರುಣಿಯರುಗಳು ಪಾಡುತಲಿ ॥
ಮೊರೆವ ವಾದ್ಯದ ಸಂದಣಿಯೊಳು ಧಾರಾ। ವರ ಗೃಹಕಾಗಿಯ್ಯೆತಂದು ॥ ೧೦೫ ॥

ಪರಿಣಯ ಮಂಡಪದೊಳಪೊಕ್ಕು ಮುದದಿಂದ-। ಲಿರಿಸಿಯು ವಸ್ತುಕಾರಗಳ ॥
ನೆರೆದಿರ್ದ ಮುತ್ತೈದೆಯರ ಸಮೂಹಕ್ಕೆ। ಹರುಷದೊಳಗೆ ಬೀರಿದರು ॥ ೧೦೬ ॥

ತದನಂತರದೊಳು ಮೆಟ್ಟಕ್ಕಿಗೂಡೆಯ। ಮುದವತಿ ಜಿತರಂಭಾದೇವಿ ॥
ಚದುರಿಂದಲೇರಿ ನಿಲಲು ತೆರೆ ಸೀರೆಯ। ಸುದತಿಯರುಗಳಡ್ಡ ಪಿಡಿಯೆ ॥ ೧೦೭ ॥

ಇತ್ತಲು ಕನಕಪುರೇಶನು ದೊರೆಗಳ। ಮೊತ್ತದ ನಡುವೆ ಶೀವಿಯೊಳು ॥
ಉತ್ತಮ ಕನಕಾದ್ರಿಯೆಂಬ ಗಜವನೇರಿ। ಸತ್ತಿಗೆ ನೆಳಲೊಳು ಮುದದಿ ॥ ೧೦೮ ॥

ಪುರದ ವೀಥಿಯೊಳು ಮೆರೆದು ಬರುತಿರಲಾಗ। ಮೊರೆದವು ಭೇರಿ ತಮ್ಮಟೆಯು ॥
ಹರುಷದೊಳತ್ತ ಹೆಣ್ಣಿನ ಮನೆಯವರ್ಗಳು। ತುರಿಹದಿಂದ್ಯೆರಜೆ ತಂದು ॥ ೧೦೯ ॥

ವಿತ್ತಾಧಿಪನ ಸದೃಶ ಭಾಗ್ಯನು ಜಿನ-। ದತ್ತನು ತುರಗವನೇರಿ ॥
ಸುತ್ತಲು ಜನತಿಂಥಿಣಿಯಾಗಿಯೊಡಬರೆ। ಅಲ್ಲಿಯಿಂದಲೆ ಇದಿರ್ವಂದು ॥ ೧೧೦ ॥

ಪರಿಣಯ ಗೃಹಕಾಗಿ ಕರೆತಂದಳಿಯನ। ಹರಿಪೀಠದೊಳು ಕುಳ್ಳಿರಿಸಿ ॥
ಚರಣಾಂಬುಜವನು ಮಾತುಳ ವಿನಯದಿ। ಪರಿಮಳ ಜಲದಿಂದ ತೊಳೆಯೆ ॥ ೧೧೧ ॥

ವೃತ್ತ ಕುಚೆಯರಿಂದ ನೀರಾಜನವನು। ಎತ್ತಿಸಿ ಜ್ಞಾನಚಂದ್ರಮಗೆ ॥
ಉತ್ತಮ ಲಗ್ನ ಬಂದಿದೆಯೆಂದು ಪೇಳಲು। ಮುತ್ತಿನ ಮೆಟ್ಟಕ್ಕಿಯನೇರಿ ॥ ೧೧೨ ॥

ಆಯತಮಾಯತಮೆಂದಾಗ ಬ್ರಾಹ್ಮಣ-। ರ್ಬಾಯನು ತೆರೆದು ಮಂತ್ರಗಳ ॥
ವೈಯಾರದಿಂದ ನುಡಿಯಲಾಯತಮೆಂದು ವಿ-। ಡಾಯದಿಂ ದ್ವಿಜರು ಪೇಳಿದರು ॥ ೧೧೩ ॥

ತೆರೆ ಸೀರೆ ಜಾರಿತು ದುಂದುಭಿ ಮೊರೆದವು। ಪರಿಮಳಮಯದ ಪೂಸರವ ॥
ಸರಸಿಜಾಂಬಕಿ ದುಂಡುದೋಳೆತ್ತಿ ಕುವರನ। ಕೊರಳೊಳಿಕ್ಕಿದಳು ಲೀಲೆಯೊಳು ॥ ೧೧೪ ॥

ವರ ದಂಪತಿಗಳ ಕರಗಳ ಜೋಡಿಸಿ । ಹರುಷದಿಂ ಜಿನದತ್ತ ಶೆಟ್ಟಿ ॥
ಎರೆದನು ಹೊನ್ನಗಿಂಡಿಯನೆತ್ತಿ ಧಾರೆಯ । ದೊರೆ ತ್ರಿವರ್ಗದಿ ಸಲಹೆಂದು ॥ ೧೧೫ ॥

ಎಳಲತೆಯನು ಬಾವನ್ನ ಚಂದನದೊಳು । ಬೆಳೆಯಲಿತಮೃತವದನದ ॥
ಗಳಿಲನೆ ಎರೆವಂತೆ ಜಿನದತ್ತ ಧಾರೆಯ । ಇಳೆಯಾಣ್ಮನ ಕೈಗೆರೆದ ॥ ೧೧೬ ॥

ಲಲನೆಯರುಗಳು ದಂಪತಿಗಳ ಹಸ್ತವ। ನಲವಿನಿಂದೆತ್ತಿ ಹಿರಿಯರು ॥
ಹರಿಸದಿಂ ಮುತ್ತಿನ ಶೇಷೆಯ ಶಿರದೊಳು । ಹರಸುತ ತಳಿದರರ್ತಿಯೊಳು ॥ ೧೧೭ ॥

ಸುತ್ತಿದ ನೂಲನು ವಧುವರರುಗಳ ಚೆ- । ಲ್ವೆತ್ತ ಹಸ್ತದೊಳು ಕಂಕಣವ ॥
ಬಿತ್ತರದಿಂದ ಪುರೋಹಿತ ಕಟ್ಟಿದ- । ನುತ್ತಮ ಮಂತ್ರವ ಪೇಳಿ ॥ ೧೧೮ ॥

ವರವಧೂಗಳ ಸಪ್ತ ಪದಿಯನಿಲಿಸಿ ಮತ್ತೆ । ದೊರೆ ಕುಮಾರಕನಂಗುಲಿಯ ॥
ತರುಣೀಮಣಿಯಿಂದ ಪಿಡಿಯಿಸಲೆಸೆದಳು । ಹರಿಕರವಿಡಿದ ಶ್ರೀಯಂತೆ ॥ ೧೧೯ ॥

ನಲ್ಲಳು ಸೋಂಕಲೊಡನೆ ರಾಜೇಂದ್ರಗೆ। ಸೊಲ್ಲಿಸಲೇನು ತ್ರೈಜಗದ ॥
ವಲ್ಲಭ ತನ್ನ ಹಸ್ತತಳಕೈತಂದಂತೆ । ಉಲ್ಲಾಸವಾದುದೇನೆಂಬೆ ॥ ೧೨೦ ॥

ಶಿರವ ಕಿಂಚಿತು ಬಾಗಿ ಬರುವಾಗ ಭಿತ್ತಿಯೊ- । ಳೆರೆಯನ ರೂಪು ಕಾಣಿಸಲು ॥
ಪರಮ ಸಂತೋಷವೆಂಬಿಂಗಡಲೊಳು ತಾನು । ನೆರೆ ಮುಳುಗಾಡಿ ಪೆರ್ಚಿದಳು ॥ ೧೨೧ ॥

ಬೆಡಗಿಂದ ನಡೆತಂದು ದಂಪತಿಗಳಾಗ । ಬಿಡದೆ ಹವನ ಕುಂಡದಲಿ ॥
ಒಡನೆಯುರಿವ ದಕ್ಷಿಣಾವರ್ತವಹ್ನಿಯ । ಕಡು ರಯ್ಯದಿಂ ಬಲಗೊಂಡು ॥ ೧೨೨ ॥

ಕನಕಪುರೇಶನು ಗಮಕದೊಳೈತಂದು । ಮನೆಯ ಹಸೆಯ ಜಗಲಿಯೊಳು ॥
ಕನಕಪಟ್ಟಕದೊಳು ಕುಳ್ಳಿರಲು ಜಿತರಂಭೆ । ವನಿತಾಮಣಿ ನಡೆತಂದು ॥ ೧೨೩ ॥

ನಲ್ಲನ ಬಲಗಡೆಯೊಳು ಕುಳಿತಿರುತಿರ್ದ । ಚೆಲ್ಲೆಗಂಗಳೆಯೊಪ್ಪಿದಳು ॥
ಮಲ್ಲಿಗೆಗೋಲನ ಬಲಗಡೆಯೊಳಗಿರ್ದ । ಫುಲ್ಲಾಕ್ಷಿ ರತಿದೇವಿಯಂತೆ ॥ ೧೨೪ ॥

ಉರಗದಂಪತಿಗಳೋ, ಕಿನ್ನರ ಮಿಥುನವೋ,। ಸುರಯುಗವೋ, ಈಶುಮೆಯೋ, ॥
ಸರಸಿಜಭವ ಸರಸ್ವತಿಯೋ ಎಂದೆನಲಾ । ವರವಧೂಗಳು ಒಪ್ಪಿದರು ॥ ೧೨೫ ॥

ಚಂದ್ರನಿರ್ದ್ದೆಡೆಗೆ ನಕ್ಷತ್ರಂಗಳು ತಾವು । ಮಂದ್ರದಿಂ ಬಂದಂದದೊಳು ॥
ಚಂದ್ರಮುಖಿಯರು ಕರ್ಪೂರದಾರತಿಗ- । ಳಿಂದ್ರವೈಭವರ್ಗೆತ್ತಿದರು ॥ ೧೨೬ ॥

ನೀರಾಜನವ ಬೆಳಗುತ ದಂಪತಿಗಳ । ಚಾರುದೇಹದೊಳು ಮಾರ್ಪೊಳೆಯೆ ॥
ಸೇರಿದ ಲಾವಣ್ಯಾಂಬುಧಿಯೊಳು ತೋರ್ಪ । ತಾರಾಲೋಕವೆಂಬಂತೆ ॥ ೧೨೭ ॥

ನೆರೆದಿರ್ದ ವಧುನಿಕುರುಂಬಕೆ ಕಸ್ತುರಿ । ವರ ಗಂಧ ಪುಡಿ ಪುಣುಗಾದಿ ॥
ಪರಿಮಳ ದ್ರವ್ಯಗಳನು ಬಂಧುಮತಿಯಾಗ । ಪರಿತೋಷದಿಂದಿತ್ತು ಮತ್ತೆ ॥ ೧೨೮ ॥

ಬುರುಸಾಲು ಪಟ್ಟೆ ಚೀನಾಂಬರ ಮುಂತಾದ। ಸರಿಗೆ ಸೀರೆಯ ತೊಡವಿತ್ತು ॥
ಒರೆದಳಿಲೆ ಬಂಧುಗಳಿರ ! ನೀವೆಲ್ಲ। ಬರುತಿರಿ ಮಂಗಲೋತ್ಸವಕೆ ॥ ೧೨೯ ॥

ವಿನಯದಿಂ ಬೀಳ್ಕೊಡೆಯುಡುಗೊರೆಗಳನಾಗ। ಜಿನದತ್ತ ದೊರೆಗಳಿಗಿತ್ತು ॥
ಕನಕವಸಂತವನೂರೇಳು ಮಾಡಿಸಿ। ಮನ ದಣಿವಂತೆ ಯಾಚಕರ್ಗೆ ॥ ೧೩೦ ॥

ಭೂರಿದಾನ ಕೊಡೆ, ಕೋಮಲೆಯರುಗಳು। ಕೇರಿ ಕೇರಿಗೆ ಬಿಡದೈದಿ ॥
ಈರಾರು ಸಾಸಿರ ರತ್ನ ಬಾಗಿನಗಳ। ಬೀರಿದರಾ ಪಟ್ಟಣದೊಳು ॥ ೧೩೧ ॥

ದಿನ ನಾಲ್ಕರಿರುಳೊಳು ನಾಗವಲ್ಲಿಯ ಮಾಡಿ-। ಯನುನಯದಿಂ ಕಂಬ ಬಲಿಯ ॥
ಘನಕುಚೆಯರು ಮಾಡಿ ಕಂಕಣವನು ಬಿಟ್ಟು। ಮನೆದುಂಬಿದರು ವಧೂವರರು ॥ ೧೩೨ ॥

ಕಾಲವರಿದು ಕಲೆಯರಿದು ಕಾವನುರುಬಿನ। ಲೀಲೆಯರಿದು ಭಾವವರಿದು ॥
ಸೋಲವರಿದು ಸುಖವೆಂಬಬ್ಧಿಯೊಳಗಾ। ಗಾಳಿ ಮುಳುಗಿದರೇನೆಂಬೆ ॥ ೧೩೩ ॥

ಹರಿ ಶಚಿಯೊಳು, ಪದ್ಮಿಣಿಯೊಳು ಧರಣೇಂದ್ರ-। ನಿರುವಂತೆ ಜಿತರಂಭೆಯೊಡನೆ ॥
ಸ್ಮರರೂಪ ಜ್ಞಾನೇಂದು ಸರಸ ವಿನೋದದಿಂ। ವರ ಸುಖದೊಳಗಾಳುತಿಹನು ॥ ೧೩೪ ॥

ಭರತ ಸಂಗೀತ ಸಾಹಿತ್ಯಾರ್ಣವಚಂದ್ರ-। ನರುಹ ಪಾದಾಬ್ಜ ಷಟ್ಪದನು ॥
ವರ ಧರ್ಮಾಂಬುಜ ದಿವಸೇಂದ್ರ ಜ್ಞಾನೇಂದು। ದೊರೆಗಳರಸನೊಪ್ಪಿದನು ॥ ೧೩೫ ॥

**॥ ಅಂತು ಸಂಧಿ ೩೬ಕ್ಕಂ ಪದ ೪೮೫೪ಕ್ಕಂ ಮಂಗಲಂ ॥**

## ಪಟ್ಟಾಭಿಷೇಕ.

ಸುರರೀರ್ವರು ಜ್ಞಾನಚಂದ್ರಗೆ ಸಾಮ್ರಾಜ್ಯ-। ಸ್ಥಿರ ಪಟ್ಟಗಟ್ಟಿದುದುರ್ವೆ ॥ಪ॥

ಇಂದ್ರ ನಾಗೇಂದ್ರ ಮುನೀಂದ್ರ ವಂದಿತಪಾದ। ಚಂದ್ರಾರ್ಕಕೋಟಿಪ್ರಕಾಶ ॥
ಮಂದ್ರನಗೇಂದ್ರದೊಳಗೆ ಮಿಂದ **ಶಾಂತಿ ಜಿ-**। **ನೇಂದ್ರ** ! ಕೊಡೆಮಗಿಂದ್ರಪದವ ॥ ೧ ॥

ಕ್ಷಿತಿಪತಿ ಜ್ಞಾನೇಂದು ಸುಖದೊಳಗಿರುತಿರೆ। ಜಿತರಂಭೆಯೊಂದು ದಿನದೊಳು ॥
ಋತುಮತಿಯಾಗಿ ನಾಲ್ಕನೆ ನೀರನು ಮಿಂ-। ದತಿ ಶುಭ್ರವಸನವನುಟ್ಟು ॥ ೨ ॥

ಅನುಪಮ ಮೌಕ್ತಿಕ ಭೂಷಣವನು ತೊಟ್ಟು। ಮನಸಿಜಾರಿಯ ಗೃಹಕೈದಿ ॥
ಮನಮುಟ್ಟಿ ಪೂಜೆಯ ಮಾಡಿಸಿ ಕೊಂಡಾಡಿ। ಜಿನ ಸಿದ್ಧರ ಶೇಷೆಯನು ॥ ೩ ॥

ಕಡು ಭಕ್ತಿಯಿಂ ಸಿರಿಮುಡಿಯೊಳು ಧರಿಸಿಯಾ-। ಗಡಿದಳಕೆರಗಿ ಮುನಿಗಳ ॥
ಸಡಗರದಿಂದರಮನೆಗೆ ನಡೆದು ಬಂದು। ಮಡದಿರನ್ನಳು ಇರುತಿರಲು ॥ ೪ ॥

ಅನಿತರೊಳಗೆ ಇನನಸ್ತಂಗತನಾಗೆ । ಘನವಾದ ಸಜ್ಜಾಗೃಹಕೆ ॥
ವನಿತಾಮಣಿ ನಡೆತಂದೋಪ ಕುಳಿತಿರ್ದ । ಕನಕದ ಸೆಳೆಮಂಚವೇರಿ ॥ ೫ ॥

ಕುಳಿತಿರೆ ಸಖಿಯರು ಪರಿಮಳ ದ್ರವ್ಯವ । ನಿಳಯದೊಳಗೆ ಬೈಚಿಟ್ಟು ॥
ಘಳಿಲನೆ ತೆರಳಲು ಗಂಧ ಕತ್ತುರಿಯನು । ಇಳೆಯಾಣ್ಮ ಸರಸವಾತಿಂದ ॥ ೬ ॥

ಅಂಗಲೇಪನಗೈದು ಪ್ರಾಣಪ್ರಿಯಳು- । ತ್ತುಂಗ ಕುಚಕೆ ಚರ್ಚೆಗೈದು ॥
ಗಂಗಾಧರನ ಮದುವೆಯೊಳರ್ಚನೆಗೈದ । ಪೊಂಗಳಶಗಳೆನೆ ಬಿದಿಯ ॥ ೭ ॥

ಎಲೆಯ ಗಳಿಗೆಗಳ ನೀಡಲು ಜಿತರಂಭೆ । ಇಳೆಯಾಣ್ಮ ಕೊಳಲು ನಲ್ಮೆಯೊಳು ॥
ಬೆಳತಿಗೆಗಣ್ಣ ಕೋಮಲೆಯೊಳು ಮನ್ಮಥ । ವಿಲಸಿತ ಕೇಳಿಲಿ ತಣಿದು ॥ ೮ ॥

ಒರಗಿರೆ ಬೆಳಗಪ್ಪ ಜಾವದೊಳಗೆಯಾ । ತರಳಾಂಬಕಿ ಸ್ವಪ್ನದೊಳಗೆ ॥
ಕರ ಚೆಲುವಾದ ರನ್ನದ ಭರಣಿಯೊಳ- । ಗಿರುವ ಸ್ವಚ್ಛೋದಕದೊಳಗೆ ॥ ೯ ॥

ನಳನಳಿಸುತ ಬೆಳೆವೆಳೆಬಾಳೆ ಮೀನ್ಗಳ । ಹೊಳೆವ ಯುಗ್ಮವ, ಚಂದ್ರಯುಗವ ॥
ಜಳಜಮಿತ್ರರದ್ವಂದ್ವ, ಸುರತರುಯಮಲವ । ಜಲನಿಧಿಯೆರಡನು ಕಂಡು ॥ ೧೦ ॥

ಘಳಿಲನೆ ಮಂಗಲಪಾಠಕರೋದುವ । ಒಳನುಡಿಗಳ ಧ್ವನಿಗೇಳಿ ॥
ಜಳಜಾಂಬಕಿಯೆದ್ದು ಶಿರ ಮೊಗದೊಳೆದಾಗ । ತುಳಿಲುಗೈದು ಜಿನಪತಿಗೆ ॥ ೧೧ ॥

ಪಲವರ್ಚನೆಯಿಂದ ಪೂಜಿಸಿ ನುತಿಗೈದು । ನಲವಿನಿಂ ಸಿದ್ಧಶೇಷೆಯನು ॥
ಚೆಲುವ ಮುಡಿಗೆಯಿಟ್ಟು ಸಿಂಗರಿಸಂಗವ । ಇಳೆಯಾಣ್ಮನೆಡೆಗೈತಂದು ॥ ೧೨ ॥

ತೊಡ ಸೋಂಕುತಲರ್ಧಾಸನದೊಳಗಾ । ಮಡದಿಯು ಮುಡಿಮಣಿ ಕುಳಿತು ॥
ಬಿಡದೆ ತಾ ಕಂಡೈದು ಸ್ವಪ್ನವ ಪೇಳಲು । ನುಡಿದನರಸ ಫಲವದರ ॥ ೧೩ ॥

ಥಳಥಳಿಸುವ ಮರಿಮೀನ ಜಠರದಂತೆ । ಪೊಳೆವ ಲೋಚನೆ ! ಮೀನೆರಡ ॥
ಗೆಲವಿಂದ ನೀ ಕಂಡುದರಿಂದ ಸುಜನಗಳು । ಬೆಳೆವರು ನಿನ್ನ ಗರ್ಭದೊಳು ॥ ೧೪ ॥

ಕರ್ವಿಲ್ಲನ ಮಾವನಂದದ ಮೊಗದಳೆ ! । ಪಾರ್ವಣೇಂದೆರಡ ಕಂಡುದರಿಂ ॥
ಸರ್ವ ಕಲಾಧರವೀರ್ವರು ಸಿಸಗೀಗ । ಊರ್ವಿಯನಾಳ್ವರೊಗೆವರು ॥ ೧೫ ॥

ಇನನಂತೆ ಪೊಳೆವಂಗದ ಕಾಂತಿಯುಳ್ಳಳೆ ! । ಇನಯುಗ್ಮವ ಕಂಡುದರಿಂ ॥
ಜನಿಪರು ನಿನ್ನುದರದೊಳು ವಿಕ್ರಮಿಗಳು । ಘನಕುಚೆ ! ಪುತ್ರಯಮಲವು ॥ ೧೬ ॥

ಸುರಕುಜದಂತೆ ಮಕ್ಕಳ ಫಲವುಳ್ಳಳೆ ! । ಸುರತರುವೆರಡ ಕಂಡುದರಿಂ ॥
ಸುರತರು ಸಮ ವಿತರಣ ಗುಣರೀರ್ವರು । ಬರುವರು ನಿನ್ನ ಬಸಿರೊಳು ॥ ೧೭ ॥

ಶರಧಿಯಂತಧಿಕ ಲಾವಣ್ಯದಿಂ ಕೂಡಿದ । ಗರುವೆ ! ವಾರಾಶಿಯುಮವನು ॥
ಇರುಳು ಕಂಡುದರಿಂದ ನಿನ್ನಯ ಬಸಿರೊಳು । ಗರುವರೀರ್ವರು ಪುಟ್ಟುವರು ॥ ೧೮ ॥

ಎಂದು ನುಡಿದ ರಾಜೇಂದ್ರನ ನುಡಿಗೇಳಿ । ಮಂದಸ್ಮಿತೆಯಾಗಿ ಮುದದಿ ॥
ಸೌಂದರಾಂಗಿಯು ಇರುತಿರೆ ವೇಣು ಕುವರನು । ಒಂದಣಾಯುಷ್ಯವು ತೀರಿ ॥ ೧೯ ॥

ಬರುತಿರೆ ಧರಣೇಂದ್ರ ಲೋಕದಿಂ ಶ್ರೀಕಾಂತೆ- । ಯುರುತರ ತಪದೊಳು ನೆಗಳೆ ॥
ಪರಮಾಯುಷ್ಯದ ಕಡೆಯೊಳು ಜಿತರಂಭೆ । ವರ ಗರ್ಭದೊಳಗಮಳಾಗಿ ॥ ೨೦ ॥

ನೆಲಸಿ ಬೆಳೆಯುತಿರೆ ಎರಡೂವರೆ ದ್ವೀಪ- । ದೊಳಗಣ ಜಿನ ಮಂದಿರವ ॥
ಅಲಸದೆ ನುತಿಸಿ ಪೂಜಿಪ ದೋಹಳದಿಂದ । ಲಲನೆಯ ತನು ಬಡವಾಗೆ ॥ ೨೧ ॥

ದೊರೆರನ್ನ ಜ್ಞಾನೇಂದು ಚದುರಿಂದ ತಿಳಿದಾಗ । ಬರಿಸಿ ಮಾತುಳ ಜಯ ನೃಪರ ॥
ಒರೆದನು ಮನುಜಕ್ಷೇತ್ರದೊಳುಳ್ಳಕೃತ್ರಿಮ । ವರ ಜಿನಗೇಹವ ನಿಮ್ಮ ॥ ೨೨ ॥

ತನುಜೆ ಪೂಜಿಪೆನೆಂಬ ದೋಹಳದಿಂದೀಗ । ತನು ಬಡವಾಯ್ತದರಿಂದ ॥
ಎನುತಲವರಿಗೆ ತಾ ಪೇಳಿ ಭೂಪಾಲರ್ಗೆ । ಕನಕಾಭರಣವಸನವ ॥ ೨೩ ॥

ಪರಿತೋಷದೊಳಗಿತ್ತು ಪ್ರಸ್ಥಾನ ಭೇರಿಯ । ತುರಿಹದಿಂ ತಾಡನಗೈಸಿ ॥
ಅರುಹಗೆ ಸಾಷ್ಟಾಂಗವೆರಗಿ ಯತೀಂದ್ರರ । ಚರಣಾಂಬುಜ ಭೃಂಗನಾಗಿ ॥ ೨೪ ॥

ಅನುಮತಿ ಮೊದಲಾದ ಪದಿನೈದು ಸಾಸಿರ । ವನಿತಾಮಣಿಗಳ ಕೂಡಿ ॥
ಘನರತ್ನ ಕೀಲಿತ ಕಾಮವಿಮಾನವ । ಜನತಾಧೀಶ್ವರನೇರಿ ॥ ೨೫ ॥

ಸುರಗಿರಿ ಪಂಚಕ ಮೊದಲಾದ ಗಿರಿಯೊಳ- । ಗಿರುತಿರ್ದ ಜಿನರ ವಂದಿಸುತ ॥
ವರ ಧಾತಕೀಖಂಡ ದ್ವೀಪವ ತಾ ದಾಂಟಿ । ಮೆರೆವೆಂಟು ಲಕ್ಷ ವಿಸ್ತೀರ್ಣ ॥ ೨೬ ॥

ಸಾಸಿರಗಾವುದ ಗುಂಪನು ತಾನು- । ಳ್ಳಾ ಶರಧಿಯ ತಾ ಕಂಡು ನೃಪತಿ ॥
ಕೇಸರಿ ಮಧ್ಯೆ ಶ್ರೀಯನುಮತಿ ನೋಡಿ ವಾ- । ರಾಶಿಯ ಗಂಭೀರವನು ॥ ೨೭ ॥

ಅಂಗದವೊಲು ಜೀವಮಯ ಭಾವಿಸೆ ರಣ- । ರಂಗದ ವೊಲು ಕರಿಮಯವು ॥
ಭಂಗಮಯವು ಹೇಡಿ ನೃಪರಂತೀ ಜಲನಿಧಿ- । ಯಂಗಜಯಲಗೆ ! ನೀ ನೋಡು ॥ ೨೮ ॥

ಹರಿಮಯ ವೃಕ್ಷದವೊಲು ಭಾವಿಸಿ ನೋಡೆ । ನೊರೆಮಯ ಸೈಂಧವನಂತೆ ॥
ಪರಿಪರಿಯನುವಿಷಮಯ ಸ್ವರ್ಗಂಬೊಲು । ಗುರುಕುಚೆ ! ಈ ಕಾಳೋದಕವು ॥ ೨೯ ॥

ಶಿವಮಯ ವನದಂತೆ ದಿವಿಯಂತೆ ಗೃಹಮಯ । ಭವದಂತೆ ಚತುರ್ಗತಿ ಮಯವು ॥
ಪವಿಮಯ ಗಿರಿಯಂತೆ ವಿಟಪಿಯಂದದೊಳಬ್ಧಿ । ನವ ಪ್ರವಾಳವು ಮಯ ನೀರೆ ! ॥ ೩೦ ॥

ಕಣಮಯ ತೂಣೀರದಂತೀ ಜಲನಿಧಿ । ಮಣಿಮಯ ವೃಶ್ಚಿಕದಂತೆ ॥
ಎಣಿಸಿ ನೋಡಲು ಗೋತ್ರಮಯ ಬ್ರಾಹ್ಮಣರಂತೆ । ಫಣಿವೇಣಿ ! ಕಾಳೋದಕವು ॥ ೩೧ ॥

ಮುತ್ತುಮಯವು ವಿಟವಿಟನಂತೆ, ಹೊಲದಂತೆ । ಉತ್ತಮ ಕಂಬಗಳ್ಮಯವು ॥
ಅಳ್ತಿಯಿಂ ನೋಡಿಯಮೃತೋದ್ಭವವೆನ್ನ । ಚಿತ್ತವ ಸೂರೆಗೊಂಬವಳೆ ! ॥ ೩೨ ॥

ಇವು ಮೊದಲಾದ ಕೌತುಕವನು ಪೇಳುತ । ಯುವತಿರನ್ನೆಯರೊಡಗೂಡಿ ॥
ನವರತ್ನಮಯ ಪುಷ್ಪಕವನು ಮುಂದಕೆ । ಭುವನೇಶ ನಡೆಯಿಸುತಿರಲು ॥ ೩೩ ॥

ಗಿರಿಗಳ ಮುಳುಗಿಸಿ ಗಗನಕೆ ನೆಗೆಯುತ । ಮೊರೆವುತ ವಜ್ರ ವೇದಿಕೆಯ ॥
ತುರಿಹದಿಂ ಬಡಿವುತ ಹಿಂದಕೆ ಸಾರುವ । ತೆರೆಗಳದ್ಭುತವನು ಕಂಡು ॥ ೩೪ ॥

ಅನುಮತಿ ಮೊದಲಾದ ಪ್ರಾಣನಾಯಕಿಯರು । ಮನದನ್ನನೀ ಜಲಧಿಯೊಳು ॥
ಘನವಾದ ಹಡಗೇರಿ ನೀರಾಟವಾಡುವ । ಮನಸಾಗಿದೆ ಎಂದೆನುತ ॥ ೩೫ ॥

ನೀಡುಗಾಸೆಯ ಕರದೊಳಗಾಂತು ತಮ್ಮಯ । ಕುಡುತೆಗಂಗಳ ಪಸರಿಸುತ ॥
ಬಿಡದೆ ದೈನ್ಯೋಕ್ತಿಯಿಂ ಜಿನುಗುವಬಲೆಯರ । ಕಡು ಪ್ರೀತಿಯಿಂ ಕಂಡು ನೃಪತಿ ॥ ೩೬ ॥

ಕನಕನಿರ್ಮಿತ ನೂರು ಯೋಜನದಗಲದ । ಘನ ರತ್ನಾಂಕಿತವಾದ ॥
ಅನುಪಮ ಹಡಗ ವಿದ್ಯಾಬಲದಿಂದಲಾ । ಜನಪತಿ ನಿರ್ಮಿಸಿ ಮುದದಿ ॥ ೩೭ ॥

ಮಾನಿನಿಯರುಗಳುವೆರಸಿ ತಾನದರೊಳು । ಸಾನಂದದಿಂ ಕುಳಿತಾಗ ॥
ಪೀನ ಹಡಗ ಕಾಳೋದಕ ವಾರ್ಧಿಲಿ । ಮಾನವಪತಿ ನಡೆಸಿದನು ॥ ೩೮ ॥

ಗಿರಿಯೇರುವಂದದಿ ತೆರೆಗಳ ಭೈತ್ರವು । ಭರದಿಂದಲೇಳಿಯಿಳಿಯಲು ॥
ತರುಣಿಯರ್ನಡುಗುತ ಪ್ರಾಣನಾಯಕನನು । ಗುರುಕುಚದಿಂದಲಪ್ಪುವರು ॥ ೩೯ ॥

ತೆರೆಯುಪರಿಮದೊಳು ಹಡಗು ನಡೆಯುತಲಿ । ತಿರುಹುತಲಿಹುದಃ ಚೆಲ್ವಿಂದ ॥
ಶರದಭ್ರದ ನಟ್ಟನಡುವೆ ಚರಿಸುತಿರ್ಪ । ತರಣಿಮಂಡಲವೋ ಎಂಬಂತೆ ॥ ೪೦ ॥

ಜಾರಲು ಮುಂದಕೆ ತೆರೆಯಾ ಭೈತ್ರವು । ವಾರಿದ ಪಥದಿಂದರ್ಣವಕೆ ॥
ಸೂರ ಬಿರ್ದಂತೆ ಬೀಳಲು ಜೆಚ್ಚಿದ ವೈಯು । ನೀರ ಬೇಡೆಂದು ಮುದ್ದಿಪರು ॥ ೪೧ ॥

ಗರಗುಟ್ಟುತ ಸುಳಿಯೊಳು ಸಿಕ್ಕಿ ತಿರ್‍- । ನಿರದೆ ತಿರುಗುವಾ ಹಡಗು ॥
ಭರದಿಂದ ಮುಳುಗುವಂತಾಗೆ ಕೋಮಲೆಯರು । ಬೆರಳ ನೆಟ್ಟಿಗಳ ಮುರಿವುತ ॥ ೪೨ ॥

ನಳಿನಾಕ್ಷಿಯರಾಗ ಬಗಸೆಗಂಗಳ ಮುಚ್ಚಿ । ಪಲುಬುತ ದೈನ್ಯಗರೆವುತ ॥
ಇಳೆಯಾಣ್ಮನ ಗಲ್ಲವಿಡಿದಲುಗುತ ಪ್ರಿಯ ! । ಸಲಹೆಮ್ಮನೆಂದು ನುಡಿವರು ॥ ೪೩ ॥

ಭೋರೆಂದು ಮೊರೆವುತ ಗಿರಿಯಂದದ ತೆರೆ । ಚಾರು ನಾವೆಯ ಬಂದು ತಗಲೆ ॥
ನೂರು ಗಾವುದ ಹಿಂದಕೆ ಚಿಗಿ ಚಿಗಿವುದು । ಧೀರ ಮುಂದಕೆ ನಡೆಯಿಪನು ॥ ೪೪ ॥

ಹದಿನೆಂಟು ಗಾವುದದಗಲ ಮೂವತ್ತಾರು । ವಿದಿತ ಗಾವುದ ನೀಳವಾದ ॥
ಅದುಭುತವಾದ ಝುಷವು ಹಡಗನು ಕಂ- । ಡುದಧಿಯಿಂ ಹೊಳೆದಂಬರಕೆ ॥ ೪೫ ॥

ಗಾವುದ ನೆಗೆದೊಂದು ಗಿರಿ ಬೀಳುವಂದದಿಂ- । ದಾ ಉದಧಿಯೊಳು ಮೆರೆವುತ ॥
ನಾವೆಯ ಇದಿರೊಳು ಬಿದ್ದ ಮತ್ಸ್ಯವ ಕಂಡು । ಭಾವಕಿಯರು 'ಅವ್ವೆ' ಎನುತ ॥ ೪೬ ॥

ಭರದಿಂದಲೇಳುತ ಬೀಳುತಲೈತಂ- । ದರಸನ ಮರೆಗೊಳೆ ಬೆದರಿ ॥
ದೊರೆ ನಗುತೆಂದನು ಇದು ಮಹಾ ಮಾನು ಬೆ- । ದರದಿರಿ ಎಂದು ನಂಬಿಸಿದ ॥ ೪೭ ॥

ಹರಿಹರಿದಾರಿಗೆ ವಿದ್ಯಾಬಲದಿಂದ । ದೊರೆ ನೆಗೆಯಿಸಲೊಳಗಿರ್ಪ್ರ ॥
ಗರುವೆಯರುಗಳಂಗ ಕುಲುಕಲು ಬೆಚ್ಚುತ । ಅರಸನ ಮೊಗವ ನೋಡುವರು ॥ ೪೮ ॥

ಕಡು ಬೇಗದಿ ತೆರೆ ಬಡಿದು ಹಿಂದಕೆ ಸಾರೆ । ಒಡನೆ ಮತ್ತೊಂದು ಕಲ್ಲೋಲ ॥
ಹಡಗನು ಬಡಿಯಲಿದರ ಘುಂತುರ್ವನಿ । ಸಿಡಿಯೆ ತರುಣಿಯರ ಮೇಲೆ ॥ ೪೯ ॥

ಶರಧಿರಾಜನು ಜ್ಞಾನಚಂದ್ರಮನಸನು ಕಂಡು । ಭರದಿಂದಲಿದಿರೈತಂದು ॥
ವರ ಮುತ್ತಿನಕ್ಷತೆಗಳ ದಂಪತಿಗಳ । ಶಿರದೊಳು ತಳಿದಂತಿಹುದು ॥ ೫೦ ॥

ಹಡಗೊಡೆದಂತೆ ವಿದ್ಯಾಬಲದಿಂದಾಗ । ಪೊಡವಿಪ ಮಾಡೆ ನೀರೆಯರು ॥
ಮಿಡಿಮಿಡಿ ಮಿಡುಕುವ ಗಡಗಡ ನಡುಗುತ । ಎರೆಯನೆ ! ನಮ್ಮ ಹರಣವ ॥ ೫೧ ॥

ಅತಿ ರಕ್ಷಿಸು ನಲ್ಲ ! ನಿನ್ನನು ನಂಬಿದ । ಸತಿಯರಲ್ಲವೆ ನಾವೆಂದು ॥
ನುತಿಸುತ ದೈನ್ಯದಿ ಲಲ್ಲೆಗರೆವುತಾಗ । ಕ್ಷಿತಿಪನ ಕೈಕಾಲು ನಡುವ ॥ ೫೨ ॥

ಕೊರಳುಗಳನು ತಬ್ಬಿ ಕೆಟ್ಟೆವೆಂದೆನುತಲಿ । ತರುಣಿಯರ್ಹಲುಬುತಿರಲು ॥
ನರನಾಥ ಚಂದ್ರನು ಒಳಗುಬ್ಬಿ ನಗುತಲಿ । ಗರುವೆಯರಾಟವ ಕಂಡು ॥ ೫೩ ॥

ತೊಲಗಿಸಿ ಮಾಯೆಯ ಲಲನೆಯರ್ಕಳು ಕಂಡು । ತಲೆದೂಗಿ ಪೂರುಷರೊಳಗೆ ॥
ತೊಲಗಿತು ಮಾಯೆಯೆಂಬುದು ಎಂದಾ ಚೇಷ್ಟೆಯ । ಕಲಿತಿರಿ ನೀವೆಲ್ಲಿಂದೆನುತ ॥ ೫೪ ॥

ಸ್ತ್ರೀಯರುಗಳೊಳಗಲ್ಲದೆ ಭಾವಿಸಿ ನೋಡೆ । ಮಾಯವಿದೆಂಬರು ಜನರು ॥
ಸ್ತ್ರೀಯರಿಗಿಂತ ನಾಲ್ಮಡಿ ಹೆಚ್ಚಾಗಿರ್ದ । ಮಾಯಠಾಣೆಗಳು ಪುರುಷರು ॥ ೫೫ ॥

ಕಟಕಟ ಕೌಟಿಲ್ಯಗಾರನೆಂಬುದು ನಾವು । ದಿಟವಾಗಿ ತಿಳಿದೆವು ಈಗ ॥
ತಟಹೊಟತನವಿಲ್ಲದಿದ್ದೊಡೆ ರಾಜ್ಯವ । ಪಟುತನದಿಂದಾಳ್ವರೆಂತು ॥ ೫೬ ॥

ನ್ಯಾಯಾಗಾರಗೆ ತಕ್ಕ ಮದ್ದು ದೊರಕಿತೆಂಬ । ನ್ಯಾಯದಿಂ ದಿಟ ಉಳಿಗರಿಗೆ ॥
ಬಾಯಿ ಬಡಿಕೆ ವಿದ್ಯೆಯು ಸೇರಿದ ಮೇಲೆ । ರಾಯನೇನೇನನು ಮಾಡ ? ॥ ೫೭ ॥

ದೇಶ ದೇಶದ ದೊರೆಗಳು ಸ್ವಯಂವರಕ್ಕೈದೆ । ಗಾಸೆ ಮಾಡಿದ ವಿದ್ಯೆಯಿಂದ ॥
ಈಶನಾಗಿಯು ನಮ್ಮೊಳಗಿಷ್ಟು ನಡೆಸಿದ । ಭೂಸುದತಿಪರ ಲೆಕ್ಕಿಪನೇ ? ॥ ೫೮ ॥

ಕಾಸರಕಿನ ಹಣ್ಣಿನಂತೆ ಹೊರಗೆ ಕೆಂಪು । ಸೂಸುತಿರಲು ಮರುಳ್ಗೊಂಡು ॥
ಈ ಸಠೆಗಾರನ ನಂಬಿದುದಕೆ ತಕ್ಕ । ಲೇಸನೆಸಗಿದಕಟಕಟ ! ॥ ೫೯ ॥

ತರುಣಿಯರಾಡುವ ನುಡಿಗೆ ಸಂತಸದಾಳಿ ! ದರಹಸಿತಾನನನಾಗೆ ॥
ಮುರಿದು ನಿಟ್ಟಿಸುತ ರಾಯನ ಮುದ್ದು ಮೊಗವನು । ತರಳೆಯರ್ನೋಡಿ ಬೈವುತಲಿ ॥ ೬೦ ॥

ತಲೆದೂಗುತಲಿ ನೆಟ್ಟಿಗಳನು ಮುರಿವುತ । ಫಲವಾಯ್ತು ನಾವು ಬಂದುದಕೆ ॥
ಅಳಲಿಸುವೇಳೆಯು ನಮಗೊಂದಿಲ್ಲವೆ। ಸಲೆ ತಕ್ಕುದ ಮಾಳ್ಪೆವೆನುತ ॥ ೬೧ ॥

ಒಳಗುಬ್ಬಿ ಗಂಡನ ಚಾತುರ್ಯಕೆ ಮೆಚ್ಚಿ । ಬೆಳತಿಗೆಗಣ್ಣಿಂದ ನೋಡಿ ॥
ಎಳನಗೆ ಮಿಸುಗಲು ಕೊನರಿ ಬೈವುತಲಾಗ । ಎಳೆವೆಂಗಳ ತಂಡವಿರಲು ॥ ೬೨ ॥

ಕೇಳಿ ಭೂಪಾಲನು ಸುಖವೆಂಜಂಗಡಲೊಳು । ತೇಲಾಡಿ ಮುಂದಕ್ಕೈದುತ್ತ ॥
ಲೋಲಾಕ್ಷಿಯರಿಗಾ ಕೂಪಾರದೊಳಗಿರ್ದ । ಮೇಲು ಮೇಲೊಡವೆದೋರಿಸುತ ॥ ೬೩ ॥

ಸಾತೋದರಿಯರಿಗಾರ್ಣವದೊಳಗಿರ್ದ । ನೂತನಗಳನು ಕಾಣಿಸುತ ॥
ಧಾತಕಿ ಷಂಡ ದ್ವೀಪವನು ನಲ್ಮೆಯೊಳಾ । ಭೂತಳಾಧೀಶ್ವರ ಪೊಕ್ಕು ॥ ೬೪ ॥

ವನಗಳ ನದಿಗಳ ಗಿರಿಗಳ ಪುರಗಳ । ಘನವಾದ ನಗರ ಪಟ್ಟಣವ ॥
ವನಿತಾಮಣಿಗಳ್ಗೆ ಜನಪತಿ ತೋರುತ । ಅನುನಯದಿಂ ಭರತದೊಳು ॥ ೬೫ ॥

ಫಳಿಲನೆ ನಡೆತರುತಿರಲಾ ಕ್ಷುಲ್ಲಕ । ಜಲಧಿಯ ಮಧ್ಯದೊಳೊಂದು ॥
ಪೊಳೆವ ರತ್ನದ್ವೀಪವ ಕಂಡನುಮತಿ- । ಯೊಳಗಿಂತು ನುಡಿದನು ರಾಯ ॥ ೬೬ ॥

ಭರತದ ಪಶ್ಚಿಮ ಜಲಧಿಯ ಮಧ್ಯದೊ- । ಳರುಣರತ್ನಾಂಕಿತದಿಂದ ॥
ಇರುವ ದಿವಿಯ ನೋಡಿದರ ವಿಸ್ತೀರ್ಣವು । ನಿರುತದಿಂ ಶತ ಯೋಜನವು ॥ ೬೭ ॥

ಇನ್ನೂರು ಯೋಜನ ನೀಳವಾಗಿದೆ ಎಲೆ । ಕನ್ನೆ ! ಈ ಜಲಧಿಯಿಂ ಮೇಲೆ ॥
ಹನ್ನೆರಡ್ಗಾವುದ ಉನ್ನತವಾಗಿದೆ। ನನ್ನಿಯಿಂ ಇತರ ಮಧ್ಯದೊಳು ॥ ೬೮ ॥

ಹದಿನೆಂಟು ಗಾವುದ ಉನ್ನತವಾಗಿರ್ಪ । ಉದಯಾರ್ಕ ರಾಗ ವರ್ಣದೊಳು ॥
ತ್ರಿದಶಗಿರಿಯನು ಜರಿವ ಹೊನ್ನಬೆಟ್ಟವ। ಬೆದರ್ವಲ್ಲಿಗಣ್ಣಳೆ ! ನೋಡು ॥ ೬೯ ॥

ಇದರ ಮೇಲ್ಗಡೆಯಲ್ಲಿ ನೂರೆಂಟು ಗಾವುದ । ಸದಮಲ ವೃತ್ತಾಕಾರದೊಳು ॥
ವಿಧುಮಂಡಲವ ಜರಿವ ರೂಪ್ಯ ಶಿಖರವು । ಇದೆ ನೋಡು ಕಂಜಾಯತಾಕ್ಷಿ ! ॥ ೭೦ ॥

ಸುರುಚಿರವಾದೀ ಬೆಳ್ಳಿ ಶಿಖರದೊಳು । ಸುರಹೊನ್ನೆ ಮಂದಾರವಗಿಲು ॥
ಸುರಗಿಸಂಪಗೆ ನಾಗಸಂಪಿಗೆ ಕಂಕೇಲಿ । ಶಿರ ಕರ್ಪುರವಾಳೆಯಗಿಲು ॥ ೭೧ ॥

ಸರಸಾಮ್ರ ಮೊದಲಾದ ತರುಗಳು ತೀವಿದ । ವರ ನಂದನವನದಿಂದ ॥
ಮೆರೆವುದೀ ಗಿರಿಯು ಇದರ ನಾಮ ಕಾಂಚನ । ಗಿರಿಯೆಂದು ನೋಡೆಲೆಯರಸಿ ! ॥ ೭೨ ॥

ಈ ಶೈಲದ ಚೆಲ್ವಿಕೆಗಂಡು ಮನ್ಮಸ- । ಮೋಸರಿಸದು ಪೋಪುದಕೆ ॥
ಭಾಸುರಪುರವ ನಿರ್ಮಿಸಿ ನಾವಿದರೊಳ್ವಿ- । ಲಾಸದೊಳಿರಬೇಕೆಂದು ॥ ೭೩ ॥

ಧರೆಗಿಳಿತಂದಾ ಗಿರಿಯ ಮೇಗಡೆ ನಿಂದು । ದೊರೆ ನವ ಯೋಜನದಗಲ ॥
ಮೆರೆವ ದ್ವಾದಶ ಯೋಜನದ ನೀಳದೊಳಾಗ। ವರ ಕಾಂಚನಮಯವಾದ ॥ ೭೪ ॥

ಪೊಳೆವ ಮೂರ್ಸುತ್ತಿನ ಕೋಂಟೆಯ ವಿದ್ಯಾ- । ಬಲದಿಂದ ನಿರ್ಮಿಸಿಯದಕೆ ॥
ಚೆಲುವ ರನ್ನದೊಳು ಇನ್ನೂರು ಬಾಗಿಲ ಮಾಡಿ । ಸಲೆ ಸಾಸಿರದಿಡ್ಡಿ ತೆಗೆದು ॥ ೭೫ ॥

ಈರಾರು ಸಾಸಿರ ಕೇರಿಯ ನಿರ್ಮಿಸಿ । ಸೂರಿದ ವೀಥಿ ಮಧ್ಯದೊಳು ॥
ಭೂರಿ ರತ್ನಾಂಕಿತ ಸಾಸಿರಕೂಟದ । ಮಾರಾರಿ ಗೃಹವನು ರಚಿಸಿ ॥ ೭೬ ॥

ನಾಲ್ವತ್ತು ಬಿಲ್ಲುದ್ದದ ಶಾಂತಿ ಜಿನಪನ । ಚೆಲ್ವಾದ ಸ್ವರ್ಣ ಬಿಂಬವನು ॥
ಗೆಲ್ವೆತ್ತು ರಾಜಿಸೆ ಸುತ್ತಲೆಪ್ಪತ್ತೆರಡು । ಬಲ್ಬಿಂಬವನು ಬೇಗಗೈಸಿ ॥ ೭೭ ॥

ಎರಡು ಸುತ್ತಿನ ಸುವರ್ಣದ ಫೌಳಿಯು । ಮಿರುಗೆ ವಸತಿಯನು ಬಳಸಿ ॥
ವರ ಮೌಕ್ತಿಕದ ಹೆಬ್ಬಾಗಿಲು ಜರೆವುದು । ಸುರಲೋಕದ ದ್ವಾರವನು ॥ ೭೮ ॥

ಹುದುಗಿದ ನವರತ್ನದಿಂದ ರಾಜಿಸುತಿರ್ಪ । ಹದಿನೈದು ನೆಲೆಯ ಗೋಪುರವು ॥
ಮೊದಲ ಬಾಗಿಲ ಮೇಲೆ ಗಗನವ ಮುಟ್ಟುತ । ಧಗಧಗಿಸುತಲೊಪ್ಪಿದುದು ॥ ೭೯ ॥

ನವಕೇವಲಲಬ್ಧಿಗೆರೆಯುಸೀತನೆಯೆಂದು । ಭುವಿಯೊಳು ಪ್ರಕಟಿಸುವಂತೆ ॥
ನವ ಕಾಂಚನದೊಂಬತ್ತು ಕಳಶಗಳು । ರವಿಯಂತೆ ಬೆಳಗುವವಲ್ಲಿ ॥ ೮೦ ॥

ಹರಿಹರ ಬಿದಿಗಳು ದೇವರುಗಳು ಎಂದು । ಬರಿದೆ ನಂಬಿಗೆಟ್ಟಪಿರಿ ॥
ಅರುಹನ ಭಜಿಸಿ ದುರಿತವ ಸುಡಿರಿ ಎಂದು । ಕರೆವಂತೆ ಧ್ವಜ ಚಲಿಸುವವು ॥ ೮೧ ॥

ಪರಮತದೊಳು ದಾನ ಧರ್ಮ ತಪವ ಮಾಡೆ । ದುರಿತಾರ್ಜಿತ ಸಿರಿಯೈಸೆ ॥
ಅರುಹನ ಮತದೊಳಲ್ಲದೆ ಮುಕ್ತಿಯಿಲ್ಲೆಂದು । ಒರೆವಂತೆ ಧ್ವಜದುಲುಹಿಹವು ॥ ೮೨ ॥

ಜನಪನ ಗೃಹಕಿದಿರಾಗಿ ಮೂಸುತ್ತಿನ । ಕನಕ ನಿರ್ಮಿತ ಕೋಂಟೆಯಿಂದ ॥
ಇನಪಥವನು ಚುಂಬಿಪ ಸಜ್ಜೆಗಳಿಂದ । ಘನ ರತ್ನಾಂಕಿತ ಹರ್ಮ್ಯದಿಂದ ॥ ೮೩ ॥

ನವರತ್ನಮಯ ಪಂಚಶತ ಸೌಧಂಗಳು । ದಿವಿಜಲೋಕವ ಮುಟ್ಟುವಂತೆ ॥
ನವ ನೂತನವಾಗಿ ರಾಜಾಲಯದೊಳು । ದಿವಿಜೆಯರನುಗೈಸಿದರು ॥ ೮೪ ॥

ಎತ್ತಿದ ಧ್ವಜಪತಾಕೆಯ ಟೆಕ್ಕೆಗಳಿಂದ । ಉತ್ತಮ ಮಣಿ ಘಂಟೆಯಿಂದ ॥
ಚಿತ್ತ ಸೋಲಿಪ ಸ್ವರ್ಣಬುರುಜುಗಳಿಂ ಚೆ- । ಲ್ವೆತ್ತುದು ರಾಜಾಲಯವು ॥ ೮೫ ॥

ಅರಮನೆ ಮುಂದೆ ಜಗನ್ಮೋಹನವೆಂಬ । ಮೆರೆವ ಮುತ್ತಿನ ಚಾವಡಿಯು ॥
ಸುರಪತಿಯೋಲಗ ಸೌಧರ್ಮ ಸಭೆಯನು । ಜರೆವಂತೆ ರಚಿಸಿದರವರು ॥ ೮೬ ॥

ಸುರಗಿರಿಗಳು ದೇವರ್ಕಳ ಭಯಕಳ್ಕಿ । ಧರಿಸಿ ಪಲವು ರೂಪಗಳ ॥
ದೊರೆರನ್ನನೂರೊಳು ನಿಂದವೋ ಎಂಬಂತೆ । ಕರುಮಾಡವು ಪಲವಿಹವು ॥ ೮೭ ॥

ಇಂತನುಗೈಸಿದ ಅರಮನೆಯೊಳು ಭೂ- । ಕಾಂತನಧಿಕ ವೈಭವದಿ ॥
ಕಂತುವಿನಂತೆ ಸೀಮಂತಿನಿಯರೊಳು ನಿ- । ಶ್ಚಿಂತೆಯೊಳಗೆ ಇರುತಿರಲು ॥ ೮೮ ॥

ಕರಿಚರದೇವನು ಕನಕವಿಮಾನವ- । ನರಸಿಯರೊಡಬರಲೇರಿ ॥
ತುರಿಹದಿಂದವೆ ಬರುತಿರಲು ವಿಮಾನದ । ಕಿರಣವೆಣ್ದೆಸೆಯನು ತುಂಬೆ ॥ ೮೯ ॥

ಮಘಮಘಿಸುವ ದಿವ್ಯ ಕಾಯದ ಗಂಧದಿಂ । ಜಗವ ತುಂಬುತ ನಿರ್ಜ್ಜರರು ॥
ಜಗದೇಕವೀರನಾಸ್ಥಾನಕೆ ಬರುತಿರೆ । ದಿಗಿಲನೆ ಕಂಡು ಜ್ಞಾನೇಂದು ॥ ೯೦ ॥

ಇದಿರೆದ್ದು ಗಾಢಾಲಿಂಗನವನು ಮಾಡಿ । ಸದುವಿನಯದೊಳೊಡಗೊಂಡು ॥
ತ್ರಿದಶರು ಹರಿಪೀಠ ಯುಗದೊಳು ಕುಳ್ಳಿರಲು । ಚದುರ ಕುಳಿತ ಗದ್ದುಗೆಯೊಳು ॥ ೯೧ ॥

ಇಂದುನ್ನತ ವೃಂದಾರಕ ವಂದ್ಯರು । ಬಂದಿರೇ, ಒಳಿತಾಯಿತೆಂದು ॥
ಮಂದಿರವಿಂದತಿ ಪಾವನವಾಯಿತಾ- । ನುಂ ಧನ್ಯ ! ಮಾನ್ಯನು ಎಂದು ॥ ೯೨ ॥

ಕಂದರ್ಪಸನ್ನಿಭ ಮನದೊಳಗಾಗಾ- । ನಂದವ ತಾಳಿ ನುತಿಸಲು ॥
ಕಂದನ ನುಡಿಗೇಳಿ ಸಂತೋಷವ ತಾಳಿ । ವೃಂದಾರಕ ಬಿಗಿಯಪ್ಪಿ ॥ ೯೩ ॥

ಕರದಿಂದ ಬೆನ್ನ ತಡಹುತೆನ್ನಯ ಕಂದ ! । ವರ ಸಾಮ್ರಾಜ್ಯ ಪಟ್ಟವನು ॥
ವಿರಚಿಸಲಾವೀರ್ವರು ಬಂದೆವೆಂದಾಗ । ಒರೆಯಲು ಸಂತೋಷವ್ವೈದೆ ॥ ೯೪ ॥

ಹರಸಿ ಸೇಸೆಯನಿಕ್ಕಿದ ನಿರ್ಜ್ಜರೆಯರ । ವರ ಕುಶಲವ ಬೆಸಗೊಂಡು ॥
ಅರಮನೆಗೈದಿರಿ ತಾಯಂದಿರ ! ಎಂದು । ಒರೆದು ಹೆಗ್ಗಡತಿಗಪ್ಪೈಸೆ ॥ ೯೫ ॥

ಒಡಗೊಂಡು ಬರೆಯರಮನೆಗೆ ಹೆಗ್ಗಡತಿಯು । ಕಡು ಹರುಷದೊಳಗನುಮತಿಯು ॥
ಒಡನೆದ್ದಿದಿರ್ವಂದಾಲಿಂಗಿಸಿ ಕೈಯ । ಪಿಡಿದೊಳಯಿಂಕೆ ಕರದೊಯ್ದು ॥ ೯೬ ॥

ಬಗೆ ಬಗೆ ಗದ್ದುಗೆಗಳ ಹಾಕಿಸಿಯಾಗ । ಸುಗುಣೆವೆಣ್ಣವರ ಕುಳ್ಳಿರಿಸಿ ॥
ನಗೆಮೊಗದಿಂದೆಲ್ಲ ದೇವಿಯರೊಗ್ಗಿಲಿ । ಮಿಗೆ ಹರುಷದಲಿ ಕುಳಿತರು ॥ ೯೭ ॥

ಕುಶಲದಿಂ ಕ್ಷೇಮವನನ್ಯೋನ್ಯ ಬೆಸಗೊಂಡು । ಶಶಿಮುಖಿಯನುಮತಿದೇವಿ ॥
ಹೊಸಪರಿಯಾಗಿದೆ ಗಮನ ನಮ್ಮೊಳಗಿಪ್ಪು । ಪಸರಿಸಿತೋ ಪ್ರೀತಿಯೆನಲು ॥ ೯೮ ॥

ಹರಿಕೇತು ಸುರನಗ್ರಮಹಿಷಿ ಸ್ವಯಂಪ್ರಭೆ । ದರಹಸಿತಾನನೆಯಾಗಿ ॥
ಒರೆದಳು ಜ್ಞಾನೇಂದು ಕುವರಗೆ ಸಾಮ್ರಾಜ್ಯ । ಸ್ಥಿರ ಪಟ್ಟಗಟ್ಟಬೇಕೆಂದು ॥ ೯೯ ॥

ನಿಮ್ಮ ಮಾವಾಜಿಯು ನಿಮ್ಮ ಕುಮಾರನು । ನಮ್ಮೆಲ್ಲರನೊಡಗೊಂಡು ॥
ಸುಮ್ಮಾನದಿಂದೈದಿದರೆಂದು ಸೊಸೆಯರ್ಗೆ । ಗಮ್ಮನಾಡಿದಳಾ ದೇವಿ ॥ ೧೦೦ ॥

ವನಿತಾಮಣಿಗಳ ರೂಪು ಬೆಡಗು ಗಾಡಿ । ಬಿನದ ಬಿನ್ನಾಣ ಬಿಂಕವನು ॥
ಮಿನುಗುವ ಸಿಂಗಾರವನಿಟ್ಟ ದಿಟ್ಟಿಯಿಂ- । ದನುಮಿಷೆಯರು ನೋಡಿ ನೋಡಿ ॥ ೧೦೧ ॥

ಬರಿದೆ ಸುರಾಂಗನೆಯರು ಚೆಲ್ವೆಯರೆಂದು । ಒರೆವುದು ಕವಿನಿಕುರುಂಬ ॥
ಪರಿಕಿಸೆಯಿವರೊಂದು ಕಿರುಗಣಿಕೆಯ ಚೆಲ್ವ । ಧರಿಸಲಾರ್ಪುದೆ ನಮ್ಮ ರೂಪು ॥ ೧೦೨ ॥

ಎಂದೆಲ್ಲ ಬಿಡುಗಣ್ಣೆಯರು ಚಿತ್ತದೊಳಾ-। ನಂದವ ತಾಳಿ ಜಿನದವ ॥
ಅಂದು ವನಿತೆಯರೊಳಾಡುತಿರಲು ಜ್ಞಾ-। ನೇಂದು ಮಹಾಮಂಡಲೇಶ ॥ ೧೦೩ ॥

ವರ ಕೌಶಲ ಪಲ್ಲವ ವಙ್ಗ ಕಾಶ್ಮೀರ ! ಕುರುಜಾಂಗಣ ಹಮ್ಮೀರ ॥
ತುರುಕ ಕಮ್ಮೀರಾವಂತಿ ಪಾಂಚಾಲದ। ದೊರೆಗಳು ಮೊದಲಾದವರ ॥ ೧೦೪ ॥

ರೋರುಕಪುರದ ಶ್ರೀ ಜಯವರ್ಮ ಭೂಪನ। ಚಾರು ಶ್ರೀ ಜಿನದತ್ತನನು ॥
ಧೀರ ವಿಮಲವಾಹನ ಜಯಸೇನನ। ಭೈರವ ಮಂತ್ರಿಯ ಕರೆಸಿ ॥ ೧೦೫ ॥

ಭಾರತ ವ್ಯಾಸದ ಭೂಚರ ಖೇಚರ। ಭೂರಮಣೇಶರ ಭರದಿ ॥
ವೀರರ ತಲೆವಣಿ ರಾಜೇಂದ್ರ ಬರಿಸಿದ। ಚಾರುವೈಭವದಿದಿಗೊಳಿಸಿ ॥ ೧೦೬ ॥

ಪುರವನು ಪೊಗಿಸಿ ಪಡಿ ಬಿಡಾರಗಳನು। ಕೊಡಿಸೆಂದು ಮಂತ್ರಿಗಪ್ಪೈಸೆ ॥
ಸಡಗರದಿಂ ಬಹುಶ್ರುತಮಂತ್ರಿ ಬಂದರ್ಗೆ। ಪಡಿ ಬಿಡಾರಗಳ ಮಾಡಿಸಿದ ॥ ೧೦೭ ॥

ಸುರನಿಕರಾಹತ ಪಟುಪಟಹಂಗಳು। ಪರಿ ಘೂರ್ಣಿಸೆ ಶಂಖ ಕಹಳೆ ॥
ಉಲಿದೂದೆ ಕೋಟಾಕೋಟಿ ವಾದ್ಯದ ರವ। ಧರೆಯಾಕಾಶವ ತುಂಬೆ ॥ ೧೦೮ ॥

ಸುರಗಣಿಕೆಯರು ನೃತ್ಯಂಗಳನಾಡಲು। ಸುರವನಿತೆಯರು ಶೋಭನವ ॥
ವರ ಧವಳಂಗಳ ಸ್ವರವೆತ್ತಿ ಪಾಡಲು। ಸುರಪಾಠಕರು ಕೊಂಡಾಡೆ ॥ ೧೦೯ ॥

ಕರದ ಕಂಕಣ ಝಣಝಣರೆನುತಿರಲಾಗ। ಸುರಸತಿಯರು ಚಾಮರವ ॥
ಮುರುಕದೊಳಗೆ ಢಾಳಿಸುತಿರೆ ತ್ರಿದಶರು। ನೆರೆದಿರ್ದ ಭೂಪರ ಮುಂದೆ ॥ ೧೧೦ ॥

ಅಂಗಣದೊಳಗಣ ರತ್ನನಿರ್ಮಿತವಾದ। ಮಂಗಲಮಯ ಮಂಟಪದೊಳು ॥
ಹೊಂಗೆಲಸದ ಮಣೆಯೊಳು ಜ್ಞಾನಚಂದ್ರನ। ಕಂಗೊಳಿಪಂತೆ ಕುಳ್ಳಿರಿಸಿ ॥ ೧೧೧ ॥

ಇನಿಗಡಲಾದಿಯಾಗೈದು ಸಮುದ್ರದ। ಅನುಪಮ ಜಲವನು ಮುದದಿಂ ॥
ಮಿನುಗುವ ಗಂಗಾದಿನದಿಯ ತೀರ್ಥಾಂಬುವ। ಅನುಮಿಷರುಗಳಿಂದ ತರಿಸಿ ॥ ೧೧೨ ॥

ಕನಕನಿರ್ಮಿತ ಸಾಸಿರದೆಂಟು ಕಲಶದಿ। ಘನಸಾರವ ಹದಗೊಳಿಸಿ ॥
ಮನುಜೇಶಗೆಡಬಲದೊಳಗೆ ನಿಳಿಂಪರು। ಅನುರಾಗದಿಂ ನಿಂದುಕೊಂಡು ॥ ೧೧೩ ॥

ನವರತ್ನ ಕಳಶದಿಂ ತೀರ್ಥೋದಕವನು। ದಿವಿಜರು ಮೊಗೆಮೊಗೆದಾಗ ॥
ಭುವನೇಶ್ವರಗೆ ವಿಲಸಿ ಮಜ್ಜನವನು। ಸವಿನಯದಿಂದ ಮಾಡಿದರು ॥ ೧೧೪ ॥

ಸುರಗಿರಿ ಪಾಂಡುಕ ಶಿಲೆಯೊಳು ಕುಳ್ಳಿರಿಸಿ। ವರ ಜಿನಾರ್ಭಕನಿಕ್ಕೆಲದೊಳು ॥
ಉರುದಕ್ಷಿಣೋತ್ತರೇಂದ್ರರು ಅಭಿಷೇಕವ। ನೆರೆಪಂತಾಯ್ತು ನೋಳ್ಪರಿಗೆ ॥ ೧೧೫ ॥

ಸಿರಿಯನು ಜನಕಾಂತಿಯ ತನ್ನ ಬೆಳ್ಪಿಂದ। ಮರೆಸುವ ದಿವ್ಯಾಂಬರವ ॥
ದೊರೆಗಳ ದೇವ ಜ್ಞಾನೇಂದು ನೃಪಾಲಗೆ। ಸುರರು ಪೊದಿಸಿದರರ್ತಿಯೊಳು ॥ ೧೧೬ ॥

ಥಳಥಳಿಸುವ ಜ್ಯೋತಿರ್ಮಾಲೆಯೆಂದೆಂಬ । ವಿಲಸಿತ ಹಾರವ ಕೊರಲ್ಗೆ ॥
ಗೆಲವಿನಿಂದಿಕ್ಕಿ ಮುತ್ತಿನ ತೋರಸರವನಾ- । ಗಳವಡಿಸಿದರು ಕಂಠದೊಳು ॥ ೧೧೭ ॥

ಚರಣದೊಳಗೆ ತ್ರಿಜಗಾನಂದವೆಸರಿನ । ಮಿರುಗುವ ಕಾಲಪೆಂಟೆಯುವ ॥
ಕರದೊಳು ರನ್ನಗಂಕಣವ ಬಾಹುವಿನೊಳು । ವರ ಭುಜಕೀರ್ತಿಯನಿಟ್ಟು ॥ ೧೧೮ ॥

ವರ ಜಗನ್ಮೋಹನವೆಂಬ ಚಾವಡಿಯೊಳು । ಹರಿಪೀಠದೊಳು ಕುಳ್ಳಿರಿಸಿ ॥
ಶಿರದೊಳು ಸೂರ್ಯಪ್ರಭೆಯೆಂಬ ಮಕುಟವ- । ನೆರಕದೊಳಗೆಯುಳವಡಿಸಿ ॥ ೧೧೯ ॥

ವಿಲಸಿತ ಸಾಮ್ರಾಜ್ಯದ ಹೊನ್ನ ಪಟ್ಟವ । ಗೆಲವಿನಿಂ ಜ್ಞಾನೇಂದು ನೃಪನ ॥
ಚೆಲುವಾದ ಹಣೆಯೊಳು ಸುರರು ಕಟ್ಟಿದರಾ- । ಗಿಳೆಯಾಣ್ಮರು ಸಹವಾಗಿ ॥ ೧೨೦ ॥

ಇಳೆವೆಂಗಳಾಗೀರಾರು ಚಾಮರಗಳ । ನಳಿತೋಳನೆತ್ತಿ ಢಾಳಿಸಲು ॥
ಮೊಳಗಿ ದೋರಿದವು ಕೋಟಾಕೋಟಿ ವಾದ್ಯವು । ಇಳೆ ಗಡಗಂಪಿಸುವಂತೆ ॥ ೧೨೧ ॥

ಸುರಗಣಿಕೆಯರಾಗ ಮುರುಕದಿಂ ನಟನೆಯಿಂ । ಧರೆಯನು ಮೆಟ್ಟದೆ ತಾವು ॥
ಸುರುಚಿರ ವಿದ್ಯುಲ್ಲತೆಗಳೋ ಎಂಬಂತೆ । ದೊರೆಯ ಮುಂಗಡೆಯೊಳು ನಟಿಸೆ ॥ ೧೨೨ ॥

ಕರಿ ಹಯಂಗಳ, ಮಣಿಮೌಕ್ತಿಕ ಹಾರವ- । ಗರು ಘನಸಾರ ಕಸ್ತೂರಿ ॥
ಸುರಗಿ ಸಿಂಹಾಸನ ಮೊದಲಾದ ವಸ್ತುವ । ನರನಾಥನಿಗೆ ಕಾಣಿಕೆಯ ॥ ೧೨೩ ॥

ಪರಿತೋಷದೊಳು ಕೊಟ್ಟು ಭೂಚರ ಖೇಚರ । ದೊರೆಗಳು ಕೈಗಳ ಮುಗಿಯೆ ॥
ಸುರರೀರ್ವರು ತಾವಾವೇಳೆಯೊಳಾಗ । ಮರಸಿಯಿರುಳ ಪಗಲ್ಮಾಳ್ಪ ॥ ೧೨೪ ॥

ಮಿರುಗುಟ್ಟುವ ಸೂರಿಪಾನ ಹನ್ನೆರಡನು । ಕರಿಕಾಂಗ ಕುಳಿರೆ ಕೆಂಪಪ್ಪ ॥
ಹರಿವಿಷ್ಟರವನು ಪನ್ನೆರಡಾಗುವುದ । ಸ್ವರದೋರ್ಪ ನಾಲ್ಕು ಭೇರಿಯನು ॥ ೧೨೫ ॥

ಎತ್ತಿ ಪಿಡಿಯೆ ಛಾಯೆ ನೂರೆಂಟು ಬಿಲ್ಲಿನ । ವಿಸ್ತಾರವ ಪಸರಿಸುವ ॥
ಮುತ್ತಿನೊಳಗೆ ಸಮೆದ ಜಗಜಂಪಿನ । ಸತ್ತಿಗೆ ಕೊಟ್ಟಾಗೆರಡ ॥ ೧೨೬ ॥

ನೆಲದೊಳು ನಡೆವಂತೆ ಜಲದ ಮೇಗಡೆಯಲ್ಲಿ । ಘಳಿಲನೆ ನಡೆವಗ್ನಿಯೊಳು ॥
ಮುಳುಗಿದ ಮೇಲೇಳ್ವ ಕ್ಷಣಕೊಂದು ರೂಪನು । ತಳೆವ ಮಹಾಮಂತ್ರವನು ॥ ೧೨೭ ॥

ದೊರೆಗುಪದೇಶವ ಸಿಂಹಧ್ವಜ ಮಾಡೆ । ಗರಳಾದಿ ಸರ್ವ ವಿಷವನು ॥
ಪರಿಹರಿಸುವ ವಿಷಾಪಹಾರವ ಕರಿ- । ಚರ ದೇವ ಮಂತ್ರವ ಪೇಳೆ ॥ ೧೨೮ ॥

ಒಡನೊಡನಮರ್ದಪ್ಪಿ ನಿರ್ಜ್ಜರರೀರ್ವರು । ನುಡಿದು ವಿನಯ ವಚನವನು ॥
ಪೊಡವಿಪತಿಯು ಕೈಯ ಕಳುಹಿಸಿ ಕೊಡಲತ್ತ । ಜಡಜಾಂಬಕಿಯನುಮತಿಗೆ ॥ ೧೨೯ ॥

ನೆರಿವಿಡಿದುಡಲು ರಾತ್ರಿಯೊಳಾದರು ತನ್ನ । ಮಿರುಗುಟ್ಟು ಹಬೆಯಿಂದ ॥
ಭರದಿ ಕತ್ತಲೆಯನು ನೂಂಕಿ ಬೆಳಗು ತೋರ್ಪ । ಸರಿಗೆ ಸೀರೆಯನುಡಲಿತ್ತು ॥ ೧೩೦ ॥

ಅಮರಿಯರುಗಳು ಮತ್ತುಳಿದ ದೇವಿಯರಿಗೆ। ದ್ಯುಮಣಿಕಾಂತಿಯನಿಳಿಕೈವ ॥
ಕಮನೀಯವಾದ ಗುರುತಿನಾಭರಣವ। ಸಮನಿಸಿ ಕೊಟ್ಟರರ್ತಿಯೊಳು ॥ ೧೩೧ ॥

ವಿನಯದಿಂ ಕಳುಹಿಸಿ ಕೊಂಡೆಲ್ಲಮರಿಯ-। ರನಿಮಿಷರೊಡನೆ ಪುಷ್ಪಕವ ॥
ಮಿನುಗುವ ನಗೆಯಿಂದಲೇರಿ ಪೋಗಲು ಇತ್ತ। ಮನುಜೇಶ ಜ್ಞಾನಚಂದ್ರಮನು ॥ ೧೩೨ ॥

ಸಕಲ ಭೂಭುಜರ ನಡುವೆಯೋಲಗಗೊ-। ಟ್ಟಕಲಂಕತೇಜನೊಪ್ಪಿರಲು ॥
ವಿಲಸಿತ ವದನದಿಂದೋರ್ವನು ನಡೆತಂದು। ಮುಕುಲಿತ ಕರಯುಗನಾಗಿ ॥ ೧೩೩ ॥

ವಸುಧೇಶ ! ಬಿನ್ನಹ ಜಿತರಂಭಾದೇವಿ। ಹಸನಪ್ಪ ಶುಭ ದಿನದೊಳಗೆ ॥
ಕುಶಲದಿಂ ಪೆತ್ತಳವಳುಗಂಡುಗಳೆನೆ। ಒಸಗೆಯ ಮೇಲೊಸಗೆಯನು ॥ ೧೩೪ ॥

ಕೇಳಿ ಮನದೊಳವನೀಶ, ಸಂತಸವನು। ತಾಳಿ ಒಸಗೆಯನು ತನಗೆ ॥
ಪೇಳಿದ ಚರನಿಗೆ ಮುಂಗೈಯ ಸರವನು। ತಾಳಿಯನಿತ್ತನಾ ರಾಯ ॥ ೧೩೫ ॥

ಸಂತೋಷದಿಂದಲಾಗಾಡುವ ಗಣಿಕಾ। ತಿಂಥಿಣಿಯಿಂದ ಗೀತವನು ॥
ತಾಂತಳುವದೆ ಪಾಡುವರಿಂದ ವಾದ್ಯದ। ಸಂತಾನ ಘೋರುವೊರೆಯಲು ॥ ೧೩೬ ॥

ಅರಮನೆಯೊಳು ಭೂರಿಸಂಭ್ರಮವಾಗಲು। ನರನಾಥನಾ ಪುರದೊಳಗೆ ॥
ಮುರುಕದಿಂದಲಿ ಬಂಡಿ ಬಂಡಿಯೊಳ್ತೀವಿದ। ವರ ವಸ್ತ್ರಾಭರಣಗಳ ॥ ೧೩೭ ॥

ಬಡವ ಬಲ್ಲಿದ ಬುಧ ಯಾಚಕರೆನ್ನದೆ। ತಡಗ ತಡಗ ಜವುಳಿಗಳ ॥
ತೊಡವು ಪೆಟ್ಟಿಗೆ ಪೆಟ್ಟಿಗೆಗಳತಿಣಿಯಿತ್ತು। ಒಡನೆ ಶರ್ಕರೆಯ ತಿದ್ದಿಸಿದ ॥ ೧೩೮ ॥

ಪುರದೊಳಗೊಸಗೆಯ ಮಾಡಿಸಿ ಭೂಭುಜ। ಅರುಹಾವಾಸದೊಳು ಪೂಜೆಯನು ॥
ವಿರಚಿಸಿ ಭೂರಿದಾನವ ಯಾಚಕರಿಗೆ। ಸುರತರು ಚಿಂತಾರತ್ನ ॥ ೧೩೯ ॥

ಹರುಷದಿಂ ದ್ವಿಗುಣ ತ್ರಿಗುಣ ಚತುರ್ಗುಣವಾಗಿ। ದೊರೆ ಕೊಟ್ಟು ನಾಮಕರ್ಮವನು ॥
ವರ ಶುಭ ಮುಹೂರ್ತದ ವೇಳೆಯ ಸಾಧಿಸಿ। ಗುರುವಾರ ಪಂಚಮಿ ದಿವಸ ॥ ೧೪೦ ॥

ಜಿನರಾಜನಿಗೆ ಮಹಾಮಹಿಮೆಯು ಎಂ-। ಬನುಪಮ ಪೂಜೆಯನೆಸಗಿ ॥
ದಿನಕರನಂದದ ಕಾಯ ಕಾಂತಿಯನುಳ್ಳ। ತನುಜರ್ಗೆ ದೊರೆಗಳ ಮುಂದೆ ॥ ೧೪೧ ॥

ಭಾನು, ಸುಭಾನುವೆಂದೆಂಬ ಸುನಾಮವ। ಮಾನವೇಶ್ವರನವರ್ಗಿಟ್ಟು ॥
ಆನಂದದೊಳಗಿರೆ ಸಕಲ ಭೂಭುಜರೆಲ್ಲ। ಏನ ಪೇಳುವೆ ತಂತಮ್ಮ ॥ ೧೪೨ ॥

ತನುಜೆಯರುಗಳನು ಜ್ಞಾನಚಂದ್ರಮನಿಗೆ। ವಿನಯದಿಂ ಮದುವೆಯ ಮಾಡಿ ॥
ಮನದನುರಾಗದಿಂ ಬಳುವಳಿಗಳ ಕೊಟ್ಟು। ಜನಪನ ಸುತ್ತಿರುತಿರಲು ॥ ೧೪೩ ॥

ನೆರೆದಿರ್ದ ದೊರೆದೊರೆಗಳಿಗೆ ಖೇಚರರಿಗೆ। ಪರಮಾನಂದದಿ ತನ್ನ ॥
ಅರಮನೆಯೊಳು ಮಹಾಮಂಡಳೇಶ್ವರನಾದ। ದೊರೆ ಜ್ಞಾನೇಂದು ತಾನಾಗ ॥ ೧೪೪ ॥

ಆರೋಗಣೆಗೈಸಿ ಕರ್ಪೂರ ವೀಳೆಯ । ಮಾರ ಸನ್ನಿಭನಾಗ ಕೊಡಿಸಿ ॥
ಸಾರವಸ್ತುಗಳುಡುಗೊರೆಗಳನವರ್ಗಿತ್ತು । ಭೂರಮಣೇಶ ವಿನಯವ ॥ ೧೪೫ ॥

ನುಡಿದು ನಾ ಕರಿಸಿದ ವೇಳೆಯದೊಳು ನೀವು । ತಡೆಯದೆ ಬನ್ನಿ ಎಂದವರ ॥
ಪೊಡವಿಪ ಬೀಳ್ಕೊಟ್ಟು ಹರಿಚಂದ್ರ ಕುವರನ । ಸಡಗರದಿಂದವೆ ಕರೆಸಿ ॥ ೧೪೬ ॥

ಮಿನುಗುವ ಕಾಶ್ಮೀರದೇಶದೊಳಗೆ ಇರ್ದ । ಕನಕಾದಿಪುರದ ಕಮಲೆಗೆ ॥
ಇನ ನೀನೆಂದು ಸುಮುಹೂರ್ತದೊಳಾಗ । ಜಿನನಿಗೆ ಅಭಿಷೇಕವೆಸಗಿ ॥ ೧೪೭ ॥

ನೆರೆದೆ ನೃಪರ ಮುಂದೆ ನೊಸಲೊಳು ಪಟ್ಟವ । ದೊರೆಗಳ ರನ್ನನು ಕಟ್ಟಿ ॥
ಪರಿತೋಷದಿಂ ಬೀಳ್ಕೊಡೆ ರಾಯನಡಿಗಳ್ಗೆ । ಹರಿಚಂದ್ರ ನತನಾಗಿ ಬಂದು ॥ ೧೪೮ ॥

ಅನುಮತಿದೇವಿಯರರಮನೆಯನು ಪೊಕ್ಕು । ಜನನಿಯ ಪಾದಕ್ಕೆ ಮಣಿದು ॥
ಘನರತ್ನಾಂಕಿತ ಪುಷ್ಪಕವನು ಯೇರಿ । ಕನಕಪುರಕೆ ತೆರಳಿದನು ॥ ೧೪೯ ॥

ಶ್ರೀನಿಳಯನು, ಕೀರ್ತಿವಲ್ಲಭೆಗೋಪನು । ಜ್ಞಾನಚಂದ್ರ ರಾಯ ತನ್ನ ॥
ಭಾನು ಸುಭಾನ್ವಾದಿ ಕುವರರ್ಗೆ ವಿದ್ಯೆಯ । ಸಾನಂದದಿಂದ ಕಲಿಸುತ ॥ ೧೫೦ ॥

ವರ ಸಾಮ್ರಾಜ್ಯದ ಸುಖದೊಳಗಿರುತಿಹ- । ನೊರೆವೆನಾ ನೃಪನೈಸಿರಿಯ ॥
ಪರಮಾನಂದದಿಂ ಕೇಳ್ವುದು ಭವ್ಯರು । ಸುರ ಮುಕ್ತಿಪದ ನಿಮಗಹುದು ॥ ೧೫೧ ॥

ಕರಿಘಟೆಯಿಪ್ಪತ್ತೊಂದು ಲಕ್ಕವು ಮತ್ತೆ । ಪದಿನಾಲ್ಕುವರೆ ಕೋಟಿಗಳು ॥
ಇರಿದು ಮೆರೆವ ಲಕ್ಷ ಭಟ, ಕೋಟಿ ಭಟರ್ಗಳು । ಧುರಗಲಿಗಳು ನಾಲ್ಕು ಕೋಟಿ ॥
ದೊರೆಗಗನೇಶರು ಪದಿನೆಂಟು ಸಾಸಿರ । ಮೆರೆವ ನಲ್ವತ್ತೆಂಟು ಕೋಟಿ ॥
ಬಿರುದಿನ ಶತ ಭಟ ಸಾಸಿರ ಭಟರ್ಗಳು । ತೆರವಾದೀರೇಳು ಗಾವುದದಿ ॥ ೧೫೨ ॥

ಕರಸನ್ನೆದೋರಲು ಕೋಳಿ ಹುಂಜಗಳಂತೆ । ಧುರದೊಳಗಿರಿದು ರಾಜಿಸುವ ॥
ವರ ಸೇನೆ ಬೀಡನು ಬಿಡುವುದು ಎಂದೆನೆ । ಒರವೆನೇನವನ ಸಂಪದವ ॥ ೧೫೩ ॥

ಕನಕನಿರ್ಮಿತವಾದ ರಥ ನಾಲ್ಕುವರೆ ಕೋಟಿ । ಮಿನುಗುವ ನವ ಕೋಟಿ ಗ್ರಾಮ ॥
ಘನತರ ಲಕ್ಷ ನಗರ, ಪತ್ತು ಸಾಸಿರ- । ದನುಪಮ ಖೇಟಗಳಿಹವು ॥ ೧೫೪ ॥

ಪದಿನೈದು ಸಾಸಿರ ಲೆಕ್ಕದ ಖರ್ವಡ । ಪದಿಮೂಸ್ಸಾಸಿರ ಮಡಂಬ ॥
ಸದಮಲಪತ್ತನ ಪನ್ನೆರಡ್ಸಾಸಿರ । ಉದಧಿ ತೀರದ ದ್ರೋಣಾಮುಖವು ॥ ೧೫೫ ॥

ಈರೆಂಟು ಸಾಸಿರ ಸಂವಾಹನಂಗಳು । ಸೇರಿದ ನವ ಸಾಹಸ್ರ ॥
ತೋರುವ ವನದುರ್ಗ ಪನ್ನೊಂದು ಸಾಸಿರ । ಭೂರಿ ಸಾರಗೆಯೊಳೊಪ್ಪಿರುವ ॥ ೧೫೬ ॥

ಗಿರಿದುರ್ಗಂಗಳು ಈರಾರು ಸಾಸಿರ । ವರ ಕುಕ್ಷಿವಾಸವಿನ್ನೂರು ॥
ದೊರೆಯೇರುವ ಪಲ್ಲಕ್ಕಿಯು ಸಾಸಿರ । ಮೆರೆವ ಸಂಗೀತಾನ್ವಿತದ ॥ ೧೫೭ ॥

ವರ ನಾಟಕ ಶಾಲೆಯೆಂಟು ನೂರಾದವು । ಉರು ಮೃದು ಶಯ್ಯೆ ದ್ವಿಕೋಟಿ ॥
ಸುರಸತಿಯರ ರೂಪ ಜರಿವ ಕನ್ಯಾರತ್ನ । ವರ ಪಂಚದಶ ಸಾಹಸ್ರ ॥ ೧೫೯ ॥

ಚಿನ್ನ ಬೆಳ್ಳಿಯ ಪರಿವಾಣವೆರಡು ಕೋಟಿ । ಉನ್ನತ ಸೌಧರ್ಧ ಲಕ್ಷ ॥
ಸನ್ನುತ ಗೋಕುಲವೆಂಟು ಲಕ್ಷವು ಮತ್ತೆ । ಚೆನ್ನಿನ ನಲ್ಲೆಮ್ಮೆಗಳು ॥ ೧೬೦ ॥

ಈರೆಂಟು ಲಕ್ಷವು, ನವ ಸಾಸಿರ ಕು- । ಮಾರರು, ದಿವಿಜೆಯರ್ಜರಿದು ॥
ತೋರಿಸಿಕೊಂಬ ಪುತ್ರಿಯರೈದು ಸಾಸಿರ । ರಾರಾಜಿಸಿದರಾ ನೃಪಗೆ ॥ ೧೬೧ ॥

ಈ ವಿಧದಷ್ಟೈಸಿರಿಯೊಡಗೂಡಿದ । ಭೂವರ ಜ್ಞಾನಚಂದ್ರಮಗೆ ॥
ಮೂವತ್ತೆಂಟು ಬಿಲ್ಲುತ್ಸೇಧಮನುಳ್ಳ । ಪಾವನ ಚರಮಾಂಗವಾಯ್ತು ॥ ೧೬೨ ॥

ಪರಮಾಯುಷ್ಯವು ತೊಂಭತ್ತೊಂಭ- । ತ್ತುರು ಸಾಸಿರಬ್ದಗಳಾಗೆ ॥
ಅರಿಷಡ್ವರ್ಗವರ್ಜಿತ ಶಕ್ತಿತ್ರಯದೊಳು । ವರ ಸಪ್ತೋಪಾಯದಿ ಕೂಡಿ ॥ ೧೬೩ ॥

ಸುರುಚಿರ ಸಪ್ತಾಂಗ ರಾಜ್ಯಾನ್ವಿತನಾಗಿ । ಮೆರೆವ ಮಹಾಮಂಡಳೇಶ ॥
ವರ ಭಾಗ್ಯದೊಡಗೂಡಿ ಸೌಧರ್ಮೇಂದ್ರನು । ಸುರಲೋಕವನಾಳುವಂತೆ ॥ ೧೬೪ ॥

ದೊರೆ ಸಾಮ್ರಾಜ್ಯವಾಳುತ ಜಿನಪೂಜೆಯ । ಪರಿತೋಷದಿಂದ ನಡೆಸುತ ॥
ಎರಕದಿಂದವೆ ತ್ರಿಷಷ್ಟಿ ಶಲಾಕಾ- । ಪುರುಷರ ಕಥೆಯ ಲಾಲಿಸುತ ॥ ೧೬೫ ॥

ಮುನಿಯಾದಿ ನಾಲ್ಕು ಸಂಘಕೆ ನಾಲ್ಕು ದಾನವ । ಘನಭಕ್ತಿಯಿಂದ ಮಾಡುತಲಿ ॥
ಕನಕಾದಿ ವಸ್ತುವನರ್ಥಿಜನಂಗಳ । ಮನದಾಸೆಯ ಪಿಂಗಿಸುತ ॥ ೧೬೬ ॥

ವರ ಸಸ್ಯೌಘವ ಚಂದ್ರ ರಕ್ಷಿಸುವಂತೆ । ಪರಿವಾರ ಪ್ರಜೆ ಬಂಧುಗಳ ॥
ಪರಮ ಸಂತಸದಿ ರಕ್ಷಣ್ಯವ ಮಾಡುತ- । ಲಿರುತಿಹನಾ ರಾಜೇಂದ್ರ ॥ ೧೬೭ ॥

ಜಿನರಾಜ ಚರಣ ಕುಶೇಶಯ ಮಧುವ್ರತ । ದಿನಕರ ಸಮ ದಿವ್ಯ ಕಾಯ ॥
ವನಿತೆಯರುಗಳ ನಯನ ಕೈರವಚಂದ್ರ । ಮನುಜೇಶ ಜ್ಞಾನೇಂದೊಪ್ಪಿದನು ॥ ೧೬೮ ॥

**॥ ಅಂತು ಸಂಧಿ ೩೭ಕ್ಕಂ ಪದ ೫೦೨೨ಕ್ಕಂ ಮಂಗಲಂ ॥**

# ಚಂದ್ರಿಕಾ ವಿಹಾರ.

ಚಂದ್ರಿಕಾ ವಿಹಾರವ ರತ್ನಪುರದೊಳು ಜ್ಞಾ- । ನೇಂದು ಮಾಡಿದುದ ಪೇಳುವೆನು ॥

ಯಕ್ಷಾಮರ ಮುಮುಕ್ಷು ವಂದಿತಪಾದ । ಮೋಕ್ಷಲಕ್ಷ್ಮಿಯ ವಕ್ಷೋಜದೊಳು ॥
ಲಕ್ಷಿಸಲ್ಪಟ್ಟ ಮುಕ್ತಾಹಾರ **ಶಾಂತೀಶ**- । ನಕ್ಷಯ ಸುಖವೀವುದೆಮಗೆ ॥ ೧ ॥

ನರನಾಥ ಸಕಲ ಸಾಮ್ರಾಜ್ಯವನಾಳುತ- । ಲಿರುತಿರಲೊಂದು ದಿನದೊಳು ॥
ವರ ಸೂನು ಬಂಧುಗಳಳಿಯಂದಿರುಗಳು । ಹರುಷದಿಂದವೆ ಕೂಡಿಕೊಂಡು ॥ ೨ ॥

ಆರೋಗಣೆಯನಧಿಕ ಸಂಭ್ರಮದಿಂದ- । ಲಾ ರಾಯ ಮಾಡಿ ಕೈದೊಳೆದು ॥
ಚಾರು ಕರ್ಪೂರದ ವೀಳ್ಯವ ಕೈಗೊಂಡು । ಸಾರಿ ತಾ ಸಜ್ಜೆವನೆಯನು ॥ ೩ ॥

ಮರಿಯಂಚೆ ಕೊರಳ ತುಪ್ಪುಳವಾಸಿಕೆಯೊಳು । ದೊರೆರನ್ನ ಕಿಂಚಿತ್ತು ಪೊತ್ತು ॥
ಒರಗಿದ್ದು ಜಿನಸಿದ್ಧ ಎನುತ ಮೈಮುರಿದೆದ್ದು । ಸಿರಿಮೊಗವನು ತಾನು ತೊಳೆದು ॥ ೪ ॥

ತಿಲಕವ ತಿದ್ದಿಂದಿನರಾತ್ರಿಯೊಳಗಾನು । ನಲವಿಂ ಚಂದ್ರಿಕಾ ವಿಹರಣವನು ॥
ಅಲಸದೆ ಮಾಡಬೇಕೆಂದು ತನ್ಮನದೊಳು । ಇಳೆಯಾಣ್ಮ ನೆನೆದು ತಾ ಮುದದಿ ॥ ೫ ॥

ಓಲಗ ಶಾಲೆಗೈತರೆ ಕೋಟಿ ವಾದ್ಯವು । ಸೂಳೈಸಲು ಭೋರೆಂದು ॥
ಲೀಲೆಯಿಂ ಸಿಂಹವಿಷ್ಟರದೊಳು ರಾಜೇಂದ್ರ- । ನೋಲಗಗೊಟ್ಟನೇನೆಂಬೆ ॥ ೬ ॥

ದೊರೆದೊರೆಗಳು ಮಂತ್ರಿಗಳು ಮಂಡಲಿಕರು । ಕರಗಟ್ಟಿಯೋಲಗಿಸುತ್ತ ॥
ತರಣಿಯಾವೇಳೆಯದೊಳಗಪರಾಶವ । ಭರದಿ ಸೇರಿದನೇನೆಂಬೆ ॥ ೭ ॥

ಸುರಗಿರಿಯೊಳು ನಿಂದು ಬಿನದಕಂಬರವೆಣ್ಣು । ವರುಣ ದಿಕ್ಕಿಗೆ ಹರಿಯಿಟ್ಟು ॥
ಮಿರಿಮಿರಿ ಮಿರುಗುವ ಚಿಗಿವಲ್ಲೆಯೊ ಎನೆ । ತರಣಿ ತೋರಿದ ಪಡುಗಡೆಯೊಳ್ ॥ ೮ ॥

ಪಡುವಣ ದಿಕ್ಕೆಂಬ ಕೋಮಲಾಂಗಿಯು ದಿ- । ಗ್ಮದದಿಯರನು ಕೂಡಿಕೊಂಡು ॥
ಬಿಡದೆಯಂಬರಕಿಟ್ಟ ರನ್ನದ ಚೆಂಡೆನೆ । ಪಡುವ ತೋರಿತು ರವಿ ಬಿಂಬ ॥ ೯ ॥

ಸುರಪತಿಯುಪರದಿಗ್ವೆಣ್ಣಿಗೆ ಮನಸೋತು । ಹರಿಸದಿಂ ರನ್ನಗಂಕಣವ ॥
ಭರದಿ ಕಳುಹಿದನೋ ಎನೆ ಪಡುಗಡೆಯಲಿ । ತರಣಿಮಂಡಲ ರಾಜಿಸಿತು ॥ ೧೦ ॥

ಕರಸೊಗಯಿಸುವಸ್ತಾಚಲರಾಜನ । ಶಿರದೊಳಿಕ್ಕಿದ ಮಾಣಿಕದ ॥
ಮಿರುಗುವ ಮಕುಟವೊ ಎಂಬಂತೆ ನೇಸರು । ಗಿರಿಯಗ್ರದೊಳು ತೋರಿದುದು ॥ ೧೧ ॥

ಸಿರಿಮೊಗವನು ನೋಡಬೇಕೆಂದು ಪಶ್ಚಿಮ । ತರುಣಿ ರನ್ನದ ಮುಕುರವನು ॥
ಕರದಿಂದ ನೆಗಪಿ ಪಿಡಿದಳೊ ಎಂಬಂದದಿಂ । ಮೆರೆವ ಸೂರ್ಯನು ಪಡುಗಡೆಯ ॥ ೧೨ ॥

ವಾರುಣಿ ಸೇವೆಯ ಮಾಡಿದ ಮನುಜರು । ನಾರಕಕಿಳಿವರೆಂಬುದನು ॥
ತೋರುವಂದದಿ ಸೂರ್ಯ ಪಡುವಣ ದಿಕ್ಕಿನ । ವಾರಾಶಿಯೊಳು ತುಂಬಿರ್ದ ॥ ೧೩ ॥

ಪರ ವಧುವಿನ ಮೇಲೆ ಕರವ ನಾ ನೀಡಿದೆ । ದೊರೆಕಿದೆ ಪಾಪವೆಂದೆನುತ ॥
ಗಿರಿಯೇರಿ ಕಮ್ಮರಿಯನು ಬೀಳುವೆನೆಂದು । ಶರಧಿಗೆ ನೆಗೆದುಗ್ರಧಾಮ ॥ ೧೪ ॥

ನಾನಿರ್ದು ನನ್ನಯ ವಧು ಕಮಲಿನಿಗೀ- । ಗಾನನ ಕೊರಗಿದ ಮೇಲೆ ॥
ಹೀನಾಶ್ರಯವಾಯ್ತು ಬದುಕಬಾರದು ಎಂದು । ಮೀನಾಕರಕೆ ನೆಗೆದಿಹನು ॥ ೧೫ ॥

ನಳಿನಿಯನಗಲಿದ ವಿರಹದ ಬಲುಗಿಚ್ಚು । ಗಳಿಲನೆ ಸುಡೆಯದಕಳ್ಕಿ ॥
ಮುಳುಗುವೆ ನೀರೊಳಗೆಂದು ದಿವಾಕರ । ಜಲಧಿಯೊಳಗೆ ಮುಳುಗಿದನು ॥ ೧೬ ॥

ಶರಧಿಯೊಳಗೆ ಮುಳುಘುವ ಸೂರ್ಯನ ಬಿಂಬ- । ದಿರವುಮೊಪ್ಪಿತು ಮನ್ಮಥನ ॥
ವರ ಪರಿಣಯದೊಳು ಬಿದಿಜೋಯಿಸಿಕ್ಕಿದ । ಮೆರೆವ ಗಳಿಗೆ ಬಟ್ಟಲಂತೆ ॥ ೧೭ ॥

ದಿನಕರ ಪಡುಗಡಲೊಳು ಮುಳುಗುತಲಾ- । ಗನುಪಮ ಸಂಜೆಯ ಕೆಂಪು ॥
ಘನತರವಾಗಿಯಾಕಾಶಮಂಡಲದೊಳು । ಮಿನಿಮಿನಿ ಮಿನುಗುತೊಪ್ಪಿದವು ॥ ೧೮ ॥

ವರುಣ ದಿಗ್ವಧು ಪ್ರಾಣೇಶ್ವರ ರವಿಯು ತ- । ನ್ನರಮನೆಗಡಿಯಿಡುವಾಗ ॥
ಅರುಣಾಂಬರವುಟ್ಟಿದಿರ್ವರೆ ತಕ್ಕೆಂಪು । ಪರೆದಂತೆ ಸಂಜೆಗೆಂಪಿಹುದು ॥ ೧೯ ॥

ಪಡುವಣಾಶಾವಧು ಸೂರಿಯನ್ನೆತರೆ । ಕಡಿದ ಕೆಂಪಿನ ಆರಾತ್ರಿಕವ ॥
ಸಡಗರದಿಂದ ಚೆಲ್ಲಿದಳೋ ಎಂಬಂದದಿ । ಅಡರಿತು ಸಂಜೆಯ ಕೆಂಪು ॥ ೨೦ ॥

ಸಡಗರದಿಂ ಪಶ್ಚಿಮಾಂಗನೆಯಿನ ಬರೆ । ಬಿಡದೆಯಾಲಿಂಗಿಸುವಾಗ ॥
ತೊಡೆದಂಗ ಕುಂಕುಮ ರೇಣುಂಬರವನು । ತೊಡರಿತೋಯೆನೆ ಕೆಂಪಿಹುದು ॥ ೨೧ ॥

ತರಣಿಯ ರಥಕೆ ಕಟ್ಟಿದ ಘೋಟಕಂಗಳ । ಖುರಪುಟ ಘಟ್ಟಣೆಯಿಂದ ॥
ಇರದೇಳುವಸ್ತಾದಿಯ ಧಾತುರೇಣೆನೆ । ಮೆರೆದುದು ಸಂಜೆಯ ಕೆಂಪು ॥ ೨೨ ॥

ಕುಲಟೆಯರುಗಳ ಮನೋರಾಗದೇಳ್ಗೆಯೊ । ಸಲೆ ಚಕ್ರಯುಗದಗಲಿಕೆಯೋ ॥
ಬಲಿಗಿಚ್ಚೊಯೆನೆ ದಿಕ್ತಟವನಾವರಿಸಿತು । ಪೊಳೆಯುತ ಸಂಜೆಯ ಕೆಂಪು ॥ ೨೩ ॥

ಎರೆಯುಗೆ ಇಂತಪ್ಪ ಭಂಗವಾಗಲು ನಾವು । ಹರಿಸದಿಂದಿಹೆವೇ ಎಂದೆನುತ ॥
ಪರಿಕಿಸಲೊಲ್ಲದೆ ಕಣ್ಣಾಲಿದೆರೆಯದೆ । ಸರಸಿಜ ಮುಗಿದವು ಕೊರಗಿ ॥ ೨೪ ॥

ನನ್ನಯ ಧವ ರವಿ ಮೊಗವನಲ್ಲದೆ ಯಾ- । ವನ್ನಿಗರನು ನೋಡೆನೆಂದು ॥
ಗನ್ನದಿಂ ಮೊಗವ ಹಸ್ತದಿ ಮುಚ್ಚಿದಳೆನೆ । ಸನ್ನುತ ಕಮಲ ಮುಗಿದವು ॥ ೨೫ ॥

ದೋಷಾಕರನದರ ಮೇಲೆ ವಕ್ರಾಂಗಿ । ಸೂಸುವ ಶಶಿಕರಮೆಂದು ॥
ಹೇಸಿ ಕೆಲವು ಪದ್ಮಪತ್ರಗಳನು ಮುಚ್ಚೆ । ಕಾಸಾರದೊಳು ಮುಳುಗಿದವು ॥ ೨೬ ॥

ವಾರಗಿತ್ತಿಗೆಯಾದವಮನ್ನಣೆಗಂಡು । ಚಾರು ಕೈರವ ಮುಗುಳ್ನಗೆಯ ॥
ಬೀರಿದವೋ ಎನೆ ವಿಕಸಿತವಾದವು । ಸಾರಗಂಧಗಳ ಕೆದರುತ ॥ ೨೭ ॥

ಖರಕರ ಹೋದನೆ ಹೋದನೆಯೆಂದಾಗ। ತೆರದು ಮೊಗವ ಮೇಲಕೆತ್ತಿ ॥
ಹರುಷದಿಂ ನೋಡಿದಪವೊ ಎನೆ ನೈದಿಲು । ಬಿರಿದವು ಪರಿಮಳವೆರಸಿ ॥ ೨೮ ॥

ಸುರಿವ ಕಣ್ಬನಿ, ಸುರುಟಿದ ಮೈ, ಕುಗ್ಗಿದ । ಶಿರವ, ನಡುಗುತ ಸರ್ವಾಂಗ ॥
ವಿರಹ ವೇದನೆಯಿಂದ ಜಕ್ಕವಕ್ಕಿಗಳಾಗ । ಭರದಿ ಸುಳಿದವಗಲ್ಕೆಯೊಳು ॥ ೨೯ ॥

ತೆನೆಗರ್ಚಿ ನುಡಿವಕ್ಕಿಗಳ ಸಮೂಹವು । ಇನ ಮುಳುಗಿದನೆಂದೆನುತ ॥
ಘನರವವೆಸಗುತ ಗೂಡಿಗೈತರುತಿರ್ಪ । ಕೊನೆದಾಟ ಮೆರೆವುದೆಲ್ಲೆಲ್ಲಿ ॥ ೩೦ ॥

ಗೊಡಸುವ ಗೊರವಕ್ಕಿಗಳಿಂದ ಗುಡುರೆಂದು । ನುಡಿವ ಗುಡುಗುವಕ್ಕಿಯಿಂದ ॥
ಜಡಿವಕ್ಕಿ ದನಿಯಿಂದ ಸಂಧ್ಯಾಕಾಲವು । ಕಡು ರಮ್ಯವಾಯ್ತೇನೆಂಬೆ ॥ ೩೧ ॥

ಮರಿಗಳ್ಗೆ ಗುಡುಕುಗೊಡುವ ಪಕ್ಕಿಗಳಿಂದ । ಎರಕದಿಂ ಚಿಲಿವಿಲಿಯೆಂದು ॥
ಸ್ವರದೋರುವ ಪತತ್ರಿ ಹಿಂಡುಗಳಿಂದ । ಮೆರೆದುದು ಸಂಧ್ಯಾಕಾಲ ॥ ೩೨ ॥

ಮರಿಗಳ ಮುಂದುಗಡೆಯಲಿ ನಡೆಯಿಸುತ । ದುರುದುರ ನಾಲ್ದೆಸೆಗಳನು ॥
ಪರಿಕಿಸೆ ಪೊಣ್ಣಪೊಣ್ಣನೆ ಹಾರುವೆರಳೆಯು । ಭರದಿ ಸೇರಿದವು ಸ್ವಸ್ಥಳವ ॥ ೩೩ ॥

ಸಂಧ್ಯಾಕಾಲವಾಯಿತು ಭವ್ಯರು ಜಿನ- । ಚಂದ್ರನ ಸ್ತುತಿಸಿರೋ ಎಂದು ॥
ಚಂದದಿಂ ಪೇಳ್ದಪುದೆನೆ ಘಂಟಾನಾದ- । ವಂದುಣ್ಮಿತು ಬಸದಿಯೊಳು ॥ ೩೪ ॥

ಆರಾರು ಘಳಿಗೆಗೆ ಸಮವಸರಣದೊಳು । ಸಾರತತ್ತ್ವವು ಜಿನವಾಕ್ಯ ॥
ಪೂರೈಸುತಿದೆಯೆಂದು ಪೇಳ್ದಂದದಿ ಘಂ- । ಟಾರವ ತುಂಬಿತೂರೊಳಗೆ ॥ ೩೫ ॥

ಕಾಡಿ ಬೇಡುವರಲ್ಲ ತಿರುಕ ಹುರುಕರಲ್ಲ । ನಾಡಿಗೊಡೆಯರು ಧನಿಕರು ॥
ಪ್ರೌಢರು ಜೈನರು ತದ್ವಾಕ್ಯಂಜಯತೆಂ- । ದಾಡುವುದಾ ಘಂಟಾನಾದ ॥ ೩೬ ॥

ಜಿನರಾಜಗೆ ತ್ರಿಸಂಧ್ಯೆಯೊಳೆರಗಿದ । ಮನುಜರಘವು ಕೆಟ್ಟು ಮುಂದೆ ॥
ಜನಿಪರು ಸ್ವರ್ಗಮೋಕ್ಷದೊಳೆಂದು ಪೇಳ್ವಂತೆ । ಜಿನಗೃಹದೊಳು ಭೇರಿಯಾಯ್ತು ॥ ೩೭ ॥

ಸುರಗಂಗೆಯ ಶೈತ್ಯ ಜಲದೊಳು ಮುಳುಗಾಡಿ । ವರ ನಾಗಸಂಪಿಗೆಯುರಲ ॥
ಪರಿಮಳ ಕಿಂಜಲ್ಕದೊಳು ಹೊರ ಹೊರಳುತ । ಮರುತ ತೀಡಿತು ಘಮ್ಮೆಂದು ॥ ೩೮ ॥

ಪರಿಮಳಮಯವಾದೇಳೆಲೆವಾಳೆಯ । ಮುರಿವುತ ಸರಸಿಯವೊಕ್ಕು ॥
ಅರವಿಂದ ಕುಡ್ಮಲದೊಳಪೊಕ್ಕೊಡೆವುತ । ಸುರಭಿ ಮಾರುತ ತೀಡಿತಾಗ ॥ ೩೯ ॥

ಬಟ್ಟಜವ್ವನೆಯರ ಇಟ್ಟಡೆ ಮೊಲೆಯೊಳ- । ಗಿಟ್ಟ ಕುಂಕುಮವ ಪಾರಿಸುತ ॥
ಬೆಟ್ಟದಾವರೆಯ ಗೊಂಚಲನಲುಗಿಸುತಡಿ- । ಯಿಟ್ಟಿತು ತಣ್ಣೆಲರಾಗ ॥ ೪೦ ॥

ಬೆಲೆವೆಂಗಳನೆಲೆಮಾಡದೊಳಿಕ್ಕಿದ । ವಿಲಸಿತ ಧೂಪ ಧೂಮವನು ॥
ಅಲೆವುತ ಕಾಮುಕಿಯರ ನೆರಿಯೆತ್ತುತ । ಸುಳಿದುದು ಮಂದಮಾರುತವು ॥ ೪೧ ॥

ಮಾಲೆಗಾತಿಯರ ಮೇಲುದ ಜಾರಿಸಿ ಮತ್ತೆ । ಬಾಲ ವಿಟರಿಗೆ ತೋರಿಸುತ ॥
ಲೋಲಾಕ್ಷಿಯರ ತುರುಬಿನ ಹೂಗೆದರುತ । ಲೀಲೆಯಿಂ ಮರುತ ತೀಡಿದುದು ॥ ೪೨ ॥

ಮೃಡನರ್ಧಾಂಗಿ ಲೋಚನಕೆ ಕಜ್ಜಳವಿಟ್ಟು । ಮಿಡಿಯಲು ಬೆರಳ ಕಜ್ಜಳವು ॥
ಒಡನೆ ವ್ಯಾಪಿಸಿತೋ ಎಂದೆನೆ ಎಂಟು ದಿಕ್ಕನಾ- । ಗಡರಿತು ಗಾಢಾಂಧಕಾರ ॥ ೪೩ ॥

ಸಿರಿದೇವಿ ಭಾರತಕ್ಷೋಣಿಮಂಡಲವೆಂಬ । ಕರಡಿಗೆಯೊಳು ಕಣ್ಣ ಕಪ್ಪ ॥
ಇರಿಸಿಯಂಬರ ಮುಚ್ಚಳವಿಕ್ಕಿದಳೆನೆ । ಧರೆಯ ತೀವಿತು ಕೃಷ್ಣತಮಸು ॥ ೪೪ ॥

ರವಿಯ ಕಿರಣದಿಂದಲಡಗಿಕೊಂಡಿರುತಿದ್ದು । ರವಿಯಸ್ತಂಗತನಾಗೆ ॥
ಭುವನದ ಚ್ಛಾಯೆಯೆ ಲೋಕ ತುಂಬಿತೊ ಎನೆ । ಅವಿರಳದಿಂ ತಮವಿಹುದು ॥ ೪೫ ॥

ಮನಸಿಜ ಚೋರ ಕಳಲು ಎಂದು ಸಂಯಮಿ । ಮನವೆಂಬ ಕೋಶಾಗಾರವನು ॥
ಘನವಾಗಿ ಸೂಸಿದ ದೃಶ್ಯಾಂಜನವೆನೆ । ಮಿನುಗಿತು ತಮವವನಿಯೊಳು ॥ ೪೬ ॥

ಇರುಳ್ವೆಣ್ಣು ಮುರುಕದಿಂ ಸಿರಿವಿಡಿದುಡಿಗುಟ್ಟು । ಕರಿಯ ಉದಯರಾಗವೆಂಬ ॥
ವರ ವಸ್ತ್ರವ್ರೊಯೆಂದೆನೆ ತಮ ಪರ್ವಿತು । ಧರೆಯನೆಲ್ಲವನೆಡೆವಿಡದೆ ॥ ೪೭ ॥

ಇನನಸ್ತಂಗತನಾಗಲು ಪದ್ಮಿನಿ । ಮಿನುಗುವಾನನ ಕಪ್ಪೇರಿ ॥
ತೊನೆದಾಡುತ ಪರ್ವಿತೊ ಎನೆ ಲೋಕವ । ಘನವಾಗಿ ತುಂಬಿತು ತಮಸು ॥ ೪೮ ॥

ತರಗೆಲೆ ಚಿಪ್ಪಿನ ಸುಣ್ಣ ಗೋಟಡಕೆಯ । ಭರದಿಯಡಸಿ ದಾಡೆಯೊಳು ॥
ಹರಕು ಶೀರೆಯನುಟ್ಟು ಜಾರರಿರ್ದೆಡೆಗಾಗ । ತೆರಳಿತು ದಾಸೀರ ಫೌಜು ॥ ೪೯ ॥

ಸಡಗರದಿಂ ಬೇಗ ಗಂಡ ಮಕ್ಕಳಿಗಿಕ್ಕಿ । ಒಡನೆ ತಾನವರು ಮಲಗಲು ॥
ಅಡಿಯನಿಡುತ ಮೆಲ್ಲ ಮೆಲ್ಲನೆ ಜಾರನಿ- । ದ್ದೆಡೆಗೆ ಸಾರಿದಳೋರ್ವ ಜಾರೆ ॥ ೫೦ ॥

ಯೆರೆಯನ ವಂಚಿಸಿಯತ್ತೆಮಾವಂದಿರ । ಮರೆಯಿಸಿ ಸಿಂಗರದೊಟ್ಟು ॥
ಕರಿಯ ಕಂಬಳಿಯ ಮುಸುಕಸಿಟ್ಟು ಪಾಣ್ಬನ- । ನರಸುತ್ತೈದಿದಳೋರ್ವ ಪಾಣ್ಬೆ ॥ ೫೧ ॥

ಗಂಡನ ತೋಳತಕ್ಕೆಯೊಳೊರಗಿದ್ದೋರ್ವ । ಮಿಂಡಿ ನುಸುಳಿ ಬೇಗದಿಂದ ॥
ಮಿಂಡನಿರ್ದೆಡೆಗೈದಿ ಬಂದಿನಿಯನ ತಬ್ಬಿ- । ಕೊಂಡು ಮಲಗಿದಳೇನೆಂಬೆ ॥ ೫೨ ॥

ಹರಕು ಚಾಪೆಯ ಕಂಕುಳೊಳಗೌಚಿಕೊಂಡಾಗ । ಕರೆಯಲಮ್ಮದೆ ಪಾಣ್ಬೆಯನು ॥
ಹರಕಿಣಿಯೊಳಗಿಳಿಗಿಳಿಕಿ ತಾ ನೋಡುತ । ಕರಸನ್ನೆ ಮಾಡುವನೋರ್ವ ॥ ೫೩ ॥

ಕತ್ತಲೆಯಾಗಲು ಸಂಕೇತ ಸ್ಥಳಕ್ಕೈದಿ । ಒತ್ತಿ ನಡಿವ್ರದಕೆ ಬೆದರಿ ॥
ಎತ್ತಿ ತಲೆಯ ನೋಡುತ ಪಾಣ್ಬನಾಗ ಬೇ- । ಸತ್ತನು ಜಾರೆ ಸಂಧಿಸದೇ ॥ ೫೪ ॥

ಎಡಬಲನಾರೈದು ನೋಡುತ ಮಂದಿಯ । ಗಡಣವ ತಪ್ಪಿಸಿಕೊಳುತ ॥
ನುಡಿಯ ಹೊರಡಲಾರದೆ ಪಾಣ್ಬವೆರಸಿಯಾ- । ಗಡಿಯಿಟ್ಟಳೋರ್ವಳಿತ್ವರಿಕೆ ॥ ೫೫ ॥

ಕುರುಳ ನೇವರಿಸುತ ನೆರಿಯೆಡಗೈಲಾಂತು । ಕರಸನ್ನೆದೋರುತ ವಿಟಗೆ ॥
ಭರದಿಂದಲೊಂದು ಗುಡಿಯ ಸಂಧಿಗೋರ್ವಳಿ- । ತ್ವರಿಕೆ ಸಾಗಿದಳು ತಮದೊಳು ॥ ೫೬ ॥

ತಲೆ ಬಾಗಿ ನಡೆಯೆಡಬಲ ನೋಡದಿರು ಕ- । ಣ್ಬೆಳಗು ಪರಿವುತದೆ ಜತನ ॥
ಉಲಿಯದಿರೆಂದು ಕಣ್ಸನ್ನೆಯ ಮಾಡುತ । ಕುಲಟೆವೆರಸು ಪೋದನೋರ್ವ ॥ ೫೭ ॥

ತೋರಿದವಲ್ಲಲ್ಲಂಬರದೊಳು ನಕ್ಷತ್ರ । ಬೇರೂರಿತು ನಸು ಬೆಳಗು ॥
ಕಾರಿರುಳಾಗ ಕಿಂಚಿತು ತೆಳುವಾಯಿತು । ಜಾರೆರ ಸುಳುಹು ತಪ್ಪಿದುದು ॥ ೫೮ ॥

ಕಾಲನೆಂದೆಂಬ ಕುಡಿಯನಂಬರವೆಂಬೀ ವಿ- । ಶಾಲ ಭೂವುತ್ತು ಮೌಕ್ತಿಕದ ॥
ಮೇಲು ಬೀಜವ ತಳಿದಂತೆ ಗಗನದೊಳು । ಜಾಲದೋರಿದವು ಭಗಣದ ॥ ೫೯ ॥

ಗಗನಲಕ್ಷ್ಮಿಯ ಓಲಗಶಾಲೆವಳಗಿಲಿ । ಸೊಗಸಿಂದ ಕೀಲಿಸಿ ಮೆರೆವ ॥
ಧಗಧಗಿಸುವ ಬೆಳ್ಳಿಗಳ ಗುಬ್ಬಿಗಳೆನೆ । ಗಗನದೊಳ್ಪೊಳೆದವು ತಾರೆ ॥ ೬೦ ॥

ಸರಸಿಜಸಂಭವ ಗಗನವ ನಿರ್ಮಿಸಿ । ಬಿರಿಪದಿದು ಮುಂದಕೆಂದು ॥
ವರ ರೂಪ್ಯ ಮೊಳೆಗಳಲ್ಲಲ್ಲಿ ಕೀಲಿಸಿದಂತೆ । ಮೆರೆದವಾಗುಡು ವ್ಯೋಮದಲಿ ॥ ೬೧ ॥

ವಸುಧಾಲಕ್ಷ್ಮಿಯಂಬರವೆಣ್ಣಿನ ಮೇಲೆ । ಹಸನಾಗೊತ್ತಿದ ಜೀರ್ಕೊಳವೆಯು ॥
ಲಸದಮೃತದ ಪನಿಗಳು ಪತ್ತಿದವೆನೆ । ಯೆಸೆದವಂಬರದೊಳು ತಾರೆ ॥ ೬೨ ॥

ಸ್ಮರಧೀವರ ವ್ಯೋಮಗಂಗೆಯೊಳಾಡುವ । ಸುರ ಮೀನ್ಗಳ ಪಿಡಿವುದಕೆ ॥
ಭರದಿ ಬೀಸಿದ ಮುತ್ತಿನ ಜೆಳ್ಳರವೆನೆ । ಮೆರೆದವು ಬಾನೊಳು ತಾರೆ ॥ ೬೩ ॥

ಸುರಭವನದೊಳಿರ್ದರುಹನ ಗೃಹದೊಳು । ತರತರದೊಳು ಪೊತ್ತಿಸಿದ ॥
ಸುರುಚಿರ ದೀವಿಗೆಗಳೊ ಎನೆ ನಭದೊಳು । ಕರ ಶೋಭಿಪವು ನಕ್ಷತ್ರ ॥ ೬೪ ॥

ತರಣಿ ರಥಕೆ ಕಟ್ಟಿದ ತೇಜಿಗಳ ಬಾ- । ಯ್ನೊರೆ ವಾಯುವಶದಿಂದಲೊಡೆದು ॥
ಸ್ಥಿರವಾಗಿಯಲ್ಲಲ್ಲಿ ನಿಂದವೊ ಉಡುತತಿ । ಕರ ರಂಜಿಸಿದವಂಬರದೊಳು ॥ ೬೫ ॥

ಸುರಪ ದಿಗ್ವಧು ತೊಟ್ಟ ಮಾಣಿಕದೊಡಿಗೆಯ । ಮಿರಿಮಿರಿಗುಟ್ಟುವ ಕಾಂತಿ ॥
ಕರ ಚೆಲುವಿಂದ ಪಸರಿಸಿತೋ ಎಂದೆನೆ । ಮೆರೆದುದು ತಕ್ಕೆಂಪು ಮೂಡ ॥ ೬೬ ॥

ಸೋಮ ಸ್ವಗೃಹಕೆ ಬಾರಲು ಮೂಡುದಿಕ್ಕಿನ । ಕಾಮಿನಿ ಚಂದ್ರಗಾವಿಯನು ॥
ಪ್ರೇಮದಿಂದಿಟ್ಟ ನಿವಾಳಿಯ ಕೆಂಪೆನೆ । ತಾ ಮೂಡಿದುದು ಮೂಡಗೆಂಪು ॥ ೬೭ ॥

ಸುರಪತಿಯೇರುವ ಗಂಧ ಸಿಂಧುರದ । ಶಿರದೊಳು ಬರೆದ ಸಿಂಧುರದ ॥
ಅರುಣವೊ ಎಂದೆನೆ ಮೂಡುದಿಕ್ಕಿನೊಳಾಗ । ಪರಿಶೋಭಿಸಿತು ರಕ್ತಮಯವು ॥ ೬೮ ॥

ಉದಯಾಚಲರಾಜನ ಓಲಗದೊಳು । ಗಡಗಡಗುಟ್ಟುತಲಿರ್ಪ ॥
ಪದುಮರಾಗದ ಮಣಿ ಸತ್ತಿಗೆಯೋ ಎನೆ । ವಿಧುಬಿಂಬ ಮೂಡು ತೋರಿದುದು ॥ ೬೯ ॥

ಪೂರ್ವವಿದೇಹದೈಸಿರಿವೆಣ್ಣು ಭಾರತ- । ದುರ್ವಿಯ ಸಿರಿ ನೋಳ್ಪೆನೆಂದು ॥
ಪರ್ವಿದ ಮೋಹದಿಂದೆತ್ತಿದ ಮೊಗವೆನೆ । ಸರ್ವರೀಶನು ತೋರಿದನು ॥ ೭೦ ॥

ಸುರಪ ದಿಗ್ವಧು ಮುರುಕದಿ ಭಾಳದೊಳಿಟ್ಟ । ಪರಿಮಳಮಯ ಕುಂಕುಮದ ॥
ಅರುಣವರ್ಣದ ಬೊಟ್ಟೆನೆ ಐಂದ್ರಕದೊಳು । ಮಿರುಗುತಿಹುದು ಚಂದ್ರಬಿಂಬ ॥ ೭೧ ॥

ಅನಿಮಿಷರಾಜನು ದೈತ್ಯಬಲದ ಮೇಲೆ । ಕನಲಿ ಕೋಪದಿ ಕಿರುಪಿಟ್ಟ ॥
ಅನುಪಮ ಪದ್ಮರಾಗದ ಚಕ್ರವೊ ಎನೆ । ಮಿನುಗಿತಂಬರದೊಳು ಚಂದ್ರ ॥ ೭೨ ॥

ಅಸುರರ ಕೂಡೆ ಕಾದುವೆನೆಂದಿಂದ್ರನು । ಪೊಸ ಮಾಣಿಕದ ಪರಿಗೆಯ ॥
ಎಸಕದಿಂ ಪಿಡಿದೆತ್ತಿದನೊ ಎಂಬಂದದಿ । ಶಶಿ ಪೂರ್ವದೆಸೆಯೊಳೆಸೆದುದು ॥ ೭೩ ॥

ಶರಧಿಯೊಳಾಳಿ ಮೇಲಕೆಯುಬ್ಬಿ ಬರುವಾಗ । ಭರದಿ ಪತ್ತಿದ ಜಂಬಾಲ ॥
ಕರ ಶೋಭಿಪುದೆನೆ ಚಂದ್ರನ ಒಡಲೊಳು । ಕರೆ ರಂಜಿಸಿತು ನೋಳ್ಪರಿಗೆ ॥ ೭೪ ॥

ಸರಸಿಜಲೋಚನೆ ರೋಹಿಣಿಯಮರ್ದಪ್ಪಿ । ಗುರುಕುಚದೊಳು ಲೇಪಿಸಿದ ॥
ವರ ಕಸ್ತೂರಿಯುರದೊಳು ಪತ್ತಿತೊ ಎನೆ । ಕರೆ ಚಂದ್ರನೊಡಲಲೊಪ್ಪಿದುದು ॥ ೭೫ ॥

ಬಡಿಯುತಲಹರಿ ನಿನ್ನಯ ಭಟಕರುಗಳು । ಬಿಡಿಸೆಂದು ತನುವೈತಂದು ॥
ಒಡಲೊಳು ಸಲಹೆಂದು ತಲೆಯಿಟ್ಟುದೊ ಎನೆ । ಕಡು ರಯ್ಯವಾಯ್ತಿಂದುಲಕ್ಷ್ಮ ॥ ೭೬ ॥

ಕರಿವದನನ ಡೊಳ್ಳುಹೊಟ್ಟೆಯನಣಕಿಸೆ । ಭರದಿ ಕಿತ್ತಿಡೆ ದಂತವನು ।
ಉರದೊಳು ತಾಗಿದ ಪುಣ್ಣಿನ ಕಲೆಯೆನೆ । ಮೆರೆದುದು ಚಂದ್ರಲಾಂಛನವು ॥ ೭೭ ॥

ಶಶಿವಿಶ್ವಮಿತ್ರನ ಹೆಂಡತಿಯೊಳಗಿರ್ದು । ಋಷಿ ಬರೆ ಬೆಕ್ಕಾಗೆ ಕಂಡು ॥
ಎಸೆಯೆ ಬೂದಿಯ ಚೀಲ ತಾಗಿದ ಕಲೆಯೆನೆ । ಶಶಧರನೊಡಲಕಪ್ಪಿಹುದು ॥ ೭೮ ॥

ಪಾದದಿಂದುದಯ ಗಿರಿಯ ಮೆಟ್ಟಿ ಚಿಗಿಯುತ । ಕಾದಲೆ ಕುಮುದಿನಿ ಸ್ತನಕೆ ॥
ಮೋದದಿಂ ಕರವ ನೀಡುತಲಂಬರವೆಣ್ಣ । ಸಾದರದಿಂದಪ್ಪಿಕೊಳುತ ॥ ೭೯ ॥

ಕಡೆಗಣ್ಣಕಾಂತಿಯ ದಿಗ್ವಧುಗಳ ಮೇಲೆ । ಕಡು ನಲವಿಂದ ಬೀರುತಲಿ ॥
ಬಿಡದೇರುತ ಮೆಲ್ಲಮೆಲ್ಲನೆ ಯುದ್ಧವ- । ನುಡುಪತಿ ಬೆಳುಪೇರಿದನು ॥ ೮೦ ॥

ಗಗನಾಂಗಣದೊಳು ಬಿದಿಯೆಂಬಂಬಿಗ । ಸೊಗಸಿಂದ ಜ್ಯೋತಿಷ್ಕ ಜನವ ॥
ಮಿಗೆ ದಾಂಟಿಪ ಬೆಳ್ಳಿಯ ಪರುಗೋಲೆನೆ । ಗಗನವೇರಿದುದಬ್ಜಬಿಂಬ ॥ ೮೧ ॥

ಕಿರಣವಾಗಲು ತಂತು ವಿಧುಬಿಂಬ ಪಟವಾಗೆ । ಸರಸಿಜೋದ್ಭವ ವಟು ಪಿಡಿದು ॥
ಹರುಷದಿಂ ನಭದೊಳಾಡಿಪ ಚಕ್ರಪಟವೆನೆ । ಸ್ಮರಸಖ ಬಿಂಬ ರಾಜಿಸಿತು ॥ ೮೨ ॥

ಕತ್ತಲೆಯೊಳು ಪೊಕ್ಕು ನೂಂಕುವ ಚಂದ್ರಗ- । ಭಸ್ತಿಯು ತೊಳತೊಳಗಿದುದು ॥
ಮತ್ತಗಜದ ಶಿರವನು ಸೀಳುವ ಹರಿ- । ಯುತ್ತಮ ನಖಗಳೆಂಬಂತೆ ॥ ೮೩ ॥

ಧರೆಯೊಳು ವರ್ತಿಪ ನರದೃಷ್ಟಿಹಂಸಗೆ । ಇರುಳ್ವೆಣ್ಣ ಚಂದಿರ ಘಟದಿ ॥
ಕಿರಣಗಳೆಂಬ ಪಾಲನು ಸುರಿದಪಳೆನೆ । ಧರಣಿ ವ್ಯಾಪಿಸಿತಿಂದು ಜೊನ್ನ ॥ ೮೪ ॥

ಅಂಬರಲಕ್ಷ್ಮಿ ಬೆಳ್ಳಿಯ ಧಾರೆವಟ್ಟಲ । ತುಂಬಿ ಸುಧೆಯ ಶೋಧಿಪಾಗ ॥
ಕುಂಭಿನಿಗೊಗುವ ಧಾರೆಗಳೆನೆ ಚಂದಿರ । ಬಿಂಬಗಿಂ ಕಿರಣ ಪೊರಟವು ॥ ೮೫ ॥

ಏರಿತಾನಂದ ಚಕೋರಿಗಳಿಗೆ ತವು । ಜಾರಿತುತ್ಪಲಕೆ ಸಂತಸವು ॥
ಸಾರಿತು ದಶ ದಿಕ್ಕುಗಳೊಳು ಚಂದ್ರನ- । ಪಾರ ಜೊನ್ನದ ಬೆಳುವೆಳಗು ॥ ೮೬ ॥

ಜ್ಞಾನಚಂದ್ರನ ಕೀರ್ತಿ ಜಗವನು ತುಂಬಿತೋ । ಬಾನುವೆಣ್ಣಿನ ಬೆಳುನಗೆಯೋ ॥
ದಾನವಾರಿಯ ಗಜ ಧರೆಗೆ ಬಂದುದೊ ಎನೆ । ಪೀನಚಂದ್ರಿಕೆ ತುಂಬಿದುದು ॥ ೮೭ ॥

ಬೆಳುದಿಂಗಳು ತೆಕ್ಕನೆ ಜಗವನು ತುಂಬೆ । ಇಳೆಯಾಣ್ಮನಧಿಕ ಲೀಲೆಯೊಳು ॥
ನಿಳಯಕೆ ನಡೆತಂದು ದೇವತಾರ್ಚನೆಗೈದು । ಘಳಿಲನೆ ಸಿಂಗರವಾಂತು ॥ ೮೮ ॥

ಮಿನುಗುವ ಮಕುಟಕುಂಡಲಹಾರ ಮೊದಲಾ- । ದನುಪಮ ತೊಡವನು ತೊಟ್ಟು ॥
ಘನ ಸಾರಮಿಶ್ರಿತ ಚಾರು ಚಂದನದಣ್ಪು । ಜನನಾಥ ಮೈಗನುಗೈದು ॥ ೮೯ ॥

ಉಟ್ಟಿಕರಾಂಗಿಯ ಚಲ್ಲಣ ಪಚ್ಚೆಯ । ದಟ್ಟಿ ಜೋಲುವ ವೀರಗಾಸೆ ॥
ಕಟ್ಟಿದ ರನ್ನದ ಬಾಕು ನಡುವಿನೊಳ- । ಗಿಟ್ಟ ತಿಲಕ ನೊಸಲೊಳಗೆ ॥ ೯೦ ॥

ನೊರೆವಿಂಡಿನಂದದಿ ದಿವ್ಯಾಂಬರವನು । ದೊರೆ ಪಗರಣೆಯೊಳು ಪೊದೆದು ॥
ಕರಿದಾದ ಸೂರಿಯ ಪುಟದ ಗೊಂಗಡಿಯನು । ಮುರುಕದಿಂ ಮುಸುಗಿಟ್ಟುಕೊಂಡು ॥ ೯೧ ॥

ಗುರುದೆಯ ಕತ್ತಿಯ ಕಂಕುಳೊಳಗೆಯಾಚಿ- । ಯರಮನೆಯನು ಪೊರಮಟ್ಟು ॥
ಹೊರ ಹಜಾರದಿ ನಿಂದು ಚಂದ್ರಿಕಾ ವಿಹರಣನ । ಎರಕದಿಂ ಮಾಳ್ಪರ್ತಿಯೊಳು ॥ ೯೨ ॥

ಶಠ ದೃಷ್ಟದೂಷಕ ದಕ್ಷಿಣಾನುಕೂಲ । ವಿಟ ನಾಗರಿಕ ಪೀಠಾದಿ ॥
ಚಟುಲನಾಯಕರುವೆರಸು ಜ್ಞಾನಚಂದ್ರನು । ನಟನೆಯಿಂ ಬರೆ ಬೀದಿಯೊಳು ॥ ೯೩ ॥

ಕುಲಟೆಯೋರ್ವಳು ತಡೆದು ಬರೆ ಸಜ್ಜೆಯ । ನೆಳಲೊಳಗಿದೋರ್ವ ಪಾಣ್ಬ ॥
ಮುಳಿದಾಗವಳು ತಂದ ಪರಿಮಳ ವಸ್ತುವ । ಘಳಿಲನೀಡಾಡಲು ಬೆದರಿ ॥ ೯೪ ॥

ಚರಣಕೆರಗಿಯೋಪ ! ಬೇಡವೆನ್ನೊಳು ಕೋಪ । ಕರಿಕರಿಯತ್ತೆ ಪುರುಷನ ॥
ನೆರೆ ವಂಚಿಸಿ ಬರುವುದು ತಡವಾಯ್ತೆಂ- । ದೊರೆವ ಪಾಣ್ಬೆಯ ನುಡಿಗೇಳಿ ॥ ೯೫ ॥

ಅರಸ ವಿಸ್ಮಯಬಟ್ಟು ಮುಂದಕೆ ನಡೆವಲ್ಲಿ । ಹರಕು ಮನೆಯೊಳಾಗೋರ್ವ ॥
ಗುರುಕುಚೆ ವೃದ್ಧ ವಿಪ್ರನೊಳು ಪುಂಭಾವದಿ । ಸುರತದೊಳಿರೆ ಇಂತು ನುಡಿದ ॥ ೯೬ ॥

ಮನಸೊಂದು ಬಿಡು ಬಿಡು ಇನಿಯಳೀ ಕಾರ್ಯಕೆ । ಮನೆಯೊಳಗಿಲ್ಲವೆ ಶಿಷ್ಯ ॥
ಎನೆ ಕಿಲಿಕಿಲಿಯೆಂದು ನಗುತಿರೆ ಕಾಮಿನಿ । ಮನುಜೇಶ್ವರನದ ಕೇಳಿ ॥ ೯೭ ॥

ಕರದಿಂದ ಕರಹೊಯ್ದು ಸಖರುಗಳನು ರಾಯ । ಭರದಿ ನಗುತ ಕವಕವಿಸಿ ॥
ಹರುಷದಿಂ ಮಿತ್ರರುಗಳು ಕೂಡಿ ಮುಂದಕೆ । ತೆರಳುವಾಗಾಗೊಂದೆಡೆಯೊಳು ॥ ೯೮ ॥

ಕರದ ಕಂಕಣವಲುಗಿಸದಿರು ದಮ್ಮಯ್ಯ ! । ಸ್ವರದೋರ ಬೇಡ ದಕ್ಕಯ್ಯ ॥
ನೆರೆಯುಚ್ಛ್ವಾಸ ನಿಶ್ವಾಸವ ತಗ್ಗಿಸು । ಸುರತದ ತಣಿಪೆಂದೋರ್ವ ॥ ೯೯ ॥

ಜಾರೆಯೊಳ್ನುಡಿದು ಕೂಡುವ ಪಾಣ್ಬ ವಚನವ । ಧಾರುಣೀಶ್ವರ ಕೇಳಿ ನಗುತ ॥
ಕೇರಿಗಳೊಳಗೆ ಬರುತ ಸಖರೊಡಗೂಡಿ । ಧೀರ ಮುಂದಕೆ ಬರುವಾಗ ॥ ೧೦೦ ॥

ಸಡಲಿದ ಮುಡಿ, ಬೆಮರೇರಿ ಕಂಪಿಪ ಮೈ । ಬಿಡದೆ ಮೊರೆವ ಸಿಟ್ಟುಸಿರು ॥
ಕಡೆಗಣ್ಣ ಕೆಂಪು ಜಾರಿದ ನಿರಿ, ಚರಣವ । ನಿಡು ತತ್ತರಿಗೊಳುತೋರ್ವ ॥ ೧೦೧ ॥

ಕುಲಟೆ ಮುಸುಕನಿಟ್ಟು ಪಾಣ್ಬನ ಬಳಿಯಿಂದ । ಹೊಳವ ಬಿಡುತ ಕತ್ತಲೆಯೊಳು ॥
ಘಳಿಲನೆ ಬರುವುದ ದೊರೆ ಕಂಡು ಮುಂದಕೆ । ನಲವಿಂದ ನಡೆದು ಕ್ಷತ್ರಿಯರ ॥ ೧೦೨ ॥

ವೀಥಿಯೊಳಗೆ ಬರುತಲ್ಲೊಂದೆಡೆಯೊಳು । ನೀತಿ ಮಾತುಗಳ ದೊರೆಗಳು ॥
ಆತುರದಿಂದ ತಮ್ಮೊಳು ತಾವು ನುಡಿದರು । ಭೂತಳೇಶ್ವರರ ಲಕ್ಷಣವ ॥ ೧೦೩ ॥

ಸೂರರೊಳತ್ಯಂತ ಸ್ನೇಹವಾಗಿರಬೇಕು । ಶೂರನಾಗಿರಬೇಕು ತಾನು ॥
ಕಾರುಣ್ಯವಿರಬೇಕಾಶ್ರಿತ ಜನರೊಳು- । ದಾರ ಗುಣಗಳಿರಬೇಕು ॥ ೧೦೪ ॥

ಸಲುತಿರಬೇಕು ಜೀವಿತ ಭಟರ ರಣಕೆ । ಸಲಹಬೇಕು ಪ್ರಜೆಗಳನು ॥
ಬಲುಹಿಂದ ರಾಜ್ಯವನೊತ್ತಿ ಸಲಹಬೇಕು । ಜಲದುರ್ಗ ಗಿರಿದುರ್ಗಬೇಕು ॥ ೧೦೫ ॥

ಪರರಾಜ್ಯದ ವರ್ತಮಾನಗಳನು ಗೂಢ- । ಚರರಿಂದಲರಿತಿರಬೇಕು ॥
ಪರಿಕಿಸಬೇಕು ನಗರ ಶೋಧನೆಯಿಂದ । ಪುರದ ಜನಗಳ ನಡತೆಯ ॥ ೧೦೬ ॥

ಪರನಾರಿಯರ ಸಹಜಾತನಾಗಿರಬೇಕು । ವರ ಧರ್ಮದೊಳು ಪ್ರೀತಿಬೇಕು ॥
ಕರಣಿಕರರಿಗೆ ರಾಜ್ಯವ ಕೊಡದಿರಬೇಕು । ವರ ಮಂತ್ರಾಲೋಚನೆಬೇಕು ॥ ೧೦೭ ॥

ಎಂದಿವು ಮೊದಲಾದ ಪಲವು ನೀತಿಗಳನು । ಚಂದದಿಂ ಪೇಳುತಲಿರಲು ॥
ಕಂದರ್ಪರೂಪ ಕೇಳುತ ಜೂಜನಾಡುವ- । ದೊಂದು ಕೇರಿಯನಾಗ ಪೊಕ್ಕು ॥ ೧೦೮ ॥

ಪಗಡೆ ಗಿರಿಜೆನೆತ್ತ ಚದುರಂಗ ಜೂಜನು । ಸೊಗಸಿಂದ ಬಾರುಗುತ್ತನನು ॥
ಪಗಲು ಹಾಲಂತಿಹ ಚಂದ್ರೋದಯದೊಳು । ಒಗುವಿಗೆ ತಟ್ಟತಟ್ಟಿಯೊಳು ॥ ೧೦೯ ॥

ಎರಡಾರೀರೆಂಟು ಪದಿನೆಂಟಿಪ್ಪತ್ತೇಳು । ಮೆರೆವ ಜಾಳಿಗೆಯೊಡ್ಡಗಟ್ಟಿ ॥
ಭರದಿಂದಲಾಡುವ ಜೂಜುಗಾರರನಾಗ । ಧರಣೀಪತಿ ನೋಡುತಿರ್ದ ॥ ೧೧೦ ॥

ಧರೆ ಕೋಶ ಪಟ್ಟಣ ಭವನ ವಿಭೂಷಣ । ನೆರೆದೊಡ್ಡಿತೆ ತಾವು ಪಡೆದ ॥
ವರ ಸೂನುಗಳ ಪೆಣ್ಮಕ್ಕಳನುಜರನು । ವರಿವುದೇಂ ಮೇಲೊಡ್ಡಗಟ್ಟಿ ॥ ೧೧೧ ॥

ಕರಿ ಪುಲಿ ತಗರು ಸೀಪಲೆ ಕೋಳಿ ಕೋಣನ । ಭರದಿಂದ ಕಾದಿಸುವುದನು ॥
ನರನಾಥಚಂದ್ರನು ನೋಡುತ ಪಟುಭಟ- । ರುರುತರ ವೀಥಿಯ ಪೊಗಲು ॥ ೧೧೨ ॥

ಬೀರರುಗಳು ಒಂದೆಡೆಯೊಳು ಕುಳಿತಾಗ । ಪೌರುಷವಾಡಿದರಿಂತು ॥
ಮೇರೆಯಿಲ್ಲದ ಪರಬಲವನೋರ್ವನೆ ಪೊಕ್ಕು । ಚಾರಿವರಿಸುತ ಭಟರನು ॥ ೧೧೩ ॥

ಕರಿಗಳ ಶುಂಡಿಲ ಕತ್ತರಿಸುತ ಮತ್ತೆ । ತುರಗವ ತಿವಿದು ಕೆಡಹುತ ॥
ನೆರಿಗಲಿಗಳು ತಿವಿಯಲು ತಪ್ಪಿಸಿಕೊಂಡು । ಸುರಗಿಯ ಹಾರು ಹೊಡೆವುತ ॥ ೧೧೪ ॥

ಒಡನೆ ಲಂಘಿಸಿ ಹಿಡಿಯೊಳಗೆ ಹಿಡಿಯಬೇಕು । ಕೊಡಬಾರದು ಬೆನ್ನ ಭಟರ್ಗೆ ॥
ಮಡದಿ ಮಕ್ಕಳ ಮನೆಯಾಸೆಯ ಬಿಡಬೇಕು । ಕಡಿಯಬೇಕತಿ ಛಲದಿಂದ ॥ ೧೧೫ ॥

ಬಿಡಬೇಕು ಮೈಯ ಮೇಲಾಸೆಯ ಎಡರೊಳು । ಕಡು ಧೈರ್ಯವಾಗಿರಬೇಕು ॥
ಒಡೆಯನ ಪಾದವೆ ಗತಿಯೆಂದಿರಬೇ- । ಕಡಗಬಾರದು ಕಳ್ಳತನದಿ ॥ ೧೧೬ ॥

ಹೆರಸಾರಿಮುರಿದ ಬಲಕೆ ಧೈರ್ಯಗೊಡಬೇಕು । ಕರುಣಬೇಕತಿ ಹಂದೆಯರೊಳು ॥
ಮುರಿದು ಬಲವ ಕಂಡು ಎದೆಯೊಡ್ಡಿ ನಿಲಬೇಕು । ಧೀರ ಬಲವನಟ್ಟಬೇಕು ॥ ೧೧೭ ॥

ಇಂತು ನುಡಿದ ಬೀರರ ಪೌರುಷವ ಭೂ- । ಕಾಂತ ಕೇಳುತ ಬೀದಿಯೊಳು ॥
ಸಂತೋಷದಿಂ ಬರುತಿರೆ ಅಂಗಡಿಗಳೋ- । ರಂತೆ ವಸ್ತುಗಳನು ಕಂಡ ॥ ೧೧೮ ॥

ಹುರಿಗಡಲೆಯ ರಾಶಿ ಸಂಬಾರಗಡಲೆಯ । ಪರಿಪರಿ ಬೇಳೆಗಡಲೆಯ ॥
ಸುರಿದಿರ್ಪ ಬೆಲ್ಲ ಸಕ್ಕರೆಗಡಲೆಗಳ । ನರನಾಥಚಂದ್ರಮ ಕಂಡು ॥ ೧೧೯ ॥

ಎಳ್ಳುಂಡೆ ಕಡಲೆಗಳುಂಡೆ ಮೋರುಂಡೆಯ । ಒಳ್ಳೆಯ ಸುಕಿನುಂಡೆಗಳ ॥
ಬೆಳ್ಳಿತಾಗಿರ್ದ ಮನೋಹರವುಂಡೆಯಾ- । ಗೆಲ್ಲದಿ ಕಂಡ ಭೂವರನು ॥ ೧೨೦ ॥

ತರಗು ಚಕ್ಕುಲಿ ಚಿಸೂರಿಗೆಯತಿರಸ । ಪರಿಮಳಮಯದ ಲಡ್ಡುಗೆಯ ॥
ಗರಿಗುಟ್ಟುವ ಮುತ್ತು ಸೋರೆಯ ಮಾರುವ । ತರುಣೀರ ಕಂಡು ಭೂಭುಜನು ॥ ೧೨೧ ॥

ಕಾರೆಯಕಾಯಿ ಖರ್ಜೂರ ಕಲ್ಲುಸಕ್ಕರೆ । ಚಾರು ಬೀಜವು ಕೋಡು ಬೀಜ ॥
ಚಾರು ಪುಷ್ಪಗಳ ಮುಂತಾದುವ ಕೊಳುತಿರ್ದ । ಕೋರೆ ವಿಟರ ಕಂಡನಾಗ ॥ ೧೨೨ ॥

ಹಲಸಿನ ಮಾವಿನ ನೇರಳೆ ಕಿತ್ತಳೆ । ವಿಲಸಿತ ಕದಳಿ ಪಣ್ಗಳನು ॥
ಬಲು ಸ್ವಾದಿನ ಚಪ್ಪರ ದ್ವೀಪ ದ್ರಾಕ್ಷೆಯ । ಹಲವು ಗುಡ್ಡೆಯ ಕಂಡನರಸ ॥ ೧೨೩ ॥

ಕರಿಯ ಕಬ್ಬು ರಸದಾಳಿಯ ಬಿಳಿಗಬ್ಬು । ಮೆರೆವ ಚಿಟ್ಟಬಾಸುರದ ॥
ಹೊರೆಹೊರೆಗಟ್ಟಿ ನಿಲ್ಲಿಸಿ ಮಾರುವುದನಾ । ದೊರೆಮಗ ಕಂಡನಾಗಲ್ಲಿ ॥ ೧೨೪ ॥

ರಸದಾಳೆ ಕಬ್ಬಿನ ರಸದಿಂದಗ್ಗಳವಾದ । ಹೊಸತಾದ ಚೆಂದೆಂಗುಗಳ ॥
ಕಸನಾದ ಗಂಗಪಾಣೆಳೆನೀರ ರಾಶಿಯ । ವಸುಧೇಶ್ವರ ನೋಡಿದನು ॥ ೧೨೫ ॥

ಮೃಗಮದ ಪುನುಗು ಕುಂಕುಮ ಕರ್ಪೂರ ಗಂಧ । ಸೊಗಸಾದಗರು ಗುಗ್ಗುಳದ ॥
ಹೊಗರಿನ ಯಕ್ಷಕರ್ದಮದ ಜವಾದಿಯ । ಅಗಣಿತ ರಾಶಿಯ ಕಂಡ ॥ ೧೨೬ ॥

ಗರಿ ಪಚ್ಚೆಯ ರಾಶಿ ಪನ್ನೀರ ಕುಪ್ಪಿಗೆ । ಮೆರೆವ ಬೆಳ್ಳೆಲೆ ನಾಗವಳ್ಳಿ ॥
ಮೆರೆವ ಮುತ್ತಿನ ಸುಣ್ಣಸ್ವಭಾಗದ ಹೋಳು । ಅರಸ ಕಂಡನು ಗಮಕದೊಳು ॥ ೧೨೭ ॥

ಸುರಗಿ ಸೇವಂತಿಗೆ ವೊಲ್ಲೆಮಲ್ಲಿಗೆ ಜಾಜಿ । ಇರುವಂತಿಗೆ ಕಲ್ಹಾರ ॥
ಮರುಗದ ಸರಗಳ ಮಾಲೆಗಾತಿಯರ್ಪಿಡಿ- । ದಿರುವುದ ಕಂಡನಾ ರಾಯ ॥ ೧೨೮ ॥

ಸಂಪಿಗೆ ಮಾಲೆಯ ಪಿಡಿದೆತ್ತಿ ಮಾರುವ । ಸೊಂಪೊಪ್ಪಿತೋರ್ವ ಕೋಮಲೆಯ ॥
ಕಂಪಿನಿಂ ವರ್ಣದಿಂ ಸ್ವಾಂಗಮಿಂತಿಹುದೆಂದು । ಪೆಂಪಿನಿಂ ತೋರ್ವಂತೆ ಜನರ್ಗೆ ॥ ೧೨೯ ॥

ತರುಣಿಯೋರ್ವಳು ಸುರಗಿಯ ದಂಡೆ ಪಿಡಿದಿ- । ರ್ಪಿರುವ ನಟಣೆಯೊಪ್ಪಿದುದು ॥
ಸರಸತಿ ಸಂಯಮಿಗಳ ಕಟ್ಟಿ ಬಂಧಿಪ । ಉರಗ ಪಾಶವೋ ಎಂಬಂತೆ ॥ ೧೩೦ ॥

ಮೇಲುದ ಕಿಂಚಿದನೆತ್ತಿ ಭುಜಂಗರ । ಸೋಲಿಸುತೋರ್ವ ಕೋಮಲೆಯ ॥
ಮಾಲೆಯ ಕೊಡುವ ಭಾವವ ರಾಜೇಂದ್ರನು । ಲೀಲೆಯಿಂ ಕಂಡನೇನೆಂಬೆ ॥ ೧೩೧ ॥

ಹರಳೋಲೆ ಜಲಿಜಲಿರೆನೆ ಹಸ್ತ ಕಂಕಣ । ಸ್ವರದೋರೆ ಗಲಗಲರೆಂದು ॥
ನೆರಿಯು ಮೇಗಣ ಕಾಂಚಿ ಕಿರುಘಂಟೆ ಕಿಣಿರೆನೆ । ಸೆರಗು ಜಾರಿದುದನರಿಯದೆ ॥ ೧೩೨ ॥

ಪರಿಮಳಮಯವಾದ ಗಂಧವನೆರೆವಾಗ । ತರುಣಿಯರಂಗೋಪಾಂಗವನು ॥
ತೆರೆದು ಕೆಂಬಾಯ ಬೆಬ್ಬುಳಿಗೊಂಡು ನೋಡುವ । ತರಳ ವಿಟರ ಕಂಡನರಸ ॥ ೧೩೩ ॥

ಸೌಂದರಿಯರ ಸುಯ್ಯಲೊಳು ಸುಳಿದಾಡುತ । ಗಂಧವುಡಿಯ ಪಾರಿಸುತ ॥
ನಂದ್ಯಾವರ್ತಾದಿ ಪುಷ್ಪಗಳ ಸೌರಭವೊತ್ತು । ಗಂಧವಾಹನು ತೀಡಿದಾಗ ॥ ೧೩೪ ॥

ಮಾರನ ಸಾಮ್ರಾಜ್ಯವೆನಿಸಿದ ಭುಜಗರ । ಚಾರು ರಾಗವೆ ಕೇರಿಯಾದ ॥
ವಾರಾಂಗನೆಯರ ಬೀದಿಯ ತಾ ಪೊಕ್ಕು । ಭೂರಮಣೇಶ ಬರ್ಪಾಗ ॥ ೧೩೫ ॥

ಸುರಗಣಿಕೆಯರು ಸಗ್ಗದಿ ಜಾಣರಿಲ್ಲೆಂದು । ಭರದೊಳು ಮನೆಗಟ್ಟಲ್ಲಿ ॥
ಮರಿಸುವ ವಿಟರೆಂದು ಬಾಗಿಲೊಳಗೆ ನಿಂದು । ನೆರೆದೆಳೆವೇಸಿವೆಣ್ಣಿಹವು ॥ ೧೩೬ ॥

ರತಿ ಪಲ ರೂಪಾಂತು ದ್ವಾರದೊಳಗೆ ಬಂ- । ದತಿಶಯದಿಂ ನಿಂದಳೆನಲು ॥
ಶತ ಸಾಸಿರ ಸೂಳೆಯರು ಸಿಂಗರವಾಗಿ । ನುತವೆತ್ತು ನಿಂದಿರೆ ಕಂಡು ॥ ೧೩೭ ॥

ಹರಳೋಲೆ ತೋರತುರುಂಬು ಕತ್ತುರಿ ಬೊಟ್ಟು । ಮೆರೆಯೆ ಮುತ್ತಿನ ಮೂಗುತಿಯು ॥
ನೆರಿಯು ಪಸರಿಸಿ ಕುಚವ ನಸುದೋರಿಸಿ । ಕರದೊಳು ಬೆಳ್ಳೆಲೆವಿಡಿದು ॥ ೧೩೮ ॥

ಕೊನೆಗಣ್ಣ ನೋಟದಿ ವಿಟರ ಸೋಲಿಸುತಾಗ । ಮನೆಯ ಬಾಗಿಲನೆಮ್ಮಿಕೊಂಡು ॥
ಮಿನುಗುವ ನಗೆಯಿಂದಲೊತ್ತಿಗೆ ನಿಂದಿರ್ದ । ವನಿತೆಯರನು ಕಂಡನರಸ ॥ ೧೩೯ ॥

ಚಂದಣದಣ್ಪಿಟ್ಟು ಚಂದ್ರಗಾವಿಯನುಟ್ಟು । ಮುಂದಣ ಚೌಕಿಯನೆಮ್ಮಿ ॥
ಅಂದುಗೆ ಝಣರೆನೆ ಗಾಡಿಯಿಂದೊತ್ತಿಗೆ । ನಿಂದೋರ್ವಳಿರೆ ಕಂಡನರಸ ॥ ೧೪೦ ॥

ಎಣ್ಣೆಗಂಟಿಸೆಯೆ ಕಂಗಳಿಗೆ ಕಜ್ಜಳವೆಚ್ಚಿ । ಸಣ್ಣ ನಾಮದ ರೇಖೆ ಪೊಳೆಯೆ ॥
ಬಣ್ಣವನುಟ್ಟು ವೊತ್ತಿಗೆ ಬಂದು ನಿಂದೋರ್ವ । ಪಣ್ಯಾಂಗನೆಯನು ಕಂಡ ॥ ೧೪೧ ॥

ಬರಹದ ಸೀರೆ ಸೊಮ್ಮುಡಿಯು ಜಾಲಿಯ ಓಲೆ। ಹೆರೆಯಂತೆ ನೊಸಲು ವಿಭೂತಿ ॥
ತರಳ ವಿಟನ ಕರವಿಡಿದು ಮುದ್ದಾಡುವ। ಗುರುಕುಚೆಯರ ಕಂಡನರಸ ॥ ೧೪೨ ॥

ವಲ್ಲಕಿಯನು ಸ್ತನದೊಳಗಿಟ್ಟು ನುಡಿಸುತ। ಚಲ್ಲೆಗಂಗಳ ನೋಟದಿಂದ ॥
ನಲ್ಲರ ಮರುಳು ಮಾಡುತ ಕುಳಿತಿದ್ದೋರ್ವ। ಮೆಲ್ಲದೆಗಾತಿಯ ಕಂಡು ॥ ೧೪೩ ॥

ಚರಣದಂದುಗೆ ಝಣಝಣರೆಂದುಲಿಯಲು। ಸ್ಮರನಂಕಮಾಲೆಯೋದುತಲೆ ॥
ಗುರುಕುಚಗಳು ಕುಣಿಯೆ ಬೇರೊರ್ವಿಂದು। ಪರಿಪೂರ್ಣಮಂಡಲವೆನಿಸಿ ॥ ೧೪೪ ॥

ಸಿರಿಮೊಗವನು ತೋರುತ ಕೃಷ್ಣವೇಣಿಯ। ಧರೆಗೆಳೆದಾಡುತುಯ್ಯಲನು ॥
ಹರುಷದಿಂದಾಡುವಂಗನೆಯ ವಿದೂಷಕ। ತರಳಾಕ್ಷಿಯಿವಳು ನೋಟಕರ ॥ ೧೪೫ ॥

ಮನವನಲ್ಲಾಡಿಸುವಂದವಲ್ಲದೆಯಿದು। ಬಿನದಕಾಡುವ ರೀತಿಯಲ್ಲ ॥
ಜನನಾಥ ! ಎಂದೆನೆ ಮುಗುಳುನಗೆಯ ನಕ್ಕು। ವಿನದವಾಡುತ ಮುಂದಕೈದೆ ॥ ೧೪೬ ॥

ಒಂದೆಡೆಯೊಳು ಧಿಂ ಧಿಮಿಯೆಂಬ ಮದ್ದಳೆ-। ಯಂದಕೆ ನಲಿದು ನರ್ತಿಸುವ ॥
ಸೌಂದರಾಂಗಿಯ ಕಂಡು ನಾಗರಿಕನು ಯಿಂ-। ತೆಂದು ನುಡಿದನರಸನೊಳು ॥ ೧೪೭ ॥

ತೆರೆಯದ ಬಾಯ್ದೆರೆ, ಮರಿಹುಲ್ಲೆಗಣ್ಣಿಂದ। ಹರೆಯದ ಕಡೆಗಣ್ಣ ಕಾಂತಿ ॥
ಮರುಕವಿಲ್ಲದ ದೇಹ, ಹಾವವಿಲ್ಲದ ಮೊಗ। ತೊರೆಯದ ಲಜ್ಜೆಯಿಂದಿವಳು ॥ ೧೪೮ ॥

ಕಡು ಗಾಡಿ ಭಾವಿಸಿ ನೋಡಲು ತೋರ್ಪುದು। ಕೊಡಗೂಸಿನಂದವನೆಂದು ॥
ನುಡಿಯಲರಸ ನಕ್ಕು ಮುಂದಕೆ ಅಡಿಯಿಡೆ। ತೊಡೆದ ಲೇಪನವ ಮರೆಸುತ ॥ ೧೪೯ ॥

ಖಂಡಿತಾಧರವ ಕೈಯಿಂ ಮುಟ್ಟಿ ಮರೆಸುತ। ತೊಂಡೆವಾಯ್ದೆರೆಯಳ ಬಿಟ್ಟು ॥
ಗಂಡುಗೆಳಲಿ ಬರ್ಪ ಮುನ್ನಿನ ನಲ್ಲಳ। ಕಂಡು ನಗುತ ಬೇಗದಿಂದ ॥ ೧೫೦ ॥

ನಡೆತಂದು ಬಿಗಿಬಿಗಿಯಮರ್ದಪ್ಪಿ ಬೇಗದಿಂ-। ದಡಿಗೆರಗುತಲೆಲೆ ನೀರೆ !
ಬಿಡದೆ ನಿನ್ನರಸಿದೆ ಎಂದು ನಂಬಿಸಿ ದುಷ್ಟ। ನೆರೆಯೆ ದುಷ್ಟನು ಬೇಗ ನೃಪತಿ ॥ ೧೫೧ ॥

ತೋರಿಸುತೊಡನೆ ಮುಂದಕೆ ಬರುತಿರಲಾಗ। ನೀರಾಣಿಗೆಲಸ ಮಂಚದೊಳು ॥
ಸಾರಿ ಕುಳಿತ ನಲ್ಲಳು ನಸು ಮುನಿಯಲು। ಭೀರುವಾದಂತೆ ವಿನಯದ ॥ ೧೫೨ ॥

ಚರಣಕೆರಗೆ ಮೋಹನವೆತ್ತುವಂತೆತ್ತಿ। ಸರಸದಿಂ ನೆರೆವುದ ಶಠನು ॥
ಅರಸಗೆ ತೋರುತ ಮುಂದಕೆ ಬರುವಾಗ। ತರುಣಿಯೋರ್ವಳು ತನ್ನನಿಯನ ॥ ೧೫೩ ॥

ಬರುವ ಬರವ ಕಂಡಿದಿರೆದ್ದಪ್ಪಲಿಂಗಿಸಿ। ಸರಸ ಚುಂಬನ ನಲ್ಲೆಗೈದು ॥
ಮುರುಕದಿಂದವೆ ಕೊಡುವುದ ವಿಟನು ಕಂ-। ಡರಸಗೆ ತೋರಿಸೆ ಮುಂದೆ ॥ ೧೫೪ ॥

ನಡೆವಾಗಲೋರ್ವಳು ತಡೆದು ತಡೆದು ಬರೆ। ಕಡು ಮುನಿಸಿಂದವ ತಂದ ॥
ತೊಡವು ಪೂಮಾಲೆ ಮುಂತಾದುವನೀಡಾಡಿ। ಕೆಡಹಿ ಕಾಲೊಳಗೊದ್ದು ಗುದ್ದಿ ॥ ೧೫೫ ॥

ಭರದಿಂದ ನೂಂಕಲೊಂದೆಡೆಯೊಳಗಿರುತಿ- । ರ್ದ್ದರಿಯನ ಕಂಡಾಗ ನೀರೆ ॥
ಕರುಣಹೃದಯಳಾಗಿ ಬಾ ಬಾರೆಂದಾಗ । ನೆರೆವುದನನುಕೂಲ ನೃಪಗೆ ॥ ೧೫೬ ॥

ಎರಕದೊಳಗೆ ತೋರಿ, ಮುಂದಕೆ ನಡೆವಾಗ । ಗುರುಕುಚೆಯೋರ್ವನ ಕೂಡಿ ॥
ಎರೆಯನಿರ್ದೆಡೆಗೆ ಬರಲು ನಲ್ಲಳೆ ಇಷ್ಟು । ನೆರೆ ಸುಯಿಲೇನೆಂದು ಕೇಳೆ ॥ ೧೫೭ ॥

ಹರುಷದಿಂದವೆ ದ್ವಾರದೊಳು ನಿಂದಿರೆ ನಾನು । ಕರಿ ಬಂದು ಬೇಗದಿಂದೆನ್ನ ॥
ಭರದಿ ಪಿಡಿಯುತಿರೆ ನಾನೋಡಿ ಬರುವಾಗ । ನಿರಿ ಸಡಲಿತು ಉಚ್ಛ್ವಾಸ ॥ ೧೫೮ ॥

ನೆರೆ ತೋರಿತು ನಿನ್ನಾಣೆ ಎನುತ ಸುಳ್ಳ- । ನೊರೆದು ಮುದ್ದಿಪ ಪ್ರೌಢೆಯನು ॥
ಅರಸಗೆ ವಿಟನಾಯಕ ತೋರೆ ನಸುನಕ್ಕು । ಬರುತಿರೆ ಬೀದಿಯೊಳಾಗ ॥ ೧೫೯ ॥

ಸೆಳೆಮಂಚದೊಳೋರ್ವ ಧೂರ್ತ ಕುಳಿತುಕೊಂಡು । ನಳಿನಾಕ್ಷಿ ನಿನ್ನ ರವಕೆಯ ॥
ಕೆಲಸವು ಚಂದವಾಯಿತು ನೋಡುವೆನೆಂದು । ಘಳಿಲನೆ ಕೈಯಿಟ್ಟು ಗಂಟ ॥ ೧೬೦ ॥

ಕಳೆದು ಮೆಲ್ಲನೆ ಸ್ತನದೊಳು ನಖದೋರಲು । ಎಳೆವೆಣ್ಣು ನಾಣ್ಚಿ ಬೈವುದನು ॥
ಇಳೆಯಾಣ್ಮಗೆ ಪೀಠವರ್ಧನ ತೋರಿಸೆ । ಸಲೆ ಮುಗುಳುನಗೆಯಿಡುತ ॥ ೧೬೧ ॥

ತೆರಳಿ ಮುಂದಕೆ ಸಖರೊಡಗೂಡಿ ರಾಜೇಂದ್ರ । ಪರಿಹಾಸಕಮನೀಕ್ಷಿಸುತ ॥
ಪರಿತೋಷದಿಂ ಬರುತಿರಲೊಂದೆಡೆಯೊಳು । ಸಿರವೆತ್ತು ಸಿಂಗರವಾದ ॥ ೧೬೨ ॥

ಪಳುಕಿನ ಜಗತಿಯೊಳಗೆ ಸೊಗಯಿಸುತಿರ್ಪ । ಸೆಳೆಮಂಚದ ಮೇಲೋರ್ವ ॥
ನಳಿನಾಕ್ಷಿಯನಮರ್ದಪ್ಪಿ ಚುಂಬನಗೊಟ್ಟು । ಪೊಳೆವ ಚೆಂದುಟಿ ಪೀರುತಿರಲು ॥ ೧೬೩ ॥

ಕರ ಮೇಲಕೆಯುತ್ತಾನಶಯದಿಯೆತ್ತಿ । ಮುರುಕದಿಂದಲ್ಲಾಡಿಸುತ ॥
ಶಿರಗೊಡುಹುತ ವೇದನೆಗಳ್ಕಿ ತಾನಾಗ । ಒರೆವುತ ಮಾ ಮಾ ಎಂದು ॥ ೧೬೪ ॥

ಎರೆಯನ ಮನಕೆ ಸಂತಸವ ಪುಟ್ಟಿಸುತಿರ್ದ । ತರುಣಿಯ ಕಂಡು ದಕ್ಷಿಣನು ॥
ಒರೆದನಿವಳು ವೇದನೆಯಿಂದ ಪಾಣಿಯು । ಶಿರಗೊಡುಹುವ ಭಾವಮಲ್ಲ ॥ ೧೬೫ ॥

ವಿಲಸಿತ ಹರಳೋಳೆ ಕರದ ಕಂಕಣಗಳ । ಉಲುಹುದೋರುವ ಭಾವಮೆಂದು ॥
ಇಳೆಯಾಣ್ಮಗೊರೆಯಲು ನಸುನಕ್ಕು ಮುಂದಕೆ । ತೆರಳುತ್ತಿರಲೊಂದೆಡೆಯೊಳು ॥ ೧೬೬ ॥

ವಂಚನೆ ಹುರುಡು ಹೊರಟೆ ಬಹು ಚಾಳಿಯು । ಸಂಚು ಸನ್ಮಾನ ಮುರುಕವ ॥
ಮುಂಚೆ ನೀ ಕಲಿಯೆಂಬ ಸೂಳೆ ಬಿನ್ನಣದ ಪ್ರ- । ಪಂಚವ ಕೇಳುತ್ತೈದಿದರು ॥ ೧೬೭ ॥

ಮುರುಕು ಮುನಿಸು ಲಲ್ಲೆ ನೋಟ ಬೇಟಗಳಿಂದ । ದುರುದುಂಬಿ ವಿಟರ ಚಿತ್ತವನು ॥
ಕರಗಿಸಿ ಸೆಳೆ ಹಣಗಳನೆಂದು ಮಗಳಿಗೆ । ಒರೆವ ವೃದ್ಧೆಯ ಕಂಡನಾಗ ॥ ೧೬೮ ॥

ಇಂದು ನಮ್ಮನೆಯ ದೇವರ ಹಬ್ಬವದಕೀಗ । ಬಂದಿ ಮೂಗುತಿಯಾಗಬೇಕು ॥
ತಂದುಕೊಡೆಂದು ಮುದ್ದಿಸಿ ಸೆಳೆಕೊಂಬುದು । ಸೌಂದರಾಂಗಿಯರಂಗವಿದು ॥ ೧೬೯ ॥

ಇನಿಯ ಬರುತಲಿರೆ ಇದಿರೆದ್ದಾಲಿಂಗಿಸಿ । ಕೊನೆಗಣ್ಣ ನೋಟದಿ ನೋಡೆ ॥
ಮನವನು ಕರಗಿಸಿ ಹಣವ ಸುಲಿದುಕೊಂಬ । ವನಿತೆಯೆ ಜಾತಿಗಣಿಕೆಯು ॥ ೧೭೦ ॥

ಅತಿ ಚಪಳನನು ಕರೆಯದಿರು ಮಾತಿನಿಂ । ಸತಿ ನಿನ್ನ ಸೋಲಿಸಿ ಹಣವ ॥
ಸತಿ ನಾಳೆ ಕೊಡುವೆನೆಂದೆಂಬವನನು ಬಿಟ್ಟು । ಸತತ ಕೊಡುವನನು ಕಂಡು ॥ ೧೭೧ ॥

ಧನಿಕನ ಕರೆದೊಡೆ ನಿನ್ನಯ ಗೃಹದಲ್ಲಿ । ಧನಕನಕವು ತುಂಬಿಹುದು ॥
ಬಿನುಗನ ಕರೆದೊಡೆ ಸುಲಿದು ತಿಂಬನು, ನೀನು । ಮನೆ-ಮಾರ ಮಾರುವಂತಿಹುದು ॥

ಕಡು ಲೋಭಿಯನು ಕರೆಯಲುಬೇಡ ಕರೆದೊಡೆ । ಕೊಡುವನಲ್ಲವ ಹಣಕಾಸ ॥
ನುಡಿಯಿಂದ ವಂಚಿಸಿ ಇಂದು ನಾಳೆಯು ಎಂದು । ಗಡಣದಿಂ ತಪ್ಪಿಸಿಕೊಂಬ ॥ ೧೭೩ ॥

ಕುರುಡನಾಗಲಿ ಕುಂಟ ಕೋಡಗನಾಗಲಿ । ನೆರೆ ತೊನ್ನನಾಗಲಿಯವನು ॥
ಸ್ಮರನೆಂದೆ ಭಾವಿಸಿ ಹಣವ ಸೆಳೆದುಕೊಂಬ । ತರುಣಿಯವಳು ಧನವಂತೆ ॥ ೧೭೪ ॥

ಉಡುಗೆ ತೊಡುಗೆ ತೊಟ್ಟು ಸಿಂಗರವಾಗಿರೆ । ಕೊಡುವರುವತ್ತೆಯ ವಿಟರು ॥
ಮಡಿಯಿಲ್ಲದೆ ಮಾಸಿ ಬಿಚ್ಚೋಲೆಯಿಕ್ಕಲು । ನುಡಿಸರು ಹೇಸುತಲಿಹರು ॥ ೧೭೫ ॥

ಅರಸು ಮಕ್ಕಳ ಮೊನೆಗಾರರ ಧನಿಕರ । ಇರಿದು ಮೆರೆವ ರಾಹುತರ ॥
ಕರೆದರೆ ಹಣಕ್ಕೈಗಂಟಿಲೆ ಮಗಳೆ ! ಎಂ- । ದೊರೆದರು ಮುದಿ ಪಾರಿಯರು ॥ ೧೭೬ ॥

ಹಳೆಯ ವಿಟನ ಬಿಡು ಹಣಕಾಸು ತಂದೀವ । ಸಲೆ ತ್ಯಾಗಿ ವಿಟನನು ವರಿಸು ॥
ಕಲೆಯ ನೆಲೆಯ ತೋರಿಸು ಎಂದೋರ್ವಳು । ಬೆಲೆವೆಣ್ಣಿಗೆ ಪೇಳುತಿಹಳು ॥ ೧೭೭ ॥

ಒಲುಮೆಯೋರ್ವನ ಮೇಲೆ ಕಲೆಯೋರ್ವನ ಕೂಡೆ । ಸಲೆ ಮೋಹವೋರ್ವನ ಮೇಲೆ ॥
ಬಲು ಮುದ್ದಾಟವೋರ್ವನೊಳಿದ್ದು ಹಣವನು । ಸುಲಿಕೊಂಬುದು ಎಲೆ ಮಗಳೆ ! ॥

ಇನಿಯನ ಪೆಗಲೊಳು ತನ್ನ ತೋಳನು ಇಟ್ಟು । ಮನದನ್ನನೆ ! ಇಂದು ಹಬ್ಬ ॥
ಕನಂಕಗಳಾಗಬೇಕೆಂದು ತರಿಸಿಕೊಂಬ । ವನಿತೆಯೆ ಬೆಲೆವೆಣ್ಣರಸಿ ॥ ೧೭೯ ॥

ಮದನನ ರೂಪಾದರು ಹಣವಿಲ್ಲದ । ಬದಗನ ಒದ್ದು ನೂಂಕುವುದು ॥
ಮುದುಕನಾದರು ಕುರೂಪಿಯಾದರು ಅವ । ಚದುರನು ಹಣವುಳ್ಳವನು ॥ ೧೮೦ ॥

ಕರೆವುದಾತನನೆಂದು ಸೂಳೆ ವಿನ್ನಾಣವ । ಒರೆವ ವೃದ್ಧೆಯರ ನುಡಿಗಳ ॥
ಅರಸ ಕೇಳುತ ನಸುನಕ್ಕು ಮುಂಮುಂದಕೆ । ತೆರಳಿ ಬಹಾಗೊಂದೆಡೆಯೊಳು ॥ ೧೮೧ ॥

ವಿಟಜನಗಳು ಸರಸದಿ ನೆರೆದು ಬಂದು । ನಟನೆಯೊಳೊಂದು ಸ್ಥಳದೊಳು ॥
ಕುಟಿಲ ವಂಚನೆ ಮೊದಲಾದ ಜಾಣುಮೆಯಾಂತ । ಚಟುಲೋಕ್ತಿ ನುಡಿದರಿಂತೆಂದು ॥

ಜನವಶ್ಯತಿಲಕ ಘುಟಿಕೆ ಸ್ತಂಭನಾಂಜನ । ಘನವಾದ ಯಂತ್ರ ತಂತ್ರಗಳಿಂ ॥
ವನಿತೆಯರುಗಳ ಮರುಳು ಮಾಡಿ ನೆರೆವುದು । ಕೊನೆ ವಿಟರಂಗವೆಂದೋರ್ವ ॥ ೧೮೩ ॥

ಕಡು ಚತುರೋಕ್ತಿಯಿಂ ನಲ್ಲಳ ಸೋಲಿಸಿ । ಒಡಗೂಡಿ ಹಣವನು ಕೊಡದೆ ॥
ನುಡಿಯಿಂದ ಜಾರಿ ಬರುವುದು ಭುಜಂಗರ । ನಡೆಯೆಂದಾಗೋರ್ವ ನುಡಿದ ॥ ೧೮೪ ॥

ಸರಸ ಸಲ್ಲಾಪ ಚುಂಬನ ನೋಟ ಬೇಟವು । ನೆರೆ ಮುದ್ದು ಮುನಿಸು ಹೊರಟೆಯು ॥
ಎರಕದಿ ಮಾಡುವ ವೇಶಿಯ ಕೂಟಕೆ । ಸರಿಯುಂಟೆಯೆಂದೋರ್ವ ನುಡಿದ ॥ ೧೮೫ ॥

ಕೊನೆಗಣ್ಣ ಸನ್ನೆಯ ಮಾಡುತ ಕುಲಟೆಗೆ । ಅನುವಾದ ಸಂಕೇತ ಸ್ಥಳಕೆ ॥
ವನಿತೆಯ ಕಳುಹಿಸಿ ಕೂಡುವ ಸುಖಕಿನ್ನು । ಘನವಾದ ಸುಖಮಿಲ್ಲೆಂದೋರ್ವ ॥ ೧೮೬ ॥

ಒಲಿದೊಡೆ ಹಣ ಹೊನ್ನ ಭಂಗಾರ ವಸನವ । ಒಲವಿನಿಂದಿತ್ತು ತಾನಿರ್ದ ॥
ನೆಲೆಗೆ ಬರುವಳ ಕೂಡುವ ಕೂಟಕಿನ್ನಾವ । ಬಲು ಸುಖವುಂಟೆಂದೋರ್ವ ॥ ೧೮೭ ॥

ಬಳಯಿಸಿ ಹಣಕಾಸ ಸುಲಿದುಕೊಂಬರು ಮತ್ತೆ । ಬೆಳುವೆಯ ಮಾತುಗಳಿಂದ ॥
ಬೋಳಿಸುವರು ತಲೆಯನು ನಾನಾ ತೆರದಿಂದ । ಸೂಳೆಯರ್ಹಾಳಾಗಲೆಂದು ॥ ೧೮೮ ॥

ಬಡವನ ವೃದ್ಧನ ಷಂಡನ ವಧುಗಳ್ಗೆ । ಉಡುವರೊಂದರುವೆಯ ಕೊಟ್ಟು ॥
ಮಡದಿಯರಂತಾಳಬಹುದು ಸೂಳೆಯರನು । ಸುಡಲೆಂದನಾಗೋರ್ವ ಜಾರ ॥ ೧೮೯ ॥

ಇಂತು ನುಡಿವ ಕಾಮ ಸಿದ್ಧಾಂತವ ಭೂ- । ಕಾಂತ ಕೇಳುತ ನಸುನಗುತ ॥
ತಾಂತಳುವದೆ ಬೀದಿಯೊಳಗೈದಿ ಬರುವಾ- । ಗಿಂತೆಂದರ್ಸಖರೆಲೆ ದೇವ ! ॥ ೧೯೦ ॥

ಶಶಿ ಪಡುಗಡೆಯು ಸಾರಿದ ಮೂರು ಜಾವವು । ಎಸಕದಿಂದಾಯ್ತರಮನೆಗೆ ॥
ಕುಶಲದಿಂ ಬಿಜಮಾಡಬಹುದೆಂದು ನುಡಿಯಲು । ವಸುಧೇಶ್ವರ ಸಂತಸದಿ ॥ ೧೯೧ ॥

ಅರಮನೆಗೈತಂದು ಭುವನೇಶ್ವರಿಯೊಳು । ದೊರೆಗಳ ತಲೆವಣಿ ನಿಂದು ॥
ಪರಿಮಳ ವಸ್ತು ಕರ್ಪೂರ ವೀಳೆಯಗಳ । ತರಿಸಿ ಸಖರುಗಳಿಗಿತ್ತು ॥ ೧೯೨ ॥

ವಿನಯ ವಚನದಿಂದ ಬೀಳ್ಕೊಟ್ಟು ಮಿತ್ರರ । ಮನುಜೇಂದ್ರನರಮನೆಯೊಕ್ಕು ॥
ಪನಿನೀರಿನಿಂದ ಸ್ನಾನವ ಮಾಡಿ ಕ್ರಿಯೆಗಳ । ಮನದನುರಾಗದಿಂ ತೀರ್ಚಿ ॥ ೧೯೩ ॥

ಜಿನನಡಿದಳಗಳ ನೆನೆವುತಾವುಗೆ ಮೆಟ್ಟಿ- । ಯನುಮತಿ ಸಜ್ಜೆಯ ಮನೆಗೆ ॥
ಜನಪತಿ ನಡೆತಂದು ಶಕುನಿ ಮಂಚದ ಮೇಲೆ । ಇನಿಯಳು ವೆರಸಿ ಕುಳಿತನು ॥ ೧೯೪ ॥

ಸ್ಮರ ಸಾರ್ವಭೌಮನು ರತಿ ಮಹಾದೇವಿಯು । ಇರುವಂತೆಯನುಮತಿಯೊಡನೆ ॥
ಸರಸ ಸಲ್ಲಾಪ ಚುಂಬನ ತೆಕ್ಕೆಯೊಡಗೂಡಿ । ನರನಾಥಚಂದ್ರನೊಪ್ಪಿದನು ॥ ೧೯೫ ॥

ಬುಧಜನಾಂಬುಜ ಮಿತ್ರ ಚಾಮೀಕರ ಗಾತ್ರ । ತ್ರಿದಶರಿಂ ಕೃತ ದಿವ್ಯ ಸ್ತೋತ್ರ ॥
ಸುದತಿ ಜನಾವಲೋಕಿತನೇತ್ರ ಪವಿತ್ರ । ಚದುರ ಜ್ಞಾನೇಂದೊಪ್ಪಿದನು ॥ ೧೯೬ ॥

॥ ಅಂತು ಸಂಧಿ ೩೮ಕ್ಕಂ ಪದ ೫೨೧೮ಕ್ಕಂ ಮಂಗಲಂ ॥

# ಆ ರೋ ಗ ಣೆ.

ಸಿಂಧುದೇವಿಯ ಮನೆಯೊಳು ಭೋಜನವ ಭೂ-। ಪೇಂದ್ರ ಮಾಡಿದುದ ಸೊಲ್ಲಿಪೆನು॥

ಘೋರ ಸಂಸಾರದುಸ್ತರ ಪಾರಾವಾರ। ತೀರತರಣತರಂಡಕನೆ ॥
ಮಾರವಿದೂರ **ಶ್ರೀ ಶಾಂತಿ ಜಿನೇಶ್ವರ**- । ನೇರಿಸು ಮೋಕ್ಷ ಪಟ್ಟಣವ ॥ ೧ ॥

ಸೆಳೆಮಂಚದೊಳು ಕುಳಿತುಕೊಂಡು ಜ್ಞಾನೇಂದು । ಬೆಳತಿಗೆಗಣ್ಣಳ ಕೂಡೆ ॥
ವಿಲಸಿತ ಸರಸ ವಿನೋದ ಚುಂಬನ ತೆಕ್ಕೆ । ಬಲು ನೋಟ ಬೇಟದೊಳಿದ್ದು ॥ ೨ ॥

ಸುರದಂತಿ ಭ್ರಮುಕರಿಣಿಯು ಕ್ರೀಡಿಸುವಂತೆ। ದೊರೆಯನುಮತಿಯೊಳು ರಮಿಸಿ ॥
ಸುರಲತೆಯೊಳಪೊಕ್ಕ ಮರಿದುಂಬಿಯಂದದಿ । ತರುಣಿಯ ತೋಳತೆಕ್ಕೆಯೊಳು ॥ ೩ ॥

ಒರಗಿಯರಸ ಸುಖನಿದ್ರೆಯೊಳಿರುತಿರೆ। ಸ್ಮರಸಖ ಪಶ್ಚಿಮಗಿರಿಗೆ ॥
ಅರಸಗೆ ತನ್ನಿಂದಧಿಕ ಕಲೆಯುಂಟೆಂದು । ನೆರೆ ಕಂದಿ ಕುಂದಿ ಸಾಗಿದನು ॥ ೪ ॥

ವಾರುಣಿ ಸುರೆಯ ಸೇವಿಸಿ ಮರೆದಿಕ್ಕಿದ। ಚಾರು ರೂಪ್ಯದ ಬಟ್ಟಲಂತೆ ॥
ತಾರಾಧೀಶನು ಪಶ್ಚಿಮ ನಗದಲ್ಲಿ। ರಾರಾಜಿಸಿದ ನೋಟಕರ್ಗೆ ॥ ೫ ॥

ಇನ ಬಂದನೆಂದಳ್ಕಿ ತನ್ನಯ ಕರಗಳ । ವನರುಹದಿಂ ತೆಗೆವಂತೆ ॥
ಇನಿಸು ಬೇಗದಿ ಕಿರಣವ ಕೊಂಡು ಸೋಮನು । ವನಧಿಯೊಳಗೆ ಮುಳುಗಿದನು ॥ ೬ ॥

ಉರದೊಳಗಿರ್ದ ಮುಕ್ತಾಹಾರ ನಲ್ಲನ । ಕರ ಸೋಂಕಿ ಹರಿದು ಚೆಲ್ವಂತೆ ॥
ತರಣಿಯ ಕರ ಸೋಂಕಲೊಡನೆ ತಾರಾಳಿಯು । ಮರೆಸಿದವಂಬರದಲ್ಲಿ ॥ ೭ ॥

ಶಶಿಯಡಗಲು ನಕ್ಷತ್ರಗಳೆಲ್ಲವು । ಮಸುಳ್ದವು ದೇಹವ ಮರೆಸಿ ॥
ವಸುಧೆಯೊಳೇನಚ್ಚರಿ ಪುಣ್ಯದೇವತೆ । ಕುಸಿಯಲು ಕಂದಿ ಕುಂದುವುದು ॥ ೮ ॥

ನಿಮಿರ್ದ ಕೊರಲು ಕೆದರಿದ ಕೇಶ ಶರ ಸಂ- । ಭ್ರಮದಿ ಬಡಿವ ಪಕ್ಷಯುಗಲ ॥
ಕ್ರಮಗಳನೆತ್ತೆತ್ತಿ ಕೊಕ್ಕೊಕೋ ಎಂದು । ಮಮತೆಯಿಂ ಕೋಳಿ ಕೂಗಿದವು ॥ ೯ ॥

ತಿಳಿಗೊಳಗಳ ಪೊಕ್ಕು ಕಮಲವರಳಿಸುತ। ಎಳಲತೆಗಳ ಬಾಗಿಸುತ ॥
ಬೆಳೆದ ಕರ್ಪುರದ ಬಾಳೆಗಳನು ಮುರಿವುತ। ಸುಳಿದಾಡುತ ವನದಲ್ಲಿ ॥ ೧೦ ॥

ಪುರವನು ಪೊಕ್ಕು ಕೋಮಲೆಯರ ತೋಳೊಳ- । ಗೊರಗಿರ್ದ ವಿಟರನೇಳಿಸುತ ॥
ಪರಿಮಳವನು ದಿಕ್ಕುದಿಕ್ಕಿಗೆ ಬೀರುತ। ಮರುತ ತಣ್ಣನೆ ತೀಡಿದಾಗ ॥ ೧೧ ॥

ಮರೆದೊರಗಿದಿರೇಕೆ ಜಿನಪತಿಯಡಿಗಳ। ಸ್ಮರಸಿ ಎಚ್ಚತ್ತು ಎಂದೆನುತ ॥
ಒರೆವಂತೆ ಜಿನಮಂದಿರದೊಳು ಜಯಘಂಟೆ। ಸ್ವರದೋರೆ ಜಯ ಜಯತೆಂದು ॥ ೧೨ ॥

ಮೂವತ್ತೆರಡು ಗಳಿಗೆ ಪರಿಯಂತರ । ದೇವನ ಮೊಗವನಿಟ್ಟಿಸದೆ ॥
ತೀವಿತು ದುರಿತ ಜಿನನ ಭಜಿಸೇಳೆಂದು । ಪಾವನ ಶಂಖ ಸಾರಿದುದೋ ॥ ೧೩ ॥

ದಾನ ಪೂಜೆಗಳ ಶೀಲೋಪವಾಸಂಗಳ- । ಸಾನಂದದಿಂ ಮಾಡದಿಂತು ॥
ಹೀನರಂದದಿ ಮಲಗಿರುವರೇ ಏಳೆಂ- । ದಾನಕ ಬಸದಿಲಿ ಮೊರೆದವು ॥ ೧೪ ॥

ದಿಕ್ಕು ದಿಕ್ಕುಗಳಲ್ಲಿ ಚಿಲಿಮಿಲಿ ಚಿಲಿಬಿಲಿ । ಕಕ್ಕರು ಚಿಚಿ ಚಿಚಿಸೆಂದು ॥
ಪಕ್ಕವ ತುಂಡದಿ ಕೆದರುತ ಬಗೆ ಬಗೆ । ಪಕ್ಕಿಗಳುಲಿದವು ಎದ್ದು ॥ ೧೫ ॥

ಗೊಡುಸುವ ಗೊರವ ಕೂಗುವ ಕುಹೂರಟಗಳು । ನುಡಿವರೆ ಕೇಳಿ ಕೇಂಕರಿಪ ॥
ಕಡು ದೊಡ್ಡ ಕೇಕಿ ತುಂಬಿಗಳ ಝೇಂಕಾರದಿಂ- । ದೊಡನೆದ್ದು ಜಾರೆರ ಫೌಜು ॥ ೧೬ ॥

ಅಳಿದ ಸಿರಿಯ ಸಿಕ್ಕುತಲೆಯಿಪಡಗೈಯಿಂ- । ದಳಕವ ನೇವರಿಸುತಲಿ ॥
ಕಳಿದ ರವಕೆಯನಿಕ್ಕುವರತಿ ತಡವೆಂದು । ಘಳಿಲನೆಯೌಚಿ ಕಂಕುಳೊಳು ॥ ೧೭ ॥

ಕಡೆಬಾಯಿಯೊಳಗೆ ಸುರಿವ ಜೊಲ್ಲನೊರಸುತ । ಎಡಬಲವಾರೈವುತೆದ್ದು ॥
ನಿಡಿದಿನ ಕಾಗಿನ ಸೀರೆಯ ಮುಸುಕಿ- । ಟ್ಟಡಿಯಿಟ್ಟರಾಗ ಪಾಣ್ಬೆಯರು ॥ ೧೮ ॥

ದಿನಕರೋದಯದಲ್ಲಿ ತೇಜವಿಲ್ಲೆಮಗೆಂದು । ಮನನೊಂದು ಮೊಗ ಬೆಳ್ಪಾದಂತೆ ॥
ಮನೆ ಮನೆದಪ್ಪದೆ ರಾಜಿಪ ದೀಪವು । ಅನುಕರಿಸಿದವು ಧವಲವ ॥ ೧೯ ॥

ಮಿನುಗುವಾನನ ಬಿಟ್ಟುಸುರದೆ ತೆರೆದಕ್ಷಿ । ಇನಿಸುದೆರೆದ ಬಾಯಿದೆರೆಯು ॥
ಘನಕುಚಕೆದೆಯೊಡ್ಡಿಯನುಮತಿ ತೋಳೊಳು । ಜನತಾಧೀಶೊರಗಿರಲು ॥ ೨೦ ॥

ಸರಸೀರುಹದಾನನದ ಕೆಂಪಡರಿತೋ । ವರ ಕೋಕನಿಚಯದ ರಾಗ ॥
ಸುರಪಥವಡರಿತೋ ಎಂಬಂತಿಂದ್ರನದಿ- । ಕ್ಕರುಣವರ್ಣದಿ ನಗುತಿಹುದು ॥ ೨೧ ॥

ಕೊರಳುವಿಡಿದು ಕತ್ತಲೆವಿಂಡುಗಳನು । ಭರದಿ ಪನ್ನೆರಡು ಸಾಸಿರದ ॥
ಕರದಿಂದ ನೂಂಕುತಲುದಯಗಿರಿಯ ಬಂ- । ದರದಿಂದ ಸಖನೇರಿದನು ॥ ೨೨ ॥

ಭರತಾವನಿವೆಣ್ಣು ನೋಡುವ ಮುಕುರವೋ । ಸುರಪನ ಮನೆಯ ದೀವಿಗೆಯೋ ॥
ಗಿರಿರಾಜ ನಿಷದಮುಕುಟ ಮಾಣಿಕವೆನೆ । ತರಣಿ ತೋರಿದ ಪೂರ್ವಾದ್ರಿಯೊಳು ॥ ೨೩ ॥

ಬಂದನೆ ನನ್ನ ಪ್ರಾಣೇಶ್ವರನಿನನೆಂದು । ಇಂದೀವರ ಮೊಗದೆರೆದು ॥
ಗಂಧವ ದಶದಿಕ್ಕುಗಳಿಗೆ ಬೀರುತಾ- । ನಂದವೈದಿದವು ಕೊಳದೊಳು ॥ ೨೪ ॥

ಪಲಕಾಲವಗಲಿರ್ದ ನಲ್ಲಳ ಮೊಗವನು । ನಲವಿಂದ ಚುಂಬಿಸುವಂತೆ ॥
ಅಳಿಗಳು ಝೇಂಕರಿಸುತ ಬಂದು ತಾವರೆ- । ಗಳಿಗೆರಗಿದವು ಕೊಳದೊಳು ॥ ೨೫ ॥

ಖರಕರ ಬಂದನೆ ಬಂದನೆ ಎಂದಾಗ । ತುರಿಹದಿಂ ಕೈರವ ಸಮಿತಿ ॥
ಹರಿತ ಪತ್ರದಿ ಮೊಗವನು ಮುಚ್ಚಿ ನೀರೊಳು । ಮರಸಿಕೊಂಡವು ತಮ್ಮಂಗವನು ॥ ೨೬ ॥

ಜ್ಞಾನಚಂದ್ರನ ಸುಪ್ರತಾಪವೆ ಜಗವನು । ತಾನಾವರಿಸಿತೆಂಬಂತೆ ॥
ಭಾನುವಿನುದಯದೊಳಗೆ ಎಳೆವಿಸಿಲಾಗ । ಬಾನವನಡರಿತೇನೆಂಬೆ ॥ ೨೭ ॥

ತರಣಿಯುದಯಿಸಲಾಗರಮನೆ ಬಾಗಿಲಿ । ನೆರೆದೆಲ್ಲ ಪುಣ್ಯ ಪಾಠಕರು ॥
ಕರಗಳನೆತ್ತಿ ಜ್ಞಾನೇಂದು ಗುಣಾವಳಿ । ಒರೆದರಿಂತೆಂದು ಕೈಯೆತ್ತಿ ॥ ೨೮ ॥

ಮಲೆವರಾತಿಗಳ ಮಸ್ತಕಶೂಲ, ರಣದೊಳು । ಛಲದಿ ಕಾದುವ ಭೂಪಾಲ ॥
ಬಲುರಂಭಾವನಕೆ ಮಹಾವ್ಯಾಲ ರಾಜೇಂದ್ರ । ಚೆಲುವರರಸನುಪ್ಪವಡಿಸ ॥ ೨೯ ॥

ಮರೆಹೊಕ್ಕರ ಕಾವ, ಬಲುಭಂಟರ ಭಾವ । ನರಸಸ್ಲಾಘಕೆ ದೇವ ॥
ತರುಣೀ ಜನರಿಗೆ ರೂಪಿನೊಳಗೆ ಕಾಮ । ದೊರೆ ಜ್ಞಾನೇಂದುಪ್ಪವಡಿಸ ॥ ೩೦ ॥

ಶರಧಿಗಾಂಭೀರ್ಯನರುಹಮತಾಂಬರ ಸೂರ್ಯ । ಸುರಗಿರಿಯಿಂದತಿಧೈರ್ಯ ॥
ವರ ಧನುವಿದ್ಯಾಚಾರ್ಯ ಸತ್ಕುಲ ಕಾರ್ಯ । ದೊರೆ ಜ್ಞಾನೇಂದುಪ್ಪವಡಿಸ ॥ ೩೧ ॥

ಜಿನಪಾದಾಂಬೋರುಹಮತ್ತದ್ವಿರೇಪ । ಘನವಾದ ಪಾಪವಿಲೋಪ ॥
ಮುನಿಜನಂಗಳ ಪಾದನಿಕ್ಷೇಪನಿಧಿ ದೀಪ । ಜನಪ ಜ್ಞಾನೇಂದುಪ್ಪವಡಿಸ ॥ ೩೨ ॥

ಇನನು ಪೂರ್ವಾದ್ರಿಯ ಮಸ್ತಕವೇರಿದ । ಜಿನಪನ ಪಾದಪದ್ಮವನು ॥
ಮನದಕ್ಕರಿಂದ ಪೂಜಿಸಲೇಳು ದೊರೆಗಳ । ಮಿನುಗುವ ಮಸ್ತಕಮಣಿಯೆ ! ॥ ೩೩ ॥

ಗುರುಜನಂಗಳ ಪಾದಪದ್ಮಗಳಿಗೆ ನಿನ್ನ । ಶಿರವ ತಾಟಿಸಿ ಮುಕ್ತಿವಧುವ ॥
ವರಿಸುವ ದಿನ ವ್ರತವನು ಕೈಕೊಳ್ಳೇಳು । ಸರಸ್ವತಿ ವಕ್ಷದ ಹಾರ ! ॥ ೩೪ ॥

ನಿನ್ನಂತೆ ಜಗವ ಬೆಳಗುವ ಕೇವಲಜ್ಯೋತಿ । ನಿನ್ನಿಯಿಂ ಮುಂದುದಯಿಪುದು ॥
ಚೆನ್ನಿಗ ನಿನಗೆಂದು ತೋರ್ಪಂ ಭಾಸ್ಕರ । ಚೆನ್ನಾಗುದಿಸಿದುಪ್ಪವಡಿಸ ॥ ೩೫ ॥

ದೊರೆದೊರೆಗಳು ಮನ್ನೆಯರು ಸಾಮಂತರು । ಗರುವ ನಿನ್ನಯ ಚರಣವನು ॥
ಪರಿಕಿಸಬೇಕೆಂದು ಬಂದು ನಿಂದಿಹರೆಲೆ । ದೊರೆರನ್ನ ! ನೀನುಪ್ಪವಡಿಸ ॥ ೩೬ ॥

ಕರಣೀಕ ಮಂತ್ರಿ ಪುರೋಹಿತ ಜ್ಯೋತಿಷ್ಕ । ಪರಿವಾರ ಬುಧ ಕವಿನಿವಹ ॥
ನೆರೆದು ನಿಂದಹರೆ ನಿನ್ನಂಘ್ರಿ ಕಾಣುವೆವೆಂದು । ನೆರೆ ಜಾಣರರಸುಪ್ಪವಡಿಸ ॥ ೩೭ ॥

ಇಂತಿವು ಮೊದಲಾದ ಪುಣ್ಯ ಸ್ತೋತ್ರಂಗಳ । ತಾಂತಳುವದೆ ಬೆಡಗಿಂದ ॥
ಸಂತೋಷದಿಂದ ಮಂಗಲಪಾಠಕರೋ- । ರಂತೆ ಪೊಗಳುವ ನಣ್ಣುಡಿಯ ॥ ೩೮ ॥

ಅರಸನ ನಿದ್ರೆಯೆಂಬಂಧಕಾರವ ಬಾಲ । ತರಣಿ ಕಿರಣ ನೂಂಕುವಂತೆ ॥
ಶರಧಿಯ ಘೋಷಣೆಯಂತೆ ಕರ್ಣಕೆ ಕೇಳೆ । ನರನಾಥನಾಗಲೆಚ್ಚತ್ತು ॥ ೩೯ ॥

ಕನಕವಲ್ಲರಿಯೊಳು ಮಲಗಿರ್ದ ಮರಿದುಂಬಿ । ಸ್ವರದೋರುತಲೇಳುವಂತೆ ॥
ಅನುಮತಿ ತೋಳತೆಕ್ಕೆಯೊಳಿಂದ ಜ್ಞಾನೇಂದು । ಜಿನ ಜಿನ ! ಎನುತಾಗಲೆದ್ದ ॥ ೪೦ ॥

ನಳಿನಾಸ್ತ್ರ ತನ್ನ ನಡುವಿನೊಳು ಸುತ್ತಿರ್ದ । ಪೊಳೆವ ಚಂದ್ರಹಾಸವನು ॥
ಝಳಪಿಸಿ ಬಳುಕುವಂದದಿ ಮೈಮುರಿದಾ- । ಗೆಳೆವೆಣ್ಣನುಮತಿಯೆದ್ದು ॥ ೪೧ ॥

ಜಿನರಾಜ ಚಂದ್ರನ ಸ್ಮರಿಸುತ ತನ್ನಯ । ಇನಯನ ಕೊನೆಗಣ್ಣಿನಿಂದ ॥
ವನಿತೆ ನೋಡುತ ಮುಗುಳ್ನಗೆಯಿಂದ ನಲ್ಲನ । ಮಿನುಗುವ ಚರಣಕ್ಕೆರಗಲು ॥ ೪೨ ॥

ವನಿತೆ ತನ್ನಯ ತೋಳತೆಕ್ಕೆಯೊಳಮರ್ದಪ್ಪಿ । ಘನಸುಖವಾಗಲಿಯೆಂದು ॥
ಜನಪತಿ ಮುಗುಳುನಗೆಯ ನಕ್ಕು ಪರಸಲು । ತನು ಸುಖಾಬ್ಧಿಯೊಳಾಳಿದಳು ॥ ೪೩ ॥

ಮುತ್ತಿನ ಹಾವುಗೆಯನು ಮೆಟ್ಟಿ ಜ್ಞಾನೇಂದು । ವೃತ್ತಕುಚೆಯ ಕೈಲಾಗದೊಳು ॥
ಅಳ್ತಿಯಿಂ ಸಜ್ಜಾಗೃಹದಿಂದಲೈತರೆ । ಬಿತ್ತರದಿಂದ ರಾಣಿಯರು ॥ ೪೪ ॥

ಕರಗಳ ಮುಗಿಯಲು ಸಿಂಧುದೇವಿಯು ತ- । ನ್ನರಮನೆಯಿಂ ಪೊರಮಟ್ಟು ॥
ದರಹಸಿತಾನನದಿಂದ ಬಂದರಸಗೆ । ಎರಗಿಂತು ಬಿನ್ನವಿಸಿದಳು ॥ ೪೫ ॥

ಹರಣದೊಡೆಯ ! ಕೇಳು ನಿನ್ನ ಶ್ರೀಪಾದದ । ಸರಸೀರುಹದ ರಜಸ್ಸು ॥
ವರ ಪವಿತ್ರವ ಮಾಡಬೇಕೆನ್ನ ಗೃಹವನೆಂ- । ದೊರೆದಳು ನಟನೆಯಿಂ ದೇವಿ ॥ ೪೬ ॥

ಅದ ಕೇಳಿ ರಾಯನು ನಸುನಗುತಿಂತೆಂದ । ಬೆದರ್ಪುಲ್ಲೆಗಣ್ಣಳೆ ! ನಾನು ॥
ಮೊದಲೆ ಯೋಚಿಸಿದೆನಿಂದಿನ ದಿನ ನಿನ್ನಯ । ಸದನಕ್ಕೆ ಬರಬೇಕೆಂದು ॥ ೪೭ ॥

ಬೇಡಿದ ಹೊಲದೊಳು ಮಳೆಯಾಯಿತು ಎಂಬ । ಪ್ರೌಢರ ವಚನದಂತಾಯ್ತು ॥
ಕಾಡಿಗೆಗಣ್ಣಳೆ ! ಲೇಸು ಲೇಸೆಂದಾ- । ಗಾಡಿದ ರಾಯರ ದೇವ ॥ ೪೮ ॥

ಕಕ್ಕಸಕುಚೆ ರಾಯಗೆ ಕೈ ಮುಗಿದಾ- । ಗಕ್ಕನೆ ಮಂದಿರಕೈದಿ ॥
ತಕ್ಕೈಸಿಕೊಂಡನುಮತಿದೇವಿಯೊಳಿಂತು । ಶರ್ಕರೆ ಮಾತನಾಡಿದಳು ॥ ೪೯ ॥

ಎಲೆ ದೇವಿ ! ನನ್ನ ಮಂದಿರಕಿಂದು ನಡೆತಂದು । ನಲವಿಂದ ದೊರೆಯ ಪಂಕ್ತಿಯೊಳು ॥
ಚೆಲುವರ ಗಂಡನ ಪಾನಶನವನುಂಡು । ನಿಳಯವ ಪಾವನ ಮಾಡಿ ॥ ೫೦ ॥

ಬರಬೇಕೆಂದು ದೈನ್ಯೋಕ್ತಿಯಿಂ ತನ್ನಯ । ಕರಗಳ ಮುಗಿಯೆ ಕಾಮಿನಿಯು ॥
ದರಹಸಿತಾನನದಿಂದೆಲೆ ತಂಗಿ ! ನೀ- । ನೊರೆಯಬೇಕೇ ನನ್ನ ಮನೆಗೆ ॥ ೫೧ ॥

ನಾ ಬರುವುದಕೇಕೆ ಇಷ್ಟೊಂದು ಸನ್ಮಾನ । ಶೋಭೆಯ ನುಡಿಗಳು ಸಾಕು ॥
ನೀ ಬರಬೇಕೆ ಇದಕೆ ತಂಗಿ ! ಬರಹೇಳೆ । ನಾ ಬಾರೆನೆ ನಿನ್ನ ಮನೆಗೆ ॥ ೫೨ ॥

ಚಂದಿರ ಬರುವಾಗ ಷೋಡಶ ಕಲೆಗಳು । ಹಿಂದುಳಿವವೆ ಎಲೆ ತಂಗಿ ! ॥
ಇಂದು ರಾಜೇಂದ್ರ ನಿನ್ನರಮನೆಗಡಿಯಿಡೆ । ಬಂದೆವೆ ಕಲೆಗಳಂದದೊಳು ॥ ೫೩ ॥

ಎನುತ ತಂಗಿಯನಾಗ ಬಿಗಿಬಿಗಿಯಮರ್ದಪ್ಪಿ । ವಿನಯವ ನುಡಿದುಡುಗೊರೆಯ ॥
ಮನಕ್ಕರಿಂ ಕೊಟ್ಟು ಬೀಳ್ಕೊಡೆ ಹಿಗ್ಗುತ । ವನಧಿದೇವಿಯು ಸಂತಸದಿ ॥ ೫೪ ॥

ಕನಕಲತೆಯು ಕಾಮಲತೆಯು ಚಂದಿರಮತಿ । ಜಿನಮತಿ ಜಿನದಾಮೆ ನಂದೆ ॥
ಜಿನದತ್ತೆ ಜಿನಚಂದ್ರೆ ಗುಣವತಿ ಮರುದೇವಿ । ಜಿನಪಾಲಿತೆ ಜೈನದೇವಿ ॥ ೫೫ ॥

ವನಮಾಲೆ ಗುಣಮಾಲೆ ಅಕ್ಷಾದಿಮಾಲೆಯು । ವಿನಯಲತೆಯು ಹೇಮಲತೆಯು ॥
ಧನದತ್ತೆ ಮಧುರಾವತಿ ಮಂಜುಘೋಷೆಯು । ಧನವತಿ ಮುಂತಾದವರ ॥ ೫೬ ॥

ಮನೆಮನೆದಪ್ಪದೆ ಹೋಗಿ ಗಂಧಾಕ್ಷತೆ- । ಯನು ಕೊಟ್ಟು ವಿನಯೋಕ್ತಿಯಿಂದ ॥
ವನಿತಾಮಣಿಗಳಿರೆನ್ನ ಮನೆಯೊಳಿಂದು । ಜನಪತಿ ಪಂಕ್ತಿಲಿ ನಿಮಗೆ ॥ ೫೭ ॥

ನಿರಸನವಾಗುತಲದೆ ಬನ್ನಿವೆಂದಾಗ । ಸರಸೋಕ್ತಿಯಿಂದಲಿ ಪೇಳೆ ॥
ತೆರಳಲು ಇತ್ತಲು ರಾಯರ ದೇವನು । ಹರುಷೋತ್ಕರಚಿತ್ತನಾಗಿ ॥ ೫೮ ॥

ಶರ್ಕರೆವಿಲ್ಲನ ಬೆಡಗನೇಳಿಸುತಾಗ । ಚಿಕ್ಕಾಳಿಗದವರು ವೆರಸು ॥
ಸತ್ಕಲೆವಂತನು ಲಕ್ಷ್ಮೀಮಂಟಪಕೈದಿ । ಗಕ್ಕನೆ ದೊರೆ ಮಂತ್ರಿ ಬುಧರು ॥ ೫೯ ॥

ಕರಕಮಲಂಗಳ ಮುಗಿಯಿಸಿಂದುವಿನಂತೆ । ಎರಕದಿಂ ದಂತಧಾವನವ ॥
ದೊರೆರನ್ನ ಮಾಡಿ ಸ್ನಾನಂ ಬೊಕ್ಕು ಧೌತವ । ವರ ವಸ್ತ್ರದುಗುಲವ ಪೊದೆದು ॥ ೬೦ ॥

ಭವ್ಯೋತ್ತಮರೆಲ್ಲ ಸುತ್ತ ಬಳಸಿ ಬರೆ । ನವ್ಯ ಕುಸುಮಗಳನಾಂತು ॥
ದಿವ್ಯ ರತ್ನಾಂಕಿತ ಹಾವುಗೆಯನು ಮೆಟ್ಟಿ । ಕಾವ್ಯಾಬ್ಜ ಭಾಸ್ಕರ ನಡೆಯೆ ॥ ೬೧ ॥

ಪಲವರ್ಚನೆಗಳೊಳಿಗದರು ಪಿಡಿಯಲು । ನಲವಿಂದ ಜಿನಗೃಹಕೈದಿ ॥
ತಲೆವಾಗಿ ಜಿನಪಗೆ ದಿವ್ಯಾರ್ಚನೆಗೈದು । ಒಲವಿಂದ ನುತಿಗೈದನಿಂತು ॥ ೬೨ ॥

ಜಯ ಜಯ ಜಾತಿಜರಾಮರಣಾಂತಕ । ಜಯ ಜಯ ಕೇವಲಬೋಧ ! ॥
ಜಯ ಜಯ ಮೂಲೋಕವಂದಿತ ಶ್ರೀಪಾದ । ಜಯ ಜಯ ದುರ್ಮೋಹದೂರ ! ॥

ಎಂದೆಂದು ನಿಮ್ಮ ಶ್ರೀಮುಖವನು ಕಾಣದೆ । ಬಂದೆ ಸಂಸಾರ ಪಂಚಕದಿ ॥
ಇಂದು ನಿಮ್ಮಯ ಸಿರಿಮೊಗವನು ಕಂಡೆನು । ಕುಂದಿಸಘವ ಜಿನರಾಜ ! ॥ ೬೪ ॥

ಸಾರವಲ್ಲದ ದೇಹವ ನನ್ನದು ಎಂದು । ಸಾರಿ ಕೆಟ್ಟೆನು ಕರ್ಮದಿಂದ ॥
ಸಾರವಸ್ತುವ ಕಂಡೆನು ನಿಮ್ಮನಮೃತಕೆ । ಸೇರಿಸೆಲೆ ಜಿನರಾಜ ! ॥ ೬೫ ॥

ಕಾಕುಪೋಕರುಗಳನೊಡನಾಡಿ ನಿಮ್ಮನಾ- । ಲೋಕಿಸದೆಯೆ ಕೆಟ್ಟೆ ನಾನು ॥
ಲೋಕೈಕನಾಥ ! ನಾ ಕುಂದ ನೀ ನೋಡದೆ । ಸಾಕು ನನ್ನನು ಜಿನರಾಜ ! ॥ ೬೬ ॥

ಅಪರಾಧ ಕೋಟಿಯೆನ್ನೊಳಗಿರ್ದರು ಅದ । ಜಪಿಸದೆ ನಿನ್ನ ಸಾರಿದನ ॥
ಕೃಪೆಯಿಂದ ನೋಡಿ ಮೋಕ್ಷದ ಪಟ್ಟಗಟ್ಟೆಲೆ । ಸುಪವಿತ್ರ ಶ್ರೀಜಿನರಾಜ ! ॥ ೬೭ ॥

ಎಂದಿವು ಮೊದಲಾದ ಪಲವು ಸ್ತೋತ್ರಗಳಿಂದ । ಚಂದ ಚಂದದಿ ತಾನು ಪೊಗಳಿ ॥
ಎಂದೆಂದೂ ನಿಮ್ಮಡಿ ಸೇವೆ ದೊರಕಲೆನ- । ಗೆಂದೆನುತಾಗ ಬೀಳ್ಕೊಂಡು ॥ ೬೮ ॥

ಮುನಿಜನಗಳಿಗೆ ಪಾದಾರ್ಚನೆಯನು ಮಾಡಿ । ವಿನಮಿತಮಸ್ತಕನಾಗಿ ॥
ದಿನವ್ರತಗಳ ಕೈಕೊಂಡು ಪರಕೆಗಳ । ಮನುಜೇಶ ಶಿರದೊಳಗಾಂತು ॥ ೬೯ ॥

ಅರಮನೆಗಾಗಿ ತೆರಳಿ ಬಂದು ಮನುಜೇಂದ್ರ । ಹರಿವಿಷ್ಟರದಲ್ಲಿ ಕುಳಿತು ॥
ತರಿಸಿ ಘೃತಾವಲೋಕನ ಮಾಡಿ ದಾನವ- । ಸಿರದಿತ್ತು ವಿಪ್ರಾದಿ ಜನಕೆ ॥ ೭೦ ॥

ಹರುಷದಿಂದೋಲಗಗೊಟ್ಟಿರೆ ನರಪತಿ । ಭರದಿ ಚಿಕ್ಕಾಳಿಗದವರು ॥
ಹರಿತಂದು ದೇವನಾರೋಗಣೆಗೆಡೆಯಾಯ್ತು । ತೆರಳಬೇಕೆಂದು ಬಿನ್ನವಿಸೆ ॥ ೭೧ ॥

ಜಿನಸಿದ್ಧ ಶರಣೆಂದು ರನ್ನವಾವುಗೆ ಮೆಟ್ಟಿ । ಮನುಜೇಶ್ವರ ಲೀಲೆಯಿಂದ ॥
ಕನಕದ್ವಾರದಿಂದೊಳಪೊಕ್ಕು ಬರುತಿರೆ । ವನಧಿದೇವಿಯು ಇದಿರ್ವಂದು ॥ ೭೨ ॥

ಕುಡಿಯಿಡುತಿರಲೆಳೆ ನಗೆಯಿಂ ನೃಪನಿಗಾ । ಮಡದಿರನ್ನಳು ಕೈಮುಗಿಯೆ ॥
ಅಡಿಗೆಯಾಯಿತೋ ಎಂದು ರಾಜೇಂದ್ರ ಬೆಸಗೊಳೆ । ನುಡಿದಳಿಂತೆಂದು ನಟಣೆಯಿಂ ॥

ಆಯಿತು ಸ್ವಾಮಿ ! ಚಿತ್ತೈಸಿ ಎನುತಲಾಗ । ತೋಯಾಂಬಕಿ ಕೈಲಾಗವನು ॥
ರಾಯಗೆ ಕೊಡಿಸೆಂದು ದೇವಿಯ ಮನೆಗೆ ವಿ- । ಡಾಯದಿಂ ನಡೆತಂದನರಸ ॥ ೭೪ ॥

ಕಮಲಾಕರದೆಡೆಗೆ ರಾಜಹಂಸನು । ಗಮಿಸುವಂದದಿ ಬಿಂಕದಿಂದ ॥
ರಮಣೀರನ್ನಳ ಗೃಹಕೈತಂದನು । ಮಮತೆಯಿಂದಾ ರಾಜಹಂಸ ॥ ೭೫ ॥

ನಕ್ಷತ್ರ ನೇಮಿ ನಡೆದು ಬರುತಿರೆ ಸುತ್ತ । ನಕ್ಷತ್ರಗಳು ಬರ್ಪಂತೆ ॥
ಮೋಕ್ಷರಸಿಕ ಜ್ಞಾನಚಂದ್ರನ ಬಳಸೇ- । ಣಾಕ್ಷಿಯರುಗಳೈದಿದರು ॥ ೭೬ ॥

ತನ್ನರಮನೆಯ ಬಾಗಿಲಿಗೈತರೆ ಗು- । ಣೋನ್ನತೆ ಶ್ರೀ ಸಿಂಧುದೇವಿ ॥
ಹೊನ್ನಸರಿಗೆಯ ದುಪ್ಪಟಿಯ ನಿವಾಳಿಯ । ಚೆನ್ನೆಯಿಟ್ಟಳು ಎಡಬಲಕೆ ॥ ೭೭ ॥

ಪನ್ನೀರಿನಿಂದಲಿ ಪಾದವ ತೊಳೆದಾಗ । ತನ್ನ ಮಂಡೆಗೆ ತಳಿಕೊಂಡು ॥
ಚೆನ್ನೆಯರುಗಳ ಮಸ್ತಕಕೆ ತಳಿದಳಾಗ । ಸನ್ನುತ ಸುಖಿಗಳಾಗೆನುತ ॥ ೭೮ ॥

ಸೀರೆಯ ಸೆರಗಿನಿಂದಂಗದಟ್ಟನಿಕ್ಕಿ । ನೇರಾಳಿ ಬೆಳ್ಳಿ ಪೂವುಗಳ ॥
ಭೂರಮಣನ ಕೆಂಬಜ್ಜೆಗಳಿಗೆ ಸೂಸಿ । ಆರತಿಗಳನೆತ್ತಿದಳು ॥ ೭೯ ॥

ಮಡದಿರನ್ನಳ ಭಯಭಕ್ತಿಗೆ ಮೆಚ್ಚುತ । ಪಿಡಿದಬ್ಧಿದೇವಿಯ ಕರವ ॥
ನಡೆಯಲು ರಾಯ ಜಿನೇಂದ್ರನ ಗೃಹಕಾಗಿ । ಬೆಡಗುಗಾತಿಯು ಕರೆತಂದು ॥ ೮೦ ॥

ನೂತನ ತೆರೆದೆಗೆಯಲು ಕಾಣಿಸಿದವು । ಜಾತಿ ಕ್ಷತ್ರಿಯಗೆ ದೇವಿಗೆಯು ॥
ಜ್ಯೋತಿರ್ಲೋಕವೆಂಬಂದವಾ ಗೃಹದೊಳು । ಸಾತಿಶಯದಿ ನಿಂದಂತೆ ॥ ೮೧ ॥

ಸಿದ್ಧಲೋಕದೊಳಿರ್ದ ಜಿನಬಿಂಬಗಳು ಇ- । ಲ್ಲಿರ್ದವೋ ಎಂಬಂದದೊಳು ॥
ಬದ್ಧ ಪಲ್ಯಂಕ ಕಾಯೋತ್ಸರ್ಗದೊಳಿ- । ಕ್ಕಿರ್ದ ಜಿನರ ಬಿಂಬವಿಹುದು ॥ ೮೨ ॥

ಕಂಡು ರಾಯನು ತನ್ನ ಕೈಯ ಮುಗಿಯೆ ಭಕ್ತಿ- । ಯಿಂದೆಹಾಡುತ ನುತಿಗೈದು ॥
ಮಂಡೆಯಲುಗುತ ನಲ್ಲಳ ಸಮ್ಯಕ್ತ್ವಕೆ । ಮಂಡಲೇಶ್ವರನಾಗ ಮೆಚ್ಚಿ ॥ ೮೩ ॥

ಮುಂದೆ ಎರಡು ಮೂರು ಭವಕೆ ತನ್ನನು ಸಾರ್ದ । ಸೌಂದರಿಯರ ಭವವಳಿದು ॥
ಬಂಧುರ ಮೋಕ್ಷ ಸುಖವನನುಭವಿಸುವ- । ರೆಂದು ಸಂತಸವನು ತಾಳ್ದ ॥ ೮೪ ॥

ಅನಿತರೊಳಗೆ ತೊಳೆದಿಹ ದಿವ್ಯ ವಸನವ । ವನಿತಾಮಣಿ ತಂದುಕೊಡಲು ॥
ಜನಪತಿ ಪೊದೆದು ಭೋಜನ ಗೃಹವನು ಪೊಕ್ಕು । ಕನಕವಿಷ್ಟರದೊಳು ಕುಳಿರೆ ॥ ೮೫ ॥

ನವರತ್ನಕೀಲಿತದಡ್ಡಣಿಗೆಯ ತಂದು । ಭುವನೇಶನಿದಿರೊಳಗಿಳಿಸೆ ॥
ರವಿಯಂತೆ ಪೊಳೆವ ಚಿನ್ನದ ಹರಿವಾಣವ । ಯುವತಿಯದರ ಮೇಲಿರಿಸೆ ॥ ೮೬ ॥

ಚಿನ್ನ ಬೆಳ್ಳಿಗಳೊಳು ಸಮೆದ ಬಟ್ಟಲುಗಳ । ಹೊನ್ನ ತಟ್ಟೆಯ ಸುತ್ತಲಿರಿಸಿ ॥
ಪನ್ನೀರಿನಿಂದ ತೊಳೆದುಯಳವಡಿಸಿ ಸಂ- । ಪನ್ನ ಪರಿಮಳದುದಕವ ॥ ೮೭ ॥

ಮಿರುಗುವ ಹೊನ್ನ ಕುಜಾಯಿದೊಳಗೆ ತುಂಬಿ । ಎರೆಯನ ಎಡದ ಭಾಗದೊಳು ॥
ಇರಿಸಲು ರಾಯನಿಂತೆಂದು ನುಡಿದನೆಲೆ । ಮರಿಹಂಸ ನಡೆಯಳೆ ! ನಿನ್ನ ॥ ೮೮ ॥

ಎರಕದಕ್ಕಂದಿರ ತಂಗಿಯರುಗಳನು । ಕರೆತಾರೆಂದು ನಿರವಿಸೆ ॥
ಪರಿತಂದು ಅನುಮತಿ ಮುಂತಾದಬಲೆಯರಿ- । ಗೊರೆಯಲು ಕಡು ಬೆಡಗಿಂದ ॥ ೮೯ ॥

ಅನುಮತಿ ನಂದವತಿಯು ಮೊದಲಾಗಿರ್ದ । ವನಿತಾಮಣಿಗಳು ಬಂದು ॥
ಇನಿಯಗೆ ಕೈಯ ಮುಗಿದು ಹೊಂಬರಿಜುವ- । ನನುಕರಿಸುತ ನಿಂದಿರಲು ॥ ೯೦ ॥

ಸರಸ ವಚನದಿಂದಿಂತೆಂದು ನುಡಿದನು । ಎರೆಯನ ಪಂಕ್ತಿಲಿ ನೀವು ॥
ಬೆರೆದೂಟ ಬೇಕೆಂಬ ಬಯಕೆಯಿಂ ಬಂದಿರೌ । ಬರವು ಇದೇನು ಕಾರಣವು ॥ ೯೧ ॥

ನನ್ನ ಪಂಕ್ತಿಯೊಳು ನಾಚಿಕೆಯಿಲ್ಲದೆ ನೀವು । ಚೆನ್ನಾಗಿಯುಂಬುದು ಹೇಗೆ ॥
ಚೆನ್ನೆಯರುಗಳಿರ ! ಎಂದೆನೆ ರಾಯನು । ಗನ್ನಗಾತಿಯರು ನಗುತಲಿ ॥ ೯೨ ॥

ನಿಂದಿರೆ ಬಗಸೆಗಣ್ಣಿಂದಿತ್ತಲತ್ತಲು । ಅಂದದಿಂ ನೋಡುತಲಾಗ ॥
ಬಂಧುರದುಟಿಯ ಸುಲೋಚನೆ ಪ್ರಿಯನೊಳಿಂ- । ತೆಂದು ನುಡಿದಳು ಜಾಣ್ಮೆಯೊಳು ॥ ೯೩ ॥

ಗಂಡನ ಪಂಕ್ತಿಲಿ ನಾಚಿಕೆ ಏತಕೆ । ಪೆಂಡಿರುಂಬುವುದಕೆ ಜೀಯ ! ॥
ಪೆಂಡಿರ ಪಂಕ್ತಿಲಿಯುಂಬ ಸೌಭಾಗ್ಯ ಭೂ- । ಮಂಡಲದೊಳಗಾರಿಗುಂಟು ॥ ೯೪ ॥

ಎನೆ ರಾಯ ಮುಗುಳುನಗೆಯನಿಟ್ಟು ತನ್ನಯ । ಕೊನೆಗಣ್ಣಿಂದ ಬೆಡಗಿಲಿ ॥
ಅನುಮತಿದೇವಿಯ ಮೊಗವನು ನೋಡುತ । ಮನದೊಳು ಹಿಗ್ಗಿ ಹಿಸಿವುತ ॥ ೯೫ ॥

ಹರಿಸವ ತಾಳಿ ನಲ್ಲಳ ಕೂಡೆಯಿಂತೆಂ- । ದೊರೆದನು ಕಡು ಬೆಡಗಿನೊಳು ॥
ಸುರಮಂಜರಿ ಬಂದಳೋ ನೀಲಾಂಜನೆ । ಸುರಲತೆ ಬಂದಳೋ ಮೇಣು ॥ ೯೬ ॥

ಮದನಮಂಜರಿಯು ಬಂದಳೋ ಸ್ವಯಂಪ್ರಭೆ । ಮದನಾವಳಿಯು ಸುಶೀಲೆ ॥
ಮೃದುವಾಣಿ ಮೃಗನೇತ್ರೆ ಮೃಗಯಾವತಿಯೆಂಬ । ಸುದತಿಯರುಗಳು ಬಂದಾರೌ ॥ ೯೭ ॥

ಮೇನಕಿ ತ್ರಿಭುವನರತಿ ವಿದ್ಯುಲ್ಲತೆ । ಜಾನಕಿ ಮದನಮಂಜೂಷೆ ॥
ಭಾನುಮತಿಯು ಕುಸುಮಾವತಿ ಮುಂತಾದ । ಮಾನಿನಿಯರು ಬಂದರೇನೋ ॥ ೯೮ ॥

ಎನೆ ಎಲ್ಲರು ಬಂದರು ಸ್ವಾಮಿ ! ಎಂದಾ । ವನಿತಾಮಣಿ ಬಾಯಿದೆರೆದು ॥
ಅನುಮತಿದೇವಿ ಪೇಳಲು ಲೇಸಾಯ್ತೆಂದು । ಜನಪತಿ ಕುಳ್ಳಿರೌ ಎನಲು ॥ ೯೯ ॥

ಇತ್ತರದಲಿ ಕುಳಿತರು ರಾಣಿಯರು ಭೂಪ- । ನೊತ್ತಿಲಿಯನುಮತಿದೇವಿ ॥
ಬಿತ್ತರದಿಂದ ಕುಳಿತಳಾಗೋರ್ವಳು । ನಿತ್ತರೆ ನಾಚಿಕೆಯಿಂದ ॥ ೧೦೦ ॥

ಕುಳಿರು ಕುಳಿರು ಎಂದೆಲ್ಲರು ನುಡಿವರಾ- । ಗಳುಗುತ ಮಾತಾಡುವುದಕೆ ॥
ಬಳಿಕುಂಬೆನು ಕೂಗಬೇಡಮ್ಮಯ್ಯ ಎಂದು । ಲಲನೆ ಕೈಮುಗಿವುದ ರಾಯ ॥ ೧೦೧ ॥

ಕಡೆಗಣ್ಣ ಕೊನೆಯಿಂದ ನೋಡಿ ಏನೇನೆನೆ । ಮಡದಿಯರ್ತದ್ವೃತ್ತಕವ ॥
ನುಡಿದರದಕೆ ದೊರೆ ತಲೆದೂಗುತ ಪೊಂ- । ಗೊಡವೊಲೆಯುಳ ನೋಡಿದನು ॥ ೧೦೨ ॥

ಹವುದೌದು ನಾಚಿಕೆಯುಳ್ಳಳು ತಪ್ಪಲ್ಲ । ಯುವತಿಯರೊಳು ಬಲು ಮುಗ್ಧೆ ॥
ಇವಳು ಮೊನ್ನೆಯ ರಾತ್ರೆಯೊಳು ಮಾಡಿದ ಚೇಷ್ಟೆ । ಹವಣಿಸುತಿದೆ ಮುಗ್ಧೆಯೆಂದು ॥

ಎನೆ ಗಕ್ಕನೆಯೋಡಿ ಬಂದು ಪಂಕ್ತಿಯೊಳಾಗ । ಮಿನುಗುವ ನಗೆಯಿಂದ ಕುಳಿರೆ ॥
ವನಿತೇರ ವಶ ಮಾಡುವ ಕೀಲಿನ ಮಾತೀ । ಜನಪನೊಳಲ್ಲದೆ ಇಲ್ಲ ॥ ೧೦೪ ॥

ಎನುತೆಲ್ಲ ಸ್ತ್ರೀಯರು ಮನದೊಳು ಹಿಗ್ಗುತ । ಕೊನೆದಾಡಿಸುತ ಶಿರಗಳ ॥
ಜಿನ ಜಿನ ! ಏನು ಜಾಣನೊ ನಲ್ಲನೆಂದಾಗ । ಕೊನೆಗಣ್ಣಿಂ ನೋಡಿ ನಗುವರು ॥ ೧೦೫ ॥

ಶರಧಿದೇವಿಯು ವಿದ್ಯುದ್ದಾಮೆ ಕಳಕಂಠೆ । ಸುರಲತೆ ಜ್ಯೋತಿರ್ಮಾಲೆ ॥
ಸಿರಿದೇವಿ ಕನಕಲತೆಯು ಪ್ರಭಾವತಿ- । ಯರು ಮುಂತಾದವರೆಲ್ಲ ॥ ೧೦೬ ॥

ಮಿನುಗುವ ಚೌಕದ ಬೆಳ್ಳಿಯ ಮಣೆಗಳ । ವನಿತೆಯರ್ಮುಂದೆ ಮಡಗಲು ॥
ವನಧಿದೇವಿಯು ಚಿನ್ನದ ಪರಿಯಣಗಳ- । ನನುಗೊಳಿಸಿದಳಾಯತದಿ ॥ ೧೦೭ ॥

ತರುಣಿಯರಾಸ್ಯವೆನಿಪ ಕೆಂದಾವರೆಗಳ । ತರಣಿಯರಳಿಸ ಬಂದಂತೆ ॥
ಪರಿವಾಣಗಳ ಕಾಂತಿಯು ಏಕ್ಕು ದಿಕ್ಕಿಗೆ । ಸುರಿದವು ಕಿರಣವೆಂಬಂತೆ ॥ ೧೦೮ ॥

ಮಡಿಯುಟ್ಟು ಸರ್ವಾಭರಣಗಳನು ತೊಟ್ಟು । ಬಡಿಸುವುದಕೆಯನುವಾಗಿ ॥
ಮಡದಿಯರುಗಳು ಪಚನ ವಸ್ತುದುಂಬಿದ । ಕಡೆಯಾಣಿ ತೊಡಕವಟ್ಟಲನು ॥ ೧೦೯ ॥

ಪಿಡಿದು ಗಮಕದಿಂಪಡಿಯಿಡುವಾಗ ಪೊಂ- । ಗೊಡವೊಲೆಗಳ ಭಾರಕ್ಕೆಗೆ ॥
ನಡು ಬಳಕಲು ಲತೆಯಂತೆ ನಡೆದು ಬಂದು । ಮಡದೀರು ಪಂತಿ ತಿದ್ದಿದರು ॥ ೧೧೦ ॥

ಕಲ್ಲುಪ್ಪು, ನಿಂಬೆಯುಹುಳಿ, ಹಣ್ಣು ಮಾವಿನ । ಬೆಲ್ಲಗಾಯುನು ಉಳ್ಳಿಗಾಯ ॥
ನೆಲ್ಲಿಯ ಸಾಸಿವೆಗಾಯುಪದಂಶವ । ಚೆಲ್ವೆಗಂಗಳೆಯರಿಕ್ಕಿದರು ॥ ೧೧೧ ॥

ಹೆರುಳಿಯ ನಿಂಬೆಯ ಸುತ್ತುವಣ್ಣುಗಳ- । ನುರಿ ಮೊದಲಾದ ಮಾದಲದ ॥
ಕರ ಕುಶಲದ ದೊಡ್ಡೆರುಳಿಯ ಯಡುಗಾಯ । ತರುಣಿಮಣಿಗಳಿಕ್ಕಿದರು ॥ ೧೧೨ ॥

ಮುಳ್ಳುಸೌತೆಯಕಾಯ ಪಚ್ಚಡಿ ಕಡಲೆಯ । ಬೆಳ್ಳನ ಬೇಳೆ ಪಚ್ಚಡಿಯ ॥
ಗುಳ್ಳದ ಸುತ್ತುವಣ್ಣಿನಯುಪದಂಶವ । ತಳ್ವೋದರಿಯರಿಕ್ಕಿದರು ॥ ೧೧೩ ॥

ನೆಲ್ಲಿಯ ಕಸರಿ ಹಿಂಡಿಯ ಕಸರಿ ಮಂಗ- । ವಳ್ಳಿಯ ಕಸರಿ ಸವುತೆಯ ॥
ಸಳ್ಳಿ ಬಾಳೆಯಹಣ್ಣಿನ ಸೀಕರಣೆಯನು । ಪುಲ್ಲಾಕ್ಷಿಯರಿಕ್ಕಿದರು ॥ ೧೧೪ ॥

ಬದನೆ ಹೀರೆಯಕಾಯ ತುಂಬುಗಾಯಿಗಳನು । ಬದನೆ ಹೀರೆಯ ಹಾಸುಗಾಯ ॥
ಮದ ಶರ್ಕರೆ ಚಪ್ಪರದವರೆಯಕಾಯ । ಮೃದುವಾದ ತಾಳಿಲಸಿಕ್ಕೆ ॥ ೧೧೫ ॥

ಮೊಸರಿನ ತಾಳಿಲ ತುಪ್ಪದ ತಾಳಿಲ । ಹೊಸ ಮಾವಿನ ಅಳ್ಳಿಗಾಯಿ ॥
ಸಸಿ ಮಾವಿನಗಾಯ ಸಂಬಾರಗಾಯನು । ಪೊಸ ಜವ್ವನೆಯರಿಕ್ಕಿದರು ॥ ೧೧೬ ॥

ಸಗ್ಗದೊಳಿಲ್ಲವೆನಿಪ ಬಾಳೆಯಕಾಯ । ಕಗ್ಗುಂಬಳಕಾಯಿಗಳ ॥
ಒಗ್ಗರಿಸಿದ ಹುಳಿದಾಳಿಲುಗಳನಬ್ಜ- । ಮೊಗ್ಗೆ ಮೊಲೆಯರಿಕ್ಕಿದರು ॥ ೧೧೭ ॥

ಅತಿರಸ ಸರ್ಕರೆ ಫೇಣಿಕರ್ಪುರನಾಳಿ । ಅತಿಶಯದಿಂದು ರಸಗಳ ॥
ಅತಿ ಶುಭ್ರಮಾದ ಮನೋಹರದುಂಡೆಯ । ಶಿಥಿಲವೇಣಿಯರಿಕ್ಕಿದರು ॥ ೧೧೮ ॥

ಘಮಘಮಿಸುವ ದಿವ್ಯ ಕಿಳಿದುಪ್ಪವ ತಂದು । ಸಮನಿಸಿ ಸಮನಿಸೆಲ್ಲರಿಗೆ ॥
ರಮಣಿಯರಿಕ್ಕಲು ಜಯಘಂಟಾನಾದವು । ದಿವಿಕುಜ ಎಂದುಣ್ಮಿದವು ॥ ೧೧೯ ॥

ದೊರೆರನ್ನ ಬದ್ಧ ಪಲ್ಯಂಕಾಸನದೊಳ- । ಗಿರುತಿರ್ದ ಪಂಚಗುರುಗಳ ॥
ತ್ವರಿತದಿಂದೊಂಬತ್ತು ವೇಳೆಯುಚ್ಚರಿಸುತ । ಅರೆಗಣ್ಣ ಮುಚ್ಚಿ ಚಿನ್ಮಯನ ॥ ೧೨೦ ॥

ಪರಿಕಿಸಿ ತದ್ಧ್ಯಾನದೊಳು ಮುಳುಗಿ ಮತ್ತೆ । ಗುರು ಜಿನಚಂದ್ರನ ನೆನೆದು ॥
ಶರಣೋತ್ತಮ ಮಂಗಲವೆಂದು ತುತ್ತನು । ದೊರೆಗಳ ದೇವನೆತ್ತಿದನು ॥ ೧೨೧ ॥

ಇಂದುರಸವ ರಾಯ ಸವಿಯಲು ಸ್ವರ್ಗವಿ- । ನ್ನೊಂದೇ ಗೇಣೆಂಬಂತೆ ಸವಿಯು ॥
ಚೆಂದೆಂಗಿನೆಳನೀರ ವೇಳೆ ವೇಳೆಯಲಿ । ಸಿಂಧುದೇವಿಯು ಸೀಡುತಿಹಳು ॥ ೧೨೨ ॥

ಸವಿವಾಗ ಕರ್ಪೂರನಾಳಿಯುದರದೊಂದು । ಸವಿ ಸೂರೆಗೊಳೆ ತನ್ಮನವ ॥
ಭುವನೇಶನೆಡಬಲವಿದಿರೊಳು ಕುಳಿತಿರ್ದ । ಯುವತಿಯರನು ನಿಟ್ಟಿಸಲು ॥ ೧೨೩ ॥

ತುತ್ತೆತ್ತದಿರುವುದ ಕಂಡಾಗ ಹೂ ಎಂ- । ದುತ್ತಮಾಂಗವ ತೂಗೆ ರಾಯ ॥
ಇತ್ತಲ್ಲದೆ ಶೇಷಾನ್ನನನುಣೆನೆಂ- । ದುತ್ತಮ ದೇವಿಯರುಸುರೆ ॥ ೧೨೪ ॥

ಇತ್ತರಿ ನಮಗಿಷ್ಟು ಶೇಷಾನ್ನವ ನಾವು । ಮತ್ತೆ ನಿಮಗೆ ಬಡ್ಡಿಗೂಡಿ ॥
ಹತ್ತು ಮಡಿಯ ಮುಂದೆ ಕೊಡುವೆವು ಎನುತಾಗ । ಚಿತ್ರರಿಸಲು ನೀಲಾಂಜನೆಯು ॥
ಮುಗುಳುನಗೆಯ ನಕ್ಕು ಸಿಂಧುದೇವಿಯ ನಗೆ- । ಮೊಗವ ನೋಡಲು ಸನ್ನೆಯರಿದು ॥
ತೆಗೆದು ಕಜ್ಜಾಯಗಳನು ಹರಿಯಣದಿಂದ । ಬಗಸೆಗಣ್ಣಳು ಬಳಸಿದಳು ॥ ೧೨೬ ॥

ಬಳಿಕೆಲ್ಲ ಸರಸವಿನೋದವನಾಡುತ । ತಿಳಿದುಪ್ಪದೊಳು ಕಜ್ಜಾಯವನು ॥
ಮುಳುಗಿಸಿ ಮುಳುಗಿಸಿ ಚಪ್ಪರಿದಾಡುತ । ಲಲನೆಯರುಗಳು ಸವಿದರು ॥ ೧೨೭ ॥

ಮೊಕಚಿಟ್ಟುಯಾದೊಡೆ ಹುಳಿದಾಳಲುಗಳ । ನಿಕರವ ಸವಿದರೇನೆಂಬೆ ॥
ಸುಕಿನುಂಡೆಯ ಮೆದ್ದು ಚಿಲುಪಾಲನೀಂಟುವ । ಸೀಕರಣೆಯನು ನೆಂಚುವರು ॥ ೧೨೮ ॥

ಮುಸುಕೊಡೆಯುದ್ದಿನೊಡೆಯ ಮುತ್ತು ಸೋರೆಯ । ಶಶಿನಿಭ ಎಣ್ಣೆ ಹೂರಿಗೆಯ ॥
ಹೆಸರಾದುದ್ದಿನ ಚಕ್ಕುಲಿಗಳ ತಂದು । ಬಿಸರುಹಾನನೆಯರಿಕ್ಕುವರು ॥ ೧೨೯ ॥

ಮುಸುಕೊಡೆಗಳ ಸವಿವಾ ರಾಯ ಮತ್ತೊಮ್ಮೆ । ಕಸರಿ ಪಚ್ಚಡಿಗಳ ಸವಿವ ॥
ರಸವಾಳೆ ಪಣ್ಗಳ ಸವಿದು ಚಕ್ಕುಲಿಗಳ । ರಸಿಕರ ದೇವ ಮೆಲ್ಲುವನು ॥ ೧೩೦ ॥

ಕರುಗಾದ ಮುತ್ತುಸಾರಿಯ ಚಕ್ಕುಲಿಗಳ- । ನರಸಿಯರ್ನೆರಿನೆರಿಕೆನುತ ॥
ಮುರಿದು ಬಾಯೊಳಗಿಟ್ಟು ಗರಿಗರಿಗರಿ ನವ । ಸ್ವರ ತುಂಬಿತಾ ಗೃಹದಲ್ಲಿ ॥ ೧೩೧ ॥

ಪರಿಹಾಸಕವ ತನ್ನೊಳಗೋರೋರ್ವರು । ತರುಣಿಯರಾಡುವರರಸು ॥
ಪರಿಕಿಸಿ ಸುಮ್ಮನೆ ನಗುತುಣುತಿರುವನು । ದೊರೆ ದರಹಸಿತದಿ ನಗುತ ॥ ೧೩೨ ॥

ಎಂಜಲ ಕೊಂಡೊಯ್ದು ರಾಯನ ಬಾಯೊಳ- । ಗಂಜದೆ ಗಿಡಿವ ನಾವೆಂದು ॥
ಮಂಜುಳ ವಾಣಿಯರಾಡುವರದಕಾ- । ವಂಜುವೆವೆಂಬರು ಕೆಲರು ॥ ೧೩೩ ॥

ಬಗೆ ಬಗೆ ಪಾಯಸಗಳನಿಕ್ಕಿ ಶರ್ಕರೆ । ಮಿಗಿಲಾಗಿ ಬಡಿಸಿ ನೀರೆಯರು ॥
ಮಘಮಘಿಸುವಹೆರೆದುಪ್ಪವ ನಲ್ಲಗೆ । ತೆಗೆದಿಕ್ಕಿದರು ಬೇಕಾದಷ್ಟು ॥ ೧೩೪ ॥

ಸರಪರ ಸುರುಸುರು ಸೊರಕೆಂದು ನಾರೀರು । ಸುರುವುತಿರಲು ಪಾಯಸವ ॥
ಅರಸು ನೋಡಲು ನಾಣ್ಚಿ ಸುಮ್ಮನಾಗುವರವ- । ರರಸು ನೋಡದಿರೆ ಸುರಿವರು ॥ ೧೩೫ ॥

ತುಳುಕುವ ಪರಿಮಳವನು ದಿಕ್ಕುದಿಕ್ಕಿಗೆ । ಕಳಮೆಯನ್ನವ ತೊವರಿಯ ॥
ಹಳಚಗಿರುವ ತೊಯಿರಸ ಹುಣಿಸೆ ಪಳದ್ಯದ । ಎಳೆವೆಣ್ಣುಗಳಿಕ್ಕಿದರು ॥ ೧೩೬ ॥

ಪದುಮದ ಗಂಧವ ಜರೆವ ಕಮ್ಮನೆನಿಪ್ಪ । ಉದುರುದುಪ್ಪವನಾಗ ಬಳಸಿ ॥
ಸುಧೆಗಿಂತ ಸವಿಯಾದ ಬೇಳೆ ರಸವ ತಂದು । ಸುದತಿಯರ್ಬಟ್ಟಲಿಗೆರೆಯೆ ॥ ೧೩೭ ॥

ಹುಣ್ಣಿಮೆ ಚಂದ್ರನ ಬರೆದು ಮೋಹನವೆತ್ತ । ಕಣ್ಣಿಗೆ ತೋರಿಸಿಕೊಂಬ ॥
ಎಣ್ಣೆಲಿ ಹಾಕಿದಕ್ಕಿಯ ಹಪ್ಪಳಗಳ । ಪೊಡವಿಪ ಮುಂತಾದವರಿಗೆ ॥ ೧೩೮ ॥

ಎಡಗೈಲಿ ಮಡದಿಯರ್ಪಿಡಿದು ಹಪ್ಪಳಗಳ । ಬೆಡಗು ಬಿನ್ನಾಣವೊಪ್ಪಿದುದು ॥
ತಡೆಯದೆ ಪಂಚ ಫಣೋರಗ ಕರ್ಚಿ- । ರ್ದುಡುಪತಿ ಮಂಡಲದಂತೆ ॥ ೧೩೯ ॥

ಕಡು ರುಚಿಯಾದ ಉದ್ದಿನ ಹಪ್ಪಳಗಳ । ಪೊಡವಿಪ ಮುಂತಾದವರಿಗೆ ॥
ಮಡದೀಮಣಿಗಳು ಬೇಕಾದಷ್ಟೆಡೆ ನೋಡಿ ! ತಡೆಬಡೆಯಿಲ್ಲದಿಕ್ಕಿದರು ॥ ೧೪೦ ॥

ದೂರಳ ಸ್ನೇಹವೆ ನಮಗೆಂದೆಂದುವು । ಸಾರಿದ ರವಿ ನಮ್ಮನೆಂದು ॥
ವಾರಿಜ ಮಧುರವ ಪೀರ್ವಂತೆ ಹಪ್ಪಳ । ನಾರೀರ ಕೈಯೊಳೊಪ್ಪಿದವು ॥ ೧೪೧ ॥

ಶಶಿಯಿಂದರಳದೆ ರವಿಯಿಂದ ಕಿಂಚಿತ್ತು । ವಿಕಸನದಿಂ ನಾಳವೆರಸು ॥
ಬಿಸರುಹವಿರುವಂತೆ ಹಪ್ಪಳಗಳನಾಂತ । ಶಶಿಮುಖಿಯರ ಹಸ್ತವಿಹವು ॥ ೧೪೨ ॥

ನಡುವಿನ ಕಾಂಚಿಯ ಕಿರುಘಂಟೆ ಕಿಣಿರೆನೆ । ಕುಡುತೆಗಂಗಳ ಕಾಂತಿ ಬೆಳಗೆ ॥
ಪಡೆದು ಪಲವು ರೂಪ ವಿದ್ಯುಲ್ಲತೆಯಂತೆ । ಸಡಗರದಿಂದಿಕ್ಕಿದರು ॥ ೧೪೩ ॥

ತೊಗೆಯನ್ನ ತುಪ್ಪವ ಮೇಳೈಸಿ ಜ್ಞಾನೇಂದು । ನಗೆಮೊಗದಿಂದ ಭುಂಜಿಪನು ॥
ತೊಗರಿಯ ರಸವನು ಸುರ್ರೆಂದು ಸುರಿಯಲು । ನಗುತಿಹುದದು ಸ್ವರ್ಗಸುಖವ ॥ ೧೪೪ ॥

ತುಂಬುಗಾಯಿಗಳನು ಹಾಸುಗಾಯಿಗಳನು । ಕುಂಭಿನೀಪತಿಯೊಮ್ಮೆ ಸವಿವ ॥
ನಿಂಬೆಯಹಣ್ಣಿನ ಹುರಿಹಣ್ಣನೆಂಚುತ । ಬಿಂಬಾಧರೆಯರೊಮ್ಮೆ ನೋಳ್ಪ ॥ ೧೪೫ ॥

ತೋಯನ್ನವನುಂಡು ಮುಗಿಯೆ ಮಾರದಿಯಿಕ್ಕಿ । ತೋಯಜಗಂಧಿಯರ್ಮೊಸರ ॥
ರಾಯ ಮುಂತಾದರಿಗಿಕ್ಕಲು ದೊರೆ ವಿ- । ಡಾಯದಿ ಕಲಸಿಯನ್ನವನು ॥ ೧೪೬ ॥

ತುತ್ತನೆತ್ತುವ ಕಚ್ಚಡಿ ಪಚ್ಚಡಿಗಳ । ಬಿತ್ತರದಿಂದ ನೆಂಚುವರು ॥
ಅಳ್ತಿಯಿಂದಿಂತುಂಡು ಕೈದೊಳೆದನು ಭೂ- । ಪೋತ್ತ್ರನುಸಧಿಕ ಸಂಭ್ರಮದಿ ॥ ೧೪೭ ॥

ವರ ಪಂಚಗುರುಗಳ ನಾಮೋಚ್ಚರಣೆಯು । ಎರಕದಿಂದೊಂಭತ್ತು ಬಾರಿ ॥
ಅರೆಗಣ್ಣ ಮುಚ್ಚಿಯುಚ್ಚರಿಸಿ ಸಿದ್ಧರನಾ- । ಗಿರಿಸಿದ ತನ್ನ ಚಿತ್ತದೊಳು ॥ ೧೪೮ ॥

ಬೆಳತಿಗೆಗಣ್ಣ ನಾರಿಯರೆಲ್ಲ ಕೈಗಳ । ತೊಳೆದರು ತರಹರದಿಂದ ॥
ಇಳೆಯಾಣ್ಮ ಕರ್ಪೂರ ವೀಳೆಯ ಮೆಲುತಾಗ । ಪೊಳೆವ ಗದ್ದುಗೆಯೊಳು ಕುಳಿತ ॥ ೧೪೯ ॥

ಸಿಂಧುದೇವಿಯ ಕರೆಯಿಸಿ ಭೋಜನಕೆಲೆ । ಸೌಂದರಿ ! ಹೊತ್ತಾಯಿತೆಂದು ॥
ಚಂದದಿಂ ನುಡಿದು ಕಿಂಚಿತುಪೊತ್ತು ನಿದ್ರೆಯ- । ಅಂದಗಾರನು ತಾನು ಮಾಡಿ ॥ ೧೫೦ ॥

ಕನಕಲತೆಯು ಮುಂತಾಗಿರ್ದವರನು । ವನಿತಾಮಣಿ ಸ್ವಪಂಕ್ತಿಯೊಳು ॥
ಬಿನದದಿಂ ಕೂಡಿಕೊಂಡಾರೋಗಣೆ ಮಾಡಿ । ವನಧಿದೇವಿಯು ಕೈದೊಳೆದು ॥ ೧೫೧ ॥

ಜನಪತಿಯಿದ್ದಪ್ಪರೊಳು ಪೊಗಶಾಲೆಗೆ । ಮಿಸುಗುವ ನಗೆಯಿಂದ ಬರಲು ॥
ವಸಿತೆ ಕೈಲಾಗುವಿನಿಂ ಮನೆಗೊಡಗೊಂಡು । ಘನ ಸಂತಸದಿಂದ ಬರಲು ॥ ೧೫೨ ॥

ಚಿನ್ನದ ತೂಗುಮಂಚದ ಮೇಲೆ ಇರಿಸಿರ್ದ । ಸನ್ನುತ ಮಣಿಗದ್ದುಗೆಯೊಳು ॥
ಚೆನ್ನಿಗನೋಲಗಗೊಡಲು ನಾರಿಯರೆಲ್ಲ । ಹೊನ್ನ ಪುತ್ಥಳಿಯಂದದೊಳು ॥ ೧೫೩ ॥

ಸಾಲಾಗಿಯಿತ್ತರದೊಳು ಕುಳ್ಳಿರಲು ಮತ್ತೆ । ಲೋಲಾಕ್ಷಿ ಶ್ರೀ ಸಿಂಧುದೇವಿ ॥
ಮೇಲುಚಿನ್ನದ ಬಟ್ಟಲೊಳು ಘನ ಸಾರವ । ಮೇಳೈಸಿದ ಕುಂಕುಮದ ॥ ೧೫೪ ॥

ಗಂಧ ಪುಣುಗು ಜವಾದಿಗಳನು ತುಂಬಿ । ತಂದು ನೃಪನ ಪಣೆ ಎದೆಗೆ ॥
ಚಂದದಿಂ ಲೇಪಿಸಿ ಮುಳುಗಿಸಿದಳು ಬೇಗ । ಸೌಂದರಿಯರು ಪರಿಮಳದಿ ॥ ೧೫೫ ॥

ಹತ್ತು ಕೋಟಿಗೆ ಬೆಲೆಯಾದ ಸನ್ನವರತ್ನ । ಕೆತ್ತಿದ ಪದಕವ ತಂದು ॥
ಚಿತ್ತೇಶನ ಕೊರಳೊಳಗಿಕ್ಕಿ ಪಾದಕೆ । ಅಳ್ತಿಯಿಂ ಬಿದ್ದಳಾ ನಾರಿ ॥ ೧೫೬ ॥

ಕೆನ್ನೀರ ಮುತ್ತು ಸುತ್ತಲು ಖಚಿತವಾದ । ಚಿನ್ನದ ಸರಿಗೆ ಸೀರೆಯನು ॥
ಕನ್ಯಾರತ್ನ ಶ್ರೀಯನುಮತಿಗಿತ್ತು ತಾ । ಚೆನ್ನಡಿಗಳಿಗೆರಗಿದಳು ॥ ೧೫೭ ॥

ನಂದವತಿಗೆ ಹಸುರಿನ ಬುರುಸಾಲಿನ- । ದೊಂದು ಸೀರೆಯ ಕಾಮಲತೆಗೆ ॥
ಚಂದ್ರಗಾವಿಯ ಸೀರೆಯನಪ್ಪಗೊಳವಾದ । ಕುಂದಣಸರಿಗೆ ಸೀರೆಯನು ॥ ೧೫೮ ॥

ಕನಕಲತೆಗೆ ಮುತ್ತುಳಿದ ಕಾಮಿನಿಯರ್ಗೆ । ಸನುಮಾನದುಡುಗೊರೆಯಿತ್ತು ॥
ವನಿತೆ ಎಂಭತ್ತು ಕೋಟಿಗೆ ಲೆಕ್ಕಗಾಣಿಪ । ಕನಕಾಭರಣವ ಕೊಟ್ಟು ॥ ೧೫೯ ॥

ಬಳಲಿದಿರೆಂದು ವಿನಯವಚನವನಾಡಿ । ನಳಿನದಳಾಯತನೇತ್ರೆ ॥
ಬೆಳತಿಗೆಗಣ್ಣಳೆ ಇತ್ತ ಬಾರೆಂದಾಗ । ಇಳೆಯಾಣ್ಮ ನಗುತ ಕರೆಯಲು ॥ ೧೬೦ ॥

ಮಂದಗಮನೆ ನಡೆದು ಬಂದು ಕರಗಳ । ಮಂದಸ್ಮಿತದೊಳು ಮುಗಿದು ॥
ನಿಂದುಕೊಂಡಿರೆ ರಾಯ ಪುಣುಗು ಜವಾದಿಯ । ಸೌಂದರಿ ಕೊರಳೊಳು ತೊಡೆದು ॥

ನೂರಹನ್ನೆರಡು ಕೋಟಿಗೆ ಬೆಲೆಯಾಗಿರ್ದ । ಚೀರಣೆಗೆಲಸ ಕಾಂಚಿಯನು ॥
ನಾರೀಮಣಿಗೆ ರಾಯರದೇವ ತಾ ಕೊಟ್ಟ- । ಪಾರ ಮನ್ನಣೆಯ ಮಾಡಿದನು ॥ ೧೬೧ ॥

ಇಂತು ರಾಜಾಧಿರಾಜನು ಜ್ಞಾನಚಂದ್ರನು । ಕಾಂತೆಯರರಮನೆಗಳೊಳು ॥
ಸಂತೋಷದಿಂದಲುಣುತ ಸುಖಾಬ್ಧಿಯೊಳೋ- । ರಂತೆ ತೇಂಕಾಡುತಲಿಹನು ॥ ೧೬೨ ॥

ಸುರಕರಿ ಸಮದಾನಿ, ಪರಮಾತ್ಮನಧ್ಯಾನಿ । ಶರಧಿಯಂದದಿ ಅಭಿಮಾನಿ ॥
ಪರಮತ ಸ್ವಮತದೊಳಗೆ ಜ್ಞಾನಿ ಜ್ಞಾನೇಂದು । ದೊರೆಯೊಪ್ಪಿದನು ಸನ್ಮಾನಿ ॥ ೧೬೪ ॥

॥ ಅಂತು ಸಂಧಿ ೩೯ಕ್ಕಂ ಪದ ೫೩೮೭ಕ್ಕಂ ಮಂಗಲಂ ॥

# ರಥೋತ್ಸವ.

ನಂದೀಶ್ವರದ ರಥೋತ್ಸವವನು ಜ್ಞಾನ-। ಚಂದಿರನೆಸಗಿದುದುರ್ವೆ ॥ ಪ ॥

ಕರ್ಮದ ಪೆರ್ಮೆಯನೊರ್ಮೆದಲೊಳು ಸುಟ್ಟು। ನಿರ್ಮಲ ಧರ್ಮವ ಪೇಳ್ದು ॥
ಸ್ವರ್ಮೋಕ್ಷ ಶರ್ಮವ ಜನಕೀವ **ಶಾಂತೀಶ!**। ನಿರ್ಮೂಲ ಮಾಡೆಮ್ಮಘವ ॥ ೧ ॥

ರವಿ ಭೂಮಂಡಲವನು ಬೆಳಗುವವೊಲು। ದಿವಿಪ ರಕ್ಷಿಸುವಂತೆ ಸುರರ ॥
ಭುವನೇಶ ಜ್ಞಾನೇಂದು ಸರ್ವ ಪ್ರಜೆಗಳನು। ವಿನಯದಿಂದಲಿ ಪಾಲಿಸುತ ॥ ೨ ॥

ಪರಮೇಶ ಕಾಂಚನವತಿಯೆಂಬ ಪುರದೊಳ-। ಗಿರುವಂತೆ ರತ್ನಪುರದೊಳು ॥
ತರುಣಿಯರೊಡಗೂಡಿಯಷ್ಟೈಶ್ವರ್ಯದಿ। ಧರೆಯನಾಳುತಲೊಪ್ಪಿಹನು ॥ ೩ ॥

ಕ್ಷಿತಿಪನ ಪುಣ್ಯದೇವತೆಯಿರ್ವರಿರುವಂತೆ। ಸಿತ ಫಾಲ್ಗುಣ ಮಾಸದೊಳು ॥
ಸುತವೆತ್ತ ನಂದೀಶ್ವರ ಬರಲದರೊಂ-। ದತಿಶಯವನು ಏನೆಂಬೆ ॥ ೪ ॥

ದೊರೆಯಪ್ಪಣೆಯಿಂದಲೂರೊಳಗೆಲ್ಲೆಲ್ಲ। ಕುರುಜುಗಳೆದ್ದವು ಪಲವು ॥
ಸಿರಿವೆತ್ತು ಝಲ್ಲಿ ಮಕರತೋರಣಗಿಂಡಿ। ಮೆರೆದವು ಬೀದಿ ಬೀದಿಯೊಳು ॥ ೫ ॥

ಕತ್ತುರಿ ಸಾರಣೆ, ಕುಂಕುಮಕಾರಣೆ। ಮುತ್ತಿನ ರಂಗವಲ್ಲಿಗಳು ॥
ಎತ್ತೆತ್ತ ನೋಡಲು ಕೇರಿ ಕೇರಿಲಿ ಚೆ-। ಲ್ವೆತ್ತು ರಾಜಿಸಿದವೇನೆಂಬೆ ॥ ೬ ॥

ಚಂದ್ರಪುರವ ಭೋಗಾವತಿಯುಳಕಾವತಿ। ಇಂದ್ರನೈರಾವತಿಪುರದ ॥
ಸಾಂದ್ರ ಚೆಲ್ವಿಕೆಯನು ಇಳಿಕೈವ ಜ್ಞಾನ-। ಚಂದ್ರನ ನಗರಿ ರಾಜಿಪುದು ॥ ೭ ॥

ಬಗೆ ಬಗೆ ಪಟ್ಟೆಪೀತಾಂಬರಾದಿಗಳಿಂದ। ಜಗದಾರಾಧ್ಯನ ಗೃಹವು ॥
ಸೊಗಸಿಂದ ಸಿಂಗರಗೈಯಲೊಪ್ಪಿದುದದು। ಪಗಲೆರೆಯನ ಬಿಂಬದಂತೆ ॥ ೮ ॥

ದೊರೆಗಳ ದೇವನಾನಂದ ಹೃದಯನಾಗಿ। ಕರೆಸಿ ದಂಡಾಧಿನಾಯಕನ ॥
ಬರಿಸು ಪೂಜಾದ್ರವ್ಯವ ದೇಶ ದೇಶದ। ಧರಣೀಶರ ಕರೆಸೆನಲು ॥ ೯ ॥

ಬರೆಸಿ ಲೇಖನಗಳ ಛಪನ್ನದೇಶಕೆ। ತುರಿಹದಿಂದಟ್ಟಲಲ್ಲಿರ್ದ ॥
ದೊರೆದೊರೆಗಳು ಉಲುಪೆಗಳ ಕಳುಹಿಸಲು। ಒರೆಯಲೇನಷ್ಟಿಷ್ಟೆಂದು ॥ ೧೦ ॥

ನಂದೀಶ್ವರದೊಳು ಜ್ಞಾನೇಂದು ನಡೆಯಿಪ। ಸಂದುತ್ಸವವ ನೋಡುವರೆ ॥
ಬಂದರು ದಿಕ್ಕು ದಿಕ್ಕುಗಳಿಂದ ಮುನಿಗಳಾ-। ನಂದವ ಮನದೊಳು ತಾಳಿ ॥ ೧೧ ॥

ನೋಡಿ ಪುಣ್ಯವ ನಾವು ಪಡೆವೆವೆಂದೆನುತಾಗ। ನಾಡು ನಾಡಿಂದ ಶ್ರಾವಕರು ॥
ಕೂಡಿಕೊಂಡಾ ಶ್ರಾವಕಿಯರು ಬಂದರು। ನಾಡಿಗೊಡೆಯನ ಪಟ್ಟಣಕೆ ॥ ೧೨ ॥

ಇದಿರು ಪೋಗುವ ಶ್ರಾವಕರಿಂಗೆ ಗಡಿಯಲ್ಲಿ । ಇದಿರ್ಗೊಂಡು ಜಿಡದಿಯನಿತ್ತು ॥
ಸದನಕ್ಕೆ ಒಡಗೊಂಡು ಪೋಗುವ ಜನಗಳ । ಅಧಿಕ ಸಂಭ್ರಮವೆಲ್ಲೆಲ್ಲಿ ॥ ೧೩ ॥

ವೊಳಗಿದವಾಗ ಕೋಟಾಕೋಟಿ ವಾದ್ಯವು । ಬೆಲೆನೆಣ್ಣುಗಳು ನಟಿಪರು ॥
ಇಳೆಗಧಿಪತಿಯು ಶ್ರೀಪಂಚಮಿ ದಿನ ಜಿನ- । ನಿಲಯದಲುತ್ಸಹದೊಳಗಿ ॥ ೧೪ ॥

ಆ ರಾತ್ರೆಯೊಳು ಜಿನಪಗೆ ಪಂಚಾಮೃತದಿಂದ । ಚಾರು ಸ್ನಪನವನು ಗೈಸಿ ॥
ನಾರಿಯರೆಲ್ಲರಂಕುರವ ಬಿತ್ತುವುದಕೆ । ಸೇರುವೆಯಿಂ ಬರಲೆನಲು ॥ ೧೫ ॥

ಕೇರಿ ಕೇರಿಗಳೊಳು ಕಟ್ಟಿಗೆಗಾರರು । ಸಾರಿದರು ಮುತ್ತೈದೆಯರು ॥
ಮಾರಾರಿಗೃಹದೊಳಂಕುರವ ಬಿತ್ತುವುದಕೆ । ಯಾರುಳಿಯದೆ ಬನ್ನಿರೆಂದು ॥ ೧೬ ॥

ನುಡಿದ ನುಡಿಯ ಕೇಳಿ ಪಟ್ಟಣದೊಳಗಿರ್ದ । ಮಡದಿಯರೆಲ್ಲ ಸಂಭ್ರಮದಿ ॥
ಬೆಡಗಿನಿಂ ಶೃಂಗಾರವಾದರು ಮದನನ । ಮಡದಿ ಸರಿಯೆ ಎಮಗೆನುತ ॥ ೧೭ ॥

ಮಂಗಲೆ ನಮ್ಮ ಸಿರಿಗೆ ಸರಿಯೇ ಎಂದು । ತುಂಗಕುಚೆಯರು ಭಂಗಿಸುತ ॥
ಜಂಗಮ ಲತೆಯಂತೆ ಬಳಬಳುಕುತ ಕೋಮ- । ಲಾಂಗಿಯರಡಿಯಿಟ್ಟರಾಗ ॥ ೧೮ ॥

ಚರಣದಂದುಗೆಗಳು ಘಲಿಘಲಿಘಲಿರೆನೆ । ಹರಿಮಧ್ಯದ ಕಾಂಚಿಗಳ ॥
ಕಿರುಘಂಟೆ ಕಿಣಿಕಿಣಿರೆನೆ ಮದದಾನೆಯು । ನೆರೆದು ಬಂದುದೋ ಎನಲಿಹುದು ॥ ೧೯ ॥

ಕುಡುತೆಗಂಗಳ ಕಾಂತಿ ನಡೆಮುಡಿಯಾಗಲು । ಬಡನಡು ಬೆಡಗಿಂ ಬಳುಕುತ ॥
ನಡೆದು ಬಂದರು ಎಂಬತ್ತೈದು ಸಾಸಿರ । ಬೆಡಗುಗಾತಿಯರು ಬಿಂಕದೊಳು ॥ ೨೦ ॥

ಜಿನಪನ ಗೃಹವ್ಹೊಕ್ಕು ಜಿನರಿಗೆ ವಂದಿಸಿ । ಜಿನಮುನಿಗಳಿಗೆ ಕೈಮುಗಿದು ॥
ಜಿನಭಕ್ತೆಯರು ನಿಂದುಕೊಂಡಿರಲವರನು । ಜಿನಚಂದ್ರ ಕುವರನು ಕಂಡು ॥ ೨೧ ॥

ಕಡಲೆ ಹೆಸರು ಉದ್ದು ಭತ್ತ ಹುರುಳಿ ಗೋಧಿ । ತಡಗುಣಿಯವರೆ ತಿಲಾದಿ ॥
ಬಿಡದೆ ವರ್ತಿಪ ಅಷ್ಟಾದಶ ಧಾನ್ಯವ । ಒಡನೆ ಹಾಲೊಳಗೆ ತೊಳಯಿಸಿ ॥ ೨೨ ॥

ನವರತ್ನಕೀಲಿತ ಪಡಲಿಗೆಗಳ ತುಂಬಿ । ಯುವತೀರ ಹಸ್ತಕೆ ಕೊಡಲು ॥
ಭವದೂರ ಚೈತ್ಯಾವಾಸವ ಮೂಸೂಳು । ಧವಳ ಶಂಖಗಳ ಘೋಷಣೆಯಿಂ ॥ ೨೩ ॥

ಬಲಗೊಂಡು ಬಂದು ಮಂಟಪವನು ಒಳಪೊಕ್ಕು । ಕಳಹಂಸಗಮನೆಯರೊಲಿದು ॥
ತಳಿದರು ಐವಾಯಿಕುಂಭ ಪಾಲಿಕೆಯಾದಿ । ಪೊಳೆವ ಚಿನ್ನದ ಭಾಜನದೊಳು ॥ ೨೪ ॥

ಮರಳಿ ಮೂಸೂಳು ಬಸದಿಯನು ಬಲಗೊಂಡು । ತರಳೆಯರಿಗೆ ಬಾಗಿನವ ॥
ಎರಕದಿಂ ಕೊಡಿಸಿ ಚಿನ್ನದ ಸರಿಗೆಯ ಸೀರೆ । ಬುರುಸಾಲು ದೇವಾಂಗಾದಿ ॥ ೨೫ ॥

ಸೀರೆ ಕುಪ್ಪಸಗಳ ನೆರದಿತ್ತೊಂದೊಂದು । ತೋರಮುತ್ತಿನ ಸರವಿತ್ತು ॥
ಭೂರಮಣನು ಸಾಸಿರ ಸಾಸಿರ ಹೊನ್ನ । ಚಾರು ಭೂಷಣವಿತ್ತು ಕಳುಹೆ ॥ ೨೬ ॥

ನರನಾಥಚಂದ್ರಮ ಷಷ್ಠಿಯ ದಿನದೊಳ- । ಗರುಹನ ಗೃಹದೊಳುತ್ಸಹದಿ ॥
ದೊರೆದೊರೆಗಳು ಪ್ರಜೆ ಪರಿವಾರ ನೆರೆದಿರೆ । ಸಿರಿಯಿಂ ಧ್ವಜ ಪ್ರತಿಷ್ಠೆಯನು ॥ ೨೭ ॥

ಪೊಳೆವ ಬೆಳ್ಳಿ ಲೇಖನ ಸರ್ವಾಹ್ಣಯಕ್ಷನ । ವಿಲಸಿತ ರೂಪಾಂಕಿತದ ॥
ಬೆಳಗುವ ಪಂಚರತ್ನದ ಧ್ವಜಪಟಹವ । ನಲವಿನಿಂದೇರಿಸಿ ಮತ್ತೆ ॥ ೨೮ ॥

ಸುರಪತಿ ಮೊದಲಾದೆಂಟು ದಿಕ್ಕುಗಳೊಳು । ಮೆರೆವಷ್ಟದಿಕ್ಪಾಲಕರ ॥
ಬರೆಹದ ಪಟವನು ಮಂತ್ರಪೂರ್ವಕವಾಗಿ । ನೆರೆ ಜಾಣರು ಸ್ಥಾಪಿಸಿದರು ॥ ೨೯ ॥

ನವದೇವತೆ ಷೋಡಶ ವಿದ್ಯಾದೇವತೆ । ನಿವಹಧ್ವಜ ಪತಾಕೆಗಳ ॥
ಸವಿನಯದಿಂದ ಸ್ಥಾಪಿಸಿ ವಿದಿಕ್ಕಿಲಿ । ಅವರ ಪೂಜೆಯ ಮಾಡಿದನು ॥ ೩೦ ॥

ಮತ್ತುಳಿದೆಲ್ಲಾ ಕ್ರಿಯೆಗಳ ಜಿನಪನ । ಉತ್ತಮ ಗೃಹದೊಳು ನಡಿಸಿ ॥
ಬಿತ್ತಿದ ತನ್ನಯ ಕೀರ್ತಿ ಬೀಜವ ಚೆ- । ಲ್ವಿತ್ತು ಮೂಜಗದ ಭೂಮಿಯೊಳು ॥ ೩೧ ॥

ಏನ ಪೇಳುವೆ ಸಪ್ತಮಿಯ ದಿನದೊಳಾ । ಜೈನಾಲಯದ ಸಂಭ್ರಮವ ॥
ನಾನಾ ದೇಶದ ಭವ್ಯ ಪ್ರಜೆಗಳನು । ಸಾನಂದದೊಳು ನೆರೆದಿರ್ಪ ॥ ೩೨ ॥

ದಂದಣ ಧಿಮಿಧಿಮಿಧಿಮಿರೆಂದು ವಾದ್ಯವು । ಸಂದಣಿಸಿದವಾಗ ಪಲವು ॥
ಚಂದ್ರಜ್ಯೋತಿಗಳು ಪಲವು ಎತ್ತಿ ಪಿಡಿದವಾ- । ಗಂಧಕಾರವನು ನೂಂಕುತಲಿ ॥ ೩೩ ॥

ಉಡಿಸುತ್ತಿ ಜಯನೆಂಬ ಗುಡಿಯಧಿಕಾರಿಯು । ಪಿಡಿದು ಚಿನ್ನದ ಸೆಳಕೆಯನು ॥
ಬಿಡಿಸುತಲಾಗ ಬರಾಬರಿಯನು ಸರ್ವ- । ರೊಡಗೂಡಿ ನಿಂದುಕೊಂಡಿರಲು ॥ ೩೪ ॥

ಚಂದದಿಂದಂಗಿ ಪೀತಾಂಬರವನು ತೊಟ್ಟು । ಇಂದು ಮಂಡಲದ ಮಧ್ಯದೊಳು ॥
ಕುಂದಣಮಾಟದ ಸರ್ವಾಹ್ಣಯಕ್ಷನು । ನಿಂದನು ನಗೆಮೊಗದಿಂದ ॥ ೩೫ ॥

ಬಳಸಿರೆ ಬೆಳುಮುಗಿಲೊಡ್ಡು ತನ್ಮಧ್ಯದಿ । ಥಳಥಳಿಸುವ ಸೂರ್ಯನಂತೆ ॥
ಕಳಧೌತ ಸರ್ವಾಹ್ಣಯಕ್ಷನ ಬಿಂಬವು । ಜಳಜಾರಿ ನಡುವೆ ರಾಜಿಸಿತು ॥ ೩೬ ॥

ಪರಮಾನಂದ ಹೃದಯರಾಗಿ ಜನರೆಲ್ಲ । ಕರಗಳ ಜಯವೆಂದು ಮುಗಿಯೆ ॥
ಸರಪರನೆದ್ದವಾಗಾಕಾಶ ಬಾಣವು । ಸ್ವರದೋರಿದರು ಪಾಠಕರು ॥ ೩೭ ॥

ನಟಿಸುತಿರಲು ನರ್ತಕಿಯರು ನಲವಿಂದ । ಪೆಟಲು ಪಲವು ಸುಡುತಿರಲು ॥
ಪಟವೆತ್ತಿ ಪಿಡಿದಿರೆ ಗುಡಿಯ ಬಳಸಿ ಬಂದು । ನಟನೆಯಿಂದಿದಿರ ಬೀದಿಯೊಳು ॥ ೩೮ ॥

ಕಡು ಭಕ್ತಿಯಿಂದ ಪ್ರಭಾವನೆ ನಡೆಯಿಸಿ । ಗುಡಿಗೆ ಸಂಭ್ರಮದೊಳು ಬಂದು ॥
ಗಡಿಯಿಲ್ಲದ ಹೊನ್ನು ಸ್ವರ್ಣಾದಿ ದಾನವ । ಬಿಡದೆ ತಿದ್ದಿದರು ಯಾಚಕರ್ಗೆ ॥ ೩೯ ॥

ಮೊಳಗಿದವಷ್ಟಮಿ ದಿನದೊಳು ವಾದ್ಯವು । ಬೆಲೆವೆಣ್ಣುಗಳು ಸಂದಣಿಸೆ ॥
ಪಲವು ಸೂರಿಯಪಾನಗಳೆತ್ತಿ ಪಿಡಿದವು । ಬಲಮುರಿ ಶಂಖ ಪೂರೈಸಿದವು ॥ ೪೦ ॥

ಊರನಾಳುವ ಪಾರುಪತ್ಯೆಯಗಾರನು । ಸೇರುವೆಯಿಂದುಡೆ ಸುತ್ತಿ ॥
ಸೇರುವೆಗಾರರುಗಳು ಸಹ ಬಂದಾಗ । ಭೂರಿ ಸಂಭ್ರಮದಿ ನಿಂದಿರಲು ॥ ೪೧ ॥

ನವರತ್ನಖಚಿತದೊಂಭತ್ತು ಹೆಡೆಯನುಳ್ಳ । ಪವನಾಶನ ವಾಹನದಿ ॥
ರವಿಯಂತೆ ಬೆಳಗುವ ಸರ್ವಾಹ್ಣಯಕ್ಷನು । ಭುವನಾರಾಧ್ಯನು ಹೊರಟ ॥ ೪೨ ॥

ಹರಿಹರರುಗಳು ಸೇರಿದೊಡೆ ತೆಗೆದುದಿಲ್ಲ । ಶಿರದ ಭಾರವ ನೀನಾದೊಡೆಯು ॥
ಪರಿಹರಿಸೆಂದು ಪೊತ್ತಿಪ್ಪುದೋ ಎಂಬಂತೆ। ಉರಗವಾಹನ ರಾಜಿಸಿದುದು ॥ ೪೩ ॥

ಚೊಕ್ಕಮಲ್ಲಿಗೆಯ ಪೂವನು ಚಕ್ರಬಾಣವು । ಲೆಕ್ಕವಿಲ್ಲದೆ ಕೆದರುತ್ತ ॥
ದಿಕ್ಕು ದಿಕ್ಕುಗಳಲ್ಲಿ ಭೋರ್ಭೋರೆಯುತಲಿರೆ- । ಯಕ್ಕರಿಂದೊಂದು ಕೇರಿಯೊಳು ॥ ೪೪ ॥

ಕಡು ಬೆಡಗಿಂದ ಪ್ರಭಾವನೆಯನು ಮಾಡಿ । ಗುಡಿಗೆ ನಡೆದು ಬಂದಾ ದಿನದಿ ॥
ಮಡಿ ವಸ್ತ್ರ ತಾಂಬೂಲ ಸ್ವರ್ಣಾದಿ ದಾನವ। ಮಡಿಲು ತುಂಬಿತ್ತನು ಬುಧರ್ಗೆ ॥ ೪೫ ॥

ಹರಿವಾಹನ ನವಮಿಯ ದಿನದೊಳು ಹಂಸೆ। ಮೆರೆವ ವಾಹನ ದಶಮಿಯೊಳು ॥
ತುರಗವಾಹನಮೇಕಾದಶ ದಿನದೊಳು । ಕರಿವಾಹನ ದ್ವಾದಶಿಯೊಳು ॥ ೪೬ ॥

ನಡೆಯಲಿಂತಪ್ಪುತ್ಸಹ ತ್ರಯೋದಶಿಯೊಳು । ತುಡುಮು ಬಾರುಗು ದಸಿದೋರಿ ॥
ಗಿಡಿಬಿಡಿಗಳು ಢಮುರಿನೆ ಸರ್ವ ಜನಗಳು । ಅಡಿಯಿಟ್ಟರು ನೋಡುವುದಕೆ ॥ ೪೭ ॥

ಹೂವಿನ ಚಪ್ಪರಗೈದಿಂದು ನಾವೆಲ್ಲ । ದೇವನ ಗೃಹಕ್ಕೈದಿ ನೋಳ್ಪ ॥
ನೀವು ಬನ್ನಿರಿ ತಾವು ಬನ್ನಿಯೆಂಬ ಧ್ವನಿ । ಕೀವಿದುವಾ ಪಟ್ಟಣದೊಳು ॥ ೪೮ ॥

ಬಲು ಸಂಭ್ರಮದೊಳು ವಜ್ರಾಯುಧನೆಂಬ । ದಳವಾಯಿ ಗುರಿಕಾರರುಗಳು ॥
ಬಳಸಿ ಬರಲು ಜಿನಮಂದಿರಕ್ಕೈತಂದು । ತುಳಿಲುಗೈದಾ ಜಿನಪತಿಗೆ ॥ ೪೯ ॥

ತಡವೇತಕೆ ಸ್ವಾಮಿ ಬಿಜಮಾಡಲಿಯೆಂದು। ನುಡಿಯಲು ಸವಿವಾತಿನಿಂದ ॥
ತೊಡರಿಸಿಯಲ್ಲಲ್ಲಿಯರಳಸರಂಗಳ । ನಿಡಿದಾದ ದುಂಡುದುಂಡೆಯೊಳು ॥ ೫೦ ॥

ವಿರಚಿಸಿ ಕಂಬವ ಪಚ್ಚೆಯ ತೆನೆಯಿಂದ। ತುರುಹಿದ ಲೋವೆಯಗೈಸಿ ॥
ಸಿರಿಸದ ಪೂವಿನ ಶರಧಿಗೋಡೆಯ ಮಾಡಿ । ಕರವೀರ ಬಂದೂಕಶೋಕೆ ॥ ೫೧ ॥

ಅರಸಿನ ಗೋರಟೆ ಕೆಂಜಾಜಿಯದರ್ಗಂತಿ । ಕರಿಯ ಗೋರಟೆ ಸರದಿಂದ ॥
ಕರ ಕುಶಲದ ನೆಲೆನೆಲೆಗಳ ಪುಟ್ಟಿಸಿ। ನೆರೆ ಜಾಣರು ಮಂಟಪದ ॥ ೫೨ ॥

ತುದಿಯೊಳು ಕೆಂಡಸಂಪಗೆಯ ಮೊಗ್ಗೆಗಳಿಂದ। ಗದಗುಟ್ಟುವ ಕಳಸಗಳ ॥
ಹದಗೊಳಿಸಿಯಷ್ಟಗೊಳದಾಕಾರದಿ । ಪದುಮ ಮುಂತಾದ ಪೂವಿನೊಳು ॥ ೫೩ ॥

ವಿರಚಿಸಿಯದರ ನಡುವೆ ಸಾಸಿರೆಸಳೊಳು । ಪರಿಮಳಮಯದಾವರೆಯ ॥
ಕರ ಚೆಲುವಿಂದಳವಡಿಸೆ ಅದರ ಮೇಲೆ। ಮೆರುಗುವ ಸರ್ವಾಹ್ಣಯಕ್ಷನನು ॥ ೫೪ ॥

ಬಿಜಮಾಡಿಸಲು ದಂಡೇಶ ಮುಂತಾದರು । ಭಜಿಸುತ ಸಾಷ್ಟಾಂಗವೆರಗಿ ॥
ನಿಜ ಭಕ್ತಿಯೊಳು ಕರಯುಗವ ಮುಗಿದುಕೊಂಡು । ವೃಜಿನಾರಿ ಜಯವೆನುತಿರಲು ॥

ಪಡಿಯರರುಗಳು ಪರಬರು ಬರಾಬರಿ । ಬಿಡಿಸುತಲಿರಲಷ್ಟರೊಳಗೆ ॥
ಗುಡಿಯಿಂದ ದೇವನು ತೆರಳೆ, ಬಿರುಸುಗಳ । ಗಡಿಯಿಲ್ಲದೆ ಸುಟ್ಟರಾಗ ॥ ೫೬ ॥

ಅರಲಸರದ ಪರಿಮಳ ಪುರವರದೊಳು । ಪರಿವ್ಯಾಪಿಸಿಕೊಂಡಿರಲು ॥
ಸುರತರು ಪೂವಾಂತು ಪುರದೊಳು ಚರಿಪಂತೆ । ಮೆರೆದುದು ಆ ಪುಷ್ಪಯಾನ ॥ ೫೭ ॥

ವಾರಾಂಗನೆಯರು ನಟಿಸುವರಲ್ಲಲ್ಲಿ । ಕೇರಿ ಕೇರಿಗಳೊಳು ಬಿಡದೆ ॥
ಆರತಿಗಳ ಕಳುಹಿಸುವರು ಭವ್ಯರು । ನೇರಾಣಿಗೆಲಸದಟ್ಟೆಯೊಳು ॥ ೫೮ ॥

ಈ ರೀತಿಯಲಿ ಪಟ್ಟಣದೊಳು ಪ್ರಭಾವನೆ । ಚಾರು ವೈಭವದೊಳು ಬಂದು ॥
ಸಾರಿತು ಜಿನನಿಳಯಕೆ ಪ್ರಜೆ ತಂತಮ್ಮಾ- । ಗಾರಕೆ ತೆರಳಿತು ಮುದದಿ ॥ ೫೯ ॥

ಮರುದಿನ ಹರಿಬಲ ಮೊದಲಾದ ವಿದ್ಯಾ- । ಧರರು ಕುಟುಂಬವು ವೆರಸು ॥
ದೊರೆರನ್ನ ಮಾಡಿದುತ್ಸಹಕೆ ಸಂಭ್ರಮದಿಂದ । ಮೊರೆವ ವಾದ್ಯವು ಬರುತಿರಲು ॥ ೬೦ ॥

ಹರಿಚಂದ್ರ ಕುವರನು ಇದಿರ್ಗೊಂಡು ಕರೆತಂದು । ಪುರವ ಪೊಗಿಸಿಯವರವರ ॥
ತರತರವರಿದು ಬಿಡಾರಗಳನು ಮನ- । ದೆರಕದಿಂ ಮಾಡಿಸಲತ್ತ ॥ ೬೧ ॥

ನಂದಭೂಪತಿ ಮೊದಲಾದ ಭೂಚರರೆಲ್ಲಾ- । ನಂದದಿಂ ಬಲವನು ಗೂಡಿ ॥
ಬಂದರೆಂಬುದ ಕೇಳಿ ಧರ್ಮಚಂದಿರನೆಂಬ । ನಂದನನಿದಿರ್ಗೊಂಡು ಬರಲು ॥ ೬೨ ॥

ಪೊಡವಿಪನನುಮತಿಯಿಂದ ವಜ್ರಾಯುಧ । ಪಡಿ ಬಿಡಾರವನವರವರ್ಗೆ ॥
ಸಡಗರದಿಂದ ಮಾಡಿಸಿದನದೇನೆಂಬೆ । ಪೊಡವಿಯೊಳಚ್ಚರಿಯಾಗಿ ॥ ೬೩ ॥

ಸುರ ಸಿಂಹಧ್ವಜನಮಿತತೇಜರೆಂಬರ । ಹರಿವಿಷ್ಟರ ನಡು ನಡುಗೆ ॥
ತುರಿಹದಿಂದಲುಗುವ ಕಾರಣಮೇನೆಂದು । ಸ್ಮರಣೆ ಮಾತ್ರದೊಳಾಗ ತಿಳಿದು ॥ ೬೪ ॥

ಜ್ಞಾನೇಂದು ಕುವರನು ರತ್ನಪುರದಲಿ ಸು- । ಜ್ಞಾನದಿ ಜಿನಪನ ಮುಂದೆ ॥
ನಾನಾ ದೇಶದ ದೊರೆ ಪ್ರಜೆಗಳೆಲ್ಲರ ಕೂಡಿ । ತಾನಡಯಿಪನದರಿಂದ ॥ ೬೫ ॥

ನಡುಗಿತು ನಮ್ಮ ಸಿಂಹಾಸನವೆಂದಾಗ । ಬಿಡುಗಂಗಳೆರ ಕೂಡಿಕೊಂಡು ॥
ಅಡರಿ ರತ್ನಾಂಕಿತ ಚಾರು ವಿಮಾನವ । ಪೊಡವಿಯಾಣ್ಮನ ಪುರಕಾಗಿ ॥ ೬೬ ॥

ಬರುತ ದಿವ್ಯಾಂಗದ ಪರಿಮಳವನು ದಿ- । ಗ್ಭರಿತವ ಮಾಡಿ ಪಟ್ಟಣಕೆ ॥
ಸುರರು ಬರಲು ಜ್ಞಾನಚಂದ್ರಮುನಿದಿರೆದ್ದು । ಎರಕದಿಂದಮರ್ದಪ್ಪಿಕೊಂಡು ॥ ೬೭ ॥

ಕರವ ಪಿಡಿದುಕೊಂಡು ನಡೆತಂದು ನವರತ್ನ । ಹರಿವಿಷ್ಟರದೊಳು ಕುಳಿತು ॥
ವರ ಕ್ಷೇಮ ಮುಂತಾದುವ ಬೆಸಗೊಂಡಾ- । ಗರಮನೆಗಮರೀರ ಕಳುಹೆ ॥ ೬೮ ॥

ಅನುಮತಿ ಮೊದಲಾದ ದೇವಿಯರಿದಿರ್ವಂ- । ದನಿಮಿಷೆಯರನಪ್ಪಿಕೊಂಡು ॥
ವಿನಯದಿಂದೊಡಗೊಂಡು ತನ್ನರಮನೆಗಾ । ವನಿತಾಮಣಿಗಳು ಬಂದು ॥ ೬೯ ॥

ಅವರವರಿಗೆ ತಕ್ಕ ಗದ್ದುರ್ಗೆಗಳ ಕೊಟ್ಟು । ಯುವತಿಯರೆಲ್ಲರು ಕುಳಿರೆ ॥
ದಿವಿಜೇರ ಮೊಗ ನೋಡುತಯನುಮತಿಯಿಂತು । ಸವಿ ನುಡಿ ನುಡಿಗಳ ನಗುತ ॥ ೭೦ ॥

ಉಂಬವರಲ್ಲುಡುವರಲ್ಲ ಮಿಯಲಿಲ್ಲ । ತಾಂಬೂಲವಿಲ್ಲಕಟಕಟ ! ॥
ಡಂಬಕದತ್ತೆ ಸೊಸೆಯರ ಪಡೆದೆವಾ- । ವೆಂಬ ವಚನವನು ಕೇಳಿ ॥ ೭೧ ॥

ನಸುನಗುತಮರಿಯರಿಸಳುಗಣ್ಣುಗಳನು । ಪಸರಿಸುತಲಿ ಒಲವಿಂದ ॥
ಬಿಸರುಹವದನೆಯ ಜಾಣತನಕೆ ಮೆಚ್ಚಿ । ಎಸಕದಿಂದಿಂತು ನುಡಿದರು ॥ ೭೨ ॥

ನಿಮ್ಮಂತೆ ಕುಳಿತು ಸಲ್ಲನ ಪಂಕ್ತಿಯೊಳಾವು । ಸುಮ್ಮಾನದಿಂದುಂಬ ಭಾಗ್ಯ ॥
ನಮ್ಮ ಸುರರ ಜಾತಿ ಪಡೆದಿಲ್ಲ ಜಿನ ಜಿನ ! । ನಿಮ್ಮಂತೆ ನೋಂತವರಾರೋ ? ॥ ೭೩ ॥

ಅತ್ತೆ ಸೊಸೆಯರ ಕೈಯಿಂದಿಕ್ಕಿಸಿಕೊಂಡು । ತುತ್ತನೆತ್ತುವ ಪುಣ್ಯವೆಮಗೆ ॥
ಎತ್ತಣದೆಂದು ದೇವಿಯರು ಸರಸವಾತ । ಬಿತ್ತರಿಸುತ ಕುಳ್ಳಿರಲು ॥ ೭೪ ॥

ಇನನಸ್ತಂಗತನಾಗೆ ಸಮಯದೊಳು । ಜಿನಗೇಹದೊಳು ಭೇರಿ ಶಂಖ ॥
ದನಿದೋರಿದವು ಭವ್ಯರ ಸಂದಣಿಯಲ್ಲಿ । ಘನವಾಯ್ತು ಪುಣ್ಯತಿಥಿಯೊಳು ॥ ೭೫ ॥

ಜಿನಪತಿ ದಕ್ಷಿಣ ಭಾಗದೊಳೊಪ್ಪುವ । ಕನಕರತ್ನಾಂಕಿತವಾದ ॥
ಮಿನುಗುವ ಸಾಸಿರ ಕಂಭ ಮಂಟಪವನಾ- । ಗನುವೆತ್ತು ಸಿಂಗರಿಸಿದರು ॥ ೭೬ ॥

ಸುರರೀರ್ವರು ಎಡಬಲದೊಳು ಬರುತಿರೆ । ದೊರೆದೊರೆಗಳು ಸುತ್ತ ಬರಲು ॥
ನರನಾಥಚಂದ್ರಮ ಬೆಡಗು ಬಿಂಕದಿ ಬಂದು । ಅರುಹನ ಗೃಹದೊಳಪೊಕ್ಕು ॥ ೭೭ ॥

ಉಡೆ ಸುತ್ತಿ ಕರಯುಗಲವ ಭಾಳಕೆ ತಂದು । ಮೃಡರಿಪುರಿಪುವಿಗೆ ನಮಿಸಿ ॥
ಬೆಡಗಿಂದುತ್ಸಹ ಮಂಟಪಕೈತಂದು । ಕಡೆಯಾಣಿ ಬೊಂಬೆಯಂದದೊಳು ॥ ೭೮ ॥

ಮುತ್ತಿನ ಗದ್ದುಗೆಯೊಳಗಮರರಕೂಡಿ । ಉತ್ತಮ ನಾಯಕ ಕುಳಿರೆ ॥
ಇತ್ತರದೊಳು ದೊರೆದೊರೆಗಳು ಕುಳಿತರು । ನಿತ್ತರು ಪಟುಭಟರುಗಳು ॥ ೭೯ ॥

ಅನುಮತಿದೇವಿಯಮರಿಯರನೊಡಗೊಂಡು । ವನಿತಾಮಣಿಗಳೊಂದಾಗಿ ॥
ಅನುರಾಗದಿಂದುತ್ಸಾಹ ಮಂಟಪಕೈದಿ । ಮಿನುಗುವ ತೆರೆಯ ಮರೆಯೊಳು ॥ ೮೦ ॥

ಕುಳ್ಳಿರಲು ಕಾಂಚನಮಯ ಜಿನಬಿಂಬವ । ಮೊಳಗುವ ವಾದ್ಯಘೋಷದೊಳು ॥
ನಲವಿಂದ ಬಿಜಮಾಡಿಸಿ ತರುತಿರಲಾಗ । ಇಳೆಯಾಣ್ಮ ಮೊದಲಾದರೆಲ್ಲ ॥ ೮೧ ॥

ಹರುಷದಿ ಮೂಲೋಕದೊಡೆಯ ! ಜಯತು ಜಯ । ಪರಮ ಬಂಧುವೆ ಜಯವೆಂದು ॥
ಕರಗಳ ನೊಸಲಿಗೆ ತಂದು ದಿಗಿಲನಾ- । ಗಿರದೆದ್ದು ನಿಂದರೇನೆಂಬೆ ॥ ೮೨ ॥

ಮುತ್ತುರತ್ನಗಳಿಂದ ಕೀಲಿಸಿ ರಂಜಿಪ। ಉತ್ತಮ ತೂಗುಯ್ಯಾಲೆಗಳು ॥
ಚಿತ್ತಜವೈರಿಯನದರುಪರಿಮದೊಳ-। ಗಳ್ತಿಯಿಂ ಬಿಜಮಾಡಿಸಲು ॥ ೮೩ ॥

ಪಿಡಿದೆತ್ತುವಾಗ ಪಲವು ಚಂದ್ರಜ್ಯೋತಿ। ಉಡುಪತಿ ಬೆಳಗ ಜರೆವುತ ॥
ಗಡಿಯಿಲ್ಲದ ವಾದ್ಯಂಗಳು ಮೊರೆದವು। ಪೊಡವಿ ತಲ್ಲಣಿವಂದದೊಳು ॥ ೮೪ ॥

ಇತ್ತರದೊಳು ನಿಂದು ದೇವಾಂಗನೆಯರು। ಬಿತ್ತರದಿಂ ಚೌಷಷ್ಠಿ ॥
ಉತ್ತಮ ಚಮರವ ಕ್ಷೀರಾಬ್ಧಿ ತೆರೆಯನು। ಒತ್ತುವಂದದಿ ಢಾಳಿಪರು ॥ ೮೫ ॥

ವೀಣೆಗಾರನು ಬಂದು ಜಿನರಭಿಮುಖವೊ-। ಳ್ಕಲ್ಯಾಣಿರಾಗದಿ ನುತಿಯ ॥
ಜಾಣಿಂದ ಕೇಳಿಸಿದನು ಸಭೆಯೆಲ್ಲವು। ಗೋಣೆತ್ತಿ ಲಾಲಿಸುತಿರಲು ॥ ೮೬ ॥

ಮುಖವೀಣೆಗಾರನು ಜಿನರಾಜನ ಸ-। ನ್ಮುಖದೊಳು ನಿಂದೊಲವಿನೊಳು ॥
ಮುಖವೈರಿರಾಗದೊಳಾಳಾಪಿಸಿದನಾ-। ಗಖಿಳರು ಮೆಚ್ಚುವಂದದೊಳು ॥ ೮೭ ॥

ನವರತ್ನಖಚಿತವಾಗಿರ್ದ ಕನ್ನಡಿಯನು। ಭವದೂರನ ಸನ್ಮುಖದೊಳು ॥
ಪವಳದುಟಿಯ ವಿಲಾಸಿನಿಯೋರ್ವಳು। ಸವಿಲಾಸದಿಂ ತೋರಿಸಿದಳು ॥ ೮೮ ॥

ಬಿಜಣಿಗೆಯನೋರ್ವ ಸರ್ವವಲ್ಲಭೆಯಾಂತು। ಸಜ್ಜಾಗಿ ಜಿನಪತಿ ಮುಂದೆ ॥
ಪಜ್ಜಳಿಸುತಿರೆ ಬಿಂಕದಿಂ ಢಾಳಿಸೆ। ಮಜ್ಝು! ಬಾಪುರೆ! ಎನೆ ಸಭೆಯು ॥ ೮೯ ॥

ಮೌರಿಗಾರನು ಬಂದು ಇದಿರೊಳು ನಿಂದಾಗ। ಸೌರಾಷ್ಟ್ರರಾಗವ ಬೆಡಗಿಂ ॥
ಸೂರೆಮಾಡುತ ದೊರೆದೊರೆಗಳ ಚಿತ್ತವ। ಸೇರುವೆಯಿಂದಾಳಾಪಿಸಿದ ॥ ೯೦ ॥

ಪ್ರಥಮಾನುಯೋಗವೇದಿಯು ಬಂದು ನಿಂದಾಗ। ಪೃಥುಕರ್ಮಗಳ ಭವಾವಳಿಯ ॥
ಕಥನವ ತಿಳಿದು ಮೋಕ್ಷವಸಿತ್ತೆಂದಘ-। ಮಥನನ ಕೊಂಡಾಡಿದನು ॥ ೯೧ ॥

ಕರುಣಾನುಯೋಗವೇದಿಯು ಇದಿರೊಳು ನಿಂದು। ಧರೆಯಾದಿ ಮೂಜಗದಿರವ ॥
ದರುಶನಜ್ಞಾನದಿಂ ತಿಳಿದು ಭವ್ಯರಿಗೆ ನೀ-। ನೊರೆದೆಯೆಂದಾಗ ನುತಿಸಿದ ॥ ೯೨ ॥

ಚರಣಾನುಯೋಗವೇದಿಯು ಬಂದು ವ್ಯಸನದಿ। ಚರಿಸುವ ಸಕಲ ಜನರನು ॥
ಅರುಹ! ನೀ ತಿಳುಪಿ ಚಾರಿತ್ರದಿ ನಡೆಸಿದೆ। ಕರುಣಾಳು! ಜಯವೆಂದು ಪೊಗಳ್ದ ॥ ೯೩ ॥

ದ್ರವ್ಯಾನುಯೋಗವೇದಿಯು ಬಂದು ನಿಂದಾಗ। ಸೇವ್ಯವಾದೇಳು ತತ್ವವನು ॥
ಭವ್ಯಾಳಿಗೆ ಪೇಳ್ದವ್ಯಯ ಸುಖವಿತ್ತೆ। ದಿವ್ಯಭಾಷಾ! ಎಂದು ಪೊಗಳ್ದ ॥ ೯೪ ॥

ಇವು ಮೊದಲಾದ ದ್ವಾಸಪ್ತತಿವಿನಿಯೋಗ। ಭವದೂರನ ಮುಂದೆ ನಡೆಯೆ ॥
ದಿವಿಜಾಂಗನೆಯರು ಹೊನ್ನೇಣ ಪಿಡಿದಾಗ। ನವಿಲುಯ್ಯಲು ತೂಗಿದರು ॥ ೯೫ ॥

ಮಾಳವ ಭೈರವಿ ಶ್ರೀರಾಗ ಧನ್ಯಾಸಿ। ಸಾಳಂಗರಾಗವನೆತ್ತಿ ॥
ಆಳಾಪಿಸಿದರು ಜಿನನಂಕಮಾಲೆಯ। ಬೇಳುವೆಗೊಂಬಂತೆ ಸಭೆಯು ॥ ೯೬ ॥

ಸುರರಾಜ ನರರಾಜ ಉರಗರಾಜರು ಬಂದು । ಎರಗಲೊಪ್ಪುವ ಪಾದಾಂಬೋಜ ॥
ವರ ಮೋಕ್ಷರಮೆಗೆ ಮನೋಜ ಶ್ರೀಜಿನನೆಂದು । ಸ್ವರವೆತ್ತುಯ್ಯಲ ತೂಗಿದರು ॥ ೯೭ ॥

ಧರೆಯೊಳು ನಿನ್ನಂತೆ ಕರುಣಾಳುಗಳಾರು । ಸ್ಮರಣೆ ಮಾತ್ರದಿ ಸ್ವರ್ಮುಕ್ತಿಯನು ॥
ಭರದಿತ್ತ ಭವ್ಯರ್ಗೆ ನೀನೆ ದೇವನು ಎಂ- । ದೊರೆವುತುಯ್ಯಲ ತೂಗಿದರು ॥ ೯೮ ॥

ಉಡದೆ ತೊಡದೆ ಚೆನ್ನಿಗನೆನ್ನದೆ ಜ್ಞಾನಿ। ಮಡದಿಯರಿಲ್ಲದೆ ಸುಖಿಯು ॥
ಕಡಿದು ಸಾಧಿಸದೆ ಮೂಲೋಕಕ್ಕೊಡೆಯನೆಂದು । ಬಿಡುಗಣ್ಣೆಯರು ತೂಗಿದರು ॥ ೯೯ ॥

ಜಾತಿಜರಾಮರಣಗಳೆಂಬ ತ್ರಿಪುರವ- । ನಾತ ಸುಟ್ಟುದು ಪುಸಿ ಜಗಕೆ ॥
ಈತನೆ ನಿಶ್ಚಯದಿಂ ಸುಟ್ಟಾತನು ಎಂದು । ಖ್ಯಾತಿಸುತುಯ್ಯಲೊತ್ತಿದರು ॥ ೧೦೦ ॥

ನಿನ್ನ ನುಡಿಯೆ ತತ್ವ, ನಿನ್ನ ನಡೆಯೆ ವೃತ್ತ । ನಿನ್ನ ಮಾರ್ಗವೆ ಮೋಕ್ಷಮಾರ್ಗ ॥
ನಿನ್ನ ಧರ್ಮವೆ ಧರ್ಮವನ್ಯಥಾ ಇಲ್ಲೆಂದು । ಚೆನ್ನೆಯರೊಲಿದು ತೂಗಿದರು ॥ ೧೦೧ ॥

ಜಿನಪೂಜೆಯ ಮಾಡಿ ಗಂಧಶೇಷೆಯ ತಂದು । ಮುನಿನಿಕರಕೆ ದೇವರ್ಕಳಿಗೆ ॥
ಜನಪ ಮುಂತಾದರ್ಗೆ ಕೊಟ್ಟರಾ ವೇಳೆಯೊಳ್ । ದನಿದೋರಿದವು ವಾದ್ಯಗಳು ॥ ೧೦೨ ॥

ಅರುಹನ ಬೀಳ್ಕೊಂಡು ಸುರರೊಡಗೊಂಡಾ। ದೊರೆರನ್ನರಮನೆಗಾಗಿ ॥
ತೆರಳೈದಿ ಸುಖಸಂಕಥನದೊಳಿರುತಿರೆ। ಇರುಳು ಕಳಿದು ಪೂರ್ಣಮಿಯೊಳು ॥ ೧೦೩ ॥

ಪೃಥುವೀಶ್ವರನು ಮಂತ್ರಿಯ ಕರೆಯಿಸಿ ಎಂದು । ರಥಗಳ ಸಿಂಗರಿಸೆನಲು ॥
ಶಿಥಿಲಕರ್ಮಿಗೆ ಕೈಯಮುಗಿದಾ ಮಂತ್ರೀಶ- । ನತಿಶಯದಿಂ ನಡೆತಂದು ॥ ೧೦೪ ॥

ಸುರಶಿಲ್ಪಿಗಳನು ಜರೆವ ವಿದ್ಯಾಧರ। ವರ ಶಿಲ್ಪಿಗಳನಾಗ ಕರೆಸಿ ॥
ವಿರಚಿಸುತೇರುಗಳನು ನೀನೆಂದೆನೆ। ಕರಕುಶಲದಿ ಮಾಳ್ದನೆಂದು ॥ ೧೦೫ ॥

ಇನಬಿಂಬವ ತಂದಳವಡಿಸಿದವ್ರೊಲು । ಕನಕನಿರ್ಮಿತವಾದಾರಾರು ॥
ಮಿನುಗುವ ಗಾಲಿಗಳನು ಸೇರಿಸಿ ಮತ್ತೆ- । ಯನುಮಾಡಿದರು ವಜ್ರಮಯದ ॥ ೧೦೬ ॥

ಅಚ್ಚುಗಳನು ತಂದು ವಿಜಯಾರ್ಧಗಿರಿಯನು । ಬೆಚ್ಚರು ಎಂಬಂದದೊಳು ॥
ಅಚ್ಚರಿವಡುವಂದದಿಯಳವಡಿಸಿದ- । ರಚ್ಚುಗಳನು ಏನೆಂಬೆ ॥ ೧೦೭ ॥

ಅದರ ಮೇಲ್ಭಾಗವು ಪಚ್ಚೆರತ್ನಗಳಿಂದ। ಹುದುಗಿದ ಭೂತಪರಡೆಯ ॥
ತ್ರಿದಶ ಶಿಲ್ಪಿಗಳು ಮೆಚ್ಚುತಲಿರೆ ಚೆಲ್ವಿಂದ । ಹದಗೊಳಿಸಿದರು ಜಾಣ್ಮೆಯೊಳು ॥ ೧೦೮ ॥

ಅಸುಗೂಡಿ ಬೀದಿಯೊಳಗೆ ಬರುತಿರ್ದವೆಂ- । ಬೆಸಕದಿಂ ನೀಲಬೆಳ್ಳಿಗಳಿಂ ॥
ಹಸನುಗೈದಾನೆಯ ಶಾಲೆಗಳಿರ್ದವು । ಮುಸುಕಿದಾಭರಣವ ಕೂಡಿ ॥ ೧೦೯ ॥

ಗಗನಕೆ ನೆಗೆವುತಿರ್ದವೋ ಎನೆ ಕಾಲನು । ನೆಗಪಿ ರಾವುತರುಗಳ್ಕೂಡಿ ॥
ಬಗೆ ಬಗೆ ರತ್ನಾಂಕಿತ ವಾಜಿಗಳಿಂದ। ಸೊಗಯಿಪ ಸಾಲುವೊಪ್ಪಿಹವು ॥ ೧೧೦ ॥

ನವನೂತನದಿಂದ ವಿರಚಿಸಿ ಮೋಹಿಪ। ಪವಳದ ಭೂತಪಂಕ್ತಿಗಳು ॥
ಅವರ ಮೇಲ್ಭಾಗದಿಂ ರಂಗುಥಾಳಿಸುತಾಗ। ತವೆ ಸೊಗಸಿದವೇನೆಂಬೆ ॥ ೧೧೧ ॥

ಹೊನ್ನಪುತ್ಥಳಿಗಳು ಜೀವಗೂಡಿರುತಿರ್ದ। ಕನ್ನಿಕೆಯರಸು ಜರೆವುತ್ತ ॥
ಉನ್ನತ ಕುಚಮುಡಿ ಜಡೆಗಳ ಬಿಡದಾಂತು। ಚೆನ್ನಾಗೊಪ್ಪುತಲಿಹರು ॥ ೧೧೨ ॥

ಉರಗಪಂಕ್ತಿಯು ಕಳಹಂಸೆಯ ಶ್ರೇಣಿಯು। ಹರಿಣರಾಜಿಯು ಮುಂತಾದ ॥
ವರಸಾಲು ತರತರಗೊಂಡು ಚಿತ್ತವನಾಗ। ಸೆರೆಗೈಯುತಿಹವು ನೋಡುವರ ॥ ೧೧೩ ॥

ಪಾರಿವಾಣದ ಹಕ್ಕಿಗಳ ಮಾಟದೊಳಿರ್ದ। ನೀಲರತ್ನಗಳ ಕಪೋತ ॥
ಮೇಲುಕಟ್ಟುಗಳನು ರಚನೆ ಮಾಡಿದರದು। ಸೋಲಿಸುತಿಹುದು ಸೊಬಗನು ॥ ೧೧೪ ॥

ಕಾಸೆವೆರಸಿ ನರ್ತಿಪ ಲಾಗುದೋರುವ। ವೇಶಿರ ರೂಪಾಂಕಿತದ ॥
ದೋಷವು ಪೊರ್ದದ ಪಲವು ನಾಟಕಕಟ್ಟೆ। ಸೂಸುತಿಹುದು ಕರಣವನು ॥ ೧೧೫ ॥

ಸಿಸ್ತಾಗಿ ವಿರಚಿಸಿ ಬೆಳ್ಳಿಯ ಮಾಟದ। ವಿಸ್ತಾರ ಚಪ್ಪರವ ಮೇಲೆ ॥
ಮಸ್ತಕದೊಳು ಮುತ್ತಿನ ಭದ್ರಪೀಠವ। ಮುಸ್ತೈದೆಯನು ಮಾಡಿದರು ॥ ೧೧೬ ॥

ಮಾಣಿಕ್ಯರತ್ನದಿ ಸಾಸಿರ ಎಸಳ್ಗಳ। ಶೋಣಾಂಬುಜದಾಕಾರದೊಳು ॥
ಜಾಣಿಂದ ದೇವಾಸನವ ರಚಿಸಿದರು। ತ್ರಾಣಿಗಳಾರವನಂತೆ ॥ ೧೧೭ ॥

ಮುತ್ತಿನ ಬಾಗಿಲು ನಾಲ್ಕುದಿಕ್ಕುಗಳೊಳು। ಬಿತ್ತರದಿಂದನುಗೈದು ॥
ಮತ್ತೆ ಅದರ ಮೇಲೆ ನೆಲೆನೆಲೆಗಳನಾ-। ಗಳ್ತಿಯಿಂ ವಿರಚನೆ ಮಾಡಿ ॥ ೧೧೮ ॥

ಕಡೆಯಾಣಿಚಿನ್ನದ ಕಳಸಗಳೈದನು। ಕಡು ಬೆಡಗಿಂದಳವಡಿಸಿ ॥
ನಿಡಿದಾದ ಚಿನ್ನ-ಬೆಳ್ಳಿಯ ದುಂಡುದಂಡೆಯ। ತೊಡರಿಸಿದರು ಅಲ್ಲಲ್ಲಿ ॥ ೧೧೯ ॥

ಕರಿಯು ಬೆನ್ನೊಳು ಕಾಲುಗಳನೆರಡನೂರಿ। ಕರವನು ಬಾಯೊಳು ಕಚ್ಚಿ ॥
ಇರುವ ಸಿಂಹಗಳ ರೂಹನು ನಾಲ್ಕುದಿಕ್ಕಿಲಿ। ವಿರಚಿಸಿದರು ಜಾಣ್ಮೆಯೊಳು ॥ ೧೨೦ ॥

ಉರಿಗೆಜ್ಜೆ ಮಣಿಘಂಟೆ ಪಂಚಾಂಗರಾಯನ। ತರತರದೊಳಗಳವಡಿಸಿ ॥
ಬುರುಸಾಲ ಚಂದಿರಗಾವಿ ಪತಾಕೆಯ। ಕರಕುಶಲದಿ ಅಳವಡಿಸಿ ॥ ೧೨೧ ॥

ನವರತ್ನದಿಂದ ವಿರಚನೆಯ ಮಾಡಿದ। ರವಿಯಂತೆ ಪೊಳೆವ ಬುರುಡೆಯ ॥
ನವನೂತನದ ಮಾಲೆಗಳನು ರಥದೊಳು। ಪವಣಿಸಿದರು ನಲವಿಂದ ॥ ೧೨೨ ॥

ದೂರದೂರದೊಳೀತಕೆ ಇರಬೇಕೆಂದು। ಮೇರುಪಂಚಕವೈತಂದು ॥
ಸಾರಿನಿಂದವೊ ಎನೆ ಸಿಂಗರದೊಳಗೂಡಿ। ತೇರುಗಳಿರ್ದವೇನೆಂಬೆ ॥ ೧೨೩ ॥

ತಿರಿಯಂಚಗತಿಯನು ಕೆಡಿಸುವೆನಾನೆಂದು। ಸುರತರುಪಂಚಕ ತಳಿರ ॥
ಧರಿಸಿಲ್ಲಿ ಬಂದು ನಿಂದವೊ ಎಂಬಂದದಿ। ಮೆರೆದವು ತೇರುಗಳೈದು ॥ ೧೨೪ ॥

ಇಂತು ಸಿಂಗರಗೈದು ಬಸದಿಯ ಇದಿರೊಳು । ನಿಂತವು ತೇರುಗಳೈದು ॥
ಅಂತವಿಲ್ಲದ ವಾದ್ಯಗಳು ಮೊರೆದವು ದಿ- । ಗಂತವು ತಲ್ಲಣಿಪಂತೆ ॥ ೧೨೫ ॥

ಒಸಗೆ ಮರುಳುಗೊಂಡಂತೆ ಪಟ್ಟಣದೊಳು । ಪಸರಿಸಿತೆಲ್ಲಿ ಸಂಭ್ರಮವು ॥
ಪಸದನದಿಂದಲಂಕರಿಸಿ ಪ್ರಜೆಗಳೆಲ್ಲ । ಬಸದಿ ಬಾಗಿಲಿಗೈದಿದರು ॥ ೧೨೬ ॥

ದೊರೆದೊರೆಗಳು ಸುತ್ತಿ ಬರೆ ಸುರರೊಡಗೂಡಿ । ಹರಿಚಂದ್ರಾದಿ ಕುವರರು ॥
ಬರುತಿರೆ ಎಡಬಲದೊಳು ಜ್ಞಾನಚಂದ್ರಮು- । ನರುಹನ ಗೃಹಕ್ಕೈತಂದು ॥ ೧೨೭ ॥

ಜಿನರಾಜಮಲ್ಲಿಗೆ ವಂದಿಸಿ ಕರಗಳ । ಮುನಿಗಳ್ಗೆ ಮುಗಿದು ನಿಂದಿರಲು ॥
ಅನಿತರೊಳಗೆಯರ್ಚಕರಧಿವಾಸನೆ- । ಯನು ಮಾಡಿ ಸುಪ್ರಶಸ್ತಿಯನು ॥ ೧೨೮ ॥

ಹೇಳಿ ಪಂಚಾಮೃತದಿಂದಭಿಷೇಕವ । ಮೂಲವಿಗ್ರಹಕೆ ತಾವೆಸಗಿ ॥
ಜೋಲಿಯಿಲ್ಲದೆ ಪೂಜೆಯ ಮಾಡಿ ಮತ್ತಾಗ । ಲೀಲೆಯಿಂ ನುತಿಸಿ ಪೂಜಕರು ॥ ೧೨೯ ॥

ಕಡೆಯಾಣಿ ಮಾಟದರಹಂತ ಬಿಂಬವ । ನಡುವಣ ರಥದೊಳು ನಾಲ್ಕು ॥
ಸಡಗರದಿಂ ಬಿಜಮಾಡಿಸೆ ಜಯವೆಂದು । ಪೊಡವಿಯಾಣ್ಮರು ಕೈಮುಗಿದು ॥ ೧೩೦ ॥

ಮುತ್ತಿನ ಸಿದ್ಧರ ಬಿಂಬವ ನಾಲ್ಕನು । ಮತ್ತರಹಂತರ ಬಲದಿ ॥
ವರ್ತಿಪ ರಥದೊಳು ಬಿಜಮಾಡಿಸೆ ಭ- । ವ್ಯೋತ್ತಮರ್ಜಯಜಯವೆನಲು ॥ ೧೩೧ ॥

ಹವಳದಿ ನಿರ್ಮಿತವಾಚಾರ್ಯ ಬಿಂಬವ । ತವಕದಿಂದರುಹನ ಎಡಕೆ ॥
ರವಿಯಂತೆಸೆವ ರಥದೊಳು ಬಿಜಮಾಡಿಸಿ । ದಿವಿಜರು ಜಯವೆಂದರಾಗ ॥ ೧೩೨ ॥

ಹರಿನೀಲನಿರ್ಮಿತವಾದುಪಾಧ್ಯಾಯ । ವರ ಬಿಂಬವ ನಾಲ್ಕಾಗ ॥
ಎರಕದಿಂ ಸಿದ್ಧರ ದಕ್ಷಿಣರಥದೊಳು । ನಿರಿಸಲು ಪ್ರಜೆ ಜಯತೆಂದು ॥ ೧೩೩ ॥

ನೀಲರತ್ನದ ಸಾಧುಬಿಂಬವ ನಾಲ್ಕನು । ಲೀಲೆಯಿಂದಾಚಾರ್ಯಕರ ॥
ಮೇಲು ರತ್ನಾಂಕಿತ ಬಲಭಾಗ ರಥದೊಳು । ಜೋಲಿಯಿಲ್ಲದೆಯಿರಿಸಿದರು ॥ ೧೩೪ ॥

ಜನನಾಥ ಮುಂತಾದರೆಲ್ಲರು ಜಯ ಜಯ- । ವೆನುತಾಗ ಕರಗಳ ಮುಗಿಯೆ ॥
ದನಿದೋರಿದವಾನೆಯ ಮೇಗಣ ಭೇರಿ- । ಸ್ವನ ಪೊಣ್ಮಿತು ವಾದ್ಯಗಳ ॥ ೧೩೫ ॥

ಎತ್ತಿಪಿಡಿದವು ಜಗಂಜ್ಯೋತಿಕೋಟಿಯು । ಇತ್ತರದೊಳು ಸಾಲಾಗಿ ॥
ಹತ್ತಿಸಿದರು ಚಂದಿರ-ಸೂರ್ಯಜ್ಯೋತಿಯ । ಎತ್ತಣದೀ ಹಗಲೆನಲು ॥ ೧೩೬ ॥

ಹರಿಹನುಮಂತ ಮಕರ ಮೀನು ವೃಷಭನ । ಹರಿಣ ಮುಂತಾದ ಕೆಕ್ಕೈಗಳು ॥
ಭರದಿಯೆತ್ತಿದವು ಸಾಲಾಗಿ ಕೋಟಾಕೋಟಿ- । ಯರುಹನ ಮುಂದೆ ನಲವಿಂದ ॥ ೧೩೭ ॥

ಪಲವಿನ ಶಶಿಗಳು ಸಾಲಾಗಿ ನಿಂದಂತೆ । ಪಲವು ಮುತ್ತಿನ ಸತ್ತಿಗೆಯು ॥
ಪಲವು ಸೂರ್ಯಭಾನುಗಳೆತ್ತಿ ಪಿಡಿದವು । ಪಲವು ಪಾಠಕರುಗ್ಘಡಿಸೆ ॥ ೧೩೮ ॥

ಎರಯಪ್ಪೆಹೂರಣಗಡುಬು ಇಡ್ಡಲಿಗೆಯ । ತರಗು ಚಕ್ಕುಲಿಯ ರಾಶಿಗಳು ॥
ಕರಿಗೂಳು ಕೆಂಗೂಳು ಹುಗ್ಗಿ ಕಿಚ್ಚಡಿ ರೊಟ್ಟಿ । ಮೆರೆವ ಸೂಸಲ ರಾಶಿಗಳು ॥ ೧೪೯ ॥

ಸುರಿದವು ರಥಗಳ ಮುಂದೆ ಬಾಳೆಯ ಗೊನೆ- । ವೆರಸಿ ಹಣ್ಣಿನ ರಾಶಿಗಳು ॥
ಹಿರಿಯುದೊಡ್ಡಿತು ತೆಂಗಿನಕಾಯ ಕೋಟಿಯ । ತರಿದರಿದರು ತೇರ ಮುಂದೆ ॥ ೧೫೦ ॥

ದೊರೆರನ್ನನುಡೆಸುತ್ತಿ ತೇರಿನ ಚಿನ್ನದ । ಹೊರಜೆಯ ಪಿಡಿಯೆ ಭಕ್ತಿಯೊಳು ॥
ಸುರರು ಭೂಚರರು ಖೇಚರರೆಲ್ಲ ಪಿಡಿದರು । ಬಿರುಸುಗಳೊರೆದವು ಪಲವು ॥ ೧೫೧ ॥

ದಳವಾಯಿ ಗುರಿಕಾರರು ಕಟ್ಟಿಗೆಗೋಲ । ತಳೆದು ಬರಾಬರಿ ಬಿಡಿಸೆ ॥
ಎಳೆದರು ತೇರುಗಳನು ಸುರಗಿರಿಯನು । ಎಳೆದಪರೋ ಎಂಬಂತೆ ॥ ೧೫೨ ॥

ಡಡಡಡ ದುಡುದುಡು ಚೀಕು ಚೀಕೆಂದಾಗ । ನುಡಿವುತ ತೇರಚ್ಚುಗಾಲಿ ॥
ಗಡಗಡಗುಟ್ಟಿ ನಡುಗಿಸುತಜಾಂಡವ । ಬಿಡದೆ ಹರಿದವೈದು ರಥವು ॥ ೧೫೩ ॥

ಮುತ್ತಿನ ಚೆಂಡೆಂಬ ಪೆಸರಾಂತು ರಾಜಿಪ । ಉತ್ತಮ ವಾಜಿಯ ತಂದು ॥
ಉತ್ತಮ ನಾಯಕಗಿದಿರಾಗಿ ತೋರಲು । ಚಿತ್ತದೊಳ್ ಜಿನನೆಂದು ನೆನೆದು ॥ ೧೫೪ ॥

ಸುರಪತಿ ಉಚ್ಚೈಶ್ರವವನಡರುವಂತೆ । ವರ ಉತ್ತರಾಶಾಪತಿಯು ॥
ಹರಿಮೇಘವಡರುವಂದದಿ ಜ್ಞಾನಚಂದ್ರಮ । ಹರಿಯನೇರಿದ ಗಮಕದೊಳು ॥ ೧೫೫ ॥

ಆಡರಿ ಕುದುರೆಯ ಸುರರು ದೊರೆರನ್ನನ । ಎಡಬಲದೊಳು ಬರುತಿರಲು ॥
ಪೊಡವಿಪಸೂನುಗಳಾ ಕುದುರೆಗಳನು । ಬಿಡದೆ ಬಳಸಿ ಬರುತಿರಲು ॥ ೧೫೬ ॥

ಪರಿಪೂರ್ಣಚಂದ್ರನ ಎಡಬಲದೊಳಗಿರ್ದ । ಕಿರುದಾರೆಗಳೋ ಎಂಬಂತೆ ॥
ದೊರೆಯೆಡಬಲದೊಳಗಿರ್ದ ದೇವರ್ಕಳು । ಪರಿವಾರ ಪ್ರಜೆಗೆ ತೋರಿದವು ॥ ೧೫೭ ॥

ಸುರರೇ ಚೆನ್ನಿಗರೆಂಬರೆಮ್ಮರಸಿನ ಮುಂದೆ । ಮೆರೆಯದಾ ಚೆನ್ನಿಗತನವು ॥
ತರಣಿಯ ಮುಂದೆ ಖದ್ಯೋತವೆ ಎಂದಾಗ । ಪುರವನಿತೆಯರು ಜರೆವರು ॥ ೧೫೮ ॥

ನೆರೆದ ಜನರ ರಥದ ಭಾರಕೆ ಶೇಷ । ಹೊರಲಾರದವನಿಯುಸ್ಸೆಂದು ॥
ಭರದಿ ಸುಯ್ದುದ ಕಿಡಿಗಳೋ ಎಂಬಂದದಿ । ಬಿರುಸುಗಳೆದ್ದುವು ಪಲವು ॥ ೧೫೯ ॥

ಧರೆಯ ಮೆಚ್ಚಿದೆ ಸರ್ತನವನು ವಿದ್ಯಾ- । ಧರಿಯರಾಡುತ ಬರುತಿರಲು ॥
ಹರಿದು ರಥವು ರಾಜಬೀದಿಯೊಳಗೆ ಬಂದು । ತಿರುಗಿದವು ಬಲಗಡೆಗೆ ॥ ೧೬೦ ॥

ಕೆಲವೆಡೆಯೊಳು ಡೊಂಬರು ಭೋ ಎಂದಾಗ । ಬಲು ಲಾಗಹಾಕಿದೋರುವರು ॥
ಕೆಲವೆಡೆಯೊಳು ಮರಗಾಲಿಂದ ಲಾಗವ । ಭಳಿರೆನೆ ಹಾಕಿ ದೋಲ್ಬಡಿದು ॥ ೧೬೧ ॥

ಇಂತು ನಡೆದು ಬಂದು ರಾಜೇಂದ್ರಸರಮನೆ । ಮುಂದೆ ನಿಲಲು ತೇರುಗಳು ॥
ಕಾಂತಾಮಣಿಗಳು ಸಜ್ಜೆಯೊಳನುಮತಿ । ಮುಂತಾದರೆಲ್ಲರು ನಿಂದು ॥ ೧೬೨ ॥

ಹಣ್ಣಾದವನ ತೆಂಗಿನಕಾಯಿ ಬಾಳೆಯ । ಹಣ್ಣು ಮುಂತಾದುವ ರಥಕೆ ॥
ಹೆಣ್ಣುಗಳರಸಿಯರಿಟ್ಟು ತನ್ಮಯ ಕೈಯ । ಬಣ್ಣಿಸಿ ಮುಗಿದರರ್ತಿಯೊಳು ॥ ೧೫೩ ॥

ಜಂಬೂದ್ವೀಪದಾರತಿಯನು ಅನುಮತಿ । ಪೊಂಬರಿವಾಣಕೆ ತುಂಬಿ ॥
ಕೆಂಬಲ್ಲಂಬುಜಾಕ್ಷಿಯರ ಕೈಯೊಳು ಜಿನ- । ಬಿಂಬಗಳಿಗೆ ಎತ್ತಿದಳು ॥ ೧೫೪ ॥

ಎರಡುವರೆ ದ್ವೀಪದಾಕಾರದೊಳಗಾಗ । ಬರೆದಾರತಿಯ ಚೆಲ್ವಿಂದ ॥
ಶರಧಿದೇವಿಯು ಕಳುಹಿಸೆ ಜಿನರಾಜಗೆ । ಎರಕಗಿಂದವೆ ಎತ್ತಿಸಿದಳು ॥ ೧೫೫ ॥

ನಾಗಬಂಧವ ನಂದವತಿಯತಿ ಚದುರಿಂದ । ರಾಗದಿ ಬರೆದು ಜಿನರಿಗೆ ॥
ಸೋಗೆಗಣ್ಣಬಲೆಯ ಕೈಯೊಳು ಕಳುಹಿಸೆ । ಕೋಗಿಲೆದನಿಯಳೆತ್ತಿದಳು ॥ ೧೫೬ ॥

ಕನಕಲತೆಯು ಕಡು ಚಿತ್ರದಾರಾತ್ರಿಕ- । ವನು ಕರಕುಶಲದಿ ಬರೆದು ॥
ಘನಪಯೋಧರೆಯೋರ್ವಳಕೈಲಿ ಕಳುಹಿಸೆ । ಜಿನರಾಜಗೆ ಎತ್ತಿಸಿದಳು ॥ ೧೫೭ ॥

ತಾಮರಸದ ಬಂಧ ನೀರಾಜನವನು । ಕಾಮಲತೆಯು ತಾನೇ ಬರೆದು ॥
ಸ್ವಾಮಿಗೆ ಕಳುಹಿಸಿದಳು ಭಯಭಕ್ತಿಯಿಂ । ಕೋಮಲೆಯೋರ್ವಳ ಕೈಲಿ ॥ ೧೫೮ ॥

ಇವರಾದಿಯಾಗುಳ್ಳ ಪದಿನೈದು ಸಾಸಿರ । ಯುವತೀರು ಬೇರು ಬೇರೊಂದು ॥
ನವನೂತನವಾದಾರತಿಗಳನಾ । ಭವದೂರಗೆ ಕಳುಹಿದರು ॥ ೧೫೯ ॥

ಸರಸತಿಯೆಂದೆಂಬ ಜ್ಞಾನೇಂದು ಕುವರಿಯು । ವಿರಚಿಸಿ ಹಾರ ಬಂಧವನು ॥
ಅರುಹಗೆ ಕಳುಹಿಸೆ ದೊರೆ ನೋಡಿ ಹರ್ಷೋ- । ತ್ಕರನಾಗಿ ಚೋದ್ಯಂಬಟ್ಟ ॥ ೧೬೦ ॥

ಛತ್ರಬಂಧವನು ರಾಜಾಧಿರಾಜನ ಸ- । ತ್ಪುತ್ರಿ ಪದ್ಮಾವತಿ ಬರೆದು ॥
ಮಿತ್ರೆಯ ಕೈಯೊಳು ಕಳುಹಿಸಿದಳು ಜ- । ಗತ್ತ್ರಯವಂದ್ಯಗೆ ಮುದದಿಂದ ॥ ೧೬೧ ॥

ಜಿನಮತಿ ಜಿನಚಂದ್ರೆ ಜಿನಧಾಮೆ ಜಿನದತ್ತೆ । ಜಿನಪಾಲಿತೆ ಮುಂತಾದ ॥
ತನುಜೆಯರುಗಳೈದುಸಾಸಿರ ಭಕ್ತಿಯಿಂ । ಜಿನರಿಗಾರತಿ ಎತ್ತಿಸಿದರು ॥ ೧೬೨ ॥

ನಂದ್ಯಾವರ್ತಬಂಧದೊಳಾರತಿಯನು । ನಂದೆ ಸ್ವಸ್ತಿಕ ಬಂಧದೊಳು ॥
ನಂದವತಿಯು ಎಂಬ ಸೊಸೆಯರು ಬರೆದು ಜಿ- । ನೇಂದ್ರಗಾರತಿ ಎತ್ತಿದರು ॥ ೧೬೩ ॥

ಮದನಮಂಜೂಷೆಯನಂಗಪತಾಕೆಯು । ಮದನಮಾಲೆಯು ಕೀರ್ತಿಮತಿಯು ॥
ಮದನಸುಂದರಿ ಮುಂತಾದ ಸೊಸೆಯರು ಸಂ- । ಮುದದಿ ಕಳುಹಿದರಾರತಿಯ ॥ ೧೬೪ ॥

ದೊರೆ ಮಾಡಿಸುವ ಉತ್ಸವಕೆ ಸ್ವರ್ಗಿಕರೆಲ್ಲ । ಕರವೆತ್ತಿ ಪೊಗಳಿ ಪೂಮಳೆಯ ॥
ಕರೆದರೆಂಬಂತೆ ಬಿರುಸು-ಬಾಣಗಳು ಭೋ- । ರ್ಗರೆವುತೆದ್ದವು ಏನೆಂಬೆ ॥ ೧೬೫ ॥

ತಿರುಗುತ ಚಕ್ರಬಾಣಗಳು ಕಿಡಿಗಳನು । ಭರದಿಂದಲುಗುಳಲೊಪ್ಪಿದವು ॥
ಹರಿಸರ್ಪಗಳ ತಿರುಹೆ ಹೆಡೆವಣಿಗಳು । ಧರೆಗುದುರುವ ರೀತಿಯಾಯ್ತು ॥ ೧೬೬ ॥

ಅರಮನೆಯೊತ್ತಿಂದ ಕುವರರ ಕೇರಿಗೆ । ಹರಿದವು ತೇರುಗಳೈದು ॥
ತರದಿಂದೆತ್ತಿದರಾರತಿಯುಳಿಯಂ- । ದಿರ ಕೇರಿಗೆ ರಥ ನಡೆದು ॥ ೧೬೭ ॥

ನಡೆವ ಭರಕೆ ರಥಯಿರದೇಳೆ ಚೀತ್ಕೃತಿ । ಸಿಡಿಲಂತಿಂದ್ರನ ಕಿವಿಗೆ ॥
ಕಡು ಭಯಂಕರದಿ ಕೇಳಲು ಇದೇನೇನೆಂದು । ನಡುಗಿ ಮತ್ತಿಂತು ತಿಳಿದನು ॥ ೧೬೮ ॥

ಇದು ಜ್ಞಾನಚಂದ್ರನು ವರ ರತ್ನಪುರದೊಳು । ಮದನಾರಿ ಜಿನಪತಿ ಮುಂದೆ ॥
ಮುದದಿ ರಥೋತ್ಸವವನು ನಡೆಯಿಸಲೀ- । ಗದುರಿತು ಬ್ರಹ್ಮಾಂಡವೆಲ್ಲ ॥ ೧೬೯ ॥

ರಥದ ದನಿಯೆಂದು ನಂದೀಶ್ವರದೊಳಿರ್ದ । ಶತಮುಖ ನಿರ್ಜ್ಜರರೆಲ್ಲ ॥
ಅತಿಶಯದಿಂದ ಕರಗಳನು ಮುಗಿವರು । ನತರಾಗಿ ಜಯ ಜಯವೆನುತ ॥ ೧೭೦ ॥

ಈ ರೀತಿಯೊಳು ಕೇರಿ ಕೇರಿಯೊಳಗೆ ದೊಡ್ಡ । ತೇರುಗಳೈದು ಜೀಕೆನುತ ॥
ಮೇರುಗಳೈದು ನಡೆದು ಬಂದಿತೊ ಎನೆ । ಸಾರಿದವಾಗ ಬಸದಿಯ ॥ ೧೭೧ ॥

ಇನನುದಯಿಸಿದನಿತರೊಳು ಭೂಪಾಲನು । ಜಿನನಿಗೆ ಪಂಚಾಮೃತದ ॥
ಮನಮೊಲಿದಭಿಷೇಕವನೆಸಗಿಸಿ ಮತ್ತೆ । ಘನವಾಗಿ ಪೂಜೆಯನೆಸಗಿ ॥ ೧೭೨ ॥

ದೊರೆದೊರೆಗಳು ಹೊಸ್ನಂಡೆ ಜೀರ್ಕೊಳವೆಯು । ಕರದೊಳಗಾಂತು ಲೀಲೆಯೊಳು ॥
ಅರುಹನ ಗೃಹವನು ಬಲವಂದು ಬೆಡಗಿಂದ । ಮೆರೆವ ಖೇಡಾಕುಳಿಯೊಳಗೆ ॥ ೧೭೩ ॥

ಘನಸಾರಮಿಶ್ರಿತವಾದ ಕುಂಕುಮರಸ । ಘನವಾಗಿ ತುಂಬಿರೆ ಕಂಡು ॥
ವನಧಿಗೆ ಲಂಘಿಸುವಂತೆ ಭೂಪಾಲರು । ಮನಮುಬ್ಬಿನೊಳು ಧುಮುಕಿದರು ॥ ೧೭೪ ॥

ಹೊಸ್ನಕುಂಭಗಳೊಳು ಕುಂಕುಮರಸವನು । ಚೆನ್ನಾಗಿ ತುಂಬಿ ನೀ ಸೋತು ॥
ಗನ್ನಕಾರರು ಇಟ್ಟಾಡಿ ತಮ್ಮೊಳು ತಾವು । ಮುನ್ನಣೆಗಾರರ ಮೇಲೆ ॥ ೧೭೫ ॥

ಸುರಿದರು ಕುಂಕುಮರಸವ ಕುಂಭವನೆತ್ತಿ । ಕರಸನ್ನೆದೋರಲಪ್ಪರೊಳು ॥
ಪರಿತಂದು ಸೂಳೇರು ದೊರೆದೊರೆಗಳ ಸುತ್ತಿ । ಶಿರದ ಮೇಲೆತ್ತಿಕೊಂಡಾಲಿ ॥ ೧೭೬ ॥

ಖೇಡಾಕುಳಿಯೊಳು ಮುಳುಗಿಸುವರು ಮತ್ತೆ । ನಾಡಿಗೊಡೆಯನೊತ್ತಿಲಿರ್ದು ॥
ಗಾಡಿಕಾರರ ಮೇಲೆ ಜೀರ್ಕೊಳವೆಯನೆತ್ತಿ । ನೋಡದೆ ಮೊಗವ ಚೆಲ್ಲುವರು ॥ ೧೭೭ ॥

ಸುರರ ಮೇಲಿಡಲೆಂದು ಬರುತಿರೆ ವೇಶೀರು । ದೊರೆ ಮುಸ್ತಕವಲ್ಲಾಡೆ ॥
ಉರಗನು ಗರುಡನ ಕಂಡಂತೆ ಬೆದರುತ । ತಿರುಗಿವರವರಿತ್ತ ನೃಪತಿ ॥ ೧೭೮ ॥

ವಸತಿಗೆ ನಡೆತಂದು ಮುನಿಗಳ ಶ್ರೀಪಾದ- । ಬಿಸರುಹವನು ಪೂಜೆ ಮಾಡಿ ॥
ಮಿಸುನಿಬೆಳ್ಳಿಯ ಪೂವುಗಳನು ಅರ್ಚಿಸಿ । ಉಸುರಿದ ನಮೋ ನಮೋ ಎಂದು ॥ ೧೭೯ ॥

ನೂರನಾಲ್ವತ್ತೆಂಟುಕೋಟಿ ನಿಷ್ಕಂಗಳು । ಭೂರಮಣನು ಯಾಚಕರ್ಗೆ ॥
ದಾರಿದ್ರ್ಯ ಹರಿದು ಹೋಹಂತೆ ಕೊಟ್ಟವನೋತು- । ದಾರಿಗಳಾರು ಲೋಕದೊಳು ॥ ೧೮೦ ॥

ಅರಮನೆಯತ್ತ ನಡೆದುಬಂದು ಮುನಿಗಳ್ಗೆ । ಚರಿಗೆಯ ಮಾಡಿಸಿ ಬಳಿಕ ॥
ದೊರೆದೊರೆ ಶ್ರಾವಕರಿಕೆ ಭೋಜನವ ತನ್ನ । ಅರಮನೆಯಲ್ಲಿ ಮಾಡಿಸಿದ ॥ ೧೮೧ ॥

ಸಾರವಸ್ತುವನುಡುಗೊರೆಗೊಟ್ಟು ಕನಕಾದಿ । ಭೂರಿಯಾಭರಣವನಿತ್ತು ॥
ವಾರಣತುರಗಪಲ್ಲಕ್ಕಿಯಂದಳವಿತ್ತ- । ಪಾರಮನ್ನಣೆಯ ಮಾಡಿದನು ॥ ೧೮೨ ॥

ಇಂತುತ್ಸಾಹಗಳನು ಜ್ಞಾನಚಂದ್ರಮ । ಸಂತೋಷದೊಳು ನಡೆಯಿಸುತ ॥
ಕಾಂತಾಮಣಿಗಳೊಡನೆ ಕೂಡಿ ಸುಖಸಾಗ- । ರಾಂತರದೊಳೋಲಾಡುತಿಹನು ॥ ೧೮೩ ॥

ಅರುಹನ ಪದಭಕ್ತ ಮುನಿಸೇವೆಗನುರಕ್ತ । ದುರಿತಾಂಧಕಾರವಿಮುಕ್ತ ॥
ಪರಮತಖಂಡನದೊಳು ಶಕ್ತ ಜ್ಞಾನೇಂದು । ದೊರೆಯೊಪ್ಪಿದ ಜೀವನ್ಮುಕ್ತ ॥ ೧೮೪ ॥

**॥ ಅಂತು ಸಂಧಿ ೪ಂಕ್ಕಂ ಪದ ೫೫೬೬ಕ್ಕಂ ಮಂಗಲಂ ॥**

## ಒಡ್ಡೋಲಗ.

ಸರ್ವಾವಸರವೆಂಬೊಡ್ಡೋಲಗಗೊ- । ಟ್ಟುರ್ವೀಶ್ವರನಿರ್ದುದುಸುರ್ವೆ ॥ ಪ ॥

ಸಮವಸರಣದಲ್ಲಿ ಸಾಸಿರೆಸಳ ದಿವ್ಯ । ಕಮಲವ ಸೋಂಕದೆ ಕುಳಿತು ॥
ಅಮರಾದಿಗಣದಿ ಓಲಗಗೊಂಡ **ಶಾಂತೀಶ** ! । ನಮಗೆ ಕೊಡಂತಪ್ಪ ಸಿರಿಯ ॥ ೧ ॥

ರಾಜಾಧಿರಾಜನು ತಿಂಗಳಿಗೊಮ್ಮೊಮ್ಮೆ । ಶ್ರೀಜಿನರಾಜನ ಮುಂದೆ ॥
ಓಜೆಯಿಂ ಹೂವಿನ ತೇರಹಬ್ಬವ ಮಾಳ್ಪ । ಸೋಜಿಗವಾಗೆ ಜಗದೊಳು ॥ ೨ ॥

ಮೂರು ನಂದೀಶ್ವರ ನೋಂಪಿಯೊಳಗೆ ಚೊಂಬೆ । ತೇರಹಬ್ಬವ ನಡೆಯಿಸುತ ॥
ಧಾರುಣಿಯನು ಪ್ರೀತಿಯಿಂ ಪಾಲಿಸುತ ರಾಯ । ಮಾರಚಕ್ರೇಶನಂತಿಹನು ॥ ೩ ॥

ಚರಿತ ಪುರಾಣಗಳೊಳು ಹೊತ್ತುಗಳೆವುತ । ನರನಾಥಚಂದ್ರಮ ಸುಖದಿ ॥
ಇರುತಿರೆಯನಿತರೊಳಗೆ ರವಿ ಪಶ್ಚಿಮ- । ಗಿರಿಯ ಸಾರಿದನೇನೆಂಬೆ ॥ ೪ ॥

ದೊರೆರನ್ನ ಜ್ಞಾನೇಂದು ಅಪರಾಹ್ಣಕ್ರಿಯೆಯ । ಮರೆಯದೆಸಗಿ ದಿವ್ಯಾಂಗದೊಳು ॥
ಸರಸಶೃಂಗಾರಭಂಗಿಯನೆಸಗಿದನದ । ಒರೆವೆನು ಕೇಳಿ ಕೋವಿದರು ॥ ೫ ॥

ಮುತ್ತಿನಮಣೆಯಿಂ ಸಮೆದ ಪೈಠಣೆಯ ರಾ- । ಜೋತ್ತಮ ತೊಡಲೊಪ್ಪಿದುದು ॥
ಬಿತ್ತರದಿಂ ಕುಡಿಮಿಂಚನು ಬಿಮ್ಮನೆ । ಸುತ್ತಿದ ಉಡುಪತಿಯಂತೆ ॥ ೬ ॥

ರನ್ನದ ಮುಕುಟವ ಜ್ಞಾನೇಂದು ಶಿರದೊಳು । ಚೆನ್ನುಗಾಣಿಸಲೊಪ್ಪಿದುದು ॥
ಹೊನ್ನಬೆಟ್ಟದ ಶಿಖರದೊಳಿರ್ಪ ನವರತ್ನ- । ದುನ್ನತ ಕೋಡುಗಲ್ಲಂತೆ ॥ ೭ ॥

ತೋರಮುತ್ತಿನ ಚೌಕುಳಿಯನು ಶ್ರುತಿಯೊಳು । ಸೇರಿರಲಿಹುದು ಚಂದಿರನ ॥
ಸಾರಿಡಬಲದೊಳು ನಾಲ್ಕು ನಾಲ್ಕುಡುತತಿ । ತೋರುವಂತಿಹುದೇನೆಂಬೆ ॥ ೮ ॥

ಬೆಳಗುವ ಸುರಧನುವಿನ ಕೊಪ್ಪಿಲಿ ಸಿಲ್ಕಿ । ಪೊಳೆವಾರ್ದ್ರನಕ್ಷತ್ರದಂತೆ ॥
ಇಳೆಯಾಣ್ಮನ ಕರ್ಣದೊಳು ಮುತ್ತಿನ ಒಂಟಿ । ಥಳಥಳಿಸುತ ಸೊಗಸಿಹುದು ॥ ೯ ॥

ಮುತ್ತಿನ ತೋರತುರಾಯಿ ಜ್ಞಾನೇಂದುವ । ಉತ್ತಮಾಂಗದೊಳು ರಾಜಿಸಿತು ॥
ಚಿತ್ತರದಿಂ ಸುರತರು ಪೊತ್ತು ಎಸೆದ- । ತ್ಯುತ್ತಮ ಮಂಜರಿಯಂತೆ ॥ ೧೦ ॥

ವರ ಜ್ಯೋತಿಪ್ರಭೆಯೆಂಬ ಕಂಠಮಾಲೆಯನಾಗ । ಕೊರಳೊಳಿಕ್ಕಲು ರಂಜಿಸಿತು ॥
ಉರಗಾಭರಣವ ಧರಿಸಿ ಮೆರೆವುತಿರ್ಪ । ಪರಮೇಶ್ವರನ ಮಾಳ್ಕೆಯೊಳು ॥ ೧೧ ॥

ತೋರಮುತ್ತಿನ ತೋರಹಾರವ ಕಂಠಕ್ಕೆ । ಸೇರಿಸಲಿಹುದವನಾಸ್ಯ ॥
ನೀರತೆರೆಯ ಬಳಸಿರಲು ಶೋಭಿಸುತಿರ್ಪ । ನೀರೇಜವೋ ಎಂಬಂತೆ ॥ ೧೨ ॥

ಭುಜದಂಡದೊಳು ನವರತ್ನಖಚಿತವಾದ । ಭುಜಕೀರ್ತಿಯನಿಡಲಿಹುದು ॥
ನಿಜಪ್ರತಾಪವೆ ಭುಜಯುಗದೊಳು ನೋಳ್ಪರ್ಗೆ। ಸೃಜಿಸಿ ತೋರುವುದೋ ಎಂಬಂತೆ ॥ ೧೩ ॥

ದುಂಡುದೋಳೊಳು ಬಾಹುಪುರಿಯನಿಡಲು ಅದು । ಕಂಡುದು ನೋಟಕ ಜನಕೆ ॥
ಕುಂಡಲಿಸುತ್ತಿ ವಿಭ್ರಾಜಿಪ ನವಸಿರಿ- । ಖಂಡದ ಶಾಖೆಗಳಂತೆ ॥ ೧೪ ॥

ಮುತ್ತಿನ ಪಂಚಸರವ ಹಸ್ತಯುಗದೊಳ್ । ಸುತ್ತಿಕೊಂಡಿರಲೊಪ್ಪಿದುದು ॥
ರಕ್ತವರ್ಣದ ತಾವರೆಯ ನಾಳದ ದಂಟ- । ಸುತ್ತಿದ ಬೆಳುಲತೆಯಂತೆ ॥ ೧೫ ॥

ಬೆರಳ್ಗಳೊಳು ರತ್ನದ ಉಂಗುರವಿಡೆ । ಪಿರಿದು ರಂಜನೆವಡೆದತ್ತು ॥
ವರ ವಿದ್ರುಮದ ಕುಡಿಗಳನು ಸುತ್ತಿದ । ಉರಗಫಣಾಮಣಿಯಂತೆ ॥ ೧೬ ॥

ಕಟಿತಟದೊಳು ನವರತ್ನದ ಡಾಬು ಸಂ- । ಘಟಿತವ ಮಾಡಲೊಪ್ಪಿದುದು ॥
ತಟಿತು ಬಳಸಿ ರಂಜಿಪಹೊನ್ನಲತೆಯಂತೆ । ನಟನೆಯೊಡೆದುದೇನೆಂಬೆ ॥ ೧೭ ॥

ಬಲದ ಮುಂಗಾಲೊಳು ವೈರಿಮಲ್ಲಣವೆಂಬ । ಚೆಲುವ ಪೆಂಡೆಯವಿಕ್ಕಲಿಹುದು ॥
ಬಲು ಮೋಹಮಲ್ಲನ ಗಡಿಗಳವಡಿಸಿದ । ಲಲಿತರನ್ನದ ದಂಡೆಯಂತೆ ॥ ೧೮ ॥

ಶಶಿಕಿರಣವನು ನುಂಗಲು ಬಂದ ಸೂರ್ಯನ । ಬಿಸಿಲೋ ಎಂಬಂತೆ ಮೌಕ್ತಿಕವ ॥
ಎಸೆವ ಪೈರಣೆ ಮೇಲೆ ಚಿನ್ನದ ಸರಿಗೆಯ । ಹೊಸದುಪ್ಪಟಿ ಹೊದ್ದರಿಹುದು ॥ ೧೯ ॥

ಸುರರ ಮೇಲಿಡುವೆನೆನುತ ಸಿಂಗಾಡಿಯ । ಸ್ಮರ ಕೆನ್ನೈದಿಲ ಸರವ ॥
ಇರಿಸಿದನೆನೆ ಜ್ಞಾನೇಂದು ಭ್ರೂಮಧ್ಯದೊ- । ಳ್ಮೆರೆದುದು ಕಸ್ತೂರಿತಿಲಕ ॥ ೨೦ ॥

ನೊಸಲೊಳು ತೊಳಗುವ ವಜ್ರದ ತಿಲಕವ । ವಸುಧೇಶನಿಡಲೊಪ್ಪಿದನು ॥
ಬಿಸಗಣ್ಣ ಪಣೆಯೊಳಗಾಂತು ಶೋಭಿಸುತಿರ್ಪ । ಶಶಿಮೌಳಿ ಎಂಬ ತೆರದೊಳು ॥ ೨೧ ॥

ಅತಿಶಯದಿಂದ ಸಿಂಗರವಾದ ರಾಯನು । ಕ್ಷಿತಿಯ ಜನರಿಗೊಪ್ಪಿದನು ॥
ನುತವೆತ್ತ ಜ್ಯೋತಿರಂಗದ ಕಲ್ಪವೃಕ್ಷಕೆ । ಪ್ರತಿ ಜಂಗಮಲತೆಯಂತೆ ॥ ೨೨

ಇಂತು ಷೋಡಶಭೂಷಣಾಲಂಕೃತನಾಗಿ । ಕುಂತುರಾಜೇಂದ್ರನಂತಿರಲು ॥
ಸಂತೋಷದಿಂ ಮುತ್ತಿನ ಹಾವುಗೆಯ ಸೀ- । ಮಂತಿನಿ ತಂದೋವರ್ಗಳಿರಿಸೆ ॥ ೨೩

ಪೊಡವಿಯಾಣ್ಮನು ತನ್ನ ನಖದ ಕಾಂತಿಗಳಿಗೆ । ಉಡುಗಣ ಸರಿಯೇ ತಾನೆಂದು ॥
ಕಡು ಕೋಪದಿಂದ ತುಳಿದನೆನೆ ಜ್ಞಾನೇಂ- । ದೊಡನೆ ಮೆಟ್ಟಿದನು ಹಾವುಗೆಯ ॥ ೨೪

ಅರಮನೆ ಪೊಡಮಟ್ಟು ಬಾಗಿಲೊಳಗೆ ನಿಂದು । ದೊರೆ ದೀವಟಿಗೆಯ ಸಲಾಮು ॥
ಭರದಿ ಮಾಡಲು ರಾಣ್ಮ ಕೈಕೊಂಡು ಪೊಗಳುವ- । ಕ್ಕರಿಗರ ಸಂದಣಿಯೊಳಗೆ ॥ ೨೫

ಜಗದಾನಂದವೆಸರ ಮುತ್ತಿನಮಣಿ । ಮಿಗೆ ಸಮೆದಾ ಚಾವಡಿಯೊಳು ॥
ಜಗದೇಕವೀರ ನಡೆದು ಬಂದು ರನ್ನದ । ಸೊಗಸಿನ ಹರಿವಿಷ್ಟರದೊಳು ॥ ೨೬

ಮೇಘವರ್ಣದ ಪಟ್ಟಿಗದ್ದುಗೆಲೆಡಗಾಲ । ಬೇಗದಿ ಮಡಿಯಿಟ್ಟು ಕುಳಿತು ॥
ಭೂಗಧಿನಾಯಕ ಲೋಡೊರಗಿ ಬಲ್ಗಾ- । ಲಾಗ ಮುಕ್ತಾಫಲಮಯದ ॥ ೨೭

ಹಾವುಗೆಯೊಳಗಿಟ್ಟು ಹೊನ್ನೊರೆ ಬಂಕನು । ಭೂವರ ಬಲಗೈಯೊಳಾಂತು ॥
ಯೇ ವಣ್ಣಿಪೆ ಬಲದೊಡೆಯ ಗುಲ್ಫದೊಳ್ನೀಡಿ । ಕಾವರಾಯನು ಸಂತಸದಿ ॥ ೨೮

ಎಡದ ಮುಂಗೈಯ ಲೋಡಿನ ಮೇಲೆ ತಾನೂರಿ । ಕಡು ಜಾಣರರಸ ಜ್ಞಾನೇಂದು ॥
ಬಿಡುಗಣ್ಣನಾಡಿನೊಡೆಯನಂತೆ ಭಾಗ್ಯದೊ- । ಕ್ಕೊಡೆಯೊಳೊಡ್ಡೋಲಗಗೊಟ್ಟು ॥ ೨೯

ಒರಗಿನ ಮೇಲೆಯೊರಗಿದ ರಾಜೇಂದ್ರನ । ದೊರೆ ರಾಜಮೋಡಿಯೊಪ್ಪಿದುದು ॥
ಒರೆಗಲ್ಲೊಳೊರೆದಪರಂಜಿರೇಖೆಯು ತಾನು । ನೆರೆ ಸೋಲಿಸಿತವನಂಗ ॥ ೩೦

ಥಳಥಳಿಸುವ ಗದ್ದುಗೆಯೊಳು ಕುಳಿತಿರ್ದ । ಚೆಲುವರ ಗಂಡನೊಪ್ಪಿದನು ॥
ಪೊಳೆವ ಮೇಘದ ಮಧ್ಯದೊಳಿರ್ದ ಸೂರ್ಯನ । ಹಳಿದುದವನ ಪುಣ್ಯಮೂರ್ತಿ ॥ ೩೧

ತೊಡೆಯೊಳು ನೀಡಿದ ದುಂಡುದೋಳೊಪ್ಪಿತು । ಮೃಡನ ವೈರಿಯ ಚಾವಡಿಯೊಳು ॥
ಕಡೆಯಾಣೆಯ ದುಂಡುಗಂಬದ ಮೇಲಿಟ್ಟ । ಕಡು ಚೆಲ್ವ ಮದನಕೈಯಂದು ॥ ೩೨

ಕರದೊಳು ಪಿಡಿದ ಹೊನ್ನೊರೆಯ ಬಾಕಿರ್ದುದು । ಅರಿನೃಪರಿದು ನುಂಗಲೆಂದು ॥
ಭರದಿಂದ ನೀಡಿದ ಭುಜಕಾಳೋರಗ- । ದರುಣವರ್ಣದ ಜಿಹ್ವೆಯಂತೆ ॥ ೩೩

ಚರಣದ ಕೆಂಪು ಮುತ್ತಿನ ಹಾವುಗೆಯೊಳು । ಬೆರೆಸಲೊಪ್ಪಿದುದೇನೆಂಬೆ ॥
ತರುಣ-ತರಣಿಯರುಣಪಾದಸೋಂಕಿದ । ವರ ಪುಂಡರೀಕದಂತಿಹುದು ॥ ೩೪

ಅರಸನೀಯಂದದ ಬೆಡಗಿಂದೋಲಗಗೊಡೆ । ವರ ಶಂಖಕಹಳೆರಂಜೆಗಳು ॥
ಮೆರೆವ ತುಡುಮುಭೇರಿ ದಗಮು ಡಿಂಡಿಮಡಾಡೆ । ಮೊರೆವ ದೋಲುಗಳು ಡಕ್ಕೆಗಳು

ಡಿಬಿಡಿವೀಣಚೆಂಬಕವರಿಕೊಂಬು । ಸಿಡಿಲಂತೆ ಮೆರೆವ ಬುರುಗವು ॥
ಡು ಬೆಡಗಿನ ಡಮಾಮಿ ಜಜ್ಝರಗಳು । ಬಿಡದೆ ಮೆರೆವ ಸಮ್ಮೇಳ ॥ ೩೬ ॥

ವು ಮೊದಲಾದ ಕೋಟಾಕೋಟಿ ವಾದ್ಯದ । ನಿವಹವು ದಾಂಧಳರಿಂದು ॥
ವಕದಿಂ ಭೋರ್ವೋರರೆಯಲು ದಿಗಂಬರ । ಭುವಿ ಗದಗಂಪಿಸುತಾಗ ॥ ೩೭ ॥

ನ್ನೂರೈವತ್ತಿನ್ನೂರೈವತ್ತು । ಹೊನ್ನದೀವಟಿಗೆಯನಾಂತು ॥
ನ್ನಿಗನೆಡಬಲದೊಳು ವೇಶಿರ ತಂಡ । ಬಿನ್ನಾಣದಿಂ ಪಿಡಿದಿಹರು ॥ ೩೮ ॥

ನ್ನದ ಬೆಳ್ಳಿಯ ನೀಲದ ಪಚ್ಚೆಯ । ರನ್ನಗೋಮೇಧವೈಡೂರ್ಯ ॥
ನ್ನತ ಪದ್ಮರಾಗದ ನೆಲೆನೆಲೆಗಳ । ಉನ್ನತ ದೀವಟಿಗೆಗಳ ॥ ೩೯ ॥

ತ್ತರದೊಳು ಕೋಟಾಕೋಟಿ ಸಾಲಾಗಿ । ಎತ್ತಿ ಪಿಡಿದವು ನಲವಿಂದ ॥
ತ್ತರದಿಂ ಕೋಟಾಕೋಟಿ ಸೂರ್ಯರು ರಾ- । ಜೋತ್ತಮನನು ನೋಡಲೆಂದು ॥ ೪೦ ॥

ರಿಗಿಳಿದವೊ ಎನೆ ಮಿಸುನಿಯಿಂ ಸಮೆದಿರ್ಪ । ಮೆರೆವ ಜಗಜ್ಜ್ಯೋತಿಗಳು ॥
ರದಿಂದ ರಾತ್ರಿಯ ದಿವಸದಂದದಿ ಮಾಡಿ । ಎರಡು ಸಾಲೊಳಗೆತ್ತಿದವು ॥ ೪೧ ॥

ಜ್ಞಾನಚಂದ್ರಮನೊಡನಾಡಿದಲ್ಲದೆಯೆಮ್ಮ- । ಜ್ಞಾನವು ತಾ ಕೆಡದೆಂದು ॥
ನದೆ ಬಂದು ಚಂದ್ರರು ನಿಂದರೋ ಎನೆ । ಪೀನಚಂದ್ರಜ್ಯೋತಿಯಿಹವು ॥ ೪೨ ॥

ಜ್ಞಾನಚಂದ್ರಮನಲ್ಲಿರ್ದ ಬಳಿಕ ನಮ- । ಗೇನಿಲ್ಲಿಯೆಂದುಡುತತಿಯು ॥
ಾನದಿಂದಿಳಿದು ನಿಂದಂತೇಣಿಯ ಪಂಜು । ಏನಪೇಳುವೆ ರಾಜಿಪವು ॥ ೪೩ ॥

ಅನುಮತಿ ಮೊದಲಾದ ಪದಿನೈದು ಸಾಸಿರ । ವನಿತಾಮಣಿಗಳಂದಣದಿ ॥
ುನದಕ್ಕರಿಂ ಬಂದು ಚಾವಡಿಯನುಯೇರಿ । ಜನಪತಿ ಹಿಂಭಾಗದೊಳು ॥ ೪೪ ॥

ರಿಯ ಮರೆಯಲಿ ಸೂರಿಪ್ರುಟದಿ ಮಾ- । ಳ್ಪರಸಂಚೆ ಸುಪ್ಪತ್ತಿಗೆಯೊಳು ॥
ರಸವಿನೋದದ ಸವಿಮಾತನಾಡುತ । ಅರಸಿಯರೆಲ್ಲ ಕುಳಿತರು ॥ ೪೫ ॥

ೊರೆದೊರೆಗಳು ಸಾಮಂತರು ಮನ್ನೆರು । ಕರಣೀಕ ದಳವಾಯಿ ಮಂತ್ರಿ ॥
ರ ಖೇಚರರು ನಡೆದು ಬಂದು ರಾಯಗೆ । ಕರಗಳ ಮುಗಿವ ವೇಳೆಯೊಳು ॥ ೪೬ ॥

ಷ್ಟಾವಧಾನ ಪರಾಕು ಜತನ ಜೀಯ ! । ಶಿಷ್ಟ ! ಲಾಲಿಸು ಎಂದೆನುತ ॥
ಟ್ಟಿಗೆಗಾರರು ಪೆಸರ್ಗೊಂಡು ದೊರೆಗಳ । ಕಟ್ಟಳೆಯರಿದು ನುಡಿದರು ॥ ೪೭ ॥

ಸ್ವಾಮಿ ! ಲಾಲಿಸು ಈತನೆನ್ನಯ ಕಾರ್ಯಕೆ । ಪ್ರೇಮಿ ಮಹಾಬಲವಂತ ॥
ೇಮಾಂಗದೇಶವನಾಳುವನೀತ । ನಾಮದಿಂ ಹೇಮಾಂಗದನು ॥ ೪೮ ॥

ಾಲಿಸೊಡೆಯ ! ನಿನ್ನ ಮನದಭಿಪ್ರಾಯವ । ಲೀಲೆಯಿಂ ತಿಳಿದರಿಬಲವ ॥
ತೂಳಿಯೊಳಗೆ ಪೋಗಿರಿದು ಮೆರೆವನಿವ । ಮಾಳವದೇಶದ ರಾಯ ॥ ೪೯ ॥

ಪರಿಕಿಸು ಎಲೆದೇವ ! ಚಂಪೆಯನಾಳುವ । ಧುರದೊಳಗೇಕಾಂಗವೀರ ॥
ಪರದಾರಾಸೋದರ ಜಸವಂತೀತನ ನಾಮ । ಹರಿವರ್ಮನೆಂದು ಚಿತ್ತೈಸು ॥ ೫೦ ॥

ಅವಧಾರಿಸು ಸ್ವಾಮಿ ! ನಿನ್ನ ದಕ್ಷಿಣ ಭುಜ- । ಕಿವನು ಸಹಾಯ ಸುಜಾಣ ॥
ಗಿರಿಯಂತುಜ್ಜೈನಿಯನಾಳ್ವ ಪರಾಕ್ರಮಿ । ರವಿಕಾಂತನಿವನಭಿಧಾನ ॥ ೫೧ ॥

ಬಿನ್ನಹ ಮೋಕ್ಷರಸಿಕನೀತನು ನಿನ್ನ । ಬೆನ್ನೊಳು ಬರುವ ಕದನಕೆ ॥
ಸನ್ನುತ ಜಯವರ್ಮನೀತನ ನಾಮವು । ಕನ್ನೋಜದೇಶದ ನೃಪತಿ ॥ ೫೨ ॥

ದೊರೆಗಳ ದೇವ ! ಪರಾಕುಪಾಯವದಾರು । ಸೆರಗ ಹಿಡಿದುಪಚಾರಿಸುತ ॥
ನೆರೆಗಲಿಗಳ ಸೀಳಿಸೀರುಂಬಾಡುವ । ಕರಿಪುರದರಸು ರಣಮೊಳು ॥ ೫೩ ॥

ಭುವನಭುಂಭುಕ ! ಲಾಲಿಸು ನಿನ್ನ ಜಸದಂತೆ । ತವೆ ನಿನ್ನ ದೇಶದಂತ್ಯದೊಳು ॥
ರವಿಸಮತೇಜಸ್ವಿ ಗಡಿಯ ಕೋಟೆಯೊಳ- । ಪ್ಪಿವನ ಪೆಸರು ವಜ್ರಕಾಂಡ ॥ ೫೪ ॥

ಶಾರದವೆರೆಯ ! ಲಾಲಿಸು ನಿನ್ನ ಚಿತ್ತವ । ಸೂರೆಮಾಡುವ ರತ್ನಾಕರೆಯ ॥
ನೀರೆಯ ತಂದೆ ಶ್ರೀ ಜಯಸೇನನೆಂಬವ । ಭೂರಮಣನು ನಿನ್ನ ಮಾವ ॥ ೫೫ ॥

ಮಿಸುಗುವ ನಿನ್ನಂಗ ಸುರತರುವಡರಿದ । ಕನಕಲತೆಯಯನುಜಾತ ॥
ಘನಪುಣ್ಯವಂತ ಗರುಡವೇಗನಿವನೀಗ । ಮನುಜೇಂದ್ರ ! ನಿನ್ನ ಮೈದುನನು ॥ ೫೬ ॥

ಅಸುವೊಂದು ತನುವೆರಡಾಗಿರ್ಪ ನಿನ್ನಗ್ರ- । ಮಹಿಷಿ ಶ್ರೀಯನುಮತಿಯಪ್ಪ ॥
ಹೆಸರೊಳು ಹರಿಬಲನಿವನೀಗ ನೋಡೆಲೆ । ವಸುಧೇಶರ ತಲೆಮಣಿಯೆ ! ॥ ೫೭ ॥

ಗಿಳಿಯನು ಕಳುಹಿಸಿ ನಿನ್ನಂತರಂಗವ । ಸೆಳೆದ ಶ್ರೀನಂದವತ್ಯಾದಿ ॥
ಎಳೆವೆಣ್ಣೆಣ್ಬರ ಪಿತ ಶಕ್ರಧನುವೀತ । ಇಳೆಯಾಣ್ಮ ! ನಿನ್ನ ಮಾತುಳನು ॥ ೫೮ ॥

ನರನಾಥ ! ಚಿತ್ತೈಸು ನಿನ್ನ ಮುದ್ದಾಟದ । ಹರಿಚಂದ್ರ ಕುವರಗೆ ತನ್ನ ॥
ವರ ನಂದನೆಯಿತ್ತ ಭೈರವ ಮಂತ್ರೀಶ । ಪರಿಕಿಸು ನಿನ್ನ ಬೀಯಗನು ॥ ೫೯ ॥

ಕಾರ್ಯಾಕಾರ್ಯವಿಚಾರ ಚತುರ್ವಿ- । ಧಾರ್ಯೋಪಾಯದಿ ದಕ್ಷ ನಿಪುಣ ॥
ಧೈರ್ಯವಂತನು ಬಹುಶ್ರುತನೆಂಬ ಮಂತ್ರೀಶ । ವರ್ಯ ನೋಡಿವ ನಿನ್ನ ಕೋಶ ॥

ಇವರಾದಿಯಾಗೈವತ್ತಾರು ದೇಶದ । ಭುವನೇಶ್ವರರು ಬಂದಹರೆ ॥
ಭವಸಾಗರೋತ್ತಾರಣತರಂಡಕ- । ನವಧಾರಿಸೆಂದುಗ್ಘಡಿಸಿದನು ॥ ೬೧ ॥

ವಾದಿಗಮಕಿ ಕವಿ ವಾಗ್ಮಿ ಪಂಡಿತರು ವಿ- । ನೋದಿಗಳ್ಪರಿಹಾಸಕರು ॥
ಮೇದಿನೀಶ್ವರಗೆ ಕೈಮುಗಿದು ಸರಸ ವಿ- । ನೋದಗಳನು ತೋರುತಿಹರು ॥ ೬೨ ॥

ಚರಣದ ಗೆಜ್ಜೆ ಘಲಿರುಘಲಿರು ಎನೆ । ಹರಿಮಧ್ಯದ ನೇವುರದ ॥
ಕಿರುಗಂಟೆ ಕಿಣಿಕಿಣಿರೆನೆ ಸೊಕ್ಕಾನೆಯ । ಮರಿಯಂತೆ ಚಲ್ಲವರಿಯುತ ॥ ೬೩ ॥

ಊರ್ವಶಿರಂಭೆಮೇನಕೆತಿಲೋತ್ತಮೆ । ಗೀರ್ವಾಣರಾಜನ ಸಭೆಗೆ ॥
ಪರ್ದಿದ ಮೋಹದಿ ನಡೆತರುವಂದದಿ । ಸರ್ವವಲ್ಲಭೆಯರ ತಂಡ ॥ ೬೪ ॥

ನಡೆತಂದು ಪಣ್ಣೆಪಣ್ಣೆಯೊಳು ಬೆಡಗಿನಿಂದ । ಪೊಡವಿಯಾಣ್ಮಗೆ ಕೈಯ ಮುಗಿದು ॥
ಮಿಡಿಯುತ ವೀಣೆ ಕಿನ್ನರಿಗಳ ಸ್ತನಕಿಟ್ಟು । ಬೆಡಗುಗಾತಿಯರು ನಿಂದಿರಲು ॥ ೬೫ ॥

ಭೋ ಎಂದಾಲಿ ವಾಜಿಯ ಹರಿಸಾಡುತ । ಪಾಯ್ತಂದು ಬಂದೊಗ್ಗಿನೊಳು ॥
ರಾಯಗೆ ಕೈಯ ಮುಗಿದು ರಾಣ್ಯರಾವುತ- । ರೊಯ್ಯಾರದಿಂದ ನಿಂದಿಹರು ॥ ೬೬ ॥

ಗಿರಿಗಳೆ ನಡೆದು ಬಂದಪವೋ ಎಂಬಂದದಿ । ಕರಿಘಟೆಗಳು ಬೃಂಹಿಸುತ ॥
ನರನಾಥನೋಲಗಶಾಲೆಗೆ ಬಂದವು । ಕರವೆತ್ತಿ ಶೀಕರಗೊಡುತ ॥ ೬೭ ॥

ರಥಕೆ ಕಟ್ಟಿದ ಕುದುರೆಗಳು ಹಮ್ಮೈಸುತ । ರಥದ ಚೀತ್ಕಾರವು ನಿಲಲು ॥
ರಥಿಕರು ನಡೆತಂದು ಕೈಗಳ ಮುಗಿದರು । ಪೃಥುವೀಪತಿಗೆ ಲೀಲೆಯೊಳು ॥ ೬೮ ॥

ಝುಲಿಝುಲಿರೆನೆ ಹರಿಗೆಗಳ ನಿನಾದವು । ಕಲಕಲರವ ತುಂಬಿರಲು ॥
ಹೊಳೆವ ಕೈದುಗಳಾಗ ಕಣಿಕಣಿರೆಂದೆನೆ । ಬಲುಬಂಟರು ಲಕ್ಷಭಟರು ॥ ೬೯ ॥

ಶತಭಟ ಸಾಸಿರಭಟ ಕೋಟಿಭಟರ್ಗಳು । ಮಿತವಿಲ್ಲದ ಸೇನೆ ಬಂದು ॥
ಕ್ಷಿತಿಪಾಲಗೆ ಕೈಯ ಮುಗಿದು ಇತ್ತೆರದಲ್ಲಿ । ಪ್ರತಿಮರು ನಿಂದರೇನೆಂಬೆ ॥ ೭೦ ॥

ಹರಿಚಂದ್ರ ಮುಂತಾದೊಂಬತ್ತುಸಾಸಿರ । ವರ ಕುವರರು ದಕ್ಷಿಣದೊಳು ॥
ಹರಿಬಲ ಮುಂತಾದ ಮಾತುಳರೆಲ್ಲರು । ಅರಸನ ಮುಂದೆ ಕುಳ್ಳಿರಲು ॥ ೭೧ ॥

ಅರಸುಮಕ್ಕಳು ಸಾಮಂತರು ದಳವಾಯಿ । ನರಸಿಂಹ ಭೈರವಮಂತ್ರಿ ॥
ನೆರೆದಿರ್ಪ ಭೂಚರ-ಖೇಚರರೆಲ್ಲರು । ಭರದಿ ಕೈಗಟ್ಟೋಲಗಿಸೆ ॥ ೭೨ ॥

ಸುರಪತಿಯರುಗಳ ತಮ್ಮಯ ರೂಪಿಂದ । ಜರೆವ ಕೋಮಲೆವೆಣ್ಣುಗಳು ॥
ನರನಾಥಚಂದ್ರನ ಎಡಬಲದೊಳು ನಿಂದು । ನೊರೆವಿಂಡ ಜರೆವೀರಾರ ॥ ೭೩ ॥

ಸುರರಿತ್ತ ಕನಕದಂಡೆಯುದ ಚಾಮರಗಳ । ಕರಕಂಕಣ ಝಣರೆನಲು ॥
ಎರಕದಿಂದುಂಡುದೋಳುಗಳೆತ್ತಿ ಢಾಳಿಸೆ । ಒರೆಯಲೆನ್ನಳವೇ ಆ ಬೆಡಗ ॥ ೭೪ ॥

ದೊರೆರನ್ನ ಢಾಳಿಪ ಚಮರಮಧ್ಯದೊಳಗೆ । ಪರಿಶೋಭಿಸಿದನೇನೆಂಬೆ ॥
ಶರದಭ್ರದ ನಟ್ಟನಡುವೆ ಶೋಭಿಸುತಿರ್ಪ । ಪರಿಪೂರ್ಣಚಂದ್ರನೆಂಬಂತೆ ॥ ೭೫ ॥

ಮುತ್ತಿನ ಸತ್ತಿಗೆಯುಗಲದ ನಡುವೆ ಭೂ- । ಪೋತ್ತಮನುಜ್ಜ್ವಲಿಸಿಹನು ॥
ಸುತ್ತಿದ ಪರಿವೇಷಯುಗದ ಮಧ್ಯದಿ ತೋರ್ಪ । ವೃದ್ಧ ಸೂರಿದನೋ ಎಂಬಂತೆ ॥ ೭೬ ॥

ಹಡಪ ಕನ್ನಡಿ ಗಿಂಡಿ ವ್ಯಜನ ಕಾಳಂಜಿಯು । ಪೊಡವಿಯಾಣ್ಮನ ಸುತ್ತ ಪಿಡಿದು ॥
ಮಡದಿಯರಿದ್ದರು ನಾಡಿದ ಮಾಟದ । ಕಡೆಯಾಣಿಯ ಬೊಂಬೆಯಂತೆ ॥ ೭೭ ॥

ಇಳೆಯಾಣ್ಮರಿಕ್ಕಿದ ರನ್ನದೊಡವೆಗಳ। ಹೊಳಹು ಹೊಳೆದವೆಂತೆಂಬೆ ॥
ಜಳರುಹಮಿತ್ರರ ಚಾರುಮರೀಚಿಯು। ಇಳೆಯುವ ಮುಸುಕಿವೆಂಬಂತೆ ॥ ೭೮ ॥

ನವರತ್ನಖಚಿತವಿಮಾನದೊಳಿರುತಿರ್ಪ। ದಿವಿಜರಾಜನೋ ಎಂಬಂತೆ ॥
ಭುವನಭುಂಭುಕ ರತ್ನದ ಚಾವಡಿಯೊಳು। ನವ ಮನ್ಮಥನಂತಿಹನು ॥ ೭೯ ॥

ಗುರುಕವಿಬುಧಕಲಾಧರಸುರ್ತಿರೆ। ಸುರಪತಿಯಿರುವಂದದೊಳು ॥
ಗುರುಕವಿಬುಧಕಲಾಧರರು ಬಳಸಿಕೊಂಡು। ದೊರೆಗಳ ದೇವನೊಪ್ಪಿದನು ॥ ೮೦ ॥

ಓದುವ ಶಾಸ್ತ್ರವ ಕೇಳುತ ವಾವಿಪ। ವಾದಿಗಳನು ನಿಟ್ಟಿಸುತ ॥
ಆದರದಿಂದ ಗಾನಕೆ ಕಿವಿಯೊಡ್ಡುತ। ಮೇದಿನೀಶ್ವರನಿರ್ದನಲ್ಲಿ ॥ ೮೧ ॥

ಸುರಗಿಯುಹೂವಿನ ಮಲ್ಲಿಗೆಹೂವಿನ। ಅರವಿಂದದ ಕುಸುಮಗಳ ॥
ಇರುವಂತಿಗೆ ಸಂಪಗೆ ಸೇವಂತಿಗೆಹೂವ। ಕರವೀರ ಪುಷ್ಪದಂದದೊಳು ॥ ೮೨ ॥

ಆಕಾಶಚಕ್ರಬಾಣವು ಕುರುಜುಗಳೊಳ-। ನೇಕ ಕೋಟಾಕೋಟಿಗಳು ॥
ನೂಕುತ ಕಿಡಿಗಳ ಸರ-ಪರ-ಭುಸ್ಸೆಂದು। ಭೂಕಾಂತಗಿದಿರಾಗಿ ಕರೆಯೆ ॥ ೮೩ ॥

ಭೂರಮಣರ ಕೋಟೀರ ತಾಟಿತಪಾದ। ಶೂರರ ಗಂಡಪ್ರಚಂಡ ॥
ಮಾರಾಕಾರ ಸಂಗರಧೀರಗಂಭೀರನು-। ದಾರನು ರಾಜ ಸರ್ವಜ್ಞ ॥ ೮೪ ॥

ಎಂದಿವು ಮೊದಲಾದ ದೊರೆಯಂಕಮಾಲೆಯ। ನಿಂದು ಪಾಠಕರು ಬೊಬ್ಬಿರಿತಿ ॥
ಚಂದಚಂದದಿ ಪೊಗಳುವ ಕೊರಳ ಧ್ವನಿ-। ಯಿಂದು ತುಂಬಿದವು ದಿಕ್ತಟವ ॥ ೮೫ ॥

ಶಿರದೊಳಗಳವಟ್ಟ ಚಿಮ್ಮುರಿ ಉಡೆಸುತ್ತಿ। ಕರದೊಳಗಾಂತ ಹೊಂಜಳೆಯು ॥
ಮುರುಕದಿಂ ನಡೆತಂದು ನಟ್ಟುವ ನಾಯಕ। ದೊರೆಗೆ ಸಾಷ್ಟಾಂಗವೆರಗಿದ ॥ ೮೬ ॥

ಸ್ವಾಮಿ ! ಪರಾಕೆನ್ನ ಚೆಲುವ ಹೆಮ್ಮಕ್ಕಳು। ಕೋಮಲಾಂಗಿಯರೀರ್ವರನು ॥
ಭೂಮಿಗಪ್ರತಿಪಾತ್ರವ ತಿದ್ದಿದೆನದ। ಭೂಮಿಶ ಕೊನೆಗಣ್ಣಿನಿಂದ ॥ ೮೭ ॥

ಪರಿಕಿಸಬೇಕು ನೀನೆಂದು ಬಿನ್ನವಿಸಲು। ನರನಾಥ ಮುಗುಳುನಗೆಯೊಳು ॥
ಶಿರವಲುಗಲು ನಟ್ಟುವ ನಾಯಕ ಕಂಡು। ಹರುಷದಿ ಬೀಳ್ಕೊಂಡು ಪೋಗೆ ॥ ೮೮ ॥

ಒಲೆಯದಿರಿತ್ತತ್ತ ಸಮ್ಮುಖ ಕುಳ್ಳಿರಿ। ತೊಲಗಿ ಲಾಲಿಸಿ ಬರಾಬರಿಯಿಂ ॥
ಗಲಭೆ ಹೋ ನಿಲ್ಲೆಂದು ಕಟ್ಟಿಗೆಗಾರರು। ಗಳಪಿದರರಗಿಳಿಯಂತೆ ॥ ೮೯ ॥

ರಂಗಮಂಟಪದೊಳಗಾ ವೇಳೆಯೊಳು ಬಂದು। ತೊಂಗದೆ ತಾ ನಿಂದುಕೊಂಡು ॥
ಸಂಗರಮಲ್ಲಗೆ ಕೈಮುಗಿದೆಡಬ-। ಲಂಗಳ ತಾಳವನರಿದು ॥ ೯೦ ॥

ಎಡಗೈಯ ತಾಳದ ಮೇಲೆ ಬಲಗೈಲಿ। ಪಿಡಿದಿರ್ದ ತಾಳವ ಮಡಗಿ ॥
ಒಡನೆ ವಿಲಂಬಿತ ಧ್ರುತ ಮಧ್ಯಂಗಳ। ಕಡುನೆಲೆಗಳ ನೆರೆ ತಿಳಿದು ॥ ೯೧ ॥

ಧ್ರುವಮಟ್ಟೆಯ ಮಡಿಮಟ್ಟೆಯಷ್ಟಸುತಾಳ । ರವದೋರುವೆಕ್ಕ ರೂಪಕವ ॥
ತವಕದಿ ರಟ್ಟೆಯವೆಂಬೇಳು ತಾಳದ । ವಿವರವ ಚೆನ್ನಾಗಿ ತಿಳಿದು ॥ ೯೨ ॥

ತಕ್ಕೋತ್ತಿದಿಗಿದಿ ಗಿಣ್ಣಾಂತಕಣ ಸು- । ದಿಕ್ಕಣಗಿಣದೋದಿಗಿದೋ ॥
ತಕ್ಕಣ್ಣಂಗಿಣ ಗಿಡದಿರಗಿಡದಗ । ತಕ್ಕಡತಗದೋ ಎಂದು ॥ ೯೩ ॥

ಇದು ಮೊದಲಾದ ನೂರೆಂಟು ತಾಳಂಗಳ । ಚದುರಿಂ ಭಾಜಿಸಿ ತಾಳಧಾರಿ ॥
ಹೃದಯವ ಸೂರೆಮಾಡಿದ ನೋಟಕರ ಭೂ- । ಸುದತೀಶ್ವರನ ಮೆಚ್ಚಿಸಿದ ॥ ೯೪ ॥

ಆ ಸಮಯದೊಳು ಮದ್ದಳಿಗೆ ಮದ್ದಳೆಯ ವಿ- । ಲಾಸದಿಂದವೆ ಮುದ್ದುವೆಣ್ಣ ॥
ಸೂಸುವ ಮೋಹದಿಂ ತೊಡೆಯೊಳಾಡುವಂತೆ । ಲೇಸಾಗಿ ತೊಡೆಯೊಳಗಿಟ್ಟು ॥ ೯೫ ॥

ಹೊರಮನೆಕಾಂತೆಯ ಮನವನು ಬಿಗಿವಂತೆ । ಎರಕದಿಂ ಬಿಗಿಯನು ಬಿಗಿದು ॥
ಪರಿಪೂರ್ಣಚಂದ್ರನ ಕಳಂಕವುದ್ದುವವೊಲು । ಭರದಿ ಹಳೆಯ ಕಲೆಹವಣ ॥ ೯೬ ॥

ಉದ್ದಿ ಕಬ್ಬುನದ ಚಕ್ರದಿ ನುಡಿವೆಣ್ಣಿನ । ಮುದ್ದುಮೊಗದೊಳು ತಿಲಕವ ॥
ತಿದ್ದುವಂದದಿ ಹೊಸ ಹವಣವ ಪತ್ತಿಸಿ । ಒದ್ದು ಕೆದಹಿ ಕುಲಟಿಯನು ॥ ೯೭ ॥

ಭರದಿಂದ ಕಣ್ಣಸರಿವವೊಲು ಕಣ್ಣನು । ಕೊರೆದುದಾಕಾರವ ಪುಯಿದು ॥
ಅರಸಗೆ ಕೈಯ ಮುಗಿದು ರಂಗದೊಳು ತಾನು । ಹರುಷದಿಂದವೆ ಬಂದು ನಿಂದು ॥ ೯೮ ॥

ಅರಿಕಿಟ ತದಿಕಿಟ ರಿಕಟ ರಿಕಟ ಧಿಮಿ । ದಿರುದಿಮುಕು ದಿಂದಿಮುಕುದಿಮುಕು ॥
ವರ ತದ್ದಿಮಿದಿ ದಿಮಿತಂಜೆರುಜೆಯೆಂದು । ಸ್ವರದೋರಿಸಿದ ಮದ್ದಳಿಗ ॥ ೯೯ ॥

ನರಲಾಗು ಮೋಡಿಪಹರಣೆ ಚಮತ್ಕಾರ । ಮೆರೆವ ತುಡುಮು ದಿಗ್ಗವಣೆಯ ॥
ಪರಿಕಿಸಲಿವು ಮೊದಲಾದ ನಾನಾ ಬಗೆ । ಕರ ಸೊಗಯಿಪ ಶಬ್ದಗಳ ॥ ೧೦೦ ॥

ನುಡಿಯಿಸಲಾಗ ಸಭ್ಯರು ಸಭಾಜನಗಳು । ಬಿಡವೆ ಶಿರವನೊಲೆವುತ್ತ ॥
ಕಡು ಜಾಣಹುದಹುದು ವಾಸವನೆಂದು । ನುಡಿಯುತಿರಲು ಆ ವೇಳೆಯೊಳು ॥ ೧೦೧ ॥

ಮಿರಿಕು ಮಿರಿಕು ಚಾವು ಚಾವು ಶೀವಿಶೀವಿ । ಜಿರಿಕು ಝಿಂ ಝಿಮಿಜೇಝೊ ಜೆಂಜೆ ॥
ಗುರುಝುಮು ಝುಮ್ಮೆಂದಾವುಜಗಾರನು । ಸ್ವರದೋರಿಸಿದ ರಂಗದೊಳು ॥ ೧೦೨ ॥

ಕುಕ್ಕುರು ಡುಮುಡುಮು ಪಾವುಂಜೆಯ ಜೀನು । ಡಕ್ಕೆ ನಾಟಾನಕ ಚಂಪೆ ॥
ಜಿಕ್ಕ ಕಿಂಗಿಣಿಯನು ತಕ್ಕಿಟತೋಕಿಟ । ದಿಕ್ಕಿಟತೋಂಗಿತೋಹಂಗಿ ॥ ೧೦೩ ॥

ಎಂದು ವಾದ್ಯಗಳನು ವಾದಕರೆಲ್ಲರು । ನಿಂದು ಸಭೆಯೊಳು ಭಾಜಿಸಲು ॥
ಮಂದ್ರಧ್ವನಿಗೇಳಿ ಸಭೆಯೆಲ್ಲ ಭಳಿರೆ ಭಾ- । ಪೆಂದು ಕೊಂಡಾಡಿದುದಾಗ ॥ ೧೦೪ ॥

ಚೆಂಗುತಿತ್ತಿರಿಮುಖ ವೀಣೆಜಾಂತ್ರಂಗಳು- । ಪಾಂಗ ಮುಂತಾದವನಾಂತು ॥
ಪಿಂಗದೆ ಜಿಮ್ಮುಕು ತೋದಿಕುದಿಮಿಕೆಂದು । ದಂಗು ಭಾಜಿಸಲಾ ವೇಳೆಯೊಳು ॥ ೧೦೫ ॥

ವರ ವೇಷ್ಟಿಯು ಸುತ್ತಿ ಶಿರದೊಳು ಮುತ್ತಿನ। ತೋರ ಒಂಟಿಯು ಕರ್ಣಕಿಟ್ಟು ॥
ಪೈರಣೆದೊಟ್ಟು ದುಪ್ಪಟಿಯ ಕಟಿಗೆ ಸುತ್ತಿ। ಸೇರುವೆಯರ ಕೂಡಿಕೊಂಡು ॥ ೧೦೬ ॥

ಸರ್ವಕಲಾಧರನೆಂದೆಂಬ ಗಾಯಕ-। ನುರ್ವೀಶ್ವರಗೆ ಕೈಮುಗಿದು ॥
ಪರ್ವಿದ ಮೋಹದಿ ರಂಗದೊಳಗೆ ನಿಂದು। ಸರ್ವ ಮೇಳವ ಶ್ರುತಿಗೂಡಿ ॥ ೧೦೭ ॥

ಎತ್ತಿದ ಶೃತಿಯನಿಳಿಪದೆ ಗದ್ಗದ ಭೀತ। ಮತ್ತೆ ವಿಭಿನ್ನ ಜರ್ಜರವು ॥
ಸುತ್ತಿದ ಮುಕುರಿತಚ್ಯುತಕಂಪಿತ ಪೆಂಪು-। ವೆತ್ತಮುದ್ಘೃಷ್ಟಗಳೆಂಬ ॥ ೧೦೮ ॥

ದೋಷಂಗಳ ಪೊರ್ದಲೀಯದೆ ಷಡ್ಜವು। ಲೇಸಪ್ಪ ಋಷಭಗಾಂಧಾರ ॥
ಭಾಸುರ ಮಧ್ಯಮ ಪಂಚಮ ಧೈವತ। ಶೇಷನಿಷಾದಗಳೆಂಬ ॥ ೧೦೯ ॥

ಏಳು ಸ್ವರಂಗಳ ಭೇದಾನುಕ್ರಮದಿಂದ। ಗೌಳವರಾಳಿ ಶ್ರೀದೇಶಿ ॥
ಮಾಳವ ನಾಟಿ ಮುಂತಾದ ರಾಗವನಾ-। ಗಾಳಾಪಗೈದಾ ಎಂದು ॥ ೧೧೦ ॥

ಜಿನಸಿದ್ಧಸೂರಿದೇಶಕಸಾಧು ಮುನಿಗಳ। ಘನ ಚಾರಿತ್ರವ ನುತಿಸಿ ॥
ಜನತಾಧೀಶನ ಬಿರುದಂಕಮಾಲೆಯ। ಮನವೊಲಿದು ಕೊಂಡಾಡೆ ॥ ೧೧೧ ॥

ಆ ವೇಳೆಯದೊಳು ನಾಟಕ ಚಿಂತಾಮಣಿ। ಭಾವೆ ನರ್ತನ ಚೂಡಾಮಣಿಯು ॥
ವಯ್ಯಾರದಿಂದೇಕರಂಗಿ ಚಲ್ಲಣಗಳ। ಕೋವಿದೆಯರು ತೊಟ್ಟರಾಗ ॥ ೧೧೨ ॥

ಮೆರೆವಿಂದ್ರಗೋಪದ ಪಟ್ಟೆದುರಂಗಿಯ। ಸುರುಚಿರವಾದಿಚಾರಗಳ ॥
ತರಳಾಕ್ಷಿಯರು ತೊಟ್ಟು ಚಂದ್ರಗಾವಿಯ ಮೇಲೆ। ಮಿರುಪರೇಖಿನ ಸೀರೆಯುಟ್ಟು ॥

ಅಳವಡೆಕಾಸೆಯ ಪಂಚರತ್ನಗಳಿಂದ। ಪೊಳೆವ ಸರಿಗೆ ನೊಲೆಗಟ್ಟಿ ॥
ಎಳೆವೆಣ್ಣುಗಳುಲ್ಲಾಸದೊಳಗೆ ಕಟ್ಟಿ। ಅಳಕದೊಳಿಟ್ಟು ತಿಲಕವ ॥ ೧೧೪ ॥

ಮುಡಮುಟ್ಟಲು ಜೆಡೆವೆಣೆದು ಪೂಸರವನು। ತೊಡರಿಸಿ ಮುತ್ತಿಂದ ಸಮೆದ ॥
ಕಡುರಂಜಿಪ ಜಾಲಿ ಓಲೆ ಕರ್ಣದೊಳಿಟ್ಟು। ಒಡನೆ ಮುತ್ತಿನ ಕುಚ್ಚುಗಳ ॥ ೧೧೫ ॥

ಹಸಗೈದು ಕಿವಿಯೊಳು ಮುತ್ತಿನ ಬೊಟ್ಟನು। ನೊಸಲೊಳಗಿಟ್ಟು ಕಾಂಚಿಯನು ॥
ಪುಸಿನಡುವಿನೊಳಳವಡಿಸಿ ನೂಪುರವನು। ಎಸಕದಿಂ ಚರಣದೊಳಿಟ್ಟು ॥ ೧೧೬ ॥

ಕಾಲಸರವನಿಟ್ಟು ಪಾದಯುಗಲದೊಳು। ಮೇಲು ಮುತ್ತಿನ ಮೂಗುತಿಯ ॥
ಲೀಲೆಯಿಂದಳವಡಿಸಿ ನಾಸಿಕದೊಳು। ತೋಳಬಳೆಯ ತೋಳೊಳಿಟ್ಟು ॥ ೧೧೭ ॥

ಕೊರಳೊಳು ಮುತ್ತಿನ ಪಂಚಸರವ ಕಟ್ಟಿ। ಬೆರಳೊಳಗಿಟ್ಟುಂಗುರಗಳ ॥
ಕರಯುಗದೊಳು ಗೌಳಸರಗಳನಮರಿಸಿ। ವರ ಭುಜಕೀರ್ತಿಯನಿಟ್ಟು ॥ ೧೧೮ ॥

ಅಳವಡೆ ಇವು ಮೊದಲಾದ ಪಸದನವು। ಘಲಿರೆಂಬ ಪೊಂಗೆಜ್ಜೆಗಳ ॥
ನಲವಿಂದ ಸುತ್ತಿ ಚರಣದೊಳು ಮೆರೆದರಾ-। ಗಲರ್ವಿಲ್ಲ ನಾನೆಯಂದದೊಳು ॥ ೧೧೯ ॥

ಅರಳುಗಳನು ಪೊತ್ತ ಜಂಗಮಲತೆಯಂತೆ। ಗುರುಕುಚೆಯರು ನಡೆತಂದು ॥
ತೆರೆಯ ಮರೆಯಳೊಂದೆರಡು ಮೂರಾಟವ। ಮುರುಕದೊಳಗೆ ತೋರಿದರು ॥ ೧೨೦ ॥

ಮೇಘವರ್ಣದ ತೆರೆಮರೆಯೊಳು ನಟಿಸುವ। ಸೋಗೆಗಂಗಳೆಯರೊಪ್ಪಿದರು ॥
ಮೇಘದಿದಿರೊಳು ನರ್ತನವಾಡುತಲಿರ್ಪ। ಸೋಗೆಯುಗಲವೋ ಎಂಬಂತೆ ॥ ೧೨೧ ॥

ಕರಿಯಯುದಯರಾಗದ ತೆರೆ ಮರೆಯೊಳು। ಗರುವೆಯರೊಲೆದಾಟವಿಹುದು ॥
ಕರಿಯ ಮೇಘದ ಮರೆಯೊಳು ಮಿಂಚುಯುಗಲವು। ಹರಿದಾಡುವಂತೆ ತೋರಿದರು ॥

ಹರಿಣಾಂಕಮಂಡಲ ಮರೆಯಾದ ಮೇಘವು। ಹರಿದುಹೋಹಂತೆ ವೇಳೆಯೊಳು ॥
ಕರಿಯಯುದಯರಾಗದ ಜವನಿಕೆಯನು। ತೆರೆಯಲೊಪ್ಪಿದವು ಮೊಗಗಳು ॥ ೧೨೩ ॥

ನಳಿತೋಳುಗಳನೆತ್ತಿ ಪುಷ್ಪಾಂಜಲಿಯನು। ಎಳೆವೆಣ್ಣುಗಳು ಮಾಡಲಿಹುದು ॥
ಎಳಲತೆಗಳು ಪೊತ್ತ ಪರಿಮಳ ಪುಷ್ಪವು। ಸುಳಿಗಾಳಿಗುದುರುವಂತಾಯ್ತು ॥ ೧೨೪ ॥

ರಂಗದೊಳಗೆನಿಂದಂಘ್ರಿಯ ಪಸರಿಸಿ। ರಂಗು ಥಳಿಪ ಹಸ್ತವನು ॥
ಪಿಂಗದೆ ಕಟಿಯೊಳಿಡಲು ಮೆರೆದರು ಮೂಜ-। ಗಂಗಳಂಗವ ತೋರುವಂತೆ ॥ ೧೨೫ ॥

ಅಂಗಹಾರವನು ಮೂವತ್ತೆರಡನು ಕೋಮ-। ಲಾಂಗಿಯರುಗಳಾದಿಯೊಳು ॥
ಹೊಂಗಿಸುತಿತ್ತತ್ತ ವಿಟರಂಗನ ತ-। ನ್ಮಂಗದೊಳಗೆ ತೋರುತಲಿ ॥ ೧೨೬ ॥

ಬೆಡಗುಗಾತಿಯರು ಪತಾಕ ತ್ರಿಪತಾಕ। ಗಡಣದಿಯರ್ಧಪತಾಕ ॥
ಬಿಡದೆ ಕತ್ತರಿಮುಖ ನೀಲಕಂಠಾಸ್ಯವು। ಸಡಗರದಿಂದರ್ಧಚಂದ್ರ ॥ ೧೨೭ ॥

ಉರಗಮಸ್ತಕ ಶುಕತುಂಡ ಮರಾಳವು। ಸರಸಿಜಕೋಶವು ಮುಟ್ಟಿ ॥
ಹರಿಮುಖ ಮುಂತಾದ ಸಂಯುತಹಸ್ತವು। ಪರಿಕಿಸಲಿಪ್ಪತ್ತನಾಲ್ಕು ॥ ೧೨೮ ॥

ಕುಸುಮಪುಟಾಂಜಲಿ ಚತುರಸ್ರ ಸ್ವಸ್ತಿಕ। ಎಸೆವ ಕಲಶ ವರ್ಧಮಾನ ॥
ಹಸನಾದುರಗಬಂಧ ವೈಷ್ಣವ ಉತ್ಸಂಗ। ಕುಶಲದ ದೊಳಾಹಿತ್ಥ ॥ ೧೨೯ ॥

ತಿಲಕ ಮುಂತಾದ ಸಂಯುತಹಸ್ತ ಹದಿನಾರ। ಚೆಲುವಿಂದ ತೋರಿಸಿ ಮತ್ತೆ ॥
ಲಲನಾಮಣಿಗಳು ಬಲಯೆಡಗಾಲನು। ಚಲನೆದೋರಿದರು ಕಿಂಚಿತ್ತು ॥ ೧೩೦ ॥

ಘಿಲಿಘಿಲಿರೆನುತಿರೆ ಗೆಜ್ಜೆಯು ಚರಣವ-। ನಲುಗಿಸೆ ವಿಟರಂತರಂಗ ॥
ಪಲಪಲಗುಟ್ಟುತ ಕಾಮಚಕ್ರೇಶನ। ನಲಗಿಗೆ ಗುರಿಯಾದರೆಲ್ಲ ॥ ೧೩೧ ॥

ಎಡಬಲಗಾಲ ಪಸರಿಸಿ ಹಸ್ತಗಳೆತ್ತಿ। ಬೆಡಗಿಂದಭಿನಯಿಸುತ್ತ ॥
ಮಡದಿಯರುಗಳು ತೈತೈ ಎಂದು ಕುಣಿಯಲು। ಒಡನೆ ವಿಟರ ದೇಹ ಬೆಮರಿ ॥ ೧೩೨ ॥

ಚರಣವ ಸಮಪಾದದೊಳಗಿಟ್ಟು ಮೆಲ್ಲನೆ। ಸ್ವರದೋರುತ ಗೆಜ್ಜೆಗಳ ॥
ಕರಗಳನೆತ್ತಿ ಶಿರೋಭೇದ ಪದಿಮೂರ। ಭರದಿ ತೋರಿಸುತ ಶಿರದೊಳು ॥ ೧೩೩ ॥

ಮೆಲ್ಲನೆ ಪಜ್ಜೆಗಳನು ಮುಂದುಮುಂದಕೆ । ಚೆಲ್ಲಗಾತಿರುಗಳಿಡುತ ॥
ಕೊಲ್ಲದ ಕೊಲೆಯು ಮೂವತ್ತಾರು ನೋಟಗ- । ಳಲ್ಲಿ ಕೊಲ್ಲುತ ವಿಟತತಿಯ ॥ ೧೩೪ ॥

ಕರಿದಂತ ಸೂಜಿಯುದ್ಧದ ಪಲ್ಲವಲತೆ । ಕರಿಹಸ್ತರೇಚಿತ ನಳಿಸೀ ॥
ವರದಾಭಯಜ್ಞಾನ ಮಕರ ನಿತಂಬವು । ವರ ಕೇಶಬಂಧಕಪಾಲ ॥ ೧೩೫ ॥

ತಲಮುಖ ಮುಂತಾದ ಉದ್ವೃತ್ತಹಸ್ತವು । ಚೆಲುವಿಂದಿಪ್ಪತ್ತನಾಲ್ಕು ॥
ಲಲನಾಮಣಿಗಳು ನೃತ್ಯದಿ ತೋರುತ । ನಲಿದರು ರಂಗಮಂಟಪದಿ ॥ ೧೩೬ ॥

ಹರಿಯುತ ಹುಲ್ಲೆಯಂದದಿ ಮುಂದುಮುಂದಕೆ । ಮರಿವಾವುಗಳಂದದಲಿ ॥
ಚುರುಚುರುನವರು ಹಿಂದಕೆ ಹಿಂದು ನಟಿಸುತ । ಬರುವರು ಮೊದಲಿದ್ದ ನೆಲೆಗೆ ॥ ೧೩೭ ॥

ಮರಿಯಾನೆಯಂದದಿ ಮೂಡ-ಪಡುವ-ತೆಂಕ । ತಿರಿಯಕ್ಕಾಗಿ ತಿರುಗುತ ॥
ಎರಕದಿ ಹುಬ್ಬ ಹಾರಿಸುತ ವಿಟರ ಮೇಲೆ । ಸೆರೆಗೈಯುತವರ ಚಿತ್ತವನು ॥ ೧೩೮ ॥

ಇದಿರಿದಿರಾಗಿ ಕೆಲವು ಪೊತ್ತು ನಟಿಪರು । ಚದುರಿಂದ ಚೆನ್ನುಚೆನ್ನಾಗಿ ॥
ಸುದತಿಯರುಗಳಿಟ್ಟು ನಟಿಸುತಾಸ್ಥಾನಕೆ । ಒದಗಿಸುವರು ಸಂತಸವ ॥ ೧೩೯ ॥

ಮುಗುಳುನಗೆಗಳಿಂದ ಮುದ್ದಾದ ಮೊಗವನು । ಸೊಗಸಿಂದ ಮರುಕಿಸಿ ವಿಟರ ॥
ಬೆಡಗುಗೊಳಿಸುತ ವಿರಹಾಗ್ನಿ ವೇದನೆಯೊಳು । ತೆಗೆಬಿಗಿಮಾಳ್ಪರೇನೆಂಬೆ ॥ ೧೪೦ ॥

ಮತ್ತೆ ತಿರುಗಿ ಬಂದು ರಂಗಸ್ಥಾನಕೆ ನಿಂದು । ತಿತ್ತಿತಾ ತತ್ತತಾಯೆಂದು ॥
ನರ್ತಿಸೆ ಮೂವತ್ತೆರಡುಬಾರಿಗಳೊಳ- । ಗಳ್ತಿ ಬಡಿಸುವರು ಸಭೆಯ ॥ ೧೪೧ ॥

ಭಾವವಿಭಾವಾನುಭಾವರೇಖೆಗಳನು । ಲಾವಣ್ಯಾಂಗಿಯರು ತೋರಿಸುತ ॥
ಭಾವಜಸಮರೂಪ ಜ್ಞಾನೇಂದು ಚಿತ್ತವ । ಏವಣ್ಣಿಪೆ ನಲುಗಿಪರು ॥ ೧೪೨ ॥

ನೂರೆಂಟು ನಿಲುವಿನ ಕಟ್ಟಳೆಗಳಸಾಗ । ನಾರಿಯರುಗಳು ತಾವರಿದು ॥
ನೇರಾಣಿ ಬೊಂಬೆಯಂದದಿ ನರ್ತಿಸಿದರು । ಭೂರಮಣನು ಮೆಚ್ಚುವಂತೆ ॥ ೧೪೩ ॥

ಕೊರವಜ್ಜಿ ಕಟ್ಟಳೆಯಿಂದೊಮ್ಮೆ ನಟಿಪರು । ಕರಗಳ ನಡುವಿನೊಳಿಟ್ಟು ॥
ಹೊರತಿರುಪುವನೊಳತಿರುಪುಗಳನುಗೊಂಡು । ನೆರೆದ ಜನರ ಮೆಚ್ಚಿಪರು ॥ ೧೪೪ ॥

ಚರಣವ ಮಡಿಯಿಟ್ಟು ಮುಂಡಿಗಾಲನು ಹೂಡಿ । ಎರಕದಿಂದವೆ ರಂಗದೊಳು ॥
ತಿರುಗವರವರರ್ಧಭ್ರಮರಿಗಳಿಂದಲು । ನೆರೆಭ್ರಮರಿಗಳಿಂದ ಸೊಗಸಿಂ ॥ ೧೪೫ ॥

ಢಾಳವ ಕರದೊಳಗಾಂತು ತಿರುಪುತಲಿ । ಸೋಲಿಸಿ ವಿಟರ ಚಿತ್ತವನು ॥
ಸೂಳೆಯರುಗಳು ನರ್ತಿಸಿದರು ಸಭೆಯಲ್ಲಿ । ಬೇಳುವೆಯಿಂದ ನೋಡುತಿರೆ ॥ ೧೪೬ ॥

ತಾರಕಾಂತಾ ನೃತ್ಯ ನಾಗಕನ್ಯಾ ನೃತ್ಯ । ಸೂರಿದ ಕಾಂತಾ ನೃತ್ಯ ॥
ಕೈರವಸಖ ಕಾಂತಾ ನೃತ್ಯವಾಡಿದರಾಗ । ಸೂರೆಯಾಡಿವರ್ವಿಟರೆದೆಯ ॥ ೧೪೭ ॥

ಕರಚರಣಗಳೂರಿ ರಂಗಮಂಟಪದೊಳು । ಮುರುಕದಿ ಮೊಗವಡಿ ಮಾಡಿ ॥
ಭರದಿಂದ ಮತ್ಸ್ಯದಂದದಿ ಬಲಚಾರಿಯ । ಧರೆಗೂರುತಲೆಡದಿಕ್ಕ ॥ ೧೪೮ ॥

ಒಲಿದು ಭೂಮಿಯ ಮುಟ್ಟಿಸುತ ಚರಣಗಳ । ಪಲವು ದಿಕ್ಕಿಗೆ ತಿರುಪುತ್ತ ॥
ಘಲಿಘಲಿರೆನಿಸುತ ಗೆಜ್ಜೆಯ ಕಾಲಿಂದ । ನಲವಿಂದ ಹಾರುತಂಬರಕೆ ॥ ೧೪೯ ॥

ಕುಪ್ಪುತಲೆಡಬಲಕೆ ಲಾಗುಗಳನು । ಒಪ್ಪದಿಂದಿಡುತ ನೆಗೆವುತ ॥
ಟಪ್ಪಟಪ್ಪನೆ ತಾಳದಿಂದ ಭೂಮಿಯ ಮೆಟ್ಟಿ । ಹೆಪ್ಪೊಡೆಯಿತು ವಿಟರೆದೆಯು ॥ ೧೫೦ ॥

ಮಿಂಚಿನಂದದಿ ಹೊಳೆವರು ರಾಗವ ಕೂಡಿ । ವುಂಚದಿಂದೆತ್ತಿ ಪಾಡುವರು ॥
ಕಂಚುಮಿಂಚಾಗುವರೊಮ್ಮೆ ರಾಗದಿ ಬಂದು । ಚಂಚಲಾಕ್ಷಿಯರು ನಟಿಪರು ॥ ೧೫೧ ॥

ದಶಪದ್ಮಲಾಸ್ಯ ವಿಂಶತಿಪದ್ಮಲಾಸ್ಯ ಷೋ- । ಡಶಪದ್ಮಲಾಸ್ಯದಿಂದಾಗ ॥
ಶಶಿವದನೆಯರು ನಟಿಪರು ನೋಟಕರಂಗ । ಬಿಸುಸೇರಿ ಬೆದಬೇವಂತೆ ॥ ೧೫೨ ॥

ತಿರುಪು ಹೊಳಪು ಸಮಸೂಚಿ ವಿಷಮಸೂಚಿ । ಉರಗಬಂಧವು ಕೂರ್ಮಬಂಧ ॥
ಹೊರಮೊಳೆ ಒಳಮೊಳೆ ತಿಗಮರಿ ಜಲಶಯ । ಮೆರೆವ ಲಂಕಾದಹನಾದಿ ॥ ೧೫೩ ॥

ನೂರೆಂಟು ಕರಣಗಳನು ಕ್ರಮದಿಂದಲಾ । ನಾರೀಮಣಿಗಳು ತೋರಿ ॥
ಧಾರುಣಿಪತಿಗಳ ಚಿತ್ತವ ಸೋಲಿಸೆ । ಸೇರುವೆಯಿಂ ನಟಿಸಿದರು ॥ ೧೫೪ ॥

ಇಳೆಯಾಣ್ಮರು ಸೇನಾಪತಿ ಮಂತ್ರಿ ಸಭೆಯಲ್ಲಿ । ಭಳಿರೆ ಭಾಪುರೆ ಇಂತ ಪಾತ್ರ ॥
ಇಳೆಯೊಳು ನಾವು ಕಂಡವರಲ್ಲ ಸ್ವರ್ಗದ । ನಿಳಯದೊಳುಂಟೋ ತಿಳಿಯದು ॥ ೧೫೫ ॥

ಎಂದು ಕೊಂಡಾಡಿ ಕೊನರುತಿರಲು ಬೋ- । ಧೇಂದು ನಟ್ಟುವನನು ಕರೆಸಿ ॥
ಚಂದವಾಯಿತು ಪಾತ್ರವ ತಿದ್ದಿದೆ ನೀ- । ನೆಂದು ಬಣ್ಣಿಸಿ ಸಾಕಿನ್ನೆಂದು ॥ ೧೫೬ ॥

ಸುರತರು ಕೈಬಿಟ್ಟಿತೋ ಸುರಧೇನುವೇ । ಕರುಪಿಕ್ಕಿತೋ ಪೆಗ್ಗಾನೆ ॥
ಭರದಿಂದ ಹಯನಾಯಿತೋ ಚಿಂತಾಮಣಿ । ನೆರೆ ಫಲವಾಯಿತೋ ಎನಲು ॥ ೧೫೭ ॥

ಹೊರೆಹೊರೆಗಟ್ಟಿಸಿ ಭಂಗಾರ ವಸ್ತ್ರವ । ಹರಿವಂತೆಯವನ ದಾರಿದ್ರ ॥
ನರನಾಯಕನೆರಡು ಜೋಳಿಗೆಗೂಡಿ । ಕರೆದು ಕೊಟ್ಟನು ಸಂತಸದಿ ॥ ೧೫೮ ॥

ಕೊಡಿಸಿಯೊಂದೊಂದು ತೊಡಿಗೆಯಾಭರಣವ । ಪ್ರೊಡವಿಯಾಣ್ಮನು ನರ್ತಕಿಯರ್ಗೆ ॥
ಕಡೆಯಾಣಿ ಸರಿಗೆ ಮುತ್ತಿನ ಸೆರಗಿನ ಮೇಲು । ಬೆಡಗಿನ ಸೀರೆಯನೆರಡ ॥ ೧೫೯ ॥

ಇತ್ತು ಮೇಳದ ಪೈಕವೆಲ್ಲವು ತಲೆಹೊರೆ- । ಯೊತ್ತು ಪೋಪಂತುಡುಗೊರೆಯ ॥
ಚಿತ್ತರದಿಂದ ಕೊಡಿಸಿ ವಿಬುಧರಿಗೆಲ್ಲ । ವಿತ್ತವ ಮನದಣಿವಂತೆ ॥ ೧೬೦ ॥

ಧರೆ ಬೆಸನಾದಂತೆ ಕೊಡಿಸಿಯೋಲಗಗೊಟ್ಟು । ದೊರೆರಾಯನಿರ್ಪ ವೇಳೆಯೊಳು ॥
ಮುರುಕದಿಂದುಡೆಸುತ್ತಿ ಸಭೆಗೋರ್ವ ನಡೆತಂದು । ಕರಗಳ ಮುಗಿದು ಭೂಭುಜಗೆ ॥

ರನ್ನಕಾಣಿಕೆಯಿತ್ತು ನುಡಿದ ಖೇಚರದೇವ । ಬಿನ್ನಹ ಸಂಗೀತಪುರದ ॥
ಸನ್ನುತ ಶತಬಲ ಖೇಚರನಾಯಕ । ತನ್ನ ಸುತೆಯ ರೂಪವತಿಯ ॥ ೧೬೨ ॥

ಕನ್ಯಾರತ್ನ ವರ ರತ್ನಮಾಲೆಯು ಎಂಬ । ಚೆನ್ನೆಯ ಗುಣದ ರನ್ನೆಯನು ॥
ನಿನ್ನನಂದನ ಭಾನುಕುವರಗೆ ಕೊಡುವೆನೆಂ- । ದೆನ್ನ ನಿನ್ನಲ್ಲಿಗಟ್ಟಿದನು ॥ ೧೬೩ ॥

ಎಂದು ಬಿನ್ನವಿಸಲು ಖೇಚರ ರಾಯನಾ- । ನಂದವ ತಾಳಿ ಚಿತ್ತದೊಳು ॥
ಮುಂದ್ರೋಕ್ತಿಗಳಿಂದ ಬೀಳ್ಕೊಡಲವನ್ನೆ- । ತಂದು ತನ್ನಯ ಪಟ್ಟಣಕೆ ॥ ೧೬೪ ॥

ಶತಬಲನಿಗೆ ಜ್ಞಾನಚಂದ್ರಮ ಪೇಳಿದ । ಅತಿಶಯ ಮಾತೆಲ್ಲ ಪೇಳೆ ॥
ಅತಿ ಸಂಭ್ರಮದಿಂದ ಮದುವೆಯ ಸಮಕಟ್ಟು । ಮಿತಿಮಾಡಿಸಿ ಮಂತ್ರಿಗಳಿಗೆ ॥ ೧೬೫ ॥

ಓಲಗದೊಳಗಿರುತಿರಲಿತ್ತ ಜ್ಞಾನೇಂದು । ಲೀಲೆಯಿಂ ದೊರೆದೊರೆಗಳಿಗೆ ॥
ಪೇಳಿ ವಿನಯವಚನವನುಡುಗೊರೆಯಿತ್ತು । ಭೂಲಲನೇಶತಿಪ್ರಿಯದಿ ॥ ೧೬೬ ॥

'ಜಿನನಾಥ ನಮೋ' ಎಂದು ಹರಿಹೀಠದಿಂದೆದ್ದು । ಮಿನುಗುವ ಹಾವುಗೆ ಮೆಟ್ಟಿ ॥
ಜನಪರೊಗ್ಗಿಲಿ ಬಂದು ರಾಜದ್ವಾರದೊಳ್ನಿಂದು । ವಿನಯದಿಂ ಕಳುಹಿಸೆಲ್ಲರನು ॥ ೧೬೭ ॥

ಅರಮನೆಯೊಳಪೊಕ್ಕು ಮಜ್ಜನವನು ಮಾಡಿ । ದುರಿತಾಂತಕನಿಗೆ ನಮಿಸಿ ॥
ಶರಧಿವೇವಿಯ ತೋಳತೆಕ್ಕೆಯೊಳಿರುತಿರೆ । ತರಣಿಯುದಿಸಿದನಷ್ಟರೊಳು ॥ ೧೬೮ ॥

ತಿಳಿಯಲು ನಿದ್ರೆ ಮೈಮುರಿದೆದ್ದು ರಾಯನು । ನಳಿನಲಪನವನು ತೊಳೆದು ॥
ಖಳಕರ್ಮವಿಜಯಗೆ ನಮಿಸಿ ಶೃಂಗರವಾಗಿ । ಇಳೆಯಾಣ್ಮನಿರ್ದ ಸಂತಸದಿ ॥ ೧೬೯ ॥

ಭುವನಭುಂಭುಕ ವಿಕ್ರಮದಲ್ಲಿ ತ್ರ್ಯಂಬಕ । ಕುವಲಯದಲನಿಭಾಂಬಕನು ॥
ಕವಿಬುಧಕಮಲಕೆ ಪ್ರತ್ಯೂಷಡಂಬಕ- । ನವನೀಶೊಪ್ಪಿದ ಶುಂಭಕನು ॥ ೧೭೦ ॥

**॥ ಅಂತು ಸಂಧಿ ೪೧ಕ್ಕಂ ಪದ ೫೭೩೬ಕ್ಕಂ ಮಂಗಲಂ ॥**

# ದ್ವಾದಶಾನುಪ್ರೇಕ್ಷೆ.

ಅನುಪ್ರೇಕ್ಷೆ ಹನ್ನೆರಡನು ಜ್ಞಾನಚಂದ್ರಮ । ನೆನೆದು ಭಾವಿಸಿದ ಸೊಲ್ಲಿಪೆನು ॥ಪ॥

ಕುಂಡಲಿನಾಥಾಖಂಡಲನೃಪ ಮೌಲಿ । ಮಂಡಿತ ಪದಖರದಂಡ ॥
ಚಂಡಾಘಪಿಂಡವ ಖಂಡಿಪ **ಶಾಂತೀಶ** ! । ಹಿಂಡೆಮ್ಮ ಪಾಪದಂಡಲೆಯ ॥ ೧ ॥

ಆ ವೇಳೆಯಳೋರ್ವ ಮನುಜನು ನಡೆತಂದು । ಭೂವರನಾಸ್ಥಾನವೊಕ್ಕು ॥
ಠೀವಿಯೊಳೋಲಗಗೊಟ್ಟಿರ್ದ ನೃಪನಿಗೆ । ಸಾವಧಾನದೊಳು ಕೈಮುಗಿದು ॥ ೨ ॥

ನರಲೋಕ ದೇವೇಂದ್ರ ! ಬಿನ್ನಪ ಚಿತ್ತೈಸು । ಹರಿಚಂದ್ರನ ಪಟ್ಟದರಸಿ ॥
ಹರಿಣಲೋಚನೆ ನಂದೆ ಬಸುರಾಗಿ ನಿಮ್ಮಯ । ಚರಣವ ಪೂಜಿಪೆನೆಂಬ ॥ ೩ ॥

ಪಿರಿದು ಬಯಕೆ ಪುಟ್ಟಿ ತನುತನುವಾಗಿರೆ- । ಯರಿದು ಕೆಳದಿಯರು ಬೇಗ ॥
ಹರಿಚಂದ್ರಗೊರೆಯಲು ಎನ್ನ ನಿಮ್ಮಲ್ಲಿಗೆ । ತುರಿಹದಿಂದಟ್ಟಿದರೆನಲು ॥ ೪ ॥

ಆ ನುಡಿಯನು ಕೇಳಿ ಪರಮಾಹ್ಲಾದನದಿಂದ । ಜ್ಞಾನಚಂದ್ರಮನಾ ಚರಗೆ ॥
ಸಾನಂದದಿಂ ಸಂತುಷ್ಟಿದಾನವ ಕೊಟ್ಟು । ಮಾನವೇಂದ್ರನು ಉತ್ಸಾಹದಲಿ ॥ ೫ ॥

ಭೇರಿಯ ಪುಯ್ಸಿ ತನ್ನಯ ತನುಜಾತರು । ನಾರೀಮಣಿಗಳು ಕೂಡಿ ॥
ಚಾರುವಿಮಾನಗಳೇರಿ ಮಮತೆಯಿಂದ । ವಾರಿದ ಮಾರ್ಗಕೆಯ್ದರಿ ॥ ೬ ॥

ದೆಸೆದೆಸೆಗಳಿಗೆ ವಿಮಾನಕೀಲಿತ ಪೊಚ್ಚ । ಪೊಸ ರತ್ನಂಗಳ ಕಾಂತಿ ॥
ಬಿಸಿಗದಿರನ ಕಿರಣವ ಮೆಟ್ಟಿ ನೂಂಕುತ । ಪಸರಿಸಿ ಬರೆ ಬರುತಿರಲು ॥ ೭ ॥

ಹರಿಚಂದ್ರಕುವರನು ತಂದೆಯು ಬರವೆಂದು- । ಯರಿತೂರೊಳಷ್ಟ ಶೋಭೆಯನು ॥
ಎರಕದಿಂ ಮಾಡಿಸಿ ಚತುರಂಗ ಬಲಗೂಡಿ । ಪುರವನು ತಾ ಪೊರಮಟ್ಟು ॥ ೮ ॥

ಧರೆಗಿಳಿತಂದ ತನ್ನಯ ತಂದೆಯಿದಿರ್ಗೊಂಡು । ಮೆರೆವ ಪಟ್ಟೆಯ ಸುರುಳ್ಗಳನು ॥
ಎರಕದಿಂದಿಕ್ಕಿ ನಿವಾಳಿಯ ರತ್ನವ । ಸುರಿದು ಚರಣಯುಗಲದೊಳು ॥ ೯ ॥

ಸಾಷ್ಟಾಂಗವೆರಗಲು ಜ್ಞಾನಚಂದ್ರಮ ಕೈ- । ಮುಟ್ಟೆತ್ತಿಯಮರ್ದಪ್ಪಿಕೊಂಡು ॥
ಬಟ್ಟಾಡುತಿರಲಾನಂದಾಶ್ರು ಮಗನನು । ತೊಟ್ಟುಕೊಂಡನು ಮರಳಿ ಮರಳಿ ॥ ೧೦ ॥

ಅನುಮತಿ ಮೊದಲಾದ ಪದಿನೈದು ಸಾಸಿರ । ಜನನಿಯರುಗಳಿಗೆ ನಮಿಸಿ ॥
ಘನವಾಶೀರ್ವಾದವಾಂತ ತನ್ಮಂದಿರು । ಮನದಕ್ಕರಿಂದಡಿಗೆರಗೆ ॥ ೧೧ ॥

ಬಿಡದಮರ್ದಪ್ಪಿ ವಿನಯವಚನಗಳನು । ನುಡಿದು ತಂದೆಯನೊಡಗೊಂಡು ॥
ಕಡುಗಾಡಿಯಿಂ ಬರುತಿರಲು ನಾನಾ ವಾದ್ಯ । ಘುಡುಘುಡಿಸಿದವು ಘೋರೆಂದು ॥ ೧೨ ॥

ಎಳೆವೆಣ್ಣುಗಳು ನರ್ತಿಸೆ ಸೋಗೆಯಂದದಿ । ಪೊಳಲು ಪೊಕ್ಕವರು ಸಂಭ್ರಮದಿ ॥
ನಲವಿಂದ ನೋಡುತ ಪುರವೈಸಿರಿಯನು । ಸಳಿಸಾಂಬಕಿಯರುಗೂಡಿ ॥ ೧೩ ॥

ಅರಮನೆಯನು ಪೊಕ್ಕು ನರನಾಥಚಂದ್ರಮ । ಹರುಷದಿ ಸ್ನಾನ ಭೋಜನವ ॥
ಅರಸಿಯರೊಡಗೂಡಿ ಮಾಡಿ ಸುಖದೊಳಿರೆ । ಹರಿಮಧ್ಯೆ ನಂದೆ ತಾ ಮಿಂದು ॥ ೧೪ ॥

ದುಗುಲವನುಟ್ಟು ಜಿನೇಂದ್ರನ ಗೃಹಕ್ಕೈದಿ । ಮುಗುಳಂಬಮದಮರ್ದನನ ॥
ನಗುಮಿಗೆ ಪೂಜಿಸಿ ಬೀಳ್ಕೊಂಡು ನಡೆತಂದು । ಮೃಗವೈರಿಪೀಠದೊಳಿರ್ದ ॥ ೧೫ ॥

ಮಾವಾಜಿಗೆ ಕೈಯ ಮುಗಿದು ನಂದವತಿ । ತೀವಿದ ಭಕ್ತಿಯಿಂ ಮೂಸಿ ॥
ಭಾವಕಿ ಬಲವಂದು ಚರಣಕ್ಕೆರಗಿ ಮತ್ತೆ । ಮಾವನ ಕೇಸಡಿಗಳನು ॥ ೧೬ ॥

ಪನಿನೀರಿನಿಂದ ಪ್ರಕ್ಷಾಲಿಸಿಯುದಕವ । ವನಿತೆ ತಲೆಗೆ ತಳಿಕೊಂಡು ॥
ಘನಸಾರಮಿಶ್ರಿತ ಕುಂಕುಮಗಂಧವ- । ನನು ಲೇಪಿಸಿ ಪಾದಯುಗಕೆ ॥ ೧೭ ॥

ಪರಿಮಳಮಯವಾದ ಮಲ್ಲಿಗೆ ಮುಗುಳಿನ । ಕರರಂಜಿಪ ದಂಡೆಯನು ॥
ವರ ಮಾತುಳನ ಕಿವಿಗೆ ಭಕ್ತಿಯೊಳಿಕ್ಕಿ । ಚರಣಕರ್ಚಿಸಿ ಕುಸುಮಗಳ ॥ ೧೮ ॥

ಪರಿಮಳ ಜಳದಿಂದ ಹರಿಚಂದನದಿಂದ । ಸುರಗಿ ಮಲ್ಲಿಗೆಯರಳಿಂದ ॥
ಪರಮಾನ್ನದಿಂದ ಕರ್ಪುರದಾರತಿಯಿಂದ । ವರ ಗುಗ್ಗುಳ ಧೂಪದಿಂದ ॥ ೧೯ ॥

ಪಲವು ಫಲಗಳಿಂದ ಪಾದಾರ್ಚನೆ ಮಾಡಿ । ಲಲಿತಾರ್ಘ್ಯವ ಪಿಡಿದೆತ್ತಿ ॥
ಒಲವಿಂದ ಶಾಂತಿಧಾರೆಯ ಕೊಟ್ಟು ನವರತ್ನ । ಪೊಳೆವ ಪುಷ್ಪಾಂಜಲಿಯೆಸಗಿ ॥ ೨೦ ॥

ಪರಿಮಳ ತಾಂಬೂಲ ತಂದು ಮಾಮಾಜಿಯ । ಚರಣಕ್ಕೆರಗಲು ಜ್ಞಾನೇಂದು ॥
ಧರೆಯನೇಕಛತ್ರವಾಳುವ ಪುತ್ರನ । ಗರುವೆ ! ನೀ ಪಡೆಯೆಂದು ಪರಸಿ ॥ ೨೧ ॥

ಥಳಥಳಿಸುವ ಜ್ಯೋತಿರ್ಮಾಲೆಯೆಂದೆಂಬ । ವಿಲಸಿತ ಹಾರನ ಸೊಸೆಯ ॥
ಚೆಲುವ ಕಂಠದೊಳಿಡೆ ನಂದೆಯೆರಗಿ ಮತ್ತೆ । ನಿಳಯಕೆ ಕಳುಹಿಸಿಕೊಂಡು ॥ ೨೨ ॥

ಸೌಂದರಾಂಗಿಯ ಬಯಕೆಯ ತೀರ್ಚಿ ಪರಮಾ- । ನಂದದೊಳಿರೆ ಜ್ಞಾನೇಂದು ॥
ಒಂಪನೆರಡರಿಂದ ಗುಣಿಸಿದ ತಿಂಗಳು । ಚಂದದೊಳಿರುತಿರಲಾಗ ॥ ೨೩ ॥

ಒಂದು ದಿವಸ ಹರಿಚಂದ್ರಕುಮಾರನು । ತಂದೆವೆರಸು ಸಭೆಯೊಳಗೆ ॥
ಸಿಂಧೂರವೈರಿಪೀಠದೊಳೋಲಗಗೊಟ್ಟು । ಇಂದುರವಿಗಳಂತಿರಲು ॥ ೨೪ ॥

ಒಂಭತ್ತು ತಿಂಗಳು ಪರಿಪೂರ್ಣವಾಗಲು । ಕಂಬುಕಂಧರೆ ಸುದಿನದೊಳು ॥
ಅಂಬುಜಸಖನಂತೆ ಪೊಳೆವ ಕುವರನನ್ನು । ಬಿಂಬೋದಯದಿ ಪೆತ್ತಳವಳು ॥ ೨೫ ॥

ಕಡುಬೇಗದಿಂದೋರ್ವ ದಾದಿ ತಾನೈತಂದು । ಪೊಡವಿಪತಿಗೆ ಕೈಯ ಮುಗಿದು ॥
ನುಡಿದನೆಲೆರಾಯ ! ನಿನ್ನ ಕುಮಾರನ । ಮಡದಿ ಪೆತ್ತಳು ಗಂಡುಮಗುವ ॥ ೨೬ ॥

ಎಂದು ಪೇಳಲು ಪರಮಾಹ್ಲಾದವನೈದಿ । ಅಂದೊಸಗೆಯ ಪೇಳ್ದವಳ್ಗೆ ॥
ಅಂದುಗೆ ಮುಂಗೈಯ ಮುರುತಿಯ ಸರಪಣಿ । ಹೊಂದೊಡವಿತ್ತ ನೃಪೇಂದ್ರ ॥ ೨೭ ॥

ಒಸಗೆವರಿಗಳು ಮೊಳಗಿದವು ಕೋಟಾಕೋಟಿ । ಶಶಿಮುಖಿಯರು ನರ್ತಿಪರು ॥
ಶಿಶುವಿಗೆ ಜಾತಕರ್ಮಕ ಮಾಡಿಸಿ ರಾಯ । ಹಸನಾದ ಹತ್ತನೆ ದಿನಕೆ ॥ ೨೮ ॥

ಜಿನರಿಗೆ ಮಹಾಮಹಿಮೆಯೆಂಬ ಪೂಜೆಯ । ಜನರಿಂದ ಮಾಡಿಸುತ್ಸಹದಿ ॥
ಇನನ ಕಿರಣವ ಮರೆಸುತಿರೆ ಮಗುವಿನ । ತನುವಿನ ಕಾಂತಿ ಕಂಡದನು ॥ ೨೯ ॥

ದೊರೆದೊರೆಗಳು ಮಂತ್ರಿಗುರುಜನಗಳ ಮುಂದೆ । ಪರಮವಸಗೆಯಿಂದ ॥
ಕರೆವನು ಪ್ರತಿಸೂರ್ಯನೆಂದೆಂಬ ನಾಮವ । ಮರುಕದ ಮೊಮ್ಮಗಗಂದಾ ॥ ೩೦ ॥

ಭೂರಿದಾನವ ಕವಿವಿಪ್ರಬುಧರಿಗೆ ಮ- । ತ್ತಾ ರಾಯ ಮಸದಣಿಯಿತ್ತು ॥
ವಾರಣಾರಿಯ ಪೀಠದೊಳೋಲಗಗೊಟ್ಟು । ಭೂರಮಣನು ಇರುತಿರಲು ॥ ೩೧ ॥

ಚರನೋರ್ವನೈತಂದು ಭೂಶಕ್ರಗೆ ಕೈಯು । ಎರಕದಿಂ ಮುಗಿದಿಂತೆಂದ ॥
ಕುರುವಂಶಾಂಬರಶೇಖರ ! ಬಿನ್ನಹ । ದೊರೆ ಶತಬಲ ಖೇಚರನು ॥ ೩೨ ॥

ಧುರದೊಳಗೇಕಾಂಗವೀರ ರೂಪಿಲಿ ಮಾರ । ಎರಕದಿಂ ನಿಮ್ಮನಂದನನ ॥
ವರ ಭಾನುಕುವರನೊಡಗೊಂಡು ಬೇಗದಿ । ಬರಹೇಳಿದ ಪರಿಣಯಕೆ ॥ ೩೩ ॥

ನುಡಿಯಲಿಂತೆಂದು ಚರನು ಆ ನುಡಿ ಕೇಳಿ । ಕಡು ಸಂತಸದಿ ಜ್ಞಾನೇಂದು ॥
ಮಡದಿಯರುಗಳು ಮಕ್ಕಳುಗಳು ಸಹವಾಗಿ- । ಯಡರಿ ತಾ ರನ್ನಪುಷ್ಪಕವ ॥ ೩೪ ॥

ತರಣಿಪಥದಿ ರಾಯ ಬರುತಿರೆ ರನ್ನದ । ವರ ವಿಮಾನದ ರುಚಿ ದೆಸೆಯ ॥
ಪರಿಪೂರ್ಣವಾಗಿ ತುಂಬಲು ಶತಬಲ ಕಂಡು । ಹರುಷದಿಂದಿದಿರೈತಂದು ॥ ೩೫ ॥

ಅಡಿದಳಕೆರಗಿದ ಶತಬಲನನು ರಾಯ । ಬಿಡದೆತ್ತಿಯಮರ್ದಪ್ಪಿಕೊಂಡು ॥
ಅಡಿಗಡಿಗೆ ಕ್ಷೇಮವಾರ್ತೆಯ ಬೆಸಗೊಳೆ । ಪೊಡವಿಯಾಣ್ಮನ ಪೇಡಿರನು ॥ ೩೬ ॥

ಎರಕದಿಂದಲಿ ಕಂಡು ವಿನಯೋಪಚಾರವ । ದರಹಸಿತಾನನದಿಂದ ॥
ಒರೆದು ಕುವರರನಾಲಿಂಗಿಸಿ ಗಲ್ಲವ । ಕರದಿ ಪಿಡಿದು ಮುಂಡಾಡಿ ॥ ೩೭ ॥

ಸಂಗೀತಪುರದ ಸಮಿಪಕ್ಕೆ ನಡೆತಂದು । ತುಂಗವಿಮಾನವನಿಳಿದು ॥
ಕಂಗೊಳಿಸುವ ಬೀದಿಯೊಳಗೆ ಬರುತಿರೆ ವಾ- । ದ್ಯಂಗಳು ಕೋಟಿ ಮೊರೆದವು ॥ ೩೮ ॥

ಶತಬಲನುಡೆಸುತ್ತೆ ಕೈಲಾಗವನಾ । ಪೃಥುವಿಪತಿಗೆ ತಾನು ಕೊಟ್ಟು ॥
ನುತವೆತ್ತ ಜ್ಞಾನಚಂದ್ರನ ಗುಣಗಣಗಳ- । ನತಿಶಯದಿಂದುಗ್ಘಡಿಸುತ ॥ ೩೯ ॥

ಅರಮನೆಗೊಡೆಗೊಂಡು ಶತಬಲ ತಾನೈದಿ । ತರುಣಿಯರಿಂದಲಾರತಿಯ ॥
ಪಿರಿಯದಿಂದೆತ್ತಿಸಿ ಸ್ನಾನಭೋಜನಗಳ । ಪರಿತೋಷದಿ ಮಾಡಿಸುತ ॥ ೪೦ ॥

ಇರುತಿರಲೊಂದು ದಿವಸ ಶತಬಲ ತಾನು । ಪರಿಣಯ ಮುಹೂರ್ತವ ಕೇಳಿ ॥
ಪುರದೊಳಷ್ಟಶೋಭೆಯನು ಮಾಡಿಸೆ ಮತ್ತೆ । ಕುರುಜುಗಳೆದ್ದವಲ್ಲಲ್ಲಿ ॥ ೪೧ ॥

ಮೊಳಗಿದವಾಗ ಮಂಗಲವರಿ ಕೋಟಿಯು । ಎಳೆವೆಂಗಳು ನಟಿಪರು ॥
ನಿಳಯದೊಳಗೆ ಶೋಭನಧವಳಂಗಳ । ಗಲಭೆ ತುಂಬಿಹುದೆಲ್ಲೆಲ್ಲಿ ॥ ೪೨ ॥

ಇತ್ತಲು ಮಣಿಮಾಲೆ ನೀಲಕುಂತಳವೆಸೆ- । ದುತ್ತಮಾಂಗಕೆ ಕಮ್ಮೆಣ್ಣೆಯನು ॥
ವೃತ್ತಕುಚೆಯರೆತ್ತಿ ತೀರ್ಥೋದಕವನು । ಮುತ್ತೈದೆಯರೆಚ್ಚಿದರು ॥ ೪೩ ॥

ಬೆಳಮುಗಿಲನು ಜರಿವ ದಿವ್ಯ ವಸನವ । ನಳಿನಾಕ್ಷಿಗುಡಿಸಿ ತೊಡವನು ॥
ನಲವಿಂದ ತೊಡಿಸಿ ತೊಂಡಿಲುದಂಡೆಗಳನು । ಎಳೆವೆಣ್ಣ ಶಿರದೊಳು ಕಟ್ಟಿ ॥ ೪೪ ॥

ಕುಲಸತಿಯರು ಮುತ್ತಿನಕ್ಷತೆಗಳನಾಗ । ಚೆಲುವೆಯ ಶಿರದೊಳು ತಳಿಯೆ ॥
ಒಲವಿಂದ ಭಾನುಕುಮಾರಗೆ ಇತ್ತಲು । ಲಲನೆಯರೆಣ್ಣೆಯನೊತ್ತಿ ॥ ೪೫ ॥

ಮಜ್ಜನವನು ಮಾಡಿಸಿ ದುಗುಲವನು । ಕಜ್ಜಳಾಕ್ಷಿಯರು ಪೊದಿಸಿಯು ॥
ಪಜ್ಜಳಿಸುವ ಷೋಡಶಾಭರಣಂಗಳ । ಮಜ್ಜರಿ ಸುಕೃತಿಗೆ ತೊಡಿಸಿ ॥ ೪೬ ॥

ಚಿತ್ತರದಿಂದ ಮುಕುಟವ ಶಿರದೋಳಿಟ್ಟು । ಮುತ್ತಿನ ಬಾಸಿಗಗಟ್ಟಿ ॥
ಅಳ್ತಿಯಿಂ ಸಿಂಗರಿಸಲು ಕೋಟಾಕೋಟಿ- । ಯುತ್ತಮ ಭೇರಿ ಮೊರೆದವು ॥ ೪೭ ॥

ಮುತ್ತಿನ ಮೆಟ್ಟಕ್ಕಿ ಗೂಡೆಯ ತಂದಿಕ್ಕಿ । ವೃತ್ತಕುಚೆಯು ಮೆಟ್ಟಿ ನಿಲಲು ॥
ಮುತ್ತಿನ ತೆರೆಸೀರೆಯನ್ನುಹಿಡಿಯಲಾಗ- । ಲಿತ್ತಲು ಭಾನುಕುಮಾರ ॥ ೪೮ ॥

ಕರಿಯ ಮಸ್ತಕವೇರಿ ಕೇರಿಕೇರಿಯೊಳಗೆ । ಮೆರವಳಿಗೆಯಾಗಿ ಬಂದು ॥
ಪರಿಣಯ ಗೃಹಕೈದಿ ಮೆಟ್ಟಕ್ಕಿಗೂಡೆಯ- । ನರಮಗ ಮೆಟ್ಟಿ ತಾ ನಿಲಲು ॥ ೪೯ ॥

ತೆರೆಸೀರೆ ಜಾರಿತು ಮುತ್ತಿನಕ್ಷತೆ । ಕರೆದರೋರ್ದೋರ್ವರ ಮೇಲೆ ॥
ತರಳೆಯ ಶತಬಲ ಹೊನ್ನಗಿಂಡಿಯನೆತ್ತಿ । ಎರೆದನು ಕೈಧಾರೆಯನು ॥ ೫೦ ॥

ಹವನಕುಂಡವ ಬಲವಂದು ದಂಪತಿಗಳು । ಹವಣಿಲ್ಲದ ಸುಖದೊಳಗೆ ॥
ದಿವಿಜಮಿಥುನದಂತೆಯಿರುತಿರಲಿತ್ತಲು । ಭುವನೇಶ್ವರ ಜ್ಞಾನೇಂದು ॥ ೫೧ ॥

ವರಗೀತಪುರಪತಿ ಹರಿಣಸುಕೇತುಯೆಂ- । ಬರಸನ ಪಟ್ಟದ ಮಹಿಷಿ ॥
ಕಿರಣಮಾಲೆಯ ಸುತೆ ಸುಮತಿ ಕನ್ನಿಕೆಯನು । ತರುಣಿಯ ಭಾನುಕುವರಗೆ ॥ ೫೨ ॥

ಮದುವೆಯ ಮಾಡಿನ್ನುಳಿದ ಕುವರರಿಗೆ । ಚೆದರ್ವುರ್ಲ್ಲೆಗಣ್ಣ ನೀರೆಯರ ॥
ಉದಯಾರ್ಕತೇಜ ಕೈಧಾರೆಯನೆರೆಯಿಸಿ । ಮುದದಿಂದಿರುತಿರಲಿತ್ತ ॥ ೫೩ ॥

ಪಲವು ಕಾಲವು ಕಳೆಯಲು ಒಂದು ದಿನದೊಳು । ಚೆಲುವರ ದೇವ ಜ್ಞಾನೇಂದು ॥
ನಲವಿಂದ ಬರಯಿಸಿ ಶತಬಲ ಖಚರನ । ಸುಲಲಿತಗುಣನಿಂತು ನುಡಿದ ॥ ೫೪ ॥

ಎಲೆ ಶತಬಲ ! ಬಂದು ಬಹಳ ವರುಷಗಳು । ಕಳೆದವೀಗೆನ್ನಯ ಪುರಕೆ ॥
ನಲವಿಂದ ನಾ ಪೋಪೆ ಸುಖದಿಂದ ನೀನೀ । ನೆಲವಾಳಿ ಪಾಲಿಸೆಂದೆನಲು ॥ ೫೫ ॥

ಕೊರಳೊಳಗಿಕ್ಕಲು ಶತಮುಖವಾಗಿ ತಾ- । ನಿರದೆ ಕಾಣಿಸುವಂತಪ್ಪ ॥
ಬೆರಕೆವರಲಕಿರಣಮಾಲೆಯೆಂದೆಂಬ । ಸುರಚಿರ ಹಾರವ ನೃಪಗೆ ॥ ೫೬ ॥

ಎರಕದಿಂ ಕೊಟ್ಟಂಘ್ರಿಗೆರಗಲು ಶತಬಲ । ಶಿರವಿಡಿದೆತ್ತಿ ಜ್ಞಾನೇಂದು ॥
ತರಿಸಿ ಹತ್ತೆಂಟು ದಿವ್ಯಾಭರಣಂಗಳ । ಕರೆದಿತ್ತು ರಾಯ ಖೇಚರಗೆ ॥ ೫೭ ॥

ಪೆಂಡಿರುಸುತರೊಡಗೂಡಿ ವಿಮಾನವ । ಮಂಡಳೇಶ್ವರ ಭರದೇರಿ ॥
ತೊಂಡೆವಣ್ದುಟಿಯರ್ಗೆ ರಾಜ್ಯದೈಸಿರಿಯನು । ಪುಂಡರೀಕಾಕ್ಷ ತೋರಿಸುತ ॥ ೫೮ ॥

ಬರುತಿರಲಿತ್ತತ್ತಲು ಸಿಂಹಧ್ವಜದೇವ । ಸ್ಮರಿಸಿದ ತನ್ನಯ ಸುತನ ॥
ನೆರೆ ಬೋಧಿಸಬೇಕೆಂದು ತಾ ಚಿಂತಿಸಿ । ಕರಿಚರದೇವನು ಕೂಡಿ ॥ ೫೯ ॥

ಧರೆಗಿಳಿತಂದವರೈತಪ್ಪ ತಾಣಕೆ । ಕರಿಯಾಕಾರವ ಧರಿಸಿ ॥
ಇರುತಿರೆ ಮುನ್ನಿನ ಘೋರಾಟವಿಯೊಳು । ಸುರವರ್ತ್ಮದೊಳು ಬರುತಿರ್ದು ॥ ೬೦ ॥

ಪಿಡಿಯನು ಭಾನುಕುಮಾರನು ತಾ ಕಂಡು । ಒಡನೆ ಜಾತಿಸ್ಮರನಾಗಿ ॥
ಮುಡದಿ ರೂಪಿಣಿಯಾದ ಹಿಂದಣ ಭವಗಳ । ಬಿಡದೆ ತಿಳಿದು ಮೂರ್ಛೆಯೋಗಿ ॥ ೬೧ ॥

ಒರಗಿದ ಭಾನುಕುಮಾರನವಸ್ಥೆಯ । ಪರಿಚಾರಕರೆಲ್ಲ ಕಂಡು ॥
ಪರಿತಂದು ಜ್ಞಾನೇಂದುವಿಗೆ ಬಿನ್ನವಿಸಲು । ನಿರಿಸಿ ರನ್ನದ ಪುಷ್ಪಕವ ॥ ೬೨ ॥

ವರ ಶೈತ್ಯೋಪಚಾರವನಾಗೆಸಗಲು । ತೆರೆದು ಕಣ್ಗಳ ತಾ ಕುಳಿರೆ ॥
ಎರಕದ ನನ್ನಯ ಕಂದನಿದೇನೆಂದು । ದೊರೆರನ್ನನು ಬೆಸಗೊಳಲು ॥ ೬೩ ॥

ಜಿತಶತ್ರುಚರ ! ಕೇಳು ಸತಿ ರೂಪಿಣಿಯಂದು । ಯತಿನಿಂದೆಯ ಮಾಡಿ ಪುಳಿತು ॥
ಮೃತನಾಗಿ ನೀಚಭವಂಗಳೋಳ್ಕೈತಂದು । ಗತಿಗೆಟ್ಟು ಕಾನನದಲ್ಲಿ ॥ ೬೪ ॥

ಕರಿಣಿ ನಾನಾಗಿರುತಿರೆ ಪುತ್ರಪಿತೃ- । ಚರ ಸುರರುಗಳು ನೀವಾಗಿ ॥
ಪರಮಧರ್ಮೋಪದೇಶವನು ನನಗೆ ಪೇಳಿ । ಸುರಗತಿಯನು ಮಾಡಿಸಿದಿರಿ ॥ ೬೫ ॥

ಪರಿಪಾಟಿಯೊಳು ಬಂದು ಶ್ರೀಕಾಂತೆವೆಸರಾಂತು । ದೊರೆರನ್ನ ನಿನಗೆ ತಾಯಾದೆ ॥
ಅರಸು ಶ್ರೀಜಿನಚಂದ್ರನೊಡನೆ ದೀಕ್ಷೆಯನಾಂತು । ವರ ಸುತಪದಫಲದಿಂದ ॥ ೬೬ ॥

ನಿನಗೀಗ ಸುತನಾದೆ ಬರುವಲ್ಲಿ ಕರಿಣಿಯ । ವನದೊಳು ಕಂಡು ನಾನೀಗ ॥
ಇನಿಸು ಇನಿಸು ಭವ ಸ್ಮರಣೆಯಿಂ ಮೂರ್ಛೆಗೆ । ಜನಕ ! ನಾ ಸಂದೆಯಪ್ಪರೊಳು ॥

ಭರದಿಂದಲೆಚ್ಚತ್ತು ತನುಜನೆ ಪಿತನಾದ । ವರ ಮಾತೆಯೆ ನಾ ನಿನಗೆ ॥
ಯರವಿಲ್ಲ ಕಂದನಾದೆನು ಎಂದು ಭವಗಳ । ಪರಿಯನಾ ಪರಿಕಿಸಿ ನೊಂದೆ ॥ ೬೮ ॥

ಎನಲಾಗ ಮಾತೃಚರನ ಪುತ್ರ ವಚನವ । ಜನಪತಿ ಕೇಳಿ ವಿಸ್ಮಯವ ॥
ಮನದಲ್ಲಿ ತಾಳಿ ವಿರಕ್ತಿ ತತ್ಪರನಾಗಿ । ವನದೊಳಗಿರುತಿರಲಾಗ ॥ ೬೯ ॥

ಖರಕಿರಣನಮಂಡಲಾಕ್ಷಿಯುಗನನುಳ್ಳ । ಅರುಣ ಕಮಲ ಜಿಹ್ವೆಯುಳ್ಳ ॥
ಅರಿವರೆ ಸಮಕೋರದಾಡೆಯುಗವನುಳ್ಳ । ಹರಿಯೊಂದು ಗವರಿ ಘರ್ಜಿಸುತ ॥ ೭೦ ॥

ಆ ಕುಟಿಲ ಹರಿರಾಜನಾರ್ಭಟೆಯಿಂದ । ಶೋಕರಾದಿಗಳೆಲ್ಲಂಜಿ ॥
ವ್ಯಾಕುಲದಿಂ ನಡನಡುಗುತಿರಲು ಮು- । ತ್ತಾ ಕರಿಣಿಯು ಕಂಡು ರಾಯ ॥ ೭೧ ॥

ಕರುಣಹೃದಯನಾಗಿ ಗಗನದಿಂದಿಳಿತಂದು । ಹರಿಪಿಡಿ ನಡುವೆ ತಾ ನಿಂದು ॥
ಶರಭನಾಕಾರದ ರೂಪಾಂತು ಲಂಘಿಸಿ । ಹರಿಮಸ್ತಕದೊಳು ನಿಂದು ॥ ೭೨ ॥

ಧರೆಯೊಳು ಕೆಡಹಿ ಕಾಲೊಳು ಮಸ್ತಕ ಮೆಟ್ಟಿ । ವರ ದೀರ್ಘಬಾಲದಿ ನಿಂದು ॥
ಇರಿಸಿಯಾ ಸಿಂಹನ ಬಾಲವ ತನ್ನಯ । ಕರದೊಳು ಪಿಡಿದಂಬರಕೆ ॥ ೭೩ ॥
ಇಡಲದು ಇನಮಂಡಲ ಪರಿಯಂತರ । ಗಡಣದಿ ಪೋಗಿ ಭೋರೆಂದು ॥
ಕಡುಬೇಗದಿಂ ಘುಡಿಘುಡಿಸುತಲೈತಂದು । ಪಿಡಿಯನಿಕ್ಕಡಿದೊಕ್ಕಲಿಕ್ಕಿ ॥ ೭೪ ॥
ಧರಣಿಯೊಳಗೆ ಬಿರ್ದು ಕರಿಣಿ ಕಂಠೀರವ । ಹರಣವನೀಡಾಡಲಾಗ ॥
ಕುರುಕುಲೇಶನು ಕಂಡು ಕರುಣಹೃದಯನಾಗಿ । ಪರಮ ವೈರಾಗ್ಯವ ತಾಳಿ ॥ ೭೫ ॥
ಕಡುಭೀತನಾಗಿ ಸಂಸಾರಕುಪಾಶಕೆ । ನುಡಿದನು ಕೃಪೆಯಿಂದಲಾನು ॥
ಪಿಡಿಯೆನು ವನಮೃಗಗಳ ಸಮೂಹಂಗಳ । ಬಿಡದೆ ರಕ್ಷಿಪೆನೆಂಬ ಮನದಿ ॥ ೭೬ ॥
ಭರದಿಂದಲೆಸಗಲು ಹರಿಕರಿಣಿಗಳೀಗ । ಹರಣವಳಿದವಕಟಕಟ ॥
ಪಿರಿದಪ್ಪ ಪಾಪವನಾರ್ಜಿಸಿಕೊಂಡೆನು । ಕರಿದಾಯಿತು ನನ್ನ ಜಸವು ॥ ೭೭ ॥
ಉರಗದ ಹಿಂಡು ಸುತ್ತಿದ ಚಂದನದಂತೆ । ಖರಕರ್ಮದೊಳಗಾನು ಸಿಕ್ಕಿ ॥
ತಿರುಗಿದೆ ಬಹುಯೋನಿಗಳೊಳು ಹುಟ್ಟಿ ಹೊಂದುತ । ಕೊರಗಿ ದುಃಖವನುಂಡೆನೆಂದು ॥
ಹಲವು ಪರಿಯಲಿ ಸಂಸಾರಕೆ ತಾ ಪೇಸಿ । ಖಳಕರ್ಮವಿಜಯ ಜ್ಞಾನೇಂದು ॥
ಸುಳಿದು ಉಸ್ಸೆಂದು ಹನ್ನೆರಡನುಪ್ರೇಕ್ಷೆಯ । ಘಳಿಲನೆ ನೆನೆದನೆಂತೆನಲು ॥ ೭೯ ॥
**ಅನಿತ್ಯ:**–ಸುರಲೋಕದೊಳು ಧಗಧಗಿಪ ವಿಮಾನವ । ಮೆರೆವ ಮಳ್ವಾಸಿನೊಳ್ಪುಟ್ಟಿ ॥
ತರಣಿಸಮಾನದ ದಿವ್ಯ ಕಾಯವನಾಂತು । ಸುರತರುಣಿಯರು ಭೋಗಿಸುವ ॥ ೮೦ ॥
ಸುರುಚಿರ ರತ್ನಗೃಹಗಳೊಳು ಬಹುಕಾಲ । ವರ ಸುಖಮುಂಡೆಯಾ ಸಖವು ॥
ಸ್ಥಿರವಾಯಿತೇ ಭಾವಿಸಲಿಲ್ಲ ಜೀವನೇ ! । ಸುರಚಾಪದಂತಧ್ರುವವು ॥ ೮೧ ॥
ದಶವಿಧಕಲ್ಪವೃಕ್ಷವು ಕೊಟ್ಟಾಹಾರವು । ವಸನಾಭರಣಸಂಗೀತ ॥
ಶಶಿಮುಖಿಯರ ಸಂಗದೊಳು ಪುಟ್ಟಿದ ಸುಖ । ವಸುವೇ ನಿನಗೆ ನಿತ್ಯವಾಯ್ತೇ ? ॥ ೮೨ ॥
ಉರಗಲೋಕದ ಭೋಗಭೂಮಿಯ ಪಲ್ಯವು । ಸುರಗತಿ ಸಾಗರಾಯುಷ್ಯ ॥
ಸ್ಥಿರವಾಯಿತೇ ಜೀವನೇ ! ಗಾಳಿಸೊಡರಂತೆ । ಪರಿಕಿಸಲದೃಶ್ಯವಾಯ್ತು ॥ ೮೩ ॥
ನರಪತಿ ಸುರಪತಿ ಯಕ್ಷ ಕಿನ್ನರಪತಿ- । ಯುರಗಪತಿಗಳೈಸಿರಿಯು ॥
ಸ್ಥಿರವಲ್ಲವೆಂದು ನೀ ಭಾವಿಸು ಜೀವನೇ । ವರ ಬುದ್ಬುದವೆಲ್ಲವೆಂದು ॥ ೮೪ ॥
ಬೊಕ್ಕಸ ಭಂಡಾರಮನೆ ಧನಧಾನ್ಯವು । ಸುಕ್ಕುಗುರುಳ ಮಾನಿನಿಯರು ॥
ಮಿಕ್ಕಿನ ವಸ್ತುವೆಲ್ಲವು ಸಂಜೆಗೆಂಪೆಂದು । ಗಕ್ಕನೆ ನೆನೆ ಎಲೇ ಜೀವ ! ॥ ೮೫ ॥
**ಅಶರಣ:**–ಆನೆಕುದುರೆ ಲಕ್ಷಭಟ ಕೋಟಿಭಟರ್ಗಳು । ಸೇನೆ ರಥಿಕರು ಮಂತ್ರಿಗಳು ॥
ಮಾನಿನಿಯರು ಬಂಧುಜನಗಳು ಮಕ್ಕಳು । ಮಾನಿತ ಯಂತ್ರತಂತ್ರಗಳು ॥ ೮೬ ॥

ವರ ಪ್ರಜ್ಞಪ್ತಿ ಮುಂತಾದ ವಿದ್ಯಂಗಳು । ಪರಿಕಿಸೆ ಮಣಿಯೌಷಧಗಳು ॥
ಎರಕದ ತಾಯಿ-ತಂದೆಗಳು ಸೇವಕಜನ । ಪರಮ ಮಿತ್ರರು ಸೋದರರು ॥ ೮೭ ॥

ಕರುಣವಿಲ್ಲದೆಯಂತಕ ಕೊಂಡುಪೋಪಲ್ಲಿ । ಶರಣಾಗರಾರು ಜೀವನಿಗೆ ॥
ಶರಣು ನಿರ್ಮಲವಾದ ಧರ್ಮವೊಂದಲ್ಲದೇ । ಶರಣಾದ ವಸ್ತು ಬೇರಿಲ್ಲ ॥ ೮೮ ॥

**ಏಕತ್ವ:**–ಪೊಲ್ಲದ ಮನದಿಂದ ಸಪ್ತವ್ಯಸನಗ- । ಳಲ್ಲಿ ನಡೆದು ಕರ್ಮಗಳ ॥
ನಿಲ್ಲದೆ ಕಟ್ಟಿ ನೀ ಕೊಂಡೇಳು ನರಕಂಗ- । ಳಲ್ಲಿ ಸಂಜನಿಸಿ ದುಃಖವನು ॥ ೮೯ ॥

ಹಲವು ತೆರದಿಯುಂಬಲ್ಲಿ ನೀನೋರ್ವನೆ । ಬಲುಃ ಶೀತಾತಪದೊಳಗೆ ॥
ಹುಲಿಹುಲ್ಲೆ ನರಿನಾಯಿ ಶೂಕರ ಗಾರ್ಧಭ । ಪಲವೇಕೇಂದ್ರಿಯದೊಳು ಪುಟ್ಟಿ ॥ ೯೦ ॥

ಕಡುದುಃಖಂಗಳನುಂಬಲ್ಲಿಯೋರ್ವನೆ । ಗಡಿಯಿಲ್ಲ ಸಂಸಾರದೊಳು ॥
ಮಡಿದು ದುಃಖಂಗಳನುಂಬಲ್ಲಿಯೋರ್ವನೆ । ಒಡನಾರು ಇಲ್ಲೆಂದು ನೆನೆಯ ॥ ೯೧ ॥

ಅನ್ನೌಷಧಿಭೈಷಜ್ಯಶಾಸ್ತ್ರಂಗಳ । ಸನ್ನುತ ಚತುಸ್ಸಂಗಕ್ಕಿತ್ತು ॥
ಪನ್ನಗಪತಿ ಸುರಪತಿ ಚಕ್ರವರ್ತಿಯ । ಉನ್ನತ ಭೋಗಭೂಮಿಜರ ॥ ೯೨ ॥

ವರ ಭಾಗ್ಯವನುಂಬಲ್ಲಿ ನೀನೋರ್ವನೆ । ದುರಿತದಿಂ ಚಾಂಡಾಲಾದಿ ॥
ನೆರೆ ಬಸಿರೊಳು ಪುಟ್ಟಿ ದುಃಖವನುಂಬಲ್ಲಿ । ಪೆರತೋರ್ವರಿಲ್ಲ ನೀನೋರ್ವ ॥ ೯೩ ॥

ಧನಮನೆಯೊಳು ನಿಲ್ಗು ಬಂಧುಗಳ್ಬರುವರು । ನಿನಗೆ ಸ್ಮಶಾನಪರ್ಯಂತ ॥
ತನುಬೇವುದನ್ನಿಲ್ಲ ನಿರ್ಮಲಧರ್ಮವು । ನಿನಗೆ ನೆರವು ಎಂದು ನೆನೆಯ ॥ ೯೪ ॥

**ಅನ್ಯತ್ವ:**–ಕರಿರಥಹಯಸೇನೆದೇಶಕೋಶಂಗಳ । ವರ ಗೃಹಗಳು ಎನ್ನನೆಂದು ॥
ಬರಿದೆ ಜೀವನೆಯನಂತ ದುಃಖವನುಂಡೆ । ಪರಿಪಡಿಸವು ಭಿನ್ನವೆಂದು ॥ ೯೫ ॥

ಧನಧಾನ್ಯ ಬಂಧುವರ್ಗಗಳು ನನ್ನವು ಎಂದು । ಅನುದಿನ ಚಿಂತಿಸಿ ನೀನು ॥
ಅನುಮಿತ ದುಃಖವನುಂಡೆ ನಿನ್ನಿಂದವು । ಘನತರಭಿನ್ನವೆಂದೆಣಿಸ ॥ ೯೬ ॥

ಲಲನೆಮಕ್ಕಳುಸಖರಾದಿ ಮರಣದಲ್ಲಿ । ಬಲುಮೋಹದಿಂದ ಶೋಕಿಸುವೆ ॥
ಪಲಭವದೊಳು ಬಂದೆ ಯಾರಾರಿಗಳುವೆನೀ । ಎಲೆ ! ಗಾವಿಲತನ ಬೇಡ ॥ ೯೭ ॥

ಇವರೆನ್ನ ಮೈದುನರಿವರೆನ್ನ ನಂಟರು । ಇವರೆನ್ನ ತಂಗಿ ಸೊಸೆಯರು ॥
ಇವರಾದಿಯಾದನ್ಯವಸ್ತು ನಿನ್ನವೆಂದು । ಭವವ ನೆರಪ ಬೇಡ ಜೀಯ ! ॥ ೯೮ ॥

ಕ್ಷೀರನೀರನ್ಯಾಯದಿ ಕೂಡಿಬಂದ ಶ- । ರೀರವು ಭಿನ್ನವೆಂದೆನಲು ॥
ಧಾರಿಣಿಯೊಳಗುಳ್ಳ ವಸ್ತು ನಿನ್ನವು ಎಂದು । ಗಾರುಗಬೇಡೆಲೆ ಜೀವ ! ॥ ೯೯ ॥

ದರುಶನಜ್ಞಾನಚಾರಿತ್ರಗಳೆಂದೆಂ- । ಬುರುತರ ಮೂರು ರತ್ನಗಳು ॥
ಪರಿಕಿಸೆ ನಿನ್ನವಲ್ಲದೆ ಮತ್ತುಳಿದವು । ನಿರುತದಿ ಭಿನ್ನವೆಂದೆಣಿಸ ॥ ೧೦೦ ॥

**ಸಂಸಾರ:**-ಕವಿದ ಕರ್ಮಗಳಿಂದ ದ್ರವ್ಯಕ್ಷೇತ್ರವು ಕಾಲ । ಭವಭಾವವೆಂಬರಂಗದೊಳು ॥
ತವಕದಿಂದೆಂಭತ್ತನಾಲ್ಕು ಲಕ್ಷಗಳೆಂಬ । ನವನವ ಚೋಹವ ತೊಟ್ಟು ॥ ೧೦೧ ॥

ನಟಿಸುತ ನಟನಂತೆ ತಿರ್‍ರನೆ ತಿರುಗಿ ನೀ । ಸಟೆಯು ಸಂಭ್ರಮಕೊಳಗಾಗಿ ॥
ಕುಟಿಲ ವಿಷಯಗಳೊಳಗೆ ಸಿಕ್ಕಿ ಜೀವನೇ ! । ದಿಟ ನೀ ಬಹು ನೊಂದೆಬೆಂದೆ ॥ ೧೦೨ ॥

ಎಲೆ ಜೀವ ! ನೀನೊಮ್ಮೆ ಸುಕೃತದಿ ಸುರನಹೆ । ಕಲಿಲದಿಂ ನಾರಕನಪ್ಪೆ ॥
ಸಲೆಯಾರ್ತಧ್ಯಾನದಿಂ ತಿರಿಕನಾಗುವೆಯೊಮ್ಮೆ । ಜಲಚರಸ್ಥಾವರನಪ್ಪೆ ॥ ೧೦೩ ॥

ದುರಿತಸುಕೃತ ಮಿಶ್ರದಿಂದ ಮಾನವನಪ್ಪೆ । ಪರಿಪರಿ ಭವಮಾಲೆಯೊಳು ॥
ಮರಳಿ ಮರಳಿಯನಂತಕಾಲಗಳೊಳು । ತಿರುಗಿ ತಿಗುರಿಯಂದದೊಳು ॥ ೧೦೪ ॥

ಜನತಿಪ ಭೃತ್ಯನು ಭೃತ್ಯಜನಪನೊಮ್ಮೆ । ತನುಜನು ತಂದೆಯಾ ತಂದೆ ॥
ತನುಜನಾಗುವನೊಮ್ಮೆ ಸಂಸಾರದಾಟವ । ಇನಿಸು ನಂಬಲು ಬೇಡ ಜೀವ ! ॥ ೧೦೫ ॥

ಜನನಿ ತನುಜ ಕಾಮಿನಿ ಪುತ್ರಿ ಸೊಸೆಯೊಮ್ಮೆ । ವನಿತೆ ಪ್ರಾಣೇಶ್ವರ ಪುತ್ರ ॥
ತನುಜವಲ್ಲಭನಪ್ಪ ಸಂಸಾರ ಹೇಯವೆಂ- । ದನುದಿನ ಚಿಂತಿಸು ಜೀವ ! ॥ ೧೦೬ ॥

**ಲೋಕ:**ತಳಕೇಳುಮಧ್ಯದೊಳೊಂದುಬ್ರಹ್ಮದೊಳೈದು।ಪೊಳೆವಮುಕ್ತಿಯೊಳೊಂದುರಜ್ಜು॥
ಪಳಗದ ಕೆಳಗರೆ ಪಳಗವನಿಟ್ಟಂತೆ । ಪೊಳೆವುದು ಲೋಕನೋಳ್ಪರಿಗೆ ॥ ೧೦೭ ॥

ಪದಿನಾಲ್ಕು ರಜ್ಜೂತ್ಸೇಧಮನುಳ್ಳುದು । ಹುದುಗಿ ಷಡ್ದ್ರವ್ಯ ತುಂಬಿಹುದು ॥
ಅದರೊಳು ತಿಲಮಾತ್ರ ಉಳಿಯದೆ ಜೀವನೆ ! । ಉದಿಸಿದೆ ಕರ್ಮದಂಡಲೆಯಿಂ ॥ ೧೦೮ ॥

**ಅಶುಚಿ:**-ನರಕದ ಮೃತ್ತಿಕೆಯನು ತಂದು ಬೊಂಬೆಯು । ನರರೂಪ ತಿದ್ದಿದನೇನೋ ॥
ಪರಿಕಿಸೆ ಮಾಂಸದಿಂ ಮಿದುಳಿಂದಸ್ಥಿಗಳಿಂದ । ಸುರಿವ ಪುರೀಷಮೂತ್ರಗಳಿಂ ॥ ೧೦೯ ॥

ನರವಿನ ಕಟ್ಟಿಸಿಂ ಕೀವಿಂದ ರಕುತದಿ । ಕರಗಿ ಸುರಿವ ಶ್ಲೇಷ್ಮದಿಂದ ॥
ಕೊರೆವ ವ್ಯಾಧಿಗಳಿಂದ ನವದ್ವಾರಗಳಲ್ಲಿ । ಪರಿವ ಪಡಿಕೆ ಹೊಲಸಿಂದ ॥ ೧೧೦ ॥

ಪಡಿಕೆಯಮನೆ ಹೊಲಸಿನ ಕೆರೆ ಹೇಸಿಕೆ । ಮಡುದುರ್ಗಂಧದ ತಾಣ ॥
ಬಿಡದಿರ್ಪ ಪುಳುವಿನ ಮನೆಯಾದಂಗದೊಳು ನೀ । ಕಡು ಮೆಚ್ಚಿರುವುದು ಹೆಚ್ಚು ॥ ೧೧೧ ॥

ಹುಳಿತಕಬ್ಬನು ಬಿತ್ತಿ ಫಲವನು ಪಡೆವಂತೆ । ಕೊಳೆದೇಹವ ನೀ ಪೊರ್ದಿ ॥
ಪೊಳೆವ ರತ್ನತ್ರಯವನು ಸಾಧಿಸಿ ಜೀವ ! । ಇಳೆಯ ತುದಿಯ ನೀ ಸಾರು ॥ ೧೧೨ ॥

**ಆಸ್ರವ:**-ಕಡುಗಾಯ್ದ ಲೋಹ ಸರ್ವಾಂಗಪ್ರದೇಶದಿ । ಕುಡಿವಂತೆ ನೀರನು ಜೀವ ॥
ಬಿಡದೆ ವರ್ತಿಸುತಿರ್ಪ ತನುಮನವಚನದಿ । ತಡೆಯದೆ ಹಾಸ್ಯಾರತಿಯು ॥ ೧೧೩ ॥

ರತಿಭಯಮೋಹಜಿಗುಪ್ಸೆಶೋಕಗಳಿಂದ । ಮತಿವಿಕಳತೆಯಪ್ಪುದರಿಂ ॥
ಸತತ ಶುಭಾಶುಭ ಕರ್ಮದ ರಜವನು । ಕೃತಯತ್ನದಿಂ ಸರ್ವಾಂಗ ॥ ೧೧೪ ॥

ಹೀರುವವದು ಕಾರಣ ದುಷ್ಟ ಭಾವವ । ಸಾರದೆ ಶುಭಭಾವದಲ್ಲಿ ॥
ಸಾರಚಿನ್ಮಯನ ಚಿಂತಿಸು ಜೀವನೆ ! ನೀನು । ಸೇರು ಕಂಡವುಲಮುಕ್ತಿಯನು ॥ ೧೧೫ ॥

**ಸಂವರೆ:**–ಕ್ರೋಧಮಾನವುಮಾಯಾಲೋಭದ ದೆಸೆಯಿಂದ । ಭೇದಿಸಿ ಜೀವದೇಶದೊಳು ॥
ಪಾದರಸಂಬೊಲು ಪತ್ತುವ ಕರ್ಮವ । ಭೇದಿಸಲದು ಸಂವರೆಯು ॥ ೧೧೬ ॥

ಕೊಲೆಹುಸಿಕಳವು ಪರದಾರವತಿಕಾಂಕ್ಷೆ । ಬಲುಹ ಕೆಡಿಸಿ ಸಮಿತಿಯೊಳು ॥
ಅಲಸದೆ ನಡೆಯಲು ಕರ್ಮದ ಧೂಳು ತಾ । ತೊಲಗುವುದದು ಸಂವರೆಯು ॥ ೧೧೭ ॥

**ನಿರ್ಜರೆ:**–ಕ್ಷೀರನೀರನ್ಯಾಯದಿ ಬಹುಕಾಲದಿ । ಸಾರಿರೆ ಕರ್ಮಜೀವನವು ॥
ಚಾರಿತ್ರಗುಣಶೀಲದರುಶನವೆಂದೆಂಬ । ವಾರಿಯಿಂ ತೊಳೆಯೆ ನಿರ್ಜರೆಯು ॥ ೧೧೮ ॥

ಬರುವ ನೀರನು ಕಟ್ಟಿ ಕೊಳದೊಳು ತುಂಬಿರ್ದ । ಸರವನು ತುಳುಕುವಂದದೊಳು ॥
ಬರುತಿರ್ದ ಕರ್ಮವ ತಡೆದೊಳಗಿರುತಿರ್ದ । ದುರಿತವ ಸುಡೆ ನಿರ್ಜರೆಯು ॥ ೧೧೯ ॥

**ಧರ್ಮ:**–ಪನ್ನೊಂದು ತೆರದ ಶ್ರಾವಕಧರ್ಮದೊಳು ತಾನು । ಸನ್ನುತ ಯತಿಧರ್ಮಪತ್ತು ॥
ತಾನ್ನಿರೆ ತಿಳಿದವನಿರತಿಚಾರದಿ । ಉನ್ನತಮತಿ ನೆಗಳುವುದು ॥ ೧೨೦ ॥

ಧರ್ಮವೆ ಸುರತರು ಧರ್ಮವೆ ನಿಜಬಂಧು । ಧರ್ಮವೆ ಮೋಕ್ಷಕೆ ಬೀಜ ॥
ಧರ್ಮವೆ ಕರ್ಮಕ್ಷಪಣೆಗೆ ಕಾರಣ । ಧರ್ಮವೆ ಚಿಂತಾಮಣಿಯು ॥ ೧೨೧ ॥

ಧರ್ಮವೆ ವರಗುರು ಧರ್ಮವೆ ಸುಖದಾಯಿ । ಧರ್ಮವೇ ತಾಯಿ-ತಂದೆಗಳು ॥
ಧರ್ಮವೆ ಸಿರಿಸಮ್ಯಕ್ತ್ವವು ಎಲೆ ಜೀವ ! । ಧರ್ಮವ ನಂಬು ನೀ ಧ್ರುವದಿ ॥ ೧೨೨ ॥

**ಬೋಧಿದುರ್ಲಭ:**–ಏಕೇಂದ್ರಿಯ ಜೀವಂಗಳ ನೋಡಲು । ಲೋಕದೊಳಗೆಯವನಂತ ॥
ಏಕೇಂದ್ರಿಯ ಬಿಟ್ಟು ತ್ರಸಪರ್ಯಾಯವ । ಲೋಕದಿ ಪಡೆವುದು ಹೆಚ್ಚು ॥ ೧೨೩ ॥

ಎರಡಿಂದ್ರಿಯಗಳಿಂ ಮೂರಿಂದ್ರಿಯಗಳ । ನರಿವುದು ಹೆಚ್ಚದರಿಂದ ॥
ಪರಿಕಿಸೆ ನಾಲ್ಕಿಂದ್ರಿಯ ಪಡೆವುದು ಹೆಚ್ಚು । ದೊರಕಿದಡದು ಪಂಚೇಂದ್ರಿಯಗಳ ॥ ೧೨೪ ॥

ಪಡೆವುದು ಹೆಚ್ಚು ಪಡೆದೊಡೆ ಸಂಜ್ಞಿಯು । ಪಡೆವುದರಿದುಯುದ ಪಡೆಯೆ ॥
ಬಿಡದೆ ನರತ್ವವ ಪಡೆವುದು ಜೀವನೆ ! । ಪೊಡವಿಯೊಳದು ತಾನು ಹೆಚ್ಚು ॥ ೧೨೫ ॥

ನರಜನ್ಮವಾದರು ತ್ರೈವರ್ಣಿಕರಾಗಿ । ಇರದೆ ಪುಟ್ಟುವುದು ದುರ್ಲಭವು ॥
ದೊರಕಿದೊಡದರೊಳು ಪಾಂಡಿತ್ಯ ದುರ್ಲಭ । ವರ ಶಾಸ್ತ್ರವು ದೊರಕಿದೊಡೆ ॥ ೧೨೬ ॥

ಅರುಹನ ಮತದೊಳು ಪುಟ್ಟುವುದದು ಹೆಚ್ಚು । ಪರಿಕಿಸಲದು ದೊರಕಿದೊಡೆ ॥
ಸಿರಿವಂತನಾಗುವುದದು ದುರ್ಲಭ ಮತ್ತೆ । ವರ ಧರ್ಮದೊಳಗಾಚರಿಪುದು ॥ ೧೨೭ ॥

ಅದು ತಾನು ದುರ್ಲಭ ದೊರಕಿದೊಡೊಮ್ಮೆ ತಾ । ಸದಮಲ ದೀಕ್ಷೆ ದುರ್ಲಭವು ॥
ಅದು ತಾನು ದೊರಕಿದೊಡೇನು ಮೂಲೋಕನ । ಚದುರಿಂದ ತಿಳಿವ ಜ್ಞಾನವನು ॥

ಪಡೆವುದರಿದು ಜೀವನಂತಪ್ಪ ಜ್ಞಾನವ । ಪಡೆಯದೆ ಮೋಹಪಾಶದೊಳು ॥
ತೊಡರಿ ಕಣ್ಗಾಣದೆ ಸಂಸಾರಾರ್ಣವದೊಳು । ಬಿಡದೆಯಾಳಿದೆಯೆಲೆ ಜೀವ ! ॥ ೧೨೯ ॥

ಎಂದು ಇಂತಪ್ಪ ವೈರಾಗ್ಯವ ಮನದೊಳು । ತಂದು ನಿಂದಿರೆ ಜ್ಞಾನೇಂದು ॥
ವೃಂದಾರಕ ಹರಿಕರಿಣಿಯ ರೂಪನು । ಅಂದು ಬಿಸುಟು ನೃಪನೆಡೆಗೆ ॥ ೧೩೦ ॥

ನಡೆತಂದು ಬಿಗಿಬಿಗಿಯಮರ್ದಪ್ಪಿ ಗಲ್ಲವ । ಪಿಡಿದಲುಗುತ ಮುದ್ದಾಡಿ ॥
ಎಡಗೈಯಿಂದ ಬೆನ್ನಂಡೆಯ ತಡಹುತ । ಬಿಡದೆ ನೋಡುತ ನಿಂದಿರಲು ॥ ೧೩೧ ॥

ಅರೆ ಸುರ ! ಪಿಡಿಯಾಕಾರವ ಧರಿಸಿ ನೀ । ಹರಿಯಾಗಿ ಬಂದಾ ಪಿಡಿಯ ॥
ಮುರಿದುಹಾಕಿದ ಕಾರಣವೇನೆನಲಾ । ಸುರನಿಂತು ನುಡಿದ ಪ್ರೀತಿಯೊಳು ॥ ೧೩೨ ॥

ಎಲೆ ಎನ್ನ ಮುದ್ದಿನ ಕಂದನೆ ! ನೀ ಕೇಳು । ಪಲಭವದೊಳಗಂಡಲೆವ ॥
ಬಲು ಮೋಹಪಾಶವ ತೊಲಗಿಸಬೇಕೆಂದು । ಚೆಲುವಾದ ಪಿಡಿಯಾಕಾರವನು ॥ ೧೩೩ ॥

ಧರಿಸಿದೆ ಮುನ್ನ ಕಾನನದೊಳಗಾಗೊಂದು । ಕರಿಣೀಚರಿ ನಿನ್ನ ಜನನಿ ॥
ಸಿರಿಕಾಂತೆ ಬಂದೀಗ ನಿನ್ನಯ ಬಸಿರೊಳು । ವರ ತನಯನಾದ ತೆರನ ॥ ೧೩೪ ॥

ಅರಿಪಲು ಬಂದೆನಿಂತಪ್ಪ ಸಂಸಾರವು । ನೆರೆ ಕಷ್ಟವೆಂದು ನಾನೆನಲು ॥
ಕರಿಚರದೇವ ಕೈಮುಗಿದು ನೃಪಾಲಗೆ । ಅರರೇ ಭಾಪುರೆ ಭಾಪು ಭಳಿರೆ ! ॥ ೧೩೫ ॥

ಕಿರುವರೆಯದೊಳು ಸಮಸ್ತ ಜೀವಗಳಿಗೆ । ಒರೆದು ಶ್ರೀ ಪಂಚಪದವನು ॥
ಸುರಲೋಕದ ಸಂಪದವಿತ್ತೆ ಮುಂದಿನ್ನು । ಧರೆಯ ಜನಕೆ ಧರ್ಮಾಮೃತವ ॥ ೧೩೬ ॥

ಕರೆದು ಸಮಸ್ತ ಜೀವಗಳನು ಮೋಕ್ಷದೊ- । ಳಿರಿಸುವ ಪರಮವಿರಕ್ತಿ ॥
ಕರುಣಾಳು ನಿನಗೆ ಪುಟ್ಟಿದುದೊಳ್ಳಿತಾಯಿತು । ಸರಿಯಾರು ನಿನಗೆಂದು ನುತಿಸೆ ॥ ೧೩೭ ॥

ದಿವಿಜರೀರ್ವರು ಬೀಳ್ಕೊಂಡು ದಿವಿಗೆ ಪೋಗೆ । ಭುವನೇಶ್ವರ ಹೇಯವನು ॥
ತವಕದಿಂ ನೆನೆವುತ ನಿಜರಾಜಧಾನಿಯ । ಭುವನವಿನುತ ಬಂದು ಪೊಕ್ಕು ॥ ೧೩೮ ॥

ಅರುಹನ ಪಾದಾಂಬುಜ ಮತ್ತಮಧುಪನು । ಕರುಣಾರ್ಣವಚಂದಿರನು ॥
ಗುರುಪಾದಭಕ್ತನು ಜ್ಞಾನೇಂದುವೊಪ್ಪಿದ- । ನರುಹಮತಾಂಬರಭಾನು ॥ ೧೩೯ ॥

**॥ ಅಂತು ಸಂಧಿ ೪೨ಕ್ಕಂ ಪದ ೫೪೭೫ಕ್ಕಂ ಮಂಗಲಂ ॥**

# ದೀಕ್ಷೆ.

ಜ್ಞಾನಚಂದ್ರಮುನ ದೀಕ್ಷಾಕಲ್ಯಾಣವ । ನಾನೊರೆವೆನು ಕೇಳಿ ಜನರು ॥ ಪ ॥

ತೃಣಕೆಣೆಗಂಡು ಸಾಮ್ರಾಜ್ಯದ ಸಿರಿಯನು । ಪ್ರಣುತ ಶ್ರೀ ಜಿನದೀಕ್ಷೆಯಾಂತು ॥
ಕ್ಷಣಕೆ ಕರ್ಮವ ಸುಟ್ಟ **ಶಾಂತಿ ಶ್ರೀ ಜಿನ**ರಾಜ । ಹೊಣಕೆನ್ನ ಪಾಪೇಂಧನವ ॥ ೧ ॥

ದೊರೆದೊರೆಗಳು ಬಳಸಿರಲು ಸುಜ್ಞಾನೇಂದು । ಮೆರೆವ ಮುತ್ತಿನ ಚಾವಡಿಯೊಳು ॥
ಸುರರಾಜ ಠೀವಿಯಿಂ ಹರಿವಿಷ್ಟರದೊಳು । ದುರಿತೇಭಸಿಂಹನು ಕುಳಿತ ॥ ೨ ॥

ಹರಿಚಂದ್ರಕುವರನ ಕರೆದೆಲೆ ಮಗನೆ ! ಈ । ಧರೆಯ ಪಾಲಿಸು ನೀನೀಗ ॥
ಧರಿಸುವೆ ಜೈನೀಯ ದೀಕ್ಷೆಯನೆಂದೆನೆ । ಕರವ ಮುಗಿದು ಹರಿಚಂದ್ರ ॥ ೩ ॥

ಜನಪತಿ ! ಕೇಳು ಸನ್ನಜ್ಜಿ ನಿನಗೆ ಬಂದು । ತನುಜನಾದನು ನನಗನುಜ ॥
ಸುನಯದಿಂದಾದಳು ಇಂತಪ್ಪ ಪಾಪದ । ಘನ ಭವಮಾಲೆಯ ಕೇಳಿ ॥ ೪ ॥

ಮನ ಹೇಸುತಿದೆ ಸಂಸಾರದ ಮಾಟಕೆ । ಜನಕ ! ನಾನೊಲ್ಲೆ ರಾಜ್ಯವನು ॥
ಜಿನದೀಕ್ಷೆಯ ಕೊಂಬೆನೆಂದು ನಿಶ್ಚಯಿಸಲು । ಮನುಜೇಶ ಮುಗುಳ್ನಗೆ ನಗುತ ॥ ೫ ॥

ಜಿನಚಂದ್ರ ಮುನಿಚಂದ್ರ ಶೀಲಚಂದ್ರಮ ಧರ್ಮ । ವಿನಯ ಪ್ರಭಾಚಂದ್ರ ಮಾರ ॥
ಕನಕಚಂದ್ರ ಕುಮುದಚಂದ್ರ ಶ್ರೀಚಂದ್ರ । ಘನಚಂದ್ರ ಶ್ರೀದೇವಚಂದ್ರ ॥ ೬ ॥

ಸುರಕೀರ್ತಿ ಜಯಕೀರ್ತಿ ಜಿನಕೀರ್ತಿ ಧನಕೀರ್ತಿ । ವರಕೀರ್ತಿ ಶ್ರೀಭಾನುಕೀರ್ತಿ ॥
ಹರಿಕೀರ್ತಿ ಫಣಿಕೀರ್ತಿ ರವಿಕೀರ್ತಿ ಜಗತ್ಕೀರ್ತಿ । ಗುರುಕೀರ್ತಿಯೆಂಬ ತನುಜನ ॥ ೭ ॥

ಕರೆಸಿ ರಾಯರದೇವ ಕೇಳಲು ಕುವರರು । ಕರಗಳ ಮುಗಿದಿಂತೆಂದೆನಲು ॥
ನರಕಭಾಜನವಾದ ರಾಜ್ಯವನೊಲ್ಲೆವು । ವರ ಮುಕ್ತಿರಾಜ್ಯ ಬೇಕೆನಲು ॥ ೮ ॥

ಮರಳಿ ತನ್ನಯ ಸುತರೆಲ್ಲರ ಕರೆಯಿಸಿ । ಪರಿಪಾಟಿಯಿಂದ ಕೇಳಿದೊಡೆ ॥
ದುರಿತಕ್ಕೆ ಪಕ್ಕಾದ ರಾಜ್ಯವನೊಲ್ಲೆವು । ಗುರುವೆ ತಮ್ಮಯ ಮಾರ್ಗವೆಮಗೂ ॥ ೯ ॥

ಎನಲಾ ನುಡಿಗೇಳಿ ಸಂತೋಷವ ತಾಳಿ । ಜನಪ ಮೊಮ್ಮಗುಯೆಳೆಗೂಸ ॥
ವಿನಯದಿಂ ಕರೆಸಿ ತೊಡೆಯೊಳ್ಕುಳ್ಳಿರಿಸಿಕೊಂಡು । ಕರದಿ ಬೆನ್ನನು ತಳೆದವಹಿ ॥ ೧೦ ॥

ಮುದ್ದಿಸಿ ಮುದ್ದಾಡಿ ತಾಂಬೂಲವನಿತ್ತು । ತಿದ್ದುತ ಕುರುಳಿಂತು ನುಡಿದ ॥
ಪದ್ಧತಿಯೊಳು ಬಂದ ರಾಜ್ಯದೊಳಗೆ ನೀ- । ನಿದ್ದು ಪ್ರಜೆಯ ರಕ್ಷಿಸೆನಲು ॥ ೧೧ ॥

ಘುಳುಘುಳಿಸುತ ಕಂಬನಿಯಿಳಿತರುತಿರೆ । ಎಳೆವರೆಯದಿ ನಿಮ್ಮ ಬಿಟ್ಟು ॥
ತಳೆವೆ ರಾಜ್ಯವನಾನೆಂತು ನಿಮ್ಮೊಂದಾಗಿ । ಮಳಧಾರಿಯಾಗುವೆನೆನಲು ॥ ೧೨ ॥

ಹರಿ ಕಿರಿದಾದರೆ ಕರಿಯನೆಬ್ಬಟ್ಟದೆ । ತರುಣಾರ್ಕನಾದೊಡೆ ತಮವ ॥
ಮುರಿಯದೆ ನೀ ಕಿರಿದಾದೊಡೆ ನಿನ್ನಯ । ಅರಿಕೆ ಲೋಕವ ಮುಟ್ಟುತಿದಕೋ ॥ ೧೩ ॥

ಕೆಲವು ದಿವಸ ರಾಜ್ಯವನಾಳಿ ಕಡೆಯಲ್ಲಿ । ತಳೆದು ಶ್ರೀ ಜೈನದೀಕ್ಷೆಯನು ॥
ಖಳಕರ್ಮವ ಸುಡುಯೆಂದೊಡಂಬಡಿಸಿದ । ಕಳಧೌತಪುರವನು ಇತ್ತ ॥ ೧೪ ॥

ಮುರುಕದಿಂದವೆ ಸುಭಾನುಕುಮಾರನ ತಾ । ಕರೆದೆಲೆ ಮಗನೆ ! ಈ ಪುರವ ॥
ಪರಿಪಾಲಿಸೆನೆ ಒಲ್ಲೆನು ದೇವ ! ಎಂದೆನೆ । ಕರವಿಡಿದಮರ್ದಪ್ಪಿಕೊಂಡು ॥ ೧೫ ॥

'ಗುರುವಚನಮನುಲ್ಲಂಘನೀಯವು' ಎಂಬ । ವರವಾಕ್ಯಂಟದರಿಂದ ॥
ಪರಿಪಾಲಿಸೆಂದು ಪ್ರಾರ್ಥಿಸೆ ರತ್ನಪುರವನು । ಧರಣೀಶ್ವರರ ಸಾಕ್ಷಿಯೊಳು ॥ ೧೬ ॥

ಹರಿವಿಷ್ಟರದೊಳು ಕುಳ್ಳಿರಿಸಿ ರತ್ನದ । ವರ ಕಿರೀಟವ ಸುಭಾನುವಿನ ॥
ಶಿರದೊಳಗಿಟ್ಟು ಸಮಸ್ತ ಭೂಭುಜರಿಂದ । ಸರಸದಿ ಕಾಣಿಕೆಗೊಡಿಸಿ ॥ ೧೭ ॥

ಜಿನಸಿದ್ಧ ! ಶರಣೆಂದು ಸಿಂಹವಿಷ್ಟರದಿಂದ । ಮನುಜೇಶನೆದ್ದರಮನೆಗೆ ॥
ಅನುನಯದಿಂ ನಡೆತಂದು ಕಂಠೀರವ । ಘನವಿಷ್ಟರದೊಳು ಕುಳ್ಳಿರಲು ॥ ೧೮ ॥

ಅನುಮತಿ ಮೊದಲಾದ ಪದಿನೈದು ಸಾಸಿರ । ವನಿತಾಮಣಿಗಳೈತಂದು ॥
ಮಿನುಗುವ ನಗೆಯಿಂದ ಕೈಗಳ ಮುಗಿದಾಗ । ವಿನಯದೊಳಿಂತು ನುಡಿದರು ॥ ೧೯ ॥

ದೊರೆರನ್ನ ! ನಿಮ್ಮಯ ಮೊಗವನು ನೋಡಲು । ಒರವುತಲಿದೆ ಬೇರೊಂದ ॥
ನೆರೆ ತಲ್ಲಣಿಸುತಿದೆ ನಮ್ಮಯ ಪ್ರಾಣವು । ಧರಣೀಶನೆಂದೆಲ್ಲರೊರೆಯೆ ॥ ೨೦ ॥

ಕರುಣಾಳು ಅನುಮತಿದೇವಿಯ ಸೊಗಯಿಪ । ಸರಸಿಜಾನನವನು ನೋಡಿ ॥
ಎರೆಯಳೆ ! ಕೇಳೀಗ ಕೈವಲ್ಯದುರ್ಗವ । ಭರದಿಂದ ಸಾಧಿಪರೊಂದು ॥ ೨೧ ॥

ಜಿನದೀಕ್ಷೆ ತಾಳುವೆ ನಿನ್ನ ಮೊಮ್ಮಗನನು । ಘನಕುಚೆ ! ಮುಂದಿಟ್ಟುಕೊಂಡು ॥
ಕನಕಪುರದೊಳು ಎಂದು ತಾ ಗಲ್ಲವ । ಮನದಕ್ಕರಿಂ ಪಿಡಿದಲುಗಿ ॥ ೨೨ ॥

ಹಾರಿತು ಎದೆ ಹವ್ವೆಂದೆಲ್ಲರಿಗಾಗ । ಜಾರಿತು ಧೈರ್ಯದ ಬಲ್ಮೆ ॥
ತೋರಮುತ್ತುಗಳಂತೆ ಕಣ್ಬನಿಗಳು ಆ । ನೀರೆಯರಿಗೆ ಬಟ್ಟಾಡಿದವು ॥ ೨೩ ॥

ತಲೆಗುತ್ತಿ ನೆಲನೆಲ್ಲರು ಬರೆಯುತಲಿರೆ । ಲಲನಾಮಣಿಯನುಮತಿಯು ॥
ಇಳೆಯಾಣ್ಮ ! ಬಿನ್ನಹ ನಿನ್ನ ಪಾದವ ಸೇರಿ । ಪಲವು ಭವದೊಳು ಪಡೆಯದ ॥ ೨೪ ॥

ಘನತರಪುಣ್ಯವ ಪಡೆದೆವು ನಿಮ್ಮಯ । ತನುವನು ಸೋಂಕೆಮ್ಮ ಜನ್ಮ ॥
ಕನಕವಪ್ಪಂತೆ ಪರುಷಸೋಂಕಿದ ಲೋಹ । ಜನಪ ! ಪಾವನವಾದೆವಾವು ॥ ೨೫ ॥

ಸ್ತ್ರೀಜನ್ಮವತಿಕಷ್ಟ ಹಾಗಾದೊಡೆಲೆ ಸ್ವಾಮಿ ! । ಭೂಜಾಯೆವಲ್ಲಭ ನೀನು ॥
ಈ ಜಗತ್ತೃಣವೆಂದು ಬಿಟ್ಟುಹೋಗುತಲಿರೆ । ತೇಜವೆ ನಾವಿಲ್ಲಿರುವುದು ॥ ೨೬ ॥

ಇನಿತು ಕಾಲಂಬರ ಹೆಡ್ಡಿಯರನು ತಿದ್ದಿ । ಜಿನಧರ್ಮದೋಜೆಯ ಕಲಿಸಿ ॥
ಇನಿಸು ಲೆಕ್ಕಿಸದೆಮ್ಮನು ಬಿಟ್ಟು ಪೋದೊಡೆ। ಮನುಜೇಂದ್ರ! ನಾವು ಬಿಡುವೆವೇ ? ॥ ೨೭ ॥

ನಿಮ್ಮ ಪಾದದ ಬಳಿವಿಡದಾವು ಐತಂದು । ಹೆಮ್ಮಕ್ಕಳಾಗುವ ಭವವ ॥
ಸುಮ್ಮಾನದಿಂ ಸುಟ್ಟು ಸುರಪುರಕೆ ಧಾಳಿ । ಘಮ್ಮನೆಯಿಡದೆ ಬಿಡುವೆವೇ ? ॥ ೨೮ ॥

ನರನಾಥ ! ನಿಮ್ಮ ಮಾರ್ಗವೆ ನಮಗೆಲ್ಲರ್ಗೆಂ- । ದರಸಿಯರಾಡಿಯಿನಿಯನ ॥
ಚರಣಮೂಲಕೆ ಮುಗ್ಗಲು ಸಂತೋಷವ । ದುರಿತೇಭಕಂಠೀರವೈದಿ ॥ ೨೯ ॥

ಅನುಮತಿ ಮೊದಲಾದ ಪದಿನೈದು ಸಾಸಿರ । ವನಿತಾಮಣಿಗಳಾಗಿರದೆ ॥
ಮಿನುಗುವ ರತ್ನವಿಮಾನಗಳನುಯೇರಿ । ಘನಪಥದೊಳು ಬರುತಿರಲು ॥ ೩೦ ॥

ಅರಮನೆಯಿಂ ಪೊರಮಟ್ಟುವೀರ್ಶ್ವರ । ನೆರವಿವೆರಸು ಜ್ಞಾನಚಂದ್ರ ॥
ಪರಮಕಾರುಣ್ಯಾಂಬುಧಿಚಂದ್ರಮನಾಗ । ಪುರವೀಥಿಯೊಳು ಬರುತಿರಲು ॥ ೩೧ ॥

ಬಡುನಡು ಬಳುಕೆ ಪೊಂಗೊಡವೊಲೆ ಕುಣಿದಾಡೆ । ಗಡಣದಿಂ ಪೌರಾಂಗನೆಯರು ॥
ಬಿಡುಮುತ್ತಿನಂತೆ ಕಣ್ಬನಿಗಳ ಸೂಸುತ । ಪೊಡವಿಪ ನಮ್ಮೆಲ್ಲರನು ॥ ೩೨ ॥

ಈಡಾಡಿ ಪೋಗುತಿರ್ಪನು ಗಡ ನಮ್ಮೆಲ್ಲ । ಪಾಡರಿದುಪ್ಪರಿಗೆಗಳ ॥
ಕಾಡಿಗೆಗಣ್ಣ ಕಾಮಿನಿಯರು ಸಜ್ಜೆಯ । ಬಾಡಿದ ಮೊಗದಿಂದಲೇರಿ ॥ ೩೩ ॥

ನರನಾಥಚಂದ್ರಮ ! ನಮ್ಮೆಲ್ಲರನೀ । ಪುರದೊಳು ಸೆರೆಯಿಟ್ಟು ನೀನು ॥
ತೆರಳುವುದಕೆ ಮಾಡಿದೆ ಹಾ ! ಎಂದೆಲ್ಲ । ಮರುಗುತ ಬಂಬಲು ಬಾಡಿ ॥ ೩೪ ॥

ಸುರಪತಿಗಿಲ್ಲದಿಂತಪ್ಪೈಸಿರಿಯನು । ತೊರೆದು ಪೋಗಲು ಈ ಸಿರಿಯ ॥
ದೊರೆರಾಯನನುಭವಿಸುವನಾರು ನಿನ್ನಂತೆ । ಪುರುಷರತ್ನವ ಕಾಣ್ಬವೆಲ್ಲಿ ॥ ೩೫ ॥

ದೊರೆ ಬರುತಹನೆ ಬೀದಿಯಲೆಂದು ನಾವೆಲ್ಲ । ನೆರೆದಿನ್ನಾರ ನೋಡುವೆವು ॥
ಅರಗುಲಿ ಬಿದಿಯಿಂತಪ್ಪ ಶ್ಶೋಭೆಯನೀ । ನೆರೆಪುಟ್ಟಿಪರೆಯೆಂದಳುವರು ॥ ೩೬ ॥

ನೀ ಕುಳಿತಿರುವ ಮುತ್ತಿನ ಚಾವಡಿಯಿನ್ನು । ಲೋಕೇಶ ! ಭಿನ್ನವಾಗುವುದು ॥
ಲೋಕಿಪೆವೆಂತು ನಾವದನಿನ್ನು ಒಡೆಯನೆಂ- । ದಾ ಕಾಮಿನಿಯರು ಶೋಕಿಪರು ॥ ೩೭ ॥

ಜಗಜಂಪಿನ ಸತ್ತಿಗೆನೆಳಲೊಳು ಬರ್ಪ । ಜಗದೇಕವೀರ ಜ್ಞಾನೇಂದು ॥
ಮುಗುಳಂಬಸಮ ರೂಪ ನಮ್ಮಯೊಡೆಯನೆಂದು। ಸೊಗಸನಿನ್ನಾರ ನೋಡುವೆವು ॥ ೩೮ ॥

ನಮ್ಮಯ ಬೆಡಗುಬಿನ್ನಾಣಗಮಕಗಳು । ಕಮ್ಮಗಣೆಯ ! ನೀನು ಪೋಗೆ ॥
ಸುಮ್ಮಾನವೆಲ್ಲವು ಸುಟ್ಟುಹೋಯಿತು ಎಂದು । ಹೆಮ್ಮಕ್ಕಳೆಲ್ಲ ಸೊಲ್ಲಿಪರು ॥ ೩೯ ॥

ಇಂದು ನಮ್ಮರಸಗೆ ಮಹಾನವಮಿಯೋಲಗ- । ವಿಂದು ರಥೋತ್ಸವ ಜಿನಗೆ ॥
ಇಂದು ನಮ್ಮರಸನ ಮನೆಯೊಳು ಒಸಗೆ ತಾ- । ನೆಂದೆಂಬ ಹೆಮ್ಮೆಯಡಗಿತು ॥ ೪೦ ॥

ಅರಸನ ನೋಡುವೆವೆಂದು ತೊಡಿಗೆಗಳ । ಮುರುಕದಿಂ ಸಿಂಗರಿಸುವುದು ॥
ನೆರೆಗಲಿ ! ನೀ ಪೋಗುತಿರಲಿನ್ನೆಲ್ಲವು । ಮರೆತವು ಹಾ ಎಂದಳುವರು ॥ ೪೧
ಪುರಜನವಂಬರದತ್ತಲು ನೋಡಲು । ವರ ರತ್ನಪುಷ್ಪಕವಡರಿ ॥
ಅರಸಿಯರುಗಳು ಪೋಗುತಲಿರೆ ದುಃಖವು । ಶರಧಿಯಂದದಿ ಪೆರ್ಚಿದುದು ॥ ೪೨
ಸುರಪತಿಧನುವಿನಂದದಿ ನಿಮ್ಮಯ ಸಿರಿ । ಹರಿದುದೆ ಸುಖದೊಳಿದ್ದವರು ॥
ತಿರುಗುವಂತಾಯಿತೆ ಕಾನನದೊಳಗೆಂದು । ಸೆರಗಿಕ್ಕಿ ಮೊಗಕೆ ಶೋಕಿಪರು ॥ ೪೩
ನಲ್ಲನ ತೋಳ ತೆಕ್ಕೆಯೊಳು ಮಂಚಗಳೊಳು । ಚಲ್ಲವಾಡುತ ಮಲಗುವರ್ಗೆ ॥
ಹುಲ್ಲೆಹುಲಿಗಳಿರ್ಪ ವನದೊಳೋರೋರ್ವರೆ । ನಿಲ್ಲದೆ ಪವಡಿಪಂತಾಯ್ತೆ ! ॥ ೪೪
ನೊರೆವಿಂದುಗಳನು ಜರಿವ ದಿವ್ಯ ವಸನವ । ಮುರುಕದಿಂದುಡುವಂಗದೊಳು ॥
ಕೊರಕದ ನಾರಿನ ಸೀರೆಯನುಡುವುದು । ದೊರಕಿತೇ ನಿಮಗೆಂದಳುವರು ॥ ೪೫
ಮನಬಂದಂತೆ ನಾಲ್ಕೈದು ವೇಳೆಯೊಳುರೆ । ತಿಳಿದುಪ್ಪದುಯ್ಯಲುಂಬುದನು ॥
ಉಳಿದು ಕಂಡವರ ಮನೆಯೊಳೊಂದುಣಿಸನು । ಸಲೆಯುಂಬುದಾಯ್ತೆಂದಳುವರು ॥ ೪೬
ರನ್ನದ ದೀವಿಗೆಯಲ್ಲದೆ ಮುತ್ತಿನ । ಎಣ್ಣೆದೀವಿಗೆಗಳ ಸೆಕೆಗೆ ॥
ಚೆನ್ನೆಯರುಗಳಿರ ! ಬಳಲುವಂಗವ ಸೂರ್ಯ- । ನುನ್ನತಾತಪಕೆಂತೊಡ್ಡುವಿರಿ ॥ ೪೭
ಪುರಜನ ಪರಿಜನ ಬಂಧುಗಳೆಲ್ಲಿಂತು । ಗರಹೊಡೆದಂತೆ ಶೋಕದೊಳು ॥
ಮರುಗುತಲಿರಲಿತ್ತ ನೃಪನೂರಹೊರವಂಟು । ನೆರೆದಿರ್ದ ಮಂತ್ರಿವರ್ಗವನು ॥ ೪೮
ಪುರಜನ ಪರಿಜನ ದೊರೆದೊರೆಗಳನೆಲ್ಲ । ಕರಸನ್ನೆಯಿಂ ಪೋಗಿಮೆನಲು ॥
ಸೆರಗ ಮೊಗಕೆ ಮುಚ್ಚಿ ಗೋಳೆಂದು ಮೊರೆಯಿಟ್ಟು । ಧರೆಗೆ ಬಿದ್ದು ಹೊರಳಿದರು ॥ ೪೯
ಸಿರಿ ಹಾರಿತಿಂದೆಮ್ಮೆಲ್ಲರ ಸಂಭ್ರಮು । ವರತುದು ಹಾರಿತಾಯುಷ್ಯ ॥
ಪುರಲಕ್ಷ್ಮಿಯಿಂದಿಗೆ ತೊಲಗಿತು ಹಾ ಎಂದು । ಭರದಿಂದ ಬಂದು ಭೂಭುಜನ ॥ ೫೦
ಚರಣದ ಮೇಲೆ ಜನಗಳು ಹಣೆಯ ಚಾಚಿ । ಸುರಿವ ಕಣ್ಬನಿಗಳ ಧಾರೆ ॥
ಅರಸನ ಪಾದಕಮಲವನು ತೊಳೆವುತ- । ಲಿರಲೊಂದೆರಡು ಗಳಿಗೆಯು ॥ ೫೧
ಪಲವು ತೆರದ ವಚನರಚನೆಗಳಿಂದ । ಇಳೆಯಾಣ್ಮ ದೊರೆಯರಸುಗಳ ॥
ಕಳವಳವನು ಪರಿಹರಿಸಿ ಬೀಳ್ಕೊಟ್ಟನು । ಕಳಭ ವನಕೆ ಪೋಪಂತೆ ॥ ೫೨
ಹರಿಚಂದ್ರಾದಿಕುವರ ನವಸಾಸಿರ । ಹರಿಬಲ ಹರಿಧನ್ವಾದಿ ॥
ದೊರೆಗಳು ಪದಿಮೂರುಸಾಸಿರನೊಡಬರೆ । ನರನಾಥ ರನ್ನಪುಷ್ಪಕವ ॥ ೫೩
ಗರುವಿಕೆಯಿಂದೇರಿ ಗಗನಮಾರ್ಗದಿ ಬಂದು । ಕುರುಜಾಂಗಣದೇಶವೊಕ್ಕು ॥
ವರ ರತ್ನಪುಷ್ಪಕವಿಳಿದು ಶ್ರೀಜಯಜಿನ । ಮೆರೆವ ವಿಜಯಜಿನರುಗಳ ॥ ೫೪

ಗಂಧಕುಟಿಯ ಮೂಮೆಬಲವಂದು ಸಾಷ್ಟಾಂಗ- । ದಿಂದೆರಗಿ ಕೈಯ ಮುಗಿದು ॥
ಮುಂದುಗಡೆಯೊಳು ಪುತ್ಥಳಿಯಂತೆ ಜ್ಞಾನೇಂದು । ನಿಂದು ನುತಿಯ ಮಾಳ್ಪನಿಂತು ॥

ಮೇರೆಯಿಲ್ಲದ ಸಂಸಾರವಾರಿಧಿಯೊಳು । ಕ್ರೂರಾಘಾವರ್ತದಿ ಸಿಲುಕಿ ॥
ಘೋರದುಃಖವನುಂಬನ ತಡಿಗೆ ಚಾಚಿ । ಸೇರಿಸಿ ಮಾಂ ಪಾಹಿ ಜಿನಪ ! ॥ ೫೬ ॥

ಕಡುಮಿಥ್ಯೆ ಎಂದೆಂಬ ವರಕಾನನದೊಳು । ಕೆಡುಕ ಮೋಹಾಗ್ನಿಲಿ ಸಿಲುಕಿ ॥
ಮಿಡುಕುವಾತನ ತೆಗೆದು ಧರ್ಮಜಲವೆಟ್ಟಿ । ತಡೆಯದೆ ಮಾಂ ಪಾಹಿ ಜಿನಪ ! ॥

ಪಲವು ದೈವವ ನಂಬಿ ಪಲಕಾಲ ದುಃಖವ । ಸಲೆಯುಂಡು ನರಕದಿ ನೊಂದೆ ॥
ಕಲಿಲವ ತೊಲಗಿಸಿ ಕರುಣಾಲಕ್ಷ್ಮಯ ಸುಖ । ಫಲವಿತ್ತು ಮಾಂ ಪಾಹಿ ಜಿನಪ ! ॥

ಅಷ್ಟಮದಗಳೆಂಬ ಕಾಳ್ಗಿಚ್ಚಿನೊಳು ಸಿಲ್ಕಿ । ದೃಷ್ಟಿಗೆಟ್ಟಾನು ನಾಲ್ದೆಸೆಯ ॥
ಬಟ್ಟೆಗಾಣದೆ ತಿರುಗುವ ಕುರುಡಗೆ ಮೋಕ್ಷ । ಬಟ್ಟಿತ್ತು ಮಾಂ ಪಾಹಿ ಜಿನಪ ! ॥

ಪಾಪವೆಂದೆಂಬ ಜರೆಯ ಪೊರ್ದಿ ಗಡಗಡ । ನಾಪೊತ್ತು ನಡುಗಿ ಕೆಡೆವನ ॥
ಲೋಪವ ಮಾಡದೆ ಜಿನದೀಕ್ಷೆಯಿತ್ತೀಗ । ಶ್ರೀಪ ಮಾಂ ಪಾಹಿ ಶ್ರೀ ಜಿನಪ ! ॥

ಎಂದಿವು ಮೊದಲಾದ ಪಲವು ಸ್ತೋತ್ರಗಳಿಂದ । ಕಂದರ್ಪವಿಜಯನ ಪೊಗಳೆ ॥
ದುಂದುಭಿರವದಂತೆ ಜಿನಮುಖಕಮಲದೊ- । ಳಂದುಣ್ಮಿತು ದಿವ್ಯನಾದ ॥ ೬೧ ॥

ಪರಮತತ್ವೋಪದೇಶವನಾಗ ಜಿನರಾಜ- । ನೊರೆದು ಮತ್ತುಭಯಗ್ರಂಥಗಳ ॥
ತೆರೆದರುಶನವಾಗಿ ನಿರವಿಸಿದೆಂತೆನೆ । ಒರೆವೆನು ಕೇಳಿ ಬಲ್ಲವರು ॥ ೬೨ ॥

ಧರೆ ಮನೆ ದ್ರವ್ಯ ಸುಧಾನ್ಯ ದಾಸೀದಾಸ । ತುರಗಾದಿ ಚತುಷ್ಪಾದಗಳು ॥
ಮೆರೆವ ಸುಪ್ಪತ್ತಿಗೆ ಪಲ್ಲಕ್ಕಿ ಭಾಜನ । ವರ ಭಾಂಡವೆಂಬೀ ದಶಕ ॥ ೬೩ ॥

ವೇದ ಮಿಥ್ಯಾತ್ವವು ಹಾಸ್ಯಾದಿಗಳಾರು । ಕ್ರೋಧಾದಿ ಚತುಃಕಷಾಯಗಳು ॥
ಪಾದರಸದವೊಲು ಪಿಡಿವ ರಾಗದ್ವೇಷ । ಮೇದಿನೀಶ್ವರ ಈರೇಳು ॥ ೬೪ ॥

ದಶ ಚತುರ್ದಶವಿಧ ಬಹಿರಂತರಂಗವೆಂ- । ಬೆಸೆವ ಪರಿಗ್ರಹವಿವನು ॥
ಮಸುಧೇಶ ! ಬಿಟ್ಟರೆಯದು ತಾನೆ ದೀಕ್ಷೆಯೆಂ- । ದೊಸೆದು ನುಡಿದ ಜಿನರಾಜ ॥ ೬೫ ॥

ಮೂಲಗುಣಗಳನಿಪ್ಪತ್ತೆಂಟನು ಪೇಳಿ । ಮೂಲೋಕದೊಡೆಯನಿಂತೆಂದ ॥
ಭೂಲಲನೇಶ ! ನೀನುಭಯಗ್ರಂಥಗಳ । ಬೇಲಿಯ ಪರಿಪಡಿಸೆನಲು ॥ ೬೬ ॥

ವೃತ್ತದ ಪಳುಕಿನ ಶಿಲೆಯೊಳಗಮರೀರು । ಮುತ್ತಿನ ಚೌಕವ ಹಾಕೆ ॥
ಉತ್ತರಮುಖವಾಗಿ ಜ್ಞಾನೇಂದು ಭೂಭುಜ- । ನಳ್ತಿಯಿಂದಲಿ ಕುಳಿತನು ॥ ೬೭ ॥

ಅನಿಮಿಷಾಂಗನೆಯರು ಶೋಭನಧವಳವ । ಮನದನುರಾಗದಿ ಪಾಡಿ ॥
ಘನವಾದ ಮುತ್ತಿನ ಶೇಷೆಯನಿಡುತಿರೆ । ದನಿದೋರೆ ಸುರಭೇರಿಗಳು ॥ ೬೮ ॥

ಭೂಷಣಾಂಗದ ಕಲ್ಪವೃಕ್ಷದಿಂದವನಿಗೆ। ಭೂಷಣಗಳು ಉದುರ್ವಂತೆ ॥
ಭೂಸುದತೀಶ ಸರ್ವಾಭರಣಂಗಳ। ಈಸುಳಿಯದೆ ತೆಗೆದಿಟ್ಟ ॥ ೬೯ ॥

ಪೆರೆದಲೆಯನು ತನ್ನ ಶಿರದೊಳಗಿರುತಿ-। ರ್ದರಿವೆರೆದೆಗದಿಡುವಂತೆ ॥
ಮಿರುಗುವ ಚಂದ್ರಪ್ರಭೆಯೆಂಬ ಮಕುಟವ। ದೊರೆ ಶಿರದಿಂದಿಳುಹಿದನು ॥ ೭೦ ॥

ದನಿದೋರಿದವು ಕೋಟಾಕೋಟಿ ವಾದ್ಯವು। ಜನಪತಿ ಜಿನರನು ನೆನೆದು ॥
ಘನಕರ್ಮವಲ್ಲಿಯ ಬೇರನು ಕೀಳ್ವಂತೆ। ಅನುವೆತ್ತಿ ನೀಳಕುಂತಳವ ॥ ೭೧ ॥

ಪಂಚಮುಷ್ಟಿಗಳಿಂದ ಪರಿದೀದಾಡಲು। ಪಂಚರತ್ನದ ಪಡಲಿಗೆಯಲಿ ॥
ಏಂ ಚದುರಿಂದ ಸಿಂಹಧ್ವಜ ಕರವಾಂತು। ಪಂಚಮಾರ್ಣವದೊಳು ಬಿಟ್ಟ ॥ ೭೨ ॥

ವಸನವ ತೆಗೆಯಲು ಜ್ಞಾನಚಂದ್ರಮುನಂಗ। ಎಸೆದುದು ಮಂಜು ತೊಲಗಿದ ॥
ಬಿಸಿಗದಿರನ ಬಟ್ಟು ಚಂದ್ರಮಂಡಲದಂತೆ। ಹಸನಾದ ಕನಕಾದ್ರಿಯಂತೆ ॥ ೭೩ ॥

ಸುರರು ವ್ಯಂತರಿಗರುರಗಜ್ಯೋತಿಷ್ಕರು। ದೊರೆದೊರೆಗಳು ಶ್ರಾವಕರು ॥
ಪರಮಭಕ್ತಿಯೊಳು ಜ್ಞಾನೇಂದು ಮುನೀಂದ್ರಗೆ। ಎರಗಿ ನಮೋಸ್ತು ಮಾಡಿದರು ॥ ೭೪ ॥

ಸುರರಾಕಾಶದೊಳಗೆ ನಿಂದು ನವರತ್ನ। ವರ ಪುಷ್ಪವೃಷ್ಟಿಯನಾಗ ॥
ಕರೆದರು ಜಯ ಜಯ ಜ್ಞಾನೇಂದು ಮುನಿನಾಥ। ಪರಮಬಂಧುವೆ ! ಎಂದು ನುತಿಸಿ ॥

ಹರಿಚಂದ್ರ ಭಾನ್ವಾದಿ ಒಂಭತ್ತುಸಾಸಿರ। ವರ ಸುಕುಮಾರರು ಕೂಡಿ ॥
ದೊರೆಗಳು ಪದಿಮೂರುಸಾಸಿರ ಜಿನರಲ್ಲಿ। ಸುರುಚಿರ ತಪವ ತಾಳಿದರು ॥ ೭೬ ॥

ಅನುಮತಿ ಮೊದಲಾದ ಪದಿನೈದುಸಾಸಿರ। ವನಿತಾಮಣಿಗಳಾಗಿರದೆ ॥
ವನಿತೆ ಶ್ರೀಮಣಿಮಾಲೆಯೊಡಗೂಡಿ ಬಂದಾಗ। ಜಿನರಲ್ಲಿ ಧರ್ಮವ ಕೇಳಿ ॥ ೭೭ ॥

ಉಳಿಸರ ಬಂದಿ ಕಡಗ ಕೊಪ್ಪು ನೇವಳ। ಬಳೆತಾತಿಹಾರ ಮೂಗುತಿಯು ॥
ಕುಲಿಸದೋಲೆಯ ಒಗ್ಗೊರಳ ಸರಂಗಳ। ಎಳೆವೆಣ್ಗಳಿಟ್ಟರು ಪರಿದು ॥ ೭೮ ॥

ಎಳಲತೆಗಳು ಪೊತ್ತ ಕಳಿಕೆ ಕುಸುಮ ಮೊಗ್ಗೆ। ಸುಳಿಗಾಳಿಗುದುರುವಂದದಲಿ ॥
ಬಳುಕುವ ನಡುವಿನವರು ಸರ್ವಾಭರಣವ। ಕಳೆದು ಚೆಲ್ಲಿದರವನಿಯೊಳು ॥ ೭೯ ॥

ಸಳಿಗದಿರನ ಕಳಂಕನುದ್ದುವವೊಲು। ತಿಲಕವ ತೊಡೆದು ರವಕೆಯ ॥
ಕಳೆದು ಕುಂತಳಗಳ ಕ್ಲೇಶವ ಕೀಳ್ವಂತೆ। ಯಲಸದೆ ಕಿತ್ತೀಡಾಡಿದರು ॥ ೮೦ ॥

ಸಂತೋಷದಿಂ ಕಮಂಡಲ ಕುಂಭವ। ಭ್ರಾಂತಿಗೊಳ್ಳಗೆ ಕೈಯೊಳಾಂತು ॥
ಕಂತಿಕೆಯರಾದರು ಜಿನರುಪದೇಶದಿ। ನೋಂತವರಾರವರಂತೆ ॥ ೮೧ ॥

ಕರಿಚರಸಿಂಹಧ್ವಜ ಸುರರೀರ್ವರು। ಎರಕದಿಂ ಜ್ಞಾನೇಂದು ಮುನಿಗೆ ॥
ಪರಮಭಕ್ತಿಯೊಳು ವಂದಿಸಿ ಸುರಲೋಕಕ್ಕೆ। ತೆರಳೆಯಿತ್ತಲು ತಾಯ್ತಂದೆಯರ ॥ ೮೨ ॥

ಅಗಲಿಕೆಯೊಳು ಬಹುದುಃಖವ ಪ್ರತಿಸೂರ್ಯ । ಸುಗುಣಿ ಸುಭಾನುಗಳಾಗ ॥
ಮಿಗೆ ನೊಂದು ಮಾಡುತಿರಲು ಮಂತ್ರಿಜನಗಳು । ಬಗೆಬಗೆಯೊಳು ಬೋಧಿಸಲು ॥ ೮೩ ॥

ಶೋಕವನೀರ್ವರು ಕಡುಬೇಗದಿಂದಲಿ । ನೂಕಿ ಕಳೆಯೆ ಲೀಲೆಯೊಳು ॥
ಭೂಕಾಮಿನಿಯ ನಿಷ್ಕಂಟಕದೊಳಗಾಗ- । ಲಾ ಕುವರರು ಆಳುತಿರಲು ॥ ೮೪ ॥

ಜಿನಪನ ಪಾದಮೂಲದೊಳು ಜ್ಞಾನೇಂದು ಶ್ರೀ- । ಮುನಿನಾಥ ದ್ವಾದಶಾಂಗವನು ॥
ಇನಿಸುಬೇಗದಿ ಚತುರ್ದಶಪೂರ್ವಿಗಳನು । ಅನುನಯದಿಂದ ತಾ ಕಲಿತ ॥ ೮೫ ॥

ಕಲಿಯಲೊಡನೆ ಮತಿಶ್ರುತಾವಧಿಬೋಧೆಯು । ಕಲಿಲಾರಿ ಮುನಿಪಗೊಗೆದವು ॥
ಪಲವು ತೆರದ ಶುಭಭಾವನೆಯಿಂದಾಗ । ಫಲಿಸಿತು ಮನಃಪರ್ಯಯವು ॥ ೮೬ ॥

ಮುನಿನಾಥ ನಾಲ್ಕು ಜ್ಞಾನವನು ಪಡೆದು ತಾನು । ಮುನಿಗಳ ಹಿಂಡಿಂದಗಲಿ ॥
ಘನವಾದ ಮಹಿಮನು ಏಕವಿಹಾರದಿ- । ಯನುಪಮಧರ್ಮವೃಷ್ಟಿಯನು ॥ ೮೭ ॥

ಧರೆಯೊಳು ಕರೆವುತ ಭವ್ಯರ್ಗೆ ದೀಕ್ಷೆಯ- । ನಿರದಿತ್ತು ಮೋಕ್ಷಮಾರ್ಗವನು ॥
ಭರದಿ ತೋರಿಸುತ ಹನ್ನೆರಡು ತಪಗಳೊಳಾ- । ಚರಣೆಯಾಚರಿಪನೆಂತೆನಲು ॥ ೮೮ ॥

ಧಾರಣೆಪಾರಣೆಯೊಳಗೆ ಕೆಲವು ಕಾಲ । ಧೀರಮುನೀಶ್ವರ ನಡೆದು ॥
ಮೂರುದಿವಸಕೊಮ್ಮೆ ಪಾರಣೆ ಕೆಲದಿನ- । ವಾರುದಿವಸಕೊಮ್ಮೆಯುಣಿಸು ॥ ೮೯ ॥

ಕೆಲವು ದಿವಸಯೆಂಟುಪವಾಸವೊಮ್ಮೊಮ್ಮೆ । ವಿಲಸಿತ ಪಾರಣೆ ಮಾಳ್ಪ ॥
ಅಲಸದೆ ಪಕ್ಷಮಾಸೋಪವಾಸಂಗಳ । ಪಲವು ದಿವಸ ಮಾಡುತವನು ॥ ೯೦ ॥

ಧ್ಯಾನಾಧ್ಯಯನಕೆ ಬೇಸರು ಬರದಂತೆ । ತಾನು ಪಾಡ್ಯವು ಮೊದಲಾಗಿ ॥
ಸಾನಂದದಿಂದೊಂದೊಂದಗುಳ ಹೆಚ್ಚಿಸಿ । ಜ್ಞಾನಿ ಹುಣ್ಣಿಮೆ ಪರಿಯಂತ ॥ ೯೧ ॥

ಹೆಚ್ಚಿಸುತಲಿ ಬಂದು ಪಾಡ್ಯ ಪರ್ಯಂತರ । ಸಚ್ಚರಿತನು ತಗ್ಗಿಸುತ ॥
ನಿಚ್ಚ ನಿಚ್ಚಲು ಭಕ್ತಸಿಕ್ಥಚಾಂದ್ರಾಯಣಿ । ವಚ್ಚೊತ್ತುಳಿಯದೆ ನಡೆಸುವನು ॥ ೯೨ ॥

ನಾನಿಂದು ಚರಿಗೆಗೆ ಭ್ರಾಮರಿಯಿಡೆ ಹೊನ್ನ । ಪೀನಗಿಂಡಿಯಸಿರದೆತ್ತಿ ॥
ಸಾನಂದದುದಕಸಿದ್ಧಿಯ ಕೊಡೆ ನಿಲ್ಲುವೆ । ನಾಸಿಲ್ಲೆಯಲ್ಲದೊಡೆಂದು ॥ ೯೩ ॥

ಚರಿಗೆಗೆ ಬಿಜಮಾಡೆಯಿಂತಪ್ಪ ಕ್ರಿಯೆಯು ತಾ । ದೊರೆಯದಿರಲು ಹಿಮ್ಮೆಟ್ಟಿ ॥
ಪರಿತಂದು ಷಷ್ಠೋಪವಾಸದೊಳಗೆ ನಿಂದು । ಗುರುರಾಯ ತಪಸಿಲಿ ನಿಲುವ ॥ ೯೪ ॥

ಆರುಮನೆಯ ದಾಂಟಿ ನಾನಿಂದು ಚರಿಗೆಗೆ । ಊರೊಳು ಮುಂಪೋಗೆನೆಂದು ॥
ಚಾರುಚರಿತ್ರ ಭ್ರಾಮರಿಯಿಟ್ಟು ನಡೆತಂ- । ದೂರನು ಪೊಕ್ಕು ಬೀದಿಯೊಳು ॥ ೯೫ ॥

ಅರಗಳಿಗೆ ಕಾಲುಗಳಿಗೆ ವಿಳಂಬವ । ಗುರು ಮಾಡಿ ನಿಲುತಲೊಂದೊಂದು ॥
ವರ ಭವನದ ಮುಂದೆ ಗೃಹವಾರು ಮುಗಿಯಲು । ತಿರುಗಿ ಬನಕೆ ಬಂದು ನಿಲುವ ॥ ೯೬ ॥

ಹೊನ್ನ ಹರಿವಾಣಕೆ ಪರನಾನ್ನವಿಕ್ಕಲು । ನನ್ನಿಯಿಂದುಂಬೆಯಲ್ಲದೊಡೆ ॥
ಮುನ್ನಿನ ನೆಲೆಗೈದುವೆನೆಂದು ಭಾಮರಿ । ಉನ್ನತಗುಣಿಯಿಕ್ಕಿ ನಡೆದು ॥ ೯೭ ॥

ಪುರವೊಕ್ಕು ದೊರಕಿದೊಡುಂಬನಲ್ಲದೆ ತಾ । ತಿರುಗಿ ಬನಕೆ ಬಂದು ನಿಲುವ ॥
ಗುರುರಾಯನಿವು ಮೊದಲಾದ ಕ್ರಿಯೆಗಳನು । ಪರಮಾನಂದದಿ ನಡೆಸಿ ॥ ೯೮ ॥

ಗೋರಸತ್ರಯ ಎಣ್ಣೆ ಬೆಲ್ಲ ಮುಂತಾಗಿರ್ದ । ಭಾರಿಯ ವೀರ್ಯ ವರ್ಧನದ ॥
ಸಾರವಸ್ತುವ ಬಿಟ್ಟು ಕಾಯಕ್ಲೇಶವ । ಧೀರಮುನೀಂದ್ರ ಮಾಡುವನು ॥ ೯೯ ॥

ಪಶುಷಂಡ ಸ್ತ್ರೀವರ್ಜಿತ ತಾಣಗಳೊಳು । ಋಷಿರಾಯ ಪದ್ಮಪಲ್ಯಂಕ ॥
ಪಶುಮುಖವಜ್ರಾದಿ ನಾನಾಸನದೊಳು । ಹಸನಾಗಿ ಕುಳಿತು ಜಾಡ್ಯವನು ॥ ೧೦೦ ॥

ತುಳಿವುತ ದಂಡಶಯನನೇಕಪಾರ್ಶ್ವವು । ವಿಲಸಿತ ಮೃತಕಧನ್ವಾದಿ ॥
ಬಲು ಶಯನದೊಳಿದ್ದು ಧ್ಯಾನಾಧ್ಯಯನವ । ನಲವಿಂದ ಮಾಡುತ ಮುನಿಪ ॥ ೧೦೧ ॥

ಕಾಯಕ್ಲೇಶವೆನಿಪ ಬಾಹ್ಯತಪವ ಮ- । ತ್ತಾ ಯತಿರಾಯ ಕಡೆಯೊಳು ॥
ವಯ್ಯಾರದಿಂದ ಮಾಡುವನದ ನಾನಿಲ್ಲಿ । ದಾಯವರಿದು ಹೇಳಿತಿಲ್ಲ ॥ ೧೦೨ ॥

ನಡೆವಲ್ಲಿ ಕರಚರಣವ ಬೀಸಿಯಿಡುವಲ್ಲಿ । ಒಡನೆ ದೋಷವು ಬರಲದಕೆ ॥
ಬಿಡದೆ ಪ್ರಾಯಶ್ಚಿತ್ತ ವಿಧಿಪೂರ್ವಕವಾಗಿ । ನಡೆಸುವನಾ ಮುನಿವೃಷಭ ॥ ೧೦೩ ॥

ದರುಶನಜ್ಞಾನಚಾರಿತ್ರೋಪಚಾರ ಸು- । ವರ ವಿನಯಾನ್ವಿತನಾಗಿ ॥
ಪರಮ ಭವ್ಯರಿಗೆ ತತ್ತ್ವೋಪದೇಶಂಗಳ- । ನೊರೆವನಾವಾಗಲಾ ವ್ರತಿಯು ॥ ೧೦೪ ॥

ಪರಮತಪೋಧನರಿಗೆ ರೋಗಪೀಡಿಸೆ । ಬರಲುಪಸರ್ಗವವರಿಗೆ ॥
ಕರಮುಟ್ಟಿ ತಾನು ವೈಯ್ಯಾವೃತ್ಯ ನಡೆಸುತಾ- । ಚರಿಸುವ ತಪದೊಳಾ ಮುನಿಯು ॥ ೧೦೫ ॥

ಕಾಲಕ್ಷೇತ್ರದ್ರವ್ಯ ಭವ ಭಾವಶುದ್ಧಿ ಸ- । ಮ್ಮೇಳಾಲೋಚನೆ ಪ್ರಶ್ನೆ ॥
ಲಾಲಿಪಾಮ್ನಾಯನುಪ್ರೇಕ್ಷೆಯ ಧರ್ಮವ । ಬಾಲಕರಾದಿ ನೃಪರಿಗೆ ॥ ೧೦೬ ॥

ಎರಕದಿಂ ಪೇಳುತ ಪಠಿಸುತ ನೆನೆವುತ । ಮರಳಿ ಮರಳಿ ಚಿಂತಿಸುತ ॥
ಪರಮಾನಂದದಿ ಧ್ಯಾನದೊಳಿರುತ ತಾ । ದುರಿತಾರಿ ಮುನಿವರ್ತಿಪನು ॥ ೧೦೭ ॥

ದುರಿತಕ್ಕೆ ಪಕ್ಕಾದ ದಶ ಚತುರ್ದಶ ವಿಧ । ಪರಿಮಿತ ಪರಿಗ್ರಹವುಳಿದ ॥
ಪರಮಾತ್ಮ ಭಾವನೆಯೊಡಗೂಡಿ ಮುನಿರಾಯ । ಚರಿಸುತಲಿರುವನಾವಾಗ ॥ ೧೦೮ ॥

ತಪದ ಮಹಿಮೆಯಿಂದೇಳು ಋದ್ಧಿಗಳನು । ತಪಸಿ ತಾ ತಿಳಿದನೆಂತೆನಲು ॥
ವಿಪುಲದಿಂ ತಿಳಿವಷ್ಟಾಂಗನಿಮಿತ್ತವು । ಸುಫಲಿಸಿತಾ ಮುನಿವರಗೆ ॥ ೧೦೯ ॥

ಏಕಬೀಜದಿಯನೇಕಾರ್ಥವರಿದು ತಾ । ಲೋಕಕೆಯುಪದೇಶಿಸುವ ॥
ಸಾಕಲ್ಯಬೀಜದ ವೃದ್ಧಿಯ ತಳೆದನಾ । ಲೋಕೈಕರುಚಿ ಜ್ಞಾನೇಂದು ॥ ೧೧೦ ॥

ಪಲವು ತೆರದ ವಸ್ತುಕೋಶವ ತುಂಬಿರೆ । ಒಲಿದೇನ ಬೇಡಿದರವಗೆ ॥
ನಲಿದಾ ವಸ್ತುವ ಕೊಡುವ ಭಂಡಾರಿಗ- । ನೊಲವಿನಂದದಿ ಭವ್ಯರೇನ ॥ ೧೧೧ ॥

ಬೆಸಗೊಳಳಾ ಶಾಸ್ತ್ರವನುಪದೇಶಿಪ । ಕುಶಲದೆಸೆವ ಕೋಷ್ಠಬುದ್ಧಿ ॥
ಶಶಿಸಮ ಶಾಂತ ಜ್ಞಾನೇಂದು ಮುನೀಂದ್ರಗೆ । ಶಸಿನೆ ಪುಟ್ಟಿದುದೇನೆಂಬೆ ॥ ೧೧೨ ॥

ಪನ್ನೆರಡುಯೋಜನ ನೀಳದೊಳು ಮತ್ತೆ । ಸನ್ನುತ ನವಯೋಜನಗಲ ॥
ಬಿನ್ನಾಣದಿ ಬೀಡ ಬಿಡುವ ಚಕ್ರವರ್ತಿಯ । ಉನ್ನತ ಕಟಕದ ಜನವು ॥ ೧೧೩ ॥

ನುಡಿವ ನುಡಿಗಳನು ಕೇಳ್ವನೊರ್ವೊದಲೊಳು । ಬಿಡದೆ ತಿಳಿವ ಸಂಭಿನ್ನ ॥
ಕಡುಗಾಡಿವಡೆದ ಸಂಭಿನ್ನಶ್ರೋತೃಬೋಧ- । ವೊಡನೆ ಪುಟ್ಟಿದುದಾ ಮುನಿಗೆ ॥ ೧೧೪ ॥

ಪಲವು ತೆರದ ಉಪವಾಸವ ಜ್ಞಾನೇಂದು । ನಲವಿಂದ ಮಾಡಲು ಸ್ವಾಂಗ ॥
ಮಲಿನವಾಯಿತೆ ಸೂರ್ಯನ ಬಿಂಬದಂದದಿ । ಥಳಥಳಿಸುತ ಹೊಳೆದತ್ತು ॥ ೧೧೫ ॥

ಕಡುಗಾಯ್ದ ಲೋಹದೊಳಗೆ ಬಿರ್ದುದಕವು । ಅಡಗಿಹೋಹಂತೆ ಮುನಿಪನು ॥
ಬಿಡದುಂಡ ಚತುರ್ವಿಧಾಹಾರವು ಕರ್ಪೂರ । ಪಡೆಯ ಸುಟ್ಟಂತೆ ನಿಮಿಷಕೆ ॥ ೧೧೬ ॥

ಭಸ್ಮವಾಗುವುದದು ಮಲಮೂತ್ರಗಳೆಂಬ । ಕಷ್ಮಲವಿಲ್ಲಾ ಮುನಿಗೆ ॥
ವಿಸ್ಮಯವಾದತಿ ತಪ್ತತಪವನಾಂತ । ಸುಸ್ಮಿತಾನನಗುಂಟೆ ಮಲವು ? ॥ ೧೧೭ ॥

ಬಲು ಶಾಸ್ತ್ರವನಾವಾಗ ಚಿಂತಿಸುತಿರೆ । ಬಳಲಿಕೆ ಕಿಂಚಿತ್ತಾ ಮುನಿಗೆ ॥
ಸಲೆ ಪೊರ್ದಲಮ್ಮಗೆಂದರೆ ಮನೋಬಲವನು । ಇಳೆಯೊಳು ಬಣ್ಣಿಪರಾರು ॥ ೧೧೮ ॥

ಶರಧಿ ಘೂರ್ಣಿಸುವಂತೆ ದಿವರಾತ್ರಿಯುಗದೊಳು । ಪರಮಾಗನು ಪಠಿಸುತಲು ॥
ಸ್ವರವಡೆಯದ ವಾಗ್ಬಲವಾ ಮುನಿಪಗೆ । ಸುರಚಿತವೊಪ್ಪಿತೇನೆಂಬೆ ॥ ೧೧೯ ॥

ಮಾಸಿಕ ಚಾತುರ್ಮಾಸಿಕ ವತ್ಸರ । ಭಾಸುರಯೋಗದೊಳಿರಲು ॥
ಆ ಸಂಯಮಿಗೆ ಕಿಂಚಿತ್ತು ಬಾಧೆಯಿಲ್ಲೆನೆ । ಯೇಸು ಬಣ್ಣಿಪೆ ಕಾಯ ಬಲವ ॥ ೧೨೦ ॥

ಏನಪೇಳುವೆನೌದುಂಬರಕೋಷ್ಠಾದಿ । ಹೀನ ರೋಗಿಗಳು ಪೀಡಿತರು ॥
ಜ್ಞಾನಚಂದ್ರನ ಮುನಿಯವಯವವನು ಮುಟ್ಟೆ । ತಾ ನೋಡಿ ಪೋಪುದಾ ವ್ಯಾಧಿ ॥

ಪಲವು ಸ್ಥಾವರ ಜಂಗಮ ವಿಷಂಗಳು । ಕಲಿಲಾರಿಯಂಗದೊಳಿರ್ದ ॥
ಮಲವ ತಿಗುರಿದೊಡೆ ಹರಿವುವು ವಿಷಮೆನೆ । ಮಲಧಾರಿ ತಪವಿನ್ನೆಂತೋ ॥ ೧೨೨ ॥

ಕಾಲಕೂಟ ಹಾಲಾಹಲ ಕೃತ್ರಿಮ ವಿಷ । ಜ್ವಾಲೆಯ ಪ್ರಾಣಿಗಣಗಳ ॥
ಮೇಲೆ ಮುನಿಪನ ದಿವ್ಯಾಂಗವ ಸೋಂಕಿದ । ಗಾಳಿ ಬೀಸಲು ವಿಷಹರಿಗು ॥ ೧೨೩ ॥

ವೃಷಧಾರಿಯತಿಕುಂಜರನ ಶ್ರೀವದನಕೆ । ವಿಷಗಳು ಬರಲು ತಾವಮೃತ ॥
ರಸವಾಗಿ ಪರಿಣಮಿಸುವವೆಂದೊಡೆಯಾ । ಋಷಿಮಹಿಮೆಯನೇನೆಂಬೆ ॥ ೧೨೪ ॥

ಪಲವು ವ್ಯಾಧಿಗಳು ಪೀಡಿತ ವಿಷಪೂರಿತ । ಪಲಜೀವಗಳ ಮೇಲೆ ಕೃಪೆಯಿಂ ॥
ಮಲವಿದೂರನು ನೋಡೆ ವ್ಯಾಧಿ ವಿಷಗಳಿಲ್ಲ। ನಿಲಲಮ್ಮದೆ ಓಡುವವು ॥ ೧೨೫ ॥

ನಿರಸವಾದನ್ನವನಾ ಯತಿಪತಿ ತಾ। ಕರದೊಳು ಬಳಸೆ ಪಾಯಸದ ॥
ಪರಿಯಾಗಿ ಪರಿಣಮಿಸುವುದೆಂದೊಡೆ ನಾನು । ಒರೆಯಲಳವೆ ಜತಿ ಸೈಪ ॥ ೧೨೬ ॥

ಯತಿರಾಜನ ಹಸ್ತದೊಳು ಸಪ್ಪೆ ವಸ್ತುವ । ಖತಿಯಿಂದ ಬಳಸಲಾ ವಸ್ತು ॥
ವ್ರತಿಯು ಹಸ್ತವ ಸೋಂಕೆ ಗುಡಖಂಡಶರ್ಕರಾ- । ಮೃತದತಿಶಯವ ನಗುವುದು ॥ ೧೨೭ ॥

ಗುರುವಿನ ಪಾಣಿಪಾತ್ರಕೆ ಕೈಪೆ ವಸ್ತುವ । ಇರಿಸಲೊಡನೆ ಹಸ್ತ ಸೋಂಕಿ ॥
ಸುರರುಣಿಸಿಗೆ ಸರಿಯಾಗುವುದೆಂದೊಡೆ । ದುರಿತಾರಿ ವ್ರತವದಿನ್ನೆಂತೋ ! ॥ ೧೨೮ ॥

ಮುನಿಗಣಾರಾಧ್ಯನು ಚರಿಗೆಯ ಮಾಡಿದ । ಮನೆಯೊಳು ಮಡಕೆಯೊಳಿರ್ದ ॥
ಇನಿಸನ್ನವಾದರು ಚಕ್ರವರ್ತಿಯ ಮಹಾ । ಘನಪಡೆ ತಾನುಂಡು ತಣಿದು ॥ ೧೨೯ ॥

ಬಿಡವೂಟವ ಮಾಡಿದರನ್ನಕಜ್ಜಾಯ । ಮಡಕೆಲಿ ಸರಿಯಾಗಲಿಲ್ಲ ॥
ಪಡೆವುದು ವೃದ್ಧಿಯನೆಂದೊಡೆ ಯೋಗಿಯ । ಕಡು ಸಂಯಮವಿನ್ನೆಂತೋ ॥ ೧೩೦ ॥

ಸುರನತಯತಿರಾಯ ವಾರಗಲಿನದೊಂದು । ತೆರಪಿನೊಳಿರಲಾ ಎಡೆಗೆ ॥
ಸುರನರೋರಗವ್ಯಂತರವಿಗಗೊಂಡಣ । ಎರಕದಿಂ ಬಂದಾಗಲ್ಲಿ ॥ ೧೩೧ ॥

ಒರಸದೋರೋರ್ವರ ಭದ್ರಾಸನದಲ್ಲಿ । ಪರಿತೋಷದಿಂ ಕುಳ್ಳಿರಲು ॥
ತೆರಪನು ಕೊಟ್ಟು ಮಿಗುವುದು ಕಿಂಚಿತು ಎನೆ । ಗುರುವಿನ ಚಾರಿತ್ರವೆಂತೋ ॥ ೧೩೨ ॥

ಹಸಿವು ನೀರಡಿಕೆ ಶೀತೋಷ್ಣವು ಕಾಳ್ಗೊಣ । ನುಸಿ ನಗ್ನರೂಪು ಮೆಚ್ಚದುದು ॥
ಶಶಿಮುಖಿಯರ ಪರಿಚರ್ಯೆ ಭೂಶಯ್ಯೆಯು । ಶಸಿನೆ ಬಯ್ವುದ ಕೊಲುವುದ ॥ ೧೩೩ ॥

ಬೇಡೋದು ದೊರಕದಿರ್ದೊಡೆ ಸೈರಿಸುವುದು । ಕಾಡುವ ರೋಗಕ್ಕೆ ಮೈಯ ॥
ನೀಡಿ ಸಹಿಸುವುದು ತೃಣಕಂಟಕಶೂಲ- । ಪೀಡೆಯ ಬಾಧೆ ಸೈರಿಪುದು ॥ ೧೩೪ ॥

ಮಲಧಾರಣೆ ಪೂಜ್ಯತ್ವ ಶ್ರೇಷ್ಠತ್ವವ । ತಳೆಯದುದು ಪ್ರಜ್ಞಾಜ್ಞಾನ ॥
ವಿಲಸಿತಾದರ್ಶನ ವೆಂಬದ್ವಾವಿಂಶತಿ । ಬಲು ಪರೀಷಹವ ಸೈರಿಸುತ ॥ ೧೩೫ ॥

ನಗರಖರ್ವಡಮಡಂಬಪಟ್ಟಣಗ್ರಾಮ । ಮಿಗೆ ದ್ರೋಣಾಮುಖ ಖೇಟಾದಿಗಳು ॥
ಅಗಣಿತ ಧರ್ಮವರ್ಷವ ಮುನೀಂದ್ರನು । ಸುಗುಣ ಕರೆದು ಚರಿಸುವನು ॥ ೧೩೬ ॥

ಗಾರವತ್ರಯದಂಡ ಶಲ್ಯತ್ರಯಗಳ । ದೂರೀಕರಿಸಿಯಾ ಮುನಿಯು ॥
ಚಾರುರತ್ನತ್ರಯ ಗುಪ್ತಿತ್ರಯ ಮತ್ತೆ । ಸೇರಿದ ವ್ರತಪಂಚಕದೊಳು ॥ ೧೩೭ ॥

ಪಂಚಸಮಿತಿ ದಶಧರ್ಮಗಳೊಳು ಯತಿ। ಚಂಚಲರಹಿತ ನಡೆವುತ ॥
ಪಂಚಮಗತಿಯಾಳ್ವ ಸಿದ್ಧರ ನೆನೆವುತ। ಸಂಚಿತಾಘವನು ಕೆಡಿಸುತ ॥ ೧೩೮ ॥

ಹೊಳೆಯ ನೀರೊಳು ಕೈಯಿಕ್ಕೆ ಬೆರಳುಗಳು । ಕಳೆವಂತೆ ಕತ್ತರಿಸುವವು ॥
ಇಳೆಯ ಮೆಟ್ಟಲು ಕಾಲುಗಳು ಮುರುಟುವವು । ಬಲುಹಿಮ ಶೀತಕಾಲದೊಳು ॥ ೧೪೯ ॥

ಇಂತಪ್ಪ ಹಿಮಕಾಲದೊಳು ಜ್ಞಾನಚಂದ್ರಮ । ಮುಂತಿರ್ದ ಹೊಳೆಯ ತಡಿಯೊಳು ॥
ಚಿಂತಾಯಕನ ಧ್ಯಾನದಿ ಚಿಂತಿಸುತಲಿ । ಸ್ವಾಂತದೊಳಗೆ ಕೈಯಿಕ್ಕಿ ॥ ೧೫೦ ॥

ಸುರಶೈಲದಂತೆ ಕಿಂಚಿತ್ತು ತೊನೆದಾಡದೆ । ಎರಡು ತಿಂಗಳು ಮಹಾತ್ಮಾ ॥
ಪರಮಾತ್ಮಭಾವನೆಯೊಳಗಿರ್ದು ಕೈಯೆತ್ತಿ । ಚರಿಗೆಯ ಕೊಂಬನೊಮ್ಮೊಮ್ಮೆ ॥ ೧೫೧ ॥

ಹರನುರಿಗಣ್ಣ ತೆರೆದನೊ ಫಣೀಂದ್ರನ । ಗರಳದುರಿಯೋ ಎಂಬಂತೆ ॥
ಉರಿವುತಿರಲು ಭುಗಿಭುಗಿಲೆಂದು ಬೇಸಗೆ । ಧರೆಹತ್ತಿ ಬೆದಬೇವ ಬಿಸಿಲು ॥ ೧೫೨ ॥

ಅಡವಿಗಿಚ್ಚಿನ ದಳ್ಳುರಿಹತ್ತಿ ಪಾಸರೆ । ಸಿಡಿದಂಬರಕೆ ಹಾರುವವು ॥
ಪೊಡವಿಯೆಲ್ಲವು ಕಾದ ಕಾವಲಿಯಂತಾಗೆ । ನುಡಿಯಲರಿದು ಬೇಸಗೆಯ ॥ ೧೫೩ ॥

ಗುರುರಾಯನಿಂತಪ್ಪ ಬೇಸಗೆ ಬಿಸಿಲೊಳು । ಗಿರಿಯಗ್ರಕೋಡುಗಲ್ಲೇರಿ ॥
ಉರಿವ ಕಿಚ್ಚನು ತೂರುವ ಸೂರ್ಯಗಿದಿರಾಗಿ । ಖರದಾತಪಯೋಗದೊಳು ॥ ೧೫೪ ॥

ಇಂಗಳಂದದಿ ಕಡುಗಾಯ್ದುರಿಯೇಳ್ವ ಕೋ- । ಡಂಗಲ್ಲ ಕೊನೆಯೊಳು ನಿಂದು ॥
ತಿಂಗಳೆರಡರ ವರೆಗೆ ತಪಿಸುವ ಯೋಗಿ- । ಪುಂಗವ ನೀರೊಳಿಪ್ಪಂತೆ ॥ ೧೫೫ ॥

ಎರಡು ತಿಂಗಳು ತೀರೆ ಕೈಯೆತ್ತಿ ಮುನಿರಾಯ । ಚರಿಗೆಯ ತಾನೊಮ್ಮೆ ಮಾಡಿ ॥
ಧರೆಯೊಳು ಧರ್ಮಾಮೃತವನು ಕರೆವುತ । ಪರಿವ್ರಾಜಕ ವರ್ತಿಪನು ॥ ೧೫೬ ॥

ಛಟಿಛಟಿರೆಂಬ ಸಿಡಿಲು ಮಿಂಚುವ ಮಿಂಚು । ಖಟಖಟನುದುರುವ ಕರಕ ॥
ನಟಿನಟಿ ಮರಗಳ ಮುರಿದು ಬೀಸುವ ಗಾಳಿ । ಛಟಿಛಟಿ ಗುಡುಗುಡೆಂದೆನುತ ॥ ೧೫೭ ॥

ಭರದಿಯಾರ್ಭಟಿಸುವ ಗುಡುಗಿನ ಸ್ವರದಿಂದ । ಕರಿಯ ಕಾರ್ಮುಗಿಲೊಡ್ಡಿನಿಂದ ॥
ಧರೆಯಾಗಸದಿಕ್ತಟಗಳು ತಾನಾಗಿ । ಧರೆಗಾಗಸದೆಸೆಯಿಂದ ॥ ೧೫೮ ॥

ಅಡಕೆಯ ಹೇರನು ಸುರಿದಂತೆಯಂಬಿನ । ನಿಡುಹೊರೆ ಕಟ್ಟಕಿತ್ತಂತೆ ॥
ಬಿಡದೆ ಝುಳಿರುಝುಳಿರೆಂದು ಭೋರ್ಮೊರೆವುತ । ಪೊಡವಿಲಿ ಸುರಿವ ಸೋನೆಯೊಳು ॥

'ಮಳೆ ಬಿಟ್ಟರು ಮೇಲೆ ಹನಿಬಿಡದೆನೆ' ಬೀಳ್ವ । ಬಲು ವಟವೃಕ್ಷದಡಿಯೊಳು ॥
ಖಳಕರ್ಮದಹನ ಜ್ಞಾನೇಂದು ಮುನೀಂದ್ರನು । ನಲವಿಂದ ದಶವಾಯು ಬಲಿದು ॥

ಮನವ ಪೂರ್ವಿನ ಕೊನೆಯೊಳಗಿಟ್ಟು ನಾಸದ । ಕೊನೆಯೊಳಗಿಟ್ಟು ದೃಷ್ಟಿಗಳ ॥
ಕೊನೆವಲ್ಲು ಮುಟ್ಟದಂದದಿ ಸೇರೆ ನಿಲ್ಲಿಸಿ । ಘನನವದ್ವಾರವ ಬಲಿದು ॥ ೧೬೧ ॥

ಮಿಡುಕದಂದದಿ ಪಂಚೇಂದ್ರಿಯಂಗಳ ಕಟ್ಟಿ । ಎಡೆಯಾಡಗೊಡದೆ ದುರ್ಮನವ ॥
ಅಡಿಗಿಸಿ ನಿಲಿಸಿ ಲಕ್ಷಣಯುಕ್ತದೊಳಗೆ । ಕಡೆಯಾಣಿ ಬೊಂಬೆಯಂದದೊಳು ॥ ೧೬೨ ॥

ಎರಡು ತೋಳುಗಳನು ಗುಲ್ಫಪರ್ಯಂತರ । ಸರಿಸದೆ ಕೆಳಗಿಳಿಬಿಟ್ಟು ॥
ಕರಯುಗದೊಳಗಣ ಬೆರಳ ಸರಿಸವಾಡಿ । ಧರೆಮುಟ್ಟುವಂತಿಳಿಬಿಟ್ಟು ॥ ೧೫೩ ॥

ಶಿರವ ಬಾಗಿಸದೆ ಬಹಳವಾಗಿ ಹಿಂದಕೆ । ಮುರಿದು ಮುಂದಕೆ ಮುಗ್ಗಿಸದೆ ॥
ಸರಿತಂದು ದೇಹವ ಹಿಂಬರಕಾಗದೆ । ಮುರಿದು ಬಾಗದೆ ಮುಂಗಡೆಗೆ ॥ ೧೫೪ ॥

ಸುರಗಿರಿಯಂದದಿ ಜ್ಞಾನಚಂದ್ರಮು ಸಾಧು । ಹರಿದು ಲಕ್ಷಣದೊಳು ನಿಂದು ॥
ದುರಿತಾಂತ ಚಿನ್ಮಯ ಚಿದ್ರೂಪ ಪರವಸ್ತು । ಪರಬೊಮ್ಮ ಪರಂಜ್ಯೋತಿರೂಪ ॥ ೧೫೫ ॥

ಗುರುಹಂಸನಾಥ ಚಿದಂಬರ ನಿರ್ಲೇಪ । ಪರಮಾತ್ಮನ ಚಿಂತಿಸುತ ॥
ಕುರುಕುಲಜ್ಯೋತಿ ಜ್ಞಾನೇಂದು ಮಹಾಮುನಿ । ಪರಮವಿಲಾಸದೊಳಿಹನು ॥ ೧೫೬ ॥

ಸುರಪತಿನತಪಾದ ನರಪತಿಪೂಜಿತ । ಉರಗೇಂದ್ರಸುತಗುಣಾಭರಣ ॥
ದುರಿತೇಭ ಕಂಠೀರವನಾತ್ಮಚಿಂತೆಯೊ- । ಳಿರುತಲೊಪ್ಪಿದ ಜ್ಞಾನಚಂದ್ರ ॥ ೧೫೭ ॥

॥ ಅಂತು ಸಂಧಿ ೪೩ಕ್ಕಂ ಪದ ೬೦೩೨ಕ್ಕಂ ಮಂಗಲಂ ॥

## ಸಮವಸರಣ.

ಅರುವತ್ತನೂರು ಕರ್ಮವ ಸುಟ್ಟ ಜ್ಞಾನೇಂದು । ಅರುಹನಾದುದ ಸೊಲ್ಲಿಪೆನು ॥ಪ॥

ಅಂಜನಭಂಜನ ಕಂಜಾಕ್ಷಸುತ ಧನು- । ಸ್ಸಿಂಜಿನಿ ಕಂಜಾದಿಸರದ ॥
ಪುಂಜಾರಣ್ಯ ಧನಂಜಯ **ಶಾಂತೀಶ !** । ಮಂಜುಳಮತಿದೋರೆನಗೆ ॥ ೧ ॥

ಮನದೊಳು ದ್ವಾದಶದಿನ ಪರಿಯಂತರ । ನನಗನಶನವೆಂದೆನುತ ॥
ಮುನಿಕುಂಜರ ತನು ತನ್ನದಲ್ಲವು ಎಂದು । ಮನದೊಳು ಕೈಯಿಕ್ಕಿರಲು ॥ ೨ ॥

ಆ ವಿಪಿನದ ಧನಂಜಯ ದಿಸೆಯಲ್ಲಿ । ಪಾವನವಾದೊಂದು ಗಿರಿಯು ॥
ದೇವಲೋಕವ ಮುಟ್ಟುತಲೊಪ್ಪುಲದರಲ್ಲಿ । ತೀವಿದ ರತ್ನಾಂಕಿತದಿ ॥ ೩ ॥

ಮೆರೆವ ಶಿಖರದೊಳು ಪವಿಗಲಚರನಾದ । ದುರುಳ ರಕ್ಕಸನಿರುತಿರ್ದ ॥
ತಿರುಗುತ ಬಂದು ಕಂಡನು ಧ್ಯಾನದೊಳಿರ್ಪ । ಗುರುತಿಲಕನನಾ ಪಾಪಿ ॥ ೪ ॥

ಮುನ್ನಿನ ಭವದಲ್ಲಿ ಹರಿಬಲರಾಯನ । ಕನ್ಯೆಯರೆನಗೆಂದಿರ್ದ ॥
ಚೆನ್ನೆಯರನು ಈ ಬಣಗು ತಾನೈತಂದು । ತಾನ್ನೆರೆ ವರಿಸುವೆನೆಂದು ॥ ೫ ॥

ವನದೊಳಗಿರುತ ತನ್ನನು ಕೊಂದನೀತನು । ನನಗಿದೇ ಸಮಯ ಹಗೆಯನು ॥
ಅನುವು ಮುಗುಚಿ ಕೊಲ್ಲುವೆನೆಂದು ಕೋಪದಿ । ಧನುಜನು ಮುನಿಯೆಡೆಗೈದಿ ॥ ೬ ॥

ಇದಿರೊಳು ನಿಂದಾ ರಕ್ಕಸನಿಂತೆಂದು । ಒದರಿ ನುಡಿದನೆಲೆ ಪಿಶುನ ! ॥
ಹೊದಪನು ಬಿಟ್ಟು ಪಶುವಿನಂತೆ ಬತ್ತಲೆ- । ಯದಿರದೆ ಲಜ್ಜೆಯ ತೊರೆದು ॥ ೭ ॥

ಮುನಿರೂಪನು ಕಳ್ಳತನದೊಳು ಪಡೆದು ನೀ- । ನಿನಿಸು ಬೆಚ್ಚದೆ ನಾನಿರ್ದ ॥
ಬನವೊಕ್ಕು ನಿಂದುಕೊಂಡಿರುವುದೆವಡಿಗನ । ಕುನಯವ ನೋಡೆಲೊ ಇವನ ॥ ೮ ॥

ಬಿಡಿಸಿಕೊಂಬವರಾರುಂಟು ನಿನ್ನನು ಹೇಳೊ । ತುಡುಗುಣಿ ! ಎಂದು ಘರ್ಜಿಸುತ
ಬಿಡದಿರಿ ಈತನ ಕಡಿ ಖಂಡವ ಮಾಡಿ । ಕೊಡಿ ದಶದಿಕ್ಕಿಗೆ ಬಲಿಯ ॥ ೯ ॥

ಎನುತಾಗ ಖಿಡಿಖಿಡಿವೋಗಿ ತನ್ನಾಳಿಗೆ । ದನುಜನಪ್ಪಣೆಯನು ಕೊಡಲು ॥
ಅನಿತರೊಳಗೆ ಕೋಟಿಭೂತಗಳೈತಂದು । ಬನದ ಮೇಗಡೆಯೊಳು ನಿಂದು ॥ ೧೦ ॥

ಮುನ್ನ ನಮ್ಮೊಡೆಯಗೆ ನೇಮಿಸಿಕೊಂಡಿರ್ದ । ಕನ್ನಿಕೆಯುರನೆಳಕೊಂಡ ॥
ನಿನ್ನ ದರ್ಪವ ತೋರು ತೋರಿಲೊಯಲ್ಲವೆ । ಛಿನ್ನಭಿನ್ನವ ಮಾಡುವೆವು ॥ ೧೧ ॥

ಅಲ್ಲವೆ ನೀ ಬಂದು ನಮ್ಮೊಡೆಯನ ಕಳಿ- । ರ್ಗಲ್ಲಡಿಗಳ ಪೋಗು ಮರೆಯ ॥
ಕ್ಷುಲ್ಲಕ ಸುಮ್ಮನೆ ನಿಂದರೆ ಬಿಡುವೆವೆಂ- । ದೆಲ್ಲರು ಭೋಯೆಂದಾಲುತಲಿ ॥ ೧೨ ॥

ಘುಡುಘುಡಿಸುತ ಗುಂಡುಗಳ ಮಳೆಗಳನು । ಕೆಡುಹಲು ಫಟಿಫಟಿಲೆಂದು ॥
ಕಡುಬೇಗದಿಂ ಬಂದು ಮುನಿಯುತ್ತಮಾಂಗಕೆ । ಪುಡಿಪುಡಿಯಾಗಿ ಹಾರಿದವು ॥ ೧೩ ॥

ಅಲಗಿನ ಮಳೆಯನು ಕೋಪಾಟೋಪದಿ । ಬಲುಹಿಂದ ಕರೆಯಲೈತಂದು ॥
ಮಲಧಾರಿಯಂಗವ ಭೇದಿಸಲಾರದೆ । ಘಳಿಲನೆ ಮುರಿದು ನುಗ್ಗಾಯ್ತು ॥ ೧೪ ॥

ಹುರಿದ ಮಳಲ ಕೋಟಾಕೋಟಿ ಮಣವನು । ಕರೆಯಲು ಝುಲಿಝುಲಿರೆನುತ ॥
ಕುರುಕುಲಜ್ಯೋತಿಯ ಶಿರದೊಳು ಸುರಿದುದು । ಸುರುಚಿರ ಶರ್ಕರೆಯಂತೆ ॥ ೧೫ ॥

ಕಡುಗಾಯ್ದು ಕೆಂಪೇರಿದ ಲೋಹರಸವನು । ಬಿಡಲದು ಘುಡಿಘುಡಿಸುತ್ತ ॥
ತಡೆಯದೆ ಬಂದು ಮಸ್ತಕದಿಂದಿಳಿದುದು । ಬೆಡಗಿನ ಘೃತಧಾರೆಯಂತೆ ॥ ೧೬ ॥

ಚರಣದಿಂ ಮಸ್ತಕ ಪರಿಯಂತರ ಭೋ- । ರ್ಗರೆವ ಫಣಿಗಳ ಹಿಂಡುಗಳ ॥
ಭರದಿಂದ ಸುತ್ತಿಸಿ ಕಡಿಯಿಸೆ ಫಣಿಗಳ । ಗರಳದಂತವು ನುಗ್ಗಾಗೆ ॥ ೧೭ ॥

ಉರಗವಿಂಡುಗಳು ಸರ್ವಾಂಗವ ತೊಡರಿರೆ । ಗುರುರಾಯನಂಗ ರಾಜಿಸಿತು ॥
ಕರಿಯ ತಮಾಲದ ಲತೆಸುತ್ತಿ ರಾಜಿಪ । ಸುರತರುವೋ ಎಂಬಂತೆ ॥ ೧೮ ॥

ಹಿಂಡುಹಿಂಡಾಗಿ ಭೂತಗಳು ನಭದಿ ನಿಂದು । ಕೆಂಡದ ಮಳೆಗಳ ಮುನಿಯ ॥
ಮಂಡೆಯ ಮೇಲೆ ಸೂಸಲು ಮಾಣಿಕ್ಯದ । ಮಂಡಲದಂತೆಯೊಪ್ಪಿದುದು ॥ ೧೯ ॥

ಕರಿಯ ಕಂಬಳಿಯ ಕಾಚಿದೊಲು ಕಟ್ಟಿರುವೆಯ । ಶಿರದಿಂದ ಪಾದವು ಮುಟ್ಟಿ ॥
ಪರಿಪೂರ್ಣವಾಗಿ ಮುತ್ತಿಸಿ ಕಡಿಯಿಸಿದರಾ । ಪರಮಾತ್ಮಯೋಗಧಾರಿಯನು ॥ ೨೦ ॥

ಹರಿವಾಣವ ಬಡಿದರೆ ತೂತಾಗುವ । ಉರಿಸಿಂಗಿ ಕುಂದ ವೃಶ್ಚಿಕವ ॥
ಉರಿಯನುಗುಳುತಿರೆ ಬಾಲದಿ ರಕ್ಕಸ- । ರಿರದೆ ವಿಡಿಸುವರಾ ವೇಳೆ ॥ ೨೧ ॥

ಘುಡುಘುಡಿಸುವ ಗುಡುಗಿನ ರೂಪನು ತಾಳಿ । ಬಿಡದೆ ಛಿಟಿಲು ಛಿಟಿಲೆಂದು ॥
ಸಿಡಿಲಾಕಾರದಿ ಮುನಿಪನ ತಲೆಯನು । ಪೊಡೆವರು ಶಿರದಿಮ್ಮೆಂಬಂತೆ ॥ ೨೨ ॥

ಹಸಿದ ಹುಲಿಯ ಹಿಂಡ ಬಿಡಲವು ಮೊರೆವುತ । ಅಸವಸದಿಂ ಬಂದು ಮುನಿಯ ॥
ಮುಸುಕಿ ಕಡಿಯಲು ಕಲ್ಲನು ಕಡಿದಂದದಿ । ಹಿಸಿದು ಬಿದ್ದವು ದಂತಗಳು ॥ ೨೩ ॥

ಹರಿಗಳ ಹಿಂಡನು ಬಿಡಲು ಲಂಘಿಸುತಾಗ । ಭರದಿ ಘರ್ಜಿಸುತಲೈತಂದು ॥
ಕರದಿಂದ ಮುನಿಪನ ಸರ್ವಾಂಗವೆಲ್ಲವ । ತರಿದು ಹಿಸಿವವೇನೆಂಬೆ ॥ ೨೪ ॥

ಶುನಕನ ಹಿಂಡನು ಬಿಡಲವು ಬೊಗಳುತ । ಕನಲಿ ಬಾಯನು ಬಿಟ್ಟು ಕೊಂಡು ॥
ಮುನಿದು ಬೇಗದಿ ಬಂದು ಮುನಿಯ ಸರ್ವಾಂಗವ । ಘನವಾಗಿ ಕೆರೆವವೇನೆಂಬೆ ॥ ೨೫ ॥

ಅಸಿ ಪಿಂಡಿವಾಳ ಮುಸುಂಡಿಕಂಪನಶೂಲ । ಮುಸಲಕಣೆಯ ಜವದಾಡೆ ॥
ದಸಿಚಕ್ರಚಾಪಸೆಲ್ಲಿಹ ಬಲ್ಲಿಹ ಕತ್ತಿ । ಮಸೆದ ಪರಶು ಮುದ್ಗರವು ॥ ೨೬ ॥

ಸುರಗಿ ತೋಮರ ಈಟಿ ಕುಂತ ಕಟಾರವು । ಕರಮುಕ್ತ ಚಿಕ್ಕ ಕಟಾರ ॥
ನೆರೆ ಭಿಂಡಿವಾಲ ಕವಣೆಕಲ್ಲು ಕುರುಚಿಟ್ಟ । ವರ ಮುಕ್ತಾಮುಕ್ತ ವಿಮುಕ್ತ ॥ ೨೭ ॥

ಇವು ಮೊದಲಾಗಿರ್ದ ಬತ್ತೀಸ ತೆರದೊಳು । ಜವನ ನಾಲಿಗೆಯಂತಿರ್ದ ॥
ನವನಿಶಿತವಾದಾಯುಧಗಳನಾಂತು । ತವಕದಿಂ ಭೋ ಎಂದಾಲುತ್ತ ॥ ೨೮ ॥

ಘುಡುಘುಡಿಸುತ ತಲೆಗಳನು ಕೆದರಿಕೊಂಡು । ಒಡನೆ ತುಪ್ಪುರಿದು ಲಂಘಿಸುತ ॥
ಕಡುಬೇಗದಿಂ ಬಂದು ಮುನಿರಾಜನ ಸುತ್ತ । ಕೆಡುಕ ಭೂತಗಳೆಲ್ಲ ಮುತ್ತಿ ॥ ೨೯ ॥

ಇರಿವುತ ತರಿವುತ ಕಡಿವುತ ಬೊಬ್ಬೆಯ । ಭರದಿಗುಟ್ಟುತ ಭೋ ಎಂದು ॥
ಸ್ವರದೋರುತ ಧ್ಯಾನಕೆ ವಿಘ್ನಗಳನೆಲ್ಲ । ಕರಿಕವ್ವೆಯರು ಮಾಡುತಿರಲು ॥ ೩೦ ॥

ಇರುವೆಗಳೂರಲು ಕರಿ ತಾ ಹೆದರುವುದೆ । ಮರುತ ಬೀಸಲು ಮಂದರವು ॥
ಚರಿಸುವುದೇ ಏನು ದಾನವರೆಸಗಿದ । ಪರಿಪರಿ ಬಾಧೆಗೆ ಮುನಿಯು ॥ ೩೧ ॥

ಹೆರಸಾರುವನೇ ಪರಮೋಪಶಾಂತದಿ । ಪರಮನಾಥನು ಚಿಂತಿಸುತ ॥
ವರ ಧರ್ಮಧ್ಯಾನದ ಬಲದಿಂದ ನಾರಕ । ಸುರತಿರಿಕಾಯುಷ್ಯಗಳು ॥ ೩೨ ॥

ಮಾನಮಾಯವು ಲೋಭಕ್ರೋಧಗಳೆಂಬೀ । ಪೀನಾನಂತಾನುಬಂಧೀ ॥
ಹೀನಮಿಥ್ಯೆಯು ಸಮ್ಯಗ್ಮಿಥ್ಯೆಯು ಪ್ರಕೃತಿಯು । ಹೀನವಾದುವು ಏಳನೆಯಲಿ ॥ ೩೩ ॥

ಪುಟ್ಟಿತು ಕ್ಷಾಯಿಕ ಸಮ್ಯಕ್ತ್ವ ಮುನಿಪಗೆ । ನಷ್ಟವಾಗಲು ಏಳುಪ್ರಕೃತಿ ॥
ಅಷ್ಟಮ ಸ್ಥಳದೊಳು ಪರಿಣಾಮದಿ ನಿಂದು । ಪುಟ್ಟಿದ ಪ್ರಥಮ ಶುಕ್ಲದೊಳು ॥ ೩೪ ॥

ಬೆಳಗಿತು ಒಳಗೆ ಪೂರ್ಣವಿಯ ಚಂದಿರನಂತೆ। ಕಳೆಯಾತ್ಮನೊಳಗೆ ತಾ ಪೆರ್ಚಿ ॥
ಅಳಿದವು ಮೊದಲೆ ಮೂರಾಯು ಮನುಜಗತಿ। ಉಳಿದುದೊಂದಾಗಾಯುಷವು ॥ ೩೫ ॥

ಮತ್ತುಳಿದೇಳು ಕರ್ಮಂಗಳ ಶಕ್ತಿಯು। ಮೆತ್ತಗಾದವು ಮುನಿಯಾಗ ॥
ಹತ್ತಿದನಸಿವೃತ್ತಕರಣವೆಂದೆಂಬೊಂ-। ಬತ್ತನೆ ನೆಲೆಯಾದ ಮೆಟ್ಟ ॥ ೩೬ ॥

ಪರಿಣಾಮಶುದ್ಧಿಯನಿರದೆತ್ತಿಕೊಂಡಾ। ಗುರುರಾಯನೊಂಬತ್ತು ಸೂಳು ॥
ಚರಿಸಿಯಾಸ್ಥಾನದೊಳಗೆಯಾತಪ ಸೂಕ್ಷ್ಮ। ವರ ಸ್ಥಾವರ ಸಾಧಾರಣವ ॥ ೩೭ ॥

ಪಶುಗತಿಗುದ್ಯೋತ ದುರ್ಗತ್ಯೇಕೇಂದ್ರಿಯ। ಎಸೆವ ದ್ವಿತ್ರಿಚತುರಿಂದ್ರಿ ॥
ಹಸನಾದ ಮಾನುಷ್ಯ ದೇವಗತಿಗಳನು। ಹೆಸರಿಲ್ಲದಂತೆ ಕೆಡಿಸಿದ ॥ ೩೮ ॥

ಮತ್ತೆ ನಿದ್ರಾನಿದ್ರೆ ಸ್ತ್ಯಾನಗೃದ್ಧಿಯು ತಾನು। ಪತ್ತಿದ ಪ್ರಚಲಾಪ್ರಚಲೆ ॥
ದತ್ತಾವದಾನದಿಂದಿವ ಮೂರ ಕೆಡಿಸಿದ। ಉತ್ತಮ ಧ್ಯಾನದ ಬಲದಿ ॥ ೩೯ ॥

ಬಳಿಕವಪ್ರತ್ಯಾಖ್ಯಾನ ಪ್ರತ್ಯಾಖ್ಯಾನ। ಬಲು ಕಷಾಯವನೆಂಟ ಸುಟ್ಟು ॥
ಘಳಿಲನೆ ಷಂಡಸ್ತ್ರೀಪುಂವೇದವ। ತುಳಿದು ನೂಕಿದನಾ ಮುನಿಯು ॥ ೪೦ ॥

ಪರಿಣಾಮಶುದ್ಧಿಯಿಂ ಶೋಕಹಾಸ್ಯವು ಭಯ। ವರ ಜುಗುಪ್ಸೆ ರತಿಗಳ ॥
ಗುರುಕುಲಾಂಬರವಾಸರಚೂಡಾಮಣಿ। ಭರದಿ ನುಗ್ಗೊತ್ತಿದನವನು ॥ ೪೧ ॥

ಮುನಿ ಮತ್ತೊಮ್ಮೆ ಸಂಜ್ವಲನಾಹಂಕಾರವು। ಮುನಿಸೊಮ್ಮೆ ಧ್ಯಾನಖಡ್ಗದೊಳು ॥
ಘನವಾದ ಮಾಯೆಯ ತಿವಿದು ಕೆಡಹಿ ಮತ್ತೆ। ತನು ಮಾಡಿ ಲೋಭದಿರವನು ॥ ೪೨ ॥

ಕೃಶವಾದ ಲೋಭವ ಧ್ಯಾನಸಾಮರ್ಥ್ಯದಿ। ಹೊಸೆದು ಹಾಕಿದ ಹತ್ತನೆಯ ॥
ಎಸೆವ ಸೂಕ್ಷ್ಮಸಾಂಪರಾಯಕವೆಂದೆಂಬ। ಕುಶಲದ ಸ್ಥಾನವ ಪೊರ್ದಿ ॥ ೪೩ ॥

ಮುನಿರಾಯನುಪಶಾಂತವೆಂಬ ಪನ್ನೊಂದನೆ-। ಯನುಪಮ ಸ್ಥಾನದಿಂದಿರದೆ ॥
ಮಿನುಗುವ ಕ್ಷೀಣಕಷಾಯವೆಂಬೊಂದು। ಮನೆಯೊಳು ನಿಂದು ಮುನಿಪನು ॥ ೪೪ ॥

ಪರಿಣಾಮಶುದ್ಧಿಯಿಂ ಪುಟ್ಟಿಯು ಎರಡನೆ। ಪರಮ ಶುಕ್ಲಧ್ಯಾನದಿಂದ ॥
ಉರುಹಿದ ನಿದ್ರಾಪ್ರಚಲೆಗಳು ಎಂದೆಂ-। ಬೆರಡು ಕರ್ಮಗಳನಾ ಮುನಿಪ ॥ ೪೫ ॥

ಮತಿಶ್ರುತವಧಿಮನಃಪರ್ಯಯ ಮ-। ತ್ತತಿಶಯ ಚರಮ ಜ್ಞಾನವನು ॥
ಸತತ ಮರೆಸಿದ ಜ್ಞಾನಾವರಣಿಗಳೈದ। ಶತಚೂರ್ಣವ ಮಾಡಿದನು ॥ ೪೬ ॥

ಅವಧಿಕೇವಲಲೋಚನ ಆಲೋಚನ। ಇವು ನೋಡೆ ದರುಶನಾವರಣ ॥
ಅವುಕಿಯಾ ನಾಲ್ಕು ಕರ್ಮಂಗಳ ಜ್ಞಾನೇಂದು। ರವಿಯಂತೆ ಕಾಂತಿಯ ಪಡೆದ ॥ ೪೭ ॥

ದಾನಭೋಗೋಪಭೋಗವು ಲಾಭವೀರ್ಯವು। ಪೀನಾಂತರಾಯಗಳೈದು ॥
ಹಾನಿಯಾಗಲು ಘಾತಿ ತೊಲಗಿತು ಮುನಿರಾಯ। ಏನೆಂಬೆ ಜಿನಪತಿಯಾದ ॥ ೪೮ ॥

ರಸರುಧಿರವು ಮಾಂಸಮೇಧೋಸ್ಥಿಮಜ್ಜೆಯು । ಕಿಸುಕುಳ ಶುಕ್ಲವೆಂದೆಂಬ ॥
ಎಸೆವೇಳು ಧಾತುಕರ್ಮವು ಕೂಡೆ ಕೆಟ್ಟವು । ಶಶಿಕಾಂತ ಜಿನರಾಜನಿಗೆ ॥ ೪೯ ॥

ಜನನಮರಣನಿದ್ರೆಭೀತಿಬೆವರುರುಜೆ । ಮುನಿಸುಹಸಿವುತೃಷೆಕಾಮ ॥
ಘನಮುಮತೆಯುಮುಪ್ಪುಭ್ರಾಂತಿವಿಸ್ಮಯಚಿಂತೆ । ಜನಿತಮಾದವು ಶೋಕಕಾಂಕ್ಷೆ ॥ ೫೦ ॥

ದೋಷಗಳಿವು ಪದಿನೆಂಟು ಘಾತಿಗಳನು । ನಾಶಗಳನು ಮಾಡೆ ಕೂಡೆ ॥
ಘಾಸಿಯಾದವು ಪದಿಮೂರು ಸ್ಥಾನವ ಪೊರ್ದೆ । ಈಶ ಸಯೋಗಿ ತಾನಾದ ॥ ೫೧ ॥

ಜ್ಞಾನದರ್ಶನಾವರಣೀಯ ಕ್ಷಯದಿಂದ । ಮಾನಿತಮಪ್ಪಾನಂತ ॥
ಜ್ಞಾನದರ್ಶನಗಳು ಯುಗಪತ್ತುಗಳಾಗಿ । ಭಾನುವಿನಂತೆ ಪೊಳೆದವು ॥ ೫೨ ॥

ಮೋಹನಿಕರ್ಮಗಳಂತರಾಯುಗಳನ್ನು । ತಾ ಹತಿಸಲಾನಂತ ॥
ಸಾಹಸವೀರ್ಯ ಸುಖಂಗಳು ಜಿನಪಗೆ । ಊಹಿಸಿ ತಾವು ಪುಟ್ಟಿದವು ॥ ೫೩ ॥

ಅರುವತ್ತಮೂರು ಕರ್ಮಗಳು ನಾಶಗಳಾಗೆ । ತರಣಿಯಂದದಿ ಧಗಧಗಿಪ ॥
ವರ ಕೇವಲಜ್ಞಾನವು ಜಿನರಾಜಗೆ । ಭರದಿಂದ ಪುಟ್ಟಿತೇನೆಂಬೆ ॥ ೫೪ ॥

ಕೆಸರುಗೂಡಿರ್ದಾಲಾಬು ಸಮುದ್ರದ । ಕುಶದೊಳು ಮುಳುಗಿ ತಾನಿರ್ದು ॥
ಕೆಸರು ಗಲಿಸಲಾ ಲಾಬು ನೀರಿಂ ಮೇಲೆ । ಎಸೆಕದಿಂ ಲಂಘಿಸುವಂತೆ ॥ ೫೫ ॥

ಕೆಸರಂತಿರ್ದ ಕರ್ಮವು ಹಿಂಗೆ ತನುಗೂಡಿ । ವಸುಧೆಯಿಂ ಬಾಂಬಟ್ಟೆಗೈದು ॥
ಇಷುಭುಂಜಿಸಾಸಿರದಂತರದಿಂ ಮೇಲೆ । ಎಸೆದೊಪ್ಪಿದನಾ ಜಿನಪ ॥ ೫೬ ॥

ಜಿನರಾಜಗೆ ಕೇವಲಜ್ಯೋತಿಯುದಿಸಲು । ಘನಶಂಖ ಭವನವಾಸದೊಳು ॥
ತನಗೆ ತಾನೇ ಭೋಂಭೋಂಭೋರೆಂದು । ಸ್ವನದೋರಿತು ಸುಸ್ವರದಿ ॥ ೫೭ ॥

ತಾರಾಲೋಕದೊಳಗೆ ಕಿರು ಜೆಂಝೋಂ- । ದಾರು ನುಡಿಸದೆ ಸುಸ್ವರದಿ ॥
ಭಾರಿಯ ಸಿಂಹನಾದಗಳುಣ್ಮಿದವಲ್ಲಿ । ಮೂರನೆ ಕಲ್ಯಾಣದೊಳು ॥ ೫೮ ॥

ಸುರಲೋಕದೊಳು ಜಯಜಯತು ಜಯಗಳೆಂದು । ಸ್ವರದಿ ಭೋರೆಂದು ಮೊರೆವುತ ॥
ಭರದಿಂದ ಜಯಗಂಟೆ ನಾದಗಳಾದುವು । ವರ ಕೇವಲಜ್ಞಾನದೊಳು ॥ ೫೯ ॥

ಸುರರಾಜನವಧಿಲೋಚನದಿಂದ ತಿಳಿದಾಗ । ಪರಮಜ್ಞಾನೇಂದು ಮುನಿಪಗೆ ॥
ಧರೆಯನೆಲ್ಲವ ಬೆಳಗುವ ಕೇವಲಜ್ಞಾನ । ಸ್ಫುರಿಸಿತು ಎಂದು ತಾ ತಿಳಿದು ॥ ೬೦ ॥

ಕೆನೆವಾಲನು ಕಂಡರಸಂಚೆಯ ಪೊಲು । ವನಜವ ಕಂಡಳಿಯಂತೆ ॥
ಘನಜೀಮೂತರವವ ಕೇಳ್ದ ನವಿಲ್ಗಳು । ನಲಿವಂತೆ ನಿರ್ಜರಪತಿಯು ॥ ೬೧ ॥

ಪರಮಾನಂದದಿ ಮನದೊಳು ಗುಡಿಗಟ್ಟಿ । ಕರವ ಜೋಡಿಸಿ ಶಿರದೊಳಗೆ ॥
ಎರಕದೊಳಗೆಯಿಟ್ಟು ಜ್ಞಾನೇಂದುಜಿನರಾಜ । ವರ ಬಂಧು ಜಯಜಯವೆಂದು ॥ ೬೨ ॥

ಕಡುಭಕ್ತಿಯಿಂ ಕೊಂಡಾಡಲು ತ್ರಿದಶರ । ಪಡೆಯೆಲ್ಲ ಜಯಜಯವೆಂದು ॥
ಮುಡಗಿ ಮುಂಡೆಯೊಳು ಕರಗಳ ಠಾಣೆಯುಗೊಂಡು । ಬಿಡದೆ ಮಸ್ತಕವ ಬಾಗಿದರು ॥

ಕರೆದು ಕುಬೇರನ ಸ್ವರ್ಲೋಕದೊಡೆಯನು । ವರಗುರುಜ್ಞಾನೇಂದು ಜಿನಗೆ ॥
ವಿರಚಿಸು ನವರತ್ನದಿಂ ಗಂಧಕುಟಿಯನೆಂ- । ದೊರೆಯಲು ಧನದ ಬೀಳ್ಕೊಂಡು ॥ ೬೪ ॥

ನಡೆತಂದು ಜಿನರಾಜನ ಮೂಮೆ ಬಲವಂದು । ಪೊಡಮಟ್ಟು ಭಯಭಕ್ತಿಯಿಂದ ॥
ಪೊಡವಿಂದೈದುಸಾಸಿರ ಮಾರುದ್ದವ ಬಿಟ್ಟು । ಉಡುಪಥದೊಳು ಬೆಡಗಿಂದ ॥ ೬೫ ॥

ಹರಿನೀಲರತ್ನದೊಳಗೆ ಒಂದುಯೋಜನ । ತೆರಪಿನೊಳಗೆ ಕುಟ್ಟಿಮದ ॥
ಧರಣಿಮಂಡಲವನು ವಿರಚಿಸಿಯದರೊಳು । ತರಣಿಯ ಕಾಂತಿಯ ಜರೆವ ॥ ೬೬ ॥

ಮಿಸುನಿಯೊಳಗೆ ಕೋಂಟೆಯನು ನಿರ್ಮಿಸಿ ಮತ್ತೆ । ಎಸೆಕದಿ ನಾಲ್ಕುದಿಕ್ಕಿನೊಳು ॥
ಹಸನಾದ ಮುಕ್ತದ್ವಾರವ ವಿರಚಿಸೆ । ಶಶಿಮಂಡಲವನಳ್ಳಿರಿವ ॥ ೬೭ ॥

ಕಾಂಚನಮಯವಾದ ನಾಲ್ಕುಗೋಪುರಗಳ । ತಾಂ ಚದುರಿಂದವೆ ಸಮೆದು ॥
ಮಿಂಚಿನ ಬಳಗವನೊಬ್ಬುಳಿಮಾಳ್ಪಂತೆ । ಪಂಚರತ್ನಗಳಿಂದ ಸಮೆದ ॥ ೬೮ ॥

ಮಾನಸ್ತಂಭದ ಒಳದಿಕ್ಕಿನೊಳು ನಾಲ್ಕು । ಸಾನಂದದಿಂದ ವಿರಚಿಸಿ ॥
ಏನೆಂಬೆಯದರಗ್ರದೊಳು ಕೆಂಡಮಾಣಿಕ್ಯ । ಮಾನಿತದೇವ ಕೂಟವನು ॥ ೬೯ ॥

ವಿರಚಿಸಿಯದರೊಳು ಸ್ವರ್ಣದ ಚತುರ್ಮುಖ । ವರ ಜಿನಬಿಂಬವ ನಿಲಿಸಿ ॥
ಮಿರುಗುವ ಕನಕದ ಕಿರುಗಂಟೆ ಮಣಿಗಂಟೆ । ಸರಗಳನು ಕಟ್ಟಿಸುತ್ತ ॥ ೭೦ ॥

ಅದರುಪರಿಮದೊಳು ಮಾಣಿಕ್ಯಗಳ ನವ । ಚದುರಿಂದೈದೈದುಗಳ ॥
ತ್ರಿದಶನು ನಾಲಕ್ಕು ಮಾನಸ್ತಂಭಗಳೊಳು । ಹದಗೊಳಿಸಿದನು ಬೇಗದೊಳು ॥ ೭೧ ॥

ಕರಡಿಗೆಯಂದದ ಹೊಕ್ಕರಣೆಗಳನು । ಭರದಿ ಮಾನಸ್ತಂಭಗಳ ॥
ಎರಡು ದಿಕ್ಕಿನೊಳು ತಂಪಿನ ಜಲಗಳ ತುಂಬಿ । ಪರಿದು ಪೋಪಂತೆ ವಿರಚಿಸಿ ॥ ೭೨ ॥

ಬಾಗಿಲ ಹೊರದೆಸೆಯೊಳು ನಾಲ್ಕುದಿಕ್ಕಿಲಿ । ಬೇಗದಿ ನವರತ್ನಗಳ ॥
ರಾಗದಿಂ ಬೆಳಗುವ ಇಪ್ಪತ್ತುಸಾಸಿರ- । ವಾಗ ಸೋಪಾನವ ರಚಿಸಿ ॥ ೭೩ ॥

ಕೆಳಗಣ ಸೋಪಾನವ ಜನಮೆಟ್ಟಲು । ಪೊಳೆವ ಮೇಗಣ ಸೋಪಾನಗಳ ॥
ಸಲೆಯೆತ್ತಿ ನಿಲ್ವಂತೆ ಚರಣಲೇಪನವೊಂದು । ವಿಲಸಿತೌಷಧವನು ತೊಡೆದು ॥ ೭೪ ॥

ಒಳವಾರದೊಳು ಚಂದ್ರನ ಕಾಂತಿಯ ತಾನು । ಹಳಿದು ರಾರಾಜಿಸುತಿರ್ದ ॥
ಪಳುಕಿನ ಎರಡನೆ ಭಿತ್ತಿಯನಾ ದೇವ । ಒಲವಿಂದ ರಚಿಸಿ ತಾ ಮತ್ತೆ ॥ ೭೫ ॥

ಪಳುಕಿನ ಕೋಟೆಯ ಒಳದಿಕ್ಕುಗಳೊಳು । ಪೊಳೆವ ಪೂರ್ವದ್ವಾರಾದಿ ॥
ಕಳಧೌತ ಚತುರ್ದ್ವಾರಗಳೆಡಬಲದೊಳು । ವಿಲಸಿತ ದ್ವಾದಶವಿಧದ ॥ ೭೬ ॥

ಮುನಿಮುಖ್ಯರಾದಿಗಣಗಳು ಕುಳಿತುಕೊಂಬ । ಅನುಪಮ ಕೋಷ್ಠಂಗಳನು ॥
ಅನುಕ್ರಮದಿಂದ ರಚಿಸಿದನದೆಂತೆನೆ । ಇನಿಸುಳಿಯದೆ ನಾ ಪೇಳ್ವೆ ॥ ೭೭ ॥

ಸುರಪದಿಕ್ಕಿನೊಳೊಂದಗ್ನಿದೆಸೆಯೊಳೊಂದು । ಮೆರೆವ ಯಮನ ದಿಕ್ಕಿಲೊಂದು ॥
ಬೆರಕೆವರಲ ಕೋಷ್ಠಂಗಳ ಮೂರನು । ವಿರಚಿಸಿದನು ಬಿನ್ನಾಣದೊಳು ॥ ೭೮ ॥

ವಿಲಸಿತ ದಕ್ಷಿಣಬಾಗಿಲ ಬಲದೊಳು । ನಲವಿಂದೊಂದು ನೈರುತ್ಯ ॥
ನೆಲೆಯೊಳಗೊಂದು ಪಶ್ಚಿಮದಿಕ್ಕಿನೊಳೊಂದು । ಚೆಲುವ ಕೋಷ್ಠಗಳ ಮಾಡಿದನು ॥ ೭೯ ॥

ವರಣದಿಕ್ಕಿನ ಬಾಗಿಲ ಬಲಗಡೆಯೊಂದು । ಮರುತ ಬಡಗದೊಳೊಂದೊಂದು ॥
ಎರಕದಿಂ ಮೂರುಕೋಷ್ಠಂಗಳ ಧನದನು । ವಿರಚಿಸಿದನು ವಿಲಾಸದೊಳು ॥ ೮೦ ॥

ಉತ್ತರದ್ವಾರದ ಬಲಗಡೆಯೊಳಗೊಂದು । ವಿತ್ತೇಶಸಖನಲ್ಲಿ ಒಂದು ॥
ಮತ್ತೆ ಸುರೇಂದ್ರನ ದಿಕ್ಕಿನೊಳಗೆ ಒಂದು । ಅಿತ್ತಿಯಿಂ ಕೋಷ್ಠಗಳೆಸಗಿ ॥ ೮೧ ॥

ವರ ನೀಲಕಂಠನ ಕಂಠದ ಕಾಂತಿಯು । ಜರಿವ ವೈಡೂರ್ಯ ರತ್ನದೊಳು ॥
ಹರಿಪೀಠವ ಮಧ್ಯ ಮಂಟಪದೊಳು ಮಾಡಿ । ತರಣಿಕಿರಣವನು ಹಳಿದು ॥ ೮೨ ॥

ಥಳಥಳಿಸುವ ಕಾಂಚನದೊಳು ಹಸಗೈದ । ಲಲಿತಪೀಠವನನುಗೈದು ॥
ಪಲವು ರತ್ನಾಂಕಿತ ಸಿಂಹವಿಷ್ಟರವನು । ಚೆಲುವಿಂದದರ ಮೇಲೆ ರಚಿಸಿ ॥ ೮೩ ॥

ಮಿಸುನಿವಣ್ಣದ ಸಾಸಿರೆಸಳುಗಳೊಪ್ಪುವ । ಪೊಸದಾವರೆಗಂಧವನು ॥
ದೆಸೆದೆಸೆಗಳೊಳು ಬೀರುತಲೊಪ್ಪುತಿರಲದ । ನಸು ನಾಲ್ವೆರಳಷ್ಟು ಬಿಟ್ಟು ॥ ೮೪ ॥

ದುರಿತತಿಮಿರಭಾನು ಸ್ಮರಗರ್ವಮರ್ದನ । ಗುರು ಜ್ಞಾನಚಂದ್ರಜಿನೇಂದ್ರ ॥
ಪರಿಕಿಪರಿಗೆ ನಾಲ್ಮೊಗನಾಗಂಬರದೊಳು । ಪರಮಾತ್ಮನೋಲಗಗೊಟ್ಟು ॥ ೮೫ ॥

ಇರುತಿರೆ ಜ್ಞಾನಚಂದ್ರಮ ಶ್ರೀಜಿನಪತಿ । ವರ ದಿವ್ಯದೇಹದ ಗಂಧ ॥
ಸರಸೀರುಹದ ಸುರಭಿಯು ತುಂಬಿರಲದ । ವರ ಗಂಧಕುಟಿಯೆಂಬರ್ಬುಧರು ॥ ೮೬ ॥

ವರ ಸ್ವಾಮಿ ಕೇವಲಪೂಜೆಗೆಯಸುರರು । ಉರಗಸುಪರ್ಣವಿದ್ಯುತ್ತು ॥
ಮರುತಾಗ್ನಿಸ್ತನಿತೋದಧಿದಿಕ್ಕುದ್ವೀಪವೆಂ- । ಬುರುತರ ದಶವಿಧಮಪ್ಪ ॥ ೮೭ ॥

ಭವನವಾಸಿಗರಾಗ ಕರಿತುರಂಗಮನಾಗ । ನವಿಲು ಗರುಡ ಮುಂತಾದ ॥
ವಿವಿಧ ವಾಹನಗಳನೇರಿ ಬಾಂಬಟ್ಟೆಗೆ । ಭುವಿಯಿಂದ ಪೊರಟೇರಿದರು ॥ ೮೮ ॥

ಕಿನ್ನರಕಿಂಪುರುಷಮಹೋರಗ । ಸನ್ನುತ ಗಂಧರ್ವಯಕ್ಷ ॥
ಉನ್ನತ ರಾಕ್ಷಸಭೂತಪಿಶಾಚರು । ಕನ್ನೆಯರನು ಕೂಡಿಕೊಂಡು ॥ ೮೯ ॥

ಹರಿಹುಲ್ಲೆ ಮಕರವರಾಹಟಗರುಕೋಣ । ಸಲೆ ಕುಕ್ಕುಟ ಮೊದಲಾದ ॥
ಪಲವು ವಾಹನವೇರಿಕೊಂಡು ವ್ಯಂತರಿಗರು । ತರಣಿಪಥಕೆಯಡರಿದರು ॥ ೯೦ ॥

ರವಿಚಂದ್ರಗ್ರಹನಕ್ಷತ್ರತಾರಕ- । ಯ್ರುವತಿಯರೊಡಗೂಡಿ ಪಂಚ ॥
ಸುವಿಧ ಜ್ಯೋತಿಷ್ಕರು ಗರುಡಶರಭಸಿಂಹ । ನವಪದ್ಮಹರಿ ಮುಂತಾದವನು ॥ ೯೧ ॥

ಭರದೇರಿ ಬಹುವಿಧ ಧ್ವಜಪತಾಕೆಗಳನಾಂತು । ಪರಮನ ಕಲ್ಯಾಣೋತ್ಸಹಕೆ ॥
ನೆರೆದೆಲ್ಲ ಬಂದಾಕಾಶಮಂಡಲದೊಳು । ತರತರ ಸಾಲು ನಿಂದಿರಲು ॥ ೯೨ ॥

ಮೆರೆವ ಸೌಧರ್ಮಈಶಾನಕಲ್ಪ ಮ- । ತ್ತೆರಡನೆ ಸಾನತ್ಕುಮಾರ ॥
ವರ ಮಾಹೇಂದ್ರವು ಬ್ರಹ್ಮಬ್ರಹ್ಮೋತ್ತರ । ಪರಮ ಲಾಂತವ ಕಾಪಿಷ್ಠ ॥ ೯೩ ॥

ಪರಿಕಿಸೆ ಶುಕ್ರಮಹಾಶುಕ್ರಕಲ್ಪವು । ವರ ಸತಾರ ಸಹಸ್ರಾರ ॥
ಸಿರಿವೆತ್ತಾನತಪ್ರಾಣತ ಆರಣ । ಸುರುಚಿರಾಚ್ಯುತವೆಂಬೀರೆಂಟು ॥ ೯೪ ॥

ಸಗ್ಗದ ದೇವತೆಗಳು ತಂತಮ್ಮಯ । ಮೊಗ್ಗೆವೊಲೆಯ ದೇವಿಯರ ॥
ಒಗ್ಗಿಲಿ ಹರಿಹಂಸೆ ಚಕ್ರವಾಕವು ಗಿಳಿ । ಖಡ್ಗಿ ಶರಭ ಭೇರುಂಡ ॥ ೯೫ ॥

ಇವು ಮೊದಲಾದ ತಂತಮ್ಮ ವಾಹನಗಳ । ಸವಿನಯದಿಂದೇರಿಕೊಂಡು ॥
ತವತವಗೆಲ್ಲರು ತವಕದಿಂದೈತರೆ । ದಿವಿರಾಯನಾಗ ಲೀಲೆಯೊಳು ॥ ೯೬ ॥

ಇಂದ್ರಾಣಿ ಸಹವಾಗಿ ದಿವ್ಯಪುಷ್ಪಕವ ಜಿ- । ನೇಂದ್ರನೆ ಶರಣೆಂದೇರಿ ॥
ಮಂದ್ರ ದುಂದುಭಿಗಳ ರವದಿ ನಾಲ್ದೆರದ ಸು- । ರೇಂದ್ರರುಗಳ ಕೂಡಿಕೊಂಡು ॥ ೯೭ ॥

ಕಡುಭಕ್ತಿಯಿಂ ಬಂದು ಜ್ಞಾನೇಂದು ಜಿನಪತಿ । ಕಡೆಯಾಣಿ ಗಂಧಕುಟಿಯನು ॥
ಬಿಡುಗಣ್ಣ ನಾಡರಾಯನು ಮೂಮೆ ಬಲವಂದು । ಬೆಡಗಿಂದ ಸಾಷ್ಟಾಂಗವೆರಗಿ ॥ ೯೮ ॥

ಜಲವಾದಿ ಫಲವಾಂತವಾದ ಪೂಜೆಯನತಿ । ನಲವಿಂದ ಮಾಡಿ ಕೈಮುಗಿದು ॥
ಕಲಿಲವಿಜಯನ ನಾಮೋಚ್ಚಾರಣೆಯನು । ನಲಿದು ನಲಿದನಿಂತೆಂದು ॥ ೯೯ ॥

ಪರಮೇಷ್ಠಿ ಜಿಷ್ಣುಸ್ವಯಂಬುದ್ಧ ವಿಶ್ವೇಶ । ಪುರುಷೋತ್ತಮ ವಿಶ್ವಚಕ್ಷು ॥
ಪರಮಾತ್ಮ ಚತುರ್ಮುಖ ಪರಮೇಶ ತತ್ತ್ವಜ್ಞ । ಗುರುಹಂಸನಾಥ ಸ್ವಯಂಭೂ ॥

ಪರಶಿವ ವಿಶ್ವಾತ್ಮ ಪರಬೊಮ್ಮ ಶ್ರೀಜಿನ । ದುರಿತಾಂತ ವಿಶ್ವಲೋಕೇಶ ॥
ನಿರಘ ನಿರ್ಮಲ ನಿಶ್ಶಂಕ ನಿರಾಪೇಕ್ಷ । ನಿರುಪದ್ರವ ನಿಶ್ಶಲ್ಯ ॥ ೧೦೧ ॥

ನಿಗಮಗೋಚರ ನಿತ್ಯಾನಂದ ಶಂಕರ । ಸುಗತಿ ಸರ್ವಜ್ಞ ಸುವೀರ ॥
ಸುಗತ ಶುದ್ಧಾತ್ಮ ಸುಶ್ರುತ ಸರ್ವದರ್ಶನ । ಭಗವನ್ ಭ್ರೂಷ್ಣು ವಿಭುಷ್ಣು ॥ ೧೦೨ ॥

ಪರಮಕೇವಲಿ ಪರಮಾತ್ಮ ನಿರಂಜನ । ನಿರುಪಪ್ಲವ ನಿಷ್ಕಲಂಕ ॥
ಪರಮಪರಂಜ್ಯೋತಿ ಪರಗುರು ಪರವಿಷ್ಣು । ಪರಮನಿರ್ಗ್ರಂಥ ಸುಶಾಂತ ॥ ೧೦೩ ॥

ಸ್ಮರಗರ್ವಹರ ನಿರಾಹಾರ ನಿರ್ಮಾಯ । ಅರುಹ ಸದಾಶಿವ ಶಂಭು ॥
ದುರಿತಘ್ನ ಕಲ್ಯಾಣ ಕಮಲಾಸನಪೂಜ್ಯ । ಸುರವಂದ್ಯ ಗುಣಧರ ವರದ ॥ ೧೦೪ ॥

ಭವತಾರಕ ಯೋಗೀಶ್ವರ ಸರ್ವಜ್ಞ । ಧವಲಾತ್ಮ ಪುಂಡರೀಕಾಕ್ಷ ॥
ಕವಿಸುಪ್ರಸಿದ್ಧ ಮೃತ್ಯುಂಜಯ ಗುಣಧಾರಿ । ಭವದೂರ ಪುಣ್ಯವರೇಣ್ಯ ॥ ೧೦೫ ॥

ಕನಕಪ್ರಭ ಶಾತಕುಂಭ ಜಗದ್ಗರ್ಭ । ವನರುಹಾಸನ ಮಹಾಪ್ರಾಜ್ಞ ॥
ಮುನಿಮುಖ್ಯ ಶುಭಲಕ್ಷಣ ಮುಕ್ತನೆಂದಾಗ । ಅನುಮಿಷೇಶನು ಇತ್ಯಾದಿ ॥ ೧೦೬ ॥

ನೂರೆಂಟು ನಿರ್ಮಲಗುಣನಾಮಗಳಿಂದ । ಮಾರಾಂತ ಜಿನಪನ ನುತಿಸಿ ॥
ಚಾರುಹಸ್ತವ ನೊಸಲಿಗೆ ತಂದು ಬೆಡಗಿಂದ । ಸಾರಿದ ದೇವಕೋಷ್ಠಕ್ಕೆ ॥ ೧೦೭ ॥

ಕರಿಚರದೇವ ಸಿಂಹಧ್ವಜ ಮೊದಲಾದ । ಸುರರೆಲ್ಲರು ಪೂಜೆ ಮಾಡಿ ॥
ಎರಕದಿ ತಂತಮ್ಮ ಕೋಷ್ಠದೊಳಗೆ ಬಂದು । ಪರಮ ಸಂತಸದಿ ಕುಳಿತರು ॥ ೧೦೮ ॥

ಮುನಿಸಮುದಾಯವು ದೇಶದೇಶಗಳಿಂದ । ಘನಭಕ್ತಿಯಿಂದಲಿ ಬಂದು ॥
ಜಿನರಾಜನನಂತಗುಣಾಳಿಯ ಕೊಂಡಾಡಿ- । ಯನುಪಮತಳದೊಳು ಕುಳಿರೆ ॥ ೧೦೯ ॥

ಸುರದುಂದುಭಿಗಳು ಧಿಂಧಿಮಿಧಿಮಿರೆಂದು । ಮೊರೆದವು ಕೋಟಾಕೋಟಿ ॥
ಸುರರು ನಿಂದಾಕಾಶದೊಳು ಪುಷ್ಪವೃಷ್ಟಿಯ । ಕರೆದರು ಕಡುಪ್ರಿಯದಿಂದ ॥ ೧೧೦ ॥

ಎರಡು ತೆರದ ಪರಿಗ್ರಹಂಗಳನೀತ- । ನುರುಹಿದನೆಂದು ಮೌಕ್ತಿಕದ ॥
ಎರಡು ಸತ್ತಿಗೆಯೆತ್ತಿ ಜಿನರಾಜನ ಮುಂದೆ । ಸುರರು ಪಿಡಿದರು ಲೀಲೆಯೊಳು ॥ ೧೧೧ ॥

ಸುರರೆಡಬಲದೊಳು ಮೂವತ್ತೆರಡು । ವರ ಚಮರವ ಬೀಸಲಿಹನು ॥
ಶರದಭ್ರದ ನಟ್ಟನಡುವಿದ್ದ ಚಂದ್ರನ । ಜರೆವುತಲಿಹ ಜಿನರಾಜ ॥ ೧೧೨ ॥

ಈ ಕಲಿಲಾರಿಯ ಮತದೊಳು ನಡೆದರ್ಗೆ । ಶೋಕಕಾಕಾಗಿ ಮುಕ್ತಿಯನು ॥
ಜೋಕೆಯಿಂ ಸಾರುವರೆಂದು ಸೂಚಿಸುವಂತ- । ಶೋಕೆಯ ತರುವೊಪ್ಪಿದುದು ॥ ೧೧೩ ॥

ಕೊಂಡಾಡಿ ಜಿನನಿಗೆ ವಂದಿಸಿದವರಿಗೆ । ಚಂಡರೋಚಿಯಂತೆ ಜ್ಞಾನ ॥
ಮಂಡಿಸುವುದು ಎಂದು ಸೂಚಿಸುವಂತೆ ಭಾ- । ಮಂಡಲವೊಪ್ಪಿತು ಜಿನಗೆ ॥ ೧೧೪ ॥

ಕುರುಡರು ಕುಂಟರು ಹೆಳವರು ಷಂಡರು । ಬರಡು ಜನರು ರೋಗಿಗಳು ॥
ತಿರುಕರು ತೊನ್ನರು ಮೋಂಟರು ಚೊಟ್ಟರು । ಕರಿಕಾಂಗರು ದುರ್ಗಂಧಿಗಳು ॥ ೧೧೫ ॥

ಪರಮನ ಗಂಧಕುಟಿಗೆ ಬರೆಯುವರವ- । ರುರು ದೋಷಗಳೆಲ್ಲ ಕೆಟ್ಟು ॥
ಪರಿಪೂರ್ಣಾಂಗರಂಗಜಸಮ ಚೆಲುವರು । ವರ ಪುತ್ರಯುತರು ಮೋಹಿಗಳು ॥ ೧೧೬ ॥

ಧನಕನಕಾದಿ ವಸ್ತುಗಳುಳ್ಳವರಾಗಿ- । ಯನಘರಾಗುವರೆಲ್ಲರೆನಲು ॥
ಜಿನರಾಜನ ಗಂಧಕುಟಿಯ ಮಹಿಮೆಯನು । ಇನಿತೆಂದು ಪೊಗಳಲೆನ್ನರಿದು ॥ ೧೧೭ ॥

ಜಿನಪತಿ ಗಂಧಕುಟಿಯೊಳಿರ್ದವರಿಗೆ । ಇನಿತು ಕಾಲವು ಕ್ಷುಧೆ ತೃಷೆಯು ॥
ಜನಿಸದೆಂದೆನೆ ಜಿನರಾಜನಾ ನಗರದ । ಘನಮಹಿಮೆಯನೇನೆಂಬೆ ॥ ೧೧೮

ಅರುಹನ ಸುತ್ತಲು ಬಳಸಿಕೊಂಡಿರುತಿರ್ದ । ಸುರುಚಿರ ದ್ವಾದಶಗಣವು ॥
ಪರಿಕಿಸಲಾವಾವವೆಂದೊಡೆ ನಾನವ- । ನೊರೆವೆನು ಬಲ್ಲರು ಕೇಳಿ ॥ ೧೧೯ ॥

ಜಿನಪನ ಬಲಭಾಗದೊಳಿರ್ದ ಮೊದಲೊಂದು । ಅನುಪಮ ಕೋಷ್ಠಮಧ್ಯದೊಳು ॥
ಮನದೊಳು ಮತಿಶ್ರುತಾವಧಿಬೋಧವನುಳ್ಳ । ಮುನಿಗಳೋಲಗಗೊಟ್ಟಿರಲು ॥ ೧೨೦ ॥

ವರ ಶಚಿ ಮೊದಲಾದ ಪದಿನಾರು ಸಗ್ಗದ । ಸುರತರುಣಿಯರುಗಳೆಲ್ಲ ॥
ಕರಗಳ ಮುಗಿದು ಜಿನನಿಗೆ ಸಮ್ಮುಖವಾಗಿ । ಎರಡನೆ ಕೋಷ್ಠದೊಳಿರಲು ॥ ೧೨೧ ॥

ದೊರೆದೊರೆಗಳ ಮಂಡಳಿಕರ ವಾಣಿಜ್ಯರ । ತರುಣಿಯರುಗಳಜ್ಜಿಯರು ॥
ಪರಮಭಕ್ತಿಯೊಳು ಕೈಮುಗಿದು ಮೂರನೆಯ ಸು- । ವರ ಕೋಷ್ಠದೊಳು ಕುಳಿತಿಹರು ॥

ಕುಡಿಮಿಂಚಿನಂತೆ ಪೊಳೆವ ಜ್ಯೋತಿಷ್ಕರ । ಮಡದಿಯರುಗಳು ಕೈಮುಗಿದು ॥
ಕಡುಭಕ್ತಿಯಿಂದ ನಾಲ್ಕನೆಯ ಕೋಷ್ಠಗಳೊಳು । ಬೆಡಗಿಂದ ಕುಳಿತುಕೊಂಡಿಹರು ॥

ಸುರಚಾಪ ಪಲವು ರೂಪಾದಂತೆ ವ್ಯಂತರ । ತರುಣಿಯರುಗಳು ಭಕ್ತಿಯೊಳು ॥
ಕರವ ಮುಗಿದು ಜಿನರಂಗವ ನೋಡುತ- । ಲಿರುವರೈದನೆಯ ಕೋಷ್ಠದೊಳು ॥ ೧೨೪ ॥

ಉರಗರಾಜನ ಸತಿ ಪದ್ಮಿನಿದೇವಿಯು । ಉರಗಿಣಿಯರವೊಗ್ಗಿನೊಳು ॥
ಪರಮನ ದಿವ್ಯ ಗಾತ್ರವ ತಾವು ನೋಡುತ- । ಲಾರನೆ ಕೋಷ್ಠದೊಳಿಹರು ॥ ೧೨೫ ॥

ಚಮರವೈರೋಚನ ಮೊದಲಾದಿಂದ್ರರು । ಅಮರರೆಲ್ಲರ ಕೂಡಿಕೊಂಡು ॥
ಮಮತೆಯಿಂ ಕೈಗಳ ಮುಗಿದುಕೊಂಡೇಳನೆ । ರಮಣೀಯ ಕೋಷ್ಠದೊಳಿಹರು ॥ ೧೨೬ ॥

ಸೇರಿದ ದ್ವಾತ್ರಿಂಶದಿಂದ್ರರು ಭೌಮರು । ಚಾರು ಸಮೂಹವ ಕೂಡಿ ॥
ಮಾರಾರಿ ಜಿನಗೆ ಕೈಗಳ ಮುಗಿದೆಂಟನೆ । ಸಾರಕೋಷ್ಠದೊಳಿರುತಿಹರು ॥ ೧೨೭ ॥

ರವಿಶಶಿಗಳು ಮೊದೆರದ ಜ್ಯೋತಿಷ್ಕರು । ನಿವಹವನೊಡಗೂಡಿಕೊಂಡು ॥
ಸವಿನಯದಿಂದೊಂಬತ್ತನೆಯ ಕೋಷ್ಠದೊಳಗೆ । ದಿವಿಜರು ನೋಡುತಲಿಹರು ॥ ೧೨೮ ॥

ಹರಿಯು ಇಪ್ಪತ್ತ ಮೂವರುಯಿಂದ್ರರೊಡಗೂಡಿ । ಸುರರು ಬಳಸಿಕೊಂಡಿಹರು ॥
ಕರಗಳ ಮುಗಿದು ಹತ್ತನೆಯ ಕೋಷ್ಠದೊಳಗೆ । ಪರಿತೋಷದಿಂ ಕುಳಿತಿಹರು ॥ ೧೨೯ ॥

ದೊರೆದೊರೆಗಳು ಮಂಡಳಿಕರು ಸಾಮಂತರು । ಹರದಜರು ಬುಧರು ಮುಂತಾದ ॥
ಪರಮ ಶ್ರಾವಕರು ಕೈಮುಗಿದು ಪನ್ನೊಂದನೆ । ವರ ಕೋಷ್ಠದೊಳು ಕುಳಿತಿಹರು ॥ ೧೩೦ ॥

ಹರಿಕರಿಹುಲಿಹುಲ್ಲೆ ಮೊದಲಾದ ಮೃಗ ತಮ್ಮ । ವೈರಭಾವಗಳನು ತೊರೆದು ॥
ಪರಿತೋಷದಿ ಪನ್ನೆರಡನೆಯ ಕೋಷ್ಠದೊ- । ಳಿರುವವು ಜಿನರ ನೋಡುತ್ತ ॥ ೧೩೧ ॥

ಈ ರೀತಿಯೊಳು ದ್ವಾದಶಗಣ ಬಳಸಿರೆ । ಮೂರು ಲೋಕದೊಳು ತುಂಬಿರ್ದ ॥
ಭೂರಿವಸ್ತುವ ಕ್ರಮಕರಣವ್ಯವಧಾನ । ಸಾರದೆ ಯುಗಪತ್ತಾಗಿ ॥ ೧೩೨ ॥

ತಿಳಿಯಲಾ ಜಿನರಾಜ ಕೇವಲಜ್ಞಾನದಿ। ಜಲಧಿಯಂದದ ಗಂಭೀರದೊಳು ॥
ವಿಲಸಿತ ಮೃದುಮಧುರಗಂಭೀರದಿ। ಪಲವು ದೋಷೋಜ್ಝಿತವಾದ ॥ ೧೩೩ ॥

ಕೊರಳು ಮುಂತಾದೆಂಟು ಸ್ಥಾನಗಳನು ಪೊರ್ದಿ। ಸ್ವರವುಣ್ಮದೆ ಹಿತವಾದ ॥
ಮರುತರೋಧೋದ್ಗತವಲ್ಲದವ್ಯಕ್ತದ। ಪರಿಕಿಸಲವರವರುಗಳ ॥ ೧೩೪ ॥

ನಿರುತದಿಂ ವಾಂಛಿತ ವಸ್ತುಗಳೆಲ್ಲವ। ತೆರದರುಶನವನು ಮಾಳ್ಪ ॥
ನಿರುಪಮವಾದ ದೂರದೊಳಿರ್ದರಿಗು ತಾ। ಕಿರಿದು ದೂರದೊಳಿರ್ದರಿಗು ॥ ೧೩೫ ॥

ಸರಿಯಾಗಿ ಕೇಳಿಸುತಿರ್ಪ ದಿವ್ಯ ಶ್ರೀ-। ವರ ನಿನಾದವು ಜಿನಾಸ್ಯದೊಳು ॥
ಉರುಶಂಖದ ರವದಂತೆ ಗುಂಗುಂಮ್ಮೆಂದು। ಪೊರಪೊಣ್ಮಿತು ದಿವ್ಯ ನಾದ ॥ ೧೩೬ ॥

ಪದಿನೆಂಟು ಮಹಾಭಾಷೆಯೇಳ್ನೂರು ಕ್ಷುಲ್ಲಕ। ಮೃದುವಾದ ಭಾಷೆಗಳಿಂದ ॥
ಸದಮಲ ಷಡ್ದ್ರವ್ಯ ಸಪ್ತತತ್ತ್ವಂಗಳ। ಒದವಿದ ನವಪದಾರ್ಥಗಳ ॥ ೧೩೭ ॥

ಪರಮಾತ್ಮ ಕಲೆಗಳ ಪಂಚಾಸ್ತಿಕಾಯವ। ವರನಯ ಮುಂತಾದವನು ॥
ಪರಮತತ್ತ್ವಂಗಳ ದಿವ್ಯಧ್ವನಿಯಿಂದ-। ಲರುಹ ತ್ರಿಜಗಕೆ ಪೇಳುತಲಿ ॥ ೧೩೮ ॥

ಗುರುಕುಲಾಂಬರಜ್ಯೋತಿ ಪರಮತಗಜಹರಿ। ಧರೆಯ ಸುಜನ ಭವ್ಯಬಂಧು ॥
ಸುರನರೋರಗಪೂಜಿತಪದಜ್ಞಾನೇಂದು। ಪರಮ ಜಿನೇಂದ್ರನೊಪ್ಪಿದನು ॥ ೧೩೯ ॥

**॥ ಅಂತು ಸಂಧಿ ೪೪ಕ್ಕಂ ಪದ ೬೧೭೧ಕ್ಕಂ ಮಂಗಲಂ ॥**

## ನಿರ್ವಾಣಕಲ್ಯಾಣ.

ಸುಟ್ಟ ಘಾತಿಯನು ಜ್ಞಾನೇಂದು ಜಿನನು ಮೋಕ್ಷ-। ಪಟ್ಟವಾಳಿದುದ ಸೊಲ್ಲಿಪೆನು ॥

ಜಗವ ತುಂಬಿರ್ದಂಧಕಾರವ ತೆಗೆಸುತ। ಪಗಲೊಡೆಯನು ತೋರುವಂತೆ ॥
ಬಗೆಯೊಳಿರ್ದಘವ ತುಳುಕುತಾತ್ಮಜ್ಯೋತಿಯ। ನೆಗೆವೆಲೆ **ಶಾಂತೀಶ** ಸೂರ್ಯ ॥ ೧ ॥

ಸುರನರನಾಗಜ್ಯೋತಿಷ್ಕವ್ಯಂತರಿಗರ। ನೆರವಿ ಬಳಸಿಕೊಂಡು ಜಿನನ ॥
ಪರಮಭಕ್ತಿಯೊಳೋಲೈಸುತ ದೇಹವ। ಹರುಷದಿ ನೋಡುತಲಿರಲು ॥ ೨ ॥

ಬೆಳಗಿಗೆ ಮೂರುಗಳಿಗೆಯುಂಟು ಎಂಬಾಗ। ಬೆಳಗಾದ ತ್ರಿಘಟಿಕೆ ತನಕ ॥
ಗಳಿಗೆ ಮೂರುಂಟು ಮಧ್ಯಾಹ್ನಕ್ಕೆ ಎಂಬಾಗ। ಕಳೆಯೆ ಮಧ್ಯಾಹ್ನ ಮೂಗಳಿಗೆ ॥ ೩ ॥

ತರಣಿ ಪಡುವುದಕೆ ಮೂಗಳಿಗುಂಟೆನೆ। ತರಣಿ ಮುಳುಗಿದ ಮೂಗಳಿಗೆ ॥
ವರಮಧ್ಯಮರಾತ್ರೆ ಮೂಗಳಿಗುಂಟೆನೆ। ನೆರೆ ನಡುವಿರುಳಿಂ ಮೇಲೆ ॥ ೪ ॥

ಬೆರೆದು ಮೂಗಳಿಗೆಯುಂಟೆನೆ ದಿವ್ಯಧ್ವನಿ । ಪರಮನಾಸ್ಯದೊಳು ಪೊಣ್ಮುವುದು ॥
ನೆರೆದಿರ್ದ ಭವ್ಯರು ಇಷ್ಟಾರ್ಥವ ಕೇಳಿ । ಪರಮಾನಂದವೈದುವರು ॥ ೫ ॥

ಕುಲಿಶಾದಿಗಲಚರ ರಾಕ್ಷಸರಾಜನು । ಕಲಿಲಾರಿಮಹಿಮೆಯ ಕಂಡು ॥
ಉಳಿದ ತನ್ನಯ ಭವಬದ್ಧವೈರವನವ- । ನಲರ್ವಿಲ್ಲವೈರಿಯ ಪದಕೆ ॥ ೬ ॥

ಎರಗಿ ಸಮ್ಯಕ್ತ್ವಾದಿ ವ್ರತಗಳ ಕೈಕೊಂಡು । ತೆರಳಲು ತನ್ನಯ ಗೃಹಕೆ ॥
ಸುರಗಣ ಸಹವಾಗಿ ಮಹದೈವತ್ತಾರು । ವರ ದೇಶದ ಭವ್ಯತತಿಗೆ ॥ ೭ ॥

ಪರಮ ಧರ್ಮಾಮೃತವನು ತಾನು ಕರೆವುತ । ಮೆರೆವ ಪಲ್ಲವದೇಶವೊಕ್ಕು ॥
ವರ ಗಂಧಕುಟಿ ನೆಲಸಿರಲದ ಕೇಳುತ । ಹರಿಚಂದ್ರಸೂನು ಸುಭಾನು ॥ ೮ ॥

ಕಡುಬೇಗದಿಂ ಬಂದು ಗಂಧಕುಟಿಯ ಮೂಮೆ । ಪೊಡವಿಯಾಣ್ಮನು ಬಲಬಂದು ॥
ಒಡನೆ ಸಾಷ್ಟಾಂಗವೆರಗಿ ಜಿನರಾಜ- । ನಡಿದಳಿರಿಗೆ ಪೂಜೆ ಮಾಡಿ ॥ ೯ ॥

ಹರಿಚಂದ್ರ ಮೊದಲಾದ ಮುನಿ ಸಮುದಾಯಕೆ । ಪರಮಭಕ್ತಿಯಿಂದಲೆರಗಿ ॥
ತೆರದರುಶನವಾಗಿ ವೃಷದಂದವ ಕೇಳಿ । ಕರಗಳ ಮುಗಿದು ಮತ್ತೊಮ್ಮೆ ॥ ೧೦ ॥

ಸುರರ ಮಕುಟತಾಟಿತದಿವ್ಯ ಚರಣನೆ । ಹರಿಚಂದ್ರಪಿತ ನನ್ನಜ್ಜ ॥
ಅರುಹನೆ ನನ್ನಯ ಹಿಂದಣಭವಗಳ । ನಿರವಿಸೆಂದೆನುತ ಬಿನ್ನವಿಸೆ ॥ ೧೧ ॥

ಜಲಧಿಯಂದದ ಗಂಭೀರ ನಿನಾದವು । ಕಲಿಲಾರಿ ಮುಖಕಮಲದೊಳು ॥
ಘಳಿಲನೆ ಪೊಣ್ಮಲು ಮೃದುಮಧುರಗಳಿಂದ । ಫಲದಾಯಕನಿಂತು ನುಡಿದ ॥ ೧೨ ॥

ದೊರೆ ! ಕೇಳೀ ಭರತಾರ್ಯಖಂಡದೊಳಗೆ ಒಂದು । ಮೆರೆವುದು ವಿಂಧ್ಯಾಚಲವು ॥
ನೆರೆ ವಿಂಧ್ಯಾಚಲಗುಹೆಯೊಳಗೋರ್ವನು । ಇರುತಿರೆ ಶ್ರೀದತ್ತ ಮುನಿಯು ॥ ೧೩ ॥

ವನಚರನಾಗೋರ್ವ ಬನದೊಳು ತೊಳಲುತ । ಘನತರ ಗುಹೆಯ ಬಾಗಿಲೊಳು ॥
ದಿನಕರನಂತೆ ತೊಳಗಿ ಬೆಳಗುತಿರ್ದ । ಮುನಿಯ ದಿವ್ಯಾಂಗವ ಕಂಡು ॥ ೧೪ ॥

ವರಕೌತುಕವನು ಶಬರನಾಯಕ ಕೇಳಿ । ದರಿಯಬಾಗಿಲಿಗೈತಂದು ॥
ಗುರುರಾಯನ ಚಾರುಚರಣಯುಗಕೆ ಮುಗ್ಗಿ । ಕರಗಳ ನೊಸಲಿಗೆ ತಂದು ॥ ೧೫ ॥

ಎಲೆ ದೇವ ! ಕೇಳಯ್ಯ ಪಲಕಾಲದಿಂ ತೊ- । ಟ್ಟಲಿದು ಕಾಡುವ ರೋಗಗಣವ ॥
ತೊಲಗಿಸುವಂತಪ್ಪ ದಿವ್ಯೌಷಧವನು । ಸಲೆ ಬಂದು ನಿರವಿಸೆಂದೆನಲು ॥ ೧೬ ॥

ಮುನಿರಾಜಕುಂಜರನಿಂತೆಂದು ನುಡಿದನು । ತನುಜ ! ಕೇಳಾರೋಗಶತವು ॥
ಘನಬೇಗದಿ ನಾಶವನ್ನೈದುವುದಕೆ । ಜಿನಪತಿ ಮಾರ್ಗವೆಂದೆಂಬ ॥ ೧೭ ॥

ಪರಮೌಷಧವನು ಸೇವಿಸಿದಲ್ಲದೆ । ಹರಿಯದದಕೆಯೌಷಧವ ॥
ಒರೆವೆನು ಕೇಳೆಳೆ ಮಗನೆ ! ಎಂದಾ ಮುನಿ । ನಿರವಿಸಿದನು ವ್ರತದಿರವ ॥ ೧೮ ॥

ಪಲವು ಜೀವಂಗಳ ಕರುಣರಹಿತನಾಗಿ । ನಲಿದಾಲುತ ಕೊಲಲದರಿಂ ॥
ಬಲು ದಂಡನೆ ದುಃಖವೆಸೆವ ನರಕಮುಕ್ಕು । ಎಲೆ ಜೀವ ! ತೊರೆಯಾ ಕೊಲೆಯ ॥ ೧೯ ॥

ಪರರ ಬದುಕ ಪ್ರಾಣಗಳಪಹರಿಸುವ । ಪರಿಪರಿಯಾದ ಸುಳ್ಳುಗಳಿಂ ॥
ವರ ಜಿಹ್ವೆ ಕರಚರಣಗಳ ಭೇದಿಸಿಕೊಂಡು । ನರಕಬೊಗುವರದು ಬೇಡ ॥ ೨೦ ॥

ಅಳುಕದೆ ಪರರ ಒಡವೆ ವಸ್ತುಗಳನು । ಕಳಲು ದೃಜ್ಞಾಸಿಕವರಿದು ॥
ಪೊಳಲೊಳು ಮೆರೆಯಿಸುವರು ದುರ್ಗತಿಯಕ್ಕು । ಎಲೆ ಜೀವ ! ತೊರೆಯಾ ಕಳವ ॥

ಪರರ ಪೆಂಡಿರುಗಳ ನೆರೆ ಸೋತು ಕೂಡಲು । ಇರಿವರು ಗಂಡರು ಕಾಣೆ ॥
ಪುರದಿ ಪೊಲೆಯರ ಕೈಯಿಂದಲೆಳೆಸುವರು । ನರಕವಿಳಿವರದು ಬೇಡ ॥ ೨೨ ॥

ದಶವಿಧಮಪ್ಪ ಪರಿಗ್ರಹಗಳ ಕಾಂಕ್ಷೆ । ಎಸೆಕದ ಲೋಭದಿಂ ಸತ್ತು ॥
ಹೊಸ ನಾರಕರಾಗಿ ದುಃಖವನುಂಬರು । ವಸೆದು ಬಿಡಾಕಾಂಕ್ಷೆಯನು ॥ ೨೩ ॥

ಕೊಲೆಹುಸಿಕಳವು ಪರಸ್ತ್ರೀರತಿ ಕಾಂಕ್ಷೆ । ಸಲೆ ಇವು ದುಃಖಭಾಜನವು ॥
ಎಲೆ ಜೀವ ! ನೀನಿವ ಬಿಡಲು ನಿನ್ನಯನಂತ । ಬಲು ಭವರೋಗವು ಕೆಟ್ಟು ॥ ೨೪ ॥

ಥಳಥಳಿಸುವ ಬೆಳಗು ಮೋಕ್ಷಸುಖದಲ್ಲಿ । ಮುಳುಗಾಡುವೆ ನಿನಗಿನ್ನು ॥
ನೆಲೆಯಾಗಿಯೊಂದು ವರುಷಮಾಯುವುಂಟೆಂದು । ಸಲೆ ಜತಿರಾಯ ಪೇಳಿದನು ॥ ೨೫ ॥

ಮುನಿವೃಷಭನ ದಿವ್ಯ ವಚನವ ನೆರೆ ನಂಬಿ । ಮನದಕ್ಕರಿಂ ತಾಳಿ ವ್ರತವ ॥
ಘನ ಪಂಚಪರಮೇಷ್ಠಿಗಳ ಪದಗಳ ಕೇಳಿ । ವನಚರ ಮುನಿಯಡಿಗೆರಗಿ ॥ ೨೬ ॥

ಮುನಿಚಕ್ರವರ್ತಿಯ ಬೀಳ್ಕೊಂಡು ತನ್ನಯ । ಮನೆಗೆ ನಡೆದು ಬಂದು ಶಬರ ॥
ಶುನಕವಿಂಡನು ಬಿಟ್ಟು ಹೊರಡಿಸಿ ಬಲೆಗಳ । ಮನವೊಲಿದುಂ ಪರಿದಿಟ್ಟು ॥ ೨೭ ॥

ಬಡಿಗಳ ಮರದುರುಳುಗಳನು ಒಲೆಗಿಕ್ಕಿ । ತಡಿಕೆಗಳನು ನುಗ್ಗುಗುಟ್ಟಿ ॥
ಬೇಡಬಿಲ್ಲಂಬುಗಳನು ಸುಟ್ಟು ಕಣ್ಣಿಯ । ಕಡಿದು ಕೈದುಗಳನು ಮುರಿದು ॥ ೨೮ ॥

ಗಿಡುಗನ ಪಾರಿಸಿ ಸಾಳ್ವನಂಬರಕಿಟ್ಟು । ಬಡಿಸವ ಸುಟ್ಟು ಮಡಕೆಯ ॥
ಒಡೆದು ಗುಡಿಸಲಿಗೆ ಕಿಚ್ಚಿಕ್ಕಿ ಬೇಗದಿ । ಒಡನೆ ಹೊಲಸಿನ ನೆಲೆಯನು ॥ ೨೯ ॥

ತೊರೆದು ಪೆಂಡಿರುಮಕ್ಕಳಾಶೆಯನೀಡಾಡಿ । ವರ ಶುಚಿಯಾದೊಂದು ತಳಕೆ ॥
ಇರದಲ್ಲಿಗೆ ಬಂದು ಹಣ್ಣುಹಂಪಲುಗಳ । ಮರದಿಂದ ಕುಯ್ದು ತನ್ನೊಡಲ ॥ ೩೦ ॥

ಹೊರೆವುತಲಾ ಬೇಡ ಪಂಚಪದಂಗಳ । ಸ್ಮರಿಸುತ ದೃಢಭಕ್ತನಾಗಿ ॥
ಗುರುವಿನ ಪಾದವ ನೆನೆವುತಲಿರುತಿರ್ದ । ಮರಣಾಂತದೊಳಗೆ ಜಿನಪನ ॥ ೩೧ ॥

ನೆನೆವುತ ತನ್ನ ಶರೀರವನೀಡಾಡಿ । ಘನಸುಖಗಳಿಗೆ ಪಕ್ಕಾದ ॥
ಅನುಪಮ ಸೌಧರ್ಮಸ್ವರ್ಗದ ಸುರನಾಗಿ । ಧರಿಸಿದ ವ್ರತದೊಂದು ಫಲದಿ ॥ ೩೨ ॥

ಮಿನುಗುವ ವಸನಾಭರಣಭೂಷಿತನಾಗಿ । ಕನಕಾಂಕಿತ ಪೀಠದೊಳು ॥
ದಿನಕರನಿಭಕಾಯ ಮಣಿಭದ್ರನುಮೆಂಬ । ಘನನಾಮವನಾಂತಿರಲು ॥ ೩೩ ॥

ಸುರದುಂದುಭಿಗಳು ಮೊರೆಯಲಮರಿಯರು । ವರ ಚಾಮರವ ಢಾಳಿಪರು ॥
ನೆರೆದೆಲ್ಲ ಜಯಜಯವೆಂದು ದೇವರ್ಕಳು । ಕರಗಳ ಮುಗಿದು ನಿಂದಿರಲು ॥ ೩೪ ॥

ಜನಿತಾವಧಿಯಿಂದಲಿದು ಸ್ವರ್ಗಲೋಕವೆಂ- । ದಿನಿಸುಬೇಗದಿ ತಾ ತಿಳಿದು ॥
ಮುನಿರಾಜನ ಕೃಪೆಯಿಂದ ಶಬರ ಜನ್ಮ । ಘನತರ ಸುಖದಿಂತಪ್ಪ ॥ ೩೫ ॥

ಜನನುತ ದೇವಗತಿಯು ತನಗಾಯಿತು । ಜಿನಧರ್ಮಕೆ ಸರಿಯುಂಟೇ ? ॥
ಅನುಮಾನವಿಲ್ಲೆಂದು ದೇವತಾನೈತಂದು । ಮುನಿಯನು ಬಲವಂದು ಮೂಮೆ ॥ ೩೬ ॥

ಚರಣಕಂಜಕೆ ಬಿದ್ದು ಎಲೆ ಜತಿರಾಯನೆ ! । ದುರಿತವ ನೆರಪಿ ನರಕಕೆ ॥
ಭರದೈದುವ ನನ್ನ ಕೈಯೆತ್ತಿ ಸ್ವರ್ಗಕೆ । ದೊರೆಯ ಮಾಡಿದೆ ನಿನ್ನಂತ ॥ ೩೭ ॥

ಕರುಣಾಳು ಕಲಿಲಾರಿ ಕಾಮನ ಮದಹಾರಿ । ಪರಮ ಬೋಧಕರೀ ಜಗಕೆ ॥
ಪರಿಕಿಸಲಾನು ಕಾಣಲು ಇಲ್ಲ ಜಯಜಯ । ಸುರನರವಂದಿತಪಾದ ॥ ೩೮ ॥

ಎನುತ ಪಲವು ಸೂಳು ಕೊಂಡಾಡಿ ಪರಮನ । ವನಜಪಾದಕೆ ನಮ್ರನಾಗಿ ॥
ಘನಭಕ್ತಿಯಿಂ ಬೀಳ್ಕೊಂಡು ನಿಳಿಂಪನು । ಮನವೊಲಿದು ದಿವಕಡರಿ ॥ ೩೯ ॥

ಸುರತರುಣಿಯರೊಳು ಸುಖದೊಳೋಲಾಡುತ । ಅರುಹನ ಪೂಜೆ ಮಾಡುತಲಿ ॥
ವರ ತತ್ತ್ವಂಗಳ ನೆನೆವುತಲಾವಾಗ । ಸುರನಬ್ಧಿಜೀವಿತವಿರ್ದು ॥ ೪೦ ॥

ಪರಮಾಯುವವಸಾನದೊಳಂಗ ಬಯಲಾಗೆ । ಭರತಾರ್ಯಖಂಡದೊಳೆಸ ॥
ಪರಮವಿದೇಹವೆನಿಪ ದೇಶವಿಹುದದು । ಸ್ಮರನಾಡುಂಬೊಲದಂತೆ ॥ ೪೧ ॥

ಶತಮುಖನಗರಿಯು ತನ್ನ ವೈಭವದಿಂದ । ಶಿಥಿಲವ ಮಾಡುತ್ತಮಿತ್ತ ॥
ಮಿಥಿಲಾಪಟ್ಟಣ ನಾಮದೊಳಿರುವುದು । ಸತತ ಸಿರಿಗೆ ಮನೆಯಾಗಿ ॥ ೪೨ ॥

ನುತವೆತ್ತು ರಾಜಿಪ ಪಟ್ಟಣವಾಳುವ । ರತಿಪತಿಸದೃಶ ಚೆನ್ನಿಗನು ॥
ರತಿವರ್ಧನನೆಂಬ ಧರಣೀಶನೊಪ್ಪಿದ । ಪೃಥುವೀಪತಿನತಪಾದ ॥ ೪೩ ॥

ಆತನ ಪಟ್ಟದರಾಣಿ ಜಗನ್ನುತೆ । ವೀತರಾಗನ ಪದಭಕ್ತೆ ॥
ಪಾತಿವ್ರತ್ಯಾದಿ ಗುಣಗಣಭೂಷಿತೆ । ಖ್ಯಾತೆ ರತ್ನಾಂಕಿನಿ ಎಂಬ ॥ ೪೪ ॥

ಪೆಸರಿಂದಲೊಪ್ಪುತಲಿಹರವರೀರ್ವರ್ಗೆ । ಎಸಕದಿಂ ಸ್ವರ್ಗಿಕ ಬಂದು ॥
ಬಸಿರೊಳಗುದಯಿಸಿ ರತಿಕಾಂತನೆಂದೆಂಬ । ಪೆಸರಾಂತು ಸೊಬಗಿಂದಿರಲು ॥ ೪೫ ॥

ಜನಪತಿ ರತಿವರ್ಧನನೊಂದಾನೊಂದು । ದಿನದೊಳು ಸಿಂಗರವಾಗಿ ॥
ಘನವಾದ ಹೊನ್ನುಪ್ಪರಿಗೆಯ ತಾನೇರಿ । ವನಿತಾಮಣಿಗಳವೆರಸು ॥ ೪೬ ॥

ಕುಳಿತು ದಿಗವಲೋಕನನ ವಿಳಾಸದಿ । ಇಳೆಯಾಣ್ಮ ನೋಡುತಲಿರಲು ॥
ಹೊಳೆದುದಾಗೊಂದು ಸಹಸ್ರ ಕೂಟಾಕಾರ । ನಿಳಯದಂದದೊಳು ಬೆಳ್ಮುಗಿಲು ॥ ೪೭ ॥
ಅದ ಕಂಡು ರತಿವರ್ಧನನೀ ಸದೃಶದ । ಸದಮಲ ಸಾಸಿರ ಕೂಟ ॥
ಮದನಾಂತ ಜಿನಗೃಹವನು ಮಾಡಿದನೆಂದು । ಚದುರ ಹಲಗೆಯನು ತರಿಸಿ ॥ ೪೮ ॥
ಬರೆಯಬೇಕೆಂಬಷ್ಟರೊಳಗೆಯಾಘನದೊಡ್ಡು । ಪರಿಯಲು ದೊರೆರನ್ನ ಕಂಡು ॥
ಸಿರಿಯೌವನ ಕಾಯಾಯುಸ್ಥಿತಿಗಳು । ಪರಿಕಿಸಲೀ ವಿಧವೆಂದು ॥ ೪೯ ॥
ಪರಮವಿರಕ್ತಿಯ ಧರಿಸಿ ತಾ ಮನದೊಳು । ಕರೆದು ಶ್ರೀ ರತಿಕಾಂತನನು ॥
ಧರೆಯ ಭಾರವನಾತನ ಭುಜದೊಳಗಿಟ್ಟು । ಧರಿಸಿದನಮಲದೀಕ್ಷೆಯನು ॥ ೫೦ ॥

ಕುವರನು ರತಿಕಾಂತನಿತ್ತಲು ತಾನಾಗ । ದಿವಿಜೇಂದ್ರ ವೈಭವದಿಂದ ॥
ಕುವಲಯವನು ರಕ್ಷಿಸುವ ಭೋಗದೊಳು ತಾ । ರವಿತೇಜಸಿರುತಿರ್ದೊಂದು ॥ ೫೧ ॥
ದಿನದೊಳು ಚತುರಂಗಬಲಸಮನ್ವಿತನಾಗಿ । ಜನಪತಿಗಳ ಕೂಡಿಕೊಂಡು ॥
ವನಕರಿಬೇಂಟೆಯ ವಿಂಧ್ಯಾಚಲದೊಳು । ಮನಬಂದ ತೆರದೊಳಾಡುತ್ತ ॥ ೫೨ ॥
ಬರುತಿರೆ ಪೂರ್ವದ ಹಗೆಯನು ತಾ ಕಂಡು । ಭರದಿ ಜಾತಿಸ್ಮರನಾಗಿ ॥
ಅರಿದು ತನ್ನಯ ಹಿಂದಣದ ಭವಂಗಳ । ಧರೆಯೊಳು ಬೀಳೆ ಮೂರ್ಛೆಯೊಳು ॥ ೫೩ ॥
ಕಡುಬೇಗದಿಂದ ಶೀತಲ ಕ್ರಿಯೆಯಂಗಳ । ಒಡನೆಯೂಳಿಗದವರೆಸಗೆ ॥
ಪೊಡವಿಯೊಳಿಚ್ಚತ್ತು ಜನಿತ ನಿರ್ವೇಗದಿ । ನಡುಗುತ ಸಂಸಾರಸ್ಥಿತಿಗೆ ॥ ೫೪ ॥
ಕರೆದಾಗ ರತಿಷೇಣಕುವರಗೆ ರಾಜ್ಯವ । ದೊರೆದೊರೆಗಳ ಮುಂದಿತ್ತು ॥
ರಚಿಸಿದನಮಲದೀಕ್ಷೆಯ ರತಿವರ್ಧನ । ಗುರು ತನ್ನ ಪಿತೃಮೂಲದೊಳು ॥ ೫೫ ॥
ಬಳಿಕಲಾ ಮುನಿಯುಗ್ರೋಗ್ರತಪದೊಳು । ಪಲಕಾಲ ತಾನಾಚರಿಸಿ ॥
ಉಳಿದಂಗವನಾಯುರಂತ್ಯದೊಳಾ ಮುನಿ । ವಿಲಸಿತ ಬ್ರಹ್ಮಕಲ್ಪದೊಳು ॥ ೫೬ ॥
ವಿದುವಾಗಿರ್ದುಪಪಾದದೊಳಗೆ ಪುಟ್ಟಿ । ಉದಯಾರ್ಕನಿಭಕಾಯವಾಂತು ॥
ಸದಮಲಗದ್ದುಗೆಯೊಳಗೋಲಗಗೊಟ್ಟು । ತ್ರಿದಶನು ಇರುತಿರಲಾಗ ॥ ೫೭ ॥

ಸುರಸತಿಯರುಗಳು ನಲಿದು ಮುತ್ತಿನ ಸೇಸೆ । ಒರೆವುತ ಧವಳ ಶೋಭನವ ॥
ಸುರನುತ್ತಮಾಂಗದ ಮೇಲೆ ತಳಿದು ಜೋಡು । ಕರಗಳ ಮುಗಿದು ನಿಂದಿರಲು ॥ ೫೮ ॥
ಸುರರೆಲ್ಲರು ಜಯಜಯವೆಂದು ತಮ್ಮಯ । ಕರಗಳ ಮುಗಿದು ಭಕ್ತಿಯೊಳು ॥
ಎರಡು ಸಾಲಾಗಿ ನಿಂದಿರೆ ಭೇರೀರವ । ಮೊರೆದುವು ಗಂಭೀರಾರ್ಭಟೆಯಿಂ ॥ ೫೯ ॥
ದಿವಿಜರು ಮಾಡುವ ಸೇವೆಯ ತಾ ಕಂಡು । ಭವಗಳ ಮೊದಲಾದ ತಿಳಿದು ॥
ಭುವನಾರಾಧ್ಯ ಜಿನೇಂದ್ರನ ದೀಕ್ಷೆಯಿಂ । ದಿವಿಜಸುಖವು ನನಗಾಯ್ತು ॥ ೬೦ ॥

ಕರಣೀಯಮಿನ್ನು ಜೈನೇಂದ್ರಧರ್ಮವು ಎಂದು । ಸುರುಚಿರ ಪೂಜೆಯನೆಸಗಿ ॥
ಹರುಷದಿಂ ಗೀರ್ವಾಣರೆಲ್ಲರನೊಡಗೊಂಡು । ಧರೆಗಿಳಿದು ಬನವ್ಪೊಕ್ಕು ॥ ೬೧ ॥

ಮುನ್ನ ತಾ ಮುನಿರೂಪ ಧರಿಸಿದ ಕಾಯವ । ಸನ್ನುತ ಭಯಭಕ್ತಿಯಿಂದ ॥
ಚೆನ್ನಿಗನಿಟ್ಟಿಸಿ ಜಯಜಯಜಯತೆಂ- । ದುನ್ನತಳಕದೊಳು ಕರವ ॥ ೬೨ ॥

ಸುರನಿಟ್ಟು ಮೂಮೆಯಾ ಕಾಯವ ಬಲವಂದು । ನೆರೆದಿರ್ದ ಸುರರೊಡಗೂಡಿ ॥
ಎರಕದಿಂ ಪೂಜೆಯ ಮಾಡಿ ದಹನಗೈದು । ತೆರಳಿದ ತನ್ನಯ ದಿವಿಗೆ ॥ ೬೩ ॥

ಚಿರಕಾಲ ಸ್ವರ್ಗಸುಖವನಾ ದೇವನು । ಎರಕದಿಂದಲಿ ತಾನುಣುತ ॥
ಸುರಗಿರಿ ಮೊದಲಾದ ಪುಣ್ಯಕ್ಷೇತ್ರದೊಳಿರ್ದ । ಅರುಹನ ಚೈತ್ಯಾವಾಸವನು ॥ ೬೪ ॥

ಅನುರಾಗದಿಂ ಪೊಕ್ಕು ಜಿನಪತಿ ಬಿಂಬಕೆ । ಘನಭಕ್ತಿಯಿಂ ಪೂಜೆಯನು ॥
ಅನುಪಮ ವಸ್ತು ಸಾಮಗ್ರಿಯಿಂದೆಸಗಿದ । ನುತವೆತ್ತು ಕಳುಹಿಸಿಕೊಂಡು ॥ ೬೫ ॥

ಸುರಲೋಕಕ್ಕೈದಿ ಸುಖವನುಂಬುತಿರೆ ತನ್ನ । ಪರಮಾಯುಷ್ಯವು ತೀರಿ ॥
ಧರೆಗಿಳಿತಂದೀಗ ಹರಿಚಂದ್ರಕುವರನ । ವರ ಗರ್ಭದೊಳು ಸಂಜನಿಸಿ ॥ ೬೬ ॥

ಅತಿಶಯಗುಣಗಣಾಭರಣಭೂಷಿತನಾಗಿ । ಕ್ಷಿತಿಯನು ಪ್ರತಿಪಾಲಿಸುವ ॥
ಪ್ರತಿಸೂರ್ಯನೆಂಬ ಕುಮಾರ ನೀನಾದೆ ಎಂ- । ದತುಳ ಭವವ ಜಿನ ಪೇಳೆ ॥ ೬೭ ॥

ಜಿನರಾಜನ ದಿವ್ಯ ವಚನದಿಂ ಭವಗಳ । ಮನವೊಸೆದೆಲ್ಲವ ಕೇಳಿ ॥
ಘನದುರಿತಕೆ ಬೆಚ್ಚಿ ಪರಮ ವೈರಾಗ್ಯದಿ । ಅನುಯಾತ ರಾಜ್ಯಭಾರವನು ॥ ೬೮ ॥

ಜನಕ ಸುಭಾನು ಚಿಕ್ಕಪ್ಪನ ಭುಜದೊಳು । ವಿನಯದಿಂ ಪ್ರತಿಸೂರ್ಯನಿರಿಸಿ ॥
ಜಿನರ ಪಾದೋಪಾಂತ್ಯದೊಳು ನಿರ್ಮಲಮ- । ಪ್ಪನುಪಮ ದೀಕ್ಷೆಯನಾಂತು ॥ ೬೯ ॥

ಅಂಗ ಕಾಶ್ಮೀರ ಗುರ್ಜ್ಜರ ಲಾಟ ಮಾಳವ । ಬಂಗಾಳ ತೆಲುಗು ನೇಪಾಳ ॥
ವಂಗ ಹೇಮಾಂಗ ಮಾಗಧ ಮುಂತಾದ ದೇ- । ಶಂಗಳ ಗಂಧಕುಟಿಯೊಳು ॥ ೭೦ ॥

ಹೊರಿಗೆಯಿಂ ಜ್ಞಾನೇಂದು ಜಿನರಾಜ ವಿಹರಿಸಿ । ವರ ಭವ್ಯರ ಕರ್ಮಗಳ ॥
ಪರಮ ಧರ್ಮಾಮೃತ ವರ್ಷವ ಕರೆವುತ । ಪರಿಹರಿಸುತ ಸ್ವರ್ಗಾದಿ ॥ ೭೧ ॥

ವರ ಗತಿಗಳ ತೋರಿ ಮಾಡಿಕೊಡುತಲಿಂತು । ಪರಮನು ಮುನ್ನೂರು ವರುಷ ॥
ಇರುತಿರ್ದ ಗಂಧಕುಟಿಯೊಳು ಶ್ರೀಜಿನರಾಜ । ಪರಮಾಯು ತಿಂಗಳೆಂದರಿದು ॥ ೭೨ ॥

ಪರಿಹರಿಸಿ ಗಂಧಕುಟಿಯನು ಜಿನದೇವ । ಭರದೀರೆಂಟು ಸಹಸ್ರ ॥
ವರ ಮುನಿವೃಂದವೆರಸಿ ತಾರಾದ್ರಿ ಶಿ- । ಖರ ತುಟ್ಟತುದಿಯೊಳಗೊಂದು ॥ ೭೩ ॥

ಥಳಥಳಿಸುವ ಚಂದ್ರಕಾಂತದ ಶಿಲೆಯೊಳು । ಲಲಿತ ಪಲ್ಯಂಕಾಸನದೊಳು ॥
ಕಲಿಲವಿಜಯ ಪೂರ್ವಾಭಿಮುಖದೊಳಾಗ । ಕುಳಿತನೊಂದು ತಿಂಗಳಲಿ ॥ ೭೪ ॥

ಸ್ಥಿರಚಿತ್ತನಾಗಿರುತಿರಲಾಗಲ್ಲಿಗೆ । ಕರಿಚರದೇವನುಗೂಡಿ ॥
ಸುರಸಿಂಹಧ್ವಜನೈತಂದು ಜಿನಪನ । ಚರಣವ ಬಲವಂದು ಮೂಮೆ ॥ ೭೫ ॥

ಜಲಗಂಧಾಕ್ಷತೆಪುಷ್ಪಚರ್ವಾದಿಯ । ಸಲೆಯಷ್ಟವಿಧ ದ್ರವ್ಯದಿಂದ ॥
ಗೆಲವಿಂದ ಪೂಜೆಯ ಜಿನನ ಕೇಸಡಿಗಳಿ- । ಗಲಘು ನಿರ್ಭರಭಕ್ತಿಯಿಂದ ॥ ೭೬ ॥

ಸುರರೀರ್ವರು ಮಾಡುತಲಿರೆ ಲೀಲೆಯಿಂ । ವರ ತಪೋನಿಧಿಗಳು ಭಾನು ॥
ಹರಿಚಂದ್ರರು ಧರ್ಮಾದಿಧ್ಯಾನಗಳಿಂದ । ಗುರು ಪಂಚಪದವ ನೆನೆವುತ ॥ ೭೭ ॥

ಆರಾಧನಾ ಚತುಷ್ಟಯದಿಂದಲಾ । ಧೀರರು ಜೀವಿತಾಂತ್ಯದೊಳು ॥
ಸಾರಶರೀರವನೀಡಾಡಿ ಸುಖವಿಾವ । ಚಾರು ಸರ್ವಾರ್ಥಸಿದ್ಧಿಯೊಳು ॥ ೭೮ ॥

ಜನಿಸಿಯೊಮ್ಮೊಳದುದಯದ ಕಾಯವನಾಂತು । ಅನುಪಮ ಶುಕ್ಲಲೇಶ್ಯವನು ॥
ಘನದಣಿಮಾದ್ಯಷ್ಟಗುಣಗಣಗಳ ತಾಳಿ । ನೆನೆಯದೆ ಮನದಿ ನೀರೆಯರ ॥ ೭೯ ॥

ಈರೆಂಟುವರೆತಿಂಗಳಿಗೊಮ್ಮೆ ಸುಯ್ಯಲುಳ್ಳ । ಮೂರಧಿಕದ ಮೂವತ್ತವರ್ಷ ॥
ತೀರಲೊಮ್ಮೊಮ್ಮೆಯುಣಿಪ ಮನದೊಳಗಾ । ಧೀರರು ಚಿಂತಿಸಾಜ್ಞೆಪರು ॥ ೮೦ ॥

ಧರಿಸಿದನಹಮಿಂದ್ರನೆಂದೆಂಬ ಪೆಸರನು । ಶರಧಿ ಮೂವತ್ಮೂರು ವರುಷ ॥
ಪರಮಾಯುಷ್ಯವು ತೀರ್ವಪರ್ಯಂತರ । ಸರಸಾರ್ಣವದೊಳಗಾಳಿ ॥ ೮೧ ॥

ಇರುತಿರಲತ್ತಲಿತ್ತಲು ಪ್ರತಿಸೂರ್ಯನು । ಗುರುಗಳೈವರ ನೆನೆವುತಲಿ ॥
ಪರಿಹರಿಸಾಯುವ ಎಂಟನೆ ದಿವಿಯಲಿ । ಸುರನಾಗಿ ಸಂಜನಿಸಿದನು ॥ ೮೨ ॥

ಮುನಿಜನಗಳು ಪರಮಾತ್ಮನ ಧ್ಯಾನದಿ । ತನುವನು ತ್ಯಜನವ ಮಾಡಿ ॥
ಘನವಾದ ಸಗ್ಗ ಮುಂತಾದ ಗತಿಗಳೊಳು । ಜನಿಸಿ ಸುಖವನುಣುತಿಹರು ॥ ೮೩ ॥

ಅನುಮತಿ ಮೊದಲಾದಜ್ಜಿಕೆಯರುಗಳು । ಜನನುತ ಸೌಧರ್ಮಾದಿ ॥
ಅನುಪಮವಾದಚ್ಯುತ ಪರಿಯಂತರ । ಜನಿಸಿ ಸುಖವನುಣುತಿಹರು ॥ ೮೪ ॥

ಸುರರೀರ್ವರಿತ್ತಲು ಜ್ಞಾನೇಂದು ಜಿನಪನ । ಚರಣಪೂಜೆಯ ಭಕ್ತಿಯಿಂದ ॥
ವರ ತ್ರಿಸಂಧ್ಯಾಕಾಲದೊಳು ಮಾಡುತಲಿ- । ಗಿರುತಿರಲಾ ಜಿನರಾಜ ॥ ೮೫ ॥

ಉಳಿದು ಸಿದ್ಧರ ಗುಣ ನೆನಹ ಸ್ವಾಂಗದೊಳಾಗ । ಥಳಥಳಿಸುವ ಚಿನ್ಮಯನ ॥
ಬೆಳಗಿನೊಳಗೆ ಮೂಡಿ ಮುಳುಗಾಡಿಯಿರಲಿ । ಕಲಿಲವಿಜಯನ ಧ್ಯಾನದೊಳು ॥ ೮೬ ॥

ಕಿರಿದಾಗಿರ್ದುದೀರ್ಘಾಯುಷ್ಯಕರ್ಮವು । ಪಿರಿದಾಗಿರ್ದವು ಕರ್ಮ ಮೂರು ॥
ಉರುಹಲು ನಾಲ್ಕು ಸಮುದ್ಘಾತ ಬಲದಿಂ- । ದರುಹನುದ್ಯುಕ್ತ ತಾನಾದ ॥ ೮೭ ॥

ಶಿಲೆಯೊಳಗಿರ್ಪುದು ಮೂಲಶರೀರವು । ಒಳಗಿನ ತೇಜಕಾರ್ಮಣವು ॥
ಬೆಳಗನು ದಿಕ್ಕುದಿಕ್ಕುಗಳಿಗೆ ಬೀರುತ । ತಳಲೋಕವನಾಗ ಮುಟ್ಟಿ ॥ ೮೮ ॥

ಇಳೆಯ ತುದಿಯ ಮೆಟ್ಟಿ ಮೊದಲ ದಿವ್ಯಾಂಗಕ್ಕೆ । ಸಲೆ ಮುಮ್ಮಡಿ ದಟ್ಟವಾಗಿ ॥
ನಲವಿಂದ ಜಗವೆಂಬ ಕಣನ ಮಧ್ಯದೊಳಜ । ಬಲಿದ ಮೇಟಿಯ ಮರದಂತೆ ॥ ೮೯ ॥

ದಂಡಾಕಾರದೊಳಗೆ ದೇವ ನಿಲಲಾಗ । ಚಂಡಾಘಬಲವು ಮುರಿದುವು ॥
ದುಂಡುಸರಿಗೆ ಕಂಬಚ್ಚಿಯಿಂದೆಳೆಯಲು । ಖಂಡಿಪಂತಾ ಸ್ವರ್ಣಶಕ್ತಿ ॥ ೯೦ ॥

ಜಿನರಾಜನೊಡನೆ ಕವಾಟಕೆ ಎದ್ದು ತಾ । ತನುವಿನಿಂ ತ್ರಿವಿಧದಟ್ಟದೊಳು ॥
ಘನವಾದವನಿಯ ಬಾಗಿಲನಿಕ್ಕಿದವೊಂದು । ಮಿನುಗುವಮಳ್ವಡಿಯಂತೆ ॥ ೯೧ ॥

ಏಳೊಂದೈದೊಂದು ರಜ್ಜುವಿನಗಲದೀ- । ರೇಳು ರಜ್ಜುವಿನುದ್ದದಲಿ ॥
ತಾಳಿ ದಿವ್ಯಾಂಗವ ಕರ್ಮದ ಹಿಂಡನು । ಲೀಲೆಯಿಂ ತೆಳಪು ಮಾಡಿದನು ॥ ೯೨ ॥

ಕನಕದ ಮಚ್ಚವ ತಗಡ ತಟ್ಟಿದರದ । ಘನಶಕ್ತಿ ತೆಳುಪಾಗುವಂತೆ ॥
ಮುನಿರಾಜಚಂದ್ರ ಕವಾಟವನೆಸಗಲು । ಮೊನೆ ಮುರಿದವು ಕರ್ಮಗಳ ॥ ೯೩ ॥

ಅರಹಂತನಾಗಲೆ ಪ್ರತರಿಗೆಯೊಡರ್ಚದ । ಮರುತತ್ರಯದಿಂದಲೊಳಗೆ ॥
ಪರಿಪೂರ್ಣವಾಗಿ ಜಗವನೆಲ್ಲವ ತುಂಬಿ । ಮೆರೆದವು ತೇಜಕಾರ್ಮಣವು ॥ ೯೪ ॥

ಶಶಿಯ ಜೊನ್ನಗಳು ಜಗವನೆಲ್ಲವ ತಾನು । ಮುಸುಕಿ ಮಾರ್ಪೊಳೆವಂದದೊಳು ॥
ಹೊಸಕಾಂತಿಯೊಡಗೂಡಿ ಚಿನ್ಮಯ ಲೋಕವ । ಪಸರಿಸಿ ತುಂಬಿದನಾಗ ॥ ೯೫ ॥

ನೆನೆದೊಂದು ವಸ್ತ್ರವು ಮುದ್ದೆಯಾಗಿರಲದ । ಇನಿಸುಬೇಗದಿ ಬಿಚ್ಚೆ ನೀರು ॥
ಪನಿವಂತೆ ಪ್ರತರಿಯ ಪರಮನು ಮಾಡಲು । ಘನಕರ್ಮಪಿಂಡವಾರಿದುದು ॥ ೯೬ ॥

ನಾಕಾಧೀಶವಂದಿತಪಾದನಾಗಲು । ಕಾಕುಮಾಡುವೆನೆಂದಘವ ॥
ಲೋಕಪೂರಣೆಯ ಪ್ರಾರಂಭಿಸಿದನು ಚಿನ್ಮ- । ಯಾಕಾರದೊಳಗೇನೆಂಬೆ ॥ ೯೭ ॥

ಮೂರುಗಾಳಿಯ ಒಳಹೊರಗು ಮೂಜಗದುಂಬಿ । ಸಾರಾತ್ಮನಿರೆ ಲೋಕವೆಲ್ಲ ॥
ಸೇರಿದ ತ್ರಸನಾಳವೆಂಬೊಂದು ನಯದಿಂದ । ಸೂರಿಗಳಾಡುವರೊಸೆದು ॥ ೯೮ ॥

ನವಕಾಂತಿವೆರಸು ಪರಮನು ಮೂಜಗವನು । ಕವಿದುಕೊಂಡಿರಲುವೊಪ್ಪಿದುದು ॥
ಯುವಿಯೆಂಬ ಕೋಮಲೆ ಮುಸುಕಿಟ್ಟು ರಾಜಿಪ । ಧವಲಾಂಬರವೋ ಎಂಬಂತೆ ॥ ೯೯ ॥

ಪೊಳೆವ ದೀವಿಗೆಯ ಕಾಂತಿಯು ಥಳಥಳಿಸುತ । ನಿಳಯವ ತುಂಬಲು ತಮವು ॥
ಒಳಸರಿವಂತೆ ಚಿದ್ರೂಪು ಲೋಕವ ತುಂಬಿ । ಹೊಳೆದಘಮರಿ ಹೋಗುತಿಹುದು ॥ ೧೦೦ ॥

ಕ್ರೂರಕರ್ಮದ ಹಿಂಡಿನ ಸೊಕ್ಕನುಡುಗಿಸಿ । ಮಾರಾರಿ ಸಮಯವೈದರೊಳು ॥
ಪೂರಣೆಯನು ಬಿಟ್ಟು ಪ್ರತರಿಗೆ ನಡೆತಂ- । ದಾರಪೊಳೆವ ವೇಳೆಯೊಳು ॥ ೧೦೧ ॥

ಪ್ರತರಿಯನುಪಸಂಹರಿಸಿ ಕವಾಟಕೆ । ನುತವೆತ್ತು ತಾನಿಳಿತಂದು ॥
ಅತಿಶಯದಿಂ ಕವಾಟವನು ಸಂಕೋಚಿಸಿ । ವ್ರತಿನಾಥ ಸಮಯವೇಳರೊಳು ॥ ೧೦೨ ॥

ದಂಡದೊಳಗೆ ನಿಂದು ಸಮಯುವೆಂಟರೊಳಾ। ದಂಡಾಕಾರವ ಬಿಟ್ಟು ॥
ಮುಂಡಿಸಿ ನಿಜ ಪೂರ್ವದೇಹಪ್ರಮಾಣದಿ। ಹಿಂಡುಕರ್ಮದ ಗಂಡನಿಂದ ॥ ೧೦೩ ॥

ಮೂರಾದಘಾತಿಕರ್ಮಗಳಾಯು ಸಮನಾಗೆ। ಚಾರುಯೋಗದ ನಿರೋಧವನು ॥
ಧೀರ ಮಾಡುವೆನೆಂದು ಬಾದರ ವಾಙ್ಮನ। ಸೇರಿದ ಶ್ವಾಸಕಾಯಗಳ ॥ ೧೦೪ ॥

ಬಾದರಯೋಗವ ಸೂಕ್ಷ್ಮ ಮನೋಶ್ವಾಸ। ಭೇದಿಸಿ ಮುಹೂರ್ತದೊಳಗೆ ॥
ಮೇಧಾವಿ ಸೂಕ್ಷ್ಮಸುಕಾಯಯೋಗನುವಾಗಿ। ತೇದಂಗಯೋಗವ ಮತ್ತೆ ॥ ೧೦೫ ॥

ವರ ಸೂಕ್ಷ್ಮಕ್ರಿಯಾ ಪ್ರತಿಪಾದಿಯೆಂಬೊಂದು। ಮೆರೆವ ಮೂರನೆ ಶುಕ್ಲದಿಂದ ॥
ನಿರವಶೇಷದಿ ಸುಟ್ಟು ತದನಂತರದೊಳು। ಮರಸಿದಾಸ್ರವದ್ವಾರನಾಗಿ ॥ ೧೦೬ ॥

ಹದಿನೆಂಟು ಸಾಸಿರ ಶೀಲ ಸಂಯುತನಾಗಿ। ವದವಿದ ಚೌಶೀತಿ ಲಕ್ಷ ॥
ಸದಮಲಗುಣಗಣಾಭರಣಭೂಷಿತನಾಗಿ। ಯುದಿಸಿದ್ದ ಪ್ರಾಣಾಪಾನವನು ॥ ೧೦೭ ॥

ನಿರುತ ಮನೋಯೋಗ ಕಾಯಪ್ರದೇಶದ। ಪರಿಚಯವನು ತಾ ಬಿಟ್ಟು ॥
ಸುರುಚಿರಯೋಗಿ ಕೇವಲಿಗುಣಸ್ಥಾನವ। ಗುರುಜನವಂದಿತ ಪೊರ್ದಿ ॥ ೧೦೮ ॥

ವ್ಯಪಗತಕ್ರಿಯಾನಿವೃತ್ತಿಯೆಂದೆಂಬೊಂದು। ಸುಪವಿತ್ರವಾದ ನಾಲ್ಕನೆಯ ॥
ಲಪಿಸಿದ ಶುಕ್ಲಧ್ಯಾನಖಡ್ಗವನಾಂ-। ತಪವಿತ್ರ ಕರ್ಮಾರಿಯನು ॥ ೧೦೯ ॥

ಸುರನರೋರಗವಂದಿತಪಾದ ಜ್ಞಾನೇಂದು। ವರ ತರ ಜಿನರಾಜನುಲ್ಲ ॥
ತರಿದೊಟ್ಟಿದನದೆಂತೆನೆ ನಾನೀಗ। ಒರೆವೆನು ಕೇಳಿ ಕೋವಿದರು ॥ ೧೧೦ ॥

ಸ್ವರದುಃಸ್ವರವಾದೇಯವನಾದೇಯ। ಸ್ಥಿರಮಸ್ಥಿರ ಪೂರ್ಣಾಪೂರ್ಣ ॥
ಪರಘಾತಾಗುರುಲಘುಮೆಂಬೀ ದಶಕವ-। ನಿರದೆ ಕೆಡಹಿದನದೊಮ್ಮೆ ॥ ೧೧೧ ॥

ಜಸ ದುಷ್ಕುಲದುರ್ಭಗಸಾತಾಸಾತ। ತ್ರಸ ದುರ್ಗಂಧ ಸುಗಂಧ ॥
ಮಿಸುವ ಬಾದರಸುಭಗಗಳೆಂಬ ದಶಕವ। ಕುಸುರಿದರಿದನದೊಮ್ಮೆ ॥ ೧೧೨ ॥

ಹರಿತಪೀತಾರುಣಕೃಷ್ಣಧವಲಕುಲ। ನರಸುರಗತ್ಯಾನುಪೂರ್ವಿ ॥
ನಿರುತದಿಂದುಚ್ಛ್ವಸನಿಶ್ವಾಸ ದಶಕವ। ತರಿದನಾ ಜಿನಪನದೊಮ್ಮೆ ॥ ೧೧೩ ॥

ಮಧುರಾಮ್ಲ ಕಟುಕ ಕಷಾಯ ತಿಕ್ತಗಳ। ಬೆದರುವ ಪ್ರತ್ಯೇಕಾಶಯವ ॥
ಇದಿರಾದಾಕಾಶಾನಾಕಾಶ ಗತಿಗಳ। ಸದೆದ ನಿರ್ಮಾಣೆಂತಿ ಪತ್ತ ॥ ೧೧೪ ॥

ಅವುದಾರಿಕ ವೈಕ್ರಿಯಕಾಹಾರಕ। ನವತೇಜಕಾರ್ಮಣ ಬಂಧ ॥
ಅವುದಾರಿಕಾಹಾರಕ ವೈಕ್ರಿಯಕ ಸ-। ತ್ರಿವಿಧಂಗೋಪಾಂಗವ ಸುಟ್ಟು ॥ ೧೧೫ ॥

ಅವುದಾರಿಕ ವೈಕ್ರಿಯಕಾಹಾರಕ। ಕವಿದ ತೇಜಸಕಾರ್ಮಣೈದ ॥
ತಿನಿದು ತರಿದು ನಿಮಿಷದೊಳಂಗಕರ್ಮವ। ಭುವನಾರಾಧ್ಯ ಜಿನೇಂದ್ರ ॥ ೧೧೬ ॥

ಸಮಚತುರಸ್ರ ವಾಮನ ಕುಬ್ಜ ನ್ಯಗ್ರೋಧ। ಸಮನಲ್ಲದ ಸ್ವಾತಿ ಹುಂಡ ॥
ರಮಣೀಯ ಸಂಸ್ಥಾನ ಕರ್ಮಷಟ್ಕಗಳನು। ನಿಮಿಷದೊಳಗೆ ಸುಟ್ಟ ಜಿನನು ॥

ನಾರಾಚ ವಜ್ರನಾರಾಚಾರ್ಧನಾರಾಚ। ಸೇರಿದ ವಜ್ರಸುವೃಷಭ ॥
ನಾರಾಚ ಕೀಲಿತಾಸಂಪ್ರಾಪ್ತಾ ಸೃಪಾಟಿಕಾ। ಚಾರು ಸಂಹನನಾರ ಸುಟ್ಟು ॥ ೧೧೮ ॥

ಮೇಲೆ ಔದಾರಿಕ ವೈಕ್ರಿಯಕಾಹಾರ। ವರ ತೇಜಕಾರ್ಮಣವೆಂಬ ॥
ಉರುತರ ಸಂಘಾತ ನಾಮಕರ್ಮಗಳೈದು। ಉರುಹಿದನಾ ಜಿನನೊಮ್ಮೆ ॥ ೧೧೯ ॥

ಗುರುಲಘು ಶೀತೋಷ್ಣ ಮೃದುಕರ್ಕಶಸ್ನಿಗ್ಧ। ಪರಿಕಿಸೆ ರೂಕ್ಷವೆಂದೆಂಬ ॥
ಸ್ಪರುಶನ ನಾಮಕರ್ಮವನೆಂಟನಾಗೊಮ್ಮೆ। ಮುರಿದೀಡಾಡಿದ ಜಿನಪ ॥ ೧೨೦ ॥

ಪಂಚೇಂದ್ರಿಯ ಜಾತಿಗಳೈದು ಮನುಜಾಯು। ಸಂಚಿತ ತೀರ್ಥೇಶನಾಮ ॥
ವಂಚಿಸೆಂಭತ್ತೈದು ದುಷ್ಟಕರ್ಮಂಗಳ। ಸಂಭಿನ್ನವ ಮಾಡಿ ಜಿನನು ॥ ೧೨೧ ॥

ಉನ್ನತ ಸರ್ವಾರ್ಥಸಿದ್ಧಿಯಿಂ ಮೇಲೆ ತಾ। ಪನ್ನೆರಡು ಯೋಜನದೊಳು ॥
ಸನ್ನುತೀಷತ್ಪ್ರಾಗ್ಭಾರಾಷ್ಟಮಭೂಮಿ। ಚೆನ್ನುವಡೆದು ರಾಜಿಪುದು ॥ ೧೨೨ ॥

ಅದರಗಲವು ಒಂದು ರಜ್ಜುಪ್ರಮಾಣವು। ಅದು ತಾನು ನೀಳೇಳು ರಜ್ಜು ॥
ವಿದಿತದಿಂದೆಂಟು ಯೋಜನದಟ್ಟವದರೊಳು। ವಿಧುವಿನಂತತಿ ಶುಭ್ರವುರುಟು ॥ ೧೨೩ ॥

ಮನುಜಕ್ಷೇತ್ರದ ವ್ಯಾಸವುಳ್ಳುದು ಸಿದ್ಧ। ಘನತರ ಶಿಲೆ ರಾಜಿಪುದು ॥
ಅನುವೆತ್ತದರ ಮಧ್ಯದೆಂಟು ಯೋಜನದಟ್ಟ। ತನುವಿರ್ಪುದು ಕ್ರಮದಿಂದ ॥ ೧೨೪ ॥

ಮೇಲು ಮುಂತಾಗಿರಿಸಿದ ನಿಂಬೆಹಣ್ಣಿನ। ಹೋಳಿನಂದದಿಯಿಹುದದರ ॥
ಮೇಲೆ ಎರಡು ಹರದಾರಿದಟ್ಟವನುಳ್ಳ। ಬಾಲಗೋಮೂತ್ರವರ್ಣದೊಳು ॥ ೧೨೫ ॥

ಎಸೆವುದೇನೆಂಬೆ ಘನೋದಧಿವಾಯುವು। ಹಸನಾದರಗ್ರಭಾಗದೊಳು ॥
ಹೇಸರವರ್ಣವನುಳ್ಳ ಒಂದು ಕ್ರೋಶದ। ಪೆಸರಿನ ಘನವಾತಮಿಹುದು ॥ ೧೨೬ ॥

ನಾನೂರಿಪ್ಪತ್ತೈದು ಬಿಲ್ಲುಗಳಿಂದ। ನೂನವಾದೊಂದು ಕ್ರೋಶದೊಳು ॥
ನಾನಾಕಾರವರ್ಣವನುಳ್ಳ ತನುವಾತ। ತಾನೊಪ್ಪಿದುದು ಚೆಲ್ವಿಂದ ॥ ೧೨೭ ॥

ಇಂತಪ್ಪ ಸಿದ್ಧಕ್ಷೇತ್ರದ ತನುವಾತ-। ದಂತದೊಳಗೆ ಕಾರ್ತಿಕದ ॥
ಮುಂತಿರ್ದ ಶುಕ್ಲಪಕ್ಷದ ನವಮಿ ದಿನದೊಳು। ಕಂತುಮರ್ದನ ಜ್ಞಾನೇಂದು ॥ ೧೨೮ ॥

ಜಿನರಾಜಮಲ್ಲನು ಘಾತಿಕರ್ಮವ ಸುಟ್ಟು। ತನುವಿಂಚಿನಂತೆ ಬಯಲಾಗೆ ॥
ಮಿನುಗುವನಂತಚತುಷ್ಟಯ ಬಲಗೂಡಿ-। ಯನುಪಮ ಮೋಕ್ಷವನೈದಿ ॥ ೧೨೯ ॥

ಅಕಲಂಕವಾದಷ್ಟಗುಣಭೂಷಣವಿಟ್ಟು। ಮುಕುತಿವೆಣ್ಣನು ತಾನು ವರಿಸಿ ॥
ಸುಖವೆ ಮೂರುತಿಯಾಗಿ ಜ್ಞಾನದರ್ಶನದಿಂದ। ಸಕಲವ ನೋಡುತೊಪ್ಪಿದನು ॥ ೧೩೦ ॥

ಸುರಪತಿಮಣಿವಿಷ್ಟರವಾ ವೇಳೆಲಿ । ಭರದಿಂದ ಕಂಪಿಸಿಂದ್ರಾಣಿ ॥
ನೆರೆ ಬೆಚ್ಚಿ ದೇವರಾಜನ ಬಿಗಿಬಿಗಿಯಪ್ಪಿ । ಸುರಪತಿ ಬೋಧದಿಂ ತಿಳಿದು ॥ ೧೩೧ ॥

ತರಿದುಯಘಾತಿಯ ಜ್ಞಾನೇಂದುಜಿನ ಮೋಕ್ಷ- । ತರುಣಿಯನಪ್ಪಿದನದರಿಂ ॥
ಹರಿವಿಷ್ಟರಗಡಗಂಪಿತೆಲೆ ಶಚಿ ! । ಕರ ಬೆಚ್ಚಬೇಡೆಂದು ತನ್ನ ॥ ೧೩೨ ॥

ಕರಗಳ ನೊಸಲಿಗೆ ತಂದಾ ದೇವೇಂದ್ರ । ಒರೆವುತ ಜಯಜಯವೆಂದು ॥
ಪರಮನ ಕಡೆಯ ಕಲ್ಯಾಣಪೂಜೆಯ ಮಾಳ್ಪ । ಗುರುಕುಚೆ ನೀನೇಳೆಂದು ॥ ೧೩೩ ॥

ದಿವಿಜರಾಜನು ನಾಲ್ಕು ತೆರದ ದೇವರ್ಕಳ । ನಿವಹಗಳನು ಕೂಡಿಕೊಂಡು ॥
ಭುವಿಗವತರಿಸಿ ತಾರಾಚಲವನು ಯೇರಿ । ಸವಿನಯದಿಂ ದೇವನಿರ್ದ ॥ ೧೩೪ ॥

ಮಿರುಗುವ ಪಳುಕಿನ ಶಿಲೆಯ ಸುರರು ಕೂಡಿ । ಕರಗಳ ನೊಸಲೊಳಗಿಟ್ಟು ॥
ಪರಿತೋಷದಿಂ ಮೂಮೆ ಬಲವಂದು ಕೊಂಡಾಡಿ । ಪರಮೌದಾರಿಕಾಂಗವನು ॥ ೧೩೫ ॥

ವಿರಚಿಸಿ ಕರ್ಪೂರ ಪಳುಕಿಸಿಂ ದೇಹವ । ಪರಿಮಳ ಶ್ರೀಗಂಧವನು ॥
ವರ ಗುಗ್ಗುಳ ಮುಂತಾದ ದಶಾಂಗವ । ತರಿಸಿ ಹರಹಿಯವನೊಟ್ಟಿ ॥ ೧೩೬ ॥

ಮೇಲುಭಾಗದೊಳು ಶರೀರವನಿರಿಸಲು । ಲೀಲೆಯಿಂದಗ್ನೀಂದ್ರ ಬಂದು ॥
ಜ್ವಾಲಾಂಕಿತ ಕಿರೀಟವ ಮುಟ್ಟಸೆ । ಯಾಲಿಗಿಚ್ಚವನು ತಾ ಪತ್ತೆ ॥ ೧೩೭ ॥

ದಂದಹ್ಯಮಾನವಾಗುರಿಯುತಿರಲು ದೇವ- । ವೃಂದವೆಲ್ಲವು ಕೈಚಪ್ಪಳೆಯ ॥
ಹೊಂದಿಗುಟ್ಟುತ ಕುಣಿಕುಣಿದಾಡುತ ಜಯ- । ವೆಂದು ಕೊಂಡಾಡುತ ಜಿನನ ॥ ೧೩೮ ॥

ಭರದೊಳೆರಗಿ ಮೂಮೆ ಬಲವರೆ ದೇವೇಂದ್ರ । ವರ ಶಚಿವೆರಸಾನಂದ ॥
ಸರಸನಾಟ್ಯವನಾಡಿ ನಿರ್ವಾಣಕಲ್ಯಾಣ । ವರ ಪೂಜೆಯ ತಾನೆಸಗಿ ॥ ೧೩೯ ॥

ಜ್ಞಾನೇಂದುಜಿನನ ವಿಭೂತಿ ನಮಗೆ ಸು- । ಜ್ಞಾನದಿಂ ದೊರಕಲಿ ಎನುತ ॥
ಸಾನಂದದಿ ಜಿನತನುದಗ್ಧಭೂತಿಯ । ಪೀನಭವಗಳಿಂದ್ರಾದಿ ॥ ೧೪೦ ॥

ಸುರರೆಲ್ಲ ಹಣೆ ಭುಜ ಕೊರಳೆದೆ ಬಸುರಿಗೆ । ಧರಿಸಿ ನಮಿಸಿ ತಂತಮ್ಮ ॥
ಸುರಲೋಕಕೆ ಪೋಗೆ ಸಿಂಹಪತಾಕನು । ಕರಿಚರದಿವಿಜರು ಜಿನನ ॥ ೧೪೧ ॥

ಅಂಗನ ಸಂಸ್ಕರಿಸಿದ ಭೂಮಿಯ ಮೇಲೆ । ಮಂಗಲಾಷ್ಟಕವನೋದುತ್ತ ॥
ಪಿಂಗದೆ ಬಲವಂದೆರಗಿ ಸಾಷ್ಟಾಂಗದಿ । ಲಂಘಿಸಿದರು ಸ್ವರ್ಗಗಳಿಗೆ ॥ ೧೪೨ ॥

ಸುರಪತಿ ನರಪತಿ ಖಗಪತಿಗಳೊಂದು । ನೆರೆವ ತ್ರಿಕಾಲದ ಸುಖವು ॥
ಪರಿಕಿಸೆ ಸಿದ್ಧರ ಕ್ಷಣದ ಸುಖಕೆ ತಾನು । ಸರಿಯಲ್ಲವಂತಪ್ಪನಂತ ॥ ೧೪೩ ॥

ವರ ಸುಖದೊಡಗೂಡಿ ಲೋಕತ್ರಯದೊಳು । ಭರಿತವಾಗಿರ್ದ ವಸ್ತುವನು ॥
ದರುಶನಜ್ಞಾನದಿಂದಾ ಪರಮೇಷ್ಠಿಯು । ಪರಿಕಿಸಿ ತಿಳಿವುತೊಪ್ಪಿದನು ॥ ೧೪೪ ॥

## ॥ ಸ್ತೋತ್ರ ॥

ಜಿತಾರಯೇ ನಮುಸ್ತುಭ್ಯಂ । ನಮಃ ಸೂರ್ಯಪ್ರಭಾಯ ತೇ ॥
ಮಹಾಬಲ ! ನಮುಸ್ತುಭ್ಯಂ । ರತ್ನಚೂಲಾಯ ತೇ ನಮಃ ॥ ೧೪೫ ॥
ವರಸೇನ ! ನಮುಸ್ತುಭ್ಯಂ । ನಮಶ್ಚಾಮಿತತೇಜಸೇ ॥
ಘಾತ್ಯಘಾತಿವಿನಿರ್ಮೂಲ- । ಜ್ಞಾನೇಂದುಜಿನ ! ತೇ ನಮಃ ॥ ೧೪೬ ॥

ಇದು ಸುರನರಫಣಿಪತಿಮುಕುಟತಟಘಟಿತಮಾಣಿಕ್ಯಮರೀಚಿಮಾಲಾಲಂಕೃತಕ್ರಮಕಮಲ ಯುಗಲಶ್ರೀಮಜ್ಜಿನಾಧೀಶ್ವರಮತಾಂಬರದ್ಯುಮಣಿ ಸ್ಯಾದ್ವಾದವಿದ್ಯಾಭರಣಭೂಷಿತ ಶ್ರೀಮಚ್ಚಾರುಕೀರ್ತಿಪಂಡಿತಾಚಾರ್ಯಪದೇಂದೀವರಾನಂದಮಂದಮಕರಂದ ಸಂದೋಹಬಂಧುರಕುಸುಮಂಧಯಶ್ರೀಮತ್ಪಾಯಣವರ್ಣಿ ವಿರಚಿತಮಪ್ಪ ಜ್ಞಾನಚಂದ್ರಚರಿತಪುರಾಣದೊಳು ಜ್ಞಾನಚಂದ್ರಮಹಾಮಂಡಳೇಶ್ವರ ಘಾತ್ಯಘಾತಿಕರ್ಮನಿರ್ಮೂಲನಂಗೈದು ಮೋಕ್ಷಾಂಗನಾಕೋಮಲ ಭುಜಯುಗಲಾಲೀಢಕಂಠನಾಗಿ ಕೂಡಿದ ನಿರ್ವಾಣಕಲ್ಯಾಣಾ ಭ್ಯುದಯವ್ಯಾವರ್ಣನಂ ಪಂಚಚತ್ವಾರಿಂಶದಾಶ್ವಾಸಂ ॥



**॥ ಅಂತು ಸಂಧಿ ೪೫ಕ್ಕಂ ಪದ ೬೩೧೬ಕ್ಕಂ ಮಂಗಲಂ ॥**

# ಕವಿಪ್ರಶಸ್ತಿ.

ಶಕಕಾಲ ಸಾಸಿರದೈನೂರೆಂಭತ್ತೊಂದು । ಪ್ರಕಟ ವಿಕಾರಿ ವತ್ಸರದ ॥
ಥಕಥಕಿಸುವ ಶ್ರಾವಣ ಶುದ್ಧ ಪಂಚಮಿ- । ಯಕಲಂಕ ಗುರುವಾರದೊಳು ॥ ೧ ॥

ಶಿವಯೋಗ ಸಿಂಹಲಗ್ನದೊಳು ಶ್ರೀ ಜ್ಞಾನೇಂದು । ಭುವನಾಧಿಪತಿಚರಿತವನು ॥
ಕವಿಗಳು ಮೆಚ್ಚುವಂದದಿ ಷಾಯಣವರ್ಣಿ । ಸವಿನಯದಿಂದ ಪೂರ್ಣಿಸಿದ ॥ ೨ ॥

ಬೆಳುಗುಳಾದ್ರಿಯ ಗುಮ್ಮಟಸ್ವಾಮಿ ಸೇವಕ । ಸಲೆ ನಾಗಪ್ಪಯನ ಸಂತಾನ ॥
ಚೆಲುವಾಗಿ ಪೇಳ್ದರು ಷಾಯಣವರ್ಣಿಯಿಾ । ಲಲಿತಜ್ಞಾನೇಂದುಚರಿತವ ॥ ೩ ॥

ವೀರಜಿನೇಂದ್ರನ ವಚನವೆನಿತುಕಾಲ । ಧಾರುಣಿಯೊಳು ವರ್ತಿಪುದು ॥
ಸೇರುವೆಯಿಂದನಿತುಕಾಲ ಜ್ಞಾನೇಂದು । ಚಾರುಚರಿತ್ರ ನಡೆಯಲಿ ॥ ೪ ॥

ತಾರಿಳೆ ನಭ ಮೇರು ಚಂದ್ರಾರ್ಕರಿರುವನ್ನ । ರಾರಾಜಿಪಂತೀ ಕೃತಿಯು ॥
ವೀರಾಂಗದ ಮುನಿರಾಜ ಪರ್ಯಂತರ। ಸಾರಿ ನಡೆಯಲೆಡರಿರದೆ ॥ ೫ ॥

ಚಂದ್ರನ ಚಾರುಕಿರಣದಂತೆ ಜ್ಞಾನ- । ಚಂದ್ರನ ಚರಿತೆ ಜಗದೊಳು ॥
ಸಾಂದ್ರವೃತ್ತಿಯೊಳಾವಾಗ ಪಸರಿಸಿ ನೃ- । ಪೇಂದ್ರ ಜನರು ಕೇಳುತಿರಲು ॥ ೬ ॥

ಧರೆಯ ಜನರಿಗೆ ವೀಣೆಯ ಕೋಗಿಲೆಗಳ । ಸ್ವರವೆಂತುಟಂತು ಮೋಹಿಪುದು ॥
ನೆರೆ ಜಾಣರ ಚಿತ್ತವನಾವಾಗಲು । ಸೆರೆಗೈಯಲೀ ಸಂಗತಿಯು ॥ ೭ ॥

ಇದನೋದಿದವರಿಗೆ ಸರ್ವಾರ್ಥಸಿದ್ಧಿಯು । ಇದ ಬರಸಿದವರ್ಗೆ ಸ್ವರ್ಗ ॥
ಇದ ಕೇಳಿದವರಿಗೆ ಸ್ವರ್ಗಾಪವರ್ಗವು। ಇದ ಬರೆದರು ಧನ್ಯರಹರು ॥ ೮ ॥

ಇದಕೊಡಂಬಟ್ಟ ಜನರು ಭೋಗಭೂಮಿಯ । ಸದಮಲ ಸುಖವನುಣುವರು ॥
ಇದಕೆ ಮಂಗಳಗಳ ನಡೆಸಿದ ಭವ್ಯರು। ಮುದದಿ ಚಕ್ರೇಶ್ವರರಹರು ॥ ೯ ॥

ಸದಮಲಮಪ್ಪೀ ಕೃತಿಯಿದ್ದ ಸ್ಥಳದಲ್ಲಿ। ಉದಿಸದು ಕ್ಷಾಮಡಾಮರವು ॥
ಚದುರರಾಗುವರು ಸಂತಾನವು ಪೆರ್ಚುಗು। ಮುದಶುಭಮಂಗಲ ಜಯತು ॥ ೧೦ ॥

॥ ಮಂಗಲಂ ॥

# ಒಪ್ಪೋಲೆ.

| ತಪ್ಪು | ಒಪ್ಪು | ಪುಟ | ಪದ್ಯ |
|---|---|---|---|
| ಲೋಕವನಿಂ ಬಿಟ್ಟು | ಲೋಕವನಿಂಬಿಟ್ಟು | 1 | ೨ |
| ಪದ್ಮಾ। ರರುಹ | ಪದ್ಮಾರಿ- । ಯರುಹ | 1 | ೪ |
| ಫಲವಂದದಿಂದ | ಪಲವೊಂದರಿಂದ | 3 | ೨೭ |
| ದಂಗಮಂಟಪ | ರಂಗಮಂಟಪ | 5 | ೫೭ |
| ರಾವಾಸಕು ಭೋಗ | ರಾವಾಸ ಕುಭೋಗ | 5 | ೬೪ |
| ಪರನಿಧಿಯನು ಖಂಡಿರಿಸಿ | ಶರನಿಧಿಯನು ಖಂಡರಸಿ | 6 | ೭೯ |
| ಸೆಳೆವರೈ ಜೆಳವೆ | ಸೆಳೆವ ಕೈಜೆಳವೆ | 8 | ೧೦೭ |
| ಚೆಳ್ಳುಗುರು ರಂಜಿಸುವಲ್ಲಿ | ಸೆಳ್ಳುಗುರು ರಂಜಿಪುವಲ್ಲಿ | 15 | ೨೦ |
| ಕಾಂತಯ ಬಾಯಿದೆರೆಯ | ಕಾಂತಿಯು ಬಾಯಿದೆರೆಯೆ | 21 | ೧೦೬ |
| ಬಿಜಮಾಡಿ ಸೊಳಯಿಂಕೆ | ಬಿಜಮಾಡಿಸೊಳಯಿಂಕೆ | 22 | ೧೨೩ |
| ಅರಿಗಳ ತಂಡಕೆ | ಅರಿವೇತಂಡಕೆ | 32 | ೧೦೦ |
| ಸರಸೇಕ್ಷುವನು ತುಂಬಿದೆದೆಗೆ | ಸರಸೇಕ್ಷುಧನುಃತುಂಬಿ ಹೆದೆಗೆ | 34 | ೧೨೬ |
| ಅರಲಶರನು | ಅರಳಸರಳು | 34 | ೧೨೬ |
| ಯಾಜಕ | ಯಾಚಕ | 36 | ೧೫೪ |
| ಎರಕದೊಮರಿಸಿ | ಎರಕದೊಳಮರಿಸಿ | 39 | ೧೦ |
| ಸುಗಂಧಿ ವಿಡಿ | ಸುಗಂಧಿವುಡಿ | 39 | ೧೨ |
| ಮಂಡಲದಿರ | ಮಂಡಲವಿರಿ | 45 | ೯೧ |
| ಪದಿಕಂಠ | ಪವಿಕಂಠ | 60 | ೧೧೩ |
| ಪಿಡಿವಾಗಸಕೆ | ಪಿಡಿದಾಗಸಕೆ | 60 | ೧೧೬ |
| ಖಾಂಡವನವ | ಖಾಂಡವವನವ | 60 | ೧೧೯ |
| ಪೊತ್ತಿದ ವಿಜಯಾರ್ಧ | ಹತ್ತಿದರ್ವಿಜಯಾರ್ಧ | 64 | ೩೮ |
| ದಳಕಟ್ಟಿಂದ್ರ | ದಳಕಕಿಟ್ಟಿಂದ್ರ | 79 | ೧೨೩ |
| ಬಲುಹೂಳು | ಬಲಹೂಳು | 86 | ೨೭ |
| ಜ್ಞಾನೇಂದುವಿನ ನಾಮ | ಜ್ಞಾನೇಂದುವೆನೆ ನಾಮ | 87 | ೪೫ |
| ಧನುಜ | ದನುಜ | 88 | ೫೦ |
| ವಿರಣ | ವೀರಣ | 96 | ೩ |
| ನೃಪರುಗಳಲಿ ಜಸ | ನೃಪರುಗಳಳಿಜಸ | 96 | ೧೩ |
| ದೋರಿದನೇನೆಂಬೆ | ದೋರಿತದನೇನೆಂಬೆ | 112 | ೫೫ |

| ತಪ್ಪು | ಒಪ್ಪು | ಪುಟ | ಪದ್ಯ |
|---|---|---|---|
| ಮಿಂಚೆ | ಮಿಂಟೆ | 113 | ೭೬ |
| ಜಾಕಾರವ | ಜಾಕರವ | 127 | ೧೭ |
| ಧನುಜಕೀಲಿತನಾಗಿರ್ದ | ಧನುಜಕೀಲಿತವಾಗಿರ್ದ | 131 | ೮೧ |
| ಯುತುತ್ತು | ಯುತ್ತುತ್ತು | 135 | ೬ |
| ಮಾನವನು | ಮೌನವನು | 151 | ೧೮ |
| ದಿಂದೀಟುವೆ | ದಿಂದೀಂಟುವೆ | 152 | ೨೫ |
| ವರವೆತ್ರ | ವರನೆತ್ರ | 152 | ೩೩ |
| ಎಲೆಹುಲ್ಲೆ | ಎಳೆಹುಲ್ಲೆ | 153 | ೮೩ |
| ನೇ | ನೀ | 159 | ೯ |
| ಗಾಡಿಯಿಂದ ತನು ತುನುವನು | ಗಾಡಿಯಿಂದತನು ತನುವನು | 176 | ೧೦ |
| ತಿಲ ಜನ | ತಿಲಜನ | 177 | ೨೦ |
| ಯರಿಯು | ಹರಿಯು | 177 | ೨೭ |
| ಬೆಳುವೆ | ಬೇಳುವೆ | 190 | ೫೧ |
| ಹುಲ್ಲೆತ್ತಲು | ಹುಯ್ಲೆತ್ತಲು | 194 | ೧೦೭ |
| ಗುಗರುಳ್ಳೆ | ಗುರುಗಳ್ಳೆ | 219 | ೨೭ |
| ವಂಚಿಸಿದಾಗ | ವಂಚಿಸದಾಗ | 224 | ೯೯ |
| ಬಂದುಂಬ | ಬಂಡುಂಬ | 247 | ೩೦ |
| ಹರ್ಯ್ಯಕ್ಷನುಕ್ತಿ | ಹರ್ಯ್ಯಕ್ಷಯಮುಕ್ತಿ | 254 | ೧ |
| ವ್ಯೋಮುಕೀಶ | ವ್ಯೋಮಕೇಶ | 258 | ೫೮ |
| ಚಂದ್ರಾನೆಗಾ | ಚಂದ್ರಾನನೆಗಾ | 263 | ೪ |
| ಸಂಯೋಗ | ಸಂವೇಗ | 279 | ೯೬ |
| ದಿಂದಲಾ ಲೋಹಕರು | ದಿಂದಲಾರೋಹಕರು | 310 | ೨೯ |
| ಜರನು | ಜನರು | 320 | ೪೫ |
| ದರ ವೇಣು ಕುವರವೆಂದೆಂಬ | ವರವೇಣುಕುವರನೆಂದೆಂಬ | 347 | ೩ |
| ಶಕ್ತಿ | ಶುಕ್ತಿ | 350 | ೫೬ |
| ಬೀರು । ತೆರೆ ತಿರಿ | ಬೀರು- । ತೆರೆತಿರೆ ? | 353 | ೯೯ |
| ಸೌಧರ್ಥ ಲಕ್ಷ್ಮ | ಸೌಧಾರ್ಥಲಕ್ಷ್ಮ | 368 | ೧೬೦ |
| ಉಟ್ಟೈಕರಾಂಗಿ | ಉಟ್ಟೇಕರಂಗಿ | 375 | ೯೦ |
| ಶರಧಿ | ಸರದಿ | 298 | ೫೧ |
| ಮಾದವು | ಮುದವು | 446 | ೫೦ |

# ಅರ್ಥಕೋಶ.

ಅ

ಅಕ್ಕರು-ಪ್ರೀತಿ.
ಅಕ್ಷುಣ್ಣ-ಲೋಪವಿಲ್ಲದ.
ಅಗಿದು-ತುಂಡರಿಸಿ.
ಅಗಿಲು-ಪರಿಮಳ.
ಅಗುರ್ವಿಸು-ಭಯಂಕರ.
ಅರ್ಗಳ-ಕೀಲು.
ಅಘಾತಿಕರ್ಮ-ಆಯು, ನಾಮ, ಗೋತ್ರ ಮತ್ತು ವೇದನೀಯ ಕರ್ಮಗಳು.
ಅಜಗರ-ಹೆಬ್ಬಾವು.
ಅಣ್ಪು-ಲೇಪನ.
ಅರ್ಥಿಜನ-ಬೇಡುವವರು.
ಅದಿರು-ಭಯಪಡು.
ಅದಟ-ಪರಾಕ್ರಮಿ.
ಅನಿಮಿಷ-ದೇವತೆ, ಮೀನು.
ಅಬ್ದ-ವರ್ಷ.
ಅಬ್ದಕ-ನೀರ್ಗನ್ನಡಿ.
ಅಮೃತೋದ್ಭವ-ಸಮುದ್ರ.
ಅರ-ಧರ್ಮ.
ಅರಲ್-ಹೂವು.
ಅರತುದು-ನಾಶವಾದುದು.
ಅರಳೆ-ಜಿಂಕೆ.
ಅರಿ-ಶತ್ರು, ಕತ್ತರಿಸು.
ಅರೆ-ಬಂಡೆ.
ಅರೆವೆರೆ-ಅರ್ಧಚಂದ್ರ.
ಅರೆವಂತ-ವೀರ, ಸಾಹಸಿ.
ಅಲಗು-ಬಾಣ.
ಅಷ್ಟಸಿದ್ಧಿ-ಬುದ್ಧಿ, ಕ್ರಿಯೆ, ವಿಕ್ರಿಯೆ, ತಪಸ್ಸು, ಬಲ, ಔಷಧ, ರಸ, ಅಕ್ಷೀಣ.
ಅಸುಗೆ-ಅಶೋಕೆ.
ಅಸಿದು-ಸಪುರ.
ಅಸವಸ-ತ್ವರೆ.
ಅಂಗಚಿತ್ತ-ಉಡುಗೊರೆ.
ಅಂಚಲ-ಸೆರಗು.
ಅಂಚೆತೂಲ-ಹಂಸದ ಗರಿ.

ಆ

ಆಮ್ರ-ಮಾವು.
ಆಯಕ-ಆ ಅಕ್ಕ.
ಆರವಶ್ಯಕ-ದೇವಪೂಜಾ, ಗುರುಸೇವೆ, ಸ್ವಾಧ್ಯಾಯ, ಸಂಯಮ, ತಪ, ದಾನ.
ಆಲುತ-ಗರ್ಜಿಸುತ್ತಾ.
ಆವರ್ತ-ಸುಳಿ.
ಆವಿ-ಕುರಿ.
ಆವುಜಗಾರ-ವಾದ್ಯದವ.
ಆಶಾ-ದಿಕ್ಕು.
ಆಳಿ-ಮುಳುಗಿ.
ಆಳ್ವೇರಿ-ಕಾವಲಿನವನು ನಿಲ್ಲುವ ಕೋಟೆಯ ಸ್ಥಳ.

ಇ

ಇಚ್ಛಾಮಿ-ಬಯಸುತ್ತೇನೆ.
ಇತ್ತರ-ಎರಡು ರೀತಿ.
ಇಭ-ಆನೆ.
ಇರಿ-ತಿವಿ, ಭಾಗಿಸು.
ಇಲುವು-ಎಲುಬು.
ಇಸು-ಬಾಣ.
ಇಂದಿಂದಿರ-ತುಂಬಿ.
ಇಂದೀವರ-ಕಮಲ.
ಇಂಧನ-ಕಟ್ಟಿಗೆ.

ಈ

ಈಡಿಗ-ಹೆಂಡ ಇಳಿಸುವವನು.
ಈಂಟು-ಕುಡಿ.

ಉ

ಉಕ್ಕೆ-ಬೇಸಾಯ.
ಉಗ್ಘಡಿಸು-ಮೊರೆ.
ಉಚ್ಚೈಶ್ರವ-ಇಂದ್ರನ ಕುದುರೆ.
ಉಡು-ನಕ್ಷತ್ರ.
ಉಡುಗು-ಕುಂದಿಸು.
ಉತ್ತುಂಗ-ಎತ್ತರ.
ಉದ್ದು-ಉಜ್ಜು.
ಉಪದಂಶ-ಉಪ್ಪಿನಕಾಯಿ.
ಉಪಪಾದ-ದೇವ-ನಾರಕರು ಹುಟ್ಟುವ ಸ್ಥಾನ.
ಉರು-ದೊಡ್ಡ.
ಉರೋಜ-ಸ್ತನ.
ಉಲುಪೆ-ಪಡಿಯಕ್ಕಿ.
ಉಂಚ-ತಾರಕ ಸ್ವರ.

ಋ

ಋಕ್ಷ-ನಕ್ಷತ್ರ, ಕರಡಿ.

ಎ

ಎಚ್ಚು-ಹಚ್ಚು, ಬಾಣಬಿಟ್ಟು.
ಎಡೆಮಾಡು-ಬಡಿಸು.
ಎಟ್ಟು-ಕೈಯೆತ್ತಿ ಹೊಯ್ಯು.
ಎಯ್ಬಂದಿ-ಕಣೆಹಂದಿ.
ಎಯ್ಯ-ಕಾಡುಹಂದಿ.
ಎಳಗ-ಟಗರು.

ಏ

ಏಡಿಸು-ನಿಂದಿಸು.
ಏಣ-ಜಿಂಕೆ.
ಏವೆವು-ಏನು ಮಾಡುವೆವು.

ಐ

ಐದು ಸಮಿತಿ-ಈರ್ಯಾಸಮಿತಿ, ಭಾಷಾಸಮಿತಿ, ಏಷಣಾಸಮಿತಿ, ಆದಾನನಿಕ್ಷೇಪಸಮಿತಿ. ಉತ್ಸರ್ಗಸಮಿತಿ,
ಐದೆ ದಾಳಿ-ಕರಿಮಣಿ ಸರ.
ಐರಣೆ-ಕಳಸಗನ್ನಡಿ.
ಐಸರ-ಮನ್ಮಥ.
ಐಂದ್ರಕ-ಮೂಡುದಿಕ್ಕು.

ಒ

ಒಟ್ಟಿಲು-ರಾಶಿ.
ಒಡ್ಡಣ-ಸಮೂಹ.

ಓ

ಓಪ-ಗಂಡ.
ಓಸರಿಸು-ಹಿಂದೆ ತೆಗೆ.

ಔ

ಔದುಂಬರ-ಅತ್ತಿಮರ, ಒಂದುವಿಧದ ಕೋಷ್ಠ

ಕ

ಕಕ್ಷ-ಕಾಡು.
ಕಜ್ಜಳ-ಕಾಡಿಗೆ.
ಕಟಕ-ಸೈನ್ಯ.
ಕಟ್ಬಾಣಿ-ಉರುಟಾದ.
ಕಣ್ಣಿ-ಬಲೆ.
ಕಣೆ-ಬಾಣ.
ಕದಪು-ಕೆನ್ನೆ.
ಕನಲು-ಕ್ರೋಧಗೊಳ್ಳು.
ಕಮಲೆ-ಲಕ್ಷ್ಮಿ, ಭೂಮಿ.
ಕಮಠ-ಆಮೆ.
ಕಮ್ಮಗಣೆಯ-ಮನ್ಮಥ.
ಕಮ್ಮರಿ-ಇಳಿಜಾರು ಸ್ಥಳ.
ಕರಗ-ಗಿಂಡಿ, ತಂಬಿಗೆ.
ಕರಕ-ಆಲಿಕಲ್ಲು.

ಕರಣ-ಇಂದ್ರಿಯ.
ಕರಿ ಕಾಂಗು-ಕಪ್ಪು ಬಟ್ಟೆ.
ಕರು-ಪ್ರತಿಮೆ.
ಕರುಬು-ಮತ್ಸರಿಸು.
ಕರುಮಾಡ-ಉಪ್ಪರಿಗೆಯ ಮನೆ.
ಕಲಾಧರ-ಚಂದ್ರ, ವಿದ್ವಾಂಸ.
ಕಲ್ಹಾರ-ಕೆಂದಾವರೆ.
ಕಲಿಲ-ಪಾಪ.
ಕಳ-ಯುದ್ಧರಂಗ.
ಕಳಧೌತ-ಬಂಗಾರ.
ಕಂಚುಮಿಂಚು-ಮಾಯವಾಗು.
ಕಂಜ-ತಾವರೆ.
ಕಂತಿಕೆ-ಸನ್ಯಾಸಿನಿ.
ಕಂತೆ-ಹೊರೆ.
ಕಾರ್ಬೋನ್ನು-ಕಬ್ಬಿಣ.
ಕಾರಣಪುರುಷ-ಮಹಾತ್ಮ.
ಕಾಸಾರ-ಸರೋವರ.
ಕಾಳಂಚಿ-ರಸಪಾತ್ರೆ.
ಕಿಸಲಯ-ಚಿಗುರು.
ಕಿಸುಕುಳ-ತೊಂದರೆ.
ಕಿಂಜಲ್ಕ-ಪರಾಗ.
ಕೀರಿ-ಆಗ್ರಹದಿಂದ.
ಕೀಲಾರ-ಕ್ಷೀರಾಗಾರ.
ಕೀಸುಕುಳಿ-ಹೀನ, ತುಚ್ಛ.
ಕು-ಭೂಮಿ.
ಕುಕ್ಕುರ-ನಾಯಿ.
ಕುಕ್ಷಿವಾಸ-ನೆಲಮಾಳಿಗೆ.
ಕುಟ್ಮಲ-ಮೊಗ್ಗು.
ಕುಟ್ಟಿಮ-ನೆಲಗಟ್ಟು.
ಕುಕ್ಕೀಲ-ಪರ್ವತ.
ಕುಮರಿ-ಕಾಡು ಕಡಿದ ಪ್ರದೇಶ.
ಕುಮುದ-ಲೋಕಾನಂದವನ್ನುಂಟುಮಾಡು-ವನ, ಚಂದ್ರ, ನೈದಿಲೆ.
ಕುರಿದರಿ-ಕೊಚ್ಚು.
ಕುರುಜ-ಬತ್ತೇರಿ, ಅಟ್ಟಳೆ.
ಕುಲಿಶ-ವಜ್ರ.
ಕುವಲಯ-ಭೂಮಿ, ಕನ್ನೈದಿಲೆ.
ಕುಶೇಶಯ-ತಾವರೆ, ನೈದಿಲೆ.
ಕುಂಚ-ಪಿಂಛ.
ಕುಂಡಲಿ-ಹಾವು.
ಕುಂತಳ-ಕೂದಲು.
ಕುಂಭ-ಆನೆಯ ಹಣೆ, ಕುಂಭಕರ್ಣ.
ಕುಂಭಜ-ಅಗಸ್ತ್ಯ.
ಕುಂಭಿನಿ-ಭೂಮಿ.
ಕೂಪಾರ-ಸಮುದ್ರ.
ಕೃತಾಂತ-ಯಮ.
ಕೆಕ್ಕಳ-ಭಯಂಕರ.
ಕೆಸುವ-ಉಬ್ಬಾಳುತನ.
ಕೇಸಡಿ-ಕೆಂಪಾದ ಪಾದ.
ಕೈಗೈ-ಅಲಂಕರಿಸು.
ಕೈಜೆಳವೆ-ಗಾಳ.
ಕೈನೇಜ-ಕೈಬರ್ಚಿ.
ಕೊನರು-ಚಿಗುರು.
ಕೊಪ್ಪು-ಬಿಲ್ಲಿನ ತುದಿ.
ಕೊರಕು-ಒರಟು.
ಕೋಕ-ಕಾಮಶಾಸ್ತ್ರ.
ಕೋಟೀರ-ಕಿರೀಟ.
ಕ್ರೋಢ-ಕಾಡುಹಂದಿ.
ಕಾಕಂಬಿ-ಸಕ್ಕರೆ.

ಖ

ಖಡ್ಗಿ-ಖಡ್ಗಮೃಗ, ಭಟರು.
ಖರ್ಪರ-ತಲೆಯೋಡು.

